ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

# ಶ್ರೀ ಸ್ಕಾಂದಮಹಾಪುರಾಣಂ

## ಮಾಹೇಶ್ವರಖಂಡ

## ೨

## ಕೌಮಾರಿಕಾಖಂಡ

ಪೂರ್ವಭಾಗ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**



ಬೆಂಗಳೂರು ಪ್ರೆಸ್
ಮೈಸೂರು ರೋಡ್ಡು, ಬೆಂಗಳೂರು ಸಿಟಿ
೧೯೫೫

# ಶ್ರೀ ಸ್ಕಾಂದಮಹಾಪುರಾಣಂ

(ಮೂಲ ಮತ್ತು ಅನುವಾದ ಸಹಿತ)

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸ

# ಶ್ರೀ ಸ್ಕಾಂದಮಹಾಪುರಾ

## ಮಾಹೇಶ್ವರಖಂಡ

೨

## ಕೌಮಾರಿಕಾಖಂಡ

**ಪೂರ್ವಭಾಗ**

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

**ನೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೫

# ಅರಿಕೆ

ಶ್ರೀ ಸ್ಕಾಂದಮಹಾಪುರಾಣದ ವಿಷಯವಾಗಿ ನಿರೂಪಿಸಬೇಕಾದ ಮುಖ್ಯ ಸಂಗತಿಗಳನ್ನೆಲ್ಲ ಮೊದಲ ಸಂಪುಟದ ಅರಿಕೆಯಲ್ಲಿ ಸಂಗ್ರಹವಾಗಿ ಕೊಡಲಾಗಿದೆ. ಪ್ರಕೃತದಲ್ಲಿ ಮುದ್ರಿತವಾಗಿರುವ ಈ ದ್ವಿತೀಯ ಸಂಪುಟದಲ್ಲಿ ಮಾಹೇಶ್ವರಖಂಡದ ದ್ವಿತೀಯೋಪಖಂಡವಾದ ಕೌಮಾರಿಕಾಖಂಡವು ಪ್ರಾರಂಭವಾಗಿ ತಾರಕಾಸುರ ವಧ ಪರ್ಯಂತವಾದ ಗ್ರಂಥವು ಮುಗಿದಿರುತ್ತದೆ. ಇದನ್ನು ಕೌಮಾರಿಕಾ ಖಂಡದ ಪೂರ್ವಾರ್ಧವೆಂದು ಪರಿಗಣಿಸಲಾಗಿದೆ. ಇದರಲ್ಲಿ 'ಅರ್ಜುನನ ತೀರ್ಥ ಯಾತ್ರಾಪ್ರಸಂಗ–ಶ್ರೀ ಸ್ಕಂದಸ್ವಾಮಿ ಕಥಾಮಾಹಾತ್ಮ್ಯ'ಗಳು ವರ್ಣಿತವಾಗಿವೆ.

ಅನೇಕ ಮಾಹಾತ್ಮ್ಯಗಳನ್ನೂ, ವಿವಿಧ ವಿಷಯಗಳನ್ನೂ ಒಳಕೊಂಡು ಕನ್ನಡನಾಡಿನ ಎಲ್ಲ ಜನಕ್ಕೂ ಅತ್ಯಂತೋಪಯುಕ್ತವಾದ ಇಂತಹ ಗ್ರಂಥರತ್ನ ಗಳನ್ನು ಪ್ರಕಾಶಪಡಿಸುವ ಸುಯೋಗವನ್ನು ಒದಗಿಸಿಕೊಡುತ್ತಿರುವ ನಮ್ಮ ನ್ನಾಳುವ ಮಹಾಸ್ವಾಮಿಯವರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ. ಅವರಿಗೆ ಸಮಸ್ತ ಶ್ರೇಯಸ್ಸುಗಳನ್ನೂ ಅನುಗ್ರಹಿಸಿ ಕಾಪಾಡಲೆಂದು ಜಗನ್ನಿಯಾಮಕನಾದ ಪರಮೇಶ್ವರನಲ್ಲಿ ಮೊರೆಯಿಡುತ್ತೇನೆ.

ಅನುವಾದ ಮಾರ್ಗದಲ್ಲಿಯೂ, ಮೂಲದಲ್ಲಿಯೂ ಇರಬಹುದಾದ ಲೋಪ ದೋಷಗಳನ್ನು ಪ್ರಾಜ್ಞರು ಮನ್ನಿಸಬೇಕೆಂದು ಮನವಿ.

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ

॥ ಶ್ರೀಃ ॥

ಅಥ ಮಂಗಳಾಚರಣಶ್ಲೋಕಃ

**ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।**
**ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥**

ತಾತ್ಪರ್ಯ

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಮಾಹೇಶ್ವರಖಂಡೇ ದ್ವಿತೀಯಃ ಕೌಮಾರಿಕಾಖಂಡಃ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಅಥ ಪ್ರಥಮೋಽಧ್ಯಾಯಃ

### ಪಾರ್ಥೇನ ಪಂಚಾಪ್ಸರಸಃ ಸಮುದ್ಧರಣಂ

ಶ್ರೀ ಮುನಯ ಊಚುಃ—

**ದಕ್ಷಿಣಾರ್ಣವತೀರೇಷು ಯಾನಿ ತೀರ್ಥಾನಿ ಪಂಚ ಚ ।**
**ತಾನಿ ಬ್ರೂಹಿ ವಿಶಾಲಾಕ್ಷ ವರ್ಣಯಂತ್ಯತಿ ತಾನಿ ಚ ॥ ೧ ॥**
**ಸರ್ವತೀರ್ಥಫಲಂ ಯೇಷು ನಾರದ್ಯಾದ್ಯಾ ವದಂತಿ ಚ ।**
**ತೇಷಾಂ ಚರಿತಮಾಹಾತ್ಮ್ಯಂ ಶ್ರೋತುಮಿಚ್ಛಾಮಹೇ ವಯಂ ॥ ೨ ॥**

---

### ಕನ್ನಡದ ಅನುವಾದ

#### ಪಾರ್ಥನು ಐವರು ಅಪ್ಸರೆಯರನ್ನು ಉದ್ಧರಿಸಿದುದು

೧. ಋಷಿಗಳು ಕೇಳುತ್ತಾರೆ:—ಎಲೈ ವಿಶಾಲಾಕ್ಷನಾದ ಉಗ್ರಶ್ರವ ಮುನಿಯೇ! ದಕ್ಷಿಣ ಸಮುದ್ರದ ತೀರದಲ್ಲಿ ಐದು ತೀರ್ಥಗಳನ್ನು ಎಲ್ಲರೂ ವಿಶೇಷವಾಗಿ ವರ್ಣಿಸುತ್ತಾರೆ. ಅವುಗಳ ವಿಷಯವನ್ನು ನಮಗೆ ಅಪ್ಪಣೆ ಕೊಡಿಸು.

೨. ಆ ತೀರ್ಥಗಳಲ್ಲಿ ಸರ್ವತೀರ್ಥಗಳ ಫಲಗಳೂ ದೊರೆಯುವುವೆಂದು ನಾರದಾದಿಗಳು ಹೇಳುತ್ತಾರೆ; ಅವುಗಳ ಚರಿತ್ರೆ ಮತ್ತು ಮಾಹಾತ್ಮ್ಯಗಳನ್ನು ಕೇಳಲು ನಾವು ಇಚ್ಛೆಪಡುತ್ತಿದ್ದೇವೆ.

ಉಗ್ರಶ್ರವಾ ಉವಾಚ :—

ಶೃಣುಧ್ವಮತ್ಯದ್ಭುತ ಪುಣ್ಯ ಸತ್ಕಥಂ
ಕುಮಾರ ನಾಥಸ್ಯ ಮಹಾ ಪ್ರಭಾವಂ ।
ದ್ವೈಪಾಯನೋ ಯನ್ಮಮ ಚಾಹ ಪೂರ್ವಂ
ಹರ್ಷಾಂಬು ರೋಮೋದ್ಗಮ ಚರ್ಚಿತಾಂಗಃ ॥ ೩ ॥
ಕುಮಾರಗೀತಾ ಗಾಥಾತ್ರ ಶ್ರೂಯತಾಂ ಮುನಿಸತ್ತಮಾಃ ।
ಯಾ ಸರ್ವದೇವೈರ್ಮುನಿಭಿಃ ಪಿತೃಭಿಶ್ಚ ಪ್ರಪೂಜಿತಾ ॥ ೪ ॥
ಮಥ್ವಾಚಾರಸ್ತಂಭತೀರ್ಥಂ ಯೋ ನಿಷೇವೇತ ಮಾನವಃ ।
ನಿಯತಂ ತಸ್ಯ ವಾಸಃ ಸ್ಯಾತ್ ಬ್ರಹ್ಮಲೋಕೋ ಯಥಾ ಮಮ ॥ ೫ ॥
ಬ್ರಹ್ಮಲೋಕಾದ್ವಿಷ್ಣುಲೋಕಸ್ತಸ್ಮಾದಪಿ ಶಿವಸ್ಯ ಚ ।
ಪುತ್ರಪ್ರಿಯತ್ವಾತ್ತಸ್ಯಾಪಿ ಗುಹಲೋಕೋ ಮಹತ್ತಮಃ ॥ ೬ ॥
ಅತ್ರಾಶ್ಚರ್ಯಕಥಾ ಯಾ ಚ ಫಾಲ್ಗುನಸ್ಯ ಪುರೇರಿತಾ ।
ನಾರದೇನ ಮುನಿಶ್ರೇಷ್ಠಾಸ್ತಾಂ ವೋ ವಕ್ಷ್ಯಾಮಿ ವಿಸ್ತರಾತ್ ॥ ೭ ॥

---

೩. ಉಗ್ರಶ್ರವನು ಹೇಳುತ್ತಾನೆ:—ಎಲೈ ಋಷಿಗಳಿರಾ! ಅತ್ಯದ್ಭುತವಾಗಿಯೂ, ಪುಣ್ಯಕರವಾಗಿಯೂ ಇರುವ ಆ ಸತ್ಕಥೆಯನ್ನು ಕೇಳಿರಿ; ಕುಮಾರನಾಥನ ಮಹಾ ಪ್ರಭಾವವನ್ನು ಲಾಲಿಸಿರಿ. ಪೂರ್ವದಲ್ಲಿ ದ್ವೈಪಾಯನ (ವ್ಯಾಸ) ಮಹರ್ಷಿಯು ಆನಂದಾಶ್ರುಗಳನ್ನು ಸುರಿಸುತ್ತ ರೋಮಾಂಚದಿಂದ ಕೂಡಿದ ಶರೀರವುಳ್ಳವನಾಗಿ ನನಗೆ ಅದನ್ನು ಹೇಳಿದನು.

೪. ಎಲೈ ಮುನಿಶ್ರೇಷ್ಠರೇ! ಸಮಸ್ತ ದೇವತೆಗಳಿಂದಲೂ, ಮುನಿಗಳಿಂದಲೂ, ಪಿತೃದೇವತೆಗಳಿಂದಲೂ ವಿಶೇಷವಾಗಿ ಪೂಜೆಗೊಂಡಿರುವ ಕುಮಾರಸ್ವಾಮಿಯು ಹಾಡಿದ ಗಾದೆಯನ್ನು ಕೇಳುವವರಾಗಿರಿ.

೫. ಯಾವ ಮನುಷ್ಯನು ಹಿತವಾದ ಆಚಾರಗಳುಳ್ಳವನಾಗಿ ಸ್ತಂಭತೀರ್ಥವನ್ನು ಸೇವಿಸುವನೋ, ಅವನಿಗೆ ನನಗೆಂತೋ ಅಂತೆಯೇ ಶಾಶ್ವತವಾಗಿ ಬ್ರಹ್ಮಲೋಕದಲ್ಲಿ ವಾಸವುಂಟಾಗುತ್ತದೆ.

೬. ಬ್ರಹ್ಮಲೋಕಕ್ಕಿಂತಲೂ ವಿಷ್ಣುಲೋಕವು ಶ್ರೇಷ್ಠವಾದುದು. ಅದಕ್ಕಿಂತಲೂ ಶಿವಲೋಕವು ಹೆಚ್ಚು ಮಹತ್ವವುಳ್ಳುದು. ಆ ಶಿವನಿಗೆ ಪುತ್ರನಲ್ಲಿರುವ ವಿಶೇಷ ಪ್ರೀತಿಯೇ ಕಾರಣವಾಗಿ ಗುಹಲೋಕವು ಎಲ್ಲಕ್ಕಿಂತಲೂ ಅತ್ಯಂತ ಮಹತ್ತಮವಾದುದು.

೭. ಈ ಸಂದರ್ಭದಲ್ಲಿ ಹಿಂದೆ ನಾರದಮಹರ್ಷಿಯು ಅರ್ಜುನನಿಗೆ ಒಂದು ಆಶ್ಚರ್ಯಕರವಾದ ಕಥೆಯನ್ನು ಹೇಳಿದನು. ಎಲೈ ಮುನಿಶ್ರೇಷ್ಠರೇ! ಅದನ್ನು ವಿಸ್ತಾರವಾಗಿ ನಿಮಗೆ ಹೇಳುತ್ತೇನೆ.

**ಪುರಾ ನಿಮಿತ್ತೇ ಕಸ್ಮಿಂಶ್ಚಿತ್ಕಿರೀಟೀ ಮಣಿಕೂಟತಃ ।**
**ಸಮುದ್ರೇ ದಕ್ಷಿಣೇಽಭ್ಯಾಗಾತ್ ಸ್ನಾತುಂ ತೀರ್ಥಾನಿ ಪಂಚ ಚ ॥ ೮ ॥**
**ವರ್ಜಯಂತಿ ಸದಾ ಯಾನಿ ಭಯಾತ್ತೀರ್ಥಾನಿ ತಾಪಸಾಃ ।**
**ಕುಮಾರೇಶಸ್ಯ ಪೂರ್ವಂ ಚ ತೀರ್ಥಮತ್ರಿಮುನೇಃ ಪ್ರಿಯಂ ॥ ೯ ॥**
**ಸ್ತಂಭೇಶಸ್ಯ ದ್ವಿತೀಯಂ ಚ ಸೌಭದ್ರಸ್ಯ ಮುನೇಃ ಪ್ರಿಯಂ ।**
**ಬರ್ಕರೇಶ್ವರಮನ್ಯಚ್ಚ ಪೌಲೋಮೀ ಪ್ರಿಯಮುತ್ತಮಂ ॥ ೧೦ ॥**
**ಚತುರ್ಥಂ ಚ ಮಹಾಕಾಲಂ ಕರಂಧಮ ನೃಪಪ್ರಿಯಂ ।**
**ಭರದ್ವಾಜಸ್ಯ ತೀರ್ಥಂ ಚ ಸಿದ್ಧೇಶಾಖ್ಯಂ ಹಿ ಪಂಚಮಂ ॥ ೧೧ ॥**
**ಏತಾನಿ ಪಂಚ ತೀರ್ಥಾನಿ ದದರ್ಶ ಕುರುಪುಂಗವಃ ।**
**ತಪಸ್ವಿಭಿರ್ವರ್ಜಿತಾನಿ ಮಹಾ ಪುಣ್ಯಾನಿ ತಾನಿ ಚ ॥ ೧೨ ॥**
**ದೃಷ್ಟ್ವಾ ಪಾರ್ಶ್ವೇ ನಾರದೀಯಾನಪೃಚ್ಛತ ಮಹಾ ಮುನೀನ್ ।**
**ತೀರ್ಥಾನೀಮಾನಿ ರಮ್ಯಾಣಿ ಪ್ರಭಾವಾದ್ಭುತವಂತಿ ಚ ॥ ೧೩ ॥**

---

೮. ಹಿಂದೆ ಕಿರೀಟಿಯು ಯಾವುದೋ ಒಂದು ಕಾರಣದಿಂದ ಮಣಿಕೂಟದಿಂದ ಹೊರಟು ದಕ್ಷಿಣ ಸಮುದ್ರ ತೀರದಲ್ಲಿರುವ ಪಂಚತೀರ್ಥಗಳಲ್ಲಿ ಸ್ನಾನ ಮಾಡುವುದಕ್ಕಾಗಿ ಹೋದನು.

೯. ತಪಸ್ವಿಗಳೆಲ್ಲ ಭಯದಿಂದ ಯಾವಾಗಲೂ ಆ ತೀರ್ಥಗಳಿಗೆ ಹೋಗದೆ ಬಿಟ್ಟುಬಿಡುತ್ತಿದ್ದರು. ಅವುಗಳಲ್ಲಿ ಕುಮಾರೇಶ ತೀರ್ಥವು ಮೊದಲನೆಯದು; ಅತ್ರಿಮಹಾಮುನಿಗೆ ಪ್ರಿಯವಾದುದು.

೧೦. ಸೌಭದ್ರಮುನಿಗೆ ಪ್ರಿಯವಾದ ಸ್ತಂಭೇಶ್ವರ ತೀರ್ಥವು ಎರಡನೆಯದು. ಬರ್ಕರೇಶ್ವರ ತೀರ್ಥವು ಮೂರನೆಯದು; ಅದು ಪೌಲೋಮಿಗೆ (ಎಂದರೆ ಶಚೀದೇವಿಗೆ) ಪ್ರಿಯವಾದುದು.

೧೧. ನಾಲ್ಕನೆಯದು ಮಹಾಕಾಲ ತೀರ್ಥ; ಇದು ಕರಂಧಮರಾಜನಿಗೆ ಪ್ರಿಯವಾದುದು. ಸಿದ್ಧೇಶತೀರ್ಥವೆಂಬ ಹೆಸರುಳ್ಳದೇ ಐದನೆಯ ತೀರ್ಥ; ಇದು ಭರದ್ವಾಜನಿಗೆ ಪ್ರಿಯವಾದುದು.

೧೨. ಕುರುಶ್ರೇಷ್ಠನಾದ ಆ ಅರ್ಜುನನು ಈ ಐದು ತೀರ್ಥಗಳನ್ನೂ ಸಂದರ್ಶಿಸಿದನು. ಅವು ಮಹಾಪುಣ್ಯಕರಗಳಾಗಿದ್ದರೂ ತಪಸ್ವಿಗಳು ಅವನ್ನು ತೊರೆದುಬಿಟ್ಟಿದ್ದರು.

೧೩. ಅವುಗಳ ಪಕ್ಕದಲ್ಲಿಯೇ ನಾರದೀಯರೆಂಬ ಮಹಾಮುನಿಗಳಿದ್ದುದನ್ನು ಕಂಡು ಅರ್ಜುನನು ಅವರನ್ನು ಈ ರೀತಿ ಪ್ರಶ್ನೆ ಮಾಡಿದನು :—" ಎಲೈ ಮುನಿಗಳಿರಾ! ಈ ತೀರ್ಥಗಳು ಬಹು ರಮ್ಯವಾಗಿವೆ; ಅದ್ಭುತವಾದ ಪ್ರಭಾವವುಳ್ಳವಾಗಿವೆ.

ಕಿಮರ್ಥಂ ಬ್ರೂತ ವರ್ಜ್ಯಂತೇ ಸದೈವ ಬ್ರಹ್ಮವಾದಿಭಿಃ ।

ತಾಪಸಾ ಊಚುಃ:—

ಗ್ರಾಹಾಃ ಪಂಚ ವಸಂತ್ಯೇಷು ಹರಂತಿ ಚ ತಪೋಧನಾನ್ ॥ ೧೪ ॥
ಅತ ಏತಾನಿ ವರ್ಜ್ಯಂತೇ ತೀರ್ಥಾನಿ ಕುರುನಂದನ ।
ಇತಿ ಶ್ರುತ್ವಾ ಮಹಾ ಬಾಹುರ್ಗಮನಾಯ ಮನೋ ದಧೇ ॥ ೧೫ ॥
ತತಸ್ತಂ ತಾಪಸಾಃ ಪ್ರೋಚುರ್ಗಂತು ನಾರ್ಹಸಿ ಫಾಲ್ಗುನ ।
ಬಹವೋ ಭಕ್ಷಿತಾ ಗ್ರಾಹೈ ರಾಜನೋ ಮುನಯಸ್ತಥಾ ॥ ೧೬ ॥
ತತ್ತ್ವಂ ದ್ವಾದಶ ವರ್ಷಾಣಿ ತೀರ್ಥಾನಾಮರ್ಬುದೇಷ್ವಪಿ ।
ಸ್ನಾತಃ ಕಿಮೇತೈಸ್ತೀರ್ಥೈಸ್ತೇ ಮಾ ಪತಂಗವ್ರತೋ ಭವ ॥ ೧೭ ॥

ಅರ್ಜುನ ಉವಾಚ:—

ಯದುಕ್ತಂ ಕರುಣಾಸಾರೈಃ ಸಾರಂ ಕಿಂ ತದಿಹೋಚ್ಯತಾಂ ।
ಧರ್ಮಾರ್ಥೀ ಮನುಜೋ ಯಶ್ಚ ನ ಸ ವಾರ್ಯೋ ಮಹಾತ್ಮಭಿಃ ॥೧೮॥

---

೧೪. ಹಾಗಿದ್ದರೂ ಬ್ರಹ್ಮವಾದಿಗಳು ಯಾವಾಗಲೂ ಇವುಗಳ ಬಳಿ ಸುಳಿಯದೆ ತೊರೆಯುವುದೇಕೆ? ಹೇಳಬೇಕು." ತಾಪಸರು ಹೇಳುತ್ತಾರೆ:— "ಇವುಗಳಲ್ಲಿ ಐದು ಮೊಸಳೆಗಳು ವಾಸವಾಗಿರುವುವು. ಅವು ಮಿಂದ ತಪೋಧನರನ್ನು ಎಳೆದುಕೊಂಡುಹೋಗುತ್ತವೆ.

೧೫. ಕುರುನಂದನ! ಆದುದರಿಂದ ಈ ತೀರ್ಥಗಳನ್ನು ಎಲ್ಲರೂ ತೊರೆಯುತ್ತಾರೆ." ಹೀಗೆಂದು ಹೇಳಿದ ಮಾತುಗಳನ್ನು ಕೇಳಿ ಮಹಾಬಾಹುವಾದ ಅರ್ಜುನನು ಆ ತೀರ್ಥಗಳೆಡೆಗೆ ಹೋಗುವುದಕ್ಕೆ ಮನಸ್ಸು ಮಾಡಿದನು.

೧೬. ಬಳಿಕ ತಾಪಸರು ಅವನನ್ನು ಕುರಿತು ಹೀಗೆಂದರು:— "ಎಲೈ ಫಲ್ಗುನನೇ! ನೀನು ಹೋಗತಕ್ಕುದಲ್ಲ. ಅಲ್ಲಿಗೆ ಹೋದ ಅನೇಕ ರಾಜರನ್ನೂ, ಬಹು ಜನ ಮುನಿಗಳನ್ನೂ ಮೊಸಳೆಗಳು ತಿಂದುಬಿಟ್ಟಿವೆ.

೧೭. ಆದುದರಿಂದ ನೀನು ಹನ್ನೆರಡು ವರ್ಷಗಳೂ ಅರ್ಬುದ ಸಂಖ್ಯೆಯ ತೀರ್ಥಗಳಲ್ಲಾದರೂ ಸ್ನಾನಮಾಡು. ಈ ತೀರ್ಥಗಳಿಂದ ನಿನಗೆ ಪ್ರಯೋಜನವೇನು? ಪತಂಗವು ಪಾವಕನಲ್ಲೆಂತೋ ಅಂತು ನೀನು ನಡೆಯಬೇಡ."

೧೮. ಅರ್ಜುನನು ಹೇಳುತ್ತಾನೆ:— "ಕರುಣಾಮೂರ್ತಿಗಳಾದ ತಾವು ಹೇಳಿದುದನ್ನು ಕೇಳಿದೆನು. ಸಾರವಾದುದು ಯಾವುದೋ ಅದನ್ನು ತಾವು ತಿಳಿಸಬೇಕು? ಯಾವ ಮನುಷ್ಯನು ಧರ್ಮಾಪೇಕ್ಷೆಯುಳ್ಳವನಾಗಿರುವನೋ ಅವನನ್ನು ಮಹಾತ್ಮರು ತಡೆಯಬಾರದು.

ಧರ್ಮಕಾಮಂ ಹಿ ಮನುಜಂ ಯೋ ವಾರಯತಿ ಮಂದಧೀಃ ।
ತದಾಶ್ರಿತಸ್ಯ ಜಗತೋ ನಿಃಶ್ವಾಸೈರ್ಭಸ್ಮಸಾದ್ಭವೇತ್ ॥ ೧೯ ॥
ಯಜ್ಜೀವಿತಂ ಚಾಚಿರಾಂಶುಸಮಾನಕ್ಷಣ ಭಂಗುರಂ ।
ತಚ್ಚೇದ್ಧರ್ಮಕೃತೇ ಯಾತಿ ಯಾತು ದೋಷೋಽಸ್ತಿಕೋನನು ॥ ೨೦ ॥
ಜೀವಿತಂ ಚ ಧನಂ ದಾರಾಃ ಪುತ್ರಾ ಕ್ಷೇತ್ರಗೃಹಾಣಿ ಚ ।
ಯಾಂತಿ ಯೇಷಾಂ ಧರ್ಮಕೃತೇ ತ ಏವ ಭುವಿ ಮಾನವಾಃ ॥ ೨೧ ॥

ತಾಪಸಾ ಊಚುಃ:—

ಏವಂತೇ ಬ್ರುವತಃ ಪಾರ್ಥ ದೀರ್ಘಮಾಯುಃ ಪ್ರವರ್ಧತಾಂ ।
ಸದಾ ಧರ್ಮೇ ರತಿರ್ಭೂಯಾದ್ಯಾಹಿ ಸ್ವಂ ಕುರು ವಾಂಛಿತಂ ॥ ೨೨ ॥
ಏವಮುಕ್ತಃ ಪ್ರಣಮ್ಯೈತಾನಾಶೀರ್ಭಿರಭಿಸಂಸ್ತುತಃ ।
ಜಗಾಮ ತಾನಿ ತೀರ್ಥಾನಿ ದ್ರಷ್ಟುಂ ಭರತಸತ್ತಮಃ ॥ ೨೩ ॥
ತತಃ ಸೌಭದ್ರಮಾಸಾದ್ಯ ಮಹರ್ಷೇಸ್ತೀರ್ಥಮುತ್ತಮಂ ।
ವಿಗಾಹ್ಯ ತರಸಾ ವೀರಃ ಸ್ನಾನಂ ಚಕ್ರೇ ಪರಂತಪಃ ॥ ೨೪ ॥

---

೧೯. ಧರ್ಮಾಪೇಕ್ಷೆಯುಳ್ಳ ಮನುಷ್ಯನನ್ನು ಯಾವ ಮಂದಬುದ್ಧಿಯು ತಡೆಯುತ್ತಾನೆಯೋ ಅವನು ಆ ಧರ್ಮಾರ್ಥಿಯಾದವನು ಬಿಡುವ ನಿಶ್ವಾಸಗಳಿಂದ ಸುಟ್ಟು ಬೂದಿಯಾಗುತ್ತಾನೆ.

೨೦. ಜೀವನವೆಂಬುದು ಸ್ಥಿರವಲ್ಲ; ತೋರಿ ಅಡಗುವ ಬೆಳಕಿನಂತೆ ಕ್ಷಣಭಂಗುರವಾದುದು. ಅದು ಧರ್ಮಕಾರ್ಯದಲ್ಲಿ ಹೋಗುವಹಾಗಿದ್ದರೆ ಹೋಗಲಿ. ಅದರಲ್ಲಿ ದೋಷವೇನು?

೨೧. ಯಾರ ಜೀವಿತವೂ, ಧನವೂ, ಹೆಂಡರೂ, ಮಕ್ಕಳೂ, ಹೊಲಮನೆಗಳೂ ಧರ್ಮಕಾರ್ಯಕ್ಕೋಸ್ಕರ ವೆಚ್ಚವಾಗಿಹೋಗುವುವೋ ಅವರೇ ಭೂಮಿಯಲ್ಲಿ ಮನುಷ್ಯರೆನಿಸಿಕೊಳ್ಳುವವರು.”

೨೨. ತಾಪಸರು ಹೇಳುತ್ತಾರೆ:—“ಎಲೈ ಪಾರ್ಥನೇ! ಹೀಗೆ ಹೇಳುತ್ತಿರುವ ನಿನಗೆ ಆಯುಸ್ಸು ದೀರ್ಘವಾಗಿ ಹೆಚ್ಚಲಿ. ಸದಾ ಧರ್ಮದಲ್ಲಿ ಆಸಕ್ತಿಯುಂಟಾಗಲಿ; ಹೋಗು. ನಿನ್ನಿಷ್ಟವು ಹೇಗಿದೆಯೋ ಹಾಗೆ ಮಾಡು.”

೨೩. ಋಷಿಗಳು ಈ ರೀತಿ ಹೇಳಿದುದನ್ನು ಕೇಳಿ, ಭರತಕುಲಶ್ರೇಷ್ಠನಾದ ಅರ್ಜುನನು ಅವರಿಗೆ ನಮಸ್ಕಾರ ಮಾಡಿ, ಅವರ ಆಶೀರ್ವಾದಗಳನ್ನು ಪಡೆದು ಪ್ರಶಂಸಿಸಲ್ಪಡುವವನಾಗಿ ಆ ತೀರ್ಥಗಳನ್ನು ನೋಡುವುದಕ್ಕೆ ಪ್ರಯಾಣ ಮಾಡಿದನು.

೨೪. ಶತ್ರುಮರ್ದಕನಾದ ಆತನು ಸೌಭದ್ರ ಮಹರ್ಷಿಯ ಉತ್ತಮ ತೀರ್ಥವನ್ನು ಸೇರಿ, ಬೇಗನೆಯೇ ಆ ತೀರ್ಥದಲ್ಲಿಳಿದು ಸ್ನಾನಮಾಡಿದನು.

ಅಥ ತಂ ಪುರುಷವ್ಯಾಘ್ರಮಂತರ್ಜಲಚರೋ ಮಹಾನ್ ।
ನಿಜಗ್ರಾಹ ಜಲೇ ಗ್ರಾಹಃ ಕುಂತೀ ಪುತ್ರಂ ಧನಂಜಯಂ ॥ ೨೫ ॥
ತಮಾದಾಯೈವ ಕೌಂತೇಯೋ ವಿಸ್ಫುರಂತಂ ಜಲೇಚರಂ ।
ಉದತಿಷ್ಠನ್ ಮಹಾ ಬಾಹುರ್ಬಲೇನ ಬಲಿನಾಂ ವರಃ ॥ ೨೬ ॥
ಉದ್ಧೃತಶ್ಚೈವ ತು ಗ್ರಾಹಃ ಸೋಽರ್ಜುನೇನ ಯಶಸ್ವಿನಾ ।
ಬಭೂವ ನಾರೀ ಕಲ್ಯಾಣೀ ಸರ್ವಾಭರಣಭೂಷಿತಾ ।
ದೀಪ್ಯಮಾನಶಿಖಾ ವಿಪ್ರಾ ದಿವ್ಯರೂಪಾ ಮನೋರಮಾ ॥ ೨೭ ॥
ತದದ್ಭುತಂ ಮಹದ್ದೃಷ್ಟ್ವಾ ಕುಂತೀಪುತ್ರೋ ಧನಂಜಯಃ ।
ತಾಂ ಸ್ತ್ರಿಯಂ ಪರಮಪ್ರೀತ ಇದಂ ವಚನಮಬ್ರವೀತ್ ॥ ೨೮ ॥
ಕಾ ವೈ ತ್ವಮಸಿ ಕಲ್ಯಾಣಿ ಕುತೋ ವಾ ಜಲಚಾರಿಣೀ ।
ಕಿಮರ್ಥಂ ಚ ಮಹತ್ಪಾಪಮಿದಂ ಕೃತವತೀ ಹ್ಯಸಿ ॥ ೨೯ ॥

ನಾರ್ಯುವಾಚ :—

ಅಪ್ಸರಾ ಹ್ಯಸ್ಮಿ ಕೌಂತೇಯ ದೇವಾರಣ್ಯನಿವಾಸಿನೀ ।
ಇಷ್ಟಾ ಧನಪತೇರ್ನಿತ್ಯಂ ವರ್ಚಾ ನಾಮ ಮಹಾಬಲ ॥ ೩೦ ॥

---

೨೫. ಆಗ ಕುಂತೀಪುತ್ರನೂ, ಪುರುಷಶ್ರೇಷ್ಠನೂ ಆದ ಆ ಧನಂಜಯನನ್ನು ನೀರಿನೊಳಗಡೆಯೇ ಸಂಚರಿಸುವ ಬಹು ದೊಡ್ಡ ಮೊಸಳೆಯೊಂದು ಅಲ್ಲಿಯೇ ಹಿಡಿದುಕೊಂಡಿತು.

೨೬. ಬಲಶಾಲಿಗಳಲ್ಲಿ ಮಿಗಿಲೆನಿಸಿದ ಮಹಾಬಾಹುವಾದ ಕೌಂತೇಯನು ಹೊಳೆಹೊಳೆಯುತ್ತಿದ್ದ ಆ ಜಲಚರವನ್ನು ಬಲವಾಗಿ ಹಿಡಿದುಕೊಂಡೇ ಮೇಲಕ್ಕೆ ಎದ್ದುಬಂದನು.

೨೭. ಎಲೈ ಬ್ರಾಹ್ಮಣರೇ! ಯಶಸ್ವಿಯಾದ ಆ ಧನಂಜಯನು ಮೇಲೆತ್ತಿದ ಕೂಡಲೆ ಆ ಮೊಸಳೆಯು ಸರ್ವಾಭರಣಭೂಷಿತೆಯಾಗಿಯೂ, ಮಂಗಳಕರೆಯಾಗಿಯೂ, ಕಾಂತಿಯಿಂದ ಮಿಂಚುತ್ತಿರುವ ತಲೆಗೂದಲುಳ್ಳವಳಾಗಿಯೂ, ಮನೋಹರಳಾಗಿಯೂ ಇರುವ ದಿವ್ಯರೂಪವುಳ್ಳ ಹೆಣ್ಣಾಗಿ ಪರಿಣಮಿಸಿತು.

೨೮–೨೯. ಮಹತ್ತಾದ ಆ ಅದ್ಭುತವನ್ನು ನೋಡಿ ಕುಂತೀಪುತ್ರನಾದ ಧನಂಜಯನು ಬಹಳ ಸಂತೋಷಗೊಂಡು, ಆ ಹೆಂಗಸನ್ನು ಕುರಿತು ಈ ರೀತಿ ಕೇಳಿದನು. "ಎಲೌ ಮಂಗಳಾಂಗಿಯೇ ನೀನು ಯಾರು? ಏಕೆ ಜಲಚರಿಯಾಗಿದ್ದೆ? ಇಂಥ ಮಹಾ ಪಾಪವನ್ನು ಅದೇತಕ್ಕೆ ಮಾಡಿದೆ?"

೩೦–೩೧. ಆ ಮಾತಿಗೆ ಆ ಹೆಂಗಸು ಉತ್ತರ ಹೇಳಿದಳು :—" ಎಲೈ

ಮಮ ಸಖ್ಯಶ್ಚತಸ್ರೋಽನ್ಯಾಃ ಸರ್ವಾಃ ಕಾಮಗಮಾಃ ಶುಭಾಃ ॥ ೩೦ ॥
ತಾಭಿಃ ಸಾರ್ಧಂ ಪ್ರಯಾತಾಸ್ಮಿ ದೇವರಾಜ ನಿವೇಶನಾತ್ ।
ತತಃ ಪಶ್ಯಾಮಹೇ ಸರ್ವಾ ಬ್ರಾಹ್ಮಣಂ ಚಾನಿಕೇತನಂ ॥ ೩೧ ॥
ರೂಪವಂತಮಧೀಯಾನಮೇಕಮೇಕಾಂತಚಾರಿಣಂ ।
ತಸ್ಯ ವೈ ತಪಸಾ ವೀರ ತದ್ವನಂ ತೇಜಸಾವೃತಂ ॥ ೩೨ ॥
ಆದಿತ್ಯ ಇವ ತಂ ದೇಶಂ ಕೃತ್ಸ್ನಮೇವಾನ್ವಭಾಸಯುತ್ ।
ತಸ್ಯ ದೃಷ್ಟ್ವಾ ತಪಸ್ತಾದೃಗ್ರೂಪಂ ಚಾದ್ಭುತದರ್ಶನಂ ॥ ೩೩ ॥
ಅವತೀರ್ಣಾಸ್ಮಿ ತಂ ದೇಶಂ ತಪೋವಿಘ್ನಚಿಕೀರ್ಷಯಾ ।
ಅಹಂ ಚ ಸೌರಭೇಯೀ ಚ ಸಾಮೇಯೀ ಬುದ್ಬುದಾ ಲತಾ ॥ ೩೪ ॥
ಯೌಗಪದ್ಯೇನ ತಂ ವಿಪ್ರಮಭ್ಯಗಚ್ಛಾಮ ಭಾರತ ।
ಗಾಯಂತ್ಯೋ ಲಲಮಾನಾಶ್ಚ ಲೋಭಯಂತ್ಯಶ್ಚ ತಂ ದ್ವಿಜಂ ॥ ೩೫ ॥

---

ಕೌಂತೇಯನೇ! ಕೇಳು. ದೇವಾರಣ್ಯ ನಿವಾಸಿನಿಯಾದ ಅಪ್ಸರೆಯು ನಾನು. ಧನಪತಿಯಾದ ಕುಬೇರನಿಗೆ ನಾನು ಇಷ್ಟಳಾದವಳು. ಎಲೈ ಮಹಾಬಲನೇ! ನನ್ನ ಹೆಸರು 'ವರ್ಚಾ' ಎಂದು. ನನಗೆ ಬೇರೆ ನಾಲ್ವರು ಸಖಿಯರುಂಟು. ಎಲ್ಲರೂ ಕಾಮಗಮನವುಳ್ಳವರು; ಶುಭಕರರು.

೩೧. ಒಮ್ಮೆ ದೇವರಾಜನ ಅರಮನೆಯಿಂದ ಹೊರಟು ನನ್ನ ಸಖಿಯರೊಡನೆ ಸಂಚಾರ ಮಾಡುತ್ತಿದ್ದೆನು. ಹಾಗೆ ಸಂಚರಿಸುತ್ತಿರುವಾಗ ಮನೆಯನ್ನು ತೊರೆದವನಾದ ಒಬ್ಬ ಬ್ರಾಹ್ಮಣನನ್ನು ನಾವೆಲ್ಲರೂ ಕಂಡೆವು.

೩೨. ಆತನು ರೂಪವಂತನು; ಅಧ್ಯಯನದಲ್ಲಿ ನಿರತನಾಗಿದ್ದನು; ಒಬ್ಬೊಂಟಿಗನಾಗಿಯೂ ಏಕಾಂತವಾಗಿಯೂ ಇದ್ದನು. ಎಲೈ ವೀರನೆ! ಆತನ ತಪಸ್ಸಿನಿಂದ ಆ ವನವು ತೇಜಸ್ಸಿನಿಂದ ತುಂಬಿ ತುಳುಕುತ್ತಿದ್ದಿತು.

೩೪–೩೫. ಆತನ ತೇಜಸ್ಸು ಸೂರ್ಯನಂತೆ ಆ ಪ್ರದೇಶವನ್ನೆಲ್ಲ ಪ್ರಕಾಶಗೊಳಿಸುತ್ತಿದ್ದಿತು. ಆತನ ಆ ರೀತಿಯ ತಪಸ್ಸನ್ನೂ ಅದ್ಭುತವಾಗಿ ಕಾಣುತ್ತಿದ್ದ ಆತನ ರೂಪವನ್ನೂ ಕಂಡು, ಆತನ ತಪಸ್ಸಿಗೆ ವಿಘ್ನಮಾಡಬೇಕೆಂಬ ಉದ್ದೇಶದಿಂದ ಆ ಪ್ರದೇಶದಲ್ಲಿ ಇಳಿದೆನು. ನಾನೂ, ಸೌರಭೇಯೀ, ಸಾರಮೇಯೀ, ಬುದ್ಬುದಾ, ಲತಾ — ಈ ಐವರೂ ಏಕಕಾಲದಲ್ಲಿ ಆ ಬ್ರಾಹ್ಮಣನ ಬಳಿಗೆ ಹೋದೆವು. ಎಲೈ ಭಾರತನೆ! ನಾವು ಗಾನಮಾಡುತ್ತಲೂ ಹಿತವಾದ ಮಾತುಗಳನ್ನಾಡುತ್ತಲೂ ಆ ಬ್ರಾಹ್ಮಣನಿಗೆ ಆಸೆ ತೋರಿಸಿ ನಮ್ಮಲ್ಲಿ ಲೋಭವುಳ್ಳವನಾಗುವಂತೆ ಆಕರ್ಷಿಸುತ್ತಲೂ ಅವನ ಬಳಿ ಹೋದೆವು.

ಸ ಚ ನಾಸ್ಮಾಸು ಕೃತವಾನ್ ಮನೋ ವೀರಃ ಕಥಂಚನ ।
ನಾಕಂಪತ ಮಹಾತೇಜಾಃ ಸ್ಥಿತಸ್ತಪಸಿ ನಿರ್ಮಲೇ ॥ ೩೭ ॥
ಸೋಽಶಪತ್ ಕುಪಿತೋಽಸ್ಮಾಸು ಬ್ರಾಹ್ಮಣಃ ಕ್ಷತ್ರಿಯರ್ಷಭ ।
ಗ್ರಾಹಭೂತಾ ಜಲೇ ಯೂಯಂ ಭವಿಷ್ಯಥ ಶತಂ ಸಮಾಃ ॥ ೩೮ ॥
ತತೋ ವಯಂ ಪ್ರವ್ಯಥಿತಾಃ ಸರ್ವಾ ಭರತ ಸತ್ತಮ ।
ಆಯಾತಾಃ ಶರಣಂ ವಿಪ್ರಂ ತಪೋಧನಮಕಲ್ಮಷಂ ॥ ೩೯ ॥
ರೂಪೇಣ ವಯಸಾ ಚೈವ ಕಂದರ್ಪೇಣ ಚ ದರ್ಪಿತಾಃ ।
ಅಯುಕ್ತಂ ಕೃತವತ್ಯಃ ಸ್ಮ ಕ್ಷಂತುಮರ್ಹಸಿ ನೋ ದ್ವಿಜ ॥ ೪೦ ॥
ಏಷ ಏವ ವಧೋಽಸ್ಮಾಕಂ ಸ ಪರ್ಯಾಪ್ತಸ್ತಪೋಧನ ।
ಯದ್ವಯಂ ಶಂಸಿತಾತ್ಮಾನಂ ಪ್ರಲೋಬ್ಧುಂ ತ್ವಾಮುಪಾಗತಾಃ ॥ ೪೧ ॥
ಅವಧ್ಯಾಶ್ಚ ಸ್ತ್ರಿಯಃ ಸೃಷ್ಟಾ ಮನ್ಯಂತೇ ಧರ್ಮಚಿಂತಕಾಃ ।
ತಸ್ಮಾದ್ಧರ್ಮೇಣ ಧರ್ಮಜ್ಞ ಏಷ ವಾದೋ ಮನೀಷಿಣಾಂ ॥ ೪೨ ॥

---

೩೭. ಆತನಾದರೋ ವೀರನಾದವನು; ಸ್ಥಿರಚಿತ್ತನು. ನಮ್ಮಲ್ಲಿ ಸ್ವಲ್ಪವೂ ಮನಸ್ಸಿಡಲಿಲ್ಲ. ನಿರ್ಮಲವಾದ ತಪಸ್ಸಿನಲ್ಲಿ ತೊಡಗಿದ್ದ ಆ ಮಹಾತೇಜಸ್ವಿಯು ಅತ್ತಿತ್ತ ಅಲುಗಾಡಲಿಲ್ಲ; ತಪಸ್ಸನ್ನು ಬಿಟ್ಟು ಆತನು ಚಲಿಸಲೇ ಇಲ್ಲವು.

೩೮. ಎಲೈ ಕ್ಷತ್ರಿಯಶ್ರೇಷ್ಠನೇ! ತರುವಾಯ ಆ ಬ್ರಾಹ್ಮಣನು ನಮ್ಮ ಮೇಲೆ ಕೋಪಗೊಂಡು 'ನೀವು ನೂರು ವರ್ಷಗಳವರೆಗೆ ನೀರಿನಲ್ಲಿ ಮೊಸಳೆಗಳಾಗಿರಿ' ಎಂದು ಶಪಿಸಿಬಿಟ್ಟನು.

೩೯. ಆಗ ನಮಗೆ ತುಂಬ ವ್ಯಥೆಯಾಯಿತು. ಎಲೈ ಭರತಶ್ರೇಷ್ಠನೇ! ತಪೋಧನನೂ, ದೋಷರಹಿತನೂ ಆದ ಆ ಬ್ರಾಹ್ಮಣನಿಗೆ ನಾವೆಲ್ಲರೂ ಶರಣಾಗತೆಯರಾದೆವು.

೪೦. 'ರೂಪದಿಂದಲೂ, ವಯಸ್ಸಿನಿಂದಲೂ, ಮನ್ಮಥನಿಂದಲೂ ಹೆಮ್ಮೆಗೊಂಡವರಾಗಿ, ನಾವು ಮಾಡಬಾರದುದನ್ನು ಮಾಡಿಬಿಟ್ಟೆವು. ಎಲೈ ಬ್ರಾಹ್ಮಣನೆ! ನಮ್ಮನ್ನು ಕ್ಷಮಿಸುವುದು ನಿನಗೆ ಯೋಗ್ಯವಾಗಿದೆ.

೪೧. ಮಹಾತ್ಮನಾದ ನಿನ್ನನ್ನು ಆಸೆಗೆ ಸಿಕ್ಕಿಸಿ ಲೋಭಗೊಳಿಸುವುದಕ್ಕಾಗಿ ನಾವು ನಿನ್ನ ಬಳಿ ಬಂದೆವಲ್ಲವೆ! ಅದೇ ನಮಗೆ ವಧೆಯಾದ ಹಾಗಾಯಿತು!! ಎಲೈ ತಪೋಧನನೇ! ಆ ಶಿಕ್ಷೆಯೇ ನಮಗೆ ಸಾಕಾಗಿದೆ.

೪೨. ಸ್ತ್ರೀಯರು ಅವಧ್ಯರಾಗಿಯೇ ಸೃಷ್ಟಿಸಲ್ಪಟ್ಟಿರುವರೆಂದು ಧರ್ಮಚಿಂತನೆ ಮಾಡುವವರು ಭಾವಿಸುತ್ತಾರೆ. ವಿದ್ವಾಂಸರ ವಾದವೂ ಇದೇ. ನೀನು ಧರ್ಮವನ್ನು ಬಲ್ಲವನು; ಧರ್ಮಕ್ಕೆ ಸಮ್ಮತವಾಗುವಂತೆ ಆಚರಿಸು.

ಶರಣಂ ಚ ಪ್ರಪನ್ನಾನಾಂ ಶಿಷ್ಟಾಃ ಕುರ್ವಂತಿ ಪಾಲನಂ ।
ಶರಣ್ಯಂ ತ್ವಂ ಪ್ರಸನ್ನಾಃ ಸ್ಮಸ್ತಸ್ಮಾತ್ತ್ವಂ ಕ್ಷಂತುಮರ್ಹಸಿ ॥ ೪೩ ॥
ಏವಮುಕ್ತಸ್ತು ಧರ್ಮಾತ್ಮಾ ಬ್ರಾಹ್ಮಣಃ ಶುಭಕರ್ಮಕೃತ್ ।
ಪ್ರಸಾದಂ ಕೃತವಾನ್ ಶೂರ ರವಿಸೋಮ ಸಮಪ್ರಭಃ ॥ ೪೪ ॥

ಬ್ರಾಹ್ಮಣ ಉವಾಚ –

ಭವತೀನಾಂ ಚರಿತ್ರೇಣ ಪರಿಮುಹ್ಯಾಮಿ ಚೇತಸಿ ।
ಅಹೋ ಧಾರ್ಷ್ಟ್ಯಮಹೋ ಮೋಹೋ ಯತ್ಪಾಪಾಯ ಪ್ರವರ್ತತ ॥ ೪೫ ॥
ಮಸ್ತಕಸ್ಥಾಯಿನಂ ಮೃತ್ಯುಂ ಯದಿ ಪಶ್ಯೇದಯಂ ಜನಃ ।
ಆಹಾರೋಽಪಿ ನ ರೋಚೇತ ಕಿಮುತಾಕಾರ್ಯಕಾರಿತಾ ॥ ೪೬ ॥
ಅಹೋ ಮಾನುಷ್ಯಕಂ ಜನ್ಮ ಸರ್ವಜನ್ಮಸು ದುರ್ಲಭಂ ।
ತೃಣವತ್ಕ್ರಿಯತೇ ಕೈಶ್ಚಿದ್ಯೋಷಿನ್ಮೂಢೈರ್ದುರಾತ್ಮಭಿಃ ॥ ೪೭ ॥
ತಾನ್ವಯಂ ಸಮುಪೃಚ್ಛಾಮೋ ಜನಿರ್ವಃ ಕಿಂ ನಿಮಿತ್ತತಃ ।
ಕೋ ವಾ ಲಾಭೋ ವಿಚಾರ್ಯೈತನ್ಮನಸಾ ಸಹ ಪ್ರೋಚ್ಯತಾಂ ॥ ೪೮ ॥

---

೪೩. ಶರಣಾಗತರಾಗಿ ಬಂದವರನ್ನು ಶಿಷ್ಟರಾದವರು ಪರಿಪಾಲನೆಮಾಡುತ್ತಾರೆ. ನೀನೇ ರಕ್ಷಕನೆಂದು ನಾವು ನಿನ್ನ ಮರೆಹೊಕ್ಕಿದ್ದೇವೆ. ಆದುದರಿಂದ ನಮ್ಮನ್ನು ನೀನು ಕ್ಷಮಿಸಬೇಕು' ಎಂದು ಬೇಡಿಕೊಂಡೆವು.

೪೪. ನಾವು ಹೀಗೆ ಕೇಳಿಕೊಳ್ಳಲಾಗಿ ಧರ್ಮಾತ್ಮನೂ, ಶುಭಕರ್ಮಗಳನ್ನು ಮಾಡುವವನೂ, ಶೂರನೂ, ಸೂರ್ಯ ಚಂದ್ರರಿಗೆ ಸಮಾನವಾದ ಕಾಂತಿಯುಳ್ಳವನೂ ಆದ ಆ ಬ್ರಾಹ್ಮಣನು ನಮ್ಮಲ್ಲಿ ಪ್ರಸನ್ನನಾಗಿ ಅನುಗ್ರಹ ಮಾಡಿದನು.

೪೫–೪೬. ಬ್ರಾಹ್ಮಣನು ಹೀಗೆಂದನು :—'ಅಮ್ಮಾ! ನಿಮ್ಮ ನಡವಳಿಕೆಯಿಂದ ನನ್ನ ಮನಸ್ಸಿನಲ್ಲಿ ಬಹು ಸಂಕಟವುಂಟಾಗಿರುವುದು. ಅಬ್ಬಾ! ಅದೆಷ್ಟು ದಿಟ್ಟತನ; ನಿಮಗೆ ಅದೆಷ್ಟು ಮೋಹ! ಅವುಗಳಿಗೆ ಒಳಗಾಗಿ ಎಂಥ ಪಾಪಮಾಡಲು ಹೊರಟಿದ್ದೀರಿ. ಈ ಜನರು ತಮ್ಮ ತಲೆಯಮೇಲೆಯೇ ಇರುವ ಮೃತ್ಯುವನ್ನು ಕಂಡುದೇ ಆದರೆ ಅವರಿಗೆ ಆಹಾರವೂ ರುಚಿಸುವುದಿಲ್ಲ. ಹಾಗಿರುವಲ್ಲಿ ಮಾಡಬಾರದುದನ್ನು ಮಾಡುವುದಾದೀತೇ!

೪೭. ಆಹಾ! ಎಲ್ಲ ಜನ್ಮಗಳಲ್ಲಿಯೂ ಮನುಷ್ಯ ಜನ್ಮವು ದುರ್ಲಭವಾದುದು. ಬಹು ಕಷ್ಟದಿಂದ ದೊರೆಯುವ ಆ ಮನುಷ್ಯ ಜನ್ಮವನ್ನು ಹೆಣ್ಣಿಗೆ ಮರುಳಾದ ಕೆಲವರು ದುಷ್ಟರು ಹುಲ್ಲಿನಂತೆ ಕೀಳುಮಾಡುವರಲ್ಲ!

೪೮. ಅವರನ್ನು ನಾವು ಹೀಗೆ ಕೇಳುತ್ತೇವೆ. "ನಿಮ್ಮ ಹುಟ್ಟಿಗೆ ಕಾರಣವೇನು? ಯಾವ ಉದ್ದೇಶದಿಂದ ನೀವು ಜನ್ಮವೆತ್ತಿದಿರಿ? ನಿಮ್ಮ ಜನ್ಮದಿಂದ ಬರುವ ಲಾಭವೇನು? ಇದನ್ನು ಮನಸ್ಸಿನಲ್ಲಿ ವಿಚಾರಮಾಡಿ ಹೇಳಿರಿ."

ನಚೈತಾಃ ಪರಿನಿಂದಾಮೋ ಜನಿರ್ಯಾಭ್ಯಃ ಪ್ರವರ್ತತೇ ।
ಕೇವಲಂ ತಾನ್ ವಿನಿಂದಾಮೋ ಯೇ ಚ ತಾಸು ನಿರರ್ಗಲಾಃ ॥ ೪೯ ॥
ಯತಃ ಪದ್ಮಭುವಾ ಸೃಷ್ಟಂ ಮಿಥುನಂ ವಿಶ್ವವೃದ್ಧಯೇ ।
ತತ್ತಥಾ ಪರಿಪಾಲ್ಯಂ ವೈ ನಾತ್ರ ದೋಷೋಽಸ್ತಿ ಕಶ್ಚನ ॥ ೫೦ ॥
ಯಾ ಬಾಂಧವೈಃ ಪ್ರದತ್ತಾ ಸ್ಯಾದ್ವಹ್ನಿದ್ವಿಜ ಸಮಾಗಮೇ ।
ಗಾರ್ಹಸ್ಥ್ಯಪಾಲನಂ ಧನ್ಯಂ ತಯಾ ಸಾಕಂ ಹಿ ಸರ್ವದಂ ॥ ೫೧ ॥
ಯಥಾ ಪ್ರಕೃತಿ ಪುಂಯೋಗೋ ಯತ್ನೇನಾಪಿ ಪರಸ್ಪರಂ ।
ಸಾಧ್ಯಮಾನೋ ಗುಣಾಯ ಸ್ಯಾದಗುಣಾಯಾಪ್ಯಸಾಧಿತಃ ॥ ೫೨ ॥
ಏವಂ ಯತ್ನಾತ್ಸಾಧ್ಯಮಾನಂ ಸ್ವಕಂ ಗಾರ್ಹಸ್ಥ್ಯಮುತ್ತಮಂ ।
ಗುಣಾಯ ಮಹತೇ ಭೂಯಾದಗುಣಾಯಾಪ್ಯಸಾಧಿತಂ ॥ ೫೩ ॥
ಪುರೇ ಪಂಚಮುಖೇ ದ್ವಾಃಸ್ಥ ಏಕಾದಶಭಟೈರ್ಯುತಃ ।
ಸಾಕಂ ನಾರ್ಯಾ ಬಹ್ವಪತ್ಯಃ ಸ ಕಥಂ ಸ್ಯಾದಚೇತನಃ ॥ ೫೪ ॥
ಯಶ್ಚ ಸ್ತ್ರಿಯಾ ಸಮಾಯೋಗಃ ಪಂಚಯಜ್ಞಾದಿ ಕರ್ಮಭಿಃ ।
ವಿಶ್ವೋಪಕೃತಯೇ ಸೃಷ್ಟಾ ಮೂಢೈರ್ಹಾ ಸಾಧ್ಯತೇಽನ್ಯಥಾ ॥ ೫೫ ॥

---

೪೯–೫೩. ಯಾರಿಂದ ಜನ್ಮವುಂಟಾಗುವುದೋ ಆ ಸ್ತ್ರೀಯರನ್ನು ನಾವು ನಿಂದಿಸುವುದಿಲ್ಲ. ಆದರೆ ಅವರ ವಿಷಯದಲ್ಲಿ ಕಟ್ಟಿಲ್ಲದಂತೆ ವರ್ತಿಸುವವರನ್ನು ಮಾತ್ರ ನಿಂದಿಸುತ್ತೇವೆ. ಪದ್ಮಭವನಾದ ಬ್ರಹ್ಮದೇವನು ವಿಶ್ವವೃದ್ಧಿಗಾಗಿ ಸ್ತ್ರೀ ಪುರುಷರನ್ನು ಸೃಷ್ಟಿಮಾಡಿದನು. ಆ ನಿಯಮವನ್ನು ಅದೇ ರೀತಿ ಪರಿಪಾಲಿಸ ತಕ್ಕುದೇ ಸರಿ. ಅದರಲ್ಲಿ ಯಾವ ದೋಷವೂ ಇಲ್ಲ. ಅಗ್ನಿ ಮತ್ತು ಬ್ರಾಹ್ಮಣರ ಎದುರಿಗೆ ಬಾಂಧವರು ಯಾವಳನ್ನು ಪತ್ನಿಯಾಗಿ ಕೊಟ್ಟಿರುವರೋ ಅವಳೊಡನೆ ಗೃಹಸ್ಥಧರ್ಮವನ್ನು ನಡೆಸುವುದೇ ಧನ್ಯವು; ಅದರಿಂದ ಸರ್ವವೂ ಕೈಸೇರುತ್ತದೆ. ಹೀಗೆ ಸಹಜವಾಗಿ ವಿಧಾಯಕವಾಗಿರುವ ಗಾರ್ಹ್ಯಸ್ಥ್ಯವನ್ನು ಪ್ರಕೃತಿ ಪುರುಷ ಯೋಗವನ್ನಾಗಿ ಭಾವಿಸಿ ನಡೆಸಿದರೆ ಗುಣವುಳ್ಳದಾಗುತ್ತದೆ; ಇಲ್ಲವಾದರೆ ಬಹಳ ಕೆಡಕುಂಟು.

೫೪–೫೫. ಐದು ಮುಖಗಳುಳ್ಳ (ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶಗಳೆಂಬ ಪಂಚಭೂತಗಳಿಂದಾದ) ಪಟ್ಟಣ (ದೇಹ)ದಲ್ಲಿ ಹನ್ನೊಂದು ಮಂದಿ ಭಟರಿಂದ (ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು ಮತ್ತು ಬುದ್ಧಿ) ಕೂಡಿ ಮಡದಿಯೊಡನೆ ದ್ವಾರಪಾಲಕನಾಗಿ ಬಹುಮಕ್ಕಳುಳ್ಳವ ನಾಗಿರುವಲ್ಲಿ ಅದು ಹೇಗೆ ಅಚೇತನನಾಗಿರುವನು? ಪಂಚಯಜ್ಞ ಮೊದಲಾದ ಕರ್ಮಗಳಿಂದ ವಿಶ್ವದ ಉಪಕಾರವನ್ನು ಸಾಧಿಸುವುದಕ್ಕಾಗಿ ಸ್ತ್ರೀ ಸಮಾಗಮವು ಸೃಷ್ಟಿಸಲ್ಪಟ್ಟಿತು. ಮೂಢರು ಅದನ್ನು ಬೇರೆ ರೀತಿಯಾಗಿ ಸಾಧಿಸುವರು.

ಅಹೋ ಶ್ರುಣುಧ್ವಂ ನೋ ಚೇದ್ವಃ ಶುಶ್ರೂಷಾ ಜಾಯತೇ ಶುಭಾ ।
ತಥಾಪಿ ಬಾಹುಮುದ್ಧೃತ್ಯ ರೋರೂಯಾಮಃ ಶ್ರುಣೋತಿ ಕಃ ॥ ೫೬ ॥
ಷಡ್‌ಧಾತುಸಾರಂ ತದ್ವೀರ್ಯಂ ಸಮಾನಂ ಪರಿಹಾಯ ಚ ।
ವಿನಿಕ್ಷಿಪೇ ಕುಯೋನೌ ತು ತಸ್ಯೇದಂ ಪ್ರೋಕ್ತವಾನ್ಯಮಃ ॥ ೫೭ ॥
ಪ್ರಥಮಂ ಚೌಷಧೀ ದ್ರೋಗ್ಧಾ ಆತ್ಮದ್ರೋಗ್ಧಾ ತತಃ ಪುನಃ ।
ಪಿತೃದ್ರೋಗ್ಧಾ ವಿಶ್ವದ್ರೋಗ್ಧಾ ಯಾತ್ಯಂಧಂ ಶಾಶ್ವತೀಃ ಸಮಾಃ ॥ ೫೮ ॥
ಮನುಷ್ಯಂ ಪಿತರೋ ದೇವಾ ಮುನಯೋ ಮಾನವಾಸ್ತಥಾ ।
ಭೂತಾನಿಚೋಪಜೀವಂತಿ ತದರ್ಥಂ ನಿಯತೋ ಭವೇತ್ ॥ ೫೯ ॥
ವಚಸಾ ಮನಸಾ ಚೈವ ಜಿಹ್ವಯಾ ಕರ ಶ್ರೋತ್ರಕೈಃ ।
ದಾಂತಮಾಹುರ್ಹಿ ಸತ್ತೀರ್ಥಂ ಕಾಕತೀರ್ಥಮತಃ ಪರಂ ॥ ೬೦ ॥
ಕಾಕಪ್ರಾಯೇ ನರೇ ಯಸ್ಮಿನ್ ರಮಂತೇ ತಾಮಸಾ ಜನಾಃ ।
ಹಂಸೋಽಯಮಿತಿ ದೇವಾನಾಂ ಕೋಽರ್ಥಸ್ತೇನ ವಿಚಿಂತ್ಯತಾಂ ॥ ೬೧ ॥

---

೫೬. ಕೇಳಬೇಕೆಂಬ ಶುಭವಾದ ಇಚ್ಛೆಯು ನಿಮಗೆ ಉಂಟಾಗುವ ಪಕ್ಷದಲ್ಲಿ ನಮ್ಮ ಮಾತನ್ನು ಲಾಲಿಸಿರಿ. ಹೀಗೆಂದು ತೋಳನ್ನು ಮೇಲೆತ್ತಿ ಕೂಗಿ ಹೇಳುತ್ತಿದ್ದೇವೆ. ಆದರೂ ನಮ್ಮನ್ನು ಕೇಳುವವರು ಯಾರು.

೫೭. ವೀರ್ಯವೆಂಬುದು ಆರು ಧಾತುಗಳ ಸಮರೂಪವಾದುದು. ಅದನ್ನು ಸಮಾನಯೋನಿಯಲ್ಲಿ ವಿನಿಯೋಗಿಸುವುದನ್ನು ಬಿಟ್ಟು ಕುಯೋನಿಯಲ್ಲಿ ಯಾವನು ನಿಕ್ಷೇಪಿಸುವನೋ ಅವನ ವಿಷಯದಲ್ಲಿ ಯಮನು ಈ ರೀತಿ ಹೇಳಿದ್ದಾನೆ.

೫೮. ಅಂಥವನು ಮೊದಲು ಓಷಧಿಗಳಿಗೆ ದ್ರೋಹಿ; ಬಳಿಕ ಆತ್ಮದ್ರೋಹಿ; ಪಿತೃದ್ರೋಹಿ ಮತ್ತು ವಿಶ್ವದ್ರೋಹಿ. ಅನೇಕ ವರ್ಷಗಳವರೆಗೆ ಅಂಧಕಾರ ರೂಪವಾದ ನರಕಕ್ಕೆ ಅವನು ಭಾಗಿಯಾಗುತ್ತಾನೆ.

೫೯. ಪಿತೃದೇವತೆಗಳು, ದೇವತೆಗಳು, ಮುನಿಗಳು, ಮಾನವರು ಮತ್ತು ಭೂತಗಳು— ಇವರೆಲ್ಲರೂ ಮನುಷ್ಯನನ್ನು ಅವಲಂಬಿಸಿಕೊಂಡು ಜೀವಿಸುವರು. ಅದಕ್ಕಾಗಿ ಜಿತೇಂದ್ರಿಯನೂ, ವ್ರತಾದಿ ನಿಯಮಗಳುಳ್ಳವನೂ ಆಗಬೇಕು.

೬೦–೬೧. ಮಾತು, ಮನಸ್ಸು, ನಾಲಗೆ, ಕೈ ಮತ್ತು ಕಿವಿಗಳನ್ನು ಯಾವನು ಅಡಗಿಸಿ ಅಂಕೆಯಲ್ಲಿಟ್ಟುಕೊಂಡಿರುವನೋ ಅವನನ್ನೇ 'ಸತ್ತೀರ್ಥ' ಎನ್ನುವರು. ಹಾಗಲ್ಲದೆ ಬೇರೆ ವಿಧವಾಗಿರುವವನನ್ನು 'ಕಾಕತೀರ್ಥ' ಎನ್ನುವರು. ಕಾಗೆಯನ್ನು ಕಂಡು 'ಇದೇ ಹಂಸ' ಎಂದು ಭಾವಿಸಿದಂತೆ ಕಾಕಸಮಾನನಾದ ಮನುಷ್ಯನಲ್ಲಿ ದೇವಶ್ರೇಷ್ಠನೆಂಬ ಬುದ್ಧಿಯನ್ನಿಟ್ಟು ತಾಮಸರಾದ ಜನರು ಸಂತೋಷಪಡುತ್ತಾರೆ. ಅದರಿಂದ ಪ್ರಯೋಜನವೇನೆಂಬುದನ್ನು ಆಲೋಚನೆ ಮಾಡಬೇಕು.

ಏವಂ ವಿಧಂ ಹಿ ವಿಶ್ವಸ್ಯ ನಿರ್ಮಾಣಂ ಸ್ಮರತೋ ಹೃದಿ ।
ಅಪಿ ಕೃತೇ ತ್ರಿಲೋಕ್ಯಾಶ್ಚ ಕಥಂ ಪಾಪೇ ರಮೇನ್ಮನಃ ॥ ೬೨ ॥
ತದಿದಂ ಚಾನ್ಯ ಮರ್ತ್ಯಾನಾಂ ಶಾಸ್ತ್ರದೃಷ್ಟಮಹೋ ಸ್ತ್ರಿಯಃ ।
ಯಮಲೋಕೇ ಮಯಾ ದೃಷ್ಟಂ ಮುಹ್ಯೇ ಪ್ರತ್ಯಕ್ಷತಃ ಕಥಂ ॥ ೬೩ ॥
ಭವತೀಷು ಚ ಕಃ ಕೋಪೋ ಯೇ ಯದರ್ಥೇಹಿ ನಿರ್ಮಿತಾಃ ।
ತೇ ತಮರ್ಥಂ ಪ್ರಕುರ್ವಂತಿ ಸತ್ಯಮಸ್ತು ಭವೇಮ ಚ ॥ ೬೪ ॥
ಶತಂ ಸಹಸ್ರಂ ವಿಶ್ವಂ ಚ ಸರ್ವಮಕ್ಷಯವಾಚಕಂ ।
ಪರಿಮಾಣಂ ಶತಂ ತ್ವೇವ ನೈತದಕ್ಷಯ್ಯವಾಚಕಂ ॥ ೬೫ ॥
ಯದಾ ಚ ವೋ ಗ್ರಾಹಭೂತಾ ಗೃಹ್ಣತೀಃ ಪುರುಷಾನ್ ಜಲೇ ।
ಉತ್ಕರ್ಷತಿ ಜಲಾತ್‌ಕಶ್ಚಿತ್ ಸ್ಥಲೇ ಪುರುಷಸತ್ತಮಃ ॥ ೬೬ ॥
ತದಾ ಯೂಯಂ ಪುನಃ ಸರ್ವಾಃ ಸ್ವಂ ರೂಪಂ ಪ್ರತಿಪತ್ಸ್ಯಥ ।
ಅನೃತಂ ನೋಕ್ತಪೂರ್ವಂ ಮೇ ಹಸತಾಪಿ ಕದಾಚನ ।
ಕಲ್ಯಾಣಸ್ಯ ಸುಪೃಕ್ತಸ್ಯ ಶುದ್ಧಿಸ್ತದ್ವದ್ವರಾ ಹಿ ವಃ ॥ ೬೭ ॥

---

೬೨. ಈ ಬಗೆಯಾಗಿರುವ ವಿಶ್ವದ ನಿರ್ಮಾಣ ಸ್ಥಿತಿಯನ್ನು ಹೃದಯದಲ್ಲಿ ಸ್ಮರಿಸುತ್ತಿರುವವನಿಗೆ, ಮೂರು ಲೋಕವೂ ಕೈಗೆ ಬರುವಹಾಗಿದ್ದರೂ ಪಾಪದಲ್ಲಿ ಹೇಗೆತಾನೆ ಮನಸ್ಸು ಹೊಕ್ಕೀತು ; ಸಂತೋಷಗೊಂಡೀತು ?

೬೩–೬೫. ಎಲೈ ಸ್ತ್ರೀಯರೇ ! ಈ ಸಂಗತಿಯೆಲ್ಲಾ (ಬೇರೆ ಮರ್ತ್ಯರ ವಿಷಯದಲ್ಲಿ) ಶಾಸ್ತ್ರದಿಂದ ಕಂಡುಕೊಂಡುದಾಗಿರುವುದಲ್ಲದೆ, ಯಮಲೋಕದಲ್ಲಿಯೂ ನಾನು ಪ್ರತ್ಯಕ್ಷವಾಗಿ ಕಂಡುದಾಗಿರುವುದು. ಅಪ್ರತ್ಯಕ್ಷವಾಗಿ ಕಂಡುದರಲ್ಲಿ ಹೇಗೆತಾನೆ ಭ್ರಾಂತಿಗೊಂಡೇನು ? ನಿಮ್ಮಲ್ಲಿತಾನೇ ನನಗೆ ಕೋಪವೇಕೆ ? ಯಾರು ಯಾವುದಕ್ಕಾಗಿ ನಿರ್ಮಿತರಾಗಿರುವರೋ ಅವರು ಸತ್ಯ ಮತ್ತು ಅಸತ್ಯ ರೂಪವಾದ ಆಯಾ ಉದ್ದೇಶವನ್ನು ನಡಸುತ್ತಾರೆ. ಶತ, ಸಹಸ್ರ, ವಿಶ್ವ— ಈ ಎಲ್ಲವೂ 'ಅಕ್ಷಯ' (ಬಹಳ) ಎಂಬ ಅರ್ಥವನ್ನು ಸೂಚಿಸುವ ಮಾತುಗಳು. ಇವುಗಳಲ್ಲಿ ಪರಿಮಾಣವನ್ನು (ಎಂದರೆ ಗೊತ್ತಾದ ಒಂದು ಅಳತೆಯನ್ನು) ಸೂಚಿಸುವುದು 'ಶತ' ಎಂಬುದೊಂದೇ ; ಇದು ಅಕ್ಷಯಾರ್ಥಕವಲ್ಲ.

೬೬–೬೭. ನೀವು ಮೊಸಳೆಗಳಾಗಿ ನೀರಿನಲ್ಲಿರುತ್ತ ಜನರನ್ನು ಹಿಡಿದುಕೊಳ್ಳುತ್ತಿರುವಾಗ ಒಬ್ಬಾನೊಬ್ಬ ಪುರುಷಶ್ರೇಷ್ಠನು ನಿಮ್ಮನ್ನು ಯಾವಾಗ ಎತ್ತಿ ತೆಗೆದು ನೆಲದಮೇಲೆ ಹಾಕುತ್ತಾನೋ, ಆಗ ನೀವೆಲ್ಲರೂ ನಿಮ್ಮ ನಿಮ್ಮ ರೂಪವನ್ನು ಮತ್ತೆ ಪಡೆಯುವಿರಿ. ನಾನು ಹಿಂದೆ ಎಂದೂ ಹಾಸ್ಯಕ್ಕೂ ಕೂಡ ಸುಳ್ಳು ಹೇಳಿದವನಲ್ಲ. ಎಲೌ ಅಪ್ಸರೆಯರೇ ! ನೀವು ಶ್ರದ್ಧೆಯಿಂದ ಪ್ರಶ್ನಿಸಿದ ಮಂಗಳವು ನಿಮಗೀರೀತಿಯಾಗಿ ಲಭಿಸುತ್ತದೆ. ಅದೇ ಉತ್ತಮವಾದುದು.'

ನಾರ್ಯುವಾಚ—

ತತೋಽಭಿವಾದ್ಯ ತಂ ವಿಪ್ರಂ ಕೃತ್ವಾ ಚೈವ ಪ್ರದಕ್ಷಿಣಂ ॥ ೬೮ ॥
ಅಚಿಂತಯಾಮಾಪಸೃತ್ಯ ತಸ್ಮಾದ್ದೇಶಾತ್ ಸುದುಃಖಿತಾಃ ।
ಕ್ವನು ನಾಮ ವಯಂ ಸರ್ವಾಃ ಕಾಲೇನಾಲ್ಪೇನ ತಂ ನರಂ ॥ ೬೯ ॥
ಸಮಾಗಚ್ಛೇಮ ಯೋ ನಃ ಸ್ವಂ ರೂಪಮಾಪಾದಯೇತ್ಪುನಃ ।
ತಾ ವಯಂ ಚಿಂತಯಿತ್ವೇಹ ಮುಹೂರ್ತಾದಿವ ಭಾರತ ॥ ೭೦ ॥
ದೃಷ್ಟವತ್ಯೋ ಮಹಾಭಾಗಂ ದೇವರ್ಷಿಮಥ ನಾರದಂ ।
ಸರ್ವಾ ಹೃಷ್ಟಾಃಸ್ಮ ತಂ ದೃಷ್ಟ್ವಾ ದೇವರ್ಷಿಮಮಿತದ್ಯುತಿಂ ॥ ೭೧ ॥
ಅಭಿವಾದ್ಯ ಚ ತಂ ಪಾರ್ಥ ಸ್ಥಿತಾಃ ಸ್ಮೋ ವ್ಯಥಿತಾನನಾಃ ।
ಸ ನೋಽಪೃಚ್ಛದ್ದುಃಖಮೂಲಮುಕ್ತವತ್ಯೋ ವಯಂ ಚ ತಂ ॥ ೭೨ ॥
ಶ್ರುತ್ವಾ ತಚ್ಚ ಯಥಾ ತತ್ತ್ವಮಿದಂ ವಚನಮಬ್ರವೀತ್ ।
ದಕ್ಷಿಣೇ ಸಾಗರೇಽನೂಪೇ ಪಂಚ ತೀರ್ಥಾನಿ ಸಂತಿ ವೈ ॥ ೭೩ ॥
ಪುಣ್ಯಾನಿ ರಮಣೀಯಾನಿ ತಾನಿ ಗಚ್ಛತ ಮಾ ಚಿರಂ ।
ತತ್ರಸ್ಥಾಃ ಪುರುಷವ್ಯಾಘ್ರಃ ಪಾಂಡವೋ ವೋ ಧನಂಜಯಃ ॥ ೭೪ ॥
ಮೋಕ್ಷಯಿಷ್ಯತಿ ಶುದ್ಧಾತ್ಮಾ ದುಃಖಾದಸ್ಮಾನ್ನ ಸಂಶಯಃ ।
ತಸ್ಯ ಸರ್ವಾ ವಯಂ ವೀರ ಶ್ರುತ್ವಾ ವಾಕ್ಯಮಿಹಾಗತಾಃ ॥ ೭೫ ॥

---

೬೮–೭೧. ಆ ಹೆಂಗಸು ಹೇಳುತ್ತಾಳೆ:—ಬಳಿಕ ನಾವು ಆ ಬ್ರಾಹ್ಮಣನಿಗೆ ನಮಸ್ಕರಿಸಿ ಪ್ರದಕ್ಷಿಣೆ ಮಾಡಿ ಆ ಸ್ಥಳದಿಂದ ಹೊರಟು ಬೇರೆಕಡೆಗೆ ಹೋಗಿ ಬಹು ದುಃಖಿತರಾಗಿ ನಮಗೆ ನಮ್ಮ ಸ್ವಂತ ರೂಪವು ಪುನಃ ಉಂಟಾಗುವಂತೆ ಮಾಡುವ ಆ ಮನುಷ್ಯನನ್ನು ನಾವೆಲ್ಲರೂ ಸ್ವಲ್ಪಕಾಲದಲ್ಲಿಯೇ ಎಲ್ಲಿ ಕಂಡೇವು ಎಂದು ಯೋಚಿಸತೊಡಗಿದೆವು. ಸ್ವಲ್ಪಹೊತ್ತು ಹೀಗೆ ನಾವು ಚಿಂತಿಸುತ್ತಿದ್ದೆವು. ಅಷ್ಟರಲ್ಲಿ, ಎಲೈ ಭಾರತನೇ! ಮಹಾಭಾಗನಾದ ದೇವರ್ಷಿ ನಾರದನನ್ನು ಕಂಡೆವು. ಎಣೆಯಿಲ್ಲದ ಕಾಂತಿಯಿಂದ ಕಂಗೊಳಿಸುತ್ತಿದ್ದ ಆತನನ್ನು ಕಂಡು ನಾವೆಲ್ಲರೂ ಹರ್ಷಗೊಂಡೆವು.

೭೨. ಎಲೈ ಪಾರ್ಥನೇ! ತರುವಾಯ ನಾವು ಆತನಿಗೆ ನಮಸ್ಕಾರ ಮಾಡಿ ವ್ಯಥೆಯಿಂದ ಮುಖ ತಗ್ಗಿಸಿ ನಿಂತುಕೊಂಡೆವು. ಆಗಲಾತನು ನಮ್ಮ ದುಃಖದ ಕಾರಣವನ್ನು ಕೇಳಿದನು. ನಾವು ಅದನ್ನೆಲ್ಲ ಆತನಿಗೆ ತಿಳಿಸಿದೆವು.

೭೩. ಸಂಗತಿಯನ್ನೆಲ್ಲ ವಿಶದವಾಗಿ ಕೇಳಿ ಆತನು ನಮಗೆ ಈ ಮಾತನ್ನು ಹೇಳಿದನು:—'ದಕ್ಷಿಣಸಾಗರದ ತೀರದಲ್ಲಿ ಐದು ತೀರ್ಥಗಳಿರುವುವಷ್ಟೆ.

೭೪–೭೭. ಅವು ಪುಣ್ಯಕರವಾದುವು; ರಮಣೀಯವಾದುವು. ನೀವು ಅಲ್ಲಿಗೆ ಹೋಗಿರಿ; ತಡಮಾಡಬೇಡಿರಿ. ನೀವು ಅಲ್ಲಿದ್ದರೆ, ಪುರುಷವ್ಯಾಘ್ರನಾದ ಪಾಂಡುಪುತ್ರನೂ, ಪರಿಶುದ್ಧಾತ್ಮನೂ ಆದ ಧನಂಜಯನು ಅಲ್ಲಿಗೆ ಬಂದು

ತ್ವಮಿದಂ ಸತ್ಯವಚನಂ ಕರ್ತುಮರ್ಹಸಿ ಪಾಂಡವ ।
ತ್ವದ್ವಿಧಾನಾಂ ಹಿ ಸಾಧೂನಾಂ ಜನ್ಮ ದೀನೋಪಕಾರಕಂ ॥ ೭೬ ॥
ಶ್ರುತ್ವೇತಿ ವಚನಂ ತಸ್ಯಾಃ ಸಸ್ನೌ ತೀರ್ಥೇಷ್ವನುಕ್ರಮಾತ್ ।
ಗ್ರಾಹಭೂತಾಶ್ಚೋಜ್ಜಹಾರ ಯಥಾ ಪೂರ್ವಾಃ ಸ ಪಾಂಡವಃ ॥ ೭೭ ॥
ತತಃ ಪ್ರಣಮ್ಯ ತಾ ವೀರಂ ಪ್ರೋಚ್ಯಮಾನಾ ಜಯಾಶಿಷಃ ।
ಗಂತುಂ ಕೃತಾಭಿಲಾಷಾಶ್ಚ ಪ್ರಾಹ ಪಾರ್ಥೋ ಧನಂಜಯಃ ॥ ೭೮ ॥
ಏಷ ಮೇ ಹೃದಿ ಸಂದೇಹಃ ಸುದೃಢಃ ಪರಿವರ್ತತೇ ।
ಕಸ್ಮಾದ್ವೋ ನಾರದಮುನಿರನುಜಜ್ಞೇ ಪ್ರವಾಸಿತುಂ ॥ ೭೯ ॥
ಸರ್ವಃ ಕೋಽಪ್ಯತಿಹೀನೋಽಪಿ ಸ್ವಪೂಜ್ಯಸ್ಯಾರ್ಥಸಾಧಕಃ ।
ಸ್ವಪೂಜ್ಯತೀರ್ಥೇಷ್ವಾವಾಸಂ ಪ್ರೋಕ್ತವಾನ್ ನಾರದಃ ಕಥಂ ॥ ೮೦ ॥
ತಥೈವ ನವದುರ್ಗಾಸು ಸತೀಷ್ವತಿಬಲಾಸು ಚ ।
ಸಿದ್ಧೇಶೀ ಸಿದ್ಧಗಣಪೇ ಚಾಪಿ ವೋಽತ್ರ ಸ್ಥಿತಿಃ ಕಥಂ ॥ ೮೧ ॥

---

ಈ ದುಃಖದಿಂದ ನಿಮ್ಮನ್ನು ಬಿಡುಗಡೆಮಾಡುತ್ತಾನೆ. ಇದರಲ್ಲಿ ಸಂಶಯವಿಲ್ಲವು' ಎಂದು ಹೇಳಿದನು. ಎಲೈ ವೀರನೇ! ಆತನ ಮಾತನ್ನು ಕೇಳಿ ನಾವೆಲ್ಲರೂ ಇಲ್ಲಿಗೆ ಬಂದೆವು. ಎಲೈ ಪಾಂಡುಪುತ್ರನೇ! ನೀನು ಈ ಮಾತನ್ನು ಸತ್ಯವನ್ನಾಗಿ ಮಾಡು. ನಿನ್ನಂಥ ಸಾಧುಗಳ ಹುಟ್ಟೆಂಬುದು ದೀನರಿಗೆ ಉಪಕಾರಮಾಡುವುದಕ್ಕಾಗಿಯೇ ಇರುವುದು.'' ಹೀಗೆ ಹೇಳಿದ ಆಕೆಯ ಮಾತುಗಳನ್ನು ಕೇಳಿ ಆ ಪಾಂಡುಪುತ್ರನು ಆ ತೀರ್ಥಗಳಲ್ಲೆಲ್ಲ ಕ್ರಮವಾಗಿ ಸ್ನಾನಮಾಡಿದನು. ಮೊಸಳಿಗಳಾಗಿದ್ದ ಅವರೆಲ್ಲರನ್ನೂ ಮೇಲೆತ್ತಿ ತೆಗೆದು ಮೊದಲಿದ್ದಂತೆಯೇ ಮಾಡಿದನು.

೭೮–೭೯. ಬಳಿಕ ಆ ಅಪ್ಸರೆಯರು ಆ ವೀರನಿಗೆ ನಮಸ್ಕಾರ ಮಾಡಿ ಜಯಾಶೀರ್ವಾದಗಳನ್ನು ನುಡಿಯುತ್ತ ಅಲ್ಲಿಂದ ಹೊರಡಲು ಅಭಿಲಾಷೆಯುಳ್ಳವರಾದರು. ಆಗ ಅವರನ್ನು ಕುರಿತು ಪೃಥಾಸುತನಾದ ಧನಂಜಯನು ಹೀಗೆ ಪ್ರಶ್ನೆಮಾಡಿದನು. ''ಎಲೌ ಅಪ್ಸರೆಯರೇ! ನನ್ನ ಮನಸ್ಸಿನಲ್ಲಿ ಒಂದು ಸಂಶಯವಿರುವುದು; ಇದು ಬಹು ಬಲವಾಗಿದೆ. ನಾರದ ಮುನಿಯು ನೀವು ಅಲ್ಲಿಂದ ಬೇರೆ ಕಡೆಗೆ ಪ್ರಯಾಣ ಹೋಗಬೇಕೆಂದೇಕೆ ಅಪ್ಪಣೆ ಮಾಡಿದನು.

೮೦. ಯಾರೇ ಆಗಲಿ, ಎಂಥ ಹೀನನೇ ಆಗಲಿ, ಎಲ್ಲರೂ ತಮಗೆ ಪೂಜ್ಯರಾಗಿರುವವರ ಪ್ರಯೋಜನವನ್ನೇ ಸಾಧಿಸುತ್ತಾರೆ. ತನಗೆ ಪೂಜ್ಯವಾದ ತೀರ್ಥಗಳಲ್ಲಿ ವಾಸಮಾಡುತ್ತಿರಬೇಕೆಂದು ನಾರದ ಮುನಿಯು ಹೇಳಿದುದೆಂತು?

೮೧. ಹಾಗೆಯೇ, ಅತಿ ಬಲವತಿಯರಾದ ನವದುರ್ಗಿಯರಿರುವರಾದರೂ, ಸಿದ್ಧೇಶನೂ, ಸಿದ್ಧಗಣಪತಿಯೂ ಈ ಪವಿತ್ರ ತೀರ್ಥಗಳಲ್ಲಿ ನೆಲಸಿರುವರಾದರೂ ಇಲ್ಲಿ ನೀವು ವಾಸಮಾಡಿದುದೆಂತು? ಈ ವಿಷಯವು ನನಗೆ ಅರ್ಥವಾಗಲಿಲ್ಲವು.

ಏಕೈಕ ಏಷಾಂ ಶಕ್ತಾೀ ಹಿ ಅಪಿ ದೇವಾನ್ನಿವಾರಿತುಂ ।
ತೀರ್ಥಸಂರೋಧಕಾರಿಣ್ಯಃ ಸರ್ವಾನಾವಾರಯತ್ ಕಥಂ ॥ ೮೨ ॥
ಇತಿ ಚಿಂತಯತೋ ಮಹ್ಯಂ ಭೃಶಂ ದೋಲಾಯತೇ ಮನಃ ।
ಮಹನ್ಮೇ ಕೌತುಕಂ ಜಾತಂ ಸತ್ಯಂ ವಾ ವಕ್ತುಮರ್ಹಥ ॥ ೮೩ ॥

ಅಪ್ಸರಸ ಊಚುಃ:—

ಯೋಗ್ಯಂ ಪೃಚ್ಛಸಿ ಕೌಂತೇಯ ಪುನಃ ಪಶ್ಯೋತ್ತರಾಂ ದಿಶಂ ॥ ೮೪ ॥
ಏಷ ಸ್ವ ವಿಪ್ರೈರಭಿಸಂವೃತೋಽರ್ಚ್ಯೋ
ಮುನಿಃ ಸಮಾಯಾತಿ ತಥೇತಿ ನಾರದಃ ।
ಸರ್ವಂ ಹಿ ಪೃಷ್ಟಂ ತವ ವೈ ಸ ವಕ್ತಾ ।
ಪ್ರೋಚ್ಯೈವಮಾಕಾಶತಲಂ ಗತಾಸ್ತಾಃ ॥ ೮೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಪಾರ್ಥೇನ ಪಂಚಾಪ್ಸರಃ ಸಮುದ್ಧರಣಂ" ನಾಮ ಪ್ರಥಮೋಧ್ಯಾಯಃ

---

೮೨. ಇವರಲ್ಲಿ ಒಬ್ಬೊಬ್ಬರೂ ದೇವತೆಗಳನ್ನು ಕೂಡ ತಡೆದು ನಿಲ್ಲಿಸಲು ಶಕ್ತರಾಗಿರುವರು. ಆದರೆ ತೀರ್ಥಕ್ಕೆ ಬರುವ ಯಾತ್ರಿಕರಿಗೆ ಎಲ್ಲ ಬಗೆಯಿಂದಲೂ ಅಡ್ಡಿಯುಂಟುಮಾಡುವರಾದ ನಿಮ್ಮನ್ನು ಅವರು ಅದೇಕೆ ನಿವಾರಣೆಮಾಡಲಿಲ್ಲ ?

೮೩. ಹೀಗೆ ಚಿಂತಿಸುತ್ತಿರುವ ನನ್ನ ಮನಸ್ಸು ಬಹಳವಾಗಿ ಅತ್ತಿತ್ತ ತೂಗಾಡುತ್ತಿದೆ. ನನಗೆ ಇದನ್ನು ಕೇಳಲು ಮಹತ್ತಾದ ಕುತೂಹಲವುಂಟಾಗಿದೆ. ಸತ್ಯವನ್ನು ಹೇಳಿರಿ" ಎಂದನು.

೮೪. ಅರ್ಜುನನಾಡಿದ ಈ ಮಾತನ್ನು ಕೇಳಿ ಅಪ್ಸರೆಯರು ಅವನಿಗೆ ಹೀಗೆ ಉತ್ತರ ಕೊಟ್ಟರು :—"ಎಲೈ ಕೌಂತೇಯನೇ ! ನೀನು ಯೋಗ್ಯವಾಗಿಯೇ ಪ್ರಶ್ನೆಮಾಡುತ್ತಿರುವೆ. ಅದೋ ಅತ್ತ ಉತ್ತರ ದಿಕ್ಕಿನ ಕಡೆ ನೋಡುವವನಾಗು.

೮೫. ತನ್ನ ಅನುಯಾಯಿಗಳಾದ ಬ್ರಾಹ್ಮಣರಿಂದ ಸುತ್ತುವರಿಯಲ್ಪಟ್ಟು ಪೂಜೆಗೆ ಅರ್ಹನಾಗಿರುವ ನಾರದಮುನಿಯು ಇತ್ತ ಬರುತ್ತಿದ್ದಾನೆ. ನೀನು ಕೇಳಿದ ಪ್ರಶ್ನೆಗಳೆಲ್ಲಕ್ಕೂ ಆತನೇ ಉತ್ತರ ಕೊಡುತ್ತಾನೆ." ಹೀಗೆಂದು ಹೇಳಿ ಅವರು ಆಕಾಶಕ್ಕೆ ಏರಿಹೋದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಪಾರ್ಥನು ಐವರು ಅಪ್ಸರೆಯರನ್ನು ಉದ್ಧರಿಸಿದುದು" ಎಂಬ
ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿತೀಯೋಽಧ್ಯಾಯಃ

## ನಾರದಾರ್ಜುನ ಸಂವಾದೇ ದಾನಭೇದ ಪ್ರಶಂಸಾವರ್ಣನಂ

**ಸೂತ ಉವಾಚ :—**

**ತತೋ ದ್ವಿಜೈಃ ಪರಿವೃತಂ ನಾರದಂ ದೇವಪೂಜಿತಂ ।**
**ಅಭಿಗಮ್ಯೋಪಜಗ್ರಾಹ ಸರ್ವಾನಥ ಸ ಪಾಂಡವಃ ॥ ೧ ॥**
**ತತಸ್ತಂ ನಾರದಃ ಪ್ರಾಹ ಜಯಾರಾತಿ ಧನಂಜಯಂ ।**
**ಧರ್ಮೇ ಭವತಿ ತೇ ಬುದ್ಧಿರ್ದೇವೇಷು ಬ್ರಾಹ್ಮಣೇಷು ಚ ॥ ೨ ॥**
**ಕಚ್ಚಿದೇತಾಂ ಮಹಾಯಾತ್ರಾಂ ವೀರ ದ್ವಾದಶವಾರ್ಷಿಕೀಂ ।**
**ಆಚರನ್ ಖಿದ್ಯಸೇ ನೈವಮಥವಾ ಕುಪ್ಯಸೇ ನ ಚ ॥ ೩ ॥**
**ಮುನೀನಾಮಪಿ ಚೇತಾಂಸಿ ತೀರ್ಥಯಾತ್ರಾಸು ಪಾಂಡವ ।**
**ಖಿದ್ಯಂತಿ ಪರಿಕುಪ್ಯಂತಿ ಶ್ರೇಯಸಾಂ ವಿಘ್ನಮೂಲತಃ ॥ ೪ ॥**
**ಕಚ್ಚಿನ್ನೈತೇನ ದೋಷೇಣ ಸಮಾಶ್ಲಿಷ್ಟೋಽಸಿ ಪಾಂಡವ ।**
**ಅತ್ರ ಚಾಂಗಿರಸಾ ಗೀತಾಂ ಗಾಥಾಮೇತಾಂ ಹಿ ಶುಶ್ರುಮ ॥ ೫ ॥**

---

## ಕನ್ನಡದ ಅನುವಾದ

### ನಾರದಾರ್ಜುನ ಸಂವಾದ — ದಾನಭೇದ ಪ್ರಶಂಸಾವರ್ಣನ

೧. ಸೂತಪುರಾಣಿಕನು ಹೇಳುತ್ತಾನೆ :—ಬಳಿಕ ಆ ಪಾಂಡುಕುಮಾರನು ಬ್ರಾಹ್ಮಣರಿಂದ ಸುತ್ತುವರೆದು ದೇವತೆಗಳಿಂದ ಪೂಜೆಗೊಂಡವನಾದ ನಾರದ ಮಹರ್ಷಿಯ ಬಳಿಗೆ ಹೋಗಿ ಅವರೆಲ್ಲರನ್ನೂ ಸ್ವಾಗತಮಾಡಿ ಎದುರುಗೊಂಡನು.

೨–೩. ಅನಂತರ ನಾರದನು ಅವನನ್ನು ಕುರಿತು ಹೀಗೆ ಹೇಳಿದನು. "ಎಲೈ ಶತ್ರುಧನಂಜಯನೇ, ಅರ್ಜುನಾ! ಜಯಶಾಲಿಯಾಗು. ನಿನ್ನ ಬುದ್ಧಿಯು ಧರ್ಮದಲ್ಲಿಯೂ, ದೇವತೆಗಳಲ್ಲಿಯೂ, ಬ್ರಾಹ್ಮಣರಲ್ಲಿಯೂ ಆದರವುಳ್ಳುದಾಗುತ್ತದೆ. ಎಲೈ ವೀರನೇ! ಹನ್ನೆರಡು ವರ್ಷಗಳ ಕಾಲದ ಈ ಮಹಾಯಾತ್ರೆಯನ್ನು ನಡೆಸುತ್ತಿರುವ ನಿನಗೆ ಖೇದವುಂಟಾಗುವುದಿಲ್ಲವಷ್ಟೆ? ಕೋಪ ಬರುವುದಿಲ್ಲವಷ್ಟೆ?

೪. ತೀರ್ಥಯಾತ್ರೆಗಳಲ್ಲಿ ಮುನಿಗಳ ಮನಸ್ಸು ಕೂಡ ಖೇದಗೊಳ್ಳುತ್ತದೆ; ಕೋಪಗೊಳ್ಳುತ್ತದೆ. ಶ್ರೇಯಸ್ಸಾಧಕ ಕಾರ್ಯಗಳಿಗೆ ಬಹು ವಿಘ್ನಗಳುಂಟು. ಆ ಕಾರಣದಿಂದ ಖೇದಕೋಪಗಳು ತಲೆದೋರುತ್ತವೆ.

೫. ಎಲೈ ಪಾಂಡವನೇ! ಈ ದೋಷವು ನಿನ್ನಲ್ಲಿ ಸೇರಿಕೊಂಡಿಲ್ಲತಾನೆ? ಈ ವಿಷಯವಾಗಿ ಆಂಗಿರಸನಿಂದ ಹೇಳಲ್ಪಟ್ಟ ಗಾದೆಯೊಂದನ್ನು ಕೇಳಿದ್ದೇವೆ.

ಯಸ್ಯ ಹಸ್ತೌ ಚ ಪಾದೌ ಚ ಮನಶ್ಚೈವ ಸುಸಂಯುತಮ್ ।
ನಿರ್ವಿಕಾರಾಃ ಕ್ರಿಯಾಃ ಸರ್ವಾಃ ಸ ತೀರ್ಥಫಲಮಶ್ನುತೇ ॥ ೬ ॥
ತದಿದಂ ಹೃದಿ ಧಾರ್ಯಂ ತೇ ಕಿಂ ವಾ ತ್ವಂ ತಾತ ಮನ್ಯಸೇ ।
ಭ್ರಾತಾ ಯುಧಿಷ್ಠಿರೋ ಯಸ್ಯ ಸಖಾ ಯಸ್ಯ ಸ ಕೇಶವಃ ॥ ೭ ॥
ಪುನರೇತತ್ಸಮುಚಿತಂ ಯದ್ವಿಪ್ರೈಃ ಶಿಕ್ಷಣಂ ನೃಣಾಮ್ ।
ವಯಂ ಹಿ ಧರ್ಮಗುರವಃ ಸ್ಥಾಪಿತಾಸ್ತೇನ ವಿಷ್ಣುನಾ ॥ ೮ ॥
ವಿಷ್ಣುನಾ ಚಾತ್ರ ಶೃಣುಮೋ ಗೀತಾಂ ಗಾಥಾಂ ದ್ವಿಜಾನ್ ಪ್ರತಿ ॥ ೯ ॥

ಯಸ್ಯಾಮಲಾಮೃತಯಶಃ ಶ್ರವಣಾವಗಾಹಃ
ಸದ್ಯಃ ಪುನಾತಿ ಜಗದಾಶ್ವಪಚಾದ್ವಿಕುಂಠಃ ।
ಸೋಽಹಂ ಭವದ್ಭಿರುಪಲಬ್ಧ ಸುತೀರ್ಥಕೀರ್ತಿಃ
ಛಿಂದ್ಯಾಂ ಸ್ವಬಾಹುಮಪಿ ಯಃ ಪ್ರತಿಕೂಲವರ್ತೀ ॥ ೧೦ ॥

ಪ್ರಿಯಂ ಚ ಪಾರ್ಥ ತೇ ಬ್ರೂಮೋ ಯೇಷಾಂ ಕುಶಲಕಾಮುಕಃ ।
ಸರ್ವೇ ಕುಶಲಿನಸ್ತೇ ಚ ಯಾದವಾಃ ಪಾಂಡವಾಸ್ತಥಾ ॥ ೧೧ ॥

---

೬. 'ಯಾರ ಹಸ್ತಗಳೂ, ಪಾದಗಳೂ, ಮನಸ್ಸೂ ಸಂಪೂರ್ಣವಾಗಿ ಹಿಡಿತದಲ್ಲಿರುವವೋ, ಯಾರ ಕ್ರಿಯೆಗಳೆಲ್ಲವೂ ವಿಕಾರರಹಿತವಾಗಿರುವುವೋ ಅವನು ತೀರ್ಥಸೇವೆಯ ಫಲವನ್ನು ಅನುಭವಿಸುತ್ತಾನೆ.'

೭. ಅಪ್ಪಾ, ಇದನ್ನು ನೀನು ಮನಸ್ಸಿನಲ್ಲಿಟ್ಟುಕೊಂಡಿರು. ಯಾರಿಗೆ ಯುಧಿಷ್ಠಿರನು ಸೋದರನೋ, ಆ ಕೇಶವನು ಯಾರಿಗೆ ಸಖನೋ ಆ ನೀನು ಮತ್ತೇನನ್ನುತಾನೆ ಭಾವಿಸೀಯೆ!

೮–೯. ರಾಜರಿಗೆ ಬ್ರಾಹ್ಮಣರಿಂದ ಶಿಕ್ಷಣವಾಗಬೇಕೆಂಬುದು ಯುಕ್ತವೇ ಆಗಿದೆ. ನಾವಾದರೋ ಆ ಶ್ರೀಮನ್ಮಹಾವಿಷ್ಣುವಿನಿಂದ ಧರ್ಮಗುರುಸ್ಥಾನದಲ್ಲಿ ಸ್ಥಾಪಿಸಲ್ಪಟ್ಟದ್ದೇವೆ. ಬ್ರಾಹ್ಮಣರ ವಿಷಯವಾಗಿ ಶ್ರೀಮಹಾವಿಷ್ಣುವು ನುಡಿದ ಗಾದೆಯೊಂದನ್ನು ಕೇಳಿದ್ದೇವೆ. ಅದೇನೆಂದರೆ—

೧೦–೧೧. 'ನಿರ್ಮಲವಾದ ಅಮೃತದಂತಿರುವ ಯಾರ ಯಶಸ್ಸನ್ನು ಕೇಳುವುದರಲ್ಲಿಯೇ ಮುಳುಗಿರುವುದರಿಂದ, ಶ್ವಪಚನಿಂದ ಹಿಡಿದು ನಿರ್ವಿಕಾರವಾದ ವೈಕುಂಠದವರೆಗೂ ಇರುವ ಸಮಸ್ತ ಜಗತ್ತೂ ತಕ್ಷಣವೇ ಪವಿತ್ರವಾಗುವುದೋ ಅಂತಹ ನಾನು ನಿಮ್ಮಿಂದ ಪರಮಪವಿತ್ರವಾದ ಕೀರ್ತಿಯನ್ನು ಪಡೆದುಕೊಂಡವನಾಗಿರುವೆನು. ನಿಮಗೆ ವಿರೋಧವಾಗಿ ವರ್ತಿಸುವುದು ನನ್ನ ಸ್ವಂತ ಬಾಹುವೇ ಆದರೂ ಅದನ್ನು ಕತ್ತರಿಸಿಬಿಡುತ್ತೇನೆ.' ಎಲೈ ಪಾರ್ಥನೇ! ಪಾಂಡವರಿಗೂ ಯಾದವರಿಗೂ ಕುಶಲವನ್ನು ಬಯಸುವವರಾದ ನಾವು ನಿನಗೆ ಪ್ರಿಯವನ್ನು ಹೇಳುತ್ತೇವೆ. ಅವರೆಲ್ಲರೂ ಕುಶಲಿಗಳಾಗಿದ್ದಾರೆ.

ಅಧುನಾ ಭೀಮಸೇನೇನ ಕುರೂಣಾಮುಪತಾಪಕಃ ।
ಶಾಸನಾದ್ ಧೃತರಾಷ್ಟ್ರಸ್ಯ ವೀರವರ್ಮಾ ನೃಪೋ ಹತಃ ॥ ೧೨ ॥
ಸ ಹಿ ರಾಜ್ಞಾಮಜೇಯೋಽಭೂದ್ಯಥಾಪೂರ್ವಂ ಬಲಿರ್ಬಲೀ ।
ಕಂಟಕಂ ಕಂಟಕೇನೇವ ಧೃತರಾಷ್ಟ್ರೋ ಜಗಾಯ ತಂ ॥ ೧೩ ॥
ಇತ್ಯಾದಿ ನಾರದಪ್ರೋಕ್ತಾಂ ವಾಚಮಾಕರ್ಣ್ಯ ಫಾಲ್ಗುನಃ ।
ಅತೀವ ಮುದಿತಃ ಪ್ರಾಹ ತೇಷಾಮಕುಶಲಂ ಕುತಃ ॥ ೧೪ ॥
ಯೇ ಬ್ರಾಹ್ಮಣಮತೇ ನಿತ್ಯಂ ಯೇ ಚ ಬ್ರಾಹ್ಮಣ ಪೂಜಕಾಃ ।
ಅಹಂ ಚ ಶಕ್ತ್ಯಾ ನಿಯತಸ್ತೀರ್ಥಾನಿ ವಿಚರನ್ ನನು ॥ ೧೫ ॥
ಆಗತಸ್ತೀರ್ಥಮೇತದ್ಧಿ ಪ್ರಮೋದೋಽತೀವ ಮೇ ಹೃದಿ।
ತೀರ್ಥಾನಾಂ ದರ್ಶನಂ ಧನ್ಯಮವಗಾಹಸ್ತತೋಽಧಿಕಃ ॥ ೧೬ ॥
ಮಾಹಾತ್ಮ್ಯಶ್ರವಣಂ ತಸ್ಮಾದೌರ್ವೋಽಪಿ ಮುನಿರಬ್ರವೀತ್ ।
ತದಹಂ ಶ್ರೋತುಮಿಚ್ಛಾಮಿ ತೀರ್ಥಸ್ಯಾಸ್ಯಗುಣಾನ್ ಮುನೇ ॥ ೧೭ ॥

---

೧೨. ಕುರುಕುಲದವರಿಗೆ ಕಿರುಕುಳವುಂಟುಮಾಡುತ್ತಿದ್ದ ವೀರವರ್ಮ ರಾಜನನ್ನು ಧೃತರಾಷ್ಟ್ರನ ಅಪ್ಪಣೆಯ ಪ್ರಕಾರ ಭೀಮಸೇನನು ಈಗ ಕೊಂದು ಹಾಕಿದನು.

೧೩. ಬಲವಂತನಾದ ಬಲಿಯು ಹಿಂದೆ ಹೇಗೆ ಅಜೇಯನಾಗಿದ್ದನೋ ಹಾಗೆ ಆತನು ರಾಜರಿಗೆಲ್ಲ ಅಜೇಯನಾಗಿದ್ದನು. ಮುಳ್ಳಿನಿಂದಲೇ ಮುಳ್ಳನ್ನು ತೆಗೆದುಹಾಕುವಂತೆ ಧೃತರಾಷ್ಟ್ರನು ಅವನನ್ನು ಜಯಿಸಿದನು.''

೧೪-೧೫. ನಾರದನು ಹೇಳಿದ ಇವೇ ಮೊದಲಾದ ಮಾತುಗಳನ್ನು ಕೇಳಿ ಫಲ್ಗುನನು ಬಹಳ ಸಂತೋಷಪಟ್ಟು ಹೀಗೆ ಹೇಳಿದನು :—''ಅವರು ಯಾವಾಗಲೂ ಬ್ರಾಹ್ಮಣರ ಅಭಿಪ್ರಾಯವನ್ನು ತಿಳಿದು ಅದಕ್ಕನುಸಾರವಾಗಿ ನಡೆದುಕೊಳ್ಳುವವರು; ಮತ್ತು ಬ್ರಾಹ್ಮಣರನ್ನು ಪೂಜಿಸುತ್ತಿರುವವರು. ಅಂಥ ಅವರಿಗೆ ಅಕುಶಲವೆಲ್ಲಿಯದು? ನಾನು ಕೂಡ ನಿಯಮನಿಷ್ಠನಾಗಿ ಶಕ್ತಿಯಿರುವಮಟ್ಟಿಗೂ ತೀರ್ಥಗಳನ್ನು ಸಂದರ್ಶಿಸಲು ಸಂಚಾರ ಮಾಡುತ್ತಿದ್ದೇನೆ.

೧೬-೧೭. ಹಾಗೆಯೇ ಸಂಚಾರಮಾಡುತ್ತ ಈ ತೀರ್ಥಕ್ಕೆ ಬಂದೆನು. ನನ್ನ ಹೃದಯದಲ್ಲಿ ಅಮಿತಾನಂದವು ತುಂಬಿಕೊಂಡಿದೆ. ತೀರ್ಥಗಳ ದರ್ಶನವು ಧನ್ಯವಾದುದು. ಆ ತೀರ್ಥಗಳಲ್ಲಿ ಮುಳುಗಿ ಸ್ನಾನಮಾಡುವುದು ಅದಕ್ಕಿಂತ ಹೆಚ್ಚು. ತೀರ್ಥಗಳ ಮಹಾತ್ಮೆಯನ್ನು ಕೇಳುವುದು ಸ್ನಾನಕ್ಕಿಂತಲೂ ಹೆಚ್ಚು ಪುಣ್ಯಕರವಾದುದು. ಹೀಗೆಂದು ಔರ್ವಮುನಿಯು ಕೂಡ ಹೇಳಿರುವನು. ಆದುದರಿಂದ ಎಲೈ ಮುನಿಯೇ! ನಾನು ಈ ತೀರ್ಥದ ಗುಣಗಳನ್ನು ಕೇಳಲಿಚ್ಛಿಸುತ್ತಿದ್ದೇನೆ.

ಏತೇನೈವ ಶ್ರಾವ್ಯಮೇತದ್ಯತ್ ತ್ವಯಾಂಗೀಕೃತಂ ಮುನೇ ।
ತ್ವಂ ಹಿ ತ್ರಿಲೋಕೀಂ ವಿಚರನ್ ವೇತ್ಸಿ ಸರ್ವಾಂ ಹಿ ಸಾರತಾಂ ॥ ೧೮ ॥
ತದೇತತ್‌ಸರ್ವತೀರ್ಥೇಭ್ಯೋಽಧಿಕಂ ಮನ್ಯೇ ತ್ವದಾಹೃತಂ ॥ ೧೯ ॥

ನಾರದ ಉವಾಚ :—

ಉಚಿತಂ ತವ ಪಾರ್ಥೈತದ್ಯತ್‌ಪೃಚ್ಛಸಿ ಗುಣಿನ್ ಗುಣಾನ್ ।
ಗುಣಿನಾಮೇವ ಯುಜ್ಯಂತೇ ಶ್ರೋತುಂ ಧರ್ಮೋದ್ಭವಾ ಗುಣಾಃ ॥
ಸಾಧೂನಾಂ ಧರ್ಮಶ್ರವಣೈಃ ಕೀರ್ತನೈರ್ಯಾತಿ ಚಾನ್ವಹಂ ॥ ೨೦ ॥
ಪಾಪಾನಾಮಸದಾಲಾಪೈರಾಯುರ್ಯಾತಿ ಯಥಾನ್ವಹಂ ।
ತದಹಂ ಕೀರ್ತಯಿಷ್ಯಾಮಿ ತೀರ್ಥಸ್ಯಾಸ್ಯ ಗುಣಾನ್ ಬಹೂನ್ ॥ ೨೧ ॥
ಯಥಾ ಶ್ರುತ್ವಾ ವಿಜಾನಾಸಿ ಯುಕ್ತಮಂಗೀಕೃತಂ ಮಯಾ ।
ಪುರಾಹಂ ವಿಚರನ್ ಪಾರ್ಥ ತ್ರಿಲೋಕೀಂ ಕಪಿಲಾನುಗಃ ॥ ೨೨ ॥
ಗತವಾನ್ ಬ್ರಹ್ಮಣೋ ಲೋಕಂ ತತ್ರಾಪಶ್ಯಂ ಪಿತಾಮಹಂ ।
ಸಹಿ ರಾಜರ್ಷಿ ದೇವರ್ಷಿ ಮೂರ್ತಾಮೂರ್ತೈಃ ಸುಸಂವೃತಃ ॥ ೨೩ ॥

---

೧೮. ಎಲೈ ಮುನಿಯೇ! ಈ ತೀರ್ಥವನ್ನು ನೀನು ಅಂಗೀಕರಿಸಿರುವೆಯಷ್ಟೆ. ಅದರಿಂದಲೇ ಇದರ ಮಹಿಮೆಯು ಕೇಳತಕ್ಕುದಾಗಿದೆ. ಮೂರು ಲೋಕಗಳನ್ನೂ ಸಂಚರಿಸುವ ನೀನು ಸರ್ವ ಸಾರವನ್ನೂ ಬಲ್ಲವನಾಗಿರುವೆ.

೧೯. ನಿನ್ನಿಂದ ಆದರಿಸಲ್ಪಟ್ಟ ಈ ತೀರ್ಥವು ಎಲ್ಲ ತೀರ್ಥಗಳಿಗಿಂತಲೂ ಹೆಚ್ಚು ಮಹತ್ವವುಳ್ಳುದೆಂದು ಭಾವಿಸುತ್ತೇನೆ.''

೨೦. ನಾರದನು ಹೇಳುತ್ತಾನೆ:—'' ಎಲೈ ಗುಣವಂತನಾದ ಪಾರ್ಥನೇ! ನೀನು ಕೇಳುತ್ತಿರುವುದು ಉಚಿತವಾಗಿಯೇ ಇರುವುದು. ಧರ್ಮದಿಂದ ಉಂಟಾಗುವ ಗುಣಗಳನ್ನು ಕೇಳುವುದು ಗುಣಿಗಳಿಗೆ ಮಾತ್ರವೇ ಹೊಂದುವುದು. ಧರ್ಮಶ್ರವಣದಿಂದಲೂ ಧರ್ಮಕೀರ್ತನದಿಂದಲೂ ಸಾಧುಗಳಿಗೆ ಸದಾ ಕಾಲವು ಕಳೆಯುತ್ತದೆ.

೨೧. ಪಾಪಿಗಳಿಗಾದರೋ ಕೆಟ್ಟ ಮಾತುಕಥೆಗಳಿಂದಲೇ ಆಯುಸ್ಸು ಕಳೆದು ಹೋಗುತ್ತದೆ. ಆದುದರಿಂದ ನಾನು ಈ ತೀರ್ಥದ ಬಹುವಾದ ಗುಣಗಳನ್ನು ಕುರಿತು ಹೇಳುತ್ತೇನೆ.

೨೨–೨೩. ಇದನ್ನು ಕೇಳುವುದರಿಂದ ನಾನು ಇದನ್ನು ಅಂಗೀಕರಿಸಿದುದು ಯುಕ್ತವಾಯಿತೆಂಬುದನ್ನು ನೀನೇ ಅರಿತುಕೊಳ್ಳುವೆ. ಹಿಂದೆ ನಾನು ಕಪಿಲ ಮುನಿಯನ್ನು ಹಿಂಬಾಲಿಸಿ ಮೂರು ಲೋಕವನ್ನೂ ಸ ತ್ಸುತ್ತ ಬ್ರಹ್ಮಲೋಕಕ್ಕೆ ಹೋದೆನು. ಅಲ್ಲಿ ಪಿತಾಮಹನನ್ನು ಕಂಡೆನು. ಮೂರ್ತರೂ, ಅಮೂರ್ತರೂ ಆದ ರಾಜರ್ಷಿ ದೇವರ್ಷಿಗಳಿಂದ ಸುತ್ತುವರಿಯಲ್ಪಟ್ಟವನಾಗಿ ನಿರ್ಮಲನಾದ

ವಿಭಾತಿ ವಿಮಲೋ ಬ್ರಹ್ಮಾ ನಕ್ಷತ್ರೈರುಡುರಾಡಿವ ।
ತಮಹಂ ಪ್ರಣಿಪತ್ಯಾಥ ಚಕ್ಷುಷಾ ಕೃತ ಸ್ವಾಗತಃ ॥ ೨೪ ॥
ಉಪವಿಷ್ಟಃ ಪ್ರಮುದಿತಃ ಕಪಿಲೇನ ಸಹೈವ ಚ ।
ಏತಸ್ಮಿನ್ನಂತರೇ ತತ್ರ ವಾರ್ತಿಕಾಃ ಸಮುಪಾಗತಾಃ ॥ ೨೫ ॥
ಪ್ರಹೀಯಂತೇ ಹಿ ತೇ ನಿತ್ಯಂ ಜಗದ್ದ್ರಷ್ಟುಂ ಹಿ ಬ್ರಹ್ಮಣಾ ।
ಕೃತಪ್ರಣಾಮಾನಥ ತಾನ್ ಸಮಾಸೀನಾನ್ ಪಿತಾಮಹಃ ।
ಚಕ್ಷುಷಾಮೃತಕಲ್ಪೇನ ಪ್ಲಾವಯನ್ನಿವ ಚಾಬ್ರವೀತ್ ॥ ೨೬ ॥
ಕುತ್ರ ಕುತ್ರ ವಿಚೀರ್ಣಂ ವೋ ದೃಷ್ಟಂ ಶ್ರುತಮಥಾಪಿ ವಾ ।
ಕಿಂಚಿದೇವಾದ್ಭುತಂ ಬ್ರೂತ ಶ್ರವಣಾದ್ಯೇನ ಪುಣ್ಯತಾ ॥ ೨೭ ॥
ಏವಮುಕ್ತೇ ಭಗವತಾ ತೇಷಾಂ ಯಃ ಪ್ರವರೋ ಮತಃ ।
ಸುಶ್ರವಾ ನಾಮ ಬ್ರಹ್ಮಾಣಂ ಪ್ರಣಿಪತ್ಯೇದಮೂಚಿವಾನ್ ॥ ೨೮ ॥
ಪ್ರಭೋರಗ್ರೇ ಚ ವಿಜ್ಞಪ್ತಿರ್ಯಥಾ ದೀಪೋ ರವೇಸ್ತಥಾ ।
ತಥಾಪಿ ಖಲು ವಾಚ್ಯಂ ಮೇ ಪರಾರ್ಥಂ ಪ್ರೇರಿತೇನ ತೇ ॥ ೨೯ ॥

---

ಆ ಬ್ರಹ್ಮದೇವನು ನಕ್ಷತ್ರಗಳು ಬಳಸಿದ ಉಡುರಾಜನಾದ ಚಂದ್ರನಂತೆ ಕಾಂತಿಯಿಂದ ಕಂಗೊಳಿಸುತ್ತಿದ್ದನು. ನಾನು ಆತನಿಗೆ ಅಡ್ಡಬಿದ್ದು ನಮಸ್ಕಾರ ಮಾಡಿದೆನು. ಬ್ರಹ್ಮದೇವನು ಕಣ್ಣೋಟದಿಂದಲೇ ನನ್ನನ್ನು ಸ್ವಾಗತಿಸಿದನು.

೨೫. ಹಾಗೆ ಸ್ವಾಗತಿಸಲ್ಪಟ್ಟು ಪರಮಾನಂದಗೊಂಡು ಕಪಿಲನೊಡನೆಯೇ ಕುಳಿತುಕೊಂಡೆನು. ಆ ಅವಕಾಶದಲ್ಲಿ ಸುದ್ದಿಗಳನ್ನು ಸಂಗ್ರಹಿಸಿ ತರುವ ವಾರ್ತಾಹಾರಿಗಳು ಅಲ್ಲಿಗೆ ಬಂದರು.

೨೬. ನಿತ್ಯವೂ ಜಗತ್ತನ್ನು ನೋಡಿಬರುವುದಕ್ಕಾಗಿ ಬ್ರಹ್ಮನಿಂದ ಅವರು ಕಳುಹಿಸಲ್ಪಡುವರು. ಅವರು ಪ್ರಣಾಮಮಾಡಿ ಕುಳಿತುಕೊಂಡ ಬಳಿಕ ಪಿತಾಮಹನು ಅವರನ್ನು ಅಮೃತಸಮಾನವಾದ ದೃಷ್ಟಿಯಿಂದ ತೇಲಿಸುವನೋ ಎಂಬಂತೆ ನೋಡುತ್ತ ಹೀಗೆ ಹೇಳಿದನು.

೨೭. ಬ್ರಹ್ಮನು ಹೇಳುತ್ತಾನೆ:—'ನೀವು ಎಲ್ಲೆಲ್ಲಿ ಸಂಚರಿಸಿದಿರಿ? ನೀವು ಕಂಡ ಅಥವಾ ಕೇಳಿದ ಅದ್ಭುತವನ್ನು— ಯಾವುದನ್ನು ಕೇಳುವುದರಿಂದ ಪುಣ್ಯಲಾಭವಾಗುವುದೋ ಅಂಥದನ್ನು— ಸ್ವಲ್ಪಮಟ್ಟಿಗೆ ಹೇಳಿರಿ.''

೨೮. ಭಗವಂತನಾದ ಬ್ರಹ್ಮನು ಹೀಗೆ ಕೇಳಲಾಗಿ, ಆ ಹರಿಕಾರರಲ್ಲಿ ಶ್ರೇಷ್ಠನೆನಿಸಿಕೊಂಡಿದ್ದ ಸುಶ್ರುವನೆಂಬವನು ಆತನಿಗೆ ಪ್ರಣಾಮ ಮಾಡಿ ಹೀಗೆ ಹೇಳತೊಡಗಿದನು :—

೨೯–೩೧. 'ದೇವಾ! ಪ್ರಭುವಿನೆದುರಿಗೆ ವಿಜ್ಞಾಪನೆ ಮಾಡುವುದು ಸೂರ್ಯನೆದುರಿಗೆ ದೀಪವನ್ನಿಟ್ಟಂತೆ. ಆದರೂ ಪರಾರ್ಥವಾಗಿ ಕಳುಹಿಸಲ್ಪಟ್ಟ

ಮುನಿಃ ಕಾತ್ಯಾಯನೋ ನಾಮ ಶ್ರುತ್ವಾ ಧರ್ಮಾನ್ ಪುನರ್ಬಹೂನ್ ॥
ಸಾರಜಿಜ್ಞಾಸಯಾ ತಸ್ಥಾವೇಕಾಂಗುಷ್ಠಃ ಶತಂ ಸಮಾಃ ।
ತತಃ ಪ್ರೋವಾಚ ತಂ ದಿವ್ಯಾ ವಾಣೀ ಕಾತ್ಯಾಯನ ಶೃಣು ॥ ೩೧ ॥
ಪುಣ್ಯೇ ಸರಸ್ವತೀ ತೀರೇ ಪೃಚ್ಛ ಸಾರಸ್ವತಂ ಮುನಿಂ ।
ಸ ತೇ ಸಾರಂ ಧರ್ಮಸಾಧ್ಯಂ ಧರ್ಮಜ್ಞೋಽಭಿವದಿಷ್ಯತಿ ॥ ೩೨ ॥
ಇತಿ ಶ್ರುತ್ವಾ ಮುನಿವರೋ ಮುನಿಶ್ರೇಷ್ಠಮುಪೇತ್ಯ ತಂ ।
ಪ್ರಣಮ್ಯ ಶಿರಸಾ ಭೂಮೌ ಪಪ್ರಚ್ಛೇದಂ ಹೃದಿ ಸ್ಥಿತಂ ॥ ೩೩ ॥
ಸತ್ಯಂ ಕೇಚಿತ್ ಪ್ರಶಂಸಂತಿ ತಪಃ ಶೌಚಂ ತಥಾಪರೇ ।
ಸಾಂಖ್ಯಂ ಕೇಚಿತ್ ಪ್ರಶಂಸಂತಿ ಯೋಗಮನ್ಯೇ ಪ್ರಚಕ್ಷತೇ ॥ ೩೪ ॥
ಕ್ಷಮಾಂ ಕೇಚಿತ್ ಪ್ರಶಂಸಂತಿ ತಥೈವ ಭೃಶಮಾರ್ಜವಂ ।
ಕೇಚಿನ್ಮೌನಂ ಪ್ರಶಂಸಂತಿ ಕೇಚಿದಾಹುಃ ಪರಂ ಶ್ರುತಂ ॥ ೩೫ ॥

---

ನಾನು ತಮಗೆ ವಿಜ್ಞಾಪಿಸಿಕೊಳ್ಳುವುದು ಕರ್ತವ್ಯವಾಗಿದೆ. ಕಾತ್ಯಾಯನನೆಂಬ ಮುನಿಯು ಬಹು ಧರ್ಮಗಳನ್ನು ಕೇಳಿ, ಪುನಃ ಧರ್ಮಸಾರವನ್ನರಿಯಬೇಕೆಂಬ ಉದ್ದೇಶದಿಂದ ಒಂದೇ ಒಂದು ಅಂಗುಷ್ಠದಮೇಲೆ ನೂರು ವರ್ಷಗಳವರೆಗೆ ನಿಂತುಕೊಂಡಿದ್ದನು. ಆ ಬಳಿಕ ದಿವ್ಯವಾಣಿಯು ಅವನನ್ನು ಕುರಿತು ಈ ರೀತಿ ಹೇಳಿತು.

೩೨. "ಓ ಕಾತ್ಯಾಯನಾ! ಕೇಳು. ಪುಣ್ಯಕರವಾದ ಸರಸ್ವತೀ ತೀರದಲ್ಲಿ ಸಾರಸ್ವತನೆಂಬ ಮುನಿಯಿರುವನು; ಅವನನ್ನು ಕೇಳು. ಆ ಧರ್ಮಜ್ಞನು ಧರ್ಮದಿಂದ ಸಾಧಿಸುವ ಸಾರವಾವುದೆಂಬುದನ್ನು ನಿನಗೆ ತಿಳಿಯಹೇಳುತ್ತಾನೆ."

೩೩. ಹೀಗೆಂದು ಕೇಳಿದ ಮುನಿವರನು ಆ ಮುನಿಶ್ರೇಷ್ಠನ ಬಳಿ ಹೋಗಿ ಭೂಮಿಯಲ್ಲಿ ತಲೆಯನ್ನಿಟ್ಟು ಆತನಿಗೆ ಪ್ರಣಾಮ ಮಾಡಿ ತನ್ನ ಮನಸ್ಸಿನಲ್ಲಿದ್ದ ಈ ವಿಷಯವನ್ನು ಕುರಿತು ಪ್ರಶ್ನೆಮಾಡಿದನು.

೩೪. "ಸತ್ಯವನ್ನು ಕೆಲವರು ಪ್ರಶಂಸೆ ಮಾಡುತ್ತಾರೆ. ಮತ್ತೆ ಕೆಲವರು ತಪಸ್ಸನ್ನೂ ಶೌಚವನ್ನೂ ಪ್ರಶಂಸಿಸುತ್ತಾರೆ. ಸಾಂಖ್ಯವನ್ನು ಕೆಲವರು ಹೊಗಳುತ್ತಾರೆ. ಬೇರೆಯವರು ಯೋಗವನ್ನು ಮೇಲೆನ್ನುತ್ತಾರೆ.

೩೫. ಕ್ಷಮೆಯನ್ನು ಕೆಲವರು ಶ್ರೇಷ್ಠವೆಂದು ಹೇಳುತ್ತಾರೆ. ಹಾಗೆಯೇ ಆರ್ಜವವು (ನೇರವಾದ ನಡತೆ) ಮಿಗಿಲೆಂದು ಮತ್ತೆ ಕೆಲವರು ಹೊಗಳುತ್ತಾರೆ. ಕೆಲವರು ಮೌನವನ್ನು ಪ್ರಶಂಸಿಸುತ್ತಾರೆ. ಶ್ರುತವೇ (ಎಂದರೆ ಶಾಸ್ತ್ರಜ್ಞಾನವೇ) ಶ್ರೇಷ್ಠವೆಂದು ಬೇರೆ ಕೆಲವರು ಹೇಳುತ್ತಾರೆ.



ಸಮ್ಯಜ್ಞಾನಂ ಪ್ರಶಂಸಂತಿ ಕೇಚಿದ್ವೈರಾಗ್ಯಮುತ್ತಮಂ ।
ಅಗ್ನಿಷ್ಟೋಮಾದಿ ಕರ್ಮಾಣಿ ತಥಾ ಕೇಚಿತ್ ಪರಂ ವಿದುಃ ॥ ೩೬ ॥
ಆತ್ಮಜ್ಞಾನಂ ಪರಂ ಕೇಚಿತ್ ಸಮಲೋಷ್ಟಾಶ್ಮಕಾಂಚನಂ ।
ಇತ್ಥಂ ವ್ಯವಸ್ಥಿತೇ ಲೋಕೇ ಕೃತ್ಯಾಕೃತ್ಯವಿಧೌ ಜನಾಃ ॥ ೩೭ ॥
ವ್ಯಾಮೋಹಮೇವ ಗಚ್ಛಂತಿ ಕಿಂ ಶ್ರೇಯ ಇತಿ ವಾದಿನಃ ।
ಯದೇತೇಷು ಪರಂ ಕೃತ್ಯಮನುಷ್ಠೇಯಂ ಮಹಾತ್ಮಭಿಃ ॥ ೩೮ ॥
ವಕ್ತುಮರ್ಹಸಿ ಧರ್ಮಜ್ಞ ಮಮ ಸರ್ವಾರ್ಥಸಾಧಕಂ ॥ ೩೯ ॥

ಸಾರಸ್ವತ ಉವಾಚ—

ಯನ್ಮಾಂ ಸರಸ್ವತೀ ಪ್ರಾಹ ಸಾರಂ ವಕ್ಷ್ಯಾಮಿ ತಚ್ಛೃಣು ।
ಛಾಯಾಕಾರಂ ಜಗತ್ಸರ್ವಮುತ್ಪತ್ತಿಕ್ಷಯ ಧರ್ಮಿ ಚ ।
ವಾರಾಂಗನಾ ನೇತ್ರ ಭಂಗಸ್ತದ್ವದ್ಭಂಗುರಮೇವ ತತ್ ॥ ೪೦ ॥

---

೩೬. ಸಮ್ಯಗ್ ಜ್ಞಾನವನ್ನು (ಉತ್ತಮವಾದ ಜ್ಞಾನವನ್ನು) ಕೆಲವರು ಪ್ರಶಂಸೆ ಮಾಡುತ್ತಾರೆ; ಉತ್ತಮ ವೈರಾಗ್ಯವನ್ನು ಕೆಲವರು ಮೆಚ್ಚುತ್ತಾರೆ. ಹಾಗೆಯೇ ಅಗ್ನಿಷ್ಟೋಮ ಮೊದಲಾದ ಕರ್ಮಗಳನ್ನು ಶ್ರೇಷ್ಠವೆಂದು ಮತ್ತೆ ಕೆಲವರು ಭಾವಿಸುತ್ತಾರೆ.

೩೭. ಕಟ್ಟಿಗೆಯ ತುಂಡು, ಕಲ್ಲು ಮತ್ತು ಚಿನ್ನ—ಇವನ್ನೆಲ್ಲ ಸಮಾನ ವೆಂದು ತಿಳಿದು ವರ್ತಿಸುವ ಆತ್ಮಜ್ಞಾನವೇ ಉತ್ತಮವೆಂದು ಕೆಲವರು ಅಭಿಪ್ರಾಯಪಡುವರು.

೩೮. ಲೋಕದಲ್ಲಿನ ಸ್ಥಿತಿಯು ಈ ರೀತಿ ಇರುತ್ತಿರಲಾಗಿ ಮಾಡಬೇಕಾದುದು ಮತ್ತು ಮಾಡಬಾರದುದು ಯಾವುದೆಂದು ಗೊತ್ತುಮಾಡುವುದರಲ್ಲಿ ಜನಕ್ಕೆ ವ್ಯಾಮೋಹವೇ ಉಂಟಾಗುತ್ತದೆ; ಯಾವುದು ಶ್ರೇಯಸ್ಸು ಎಂಬುದರಲ್ಲಿ ವಾದಿಸಿ ಭ್ರಾಂತಿಗೊಳ್ಳುತ್ತಾರೆ.

೩೯. ಇವುಗಳಲ್ಲಿ ಮಹಾತ್ಮರು ಅನುಷ್ಠಿಸುವ ಅತ್ಯಂತ ಶ್ರೇಷ್ಠವಾದ ಕೃತ್ಯವಾವುದೆಂಬುದನ್ನು ಧರ್ಮಜ್ಞನಾದ ನೀನು ನನಗೆ ತಿಳಿಸಬೇಕು; ನನಗೆ ಸರ್ವಾರ್ಥವನ್ನೂ ಸಾಧಿಸಿಕೊಡುವ ಆ ಕೃತ್ಯವನ್ನು ನನಗೆ ತಿಳಿಯಹೇಳಬೇಕು.''

೪೦. ಸಾರಸ್ವತನು ಹೇಳುತ್ತಾನೆ:—'' ನನಗೆ ಸರಸ್ವತಿಯು ಯಾವುದನ್ನು ಹೇಳಿದಳೋ ಆ ಜ್ಞಾನಸಾರವನ್ನು ನಿನಗೆ ಹೇಳುತ್ತೇನೆ; ಕೇಳು. ಜಗತ್ತೆಲ್ಲವೂ ನೆರಳಿನ ಸ್ವರೂಪವಾಗಿರುವುದು; ಉತ್ಪತ್ತಿ ಮತ್ತು ಕ್ಷಯಗಳು ಅದಕ್ಕೆ ಸಹಜವಾಗಿರುವ ಧರ್ಮ. ವಾರಾಂಗನೆಯ ಕಣ್ನೋಟದ ಮುರಿವು ಹೇಗೋ ಹಾಗೆ ಜಗತ್ತು ಕ್ಷಣಭಂಗುರವಾಗಿಯೇ ಇರತಕ್ಕುದು.

ಧನಾಯುರ್ಯೌವನಂ ಭೋಗಾನ್‌ಜಲಚಂದ್ರವದಸ್ಥಿರಾನ್ ।
ಬುಧ್ವಾ ಸಮ್ಯಕ್‌ಪರಾಮೃಶ್ಯ ಸ್ಥಾಣುದಾನಂ ಸಮಾಶ್ರಯೇತ್ ॥ ೪೧ ॥
ದಾನವಾನ್ ಪುರುಷಃ ಪಾಪಂ ನಾಲಂ ಕರ್ತುಮಿತಿ ಶ್ರುತಿಃ ।
ಸ್ಥಾಣುಭಕ್ತೋ ಜನ್ಮಮೃತ್ಯೂನಾಪ್ನೋತೀತಿ ಶ್ರುತಿಸ್ತಥಾ ॥ ೪೨ ॥
ಸಾವರ್ಣಿನಾ ಚ ಗಾಥೇ ದ್ವೇ ಕೀರ್ತಿತೇ ಶೃಣು ಯೇ ಪುರಾ ।
ವೃಷೋ ಹಿ ಭಗವಾನ್ ಧರ್ಮೋ ವೃಷಭೋ ಯಸ್ಯ ವಾಹನಂ ॥ ೪೩ ॥
ಪೂಜ್ಯತೇ ಸ ಮಹಾದೇವಃ ಸ ಧರ್ಮಃ ಪರ ಉಚ್ಯತೇ ।
ದುಃಖಾವರ್ತೇ ತಮೋದ್ವಾರೇ ಧರ್ಮಾಧರ್ಮಜಲೇ ತಥಾ ॥ ೪೪ ॥
ಕ್ರೋಧಪಂಕೇ ಮದಗ್ರಾಹೇ ಲೋಭ ಬುದ್ಬುದ ಸಂಕಟೇ ।
ಮಾನ ಗಂಭೀರ ಪಾತಾಲೇ ಸತ್ತ್ವಯಾನ ವಿಭೂಷಿತೇ ॥ ೪೫ ॥
ಮಜ್ಜಂತಂ ತಾರಯತ್ಯೇಕೋ ಹರಃ ಸಂಸಾರ ಸಾಗರಾತ್ ।
ದಾನಂ ವೃತ್ತಂ ವ್ರತಂ ವಾಚಃ ಕೀರ್ತಿಧರ್ಮೌ ತಥಾಯುಷಃ ॥ ೪೬ ॥

---

೪೧. ಧನ, ಆಯುಸ್ಸು, ಯೌವನ ಮತ್ತು ಭೋಗಗಳು ನೀರಿನಲ್ಲಿ ಕಾಣುವ ಚಂದ್ರನಂತೆ ಅಸ್ಥಿರವಾಗಿರುವುವೆಂಬುದನ್ನು ಬುದ್ಧಿಯಿಂದ ಚೆನ್ನಾಗಿ ವಿಮರ್ಶೆ ಮಾಡಿನೋಡಿ 'ಸ್ಥಾಣು' ದಾನವನ್ನು ಕೈಕೊಳ್ಳಬೇಕು.

೪೨. 'ದಾನ ಮಾಡುವ ಪುರುಷನು ಪಾಪ ಮಾಡಲಾರನು' ಎಂದು ಶ್ರುತಿಯು ಸಾರುತ್ತದೆ. 'ಸ್ಥಾಣುಭಕ್ತನಾದವನು ಜನನ ಮರಣಗಳನ್ನು ಪಡೆಯುವುದಿಲ್ಲ' ಎಂದೂ ಶ್ರುತಿವಚನವುಂಟು.

೪೩–೪೪. ಪೂರ್ವದಲ್ಲಿ ಸಾವರ್ಣಿಯಿಂದ ಹೇಳಲ್ಪಟ್ಟ ಎರಡು ಗಾದೆಗಳು ಉಂಟು; ಅವನ್ನು ಕೇಳು. 'ವೃಷ' ಎಂದರೆ ಭಗವಂತನಾದ ಧರ್ಮದೇವನು. ಯಾವನಿಗೆ ವೃಷಭವೇ ವಾಹನವೋ ಆ ಮಹಾದೇವನನ್ನು ಪೂಜೆ ಮಾಡಿದುದೇ ಆದರೆ ಅದೇ ಪರಮಶ್ರೇಷ್ಠವಾದ ಧರ್ಮವೆಂದು ಹೇಳಲ್ಪಡುತ್ತದೆ. ಸಂಸಾರ ವೆಂಬ ಸಾಗರವು ತಮಸ್ಸಿನಿಂದ ಘೋರವಾಗಿರುವುದು. ಆ ಸಮುದ್ರಕ್ಕೆ ದುಃಖವೇ ಸುಳಿ; ಧರ್ಮಾಧರ್ಮಗಳೇ ನೀರು.

೪೫. ಕ್ರೋಧವೇ ಕೆಸರು; ಮದವೆಂಬುದೇ ಮೊಸಳೆ; ಲೋಭವೆಂಬ ಗುಳ್ಳೆಗಳಿಂದ ಅದು ತುಂಬಿ ತುಳುಕುತ್ತಿದೆ; ಮಾನ (ಎಂದರೆ ತಾನೇ ಹೆಚ್ಚೆಂಬ ಅಹಂಕಾರ)ವೇ ಬಹು ಆಳವಾಗಿರುವ ಅದರ ಪಾತಾಳ ತಳ; ಸತ್ತ್ವಗುಣವೇ ಆ ಸಮುದ್ರವನ್ನು ದಾಟಬಹುದಾದ ಹಡಗು.

೪೬–೪೭. ಇಂಥ ಸಂಸಾರ ಸಮುದ್ರದಲ್ಲಿ ಮುಳುಗುತ್ತಿರುವವನನ್ನು ಹರನೊಬ್ಬನೇ ಅದರಿಂದ ದಾಟಿಸುವವನು. ದಾನ, ಒಳ್ಳೆಯ ನಡತೆ, ವ್ರತ, ಒಳ್ಳೆಯ ಮಾತು, ಕೀರ್ತಿ ಮತ್ತು ಧರ್ಮ, ತನ್ನ ಆಯುಸ್ಸಿರುವವರೆಗೂ

ಪರೋಪಕರಣಂ ಕಾಯಾದಸಾರಾತ್ಸಾರಮುದ್ಧರೇತ್ ।
ಧರ್ಮೇ ರಾಗಃ ಶ್ರುತೌ ಚಿಂತಾ ದಾನೇ ವ್ಯಸನಮುತ್ತಮಂ ॥ ೪೭ ॥
ಇಂದ್ರಿಯಾರ್ಥೇಷು ವೈರಾಗ್ಯಂ ಸಂಪ್ರಾಪ್ತಂ ಜನ್ಮನಃ ಫಲಂ ।
ದೇಶೇಽಸ್ಮಿನ್ ಭಾರತೇ ಜನ್ಮ ಪ್ರಾಪ್ಯ ಮಾನುಷ್ಯಮಧ್ರುವಂ ॥ ೪೮ ॥
ನ ಕುರ್ಯಾದಾತ್ಮನಃ ಶ್ರೇಯಸ್ತೇನಾತ್ಮಾ ವಂಚಿತಶ್ಚಿರಂ ।
ದೇವಾಸುರಾಣಾಂ ಸರ್ವೇಷಾಂ ಮಾನುಷ್ಯಮತಿದುರ್ಲಭಂ ॥ ೪೯ ॥
ತತ್ಸಂಪ್ರಾಪ್ಯ ತಥಾ ಕುರ್ಯಾನ್ನಗಚ್ಛೇನ್ನರಕಂ ಯಥಾ ।
ಸರ್ವಸ್ಯ ಮೂಲಂ ಮಾನುಷ್ಯಂ ತಥಾ ಸರ್ವಾರ್ಥಸಾಧಕಂ ॥ ೫೦ ॥
ಯದಿ ಲಾಭೇ ನ ಯತ್ನಸ್ತೇ ಮೂಲಂ ರಕ್ಷ ಪ್ರಯತ್ನತಃ ।
ಮಹತಾ ಪುಣ್ಯಮೂಲ್ಯೇನ ಕ್ರೀಯತೇ ಕಾಯನೌಸ್ತ್ವಯಾ ॥ ೫೧ ॥
ಗಂತುಂ ದುಃಖೋದಧೇಃ ಪಾರಂ ತರ ಯಾವನ್ನ ಭಿದ್ಯತೇ ।
ಅವಿಕಾರಿ ಶರೀರತ್ವಂ ದುಷ್ಪ್ರಾಪ್ಯಂ ಪ್ರಾಪ್ಯ ವೈ ತತಃ ।
ನಾಪಕ್ರಾಮತಿ ಸಂಸಾರಾದಾತ್ಮಹಾ ಸ ನರಾಧಮಃ ॥ ೫೨ ॥

---

ಪರೋಪಕಾರ ಮಾಡುವುದು—ಇವೇ ಸಾರವೆನ್ನಿಸಿಕೊಳ್ಳುತ್ತದೆ. ಅಸಾರವಾದ ಶರೀರದಿಂದ ಸಾರವನ್ನು ಎತ್ತಿ ತೆಗೆಯಬೇಕು. ಧರ್ಮದಲ್ಲಿ ಆಸೆ, ಶ್ರುತಿಯಲ್ಲಿ (ಜ್ಞಾನದಲ್ಲಿ) ಚಿಂತೆ, ದಾನದಲ್ಲಿ ವ್ಯಸನ (ಎಂದರೆ ಅತ್ಯಾಸಕ್ತಿ) ಇರುವುದು ಉತ್ತಮ.

೪೮–೪೯. ಇಂದ್ರಿಯಗಳು ಅಪೇಕ್ಷಿಸುವ ವಸ್ತುಗಳಲ್ಲಿ ವೈರಾಗ್ಯವುಂಟಾದ ಪಕ್ಷದಲ್ಲಿ ಜನ್ಮವೆತ್ತಿದುದಕ್ಕೆ ಫಲವು ಕೈಸೇರಿದಂತಾಯಿತು. ಈ ಭಾರತ ದೇಶದಲ್ಲಿ ಅಸ್ಥಿರವಾದ ಮನುಷ್ಯಜನ್ಮವನ್ನು ಪಡೆದು ಯಾವನು ಆತ್ಮಕ್ಕೆ ಶ್ರೇಯಸ್ಸನ್ನುಂಟುಮಾಡಿಕೊಳ್ಳುವುದಿಲ್ಲವೋ ಅವನು ಶಾಶ್ವತವಾಗಿ ತನಗೆ ತಾನೆ ವಂಚನೆ ಮಾಡಿಕೊಂಡಂತಾಗುತ್ತದೆ. ದೇವಾಸುರರೆಲ್ಲರಿಗೂ ಮನುಷ್ಯತ್ವವು ಅತಿ ದುರ್ಲಭವಾಗಿರುವುದು.

೫೦–೫೨. ಅದನ್ನು ಪಡೆದುಕೊಂಡಾಗ ಹೇಗೆ ಮಾಡಿದರೆ ನರಕಕ್ಕೆ ಹೋಗಬೇಕಾಗುವುದಿಲ್ಲವೋ ಹಾಗೆ ಮಾಡಬೇಕು. ಮನುಷ್ಯ ಜನ್ಮವು ಸರ್ವಕ್ಕೂ ಮೂಲವಾದುದು. ಹಾಗೆಯೇ ಸರ್ವ ಪ್ರಯೋಜನಗಳನ್ನೂ ಸಾಧಿಸಿಕೊಡುವಂಥದು. ಲಾಭಸಂಪಾದನೆಗೆ ನೀನು ಪ್ರಯತ್ನಮಾಡುವುದಿಲ್ಲವಾದರೆ ಮೂಲವನ್ನಾದರೂ ಪ್ರಯತ್ನಪೂರ್ವಕವಾಗಿ ರಕ್ಷಣೆ ಮಾಡಿಕೊ. ಪುಣ್ಯವೆಂಬ ಮಹತ್ತಾದ (ಬಹು ಹೆಚ್ಚಾದ) ಬೆಲೆಯನ್ನು ಕೊಟ್ಟು ದೇಹವೆಂಬ ಹಡಗನ್ನು ನೀನು ಕೊಂಡುಕೊಂಡಿದ್ದೀಯೆ. ಹೀಗೆ ಕೊಂಡಿರುವ ಆ ಹಡಗಿನಿಂದ ದುಃಖ ಸಮುದ್ರವನ್ನು ದಾಟಿ ದಡ ಸೇರುವುದಕ್ಕಾಗಿ, ನೌಕೆಯು ಒಡೆಯದಿರುವಾಗಲೇ

ತಪಸ್ತಪ್ಯಂತಿ ಯತಯೋ ಜುಹ್ವತೇ ಚಾತ್ರ ಯಜ್ವಿನಃ ।
ದಾನಾನಿ ಚಾತ್ರ ದೀಯಂತೇ ಪರಲೋಕಾರ್ಥಮಾದರಾತ್ ॥ ೫೩ ॥

ಕಾತ್ಯಾಯನ ಉವಾಚ :—

ದಾನಸ್ಯ ತಪಸೋ ವಾಪಿ ಭಗವನ್ ಕಿಂ ಚ ದುಷ್ಕರಂ ।
ಕಿಂ ವಾ ಮಹತ್ಫಲಂ ಪ್ರೇತ್ಯ ಸಾರಸ್ವತ ಬ್ರವೀಹಿ ತತ್ ॥ ೫೪ ॥

ಸಾರಸ್ವತ ಉವಾಚ :—

ನ ದಾನಾದ್ದುಷ್ಕರತರಂ ಪೃಥಿವ್ಯಾಮಸ್ತಿ ಕಿಂಚನ ।
ಮುನೇ ಪ್ರತ್ಯಕ್ಷಮೇವೈತದ್ದೃಶ್ಯತೇ ಲೋಕಸಾಕ್ಷಿಕಂ ॥ ೫೫ ॥
ಪರಿತ್ಯಜ್ಯ ಪ್ರಿಯಾನ್ ಪ್ರಾಣಾನ್ ಧನಾರ್ಥೇ ಹಿ ಮಹಾಭಯಂ ।
ಪ್ರವಿಶಂತಿ ಮಹಾ ಲೋಭಾತ್ ಸಮುದ್ರಮಟವೀಂ ಗಿರಿಂ ॥ ೫೬ ॥
ಸೇವಾಮನ್ಯೇ ಪ್ರಪದ್ಯಂತೇ ಶ್ವವೃತ್ತಿರಿತಿ ಯಾ ಸ್ಮೃತಾ ।
ಹಿಂಸಾಪ್ರಾಯಾಂ ಬಹುಕ್ಲೇಶಾಂ ಕೃಷಿಂ ಚೈವ ತಥಾ ಪರೇ ॥ ೫೭ ॥

---

ದಾಟಿಬಿಡು. ವಿಕಾರವಿಲ್ಲದಿರುವ ಶರೀರವನ್ನು ಪಡೆಯುವುದು ಬಹು ಕಷ್ಟ. ದುಷ್ಪ್ರಾಪ್ಯವಾದ ಅಂಥ ಶರೀರವನ್ನು ಪಡೆದು, ಸಂಸಾರವನ್ನು ದಾಟಿ ಯಾವನು ಆಚೆ ಹೋಗುವುದಿಲ್ಲವೋ ಆ ನರಾಧಮನೇ ಆತ್ಮಘಾತುಕನಾಗುತ್ತಾನೆ.

೫೩. ಪರಲೋಕವು ದೊರೆಯುಲೆಂಬ ಉದ್ದೇಶದಿಂದ ಆದರಪೂರ್ವಕವಾಗಿ ಯತಿಗಳು ತಪಸ್ಸು ಮಾಡುತ್ತಾರೆ; ಯಜ್ಞದೀಕ್ಷಿತರು ಹೋಮ ಮಾಡುತ್ತಾರೆ. ದಾನಗಳನ್ನು ಕೊಡುವುದೂ ಈ ಉದ್ದೇಶಕ್ಕಾಗಿಯೇ.''

೫೪. ಅದನ್ನು ಕೇಳಿ ಕಾತ್ಯಾಯನನು "ಎಲೈ ಭಗವಾನ್ ಸಾರಸ್ವತನೇ! ದಾನ ತಪಸ್ಸುಗಳೆರಡರಲ್ಲಿ ಯಾವುದು ಹೆಚ್ಚು ಕಷ್ಟವಾದುದು? ಯಾವುದು ಮಹತ್ತಾದ ಫಲವನ್ನು ಕೊಡುವಂಥದು? ಅದನ್ನು ನನಗೆ ತಿಳಿಸು'' ಎಂದನು.

೫೫–೫೭. ಸಾರಸ್ವತನು ಹೇಳುತ್ತಾನೆ:—"ದಾನಕ್ಕಿಂತಲೂ ಹೆಚ್ಚು ದುಷ್ಕರವಾದುದು ಪೃಥ್ವಿಯಲ್ಲಿ ಮತ್ತೆ ಯಾವುದೊಂದೂ ಇರುವುದಿಲ್ಲ. ಅಯ್ಯಾ ಮುನಿಯೇ! ಇದು ಪ್ರತ್ಯಕ್ಷವಾಗಿಯೇ ಕಾಣುತ್ತಿರುವುದಲ್ಲವೆ? ಇದಕ್ಕೆ ಲೋಕವೇ ಸಾಕ್ಷಿ. ಧನಕ್ಕೋಸ್ಕರವಾಗಿ ಜನರು ತಮಗೆ ಪ್ರಿಯವಾದ ಪ್ರಾಣವನ್ನೂ ತ್ಯಜಿಸುವುದಕ್ಕೆ ಸಿದ್ಧರಾಗಿ ಮಹಾ ಲೋಭದಿಂದ ಕೂಡಿದವರಾಗಿ ಮಹಾ ಭಯಂಕರವಾದ ಅಡವಿಗಳನ್ನೂ ಪರ್ವತಗಳನ್ನೂ ಸಮುದ್ರವನ್ನೂ ಪ್ರವೇಶಿಸುತ್ತಾರೆ. ಯಾವುದು ಶ್ವವೃತ್ತಿ (ನಾಯಿಯಂಥ ನಡತೆ) ಎಂದು ಹೇಳಲ್ಪಡುವುದೋ ಅಂಥ ಸೇವಾವೃತ್ತಿಯನ್ನು ಬೇರೆ ಕೆಲವರು ಅನುಸರಿಸುತ್ತಾರೆ. ಹಾಗೆಯೇ ಮತ್ತೆ ಕೆಲವರು ಹಿಂಸೆಯಿಂದ ತುಂಬಿರುವುದೂ, ಬಹು ಕ್ಲೇಶಕರವೂ ಆಗಿರುವ ಕೃಷಿಯನ್ನು ಕೈಗೊಳ್ಳುತ್ತಾರೆ.

ತಸ್ಯ ದುಃಖಾರ್ಜಿತಸ್ಯೇಹ ಪ್ರಾಣೇಭ್ಯೋಪಿ ಗರೀಯಸಃ ।
ಆಯಾಸ ಶತಲಬ್ಧಸ್ಯ ಪರಿತ್ಯಾಗಃ ಸುದುಷ್ಕರಃ ॥ ೫೮ ॥
ಯದ್ದದಾತಿ ಯದಶ್ನಾತಿ ತದೇವ ಧನಿನೋ ಧನಂ ।
ಅನ್ಯೇ ಮೃತಸ್ಯ ಕ್ರೀಡಂತಿ ದಾರೈರಪಿ ಧನೈರಪಿ ॥ ೫೯ ॥
ಅಹನ್ಯಹನಿ ಯಾಚಂತಮಹಂ ಮನ್ಯೇ ಗುರುಂ ಯಥಾ ।
ಮಾರ್ಜನಂ ದರ್ಪಣಸ್ಯೇವ ಯಃ ಕರೋತಿ ದಿನೇದಿನೇ ॥ ೬೦ ॥
ದೀಯಮಾನಂ ಹಿ ನಾಪೈತಿ ಭೂಯ ಏವಾಭಿವರ್ಧತೇ ।
ಕೂಪ ಉತ್ಸಿಚ್ಯಮಾನೋ ಹಿ ಭವೇಚ್ಛುದ್ಧೋ ಬಹೂದಕಃ ॥ ೬೧ ॥
ಏಕಜನ್ಮಸುಖಸ್ಯಾರ್ಥೇ ಸಹಸ್ರಾಣಿ ವಿಲಾಪಯೇತ್ ।
ಪ್ರಾಜ್ಞೋ ಜನ್ಮ ಸಹಸ್ರೇಷು ಸಂಚಿನೋತ್ಯೇಕಜನ್ಮನಿ ॥ ೬೨ ॥
ಮೂರ್ಖೋ ಹಿ ನ ದದಾತ್ಯರ್ಥಾನಿಹ ದಾರಿದ್ರ್ಯಶಂಕಯಾ ।
ಪ್ರಾಜ್ಞಸ್ತು ವಿಸೃಜತ್ಯರ್ಥಾನಮುತ್ರ ತಸ್ಯ ಶಂಕಯಾ ॥ ೬೩ ॥

---

೫೮. ಕಷ್ಟದಿಂದ ಸಂಪಾದಿಸಿರುವುದೂ, ನೂರಾರು ಬಗೆಯ ಆಯಾಸದ ಫಲವಾಗಿ ದೊರಕಿರುವುದೂ, ಪ್ರಾಣಕ್ಕಿಂತ ಹೆಚ್ಚೆಂದು ಭಾವಿಸಿರುವುದೂ ಆದ ಅಂಥ ಧನವನ್ನು ತ್ಯಾಗಮಾಡುವುದು ಸುಲಭವಲ್ಲ; ಬಹು ಕಷ್ಟ.

೫೯–೬೧. ಧನವಂತನಾದವನು ಯಾವುದನ್ನು ದಾನಮಾಡುತ್ತಾನೆಯೋ ಯಾವುದನ್ನು ಅನುಭವಿಸುತ್ತಾನೆಯೋ ಅದೇ ಅವನ ಧನ. ಆ ಧನವಂತನು ಮೃತನಾದ ಬಳಿಕ ಅವನ ಪತ್ನಿಯರಿಂದಲೂ, ಧನದಿಂದಲೂ ಇತರರು ಸುಖ ಸಂತೋಷಗಳನ್ನು ಪಡೆಯುತ್ತಾರೆ. ದಿನದಿನವೂ ಯಾಚನೆಮಾಡುತ್ತಿರುವ ತಿರುಕನನ್ನು ನಾನು ಗುರುವೆಂದು ಭಾವಿಸುತ್ತೇನೆ. ದಿನದಿನವೂ ಕನ್ನಡಿಯನ್ನು ತೊಳೆಯುವ ಹಾಗೆ ಅವನು ನಿತ್ಯವೂ ನಮ್ಮನ್ನು ತೊಳೆದು (ಕೃಪಣತನವನ್ನು ಕಳೆದು) ಶುದ್ಧಿಗೊಳಿಸುತ್ತಾನೆ. ದಾನಮಾಡುತ್ತ ಬಂದುದು ಕ್ಷೀಣವಾಗುವುದಿಲ್ಲ; ಮತ್ತೆ ಮತ್ತೆ ಬಹಳವಾಗಿ ಅಭಿವೃದ್ಧಿ ಹೊಂದುತ್ತದೆ. ತುಂಬು (ನೀರಿನ) ಬಾವಿಯ ನೀರನ್ನು ಎತ್ತಿ ಹೊರದೆಗೆದಂತೆಲ್ಲ ಅದು ಶುದ್ಧವಾಗುತ್ತ ಬರುವುದಷ್ಟೆ!

೬೨. ಒಂದು ಜನ್ಮದ ಸುಖಕ್ಕಾಗಿ ಸಹಸ್ರ ಜನ್ಮಗಳ ಗೋಳನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಪ್ರಾಜ್ಞನಾದವನು ಸಾವಿರಾರು ಜನ್ಮಗಳಲ್ಲಿ ಸಾಧಿಸಬಹುದಾದುದನ್ನು ಒಂದೇ ಜನ್ಮದಲ್ಲಿ ಸಾಧಿಸಿಬಿಡುತ್ತಾನೆ.

೬೩. ಇಲ್ಲಿ ಈ ಜನ್ಮದಲ್ಲಿ ತನಗೆ ದಾರಿದ್ರ್ಯವುಂಟಾದೀತೆಂಬ ಭಯದಿಂದ ಮೂರ್ಖನು ಧನವನ್ನು ದಾನಮಾಡುವುದಿಲ್ಲ. ಪ್ರಾಜ್ಞನಾದವನು ಅಲ್ಲಿ, ಬೇರೆ ಜನ್ಮದಲ್ಲಿ ಅದೇ ದಾರಿದ್ರ್ಯವು ಬಂದೀತೆಂಬ ಭಯದಿಂದ ತನ್ನ ಧನವನ್ನು ತ್ಯಾಗಮಾಡಿ ಕೊಟ್ಟುಬಿಡುತ್ತಾನೆ.

ಕಿಂ ಧನೇನ ಕರಿಷ್ಯಂತಿ ದೇಹಿನೋ ಭಂಗುರಾಶ್ರಯಾಃ ।
ಯದರ್ಥಂ ಧನಮಿಚ್ಛಂತಿ ತಚ್ಛರೀರಮಶಾಶ್ವತಂ ॥ ೬೪ ॥
ಅಕ್ಷರದ್ವಯಮಭ್ಯಸ್ತಂ ನಾಸ್ತಿ ನಾಸ್ತೀತಿ ಯತ್ಪುರಾ ।
ತದಿದಂ ದೇಹಿ ದೇಹೀತಿ ವಿಪರೀತಮುಪಸ್ಥಿತಂ ॥ ೬೫ ॥
ಬೋಧಯಂತಿ ಚ ಯಾವಂತೋ ದೇಹೀತಿ ಕೃಪಣಂ ಜನಾಃ ।
ಅವಸ್ಥೇಯಮದಾನಸ್ಯ ಮಾ ಭೂದೇವಂ ಭವಾನಪಿ ॥ ೬೬ ॥
ದಾತುರೇವೋಪಕಾರಾಯ ವದತ್ಯರ್ಥೀತಿ ದೇಹಿ ಮೇ ।
ಯಸ್ಮಾದ್ದಾತಾ ಪ್ರಯಾತ್ಯೂರ್ಧ್ವಮಧಸ್ತಿಷ್ಠೇತ್ ಪ್ರತಿಗ್ರಹೀ ॥ ೬೭ ॥
ದರಿದ್ರಾ ವ್ಯಾಧಿತಾ ಮೂರ್ಖಾಃ ಪರಪ್ರೇಷ್ಯಕರಾಃ ಸದಾ ।
ಅದತ್ತದಾನಾಜ್ಜಾಯಂತೇ ದುಃಖಸ್ಯೈವ ಹಿ ಭಾಜನಾಃ ॥ ೬೮ ॥
ಧನವಂತಮದಾತಾರಂ ದರಿದ್ರಂ ವಾಽತಪಸ್ವಿನಂ ।
ಉಭಾವಂಭಸಿ ಮೋಕ್ತವ್ಯೌ ಕಂಠೇ ಬಧ್ವಾ ಮಹಾಶಿಲಾಂ ॥ ೬೯ ॥

---

೬೪. ಅಸ್ಥಿರವಾದ ನೆಲೆಯುಳ್ಳ ದೇಹಿಗಳು ಧನದಿಂದ ಅದೇನುತಾನೆ ಮಾಡಿಯಾರು? ಧನವನ್ನು ಇಚ್ಛಿಸುವುದು ಶರೀರಸುಖಕ್ಕಾಗಿಯಷ್ಟೆ. ಆ ಶರೀರವೇ ಅಶಾಶ್ವತವಾದುದು.

೬೫. ಪೂರ್ವದಲ್ಲಿ 'ನಾಸ್ತಿ, ನಾಸ್ತಿ' (ಇಲ್ಲ, ಇಲ್ಲ) ಎಂಬ ಎರಡಕ್ಷರಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದು ಈಗ 'ದೇಹಿ, ದೇಹಿ' (ಕೊಡು, ಕೊಡು) ಎಂದು ತಲೆಕೆಳಗಾಗಿ ಬಂದು ನಿಂತುಬಿಟ್ಟಿದೆ.

೬೬. 'ದೇಹಿ, ದೇಹಿ' ಎಂದು ಜನರು ಬೇಡುತ್ತಿರುವುದು ಕೃಪಣನಾದವನಿಗೆ, "ದಾನ ಮಾಡದೆಹೋದುದರಿಂದ ನಮಗೆ ಬಂದಿರುವ ಅವಸ್ಥೆ ಇದು. ನೀನೂ ಹೀಗಾಗಬೇಡ" ಎಂದು ಬೋಧಿಸುವಂತಿದೆ.

೬೭. ಅರ್ಥಿಯು (ಬೇಡುವವನು) ದಾತನ (ಕೊಡುವವನ) ಉಪಕಾರಕ್ಕಾಗಿಯೇ ಅಲ್ಲವೆ, ನನಗೆ ಕೊಡು ಎಂದು ಹೇಳುತ್ತಾನೆ. ಇದರಿಂದ ದಾತನು ಮೇಲಮೇಲಕ್ಕೆ ಹೋಗುತ್ತಾನೆ; ದಾನವನ್ನು ತಿಗೆದುಕೊಳ್ಳುವವನು ಕೆಳಗೇ ನಿಲ್ಲುತ್ತಾನೆ.

೬೮–೬೯. ದಾನ ಕೊಡದೆ ಇರುವುದರಿಂದ ದರಿದ್ರರಾಗಿಯೂ, ವ್ಯಥೆಗೆ ಗುರಿಯಾದವರಾಗಿಯೂ, ಮೂರ್ಖರಾಗಿಯೂ, ಇನ್ನೊಬ್ಬರು ಹೋಗೆಂದ ಕಡೆ ಹೋಗುತ್ತ ಹೇಳಿದ ಕೆಲಸ ಮಾಡುತ್ತಿರುವವರಾಗಿಯೂ ಈ ರೀತಿ ದುಃಖಕ್ಕೇ ಪಾತ್ರರಾಗಿ ಹುಟ್ಟುತ್ತಾರೆ. ಧನವಂತನಾಗಿ ದಾನ ಮಾಡದೆ ಇರುವವನು, ದರಿದ್ರನಾಗಿ ತಪಸ್ಸು ಮಾಡದೆ ಇರುವವನು, ಈ ಇಬ್ಬರನ್ನೂ ಕೊರಳಿಗೆ ದೊಡ್ಡ ಕಲ್ಲು ಕಟ್ಟಿ ನೀರಿನಲ್ಲಿ ಮುಳುಗಿಸಿಬಿಡಬೇಕು.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ**
**ವಕ್ತಾ ಶತಸಹಸ್ರೇಷು ದಾತಾ ಜಾಯೇತ ವಾ ನ ವಾ ॥ ೭೦ ॥**
**ಗೋಭಿರ್ವಿಪ್ರೈಶ್ಚ ವೇದೈಶ್ಚ ಸತೀಭಿಃ ಸತ್ಯವಾದಿಭಿಃ ।**
**ಅಲುಬ್ಧೈರ್ದಾನಶೀಲೈಶ್ಚ ಸಪ್ತಭಿರ್ಧಾರ್ಯತೇ ಮಹೀ ॥ ೭೧ ॥**
**ಶಿಬಿರೌಶೀನರೋಽಙ್ಗಾನಿ ಸುತಂ ಚ ಪ್ರಿಯಮೌರಸಂ ।**
**ಬ್ರಾಹ್ಮಣಾರ್ಥಮುಪಾಕೃತ್ಯ ನಾಕಪೃಷ್ಠಮಿತೋ ಗತಃ ॥ ೭೨ ॥**
**ಪ್ರತರ್ದನಃ ಕಾಶಿಪತಿಃ ಪ್ರದಾಯ ನಯನೇ ಸ್ವಕೇ ।**
**ಬ್ರಾಹ್ಮಣಾಯಾತುಲಾಂ ಕೀರ್ತಿಮಿಹ ಚಾಮುತ್ರ ಚಾಶ್ನುತೇ ॥ ೭೩ ॥**
**ನಿಮೀ ರಾಷ್ಟ್ರಂ ಚ ವೈದೇಹೋ ಜಾಮದಗ್ನ್ಯೋ ವಸುಂಧರಾಂ ।**
**ಬ್ರಾಹ್ಮಣೇಭ್ಯೋ ದದೌ ಚಾಪಿ ಗಯಶ್ಚೋರ್ವೀಂ ಸಪತ್ತನಾಂ ॥ ೭೪ ॥**
**ಅವರ್ಷತಿ ಚ ಪರ್ಜನ್ಯೇ ಸರ್ವಭೂತನಿವಾಸಕೃತ್ ।**
**ವಸಿಷ್ಠೋ ಜೀವಯಾಮಾಸ ಪ್ರಜಾಪತಿರಿವ ಪ್ರಜಾಃ ॥ ೭೫ ॥**

---

೭೦. ನೂರಕ್ಕೊಬ್ಬ ಶೂರನು ಹುಟ್ಟುತ್ತಾನೆ. ಸಾವಿರದಲ್ಲೊಬ್ಬ ಪಂಡಿತನು ಹುಟ್ಟುತ್ತಾನೆ. ಲಕ್ಷಕ್ಕೊಬ್ಬನು ವಾಗ್ಮಿಯಾಗಿ ಹುಟ್ಟುತ್ತಾನೆ. ಆದರೆ ದಾತನಾದವನು ಹುಟ್ಟುತ್ತಾನೋ ಇಲ್ಲವೋ ಹೇಳಲಾಗುವುದಿಲ್ಲ.

೭೧. ಗೋವುಗಳು, ವಿಪ್ರರು (ಬ್ರಾಹ್ಮಣರು), ವೇದಗಳು, ಪತಿವ್ರತೆಯರು, ಸತ್ಯವಾದಿಗಳು, ಲೋಭವಿಲ್ಲದವರು, ದಾನಶೀಲರಾದವರು—ಈ ಏಳು ಮಂದಿಯಿಂದ ಭೂಮಿಯು ಸ್ಥಿರವಾಗಿ ನಿಂತಿರುವುದು.

೭೨. ಉಶೀನರ ಪುತ್ರನಾದ ಶಿಬಿಯು ತನ್ನ ಅಂಗಗಳನ್ನೂ ತನಗೆ ಪ್ರಿಯನಾದ ಔರಸಪುತ್ರನನ್ನೂ ಬ್ರಾಹ್ಮಣರಿಗೋಸ್ಕರ ತ್ಯಾಗಮಾಡಿ ಈ ಲೋಕವನ್ನು ಬಿಟ್ಟು ಸ್ವರ್ಗಕ್ಕೇರಿದನು.

೭೩. ಕಾಶಿರಾಜನಾದ ಪ್ರತರ್ದನನು ಬ್ರಾಹ್ಮಣನಿಗೆ ತನ್ನ ಕಣ್ಣುಗಳೆರಡನ್ನೂ ಕೊಟ್ಟು ಇಹಪರಗಳೆರಡರಲ್ಲಿಯೂ ಎಣೆಯಿಲ್ಲದ ಕೀರ್ತಿಯನ್ನು ಅನುಭವಿಸುತ್ತಿದ್ದಾನೆ.

೭೪. ವಿದೇಹರಾಜನಾದ ನಿಮಿಯು ರಾಷ್ಟ್ರವನ್ನು ಬ್ರಾಹ್ಮಣರಿಗೆ ದಾನ ಮಾಡಿದನು. ಜಮದಗ್ನಿಯ ಮಗನಾದ ಪರಶುರಾಮನು ಭೂಮಂಡಲವನ್ನೇ ಕೊಟ್ಟನು; ಗಯನು ಕೂಡ ಅನೇಕ ಪಟ್ಟಣಗಳಿಂದೊಡಗೂಡಿದ ಭೂಮಂಡಲವನ್ನು ಕೊಟ್ಟುಬಿಟ್ಟನು.

೭೫. ಸಮಸ್ತ ಪ್ರಾಣಿಗಳಿಗೂ ಜೀವನಾಧಾರವಾದ ಮಳೆಯು ಹುಯ್ಯದೆ ನಿಂತುಬಿಡಲು ಆಗ ವಸಿಷ್ಠನು ಪ್ರಜಾಪತಿಯಂತೆ ಜೀವವೆರೆದು ಪ್ರಜೆಗಳನ್ನೆಲ್ಲ ಬದುಕಿಸಿದನು.

ಬ್ರಹ್ಮದತ್ತಶ್ಚ ಪಾಂಚಾಲೋ ರಾಜಾ ಬುದ್ಧಿಮತಾಂ ವರಃ ।
ನಿಧಿಂ ಶಂಖಂ ದ್ವಿಜಾಗ್ರ್ಯೇಭ್ಯೋ ದತ್ವಾ ಸ್ವರ್ಗಮವಾಪ್ತವಾನ್ ॥ ೭೬ ॥
ಸಹಸ್ರಜಿಚ್ಚ ರಾಜರ್ಷಿಃ ಪ್ರಾಣಾನಿಷ್ಟಾನ್ ಮಹಾಯಶಾಃ ।
ಬ್ರಾಹ್ಮಣಾರ್ಥೇ ಪರಿತ್ಯಜ್ಯ ಗತೋ ಲೋಕಾನನುತ್ತಮಾನ್ ॥ ೭೭ ॥
ಏತೇ ಚಾನ್ಯೇ ಚ ಬಹವಃ ಸ್ಥಾಣೋರ್ದಾನೇನ ಭಕ್ತಿತಃ ।
ರುದ್ರಲೋಕಂ ಗತಾ ನಿತ್ಯಂ ಶಾಂತಾತ್ಮಾನೋ ಜಿತೇಂದ್ರಿಯಾಃ ॥ ೭೮ ॥
ಏಷಾಂ ಪ್ರತಿಷ್ಠಿತಾ ಕೀರ್ತಿರ್ಯಾವತ್‌ಸ್ಥಾಸ್ಯತಿ ಮೇದಿನೀ ।
ಇತಿ ಸಂಚಿಂತ್ಯ ಸಾರಾರ್ಥಿ ಸ್ಥಾಣುದಾನಪರೋ ಭವ ॥ ೭೯ ॥
ಸೋಽಪಿ ಮೋಹಂ ಪರಿತ್ಯಜ್ಯ ತಥಾ ಕಾತ್ಯಾಯನೋಽಭವತ್ ॥ ೮೦ ॥

ನಾರದ ಉವಾಚ:—

ಏವಂ ಸುಶ್ರವಸಾ ಪ್ರೋಕ್ತಾಂ ಕಥಾಮಾಕರ್ಣ್ಯ ಪದ್ಮಭೂಃ ।
ಹರ್ಷಾಶ್ರುಸಂಯುತೋಽತೀವ ಪ್ರಶಶಂಸ ಮುಹುರ್ಮುಹುಃ ॥ ೮೧ ॥

---

೭೬. ಬುದ್ಧಿವಂತರಲ್ಲೆಲ್ಲ ಶ್ರೇಷ್ಠನಾದ ಪಾಂಚಾಲರಾಜ ಬ್ರಹ್ಮದತ್ತನು ಶಂಖ ಸಂಖ್ಯೆಯಷ್ಟು ನಿಧಿಯನ್ನು ಬ್ರಾಹ್ಮಣಶ್ರೇಷ್ಠರಿಗೆ ದಾನಮಾಡಿ ಸ್ವರ್ಗವನ್ನು ಪಡೆದನು.

೭೭. ಮಹಾಯಶಸ್ವಿಯಾದ ಸಹಸ್ರಜಿತ್ತೆಂಬ ರಾಜರ್ಷಿಯು ಇಷ್ಟವಾದ ಪ್ರಾಣಗಳನ್ನು ಬ್ರಾಹ್ಮಣರಿಗೋಸ್ಕರ ಪರಿತ್ಯಾಗಮಾಡಿ ಅನುತ್ತಮವಾದ (ಅದಕ್ಕಿಂತ ಉತ್ತಮವಾದ ಲೋಕವಿನ್ನಿಲ್ಲವೆಂಬಷ್ಟು ಶ್ರೇಷ್ಠವಾದ) ಲೋಕಗಳಿಗೆ ಹೋದನು.

೭೮. ಸದಾ ಶಾಂತಾತ್ಮರೂ, ಜಿತೇಂದ್ರಿಯರೂ ಆದ ಇವರೂ, ಇವರಂತೆಯೇ ಬೇರೆ ಬಹುಮಂದಿಯೂ ಭಕ್ತಿಯಿಂದ 'ಸ್ಥಾಣುದಾನ' ಮಾಡಿ ಆ ದಾನದ ಫಲದಿಂದ ರುದ್ರಲೋಕವನ್ನು ಪಡೆದರು.

೭೯. ಭೂಮಿಯು ಎಲ್ಲಿಯವರೆಗೆ ನಿಂತಿರುವುದೋ ಅಲ್ಲಿಯವರೆಗೂ ಇವರ ಕೀರ್ತಿಯು ಸ್ಥಿರವಾಗಿ ನೆಲಸಿರುವುದು. ಸಾರಾರ್ಥಿಯಾದ ನೀನು ಇದನ್ನೆಲ್ಲ ಚೆನ್ನಾಗಿ ಆಲೋಚಿಸಿ ಸ್ಥಾಣುದಾನ ಮಾಡುವುದರಲ್ಲೇ ನಿರತನಾಗಿರು.''

೮೦. ಇದನ್ನು ಕೇಳಿ ತಿಳಿದ ಆ ಕಾತ್ಯಾಯನನು ಕೂಡ ಮೋಹವನ್ನು ತೊರೆದು ಅದೇ ರೀತಿ ದಾನಪರನಾದನು.

೮೧. ನಾರದನು ಮುಂದುವರಿಸಿ ಇಂತೆಂದನು:—ಈ ರೀತಿ ಸುಶ್ರವಸ್ಸು ಎಂಬಾತನು ಹೇಳಿದ ಸಂಗತಿಯನ್ನು ಕೇಳಿ ಪದ್ಮಸಂಭವನಾದ ಬ್ರಹ್ಮನು ಹರ್ಷದಿಂದ ಕಣ್ಣೀರು ತುಂಬಿ ಮತ್ತೆ ಮತ್ತೆ ಬಹುವಾಗಿ ಪ್ರಶಂಸಿಸಿದನು.

ಸಾಧು ತೇ ವ್ಯಾಹೃತಂ ವತ್ಸ ಏವಮೇತನ್ನ ಚಾನ್ಯಥಾ ।
ಸತ್ಯಂ ಸಾರಸ್ವತಃ ಪ್ರಾಹ ಸತ್ಯಾ ಚ್ಚೈವಂ ತಥಾ ಶ್ರುತಿಃ ॥ ೮೨ ॥
"ದಾನಂ ಯಜ್ಞಾನಾಂ ವರೂಥಂ ದಕ್ಷಿಣಾ ಲೋಕೇ ದಾತಾರಗ್ಂ ಸರ್ವ
ಭೂತಾನ್ಯುಪಜೀವಂತಿ ದಾನೇನಾರಾತೀಗ್ಂ ಪಾರುದಂತ ದಾನೇನ
ದ್ವಿಷಂತೋಮಿತ್ರಾ ಭವಂತಿ ದಾನೇ ಸರ್ವಂ ಪ್ರತಿಷ್ಠಿತಂ ತಸ್ಮಾದ್ದಾನಂ
ಪರಮಂವದಂತೀತಿ" ॥ ೮೩ ॥
ಸಂಸಾರಸಾಗರೇ ಘೋರೇ ಧರ್ಮಾಧರ್ಮೋರ್ಮಿಸಂಕುಲೇ ।
ದಾನಂ ತತ್ರ ನಿಷೇವೇತ ತಚ್ಚ ನೌರಿವ ನಿರ್ಮಿತಂ ॥ ೮೪ ॥
ಇತಿ ಸಂಚಿಂತ್ಯ ಚ ಮಯಾ ಪುಷ್ಕರೇ ಸ್ಥಾಪಿತಾ ದ್ವಿಜಾಃ ।
ಗಂಗಾ ಯಮುನಯೋರ್ಮಧ್ಯೇ ಮಧ್ಯದೇಶೇ ದ್ವಿಜಾಃ ಕೃತೇ ॥ ೮೫ ॥
ಸ್ಥಾಪಿತಾಃ ಶ್ರೀ ಹರಿಭ್ಯಾಂ ತು ಶ್ರೀಗೌರ್ಯಾ ವೇದವಿತ್ತಮಾಃ ।
ರುದ್ರೇಣ ನಾಗರಾಶ್ಚೈವ ಪಾರ್ವತ್ಯಾ ಶಕ್ತಿಪೂರ್ಭವಾಃ ॥ ೮೬ ॥

---

೮೨. "ಎಲೈ ವತ್ಸಾ! ನೀನಾಡಿದ ಮಾತು ಒಪ್ಪತಕ್ಕುದು. ಇದು ಹೀಗೆಯೇ ಸರಿ; ಬೇರೇನೂ ಅಲ್ಲ. ಸಾರಸ್ವತನು ಸತ್ಯವನ್ನೇ ನುಡಿದಿದ್ದಾನೆ. ಈ ಸತ್ಯವನ್ನೇ ಶ್ರುತಿಯು ವಿವರಿಸುತ್ತದೆ.

೮೩. 'ದಾನವು ಯಜ್ಞಗಳ ರಥ; ದಕ್ಷಿಣೆಯು. ಲೋಕದಲ್ಲಿ ದಾತನಾದವನನ್ನು ಸಮಸ್ತ ಪ್ರಾಣಿಗಳೂ ಆಶ್ರಯಿಸಿ ಜೀವಿಸುತ್ತವೆ. ದಾನದಿಂದ ಶತ್ರುಗಳನ್ನು ನಿವಾರಣೆ ಮಾಡುವರು. ದಾನದಿಂದ ದ್ವೇಷಿಗಳು ಮಿತ್ರರಾಗುತ್ತಾರೆ. ದಾನದಲ್ಲಿ ಸರ್ವವೂ ನೆಲಸಿದೆ. ಆದುದರಿಂದ ದಾನವೇ ಶ್ರೇಷ್ಠವಾದುದೆಂದು ಹೇಳುತ್ತಾರೆ' ಎಂದು.

೮೪. ಸಂಸಾರ ಸಾಗರವು ಬಹು ಘೋರವಾದುದು. ಧರ್ಮ ಮತ್ತು ಅಧರ್ಮಗಳೇ ಅಲ್ಲಿನ ತೆರೆಗಳು. ಈ ತೆರೆಗಳಿಂದ ಕಲಕಿರುವ ಆ ಸಮುದ್ರದಲ್ಲಿ ಹಡಗಿನಂತೆ ದಾನವು ನಿರ್ಮಿಸಲ್ಪಟ್ಟಿತು. ಅದನ್ನೇ ಆಶ್ರಯಿಸಬೇಕು.

೮೫. ಎಲೈ ಬ್ರಾಹ್ಮಣರೇ! ಕೃತಯುಗದಲ್ಲಿ ಪುಷ್ಕರದಲ್ಲಿಯೂ, ಗಂಗಾ ಯಮುನಾ ನದಿಗಳ ಮಧ್ಯದ ಮಧ್ಯದೇಶದಲ್ಲಿಯೂ ನಾನು ಬ್ರಾಹ್ಮಣರನ್ನು ಸ್ಥಾಪಿಸಿದೆನು.

೮೬. ಶ್ರೀಹರಿಗಳಿಂದಲೂ, ಶ್ರೀಗೌರಿಯಿಂದಲೂ ವೇದವನ್ನರಿತವರಲ್ಲಿ ಶ್ರೇಷ್ಠರಾದ ಬ್ರಾಹ್ಮಣರು ಸ್ಥಾಪಿಸಲ್ಪಟ್ಟರು. ರುದ್ರನಿಂದ ನಾಗರರೂ (ನಗರಗಳಲ್ಲಿರುವವರು), ಪಾರ್ವತಿಯಿಂದ ಶಕ್ತಿಪುರಸಂಭೂತರೂ ಸ್ಥಾಪಿಸಲ್ಪಟ್ಟರು.

ಶ್ರೀಮೂಲೇ ಚ ತಥಾ ಲಕ್ಷ್ಮ್ಯಾ ಹ್ಯೇವಮಾದಿ ಸುರೋತ್ತಮೈಃ ।
ನಾನಾಗ್ರಹಾರಾಃ ಸಂದತ್ತಾ ಲೋಕೋದ್ಧರಣ ಕಾಂಕ್ಷಯಾ ॥ ೮೭ ॥
ನಹಿ ದಾನಫಲೇ ಕಾಂಕ್ಷಾ ಕಾಚಿನ್ನೋಽಸ್ತಿ ಸುರೋತ್ತಮಾಃ ।
ಸಾಧು ಸಂರಕ್ಷಣಾರ್ಥಂ ಹಿ ದಾನಂ ನಃ ಪರಿಕೀರ್ತಿತಂ ॥ ೮೮ ॥
ಬ್ರಾಹ್ಮಣಾಶ್ಚ ಕೃತಸ್ಥಾನಾ ನಾನಾಧರ್ಮೋಪದೇಶನೈಃ ।
ಸಮುದ್ಧರಂತಿ ವರ್ಣಾಂ ಸ್ತ್ರೀಂಸ್ತತಃ ಪೂಜ್ಯತಮಾ ದ್ವಿಜಾಃ ॥ ೮೯ ॥
ದಾನಂ ಚತುರ್ವಿಧಂ ದಾನಮುತ್ಸರ್ಗಃ ಕಲ್ಪಿತಂ ತಥಾ ।
ಸಂಶ್ರುತಂ ಚೇತಿ ವಿವಿಧಂ ತತ್ಕ್ರಮಾತ್ ಪರಿಕೀರ್ತಿತಂ ॥ ೯೦ ॥
ವಾಪೀಕೂಪತಡಾಗಾನಾಂ ವೃಕ್ಷವಿದ್ಯಾಸುರೌಕಸಾಂ ।
ಮಠ ಪ್ರಪಾಗೃಹಕ್ಷೇತ್ರದಾನಮುತ್ಸರ್ಗ ಇತ್ಯಸೌ ॥ ೯೧ ॥
ಉಪಜೀವನ್ನಿಮಾನ್ಯಶ್ಚ ಪುಣ್ಯಂ ಕೋಽಪಿ ಚರೇನ್ನರಃ ।
ಷಷ್ಠಮಂಶಂ ಸ ಲಭತೇ ಯಾವದ್ಯೋ ವಿಸೃಜೇದ್ದ್ವಿಜಃ ॥ ೯೨ ॥

---

೮೭. ಶ್ರೀಮೂಲದಲ್ಲಿ ಲಕ್ಷ್ಮಿಯು ಬ್ರಾಹ್ಮಣರನ್ನು ಸ್ಥಾಪಿಸಿದಳು. ಇದೇ ರೀತಿ ಇವರೇ ಮೊದಲಾದ ದೇವಶ್ರೇಷ್ಠರು ಲೋಕವನ್ನು ಉದ್ಧಾರಮಾಡಬೇಕೆಂಬ ಅಪೇಕ್ಷೆಯಿಂದ ನಾನಾ ಅಗ್ರಹಾರಗಳನ್ನು ಕೊಟ್ಟರು.

೮೮. ಎಲೈ ದೇವೋತ್ತಮರೇ! ದಾನದಿಂದ ಬರುವ ಫಲದಲ್ಲಿ ನಮಗೆ ಸ್ವಲ್ಪವೂ ಆಸೆಯಿಲ್ಲ. ಸಾಧುಗಳನ್ನು ಸಂರಕ್ಷಿಸುವುದಕ್ಕಾಗಿ ಮಾತ್ರವೇ ದಾನವು ನಮ್ಮಿಂದ ಹೇಳಲ್ಪಟ್ಟಿತು.

೮೯. ತಕ್ಕ ಸ್ಥಾನವನ್ನು ಏರ್ಪಡಿಸಿಕೊಟ್ಟು ಸ್ಥಾಪಿಸಲ್ಪಟ್ಟಿರುವ ಬ್ರಾಹ್ಮಣರಾದರೋ, ನಾನಾ ಬಗೆಯಲ್ಲಿ ಧರ್ಮೋಪದೇಶಗಳನ್ನು ಮಾಡುತ್ತ ಮೂರು ವರ್ಣಗಳನ್ನೂ ಉದ್ಧಾರ ಮಾಡುತ್ತಾರೆ. ಆದ್ದರಿಂದ ದ್ವಿಜರು ಅತ್ಯಂತ ಪೂಜ್ಯರು.

೯೦. ದಾನವು ನಾಲ್ಕು ಬಗೆಯಾಗಿರುವುದು. ದಾನ, ಉತ್ಸರ್ಗ, ಕಲ್ಪಿತ ಮತ್ತು ಸಂಶ್ರುತ—ಎಂಬೀ ನಾಲ್ಕೇ ಆ ಬಗೆಗಳು. ಅವನ್ನು ಅನುಕ್ರಮವಾಗಿ ವಿವರಿಸಲಾಗಿದೆ.

೯೧. ವಾಪಿ, ಕೂಪ, ಕೆರೆ, ಮರ, ವಿದ್ಯಾಲಯ, ದೇವಸ್ಥಾನ, ಮಠ, ಅರವಟಿಗೆ, ಹೊಲಗದ್ದೆ—ಇವುಗಳನ್ನು ಕೊಡುವುದಕ್ಕೆ ಉತ್ಸರ್ಗವೆಂದು ಹೆಸರು.

೯೨. ಇವುಗಳನ್ನಾಶ್ರಯಿಸಿ ಯಾವನಾದರೊಬ್ಬ ಮನುಷ್ಯನು ಪುಣ್ಯಕಾರ್ಯವನ್ನು ನಡೆಸಿದ್ದೇ ಆದರೆ, ಆ ಪುಣ್ಯದಲ್ಲಿ ಆರನೆಯ ಒಂದು ಭಾಗವನ್ನು ಆ ಕ್ಷೇತ್ರಾದಿಗಳನ್ನು ಬಿಟ್ಟ ಮನುಷ್ಯನು ಪಡೆಯುತ್ತಾನೆ.

ತದೇಷಾಮೇವ ಸರ್ವೇಷಾಂ ವಿಪ್ರಸಂಸ್ಥಾಪನಂ ಪರಂ ।
ದೇವಸಂಸ್ಥಾಪನಂ ಚೈವ ಧರ್ಮಸ್ಯೈತನ್ಮೂಲ ಏವ ಯತ್ ॥ ೯೩ ॥
ದೇವತಾಯತನಂ ಯಾವದ್ಯಾವಚ್ಚ ಬ್ರಾಹ್ಮಣಗೃಹಂ ।
ತಾವದ್ದಾತುಃ ಪೂರ್ವಜಾನಾಂ ಪುಣ್ಯಾಂಶಶ್ಚೋಪತಿಷ್ಠತಿ ॥ ೯೪ ॥
ಏತತ್ ಸ್ವಲ್ಪಂ ಹಿ ವಾಣಿಜ್ಯಂ ಪುನರ್ಬಹುಫಲಪ್ರದಂ ।
ಜೀರ್ಣೋದ್ಧಾರೇ ಚ ದ್ವಿಗುಣಮೇತದೇವ ಪ್ರಕೀರ್ತಿತಂ ॥ ೯೫ ॥
ತಸ್ಮಾದಿದಂ ತ್ವಹಮಪಿ ಬ್ರವೀಮಿ ಸುರಸತ್ತಮಾಃ ।
ನಾಸ್ತಿ ದಾನಸಮಂ ಕಿಂಚಿತ್ ಸತ್ಯಂ ಸಾರಸ್ವತೋ ಜಗೌ ॥ ೯೬ ॥

ನಾರದ ಉವಾಚ :—

ಇತಿ ಸಾರಸ್ವತ ಪ್ರೋಕ್ತಾಂ ತಥಾ ಪದ್ಮಭುವೇರಿತಾಂ ।
ಸಾಧುಸಾಧ್ವಿತ್ಯಮೋದಂತ ಸುರಾಶ್ಚಾಹಂ ಸುವಿಸ್ಮಿತಾಃ ॥ ೯೭ ॥
ತತಃ ಸ ಭಾವಿಸರ್ಗಾಂತೇ ಸುರಮ್ಯೇ ಮೇರುಮೂರ್ಧನಿ ।
ಉಪವಿಶ್ಯ ಶಿಲಾಪೃಷ್ಠೇ ಅಹಮೇತದಚಿಂತಯಂ ॥ ೯೮ ॥

---

೯೩–೯೪. ಇವುಗಳೆಲ್ಲಕ್ಕಿಂತಲೂ ಬ್ರಾಹ್ಮಣ ಸಂಸ್ಥಾಪನೆಯು ಮೇಲಾದುದು; ದೇವಸಂಸ್ಥಾಪನೆಯು ಕೂಡ ಅದೇ ರೀತಿ ಉತ್ಕೃಷ್ಟವಾದುದು. ಧರ್ಮಕ್ಕೆಲ್ಲ ಅದೇ ಮೂಲ. ದೇವತಾಲಯವು ಎಲ್ಲಿಯವರೆಗಿರುವುದೋ ಬ್ರಾಹ್ಮಣನಿಗೆ ಕೊಟ್ಟ ಮನೆಯು ಎಲ್ಲಿಯವರೆಗೆ ನೆಲೆಯಾಗಿರುವುದೋ ಅಲ್ಲಿಯವರೆಗೂ ದಾನಕರ್ತನಿಗೂ, ಅವನ ಪೂರ್ವಿಕರಿಗೂ ಪುಣ್ಯಾಂಶವು ಸ್ಥಿರವಾಗಿರುವುದು.

೯೫. ಇದು ಸ್ವಲ್ಪವಾದ ವಾಣಿಜ್ಯ (ಎಂದರೆ ಸ್ವಲ್ಪ ಮೂಲಧನವುಳ್ಳ ವ್ಯಾಪಾರ). ಸ್ವಲ್ಪವಾದರೂ ಬಹಳ ಫಲವನ್ನು ಕೊಡತಕ್ಕುದು. ಜೀರ್ಣೋದ್ಧಾರದಲ್ಲಿ ಇದರ ಎರಡರಷ್ಟು ಫಲವುಂಟೆಂದು ಹೇಳಲ್ಪಟ್ಟಿದೆ.

೯೬. ಆದುದರಿಂದ ಎಲೈ ದೇವೋತ್ತಮರೇ! ನಾನು ಕೂಡ ಹೀಗೆ ಹೇಳುತ್ತೇನೆ: ದಾನಕ್ಕೆ ಸಮಾನವಾದುದು ಏನೊಂದೂ ಇಲ್ಲ. ಸಾರಸ್ವತನು ಸತ್ಯವನ್ನೇ ನುಡಿದಿದ್ದಾನೆ.''

೯೭. ನಾರದನು ಹೇಳುತ್ತಾನೆ :—'' ಅರ್ಜುನಾ! ಹೀಗೆಂದು ಸಾರಸ್ವತನು ಹೇಳಿದಂತಹ ಮತ್ತು ಬ್ರಹ್ಮನು ತಿಳಿಸಿದಂತಹ ಈ ಸಂಗತಿಗಳನ್ನು ದೇವತೆಗಳೆಲ್ಲರೂ 'ಸಾಧು, ಸಾಧು' ಎಂದು ಅನುಮೋದಿಸಿದರು. ನಾನು ವಿಸ್ಮಿತನಾದೆನು.

೯೮. ಆ ಬಳಿಕ ಸಭೆಯನ್ನು ಮುಗಿಸಿದ ಮೇಲೆ ನಾನು ಬಹು ಮನೋಹರವಾದ ಮೇರುಶಿಖರದಲ್ಲಿ ಒಂದು ಕಲ್ಲಿನ ಮೇಲೆ ಕುಳಿತುಕೊಂಡು ಈ ರೀತಿ ಯೋಚಿಸಿದೆನು.

ಸತ್ಯಮಾಹ ವಿರಂಚಿಸ್ತು ಸ ಕಿಮರ್ಥಂ ತು ಜೀವತಿ ।
ಯೋನ್ಯೈಕಮಪಿ ತದ್ವೃತ್ತಂ ನೈವ ಯೇನ ಕೃತಾರ್ಥತಾ ॥ ೯೯ ॥
ತದಹಂ ದಾನಪುಣ್ಯಂ ಹಿ ಕರಿಷ್ಯಾಮಿ ಕಥಂ ಸ್ಫುಟಂ ।
ಕೌಪೀನದಂಡಾತ್ಮಧನೋ ಧನಂ ಸ್ವಲ್ಪಂ ಹಿ ನಾಸ್ತಿಮೇ ॥ ೧೦೦ ॥
ಅನರ್ಹತೇ ಯದ್ದದಾತಿ ನ ದದಾತಿ ತಥಾರ್ಹತೇ ।
ಅರ್ಹಾನರ್ಹಪರಿಜ್ಞಾನಾದ್ದಾನಧರ್ಮೋ ಹಿ ದುಷ್ಕರಃ ॥ ೧೦೧ ॥
ದೇಶೇ ಕಾಲೇ ಚ ಪಾತ್ರೇ ಚ ಶುದ್ಧೇನ ಮನಸಾ ತಥಾ ।
ನ್ಯಾಯಾರ್ಜಿತಂ ಚ ಯೋ ದದ್ಯಾದ್ಯೌವನೇ ಸ ತದಶ್ನುತೇ ॥ ೧೦೨ ॥
ತಮೋವೃತಸ್ತು ಯೋ ದದ್ಯಾದ್ಭಯಾತ್ ಕ್ರೋಧಾತ್ ತಥೈವ ಚ ।
ಭುಙ್ಕ್ತೇ ದಾನಫಲಂ ತದ್ಧಿ ಗರ್ಭಸ್ಥೋ ನಾತ್ರಸಂಶಯಃ ॥ ೧೦೩ ॥
ಬಾಲತ್ವೇಽಪಿ ಚ ಸೋಽಶ್ನಾತಿ ಯದ್ದತ್ತಂ ದಂಭಕಾರಣಾತ್ ।
ದತ್ತಮನ್ಯಾಯತೋ ವಿತ್ತಂ ತಥಾ ನ್ಯೈ ಚಾರ್ಥಕಾರಣಂ ॥ ೧೦೪ ॥

---

೯೯–೧೦೦. "ಬ್ರಹ್ಮದೇವನು ಸತ್ಯವನ್ನೇ ನುಡಿದಿದ್ದಾನೆ. ಕೃತಾರ್ಥತೆಯನ್ನು ಉಂಟುಮಾಡುವ ಆ ನಡವಳಿಕೆಗಳಲ್ಲಿ ಒಂದನ್ನಾದರೂ ಯಾವನು ನಡೆಸುವುದಿಲ್ಲವೋ ಅವನು ಜೀವಿಸುವುದಾದರೂ ಏತಕ್ಕೆ? ನಾನು ದಾನ ಪುಣ್ಯವನ್ನು ಹೇಗೆ ಸಂಪಾದಿಸಲಿ? ಕೌಪೀನ ಮತ್ತು ದಂಡ (ಕೈಯ ಕೋಲು) ಇವೆರಡೇ ನನಗಿರುವ ಧನ. ನನ್ನಲ್ಲಿ ಸ್ವಲ್ಪವೂ ಹಣವಿಲ್ಲ.

೧೦೧. ಅರ್ಹನಲ್ಲದವನಿಗೆ ಏನು ಕೊಡುತ್ತಾನೆಯೋ, ಅರ್ಹನಾದವನಿಗೆ ಹಾಗೆ ಕೊಡುವುದಿಲ್ಲ. ಅರ್ಹರು ಯಾರು, ಅನರ್ಹರು ಯಾರು ಎಂಬುದನ್ನು ತಿಳಿಯುವುದು ಸುಲಭವಲ್ಲ. ಇದರಿಂದ ದಾನವೆಂಬ ಧರ್ಮವು ದುಷ್ಕರವಾಗಿದೆ.

೧೦೨. ಸರಿಯಾದ ಸ್ಥಳದಲ್ಲಿ ಸರಿಯಾದ ಕಾಲದಲ್ಲಿ ಯೋಗ್ಯಪಾತ್ರನಿಗೆ ಶುದ್ಧವಾದ ಮನಸ್ಸಿನಿಂದ ನ್ಯಾಯವಾಗಿ ಸಂಪಾದಿಸಿದುದನ್ನು ಯಾವನು ದಾನ ಮಾಡುತ್ತಾನೆಯೋ ಅವನು ತನ್ನ ಯೌವನದಲ್ಲಿ ಅದನ್ನು ಅನುಭವಿಸುತ್ತಾನೆ.

೧೦೩. ತಮಸ್ಸಿನಿಂದ ಆವರಿಸಲ್ಪಟ್ಟವನಾಗಿ ಭಯದಿಂದಲೂ, ಕ್ರೋಧದಿಂದಲೂ ಯಾವನು ದಾನ ಮಾಡುತ್ತಾನೆಯೋ ಅವನು ಆ ದಾನದ ಫಲವನ್ನು ಗರ್ಭದಲ್ಲಿದ್ದುಕೊಂಡೇ ಅನುಭವಿಸುತ್ತಾನೆ. ಇದರಲ್ಲಿ ಸಂಶಯವಿಲ್ಲವು.

೧೦೪. ದಂಭಕಾರಣದಿಂದ ಯಾವುದನ್ನು ಕೊಡುತ್ತಾನೋ ಅದರ ಫಲವನ್ನು ತಾನು ಬಾಲಕನಾಗಿರುವಾಗ ಅನುಭವಿಸುತ್ತಾನೆ. ಅನ್ಯಾಯದಿಂದ ಕೊಟ್ಟ ಧನವನ್ನೂ ಹಾಗೆಯೇ ಪ್ರಯೋಜನಾಪೇಕ್ಷೆಯಿಂದ ಕೊಟ್ಟುದನ್ನೂ ಮನುಷ್ಯನು ವೃದ್ಧಾಪ್ಯ ಬಂದಿರುವಾಗ ಅದನ್ನು ಅನುಭವಿಸುತ್ತಾನೆ. ಇದರಲ್ಲಿ ಸಂಶಯವಿಲ್ಲವು.

ವೃದ್ಧತ್ವೇ ಹಿ ಸಮುಶ್ನಾತಿ ನರೋ ವೈ ನಾತ್ರ ಸಂಶಯಃ ।
ತಸ್ಮಾದ್ದೇಶೇ ಚ ಕಾಲೇ ಚ ಸುಪಾತ್ರೇ ವಿಧಿನಾ ನರಃ ।
ಶುಭಾರ್ಜಿತಂ ಪ್ರಯುಞ್ಜೀತ ಶ್ರದ್ಧಯಾ ಶಾಠ್ಯವರ್ಜಿತಃ ॥ ೧೦೫ ॥
ತದೇತನ್ನಿರ್ಧನತ್ವಾಚ್ಚ ಕಥಂ ನಾಮ ಭವಿಷ್ಯತಿ ।
ಸತ್ಯಮಾಹುಃ ಪುರಾ ವಾಕ್ಯಂ ಪುರಾಣಮುನಯೋಽಮಲಾಃ ॥ ೧೦೬ ॥
ನಾ ಧನಸ್ಯಾಸ್ತ್ಯಯಂ ಲೋಕೋ ನ ಪರಶ್ಚ ಕಥಂಚನ ।
ಅಭಿಶಸ್ತಂ ಪ್ರಪಶ್ಯಂತಿ ದರಿದ್ರಂ ಪಾರ್ಶ್ವತಃ ಸ್ಥಿತಂ ॥ ೧೦೭ ॥
ದಾರಿದ್ರ್ಯಂ ಪಾತಕಂ ಲೋಕೇ ಕಸ್ತಚ್ಛಂಸಿತುಮರ್ಹತಿ ।
ಪತಿತಃ ಶೋಚ್ಯತೇ ಸರ್ವೈರ್ನಿರ್ಧನಶ್ಚಾಪಿ ಶೋಚ್ಯತೇ ॥ ೧೦೮ ॥
ಯಃ ಕೃಶಾಶ್ವಃ ಕೃಶಧನಃ ಕೃಶಭೃತ್ಯಃ ಕೃಶಾತಿಥಿಃ ।
ಸ ವೈ ಪ್ರೋಕ್ತಃ ಕೃಶೋ ನಾಮ ನ ಶರೀರಕೃಶಃ ಕೃಶಃ ॥ ೧೦೯ ॥
ಅರ್ಥವಾನ್ ದುಷ್ಕುಲೀನೋಽಪಿ ಲೋಕೇ ಪೂಜ್ಯತಮೋ ನರಃ ।
ಶಶಿನಸ್ತುಲ್ಯವಂಶೋಽಪಿ ನಿರ್ಧನಃ ಪರಿಭೂಯತೇ ॥ ೧೧೦ ॥

---

೧೦೫–೧೦೬. ಆದ್ದರಿಂದ ಮನುಷ್ಯನು ಶುಭಕರ್ಮದಿಂದ ಸಂಪಾದಿಸಿದ ದ್ರವ್ಯವನ್ನು ಶ್ರದ್ಧೆಯಿಂದ ಕೂಡಿದವನಾಗಿ ಶಠತನ (ಮೂರ್ಖತನ)ವನ್ನು ತೊರೆದು ಸರಿಯಾದ ದೇಶ (ಸ್ಥಳ)ದಲ್ಲಿ, ತಕ್ಕ ಕಾಲದಲ್ಲಿ, ಯೋಗ್ಯ ಪಾತ್ರನಲ್ಲಿ ವಿನಿಯೋಗಿಸಬೇಕು. ನಾನು ಧನವಿಲ್ಲದವನು. ಹೀಗಿರುವಲ್ಲಿ ದಾನ ಫಲವು ನನಗೆ ಹೇಗೆತಾನೆ ಉಂಟಾಗುತ್ತದೆ! ಪೂರ್ವದಲ್ಲಿ ನಿರ್ಮಲರಾದ ಪುರಾಣ ಮುನಿಗಳು ಈ ರೀತಿ ಸತ್ಯವಾಕ್ಯವನ್ನೇ ನುಡಿದಿದ್ದಾರೆ.

೧೦೭–೧೦೮. 'ಧನವಿಲ್ಲದವನಿಗೆ ಈ ಲೋಕವಿಲ್ಲ. ಪರಲೋಕವೂ ಕೂಡ ಖಂಡಿತವಾಗಿಯೂ ಇಲ್ಲ.' ದರಿದ್ರನಾದವನು ಪಕ್ಕದಲ್ಲಿ ನಿಂತಿದ್ದರೆ ಅವನನ್ನು ನಿಂದ್ಯನನ್ನಾಗಿ ಕಾಣುತ್ತಾರೆ. ಲೋಕದಲ್ಲಿ ದಾರಿದ್ರ್ಯವೇ ಒಂದು ಪಾತಕ. ಅದನ್ನು ಯಾರು ಹೊಗಳುತ್ತಾರೆ?. ಪತಿತನನ್ನು ಕಂಡು ಎಲ್ಲರೂ ಮರುಕಪಡುತ್ತಾರೆ. ಅದರಂತೆ ಧನಹೀನನೂ ಜನರ ಮರುಕಕ್ಕೀಡಾಗಿ ಶೋಚ್ಯನಾಗುತ್ತಾನೆ.

೧೦೯–೧೧೦. ಯಾರಿಗೆ ಕುದುರೆಗಳು ಕೃಶವಾಗಿವೆಯೋ, ಯಾರ ಧನವು ಕೃಶವಾಗಿದೆಯೋ, ಯಾರ ಭೃತ್ಯರು ಕೃಶ (ಕಡಮೆ) ರಾಗಿದ್ದಾರೆಯೋ, ಯಾರಿಗೆ ಅತಿಥಿಗಳು ಕೃಶರಾಗಿದ್ದಾರೆಯೋ (ಎಂದರೆ ಕಡಮೆಯಾಗಿದ್ದಾರೆಯೋ) ಅವನೇ 'ಕೃಶ' ಎನ್ನಿಸಿಕೊಳ್ಳತಕ್ಕವನು. ಶರೀರವು ಕೃಶವಾಗಿರುವವನು 'ಕೃಶ'ನಲ್ಲ. ಧನವಂತನಾದ ಮನುಷ್ಯನು ದುಷ್ಕುಲದಲ್ಲಿ ಹುಟ್ಟಿದವನಾದರೂ ಲೋಕದಲ್ಲಿ ಪೂಜ್ಯತಮನಾಗಿಬಿಡುತ್ತಾನೆ. ಚಂದ್ರನಿಗೆ ಸಮಾನವಾದ ನಿರ್ಮಲ ವಂಶದಲ್ಲಿ ಬಂದವನಾದರೂ ಧನಹೀನನಾದವನು ತಿರಸ್ಕಾರಕ್ಕೆ ಗುರಿಯಾಗುತ್ತಾನೆ.

ಜ್ಞಾನವೃದ್ಧಾಸ್ತಪೋವೃದ್ಧಾ ಯೇ ಚ ವೃದ್ಧಾ ಬಹುಶ್ರುತಾಃ ।
ತೇ ಸರ್ವೇ ಧನವೃದ್ಧಸ್ಯ ದ್ವಾರಿ ತಿಷ್ಠಂತಿ ಕಿಂಕರಾಃ ॥ ೧೧೧ ॥
ಯದ್ಯಪ್ಯಯಂ ತ್ರಿಭುವನೇ ಅರ್ಥೋಽಸ್ಮಾಕಂ ಪರಾಙ್ಮುಖಃ ।
ತಥಾಪ್ಯನ್ಯ ಪ್ರಾರ್ಥಿತೋ ಹಿ ತಸ್ಯೈವ ಫಲದೋ ಭವೇತ್ ॥ ೧೧೨ ॥
ಅಥವೈ ತತ್ ಪುರಾ ಸರ್ವಂ ಚಿಂತಯಿಷ್ಯಾಮಿ ಸುಸ್ಫುಟಂ ।
ವಿಲೋಕಯಾಮಿ ಪೂರ್ವಂ ತು ಕಿಂಚಿದ್ಯೋಗ್ಯಂ ಹಿ ಸ್ಥಾನಕಂ ॥ ೧೧೩ ॥
ಸ ಚಿಂತಯಿತ್ವೇತಿ ಬಹುಪ್ರಕಾರಂ
ದೇಶಾಂಶ್ಚ ಗ್ರಾಮಾನ್ ನಗರಾಣಿ ಚಾಶ್ರಮಾನ್ ।
ಬಹೂನಹಂ ಪರ್ಯಟನ್ನಾಪ್ತವಾನ್ ಹಿ
ಸ್ಥಾನಂ ಹಿತಂ ಸ್ಥಾಪಯೇ ಯತ್ರ ವಿಪ್ರಾನ್ ॥ ೧೧೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ನಾರದಾರ್ಜುನ ಸಂವಾದೇ ದಾನ ಪ್ರಶಂಸಾ ವರ್ಣನಂ" ನಾಮ ದ್ವಿತೀಯೋಽಧ್ಯಾಯಃ

---

೧೧೧–೧೧೨. ಯಾರು ಜ್ಞಾನವೃದ್ಧರೋ, ಯಾರು ತಪೋವೃದ್ಧರೋ, ಯಾರು ಅನೇಕ ವಿಷಯಗಳನ್ನು ಕೇಳಿ ತಿಳಿದು ನಿಜವಾಗಿ (ವಯಸ್ಸಿನಿಂದ) ವೃದ್ಧರೂ ಆಗಿರುವರೋ ಅವರೆಲ್ಲರೂ ಧನವೃದ್ಧನ (ಹೆಚ್ಚು ಧನವಂತನಾದವನ) ಮನೆಯ ಬಾಗಿಲಿನಲ್ಲಿ ಕಿಂಕರರಾಗಿ ನಿಂತಿರುತ್ತಾರೆ. ಮೂರು ಲೋಕದಲ್ಲಿಯೂ ಈ ಧನವು ನನಗೆ ವಿಮುಖವಾಗಿರುವುದಿಲ್ಲವಷ್ಟೆ. ಆದರೂ ಬೇರೆಯವರಿಂದ ಪ್ರಾರ್ಥಿಸಿ ತೆಗೆದುಕೊಂಡುದೇ ಆದರೆ ಅವನಿಗೇ (ಎಂದರೆ ಯಾರು ನನಗೆ ಹಣ ಕೊಡುತ್ತಾರೆಯೋ ಅವರಿಗೆ) ಫಲವನ್ನು ಕೊಡುವುದಾಗುತ್ತದೆ.

೧೧೩–೧೧೪. ಅಥವಾ ಇದನ್ನೆಲ್ಲ ಆಮೇಲೆ ತುಂಬ ಸ್ಪಷ್ಟವಾಗಿ ಆಲೋಚನೆ ಮಾಡೋಣವಂತೆ. ಈಗ ಯಾವುದಾದರೊಂದು ಯೋಗ್ಯಸ್ಥಾನವನ್ನು ಮೊದಲು ಹುಡುಕಿ ನೋಡುತ್ತೇನೆ. ನಾನು ಈ ರೀತಿ ಬಹುಪ್ರಕಾರವಾಗಿ ಆಲೋಚಿಸಿ ಅಲ್ಲಿಂದ ಹೊರಟು ಅನೇಕ ದೇಶಗಳನ್ನೂ, ಗ್ರಾಮಗಳನ್ನೂ, ನಗರಗಳನ್ನೂ, ಆಶ್ರಮಗಳನ್ನೂ ಸುತ್ತುತ್ತ, ಎಲ್ಲಿ ನಾನು ಬ್ರಾಹ್ಮಣರನ್ನು ಸ್ಥಾಪಿಸಬಹುದೋ ಅಂಥ ಯೋಗ್ಯವಾದ ಸ್ಥಾನವೊಂದನ್ನು ಕಂಡೆನು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ನಾರದಾರ್ಜುನ ಸಂವಾದ – ದಾನಭೇದ ಪ್ರಶಂಸಾವರ್ಣನ"ವೆಂಬ ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತೃತೀಯೋಽಧ್ಯಾಯಃ

## ನಾರದಾರ್ಜುನ ಸಂವಾದ — ಮಹೀಸಾಗರಸಂಗಮ ತೀರ್ಥ ಮಾಹಾತ್ಮ್ಯಂ

**ಸೂತ ಉವಾಚ :—**

ಏವಂ ಸ್ಥಾನಾನಿ ಪುಣ್ಯಾನಿ ಯಾನಿ ಯಾನೀಹ ವೈ ಭುವಿ ।
ನಿರೀಕ್ಷಂಸ್ತತ್ರ ತತ್ರಾಹಂ ನಾರದೋ ವೀರಸತ್ತಮ ॥ ೧ ॥
ವಿಚರನ್ ಮೇದಿನೀಂ ಸರ್ವಾಂ ಪ್ರಾಪ್ತೋಽಹಮಾಶ್ರಮಂ ಭೃಗೋಃ ।
ಯತ್ರ ರೇವಾನದೀ ಪುಣ್ಯಾ ಸಪ್ತಕಲ್ಪಸ್ಮರಾ ವರಾ ॥ ೨ ॥
ಮಹಾಪುಣ್ಯಾ ಪವಿತ್ರಾ ಚ ಸರ್ವತೀರ್ಥಮಯೀ ಶುಭಾ ।
ಪುನಾತಿ ಕೀರ್ತನೇನೈವ ದರ್ಶನೇನ ವಿಶೇಷತಃ ॥ ೩ ॥
ತತ್ರಾವಗಾಹನಾತ್ ಪಾರ್ಥ ಮುಚ್ಯತೇ ಜಂತುರಂಹಸಾ
ಯಥಾ ಸಾ ಪಿಂಗಲಾ ನಾಡೀ ದೇಹಮಧ್ಯೇ ವ್ಯವಸ್ಥಿತಾ ॥ ೪ ॥
ಇಯಂ ಬ್ರಹ್ಮಾಂಡಪಿಂಡಸ್ಯ ಸ್ಥಾನೇ ತಸ್ಮಿನ್ ಪ್ರಕೀರ್ತಿತಾ ।
ತತ್ರಾಸ್ತೇ ಶುಕ್ಲತೀರ್ಥಾಖ್ಯಂ ರೇವಾಯಾಂ ಪಾಪನಾಶನಂ ॥ ೫ ॥

---

### ಕನ್ನಡದ ಅನುವಾದ

#### ನಾರದಾರ್ಜುನ ಸಂವಾದ — ಮಹೀಸಾಗರ ಸಂಗಮತೀರ್ಥ ಮಹಾತ್ಮ್ಯ

೧–೨. ಸೂತಪುರಾಣಿಕನು ಹೇಳುತ್ತಾನೆ:—ಎಲೈ ವೀರೋತ್ತಮನೇ! ನಾರದನಾದ ನಾನು ಹೀಗೆ ಭೂಮಿಯ ಮೇಲೆ ಯಾವ ಯಾವ ಪುಣ್ಯಕರವಾದ ಸ್ಥಳಗಳುಂಟೋ ಅಲ್ಲೆಲ್ಲ ಹೋಗಿ ನೋಡುತ್ತ, ಸಮಸ್ತ ಪ್ರಪಂಚವನ್ನೂ ಸುತ್ತಿ ಭೃಗುವಿನ ಆಶ್ರಮಕ್ಕೆ ಬಂದು ಸೇರಿದೆನು. ಅಲ್ಲಿ ಪುಣ್ಯಕರವಾದ ಉತ್ಕೃಷ್ಟವಾದ ರೇವಾ ನದಿಯು ಹರಿಯುತ್ತದೆ. ಅದು ಏಳು ಕಲ್ಪದವರೆಗೂ ಸ್ಮರಿಸುತ್ತಿರುವಷ್ಟು ಫಲವನ್ನು ಕೊಡುವಂಥದು.

೩. ಆ ನದಿಯು ಮಹಾ ಪುಣ್ಯಕರವಾದುದು; ಪವಿತ್ರವಾದುದು. ಸರ್ವ ತೀರ್ಥಗಳನ್ನೂ ತನ್ನಲ್ಲೇ ಒಳಕೊಂಡಿರುವಂಥದು; ಶುಭಕರವಾದುದು; ತನ್ನ ಹೆಸರನ್ನು ನೆನೆದಮಾತ್ರದಿಂದಲೇ ಹಾಗೆ ನೆನೆದವನನ್ನು ಪವಿತ್ರಗೊಳಿಸುತ್ತದೆ; ಅದರ ದರ್ಶನದಿಂದ ವಿಶೇಷ ಪವಿತ್ರತೆಯುಂಟಾಗುತ್ತದೆ.

೪–೫. ಎಲೈ ಪಾರ್ಥನೇ! ಅಲ್ಲಿ ಮುಳುಗಿ ಸ್ನಾನಮಾಡುವುದರಿಂದ ಜಂತುವು ತಕ್ಷಣವೇ ಬಿಡುಗಡೆ ಹೊಂದುತ್ತದೆ. ದೇಹದ ಮಧ್ಯದಲ್ಲಿ ಪ್ರಸಿದ್ಧವಾದ ಪಿಂಗಲಾ ಎಂಬ ನಾಡಿಯು ಹೇಗೆ ಪ್ರತಿಷ್ಠಿಸಲ್ಪಟ್ಟಿದೆಯೋ ಹಾಗೆಯೇ ಬ್ರಹ್ಮಾಂಡವೆಂಬ ಪಿಂಡದ ಮಧ್ಯಭಾಗದಲ್ಲಿ (ಆ ಪಿಂಗಲಾನಾಡಿಯ ಸ್ಥಾನದಲ್ಲಿ)

ಯತ್ರ ವೈ ಸ್ನಾನಮಾತ್ರೇಣ ಬ್ರಹ್ಮಹತ್ಯಾ ಪ್ರಣಶ್ಯತಿ ।
ತಸ್ಯಾಪಿ ಸನ್ನಿಧೌ ಪಾರ್ಥ ರೇವಾಯಾ ಉತ್ತರೇ ತಟೇ ॥ ೬ ॥
ನಾನಾವೃಕ್ಷಸಮಾಕೀರ್ಣಂ ಲತಾಗುಲ್ಮೋಪಶೋಭಿತಂ ।
ನಾನಾ ಪುಷ್ಪಫಲೋಪೇತಂ ಕದಲೀಖಂಡಮಂಡಿತಂ ॥ ೭ ॥
ಅನೇಕ ಶ್ವಾಪದಾಕೀರ್ಣಂ ವಿಹಗೈರನುನಾದಿತಂ ।
ಸುಗಂಧಪುಷ್ಪಶೋಭಾಢ್ಯಂ ಮಯೂರರವನಾದಿತಂ ॥ ೮ ॥
ಭ್ರಮರೈಃ ಸರ್ವಮುತ್ಸೃಜ್ಯ ನಿಲೀನಂ ರಾವಸಂಯುತಂ ।
ಯಥಾ ಸಂಸಾರಮುತ್ಸೃಜ್ಯ ಭಕ್ತೇನ ಹರಪಾದಯೋಃ ॥ ೯ ॥
ಕೋಕಿಲಾ ಮಧುರೈಃ ಸ್ವಾನೈರ್ನಾದಯಂತಿ ತಥಾ ಮುನೀನ್ ।
ಯಥಾ ಕಥಾಮೃತಾಖ್ಯಾನೈರ್ಬ್ರಾಹ್ಮಣಾನ್ ಭವಭೀರುಕಾನ್ ॥ ೧೦ ॥
ಯತ್ರ ವೃಕ್ಷಾ ಹ್ಲಾದಯಂತಿ ಫಲೈಃ ಪುಷ್ಪೈಶ್ಚ ಪತ್ರಕೈಃ ।
ಛಾಯಾಭಿರಪಿ ಕಾಷ್ಟೈಶ್ಚ ಲೋಕಾನಿವ ಹರವ್ರತಾಃ ॥ ೧೧ ॥

---

ಈ ನದಿಯು ಪ್ರತಿಷ್ಠಿಸಲ್ಪಟ್ಟಿದೆ. ಅಲ್ಲಿ ರೇವಾ ನದಿಯಲ್ಲಿ ಶುಕ್ಲತೀರ್ಥವೆಂಬ ಪಾಪನಾಶಕರವಾದ ಒಂದು ತೀರ್ಥವುಂಟು.

೬–೮. ಆ ಶುಕ್ಲತೀರ್ಥದಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಬ್ರಹ್ಮಹತ್ಯಾಪಾತಕವು ನಾಶವಾಗಿಹೋಗುತ್ತದೆ. ಆ ಶುಕ್ಲತೀರ್ಥದ ಸನ್ನಿಧಿಯಲ್ಲಿ ರೇವಾ ನದಿಯ ಉತ್ತರ ದಡದಲ್ಲಿ ನಾನಾ ಬಗೆಯ ಮರಗಳಿಂದ ಕಿಕ್ಕಿರಿದು ತುಂಬಿದುದಾಗಿಯೂ, ಬಳ್ಳಿ ಮತ್ತು ಪೊದೆಗಳಿಂದ ಅಲಂಕೃತವಾಗಿಯೂ, ನಾನಾ ಬಗೆಯ ಫಲ ಪುಷ್ಪಗಳಿಂದ ಕೂಡಿದುದಾಗಿಯೂ, ಬಾಳೆಯ ತೋಟಗಳನ್ನೊಳಕೊಂಡುದಾಗಿಯೂ, ಅನೇಕ ಕಾಡುಮೃಗಗಳಿಂದ ತುಂಬಿದುದಾಗಿಯೂ ಹಕ್ಕಿಗಳ ಹಾಡಿನಿಂದ ನಾದಪೂರ್ಣವಾದುದಾಗಿಯೂ, ಸುಗಂಧವುಳ್ಳ ಹೂಗಳ ಕಾಂತಿಯಿಂದ ಕಂಗೊಳಿಸುವುದಾಗಿಯೂ, ನವಿಲುಗಳ ಧ್ವನಿಯಿಂದ ಶಬ್ದಪೂರ್ಣವಾಗಿಯೂ ಇರುವ ಆಶ್ರಮವಿರುವುದು.

೯–೧೧. ಭಕ್ತನಾದವನು ಸಂಸಾರವನ್ನು ತ್ಯಜಿಸಿ ಹರನ ಪಾದಗಳಲ್ಲಿ ಆಶ್ರಯಹೊಂದಿ ಅಡಗಿಕೊಂಡಿರುವಂತೆ ಅಲ್ಲಿ ದುಂಬಿಗಳು ಹೂಗಳನ್ನು ಎಲ್ಲವನ್ನೂ ಬಿಟ್ಟು ಝೇಂಕಾರ ಮಾಡುತ್ತ ಅಡಗಿಕೊಂಡಿರುವುವು. ಸಂಸಾರದಲ್ಲಿ ಭಯಗೊಂಡಿರುವ ಭೀರುಗಳಿಗೆ ಬ್ರಾಹ್ಮಣರು ಕಥಾಮೃತಗಳನ್ನು ಹೇಳಿ ಸಮಾಧಾನಗೊಳಿಸುವಂತೆ ಮುನಿಗಳನ್ನು ಕೋಗಿಲೆಗಳು ಮಧುರ ಧ್ವನಿಗಳಿಂದ ಸಂತೋಷಗೊಳಿಸುತ್ತವೆ. ಹರವ್ರತವನ್ನು ಧರಿಸಿದವರಂತೆ ಆ ಆಶ್ರಮದಲ್ಲಿನ ವೃಕ್ಷಗಳು ಫಲಗಳಿಂದ ಪುಷ್ಪಗಳಿಂದ ಎಲೆಗಳಿಂದ ತಮ್ಮ ಕೊಂಬೆ ಮತ್ತು ನೆರಳುಗಳಿಂದ ಕೂಡ ಲೋಕವನ್ನು ಆಹ್ಲಾದಗೊಳಿಸುತ್ತವೆ.

ಪುತ್ರಪುತ್ರೇತಿ ವಾಶಂತೇ ಯತ್ರ ಪುತ್ರಪ್ರಿಯಾಃ ಖಗಾಃ ।
ಯಥಾ ಶಿವಪ್ರಿಯಾಃ ಶೈವಾ ನಿತ್ಯಂ ಶಿವಶಿವೇತಿ ಚ ॥ ೧೨ ॥
ಏವಂ ವಿಧಂ ಮುನೇಸ್ತಸ್ಯ ಭೃಗೋರಾಶ್ರಮಮಂಡಲಂ ।
ವಿಪ್ರೈಸ್ತ್ರೈವಿಧ್ಯಸಂಯುಕ್ತೈಃ ಸರ್ವತಃ ಸಮಲಂಕೃತಂ ॥ ೧೩ ॥
ಋಗ್ಯಜುಸ್ಸಾಮನಿರ್ಘೋಷೈರಾಪೂರಿತದಿಗಂತರಂ ।
ರುದ್ರಭಕ್ತೇನ ಧೀರೇಣ ಯಥೈವ ಭುವನತ್ರಯಂ ॥ ೧೪ ॥
ತತ್ರಾಹಂ ಪಾರ್ಥ ಸಂಪ್ರಾಪ್ತೋ ಯತ್ರಾಸ್ತೇ ಮುನಿಸತ್ತಮಃ ।
ಭೃಗುಃ ಪರಮಧರ್ಮಾತ್ಮಾ ತಪಸಾ ದ್ಯೋತಿತ ಪ್ರಭಃ ॥ ೧೫ ॥
ಆಗಚ್ಛಂತಂ ತು ಮಾಂ ದೃಷ್ಟ್ವಾ ದೀನಂ ಚ ಮುದಿತಂ ತಥಾ ।
ಅಭ್ಯುತ್ಥಾನಂ ಕೃತಂ ಸರ್ವೈರ್ವಿಪ್ರೈರ್ಭೃಗು ಪುರೋಗಮೈಃ ॥ ೧೬ ॥
ಕೃತ್ವಾ ಸುಸ್ವಾಗತಂ ದತ್ವಾ ಅರ್ಘ್ಯಾದ್ಯಂ ಭೃಗುಣಾ ಸಹ ।
ಆಸನೇಷೂಪವಿಷ್ಟಾಸ್ತೇ ಮುನೀಂದ್ರಾ ಗ್ರಾಹಿತಾ ಮಯಾ ॥ ೧೭ ॥

---

೧೨. ಶಿವಪ್ರಿಯರಾದ ಶೈವರು ನಿತ್ಯವೂ 'ಶಿವ, ಶಿವ' ಎಂದು ಹೇಗೆ ಹೇಳುತ್ತಿರುವರೋ ಹಾಗೆ ಪುತ್ರಪ್ರಿಯಗಳಾದ ಹಕ್ಕಿಗಳು ಅಲ್ಲಿ 'ಪುತ್ರ, ಪುತ್ರ' ಎಂದು ಕೂಗುತ್ತಿರುತ್ತವೆ.

೧೩. ಈ ರೀತಿ ಪ್ರಕಾಶಿಸುವ ಆ ಭೃಗುಮುನಿಯ ಆಶ್ರಮ ಮಂಡಲವು ಮೂರು ಗುಣಗಳಿಂದಲೂ ಕೂಡಿದವರಾದ ಬ್ರಾಹ್ಮಣರಿಂದ ಎಲ್ಲ ಕಡೆಯಲ್ಲಿಯೂ ಅಲಂಕರಿಸಲ್ಪಟ್ಟಿರುವುದು.

೧೪. ರುದ್ರಭಕ್ತನಾದ ಧೀರನಿಂದ ಮೂರು ಲೋಕವೂ ಹೇಗೆ ಘೋಷ ಪೂರ್ಣವಾಗಿ ಮಾಡಲ್ಪಟ್ಟಿರುವುದೋ ಹಾಗೆ ಆ ಆಶ್ರಮವು ಋಕ್, ಯಜುಸ್, ಸಾಮಗಳ ಘೋಷದಿಂದ ತುಂಬಲ್ಪಟ್ಟ ದಿಗಂತವುಳ್ಳದಾಗಿರುವುದು.

೧೫. ಎಲೈ ಪಾರ್ಥನೇ! ಎಲ್ಲಿ ಮುನಿಶ್ರೇಷ್ಠನೂ, ಪರಮಧರ್ಮಾತ್ಮನೂ, ತಪಸ್ಸಿನಿಂದ ಉಜ್ವಲವಾಗಿ ಬೆಳಗುವ ಪ್ರಭೆಯುಳ್ಳವನೂ ಆದ ಭೃಗುವಿರುವನೋ ಅಲ್ಲಿಗೆ ನಾನು ಹೋಗಿ ಸೇರಿದೆನು.

೧೬. ದೀನನೂ ಹರ್ಷಗೊಂಡವನೂ ಆಗಿ ತಮ್ಮ ಬಳಿಗೆ ಬರುತ್ತಿರುವ ನನ್ನನ್ನು ಕಂಡು ಭೃಗುವನ್ನು ಮುಂದಿಟ್ಟುಕೊಂಡು ಆ ಎಲ್ಲ ಬ್ರಾಹ್ಮಣರೂ ಎದ್ದುಬಂದು ನನ್ನನ್ನು ಎದುರುಗೊಂಡರು.

೧೭. ನನಗೆ ಸ್ವಾಗತಮಾಡಿ, ಅರ್ಘ್ಯಾದಿಗಳನ್ನು ಕೊಟ್ಟು, ಬಳಿಕ ನನ್ನಿಂದ ಪ್ರಾರ್ಥಿಸಲ್ಪಟ್ಟವರಾಗಿ ಭೃಗುವಿನ ಸಂಗಡಲೇ ಅವರೂ ಪೀಠಗಳಲ್ಲಿ ಕುಳಿತು ಕೊಂಡರು.

ವಿಶ್ರಾಂತಂ ತು ತತೋ ಜ್ಞಾತ್ವಾ ಭೃಗುರ್ಮಾಮುಪ್ಯುವಾಚಹ ।
ಕ್ವ ಗಂತವ್ಯಂ ಮುನಿಶ್ರೇಷ್ಠ ಕಸ್ಮಾದಿಹ ಸಮಾಗತಃ ॥ ೧೮ ॥
ಆಗಮನ ಕಾರಣಂ ಸರ್ವಂ ಸಮಾಚಕ್ಷ್ವ ಪರಿಸ್ಫುಟಂ ।
ತತಸ್ತಂ ಚಿಂತಯಾವಿಷ್ಟೋ ಭೃಗುಂ ಪಾರ್ಥಾಹಮಬ್ರುವಂ ॥ ೧೯ ॥
ಶ್ರೂಯತಾಮಭಿದಾಸ್ಯಾಮಿ ಯದರ್ಥಮಹಮಾಗತಃ ।
ಮಯಾ ಪರ್ಯಟಿತಾ ಸರ್ವಾ ಸಮುದ್ರಾಂತಾ ಚ ಮೇದಿನೀ ॥ ೨೦ ॥
ದ್ವಿಜಾನಾಂ ಭೂಮಿದಾನಾರ್ಥಂ ಮಾರ್ಗಮಾಣಃ ಪದೇಪದೇ ।
ನಿರ್ದೋಷಾಂ ಚ ಪವಿತ್ರಾಂ ಚ ತೀರ್ಥೇಷ್ವಪಿ ಸಮನ್ವಿತಾಂ ।
ರಮ್ಯಾಂ ಮನೋರಮಾಂ ಭೂಮಿಂ ನ ಪಶ್ಯಾಮಿ ಕಥಂಚನ ॥ ೨೧ ॥

ಭೃಗುರುವಾಚ :—

ವಿಪ್ರಾಣಾಂ ಸ್ಥಾಪನಾರ್ಥಾಯ ಮಯಾಪಿ ಭ್ರಮತಾ ಪುರಾ ॥ ೨೨ ॥
ಪೃಥ್ವೀ ಸಾಗರಪರ್ಯಂತಾ ದೃಷ್ಟ್ವಾ ಸರ್ವಾ ತದಾನಘ ।
ಮಹೀನಾಮ ನದೀಪುಣ್ಯಾ ಸರ್ವತೀರ್ಥಮಯೀ ಶುಭಾ ॥ ೨೩ ॥

---

೧೮. ನಾನು ತಕ್ಕಷ್ಟು ವಿಶ್ರಾಂತಿ ಹೊಂದಿದೆನೆಂಬುದನ್ನು ತಿಳಿದು ಭೃಗು ಮುನಿಯು ನನ್ನನ್ನು ಈ ರೀತಿ ಪ್ರಶ್ನೆಮಾಡಿದನು: "ಎಲೈ ಮುನಿಶ್ರೇಷ್ಠನೇ! ನೀವು ಎಲ್ಲಿಗೆ ಹೋಗಬೇಕು? ಯಾವ ಕಡೆಯಿಂದ ಇಲ್ಲಿಗೆ ಬಂದಿರಿ?

೧೯. ತಮ್ಮ ಆಗಮನಕ್ಕೆ ಏನುಕಾರಣವೋ ಅದನ್ನೆಲ್ಲ ಸ್ಪಷ್ಟವಾಗಿ ಹೇಳಿರಿ." ಹೀಗೆ ಪ್ರಶ್ನೆಮಾಡಿದ ಆ ಭೃಗುವನ್ನು ಕುರಿತು—ಎಲೈ ಪಾರ್ಥನೇ! ಚಿಂತೆಯಿಂದ ಆವರಿಸಲ್ಪಟ್ಟ ನಾನು ಹೀಗೆ ಹೇಳಿದೆನು.

೨೦-೨೧. "ನಾನು ಯಾವುದಕ್ಕಾಗಿ ಬಂದೆನೋ ಅದನ್ನು ಹೇಳುತ್ತೇನೆ; ಕೇಳಿ. ಬ್ರಾಹ್ಮಣರಿಗೆ ಭೂದಾನ ಮಾಡುವುದಕ್ಕಾಗಿ ತಕ್ಕ ಸ್ಥಳವನ್ನು ಹೆಜ್ಜೆ ಹೆಜ್ಜೆಗೂ ಹುಡುಕುತ್ತ ಸಮುದ್ರದವರೆಗೂ ಇರುವ ಸಮಸ್ತ ಭೂಮಂಡಲ ವನ್ನೂ ನಾನು ಸುತ್ತಿ ಸುತ್ತಿ ನೋಡಿದೆನು. ದೋಷರಹಿತವಾಗಿಯೂ, ಪವಿತ್ರವಾಗಿಯೂ, ತೀರ್ಥಗಳಿಂದ ಕೂಡಿದುದಾಗಿಯೂ, ರಮ್ಯವಾಗಿಯೂ, ಮನೋಹರವಾಗಿಯೂ ಇರುವ ಭೂಮಿಯನ್ನು ಎಷ್ಟು ಪ್ರಯತ್ನಪಟ್ಟರೂ ಕಾಣಲಿಲ್ಲ."

೨೨-೨೩. ಭೃಗುವು ಹೇಳುತ್ತಾನೆ:—"ಎಲೈ ಪಾಪರಹಿತನೇ! ಪೂರ್ವ ದಲ್ಲಿ ನಾನು ಕೂಡ ಬ್ರಾಹ್ಮಣರನ್ನು ಸ್ಥಾಪಿಸಬೇಕೆಂಬ ಉದ್ದೇಶದಿಂದ ಸುತ್ತಾ ಡುತ್ತ, ಸಮುದ್ರದವರೆಗೂ ಇರುವ ಪೃಥ್ವಿಯನ್ನೆಲ್ಲ ನೋಡಿದೆನು. ಪುಣ್ಯಕರ ವಾಗಿಯೂ, ಸರ್ವತೀರ್ಥಗಳನ್ನು ಒಳಕೊಂಡುದಾಗಿಯೂ ಇರುವ ಶುಭವಾದ 'ಮಹೀ' ಎಂಬ ಹೆಸರಿನ ನದಿಯನ್ನು ಕಂಡೆನು.

ದಿವ್ಯಾ ಮನೋರಮಾ ಸೌಮ್ಯಾ ಮಹಾಪಾಪ ಪ್ರಣಾಶಿನೀ ।
ನದೀರೂಪೇಣ ತತ್ರೈವ ಪೃಥ್ವೀ ಸಾ ನಾತ್ರ ಸಂಶಯಃ ॥ ೨೪ ॥
ಪೃಥಿವ್ಯಾಂ ಯಾನಿ ತೀರ್ಥಾನಿ ದೃಷ್ಟಾದೃಷ್ಟಾನಿ ನಾರದ ।
ತಾನಿ ಸರ್ವಾಣಿ ತತ್ರೈವ ನಿವಸಂತಿ ಮಹೀಜಲೇ ॥ ೨೫ ॥
ಸಾ ಸಮುದ್ರೇಣ ಸಂಪ್ರಾಪ್ತಾ ಪುಣ್ಯತೋಯಾ ಮಹಾನದೀ ।
ಸಂಜಾತಸ್ತತ್ರ ದೇವರ್ಷೇ ಮಹೀಸಾಗರಸಂಗಮಃ ॥ ೨೬ ॥
ಸ್ತಂಭಾಖ್ಯಂ ತತ್ರ ತೀರ್ಥಂ ತು ತ್ರಿಷುಲೋಕೇಷು ವಿಶ್ರುತಂ ।
ತತ್ರ ಯೇ ಮನುಜಾಃ ಸ್ನಾನಂ ಪ್ರಕುರ್ವಂತಿ ವಿಪಶ್ಚಿತಃ ॥ ೨೭ ॥
ಸರ್ವಪಾಪವಿನಿರ್ಮುಕ್ತಾ ನೋಪಸರ್ಪಂತಿ ವೈ ಯಮಂ ।
ತತ್ರಾದ್ಭುತಂ ಹಿ ದೃಷ್ಟಂ ಮೇ ಪುರಾ ಸ್ನಾತುಂ ಗತೇನ ವೈ ॥ ೨೮ ॥
ತದಹಂ ಕೀರ್ತಯಿಷ್ಯಾಮಿ ಮುನೇ ಶೃಣು ಮಹಾದ್ಭುತಂ ।
ಯಾವತ್ ಸ್ನಾತುಂ ವ್ರಜಾಮ್ಯಸ್ಮಿನ್ ಮಹೀಸಾಗರ ಸಂಗಮೇ ॥ ೨೯ ॥

---

೨೪. ಆ ನದಿಯು ದಿವ್ಯವಾದುದು; ಮನಸ್ಸನ್ನು ರಂಜಿಸುವಂಥದು; ಸೌಮ್ಯವಾದುದು; ಮಹಾಪಾಪಗಳನ್ನು ನಾಶಗೊಳಿಸುವಂಥದು; ಪೃಥ್ವೀದೇವಿಯೇ ನದೀರೂಪವಾಗಿ ಅಲ್ಲಿ ಬಂದು ನೆಲಸಿರುವಳು. ಇದರಲ್ಲಿ ಸಂಶಯವಿಲ್ಲ.

೨೫. ಎಲೈ ನಾರದನೇ! ಪೃಥ್ವಿಯಲ್ಲಿ ಕಾಣುವಂತೆಯೂ, ಕಾಣದಂತೆಯೂ ಯಾವ ಯಾವ ತೀರ್ಥಗಳಿರುವುವೋ ಅವೆಲ್ಲವೂ ಆ ಮಹಾನದಿಯ ನೀರಿನಲ್ಲೇ ನೆಲೆಗೊಂಡಿರುವುವು.

೨೬. ಎಲೈ ದೇವರ್ಷಿಯೇ! ಪುಣ್ಯಕರವಾದ ನೀರುಳ್ಳ ಆ ಮಹಾನದಿಯು ಯಾವೆಡೆಯಲ್ಲಿ ಸಮುದ್ರದೊಡನೆ ಸಂಗಮವಾಗುವುದೋ ಆ ಎಡೆಯಲ್ಲಿ ಮಹೀ ಸಾಗರ ಸಂಗಮವು ಉಂಟಾಯಿತು.

೨೭–೨೮. ಅಲ್ಲಿ ಮೂರು ಲೋಕದಲ್ಲಿಯೂ ಪ್ರಖ್ಯಾತವಾದ ಸ್ತಂಭವೆಂಬ ಒಂದು ತೀರ್ಥವಿದೆ. ಅಲ್ಲಿ ಬುದ್ಧಿವಂತರಾದ ಯಾವ ಮನುಷ್ಯರು ಸ್ನಾನ ಮಾಡುವರೋ ಅವರು ಸರ್ವ ಪಾಪಗಳಿಂದಲೂ ಬಿಡುಗಡೆ ಹೊಂದಿದವರಾಗಿ ಯಮನ ಸಮೀಪಕ್ಕೆ ಹೋಗುವುದೇ ಇಲ್ಲ. ನಾನು ಪೂರ್ವದಲ್ಲಿ ಸ್ನಾನಮಾಡುವುದಕ್ಕೆ ಅಲ್ಲಿ ಹೋಗಿದ್ದಾಗ ಒಂದು ಅದ್ಭುತವನ್ನು ಕಂಡೆನು.

೨೯–೩೦. ಅದನ್ನು ನಾನೀಗ ಹೇಳುತ್ತೇನೆ. ಎಲೈ ಮುನಿಯೇ! ಆ ಮಹಾ ಅದ್ಭುತವನ್ನು ಲಾಲಿಸು. ನಾನು ಸ್ನಾನಮಾಡುವುದಕ್ಕಾಗಿ ಮಹೀಸಾಗರ ಸಂಗಮವನ್ನು ಹೋಗಿ ಸೇರುವಷ್ಟರಲ್ಲಿಯೇ ಅದರ ತೀರದಲ್ಲಿ ಎತ್ತರವಾದವನೂ, ವೃದ್ಧನೂ, ಮೂಳೆಮಾತ್ರ ಉಳಿದುಕೊಂಡಿರುವವನೂ, ತಪೋಲಕ್ಷ್ಮಿಯಿಂದ

ತೀರೇ ಸ್ಥಿತಂ ಪ್ರಪಶ್ಯಾಮಿ ಮುನೀಂದ್ರಂ ಪಾವಕೋಪಮಂ ।
ಪ್ರಾಂಶುಂ ವೃದ್ಧಂ ಚಾಸ್ಥಿಶೇಷಂ ತಪೋಲಕ್ಷ್ಮ್ಯಾ ವಿಭೂಷಿತಂ ॥ ೩೦ ॥
ಭುಜಾವೂರ್ಧ್ವೌ ತತಃ ಕೃತ್ವಾ ಪ್ರರುದಂತಂ ಮುಹುರ್ಮುಹುಃ ।
ತಂ ತಥಾ ದುಃಖಿತಂ ದೃಷ್ಟ್ವಾ ದುಃಖಿತೋಽಹಮಥಾಭವಂ ॥ ೩೧ ॥
ಸತಾಂ ಲಕ್ಷಣಮೇತದ್ಧಿ ಯದ್ದೃಷ್ಟ್ವಾ ದುಃಖಿತಂ ಜನಂ ।
ಶತಸಂಖ್ಯಂ ತಸ್ಯ ಭವೇತ್ತಥಾಹಂ ವಿಲಲಾಪಹ ॥ ೩೨ ॥
ಅಹಿಂಸಾ ಸತ್ಯಮಸ್ತೇಯಂ ಮಾನುಷ್ಯೇ ಸತಿ ದುರ್ಲಭಂ ।
ತತಸ್ತಮುಪಸಂಗಮ್ಯ ಪರ್ಯಪೃಚ್ಛಮಹಂ ತದಾ ॥ ೩೩ ॥
ಕಿಮರ್ಥಂ ರೋದಿಷಿ ಮುನೇ ಶೋಕೇ ಕಿಂ ಕಾರಣಂ ತವ ।
ಸುಗುಹ್ಯಮಪಿಚೇದ್ಬ್ರೂಹಿ ಜಿಜ್ಞಾಸಾ ಮಹತೀ ಹಿ ಮೇ ॥ ೩೪ ॥
ಮುನಿಸ್ತತೋಮಾಮವದದ್ಭೃಗೋ ನಿರ್ಭಾಗ್ಯವಾನಹಂ ।
ತೇನ ರೋದಿಮಿ ಮಾಪೃಚ್ಛ ದುರ್ಭಾಗ್ಯಂ ಚಾಲಪೇದ್ಧಿ ಕಃ ॥ ೩೫ ॥

---

ಭೂಷಿತನಾದವನೂ, ಯಜ್ಞೇಶ್ವರನಿಗೆ ಸಮಾನನೂ ಆದ ಒಬ್ಬ ಮುನೀಂದ್ರನು ನಿಂತಿದ್ದುದನ್ನು ಕಂಡೆನು.

೩೧. ಆತನು ಎರಡು ತೋಳುಗಳನ್ನೂ ಮೇಲೆತ್ತಿಹಿಡಿದು ಮತ್ತೆ ಮತ್ತೆ ಅಳುತ್ತಿದ್ದನು. ಆ ರೀತಿ ದುಃಖಿತನಾದ ಆತನನ್ನು ಕಂಡು ನಾನೂ ದುಃಖಿತನಾದೆನು.

೩೨. ಸತ್ಪುರುಷರ ಲಕ್ಷಣವೇ ಹೀಗೆ. ದುಃಖಿತನಾದವನನ್ನು ಕಂಡಾಗ ಅವರ ದುಃಖ ಆ ದುಃಖಿಯ ದುಃಖಕ್ಕೆ ನೂರರಷ್ಟಾಗುತ್ತದೆ. ಆದ್ದರಿಂದ ನಾನು ಕೂಡ ಅವನ ಸಂಗಡ ಅತ್ತೆನು.

೩೩. ಮನುಷ್ಯಜನ್ಮವು ಬಂದಿರಲಾಗಿ ಅಹಿಂಸೆ, ಸತ್ಯ ಮತ್ತು ಅಸ್ತೇಯ (ಕದಿಯದಿರುವುದು)—ಇವು ದುರ್ಲಭವಾದವುಗಳು. ಆ ಬಳಿಕ ಆತನ ಬಳಿಗೆ ಹೋಗಿ ನಾನು ಈ ರೀತಿ ಆತನನ್ನು ಪ್ರಶ್ನೆಮಾಡಿದೆನು.

೩೪. 'ಅಯ್ಯಾ ಮುನಿಯೇ! ಏಕೆ ಅಳುತ್ತಿರುವೆ? ನಿನ್ನ ಶೋಕಕ್ಕೆ ಕಾರಣವೇನು? ಬಹು ಗುಟ್ಟಾಗಿಯೇ ಇಟ್ಟಿರಬೇಕಾದುದಾದರೂ ಆ ಸಂಗತಿಯನ್ನು ನನಗೆ ತಿಳಿಸು. ಅದನ್ನು ತಿಳಿದುಕೊಳ್ಳಬೇಕೆಂಬ ಆಸೆಯು ನನಗೆ ಮಹತ್ತರವಾಗಿದೆ.'

೩೫. ಬಳಿಕ ಆ ಮುನಿಯು ನನ್ನನ್ನು ಕುರಿತು, 'ಅಯ್ಯಾ! ಭೃಗೂ, ನಾನು ನಿರ್ಭಾಗ್ಯನು. ಆದ್ದರಿಂದಲೇ ನಾನು ಅಳುತ್ತೇನೆ. ನನ್ನನ್ನು ಪ್ರಶ್ನೆಮಾಡಬೇಡ. ಭಾಗ್ಯಹೀನನನ್ನು ಯಾರು ತಾನೆ ಮಾತಾಡಿಸುತ್ತಾರೆ!' ಎಂದು ಹೇಳಿದನು.

ತಮಹಂ ವಿಸ್ಮಯಾವಿಷ್ಟಃ ಪುನರೇವೇದಮಬ್ರುವಂ ।
ದುರ್ಲಭಂ ಭಾರತೇ ಜನ್ಮ ತತ್ರಾಪಿ ಚ ಮನುಷ್ಯತಾ ॥ ೩೬ ॥
ಮನುಷ್ಯತ್ವೇ ಬ್ರಾಹ್ಮಣತ್ವಂ ಮುನಿತ್ವಂ ತತ್ರ ದುರ್ಲಭಂ ।
ತತ್ರಾಪಿ ಚ ತಪಃಸಿದ್ಧಿಃ ಪ್ರಾಪ್ಯೈತತ್ಪಂಚಕಂ ಪರಂ ॥ ೩೭ ॥
ಕಿಮರ್ಥಂ ರೋದಿಷಿ ಮುನೇ ವಿಸ್ಮಯೋತ್ರ ಮಹಾನ್ ಮಮ ।
ಏವಂ ಸಂಪೃಚ್ಛತೇ ಮಹ್ಯಮೇತಸ್ಮಿನ್ನೇವ ಚಾಂತರೇ ॥ ೩೮ ॥
ಸುಭದ್ರೋನಾಮ ನಾಮ್ನಾ ಚ ಮುನಿಸ್ತತ್ರಾಭ್ಯುಪಾಯಯೌ ।
ಸ ಹಿ ಮೇರುಂ ಪರಿತ್ಯಜ್ಯ ಜ್ಞಾತ್ವಾ ತೀರ್ಥಸ್ಯ ಸಾರತಾಂ ॥ ೩೯ ॥
ಕೃತಾಶ್ರಮಃ ಪೂಜಯತಿ ಸದಾ ಸ್ತಂಭೇಶ್ವರಂ ಮುನಿಃ ।
ಸೋಽಪ್ಯೇವಂ ಮಾಮಿವಾಪೃಚ್ಛನ್ಮುನಿಂ ರೋದನಕಾರಣಂ ॥ ೪೦ ॥
ಅಥಾಹಾಚಮ್ಯ ಸ ಮುನಿಃ ಶ್ರೂಯತಾಂ ಕಾರಣಂ ಮುನೇ ।
ಅಹಂ ಹಿ ದೇವಶರ್ಮಾಖ್ಯೋ ಮುನಿಃ ಸಂಯತವಾಙ್ಮನಾಃ ॥ ೪೧ ॥
ನಿವಸಾಮಿ ಕೃತಸ್ಥಾನೋ ಗಂಗಾಸಾಗರಸಂಗಮೇ ।
ತತ್ರ ದರ್ಶೇ ತರ್ಪಯಾಮಿ ಸದೈವ ಚ ಪಿತ್ರೂನಹಂ ॥ ೪೨ ॥

---

೩೬. ಅದನ್ನು ಕೇಳಿ ಅತ್ಯಾಶ್ಚರ್ಯಗೊಂಡು, ನಾನು ಮತ್ತೆ ಅವನನ್ನು ಕುರಿತು ಮತ್ತೂ ಹೀಗೆ ಹೇಳಿದೆನು: 'ಭಾರತದೇಶದಲ್ಲಿ ಜನ್ಮದೊರೆಯುವುದು ಬಹು ಕಷ್ಟ. ಅದರಲ್ಲಿಯೂ ಮನುಷ್ಯತ್ವವು ಸಿಕ್ಕುವುದು ಇನ್ನೂ ದುರ್ಲಭವು.

೩೭–೪೦. ಮನುಷ್ಯ ಜನ್ಮದಲ್ಲಿಯೂ ಬ್ರಾಹ್ಮಣತ್ವವು ದೊರೆಯುವುದು ಕಷ್ಟ; ಬ್ರಾಹ್ಮಣತ್ವದಲ್ಲಿ ಮುನಿತ್ವವು ದುರ್ಲಭವಾದುದು. ಮುನಿತ್ವವು ದೊರೆತರೂ ತಪಸ್ಸಿದ್ಧಿಯನ್ನು ಪಡೆಯುವುದು ಬಹು ದುರ್ಲಭ. ಅಯ್ಯಾ ಮುನಿಯೇ! ಅತ್ಯುತ್ಕೃಷ್ಟವಾದ ಈ ಐದನ್ನೂ ಪಡೆದು ಅದೇಕೆ ಅಳುತ್ತಿರುವೆ? ಇದನ್ನು ಕಂಡು ನನಗೆ ಮಹಾವಿಸ್ಮಯವುಂಟಾಗಿದೆ.' ಈ ರೀತಿ ಆತನನ್ನು ಪ್ರಶ್ನಿಸುತ್ತಿರಲಾಗಿ, ಅಷ್ಟರಲ್ಲಿ ಸುಭದ್ರನೆಂಬ ಹೆಸರುಳ್ಳ ಮುನಿಯು ಅಲ್ಲಿಗೆ ಬಂದನು. ಆತನಾದರೋ ಮೇರುಗಿರಿಯನ್ನು ಪರಿತ್ಯಾಗಮಾಡಿ ಬಂದು ತೀರ್ಥದ ಸಾರತ್ವವನ್ನು ತಿಳಿದು ಅಲ್ಲೇ ಆಶ್ರಮವನ್ನು ನಿರ್ಮಿಸಿಕೊಂಡು ಸದಾ ಕಾಲವೂ ಸ್ತಂಭೇಶ್ವರನನ್ನು ಪೂಜಿಸುತ್ತಿರುವನು. ಅವನೂ ಕೂಡ ನನ್ನನ್ನೇ ಪ್ರಶ್ನೆಮಾಡುವವನಂತೆ ಆ ಮುನಿಯ ರೋದನಕ್ಕೆ ಕಾರಣವೇನೆಂದು ಕೇಳಿದನು.

೪೧–೪೪. ಬಳಿಕ ಆ ಮುನಿಯು ಆಚಮನ ಮಾಡಿ ಈ ರೀತಿ ಉತ್ತರ ಕೊಟ್ಟನು. 'ಎಲೈ ಮುನಿಯೇ! ಇದರ ಕಾರಣವನ್ನು ಕೇಳಿರಿ. ನಾನು ದೇವಶರ್ಮನೆಂಬ ಹೆಸರುಳ್ಳ ಮುನಿಯು. ಮಾತನ್ನೂ ಮನಸ್ಸನ್ನೂ ಅಡಗಿಸಿ ಅಂಕೆಯಲ್ಲಿಟ್ಟುಕೊಂಡವನಾಗಿ, ಗಂಗಾಸಾಗರಗಳ ಸಂಗಮಸ್ಥಾನದಲ್ಲಿ ನೆಲೆಯು

ಶ್ರಾದ್ಧಾಂತೇ ಚ ಪ್ರತ್ಯಕ್ಷಾ ಹ್ಯಾಶಿಷೋ ಮೇ ವದಂತಿ ಚ ।
ತತಃ ಕದಾಚಿತ್ ಪಿತರಃ ಪ್ರಹೃಷ್ಟಾ ಮಾಮುಥಾಬ್ರುವನ್ ॥ ೪೩ ॥
ವಯಂ ಸದಾತ್ರ ಚಾಯಾಮೋ ದೇವಶರ್ಮಂ ಸ್ತ್ವದಾಂತಿಕೇ ।
ಸ್ಥಾನೇಽಸ್ಮಾಕಂ ಕದಾಚಿತ್ ತ್ವಂ ನ ಚಾಯಾಸಿ ಕುತಃ ಸುತ ॥ ೪೪ ॥
ಸ್ಥಾನಂ ದಿದೃಕ್ಷುಸ್ತ್ವಚ್ಚಾಹಂ ನ ಶಕ್ತೋಽಸ್ಮಿ ನಿವೇದಿತುಂ ।
ತತಃ ಪರಮಮಿತ್ಯುಕ್ತ್ವಾ ಗತವಾನ್ ಪಿತೃಭಿಃ ಸಹ ॥ ೪೫ ॥
ಪಿತೄಣಾಂ ಮಂದಿರಂ ಪುಣ್ಯಂ ಭೌಮಲೋಕ ಸಮಾಸ್ಥಿತಂ ।
ತತ್ರ ತತ್ರ ಸ್ಥಿತಶ್ಚಾಹಂ ತೇಜೋಮಂಡಲ ದುರ್ದೃಶಾನ್ ॥ ೪೬ ॥
ದೃಷ್ಟ್ವಾಗ್ರತಃ ಪೂಜಯಾಢ್ಯಾನಪೃಚ್ಛಂ ಸ್ವಾನ್ ಪಿತೄನಿತಿ ।
ಕೇ ಹ್ಯಮೀ ಸಮುಪಾಯಾಂತಿ ಭೃಶಂ ತೃಪ್ತಾ ಭೃಶಾರ್ಚಿತಾಃ ।
ಭೃಶಂ ಪ್ರಮುದಿತಾ ನೈವ ತಥಾ ಯೂಯಂ ಯಥಾ ಹ್ಯಮೀ ॥ ೪೭ ॥

---

ನ್ನೇರ್ಪಡಿಸಿಕೊಂಡು ವಾಸಮಾಡುತ್ತಿದ್ದೇನೆ. ಅಲ್ಲಿ ನಾನು ಪ್ರತಿ ಅಮಾವಾಸ್ಯೆಯಲ್ಲಿಯೂ ಸದಾ ಪಿತೃಗಳನ್ನು ತರ್ಪಣದಿಂದ ಆರಾಧಿಸುತ್ತೇನೆ. ಶ್ರಾದ್ಧವು ಮುಗಿದ ತರುವಾಯ ನನ್ನ ಪಿತೃದೇವತೆಗಳು ಪ್ರತ್ಯಕ್ಷರಾಗಿ ಬಂದು ನನಗೆ ಆಶೀರ್ವಾದ ಮಾಡುತ್ತಾರೆ. ಹೀಗಿರುತ್ತಿರುವಲ್ಲಿ ಒಂದಾನೊಂದು ಸಲ ಆ ನನ್ನ ಪಿತೃಗಳು ತುಂಬ ಹರ್ಷಗೊಂಡವರಾಗಿ ನನ್ನನ್ನು ಕುರಿತು, "ಅಯ್ಯಾ ದೇವಶರ್ಮ! ನಾವು ಇಲ್ಲಿ ನಿನ್ನ ಬಳಿಗೆ ಸದಾ ಬರುತ್ತಿದ್ದೇವೆ. ಎಲೈ ಮಗನೇ! ನಾವಿರುವ ಸ್ಥಳಕ್ಕೆ ನೀನು ಯಾವೊಂದು ಸಲವೂ ಬರುವುದಿಲ್ಲವಲ್ಲಾ! ಅದೇಕೆ?" ಎಂದರು.

೪೫. ನನಗೂ ಅವರಿರುವ ಸ್ಥಾನವನ್ನು ನೋಡಲು ಅಪೇಕ್ಷೆಯಿತ್ತು. ಆದರೆ ಹಾಗೆ ಹೇಳಲು ಎಂದೂ ಶಕ್ತನಾಗಿರಲಿಲ್ಲ. ಆದುದರಿಂದ 'ಒಳ್ಳೆಯದು' ಎಂದು ನುಡಿದು ಪಿತೃಗಳ ಸಂಗಡ ಹೊರಟುಹೋದೆನು.

೪೬–೪೭. ಅವರ ಜೊತೆಯಲ್ಲಿ ಭೌಮ (ಎಂದರೆ ಮಂಗಳನ) ಲೊದಲ್ಲಿರುವ ಪುಣ್ಯಪೂರ್ಣವಾದ ಪಿತೃಮಂದಿರಕ್ಕೆ ಹೋಗಿ ಸೇರಿದೆನು. ನಾನು ಅಲ್ಲಲ್ಲೇ ನಿಂತು ನೋಡುತ್ತಾ, ತೇಜೋಮಂಡಲಗಳಂತೆ ಕಣ್ಣುಗಳನ್ನು ಕೋರೈಸುವ ಕಾಂತಿಯುಳ್ಳವರೂ (ಶ್ರಾದ್ಧಾದಿ ಸತ್ಕಾರಗಳಿಂದ ತೃಪ್ತಿಗೊಂಡಿರುವವರೂ), ಪೂಜೆಯಿಂದ ಸಮೃದ್ಧರೂ ಆದ ಕೆಲವರನ್ನು ಎದುರಿನಲ್ಲಿ ಕಂಡು ನನ್ನ ಪಿತೃಗಳನ್ನು ಕುರಿತು, "ಇವರು ಯಾರು ಇಲ್ಲಿ ಬರುತ್ತಿರುವವರು? ಇವರು ತುಂಬ ತೃಪ್ತರಾಗಿದ್ದಾರೆ; ಬಹಳವಾಗಿ ಪೂಜೆಗೊಂಡಿದ್ದಾರೆ. ಇವರು ಹೇಗೋ ಹಾಗೆ ನೀವು ಬಹಳಮಟ್ಟಿಗೆ ಆನಂದಗೊಂಡವರಾಗಿಲ್ಲವಲ್ಲ!" ಎಂದು ಕೇಳಿದೆನು.

ಪಿತರ ಊಚುಃ :—

ಭದ್ರಂ ತೇ ಪಿತರಃ ಪುಣ್ಯಾಃ ಸುಭದ್ರಸ್ಯ ಮಹಾಮುನೇಃ ।
ತರ್ಪಿತಾಸ್ತೇನ ಮುನಿನಾ ಮಹೀಸಾಗರಸಂಗಮೇ ॥ ೪೮ ॥
ಸರ್ವತೀರ್ಥಮಯೀ ಯತ್ರ ನಿಲೀನಾಹ್ಯುದಧೌ ಮಹೀ ।
ತತ್ರ ದರ್ಶೇ ತರ್ಪಯತಿ ಸುಭದ್ರಸ್ತಾನಮೂನ್ ಸುತ ॥ ೪೯ ॥
ಇತ್ಯಾಕರ್ಣ್ಯ ವಚಸ್ತೇಷಾಂ ಲಜ್ಜಿತೋಽಹಂ ಭೃಶಂ ತದಾ ।
ವಿಸ್ಮಿತಶ್ಚ ಪ್ರಣಮ್ಯೈತಾನ್ ಪಿತೄನ್ ಸ್ವಂ ಸ್ಥಾನಮಾಗತಃ ॥ ೫೦ ॥
ಯಥಾ ತಥಾ ಚಿಂತಿತಂ ಚ ತತ್ರ ಯಾಸ್ಯಾಮ್ಯಹಂ ಸ್ಫುಟಂ ।
ಪುಣ್ಯೋ ಯತ್ರಾಪಿ ವಿಖ್ಯಾತೋ ಮಹೀಸಾಗರಸಂಗಮಃ ॥ ೫೧ ॥
ಕೃತಾಶ್ರಮಶ್ಚ ತತ್ರೈವ ತರ್ಪಯಿಷ್ಯೇ ನಿಜಾನ್ ಪಿತೄನ್ ।
ದರ್ಶೇದರ್ಶೇ ಯಥಾಚಾಸೌ ಸ್ತುತ್ಯನಾಮಾ ಸುಭದ್ರಕಃ ॥ ೫೨ ॥
ಕಿಂ ತೇನ ನಸುಜಾತೇನ ಕುಲಾಂಗಾರೇಣ ಪಾಪಿನಾ ।
ಯಸ್ಮಿಞ್ಜೀವತ್ಯಪಿ ನಿಜಾಃ ಪಿತರೋಽನ್ಯಸ್ಪೃಹಾಕರಾಃ ॥ ೫೩ ॥

---

೪೮. ನನ್ನ ಮಾತುಗಳನ್ನು ಕೇಳಿ ಪಿತೃಗಳು ಉತ್ತರ ಕೊಟ್ಟುದೇನೆಂದರೆ: "ಅಯ್ಯಾ ಮಗುವೇ! ನಿನಗೆ ಮಂಗಳವಾಗಲಿ. ಇವರು ಪುಣ್ಯವಂತರು; ಸುಭದ್ರನೆಂಬ ಮಹಾಮುನಿಯ ಪಿತೃಗಳು. ಆ ಮುನಿಯಿಂದ ಮಹೀಸಾಗರ ಸಂಗಮದಲ್ಲಿ ಇವರು ತರ್ಪಣದಿಂದ ತೃಪ್ತಿಪಡಿಸಲ್ಪಟ್ಟಿದ್ದಾರೆ.

೪೯–೫೩. ಎಲೈ ಮಗನೇ! ಸರ್ವತೀರ್ಥಗಳನ್ನೂ ತನ್ನಲ್ಲೇ ಒಳಕೊಂಡಿರುವ ಮಹೀನದಿಯು ಯಾವ ಬಳಿ ಸಮುದ್ರದಲ್ಲಿ ಸೇರಿ ಅಡಗುವುದೋ ಆ ಎಡೆಯಲ್ಲಿ ಪ್ರತಿ ಅಮಾವಾಸ್ಯೆಯಲ್ಲಿಯೂ ಸುಭದ್ರಮುನಿಯು ಅವರಿಗೆ ತರ್ಪಣ ಕೊಡುತ್ತಾನೆ." ಹೀಗೆಂದು ನುಡಿದ ನನ್ನ ಪಿತೃಗಳ ಮಾತನ್ನು ಕೇಳಿದಾಗ ನಾನು ಬಹಳ ಲಜ್ಜಿತನಾದೆನು; ಆಶ್ಚರ್ಯಗೊಂಡವನೂ ಆದೆನು. ಬಳಿಕ ಆ ನನ್ನ ಪಿತೃಗಳಿಗೆ ಪ್ರಣಾಮ ಮಾಡಿ ನನ್ನ ಸ್ವಂತ ಸ್ಥಳಕ್ಕೇ ಹಿಂದಿರುಗಿ ಬಂದೆನು. ಬಂದು ಈ ರೀತಿ ಆಲೋಚನೆ ಮಾಡಿದೆನು: "ಬಹು ಪುಣ್ಯಪ್ರದವಾದುದೆಂದು ಪ್ರಖ್ಯಾತವಾಗಿರುವ ಮಹೀಸಾಗರ ಸಂಗಮವೆಂಬುದು ಎಲ್ಲಿರುವುದೋ ಅಲ್ಲಿಗೆ ನಾನು ಖಂಡಿತವಾಗಿಯೂ ಹೋಗುತ್ತೇನೆ. ಅಲ್ಲಿಯೇ ಆಶ್ರಮವನ್ನು ಮಾಡಿಕೊಂಡು ಸ್ತುತ್ಯವಾದ ಹೆಸರುಳ್ಳ ಸುಭದ್ರಮುನಿಯು ಹಾಗೆಯೇ ನನ್ನ ಪಿತೃಗಳನ್ನು ಪ್ರತಿ ಅಮಾವಾಸ್ಯೆಯಲ್ಲಿಯೂ ತರ್ಪಣಾದಿಗಳಿಂದ ತೃಪ್ತಿಪಡಿಸುತ್ತೇನೆ. ಯಾವನು ಜೀವಂತನಾಗಿರುತ್ತಿದ್ದರೂ ಅವನ ಪಿತೃಗಳು ಅನ್ಯರ ಸುಖವನ್ನು ಕಂಡು ಆಸೆಪಡುವಂತಾಗಿರುವರೋ ಅಂಥ ಪಾಪಿಯೂ ಕುಲಕಳಂಕಿಯೂ ಆದ ಮಗನು ಬದುಕಿ ಪ್ರಯೋಜನವೇನು?"

ಇತಿ ಸಂಚಿಂತ್ಯ ಮುದಿತೋ ರುಚಿಂ ಭಾರ್ಯಾಮಥಾಬ್ರವಂ ।
ರುಚೇ ತ್ವಯಾ ಸಮಾಯುಕ್ತೋ ಮಹೀಸಾಗರಸಂಗಮಂ ॥ ೫೪ ॥
ಗತ್ವಾ ಸ್ಥಾಸ್ಯಾಮಿ ತತ್ರೈವ ಶೀಘ್ರಂ ತ್ವಂ ಸಮುಖೀ ಭವ ।
ಪತಿವ್ರತಾಸಿ ಶುದ್ಧಾಸಿ ಸುಕುಲಾಸಿ ಯಶಸ್ವಿನಿ ।
ತಸ್ಮಾದೇತನ್ಮನಃ ಶುಭೇ ಕರ್ತುಮರ್ಹಸಿ ಚಿಂತತಂ ॥ ೫೫ ॥

ರುಚಿರುವಾಚ :—

ಹತಾ ತಸ್ಯ ಜನೇರ್ನಾಭೂತ್ ಕಥಂ ಪಾಪ ದುರಾತ್ಮನಾ ॥ ೫೬ ॥
ಶ್ಮಶಾನಸ್ತಂಭ ಯೇನಾಹಂ ದತ್ತಾ ತುಭ್ಯಂ ಕೃತಂ ತ್ವಯಾ ।
ಇಹ ಕಂದಫಲಾಹಾರೈರ್ಯದ್ಯೇತೇನ ನ ಪೂರ್ಯತೇ ॥ ೫೭ ॥
ನೇತುಮಿಚ್ಛಸಿ ಮಾಂ ತತ್ರ ಯತ್ರ ಕ್ಷಾರೋದಕಂ ಸದಾ ।
ತ್ವಮೇವ ತತ್ರ ಸಂಯಾಹಿ ನಂದಂತು ತವ ಪೂರ್ವಜಾಃ ॥ ೫೮ ॥
ಗಚ್ಛವಾ ತಿಷ್ಠ ವಾ ವೃದ್ಧ ವಸ ವಾ ಕಾಕವಚ್ಚಿರಂ ।
ತಥಾ ಬ್ರುವತ್ಯಾಂ ತಸ್ಯಾಂ ತು ಕರ್ಣಾವಸ್ಮಿ ಪಿಧಾಯ ಚ ॥ ೫೯ ॥
ವಿಪುಲಂ ಶಿಷ್ಯಮಾದಿಶ್ಯ ಗೃಹ ಏಕೋಽತ್ರ ಆಗತಃ ।
ಸೋಽಹಂ ಸ್ನಾತ್ವಾತ್ರ ಸಂತರ್ಪ್ಯ ಪಿತ್ರೂನ್ ಶ್ರದ್ಧಾ ಪರಾಯಣಃ ॥ ೬೦ ॥

---

೫೪–೫೫. ಹೀಗೆ ಯೋಚಿಸಿ, ಬಳಿಕ ಹರ್ಷಗೊಂಡವನಾಗಿ ರುಚಿಯೆಂಬ ಹೆಂಡತಿಯನ್ನು ಕುರಿತು ಹೀಗೆ ಹೇಳಿದೆನು: "ಎಲೆ ರುಚೀ! ನಿನ್ನನ್ನು ಜೊತೆಗೊಂಡು ಮಹೀಸಾಗರ ಸಂಗಮಕ್ಕೆ ಹೋಗಿ ಅಲ್ಲಿಯೇ ನಿಲ್ಲುವವನಾಗಿದ್ದೇನೆ. ನೀನು ಬೇಗ ಪ್ರಯಾಣಕ್ಕೆ ಸಿದ್ಧಳಾಗು. ಎಲೌ ಯಶಸ್ವಿನಿಯೇ! ನೀನು ಪತಿವ್ರತೆಯು; ಶುದ್ಧಳೂ ಕುಲೀನಳೂ ಆಗಿದ್ದೀಯೆ. ಆದುದರಿಂದ ಎಲೌ ಮಂಗಳೆಯೇ! ನಾನು ಯೋಚಿಸಿರುವುದನ್ನು ನಡೆಸುವವಳಾಗು."

೫೬–೫೮. ಅದಕ್ಕೆ ರುಚಿಯು ಹೀಗೆ ಉತ್ತರ ಕೊಟ್ಟಳು: "ಅಯ್ಯೋ! ನಾನು ಸತ್ತೆ! ಪಾಪೀ!! ಸುಡುಗಾಡಿನ ಕಂಬವೇ!!! ಯಾರು ನನ್ನನ್ನು ನಿನಗೆ ಕೊಟ್ಟರೋ ಅವರು ಹುಟ್ಟದಿದ್ದರೇ ಚೆನ್ನಾಗಿತ್ತಲ್ಲಾ! ನಿನ್ನ ಸಹವಾಸ ಸಾಕು. ಇಲ್ಲಿ ಗೆಡ್ಡೆ ಹಣ್ಣು ಮೊದಲಾದ ಯಾವುದಾದರೂ ಆಹಾರದಿಂದ ಹೊಟ್ಟೆ ತುಂಬಿಸುವುದಕ್ಕೇ ನಿನ್ನ ಕೈಲಾಗುವುದಿಲ್ಲ. ಅಂಥದರಲ್ಲಿ ಸದಾ ಉಪ್ಪುನೀರೇ ಇರುವ ಆ ಪ್ರದೇಶಕ್ಕೆ ನನ್ನನ್ನು ಕರೆದುಕೊಂಡುಹೋಗಲಿಚ್ಛಿಸುತ್ತಿರುವೆ. ನೀನೇ ಅಲ್ಲಿಗೆ ಹೋಗು. ನಿನ್ನ ಪೂರ್ವ ಪಿತೃಗಳಿಗೆ ತೃಪ್ತಿಯಾಗಲಿ.

೫೯–೬೧. ಮುದುಕಾ! ಬೇಕಾದರೆ ಹೋಗು, ಬೇಡದಿದ್ದರೆ ಇರು. ಅಥವಾ ಕಾಗೆಯ ಹಾಗೆ ಬಹುಕಾಲ ವಾಸಮಾಡು." ಅವಳು ಆ ರೀತಿ ಆಡುತ್ತಿರಲಾಗಿ, ಕಿವಿಗಳೆರಡನ್ನೂ ಮುಚ್ಚಿಕೊಂಡು ವಿಪುಲನೆಂಬ ಶಿಷ್ಯನಿಗೆ

**ಚಿಂತಾಂ ಸುವಿಪುಲಾಂ ಪ್ರಾಪ್ತೋ ನರಕೇ ದುಷ್ಕೃತೀ ಯಥಾ ।**
**ಯದಿ ತಿಷ್ಠಾಮಿ ಚಾತ್ರೈವ ಅರ್ಧದೇಹಧರೋ ಹ್ಯಹಂ ॥ ೬೧ ॥**
**ನರೋ ಹಿ ಗೃಹಿಣೀಹೀನೋ ಅರ್ಧದೇಹ ಇತಿ ಸ್ಮೃತಃ ।**
**ಯಥಾತ್ಮನಾ ವಿನಾ ದೇಹೇ ಕಾರ್ಯಂ ಕಿಂಚಿನ್ನ ಸಿಧ್ಯತಿ ॥ ೬೨ ॥**
**ಏವಂ ಗೃಹಿಣ್ಯಾ ಹೀನೋಹಿ ಸ ಕರ್ಮಸು ನ ಶಸ್ಯತೇ ।**
**ಯೋ ನರಃ ಸ್ತ್ರೀಷು ದೇಹೇಷು ಅನುರಕ್ತಸ್ತ್ವಸೌ ಪಶುಃ ॥ ೬೩ ॥**
**ಅನಾಯೋರ್ಹಿ ಫಲಂ ಗ್ರಾಹ್ಯಂ ಸಾರತಾ ನಾತ್ರ ಕಾಚನ ।**
**ಅರ್ಧದೇಹೀ ಚ ಮನುಜಸ್ತ್ವಸಂಸ್ಪೃಶ್ಯಃ ಸತಾಂ ಮತಃ ॥ ೬೪ ॥**
**ಔತ್ತಾನಪಾದಿರಸ್ಪೃಶ್ಯ ಉತ್ತಮೋಹಿ ಸುರೈಃ ಕೃತಃ ।**
**ಅಥ ಚೇತ್ತತ್ರ ಸಂಯಾಮಿ ನ ಮಹೀಸಾಗರಸ್ತತಃ ॥ ೬೫ ॥**
**ಯಾಮಿ ವಾ ತತ್ ಕಥಂ ಪಾದೌ ಚಲತೋ ಮೇ ಕಥಂಚನ ।**
**ಏತಸ್ಮಿನ್‌ಮೇ ಮನೋ ದ್ವಿಧಾ ಛಿದ್ಯತೇಽಜ್ಞಾನ ಸಂಕಟೇ ॥ ೬೬ ॥**

---

ಮನೆಯ ರಕ್ಷಣೆಯನ್ನು ಒಪ್ಪಿಸಿ ನಾನೊಬ್ಬನೇ ಒಂಟಿಯಾಗಿ ಇಲ್ಲಿಗೆ ಬಂದೆನು. ನಾನು ಇಲ್ಲಿ ಸ್ನಾನಮಾಡಿ ಸಂಪೂರ್ಣ ಶ್ರದ್ಧೆಯಿಂದ ಕೂಡಿದವನಾಗಿ ಪಿತೃಗಳಿಗೆ ತರ್ಪಣ ಕೊಟ್ಟು, ದುಷ್ಕಾರ್ಯ ಮಾಡಿದ ಪಾಪಿಗಳು ನರಕದಲ್ಲಿ ಹೇಗೋ ಹಾಗೆ ಬಹಳವಾದ ಚಿಂತೆಗೊಳಗಾದೆನು. ಆ ಚಿಂತೆಯ ರೀತಿ ಇದು—"ನಾನು ಇಲ್ಲಿಯೇ ಉಳಿದುಬಿಟ್ಟರೆ ಅರ್ಧ ದೇಹಧಾರಿಯಾಗಿಬಿಡುತ್ತೇನೆ.

೬೨–೬೩. 'ಗೃಹಿಣಿಯಿಲ್ಲದ ಮನುಷ್ಯನು ಅರ್ಧದೇಹವುಳ್ಳವನೆನಿಸಿಕೊಳ್ಳುತ್ತಾನೆ. ದೇಹದಲ್ಲಿ ಆತ್ಮನಿಲ್ಲದೆ ಸ್ವಲ್ಪ ಕಾರ್ಯವೂ ಕೂಡ ಹೇಗೆ ಸಿದ್ಧಿಸುವುದಿಲ್ಲವೋ ಹಾಗೆಯೇ ಗೃಹಿಣಿಯಿಲ್ಲದವನು. ಅವನು ಕರ್ಮಗಳಲ್ಲಿ ಅರ್ಹನಾಗುವುದಿಲ್ಲ, ಶಕ್ತನೆನಿಸುವುದಿಲ್ಲ. ಯಾವ ಮನುಷ್ಯನು ಸ್ತ್ರೀ ದೇಹಗಳಲ್ಲಿ ಅನುರಕ್ತನೋ ಅವನೇ ಪಶು.

೬೪. ಇವೆರಡರ (ಅರ್ಧದೇಹಿಯಾದ ಪುರುಷ ಮತ್ತು ಸ್ತ್ರೀ) ಫಲವನ್ನು ಮಾತ್ರ ಗ್ರಹಿಸಬೇಕು. ಅಲ್ಲಿ ಮತ್ತೆ ಯಾವ ಸಾರವೂ ಇಲ್ಲ. ಅರ್ಧದೇಹಿಯಾದ ಮನುಷ್ಯನು ಅಸ್ಪೃಶ್ಯ (ಮುಟ್ಟಬಾರದವ)ನೆಂದು ಸತ್ಪುರುಷರ ಅಭಿಪ್ರಾಯ.

೬೫. ಉತ್ತಾನಪಾದನ ಮಗನಾದ ಉತ್ತಮನನ್ನು ದೇವತೆಗಳು ಅಸ್ಪೃಶ್ಯನನ್ನಾಗಿ ಮಾಡಿದರು. ಅಲ್ಲಿಗೇ (ಪೂರ್ವನಿವಾಸಕ್ಕೆ) ಹೋಗುವೆನಾದರೆ ಆಗ ಮಹೀಸಾಗರ ಸಂಗಮವಿಲ್ಲವಾಗುತ್ತದೆ.

೬೬. ಹೇಗಾದರೂ ಪ್ರಯತ್ನಪಟ್ಟು ಹೋಗೋಣವೆಂದರೆ ನನ್ನ ಕಾಲುಗಳು ಹೇಗೆತಾನೆ ಚಲಿಸಿಯಾವು? ಈ ವಿಷಯದಲ್ಲಿ ನನ್ನ ಮನಸ್ಸು ಎರಡಾಗಿ ಸೀಳಿಹೋಗಿದೆ; ಅಜ್ಞಾನದ ಸಂಕಟದಲ್ಲಿ ಬಿದ್ದು ನೊಂದುಹೋಗಿದೆ.

ಅತೋಽಹಮತಿ ಮುಹ್ಯಾಮಿ ಭೃಶಂ ಶೋಚಾಮಿ ರೋದಿಮಿ ।
ಇತಿ ಶ್ರುತ್ವಾ ವಚಸ್ತಸ್ಯ ಭೃಶಂ ರೋಮಾಂಚಪೂರಿತಂ ॥ ೬೭ ॥
ಸಾಧು ಸಾಧ್ವಿತ್ಯಥೋವಾಚ ತಂ ಸುಭದ್ರೋಽಪ್ಯಹಂ ತಥಾ ।
ದಂಡವಚ್ಚ ಪ್ರಣಮಿತೋ ಮಹೀಸಾಗರ ಸಂಗಮಂ ॥ ೬೮ ॥
ಚಿಂತಯಾವಶ್ಚ ಮನಸಿ ಪ್ರತೀಕಾರಂ ಮುನೇರುಭೌ ।
ಯೋ ಹಿ ಮಾನುಷ್ಯಮಾಸಾಧ್ಯ ಜಲಬುದ್ಬುದಭಂಗುರಂ ॥ ೬೯ ॥
ಪರಾರ್ಥಾಯ ಭವತ್ಯೇಷ ಪುರುಷೋಽನ್ಯೇ ಪುರೀಷಕಾಃ ।
ತತಃ ಸಂಚಿಂತ್ಯ ಪ್ರಾಹೇದಂ ಸುಭದ್ರೋ ಮುನಿಸತ್ತಮಂ ॥ ೭೦ ॥
ಮಾ ಮುನೇ ಪರಿಖಿದ್ಯಸ್ವ ದೇವಶರ್ಮನ್ ಸ್ಥಿರೋ ಭವ ।
ಅಹಂತೇ ನಾಶಯಿಷ್ಯಾಮಿ ಶೋಕಂ ಸೂರ್ಯಸ್ತಮೋ ಯಥಾ ॥ ೭೧ ॥
ಗಮಿಷ್ಯಾಮ್ಯಾಶ್ರಮಂ ತ್ವಂ ಚ ನಾತ್ರಾಪಿ ಪರಿಹಾಸ್ಯತೇ ।
ಶೃಣು ತತ್ಕಾರಣಂ ತುಭ್ಯಂ ತರ್ಪಯಿಷ್ಯೇ ಪಿತೄನಹಂ ॥ ೭೨ ॥

---

೬೭–೬೮. ಆದುದರಿಂದ ನಾನು ದಿಕ್ಕುತೋಚದವನಾಗಿದ್ದೇನೆ; ಬಹುವಾಗಿ ಶೋಕಿಸುತ್ತಿದ್ದೇನೆ; ಅಳುತ್ತಿದ್ದೇನೆ.'' ಹೀಗೆಂದು ನುಡಿದ ಆತನ ಮಾತುಗಳನ್ನು ಕೇಳಿ ಬಹಳವಾಗಿ ರೋಮಾಂಚಹೊಂದಿದವನಾಗಿ ಸುಭದ್ರನು ಆತನನ್ನು ಕುರಿತು 'ಸಾಧು, ಸಾಧು' ಎಂದು ಮೆಚ್ಚುನುಡಿ ನುಡಿದನು. ನಾನೂ ಹಾಗೆಯೇ ಮಾಡಿ, ಮಹೀಸಾಗರ ಸಂಗಮಕ್ಕೆ ದಂಡದಹಾಗೆ ಉದ್ದಕ್ಕೆ ಅಡ್ಡಬಿದ್ದೆನು.

೬೯–೭೦. ನಾವಿಬ್ಬರೂ ಆ ಮುನಿಯ ಚಿಂತೆಗೆ ತಕ್ಕ ಪರಿಹಾರವೇನೆಂದು ಮನಸ್ಸಿನಲ್ಲೇ ಯೋಚಿಸಿದೆವು. ನೀರಮೇಲಣ ಗುಳ್ಳೆಯಂತೆ ಕ್ಷಣಭಂಗುರವಾದ ಮನುಷ್ಯ ಜನ್ಮವನ್ನು ಪಡೆದು ಯಾವಾತನು ಇತರರ ಪ್ರಯೋಜನಕ್ಕೆ ಒದಗಿಬರುತ್ತಾನೋ ಅವನೇ ಪುರುಷನು. ಉಳಿದವರು ಪುರೀಷಪ್ರಾಯರೇ ಸರಿ (ಎಂದರೆ ದೇಹದಿಂದ ವಿಸರ್ಜಿಸುವ ಮಲಸಮಾನರು). ಚೆನ್ನಾಗಿ ಆಲೋಚಿಸಿದ ಬಳಿಕ ಸುಭದ್ರನು ಆ ಮುನಿಶ್ರೇಷ್ಠನನ್ನು ಕುರಿತು ಈ ರೀತಿ ಹೇಳಿದನು.

೭೧. "ಎಲೈ ಮುನಿಯೇ! ವ್ಯಥೆಪಡಬೇಡ; ಸ್ಥಿರನಾಗು. ಸೂರ್ಯನು ಕತ್ತಲೆಯನ್ನು ಹೋಗಲಾಡಿಸುವಂತೆ ನಾನು ನಿನ್ನ ಶೋಕವನ್ನು ನಾಶಪಡಿಸುತ್ತೇನೆ.

೭೨. ಇನ್ನು ನಾನು ಆಶ್ರಮಕ್ಕೆ ಹೋಗುತ್ತೇನೆ. ನೀನೂ ಆಶ್ರಮಕ್ಕೆ ಪ್ರಯಾಣಮಾಡು. ಈ ವಿಷಯದಲ್ಲಿ ನೀನು ಹಾಸ್ಯಕ್ಕೆ ಗುರಿಯಾಗುವುದಿಲ್ಲ. ಅದರ ಕಾರಣವನ್ನು ಕೇಳುವವನಾಗು. ನಿನ್ನ ಪಿತೃಗಳಿಗೆ ನಾನು ತರ್ಪಣ ಕೊಡುತ್ತೇನೆ.''

ದೇವಶರ್ಮೋವಾಚ :—

ಏವಂ ತೇ ವದಮಾನಸ್ಯ ಆಯುರಸ್ತು ಶತಂ ಸಮಾಃ ।
ಯದಶಕ್ಯಂ ಮಹತ್ಕರ್ಮ ಕರ್ತುಮಿಚ್ಛಸಿ ಮತ್ಕೃತೇ ॥ ೭೩ ॥
ಹರ್ಷಸ್ಥಾನೇ ವಿಷಾದಶ್ಚ ಪುನರ್ಮಾಂ ಬಾಧತೇ ಶೃಣು ।
ಅಪಿ ವಾಕ್ಯಂ ಶುಭಂ ಸಂತೋ ತಂ ಗೃಹ್ಣಂತಿ ಮುಧಾ ಮುನೇ ॥ ೭೪ ॥
ಕಥಮೇತನ್ಮಹತ್ಕರ್ಮ ಕಾರಯಾಮಿ ಮುಧಾ ವದ ।
ಪುನಃ ಕಿಂಚಿತ್ಪ್ರವಕ್ಷ್ಯಾಮಿ ಯಥಾ ಮೇ ನಿಷ್ಕೃತಿರ್ಭವೇತ್ ॥ ೭೫ ॥
ಶಾಪಿತೋಽಸಿ ಮಯಾ ಪ್ರಾಣೈರ್ಯಥಾ ವಚ್ಮಿ ತಥಾ ಕುರು ।
ಅಹಂ ಸದಾ ಕರಿಷ್ಯಾಮಿ ದರ್ಶೇ ಚೋದ್ದಿಶ್ಯ ತೇ ಪಿತೄನ್ ॥ ೭೬ ॥
ಶ್ರಾದ್ಧಂ ಗಂಗಾರ್ಣವೇ ಚಾತ್ರ ಮತ್ಪಿತೄಣಾಂ ತ್ವಮಾಚರ ।
ಅಹಂ ಚೈವಾಪಿ ತಪಸಃ ಸಂಚಿತಸ್ಯಾಪಿ ಜನ್ಮನಾ ।
ಚತುರ್ಭಾಗಂ ಪ್ರದಾಸ್ಯಾಮಿ ಏವಮೇವೈತದಾಚರ ॥ ೭೭ ॥

ಸುಭದ್ರ ಉವಾಚ :—

ಯದ್ಯೇವಂ ತವ ಸಂತೋಷಸ್ತ್ವೇವಮಸ್ತು ಮುನೀಶ್ವರ ।
ಸಾಧೂನಾಂ ಚ ಯಥಾ ಹರ್ಷಸ್ತಥಾ ಕಾರ್ಯಂ ನಿಜಾನತಾ ॥ ೭೮ ॥

---

೭೩. ಸುಭದ್ರನ ಮಾತುಗಳನ್ನು ಕೇಳಿ ದೇವಶರ್ಮನಿಂತೆಂದನು : "ಹೀಗೆ ನುಡಿಯುತ್ತಿರುವ ನಿನಗೆ ನೂರು ವರ್ಷ ಆಯುಸ್ಸುಂಟಾಗಲಿ. ಅಶಕ್ಯವಾದ ಮಹತ್ಕರ್ಮವನ್ನು ನನಗೋಸ್ಕರ ಮಾಡಲೆಳಸುತ್ತಿರುವೆಯಲ್ಲ !

೭೪–೭೫. ಹರ್ಷದ ಸ್ಥಾನದಲ್ಲಿ ಮತ್ತೆ ವಿಷಾದವು ನನ್ನನ್ನು ಬಾಧಿಸುತ್ತಿದೆ. ಕೇಳಯ್ಯಾ ಮುನಿಯೇ ! ಸತ್ಪುರುಷನು ಶುಭವಾದ ಮಾತನ್ನು ಅಂಗೀಕರಿಸದೆ ಹೋದರೆ ಅದು ವ್ಯರ್ಥವಲ್ಲವೆ ? ಈ ಮಹತ್ತಾದ ಕರ್ಮವನ್ನು ಸುಮ್ಮಸುಮ್ಮನೆ (ಯಾವ ಬಗೆಯ ಪ್ರತ್ಯುಪಕಾರವನ್ನೂ ಮಾಡದೆ) ಹೇಗೆತಾನೆ ಮಾಡಲಿ ಹೇಳು. ನನಗೆ ಋಣಮುಕ್ತಿಯಾಗುವುದಕ್ಕಾಗಿ ಸ್ವಲ್ಪ ಹೇಳುತ್ತೇನೆ.

೭೬–೭೭. ನಾನು ಹೇಳಿದಂತೆಯೇ ಮಾಡು. ಮಾಡದೆಹೋದರೆ ನನ್ನ ಪ್ರಾಣಗಳ ಮೇಲೆ ಆಣೆ. ನಾನು ಸದಾ ಕಾಲವೂ ಪ್ರತಿ ಅಮಾವಾಸ್ಯೆಯಲ್ಲಿಯೂ ನಿನ್ನ ಪಿತೃಗಳನ್ನುದ್ದೇಶಿಸಿ ಗಂಗಾಸಾಗರ ಸಂಗಮದಲ್ಲಿ ಶ್ರಾದ್ಧ ಮಾಡುತ್ತೇನೆ. ಇಲ್ಲಿ ನೀನು ನನ್ನ ಪಿತೃಗಳಿಗೆ ಶ್ರಾದ್ಧ ಮಾಡು. ಹುಟ್ಟಿದಂದಿನಿಂದಲೂ ಶೇಖರವಾಗಿರುವ ನನ್ನ ತಪಸ್ಸಿನಲ್ಲಿ ನಾಲ್ಕನೆಯ ಒಂದು ಭಾಗವನ್ನು ಕೂಡ ನಾನು ನಿನಗೆ ಕೊಡುತ್ತೇನೆ. ಅದನ್ನಂಗೀಕರಿಸಿ ಹೀಗೆಯೇ ನೀನು ಮಾಡುತ್ತಿರು."

೭೮. ಸುಭದ್ರನು ಇಂತೆಂದನು :—"ಎಲೈ ಮುನೀಶ್ವರನೇ ! ಈ ರೀತಿ ಮಾಡುವುದರಿಂದ ನಿನಗೆ ಸಂತೋಷವಾಗುವಹಾಗಿದ್ದರೆ ಹಾಗೆಯೇ ಆಗಲಿ.

ಭೃಗುರುವಾಚ :—

ದೇವಶರ್ಮಾ ತತೋ ಹೃಷ್ಟೋ ದತ್ವಾ ಪುಣ್ಯಂ ತ್ರಿವಾರಕಂ ।
ಚತುರ್ಥಾಂಶಂ ಯಯೌ ಧಾಮ ಸ್ವಂ ಸುಭದ್ರೋಽಪಿ ಚ ಸ್ಥಿತಃ ॥ ೭೯ ॥
ಏವಂ ವಿಧೋ ನಾರದಾಸೌ ಮಹೀಸಾಗರ ಸಂಗಮಃ ।
ಯಮನುಸ್ಮರತೋ ಮಹ್ಯಂ ರೋಮಾಂಚೋದ್ಯಾಪಿ ವರ್ತತೇ ॥ ೮೦ ॥

ನಾರದ ಉವಾಚ :—

ಇತಿ ಶ್ರುತ್ವಾ ಫಾಲ್ಗುನಾಹಂ ಹರ್ಷಗದ್ಗಯಾ ಗಿರಾ ।
ಮೃತೋ ಮೃತ ಇವಾವೋಚಂ ಸಾಧುಸಾಧ್ವಿತಿ ತಂ ಭೃಗುಂ ॥ ೮೧ ॥
ಯೂಯಂ ವಯಂ ಗಮಿಷ್ಯಾಮೋ ಮಹೀತೀರಂ ಸುಶೋಭನಂ ।
ಆವಾಮೀಕ್ಷಾವಹೇ ಸರ್ವಂ ಸ್ಥಾನಕಂ ತದನುತ್ತಮಂ ॥ ೮೨ ॥
ಮಮ ಚೈವಂ ವಚಃ ಶ್ರುತ್ವಾ ಭೃಗುಃ ಸಹ ಮಯಾ ಯಯೌ ।
ಸಮಸ್ತಂತು ಮಹಾಪುಣ್ಯಂ ಮಹೀಕೂಲಂ ನಿರೀಕ್ಷಿತಂ ॥ ೮೩ ॥
ತದ್ದೃಷ್ಟ್ವಾ ಚಾತಿಹೃಷ್ಟೋಽಹಮಾಸಂ ರೋಮಾಂಚ ಕಂಚುಕಃ ।
ಅಬ್ರುವಂ ಮುನಿ ಶಾರ್ದೂಲಂ ಹರ್ಷಗದ್ಗದಯಾ ಗಿರಾ ॥ ೮೪ ॥

---

ಹೇಗೆ ಮಾಡಿದರೆ ಸಾಧುಗಳಿಗೆ ಹರ್ಷವುಂಟಾಗುವುದೋ ಹಾಗೆ ಮಾಡಬೇಕು. ತಿಳಿದವನಿಗೆ ಇದೇ ಕರ್ತವ್ಯ.''

೭೯. ಭೃಗುಮುನಿಯು ಇಂತೆಂದು ಮುಂದುವರಿಸಿದನು. ಆ ಬಳಿಕ ದೇವಶರ್ಮನು ಹರ್ಷಗೊಂಡವನಾಗಿ, ತನ್ನ ಪುಣ್ಯದ ನಾಲ್ಕನೆಯ ಒಂದು ಭಾಗವನ್ನು ಮೂರು ಸಾರಿ ನುಡಿದು ಸುಭದ್ರನಿಗೆ ದಾನವಾಗಿ ಕೊಟ್ಟು ತನ್ನ ಸ್ವಂತ ಮನೆಗೆ ಹಿಂದಿರುಗಿಹೋದನು. ಸುಭದ್ರನು ಅಲ್ಲಿಯೇ ನಿಂತನು.

೮೦. ಎಲೈ ನಾರದನೇ! ಮಹೀಸಾಗರ ಸಂಗಮವು ಈ ಬಗೆಯಾದುದು. ಅದನ್ನು ಸ್ಮರಿಸಿಕೊಳ್ಳುತ್ತಿರುವ ನನಗೆ ಈಗಲೂ ರೋಮಾಂಚವುಂಟಾಗುತ್ತಿದೆ.''

೮೧–೮೨. ಭೃಗುವಿನ ಹೇಳಿಕೆಯನ್ನಾಲಿಸಿ ನಾರದನಿಂತೆಂದನು :–'' ಎಲೈ ಫಲ್ಗುನನೇ! ಈ ಸಂಗತಿಯನ್ನು ಕೇಳಿ ಮೃತನು ಅಮೃತನಾದವನಾಗಿ ಹರ್ಷದಿಂದ ಗದ್ಗದವಾದ ಮಾತುಗಳುಳ್ಳವನಾಗಿ ನಾನು ಆ ಭೃಗುವನ್ನು ಕುರಿತು, 'ಸಾಧು, ಸಾಧು' ನೀವೂ ನಾವೂ ಬಹು ಮಂಗಳಕರವಾದ ಮಹೀತೀರಕ್ಕೆ ಹೋಗೋಣ. ಎಣೆಯಿಲ್ಲದುದಾಗಿ ಅತ್ಯುತ್ತಮವಾಗಿರುವ ಆ ಸ್ಥಳವನ್ನೆಲ್ಲಾ ನಾವಿಬ್ಬರೂ ಚೆನ್ನಾಗಿ ನೋಡೋಣ'' ಎಂದು ಹೇಳಿದೆನು.

೮೩. ನನ್ನ ಈ ಮಾತುಗಳನ್ನು ಕೇಳಿ ಭೃಗುವು ನನ್ನ ಸಂಗಡ ಹೊರಟನು. ಮಹಾ ಪುಣ್ಯಪ್ರದವಾದ ಮಹೀನದಿಯ ತೀರವನ್ನೆಲ್ಲ ಚೆನ್ನಾಗಿ ನೋಡಿದೆವು.

೮೪. ಅದನ್ನು ನೋಡಿ ನಾನು ಅತ್ಯಾನಂದ ಹೊಂದಿದೆನು ; ಆನಂದದಿಂದ ಮೈಯೆಲ್ಲ ರೋಮಾಂಚದಿಂದ ಆವೃತವಾಯಿತು. ಹರ್ಷದಿಂದ ಗದ್ಗದವಾದ

ತ್ವತ್ಪ್ರಸಾದಾತ್ಕರಿಷ್ಯಾಮಿ ಭೃಗೋ ಸ್ಥಾನಮನುತ್ತಮಂ ।
ಸ್ವಸ್ಥಾನಂ ಗಮ್ಯತಾಂ ಬ್ರಹ್ಮನ್ನತಃ ಕೃತ್ಯಂ ವಿಚಿಂತಯೇ ॥ ೮೫ ॥
ಏವಂ ಭೃಗುಂ ಚಾಸ್ಮಿ ವಿಸರ್ಜಯಿತ್ವಾ
ಕಲ್ಲೋಲ ಕೋಲಾಹಲ ಕೌತುಕೀ ತಟೇ ।
ಅಥೋಪವಿಶ್ಯೇದಮಚಿಂತಯಂತ್ ತದಾ
ಕಿಂ ಕೃತ್ಯಮಾತ್ಮಾನಮಿವೈಕಯೋಗೀ ॥ ೮೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ನಾರದಾರ್ಜುನ ಸಂವಾದೇ ಮಹೀಸಾಗರ ಸಂಗಮತೀರ್ಥ ಮಾಹಾತ್ಮ್ಯ ವರ್ಣನಂ" ನಾಮ ತೃತೀಯೋಽಧ್ಯಾಯಃ

---

ಧ್ವನಿಯುಳ್ಳವನಾಗಿ ಆ ಮುನಿಶಾರ್ದೂಲ (ಮುನಿಶ್ರೇಷ್ಠ)ನಿಗೆ ಇಂತೆಂದು ಹೇಳಿದೆನು :—

೮೫. "ಅಯ್ಯಾ ಭೃಗೂ! ನಿನ್ನ ಅನುಗ್ರಹದಿಂದ ನಾನು ಅನುತ್ತಮವಾದ ಸ್ಥಾನವನ್ನು ನಿರ್ಮಿಸುತ್ತೇನೆ. ಅಯ್ಯಾ ಬ್ರಾಹ್ಮಣನೇ! ನಿನ್ನ ಸ್ಥಳಕ್ಕೆ ನೀನು ಹೋಗಬಹುದು. ಮುಂದಿನ ಕಾರ್ಯವೇನೆಂದು ಆಲೋಚಿಸುತ್ತೇನೆ."

೮೬. ಈ ರೀತಿಯಾಗಿ ಭೃಗುವನ್ನು ಕಳಿಸಿಕೊಟ್ಟು, ಬಳಿಕ ತೆರೆಗಳ ಕೋಲಾಹಲದಿಂದ ಕೌತುಕವುಂಟುಮಾಡುವ ಮಹೀನದಿಯ ದಡದಲ್ಲಿ ಕುಳಿತುಕೊಂಡು ಯೋಗಿಯು ಆತ್ಮವೊಂದನ್ನೇ ಕುರಿತು ಚಿಂತಿಸುತ್ತಿರುವಂತೆ ಮುಂದೆ ಮಾಡಬೇಕಾದ ಕಾರ್ಯವೇನೆಂದು ಚಿಂತಿಸತೊಡಗಿದೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ನಾರದಾರ್ಜುನ ಸಂವಾದ— ಮಹೀಸಾಗರ ಸಂಗಮತೀರ್ಥ ಮಾಹಾತ್ಮ್ಯ"ವೆಂಬ ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರ್ಥೋಽಧ್ಯಾಯಃ

## ನಾರದಾರ್ಜುನಸಂವಾದೇ ದಾನಭೇದ ಪ್ರಶಂಸಾವರ್ಣನಂ

ನಾರದ ಉವಾಚ :—

**ತತಸ್ತ್ವಹಂ ಚಿಂತಯಾಮಿ ಕಥಂ ಸ್ಥಾನಮಿದಂ ಭವೇತ್ ।**
**ಮಮಾಯತ್ತಂ ಯತೋ ರಾಜ್ಞಾಂ ಭೂಮಿರೇಷಾ ಸದಾ ವಶೇ ॥ ೧ ॥**
**ಯುತ್ತ್ವಹಂ ಧರ್ಮವರ್ಮಾಣಂ ಗತ್ವಾ ಯಾಚೇ ಹ ಮೇದಿನೀಂ ।**
**ಅರ್ಪಯತ್ಯೇವ ಸ ಚ ಮೇ ಯಾಚಕೋ ನ ಪುನಃ ಪರಃ ॥ ೨ ॥**
**ತಥಾ ಹಿ ಮುನಿಭಿಃ ಪ್ರೋಕ್ತಂ ದ್ರವ್ಯಂ ತ್ರಿವಿಧಮುತ್ತಮಂ ।**
**ಶುಕ್ಲಂ ಮಧ್ಯಂ ಚ ಶಬಲಮಧಮಂ ಕೃಷ್ಣಮುಚ್ಯತೇ ॥ ೩ ॥**
**ಶ್ರುತೇಃ ಸಂಪಾದನಾಚ್ಛಿಷ್ಯಾತ್ ಪ್ರಾಪ್ತಂ ಶುಕ್ಲಂ ಚ ಕನ್ಯಯಾ ।**
**ತಥಾ ಕುಸೀದ ವಾಣಿಜ್ಯ ಕೃಷಿಯಾಚಿತಮೇವ ಚ ॥ ೪ ॥**
**ಶಬಲಂ ಪ್ರೋಚ್ಯತೇ ಸದ್ಭಿರ್ದ್ಯೂತ ಚೌರ್ಯೇಣ ಸಾಹಸೈಃ ।**
**ವ್ಯಾಜೇನೋಪಾರ್ಜಿತಂ ಯಚ್ಚ ತತ್ ಕೃಷ್ಣಂ ಸಮುದಾಹೃತಂ ॥ ೫ ॥**

---

## ಕನ್ನಡದ ಅನುವಾದ

### ನಾರದಾರ್ಜುನ ಸಂವಾದ— ದಾನಭೇದ ಪ್ರಶಂಸಾವರ್ಣನ

೧. ನಾರದನು ಹೇಳುತ್ತಾನೆ:—ಬಳಿಕ ನಾನು ಈ ರೀತಿ ಯೋಚಿಸತೊಡಗಿದೆನು. "ಈ ಸ್ಥಳವು ಹೇಗೂ ನನ್ನ ಸ್ವಾಧೀನಕ್ಕೆ ಒಳಪಟ್ಟುದಾಗುವುದು? ಈ ಭೂಮಿಯು ಸದಾ ಕಾಲವೂ ರಾಜರ ವಶದಲ್ಲಿರುವುದಷ್ಟೆ.

೨. ನಾನು ಧರ್ಮವರ್ಮ ರಾಜನ ಬಳಿಗೆ ಹೋಗಿ ಈ ಭೂಮಿಯನ್ನು ಕೊಡೆಂದು ಯಾಚಿಸಲೆ? ಹಾಗೆ ಯಾಚಿಸಿದರೆ ಆತನು ನನಗೆ ಅದನ್ನು ಅರ್ಪಿಸಿಯೇ ಬಿಡುತ್ತಾನೆ. ಬೇರೊಬ್ಬನು ಅವನಹಾಗೆ ಕೊಡಲಾರನು.

೩. ಅದಲ್ಲದೆ, ಮುನಿಗಳಿಂದ ಹೀಗೆ ಹೇಳಲ್ಪಟ್ಟಿರುವುದು:—ದ್ರವ್ಯವು ಮೂರು ಬಗೆಯಾದುದು. ಉತ್ತಮವಾದುದು ಶುಕ್ಲವೆಂದೂ, ಮಧ್ಯಮವಾದುದು ಶಬಲವೆಂದೂ, ಅಧಮವಾದುದು ಕೃಷ್ಣವೆಂದೂ ಹೇಳಲ್ಪಟ್ಟಿರುವುದು.

೪–೫. ವೇದಾಧ್ಯಯನ ಮಾಡಿದುದಕ್ಕಾಗಿ ಶಿಷ್ಯನಿಂದ ಬಂದ ದ್ರವ್ಯವು ಶುಕ್ಲವೆನಿಸಿಕೊಳ್ಳುವುದು. ಕನ್ಯೆಯಿಂದ ಬರುವುದೂ ಹಾಗೆಯೇ. ಕುಸೀದ (ಎಂದರೆ ಹಣವನ್ನು ಬಡ್ಡಿಗೆ ಕೊಡುವ ವ್ಯವಹಾರ), ವಾಣಿಜ್ಯ (ಕೊಂಡು ಮಾರುವ ವ್ಯವಹಾರ), ಕೃಷಿ, ಯಾಚನೆ— ಇವುಗಳಿಂದ ದೊರಕುವುದೂ ಶಬಲವೆನಿಸುತ್ತದೆ. ದ್ಯೂತದಿಂದ, ಚೌರ್ಯದಿಂದ (ಎಂದರೆ ಕಳವಿನಿಂದ),



ಶುಕ್ಲವಿತ್ತೇನ ಯೋ ಧರ್ಮಂ ಪ್ರಕುರ್ಯಾಚ್ಛ್ರದ್ಧಯಾನ್ವಿತಃ ।
ತೀರ್ಥಂ ಪಾತ್ರಂ ಸಮಾಸಾದ್ಯ ದೇವತ್ವೇ ತತ್ ಸಮಶ್ನುತೇ ॥ ೭ ॥
ರಾಜಸೇನ ಚ ಭಾವೇನ ವಿತ್ತೇನ ಶಬಲೇನ ಚ ।
ಪ್ರದದ್ಯಾದ್ದಾನಮರ್ಥಿಭ್ಯೋ ಮನುಷ್ಯತ್ವೇ ತದಶ್ನುತೇ ॥ ೭ ॥
ತಮೋವೃತಸ್ತು ಯೋ ದದ್ಯಾತ್ ಕೃಷ್ಣವಿತ್ತೇನ ಮಾನವಃ ।
ತಿರ್ಯಕ್ತ್ವೇ ತತ್ಫಲಂ ಪ್ರೇತ್ಯ ಸಮಶ್ನಾತಿ ನರಾಧಮಃ ॥ ೮ ॥
ತತ್ತು ಯಾಚಿತದ್ರವ್ಯಂ ಮೇ ರಾಜಸಂ ಹಿ ಸ್ಫುಟಂ ಭವೇತ್ ।
ಅಥ ಬ್ರಾಹ್ಮಣಭಾವೇನ ನೃಪಂ ಯಾಚೇ ಪ್ರತಿಗ್ರಹಂ ॥ ೯ ॥
ತದಪ್ಯಹೋ ಚಾತಿಕಷ್ಟಂ ಹೇತುನಾ ತೇನ ಮೇ ಮತಂ
ಅಯಂ ಪ್ರತಿಗ್ರಹೋ ಘೋರೋ ಮಧ್ವಾಸ್ವಾದೋ ವಿಷೋಪಮಃ ॥೧೦॥

---

ಸಾಹಸಗಳಿಂದ (ಎಂದರೆ ದರೋಡೆ ಮುಂತಾದ ಕೃತ್ಯಗಳಿಂದ), ವ್ಯಾಜದಿಂದ (ಯಾವುದಾದರೊಂದು ನೆಪದಿಂದ) ಸಂಪಾದಿಸಿದ ದ್ರವ್ಯವು ಕೃಷ್ಣವೆನ್ನಿಸಿ ಕೊಳ್ಳುತ್ತದೆ.

೬. ಯಾವನು ಶುಕ್ಲವಿತ್ತದಿಂದ ಶ್ರದ್ಧಾವಂತನಾಗಿ ತೀರ್ಥವನ್ನೂ 'ತೀರ್ಥ' ಎನ್ನಿಸಿಕೊಳ್ಳುವ ಉತ್ತಮ ಪಾತ್ರವನ್ನು ದೊರಕಿಸಿಕೊಂಡು ಪಾತ್ರ ವನ್ನೂ ಪಡೆದು ಧರ್ಮವನ್ನು ಮಾಡುತ್ತಾನೋ ಅವನು ದೇವತೆಯಾಗಿ, ದೇವತ್ವದಲ್ಲಿಯೂ ಅದರ ಫಲವನ್ನು ಅನುಭವಿಸುತ್ತಾನೆ.

೭. ರಾಜಸ ಭಾವದಿಂದಲೂ, ಶಬಲ ದ್ರವ್ಯದಿಂದಲೂ ಅರ್ಥಿಗಳಿಗೆ (ಬೇಡಿ ಕೊಂಡು ಬಂದವರಿಗೆ) ದಾನ ಕೊಟ್ಟವನು ಅದನ್ನು ಮನುಷ್ಯನಾಗಿ ಹುಟ್ಟಿ ಅನುಭವಿಸುತ್ತಾನೆ.

೮. ಯಾವ ಮನುಷ್ಯನು ತಮೋಗುಣದಿಂದ ಆವರಿಸಲ್ಪಟ್ಟವನಾಗಿ ಕೃಷ್ಣ ದ್ರವ್ಯವನ್ನು ದಾನ ಮಾಡುತ್ತಾನೋ ಆ ನರಾಧಮನು ತಿರ್ಯಗ್ಜಂತುವಾಗಿ ಹುಟ್ಟಿ ಆ ಪ್ರಾಣಿ ಜನ್ಮದಲ್ಲಿ ಆ ದಾನದ ಫಲವನ್ನು ಪಡೆದು ಅನುಭವಿ ಸುತ್ತಾನೆ.

೯. ಇನ್ನು ನಾನು ಬ್ರಾಹ್ಮಣಭಾವದಿಂದ ದೊರೆಯ ಬಳಿ ಹೋಗಿ ದಾನ ತೆಗೆದುಕೊಳ್ಳುವುದಕ್ಕಾಗಿ ಯಾಚನೆ ಮಾಡುವೆನಾದರೆ, ಹಾಗೆ ಯಾಚಿಸಿ ತಂದ ದ್ರವ್ಯವು ರಾಜಸ ದ್ರವ್ಯವಾಗುವುದೆಂಬುದು ಸ್ಪಷ್ಟವೇ ಆಗಿದೆ.

೧೦. ಆಹಾ! ಅದು ರಾಜಸವಾಗುವುದೆಂಬ ಕಾರಣದಿಂದಲೇ ಅದು ಅತಿ ಕಷ್ಟವೆಂದು ನನ್ನ ಅಭಿಪ್ರಾಯ. ಈ ಪ್ರತಿಗ್ರಹವು (ಇನ್ನೊಬ್ಬರಿಂದ ತೆಗೆದು ಕೊಳ್ಳುವುದು) ಘೋರವಾದುದು; ಜೇನಿನ ಹಾಗೆ ಸಿಹಿಯಾಗಿರುವ ವಿಷವು.

ಪ್ರತಿಗ್ರಹೇಣ ಸಂಯುಕ್ತಂ ಹ್ಯಮಾವ ಮಾವಿಶೇದ್ದ್ವಿಜಂ ।
ತಸ್ಮಾದಹಂ ನಿವೃತ್ತಶ್ಚ ಪಾಪಾದಸ್ಮಾತ್ ಪ್ರತಿಗ್ರಹಾತ್ ॥ ೧೧ ॥
ತತಃ ಕೇನಾಪ್ಯುಪಾಯೇನ ದ್ವಯೋರನ್ಯತರೇಣ ತು ।
ಸ್ವಾಯತ್ತಂ ಸ್ಥಾನಕಂ ಕುರ್ಮ ಏತತ್ ಸಂಚಿಂತಯೇ ಮುಹುಃ ॥ ೧೨ ॥
ಯಥಾ ಕುಭಾರ್ಯಃ ಪುರುಷಶ್ಚಿಂತಾಂತಂ ನ ಪ್ರಪದ್ಯತೇ ।
ತಥೈವ ವಿಮೃಶಂಶ್ಚಾಹಂ ಚಿಂತಾಂತಂ ನ ಲಭಾಮ್ಯಣು ॥ ೧೩ ॥
ಏತಸ್ಮಿನ್ನಂತರೇ ಪಾರ್ಥ ಸ್ನಾತುಂ ತತ್ರ ಸಮಾಗತಾಃ ।
ಬಹವೋ ಮುನಯಃ ಪುಣ್ಯೇ ಮಹೀಸಾಗರಸಂಗಮೇ ॥ ೧೪ ॥
ಅಹಂ ತಾನಬ್ರವಂ ಸರ್ವಾನ್ ಕುತೋ ಯೂಯಂ ಸಮಾಗತಾಃ ।
ತೇ ಮಾಮೂಚುಃ ಪ್ರಣಮ್ಯಾಥ ಸೌರಾಷ್ಟ್ರವಿಷಯೇ ಮುನೇ ॥ ೧೫ ॥
ಧರ್ಮವರ್ಮೇತಿ ನೃಪತಿರ್ಯೋಽಸ್ಯ ದೇಶಸ್ಯ ಭೂಪತಿಃ ।
ಸ ತು ದಾನಸ್ಯ ತತ್ತ್ವಾರ್ಥೀ ತೇಪೇ ವರ್ಷಗಣಾನ್ ಬಹೂನ್ ॥ ೧೬ ॥

---

೧೧. ಪ್ರತಿಗ್ರಹದಿಂದ ಕೂಡಿದ ದ್ವಿಜನನ್ನು ಪಾಪವು ಹೊಕ್ಕು ನೆಲಸಿ ಬಿಡುತ್ತದೆ. ಆದುದರಿಂದ ನಾನು ಪಾಪಕರವಾದ ಈ ಪ್ರತಿಗ್ರಹವನ್ನು ದೂರ ಬಿಟ್ಟುಬಿಡತಕ್ಕವನು.

೧೨. ಆದುದರಿಂದ ಯಾವುದಾದರೊಂದು ಉಪಾಯದಿಂದ ಈ ಎರಡರಲ್ಲಿ ಮತ್ತೊಂದರಿಂದ (ಶುಕ್ಲದ್ರವ್ಯದಿಂದ ಧರ್ಮಮೂಲಕವಾಗಿಯೇ) ಈ ಸ್ಥಳವನ್ನು ನನ್ನ ಸ್ವಾಧೀನ ಮಾಡಿಕೊಳ್ಳಬೇಕು.'' ಹೀಗೆಂದು ಮತ್ತೆ ಮತ್ತೆ ಯೋಚಿಸುತ್ತಿದ್ದೆನು.

೧೩. ಕೆಟ್ಟ ಹೆಂಡತಿಯುಳ್ಳ ಪುರುಷನು ತನ್ನ ಚಿಂತೆಗೆ ಹೇಗೆ ಕೊನೆಯನ್ನೆ ಕಾಣಲಾರನೋ ಹಾಗೆ, ವಿಮರ್ಶೆ ಮಾಡುತ್ತ ಮಾಡುತ್ತ ನಾನೂ ನನ್ನ ಚಿಂತೆಯ ಕೊನೆಗಾಣಲಾರದವನಾದೆನು.

೧೪. ಎಲೈ ಪಾರ್ಥನೇ! ಇಷ್ಟರಲ್ಲಿ ಪುಣ್ಯಪ್ರದವಾದ ಮಹೀಸಾಗರ ಸಂಗಮದಲ್ಲಿ ಸ್ನಾನಮಾಡುವುದಕ್ಕಾಗಿ ಬಹುಜನ ಮುನಿಗಳು ಅಲ್ಲಿಗೆ ಬಂದರು.

೧೫–೧೬. ನಾನು ಅವರೆಲ್ಲರನ್ನೂ ಕುರಿತು, ''ನೀವೆಲ್ಲರೂ ಎಲ್ಲಿಂದ ಬಂದಿರಿ?'' ಎಂದು ಪ್ರಶ್ನೆ ಮಾಡಿದೆನು. ಅವರು ನನಗೆ ನಮಸ್ಕಾರ ಮಾಡಿ ಹೀಗೆ ಉತ್ತರ ಕೊಟ್ಟರು. ''ಎಲೈ ಮುನಿಯೇ! ಸೌರಾಷ್ಟ್ರ ದೇಶದಲ್ಲಿ ಧರ್ಮವರ್ಮನೆಂಬ ರಾಜನಿದ್ದಾನೆ. ಅವನೇ ಈ ದೇಶಕ್ಕೆ ದೊರೆಯು. ಅವನಾದರೋ ದಾನದ ತತ್ತ್ವವನ್ನು ತಿಳಿಕೊಳ್ಳಬಯಸಿ ಬಹು ವರ್ಷಗಳ ವರೆಗೆ ತಪಸ್ಸು ಮಾಡಿದನು.

ತತಸ್ತಂ ಪ್ರಾಹ ಖೇ ವಾಣೀ ಶ್ಲೋಕಮೇಕಂ ನೃಪ ಶೃಣು ।
ದ್ವಿಹೇತು ಷಡಧಿಷ್ಠಾನಂ ಷಡಂಗಂ ಚ ದ್ವಿಪಾಕಯುಕ್ ॥ ೧೭ ॥
ಚತುಃ ಪ್ರಕಾರಂ ತ್ರಿವಿಧಂ ತ್ರಿನಾಶಂ ದಾನಮುಚ್ಯತೇ ।
ಇತ್ಯೇಕಂ ಶ್ಲೋಕಮಾಭಾಷ್ಯ ಖೇ ವಾಣೀ ವಿರರಾಮ ಹ ॥ ೧೮ ॥
ಶ್ಲೋಕಸ್ಯಾರ್ಥಂ ನಾವಭಾಷೇ ಪೃಚ್ಛಮಾನಾಪಿ ನಾರದ ।
ತತೋ ರಾಜಾ ಧರ್ಮವರ್ಮಾ ಪಟಹೇನಾನ್ವಘೋಷಯತ್ ॥ ೧೯ ॥
ಯಸ್ತು ಶ್ಲೋಕಸ್ಯ ಚೈವಾಸ್ಯ ಲಬ್ಧಸ್ಯ ತಪಸಾ ಮಯಾ ।
ಕರೋತಿ ಸಮ್ಯಗ್ವ್ಯಾಖ್ಯಾನಂ ತಸ್ಯ ಚೈತದ್ದದಾಮ್ಯಹಂ ॥ ೨೦ ॥
ಗವಾಂ ಚ ಸಪ್ತನಿಯುತಂ ಸುವರ್ಣಂ ತಾವದೇವ ತು ।
ಸಪ್ತಗ್ರಾಮಾನ್ ಪ್ರಯಚ್ಛಾಮಿ ಶ್ಲೋಕವ್ಯಾಖ್ಯಾಂ ಕರೋತಿ ಯಃ ॥ ೨೧ ॥
ಪಟಹೇನೇತಿ ನೃಪತೇಃ ಶ್ರುತ್ವಾ ರಾಜ್ಞೋ ವಚೋ ಮಹತ್ ।
ಆಜಗ್ಮುರ್ಬಹು ದೇಶೀಯಾ ಬ್ರಾಹ್ಮಣಾಃ ಕೋಟಿಶೋ ಮುನೇ ॥ ೨೨ ॥

---

೧೭–೧೮. ಅನಂತರದಲ್ಲಿ ಆಕಾಶವಾಣಿಯು ಆತನನ್ನು ಕುರಿತು, ‘ಎಲೈ ನೃಪನೇ! ಕೇಳು; ಎಂದು ಒಂದು ಶ್ಲೋಕವನ್ನು ಹೇಳಿತು. ಇದೇ ಆ ಶ್ಲೋಕ. “ದಾನವು ಎರಡು ಹೇತುಗಳೂ, ಆರು ಅಧಿಷ್ಠಾನಗಳೂ, ಆರು ಅಂಗಗಳೂ, ಎರಡು ಪಾಕಗಳೂ, ನಾಲ್ಕು ಪ್ರಕಾರಗಳೂ, ಮೂರು ವಿಧಗಳೂ, ಮೂರು ನಾಶಗಳೂ ಉಳ್ಳದೆಂದು ಹೇಳಲ್ಪಡುತ್ತದೆ.’’ ಈ ಬಗೆಯಾಗಿ ಒಂದು ಶ್ಲೋಕವನ್ನು ಹೇಳಿ ಮುಂದೇನನ್ನೂ ಹೇಳದೆ ಆ ಆಕಾಶವಾಣಿಯು ಸುಮ್ಮನಾಯಿತು.

೧೯. ಎಲೈ ನಾರದನೇ! ಶ್ಲೋಕದ ಅರ್ಥವೇನೆಂದು ಪ್ರಶ್ನೆ ಮಾಡುತ್ತಿದ್ದರೂ ಆಕಾಶವಾಣಿಯು ಅದರ ಅರ್ಥವನ್ನು ತಿಳಿಯಹೇಳಲಿಲ್ಲ. ಬಳಿಕ ಧರ್ಮವರ್ಮ ಮಹಾರಾಜನು ಈ ರೀತಿ ಡಂಗೂರ ಹೊಡೆದು (ತನ್ನ ರಾಜ್ಯದಲ್ಲೆಡೆಗಳಲ್ಲಿಯೂ) ಸಾರಿಸಿದನು.

೨೦. “ನಾನು ತಪಸ್ಸುಮಾಡಿ ಪಡೆದಿರುವ ಈ ಶ್ಲೋಕಕ್ಕೆ ಯಾವಾತನು ಚೆನ್ನಾಗಿ ಅರ್ಥವು ಸ್ಫುಟವಾಗುವಂತೆ ವ್ಯಾಖ್ಯಾನ ಮಾಡುವನೋ ಆತನಿಗೆ ನಾನು ಇವುಗಳನ್ನು ಕೊಡುತ್ತೇನೆ.

೨೧. ಏಳು ನಿಯುತ (ಇಪ್ಪತ್ತುಸಾವಿರ) ಹಸುಗಳು, ಅಷ್ಟೇ ಸುವರ್ಣ (ಎಂದರೆ ಚಿನ್ನದ ನಾಣ್ಯ), ಮತ್ತು ಏಳು ಗ್ರಾಮಗಳು. ಇವಿಷ್ಟನ್ನೂ ಶ್ಲೋಕಕ್ಕೆ ವ್ಯಾಖ್ಯಾನ ಮಾಡುವಾತನಿಗೆ ಕೊಡುತ್ತೇನೆ.’’

೨೨. ಎಲೈ ಮುನಿಯೇ! ಹೀಗೆಂದು ಡಂಗೂರದ ಮೂಲಕ ಸಾರಿಸಿದ ದೊರೆಯ ಮಹತ್ತಾದ ಆ ಮಾತನ್ನು ಕೇಳಿ, ನಾನಾದೇಶಗಳ ಬ್ರಾಹ್ಮಣರು ಕೋಟಿಗಟ್ಟಲೆಯಾಗಿ ಅಲ್ಲಿಗೆ ಬಂದರು.

ಪುನರ್ದುರ್ಬೋಧವಿನ್ಯಾಸಃ ಶ್ಲೋಕಸ್ತೈರ್ವಿಪ್ರಪುಂಗವೈಃ ।
ಆಖ್ಯಾತುಂ ಶಕ್ಯತೇ ನೈವ ಗುಡೋ ಮೂಕೈರ್ಯಥಾ ಮುನೇ ॥ ೨೩ ॥
ವಯಂ ಚ ತತ್ರ ಯಾತಾಃಸ್ಮೋ ಧನಲೋಭೇನ ನಾರದ ।
ದುರ್ಬೋಧತ್ವಾನ್ನಮಸ್ಕೃತ್ಯ ಶ್ಲೋಕಂ ಚಾತ್ರ ಸಮಾಗತಾಃ ॥ ೨೪ ॥
ದುರ್ವ್ಯಾಖ್ಯೇಯಸ್ತ್ವಯಂ ಶ್ಲೋಕೋ ಧನಂ ಲಭ್ಯಂ ನ ಚೈವ ನಃ ।
ತೀರ್ಥಯಾತ್ರಾಂ ಕಥಂ ಯಾಮೀತ್ಯೇವಾಚಿಂತ್ಯಾತ್ರ ಚಾಗತಾಃ ॥ ೨೫ ॥
ಏವಂ ಫಾಲ್ಗುನ ತೇಷಾಂ ತು ವಚಃ ಶ್ರುತ್ವಾ ಮಹಾತ್ಮನಾಂ ।
ಅತೀವ ಸಂಪ್ರಹೃಷ್ಟೋಽಹಂ ತಾನ್ ವಿಸೃಜ್ಯೇತ್ಯಚಿಂತಯಂ ॥ ೨೬ ॥
ಅಹೋಪ್ರಾಪ್ತ ಉಪಾಯೋ ಮೇ ಸ್ಥಾನಪ್ರಾಪ್ತೌ ನ ಸಂಶಯಃ ।
ಶ್ಲೋಕಂ ವ್ಯಾಖ್ಯಾಯ ನೃಪತೇರ್ಲಪ್ಸ್ಯೇ ಸ್ಥಾನಂ ಧನಂ ತಥಾ ॥ ೨೭ ॥
ವಿದ್ಯಾಮೂಲ್ಯೇನ ನೈವಂ ಚ ಯಾಚಿತಃ ಸ್ಯಾತ್ ಪ್ರತಿಗ್ರಹಃ ।
ಸತ್ಯಮಾಹ ಪುರಾಣರ್ಷಿರ್ವಾಸುದೇವೋ ಜಗದ್ಗುರುಃ ॥ ೨೮ ॥

---

೨೩. ಬಂದರೂ ಗುಡವೆಂದು ಹೇಳಲು ಮೂಕರಿಗೆ ಹೇಗೆ ಶಕ್ಯವಾಗದೋ ಹಾಗೆ, ಅರಿಯುವುದಕ್ಕೆ ಬಹು ಕಷ್ಟವಾದ ವಿನ್ಯಾಸವುಳ್ಳ ಆ ಶ್ಲೋಕದ ಅರ್ಥವನ್ನು ಹೇಳುವುದಕ್ಕೆ ಆ ವಿಪ್ರಶ್ರೇಷ್ಠರಿಗೆ ಶಕ್ಯವಾಗಲೇ ಇಲ್ಲ.

೨೪. ನಾರದ ಮಹರ್ಷಿಯೇ! ನಾವೂ ಕೂಡ ಧನಲೋಭದಿಂದ ಅಲ್ಲಿಗೆ ಹೋದೆವು. ಶ್ಲೋಕದ ಅರ್ಥವನ್ನು ತಿಳಿಯಲು ಕಷ್ಟವಾದುದರಿಂದ ಆ ಶ್ಲೋಕಕ್ಕೆ ನಮಸ್ಕಾರ ಮಾಡಿ ಇಲ್ಲಿಗೆ ಬಂದು ಸೇರಿದ್ದೇವೆ.

೨೫. ಈ ಶ್ಲೋಕವು ವ್ಯಾಖ್ಯಾನ ಮಾಡಲರಿದಾದುದು. ನಮಗೆ ಹಣವನ್ನು ಪಡೆಯುವ ಲಭ್ಯವಿಲ್ಲ. 'ತೀರ್ಥಯಾತ್ರೆಗೆ ಹೇಗೆ ಹೋಗೋಣ' ಎಂದು ಯೋಚಿಸಿ ಇಲ್ಲಿಗೆ ಬಂದೆವು."

೨೬. ಅಯ್ಯಾ ಫಲ್ಗುನಾ! ಮಹಾತ್ಮರಾದ ಅವರ ಈ ಮಾತುಗಳನ್ನು ಕೇಳಿ ನಾನು ಬಹಳವಾಗಿ ಆನಂದಗೊಂಡೆನು. ಅವರನ್ನು ಕಳಿಸಿಕೊಟ್ಟು ಹೀಗೆ ಆಲೋಚಿಸಿದೆನು.

೨೭. "ಆಹಾ! ಈ ಸ್ಥಳವನ್ನು ದೊರಕಿಸಿಕೊಳ್ಳಲು ನನಗೆ ಈಗ ತಕ್ಕ ಉಪಾಯವು ಸಿಕ್ಕಿತು! ಶ್ಲೋಕಕ್ಕೆ ವ್ಯಾಖ್ಯಾನ ಮಾಡಿ (ಅರ್ಥ ಹೇಳಿ) ನೃಪತಿಯಿಂದ ಈ ಸ್ಥಳವನ್ನೂ ಜೊತೆಗೆ ಧನವನ್ನೂ ಪಡೆದುಕೊಳ್ಳುತ್ತೇನೆ.

೨೮. ಬೇಡಿ ತೆಗೆದುಕೊಂಡುದು ಪ್ರತಿಗ್ರಹವಾಗುವುದೇ ಹೊರತು, ವಿದ್ಯೆಯೆಂಬ ಬೆಲೆ ಕೊಟ್ಟು ತೆಗೆದುಕೊಂಡುದು ಪ್ರತಿಗ್ರಹವಾಗುವುದಿಲ್ಲ. ಇದು ಸತ್ಯವಾದುದು. ಈ ಸತ್ಯಸಂಗತಿಯನ್ನು ಜಗದ್ಗುರುವೂ, ಪುರಾಣಋಷಿಯೂ (ಬಹು ಪ್ರಾಚೀನನಾದ ಋಷಿ) ಆದ ವಾಸುದೇವನೇ ನುಡಿದಿದ್ದಾನೆ.

ಧರ್ಮಸ್ಯ ಯಸ್ಯ ಶ್ರದ್ಧಾ ಸ್ಯಾನ್ನ ಚ ಸಾ ನೈವ ಪೂರ್ಯತೇ ।
ಪಾಪಸ್ಯ ಯಸ್ಯ ಶ್ರದ್ಧಾ ಸ್ಯಾನ್ನ ಚ ಸಾಪಿ ನ ಪೂರ್ಯತೇ ॥ ೨೯ ॥
ಏವಂ ವಿಚಿಂತ್ಯ ವಿದ್ವಾಂಸಃ ಪ್ರಕುರ್ವಂತಿ ಯಥಾರುಚಿ
ಸತ್ಯಮೇತದ್ವಿಭೋರ್ವಾಕ್ಯಂ ದುರ್ಲಭೋಽಪಿ ಯಥಾ ಹಿ ಮೇ ॥ ೩೦ ॥
ಮನೋರಥೋಽಯಂ ಸಫಲಃ ಸಂಭೂತೋಽಂಕುರಿತಃ ಸ್ಫುಟಂ ।
ಏನಂ ಚ ದುರ್ವಿದಂ ಶ್ಲೋಕಮಹಂ ಜಾನಾಮಿ ಸುಸ್ಫುಟಂ ॥ ೩೧ ॥
ಅಮೂರ್ತೈಃ ಪಿತೃಭಿಃ ಪೂರ್ವಮೇಷ ಖ್ಯಾತೋ ಹಿ ಮೇ ಪುರಾ ।
ಏವಂ ಹರ್ಷಾನ್ವಿತಃ ಪಾರ್ಥ ಸಂಚಿಂತ್ಯಾಹಂ ತತೋ ಮುಹುಃ ॥ ೩೨ ॥
ಪ್ರಣಮ್ಯ ತೀರ್ಥಂ ಚಲಿತೋ ಮಹೀಸಾಗರ ಸಂಗಮಂ ।
ವೃದ್ಧಬ್ರಾಹ್ಮಣರೂಪೇಣ ತತೋಽಹಂ ಯಾತವಾನ್ನೃಪಂ ॥ ೩೩ ॥
ಇದಂ ಭಣಿತವಾನಸ್ಮಿ ಶ್ಲೋಕವ್ಯಾಖ್ಯಾಂ ನೃಪ ಶೃಣು ।
ಯತ್ತೇ ಪಟಹವಿಖ್ಯಾತಂ ದಾನಂ ಚ ಪ್ರಗುಣೀಕುರು ॥ ೩೪ ॥

---

೨೯. ಯಾರಿಗೆ ಧರ್ಮದಲ್ಲಿ ಶ್ರದ್ಧೆಯು ಉಂಟಾಗುವುದೇ ಇಲ್ಲವೋ ಅವನಿಗೆ ಆ ಶ್ರದ್ಧೆಯನ್ನು ಬಲಾತ್ಕಾರದಿಂದ ಎಂದಿಗೇ ಆಗಲಿ ತುಂಬಲಾಗುವುದಿಲ್ಲ. ಹಾಗೆಯೇ ಯಾರಿಗೆ ಪಾಪದಲ್ಲಿ ಶ್ರದ್ಧೆ ಹುಟ್ಟುವುದಿಲ್ಲವೋ ಅವನಿಗೆ ಅದನ್ನೂ ತುಂಬಲಾಗುವುದಿಲ್ಲ.

೩೦–೩೧. ಹೀಗೆ ಆಲೋಚಿಸಿ ವಿದ್ವಾಂಸರು ತಮಗೆ ರುಚಿಸಿದಂತೆ (ಇಷ್ಟ ಬಂದಹಾಗೆ) ಮಾಡುತ್ತಾರೆ. ವಿಭುವಿನ (ಆ ವಾಸುದೇವನ) ಈ ಮಾತು ಸತ್ಯವಾದುದು. ದುರ್ಲಭವಾದುದಾದರೂ ನನ್ನ ಈ ಮನೋರಥವು ಸಫಲವಾಯಿತು. ಹಾಗೆ ಸಫಲವಾಯಿತೆಂಬುದು ಸ್ಫುಟವಾಗಿ ನನ್ನ ಮನಸ್ಸಿಗೆ ಹೊಳೆಯುತ್ತಿದೆ. ಅರಿಯಲು ಕಷ್ಟವಾದ ಈ ಶ್ಲೋಕದ ಅರ್ಥವನ್ನು ನಾನು ಬಹು ಸ್ಫುಟವಾಗಿ ಬಲ್ಲೆನು.

೩೨–೩೩. ಅಮೂರ್ತರಾದ (ಎಂದರೆ ಆಕಾರರಹಿತರಾದ) ಪಿತೃಗಳಿಂದ ಪೂರ್ವದಲ್ಲಿ ಈ ಶ್ಲೋಕವು ನನಗೆ ಅರ್ಥವಾಗುವಂತೆ ಹೇಳಿದೆ.'' ಎಲೈ ಪಾರ್ಥನೇ! ಹೀಗೆ ನೆನೆದು ಹರ್ಷಗೊಂಡು, ಮತ್ತೆ ಮತ್ತೆ ಆ ಮಹೀಸಾಗರ ಸಂಗಮತೀರ್ಥಕ್ಕೆ ಪ್ರಣಾಮ ಮಾಡಿ ಅಲ್ಲಿಂದ ಹೊರಟು, ಬಳಿಕ ಬ್ರಾಹ್ಮಣನ ರೂಪವನ್ನು ತಾಳಿ ರಾಜನ ಬಳಿಗೆ ಹೋಗುವವನಾದೆನು.

೩೪. ಅಲ್ಲಿಗೆ ಹೋಗಿ ಆ ರಾಜನನ್ನು ಕಂಡು ಅವನನ್ನು ಕುರಿತು ಹೀಗೆ ನುಡಿದೆನು: "ಎಲೈ ರಾಜನೇ! ಕೇಳು. ನೀನು ಡಂಗೂರದ ಮೂಲಕ ಸಾರಿಸಿರುವ ಶ್ಲೋಕಕ್ಕೆ ವ್ಯಾಖ್ಯಾನ ಹೇಳುತ್ತೇನೆ. ನೀನು ಡಂಗೂರದ ಮೂಲಕ ಸಾರಿಸಿರುವ ದಾನವನ್ನು ಕೊಟ್ಟು ಸಾರ್ಥಕಪಡಿಸು.''

ಏವಮುಕ್ತೇ ನೃಪಃ ಪ್ರಾಹ ಪ್ರೋಚುರೇವಂ ಹಿ ಕೋಟಿಶಃ ।
ದ್ವಿಜೋತ್ತಮಾಃ ಪುನರ್ನಾಸ್ಯ ಪ್ರೋಕ್ತುಮರ್ಥೋಹಿ ಶಕ್ಯತೇ ॥ ೩೫ ॥
ಕೇ ದ್ವಿಹೇತೂ ಷಡಾಖ್ಯಾತಾನ್ಯಧಿಷ್ಠಾನಾನಿ ಕಾನಿ ಚ ।
ಕಾನಿ ಚೈವ ಷಡಂಗಾನಿ ಕೌ ದ್ವಿಪಾಕೌ ತಥಾ ಸ್ಮೃತೌ ॥ ೩೬ ॥
ಕೇ ಚ ಪ್ರಕಾರಾಶ್ಚತ್ವಾರಃ ಕಿಂಸ್ವಿತ್ತತ್ ತ್ರಿವಿಧಂ ದ್ವಿಜ ।
ತ್ರಯೋ ನಾಶಾಶ್ಚ ಕೇ ಪ್ರೋಕ್ತಾ ದಾನಸ್ಯೈತತ್ಸ್ಫುಟಂ ವದ ॥ ೩೭ ॥
ಸ್ಫುಟಾನ್ ಪ್ರಶ್ನಾನಿಮಾನ್ ಸಪ್ತ ಯದಿ ವಕ್ಷ್ಯಸಿ ಬ್ರಾಹ್ಮಣ ।
ತತೋ ಗವಾಂ ಸಪ್ತ ನಿಯುತಂ ಸುವರ್ಣಂ ತಾವದೇವ ತು ।
ಸಪ್ತಗ್ರಾಮಾಂಶ್ಚ ದಾಸ್ಯಾಮಿ ನೋ ಚೇದ್ಯಾಸ್ಯಸಿ ಸ್ವಂ ಗೃಹಂ ॥ ೩೮ ॥
ಇತ್ಯುಕ್ತವಚನಂ ಪಾರ್ಥ ಸೌರಾಷ್ಟ್ರಸ್ವಾಮಿನಂ ನೃಪಂ ।
ಧರ್ಮವರ್ಮಾಣಮುಸ್ತ್ವೇವಂ ಪ್ರಾವೋಚಮವಧಾರಯ ॥ ೩೯ ॥
ಶ್ಲೋಕವ್ಯಾಖ್ಯಾಂ ಸ್ಫುಟಾಂ ವಕ್ಷ್ಯೇ ದಾನ ಹೇತೂ ಚ ತೌ ಶೃಣು॥ ೪೦ ॥

---

೩೫. ನಾನು ಹೀಗೆನ್ನಲಾಗಿ, ಆ ನೃಪನಿಂತೆಂದನು: "ಕೋಟಿ ಕೋಟಿ ಸಂಖ್ಯೆಯಲ್ಲಿ ಬ್ರಾಹ್ಮಣೋತ್ತಮರು ಹೀಗೆಯೇ ಹೇಳಿದರು. ಆದರೆ ಇದರ ಅರ್ಥವನ್ನು ಮಾತ್ರ ಹೇಳಲು ಯಾರಿಗೂ ಶಕ್ಯವಾಗಲಿಲ್ಲ.

೩೬. ಎರಡು ಹೇತುಗಳು ಯಾವುವು? ಆರೆಂದು ಹೇಳಿರುವ ಅಧಿಷ್ಠಾನಗಳು ಯಾವವು? ಆರು ಅಂಗಗಳು ಯಾವುವು? ಹಾಗೆಯೇ ಎರಡೆಂದು ಹೇಳಲ್ಪಟ್ಟಿರುವ ಪಾಕಗಳು ಯಾವುವು?

೩೭. ನಾಲ್ಕು ಪ್ರಕಾರಗಳು ಯಾವುವು? ಎಲೈ ದ್ವಿಜನೇ! ಮೂರು ವಿಧಗಳು ಅವು ಯಾವುವು? ಮೂರು ನಾಶಗಳು ಯಾವುವು? ದಾನಕ್ಕೆ ಹೇಳಲ್ಪಟ್ಟಿರುವ ಈ ವಿವರವೆಲ್ಲವನ್ನೂ ಸ್ಫುಟವಾಗಿ ವ್ಯಾಖ್ಯಾನ ಮಾಡಿ ನನಗೆ ಹೇಳು.

೩೮. ಅಯ್ಯಾ ಬ್ರಾಹ್ಮಣ! ಈ ಏಳು ಪ್ರಶ್ನೆಗಳಿಗೂ ಸ್ಫುಟವಾಗಿ ನೀನು ಉತ್ತರ ಹೇಳಿದ್ದೇ ಆದರೆ, ಏಳು ನಿಯುತ ಗೋವುಗಳನ್ನೂ, ಅಷ್ಟೇ ಸುವರ್ಣವನ್ನೂ, ಏಳು ಗ್ರಾಮಗಳನ್ನೂ ಕೊಡುತ್ತೇನೆ. ಇಲ್ಲವಾದರೆ ನೀನು ಬಂದ ದಾರಿಯನ್ನು ಹಿಡಿದು ನಿನ್ನ ಮನೆಗೇ ಹಿಂದಿರುಗಿ ಹೋಗಬೇಕಾಗುತ್ತದೆ."

೩೯–೪೦. ಎಲೈ ಪಾರ್ಥನೇ! ಈ ರೀತಿ ನುಡಿದ ಸೌರಾಷ್ಟ್ರದೊಡೆಯನಾದ ಧರ್ಮವರ್ಮ ಮಹಾರಾಜನನ್ನು ಕುರಿತು ನಾನು ಇಂತೆಂದೆನು: "ಹಾಗೆಯೇ ಆಗಲಿ; ಕಿವಿಗೊಟ್ಟು ಲಾಲಿಸು. ಶ್ಲೋಕದ ವ್ಯಾಖ್ಯಾನವನ್ನು ಸ್ಫುಟವಾಗಿ ಹೇಳುತ್ತೇನೆ. ಮೊದಲು ಆ ಎರಡು ದಾನಹೇತುಗಳನ್ನೂ ಹೇಳುತ್ತೇನೆ ಕೇಳುವವನಾಗು.

ಅಲ್ಪತ್ವಂ ವಾ ಬಹುತ್ವಂ ವಾ ದಾನಸ್ಯಾಭ್ಯುದಯಾವಹಂ ।
ಶ್ರದ್ಧಾ ಶಕ್ತಿಶ್ಚ ದಾನಾನಾಂ ವೃದ್ಧ್ಯಕ್ಷಯಕರೇ ಹಿ ತೇ ॥ ೪೧ ॥
ತತ್ರ ಶ್ರದ್ಧಾವಿಷಯೇ ಶ್ಲೋಕಾ ಭವಂತಿ ।
ಕಾಯಕ್ಲೇಶೈಶ್ಚ ಬಹುಭಿರ್ನ ಚೈವಾರ್ಥಸ್ಯ ರಾಶಿಭಿಃ ॥ ೪೨ ॥
ಧರ್ಮಃ ಸಂಪ್ರಾಪ್ಯತೇ ಸೂಕ್ಷ್ಮಃ ಶ್ರದ್ಧಾಧರ್ಮೋಽದ್ಭುತಂ ತಪಃ ।
ಶ್ರದ್ಧಾ ಸ್ವರ್ಗಶ್ಚ ಮೋಕ್ಷಶ್ಚ ಶ್ರದ್ಧಾ ಸರ್ವಮಿದಂ ಜಗತ್ ॥ ೪೩ ॥
ಸರ್ವಸ್ವಂ ಜೀವಿತಂ ಚಾಪಿ ದದ್ಯಾದಶ್ರದ್ಧಯಾ ಯದಿ ।
ನಾಪ್ನುಯಾತ್ ಸ ಫಲಂ ಕಿಂಚಿಚ್ಛ್ರದ್ದಧಾನಸ್ತತೋ ಭವೇತ್ ॥ ೪೪ ॥
ಶ್ರದ್ಧಯಾ ಸಾಧ್ಯತೇ ಧರ್ಮೋ ಮಹದ್ಭಿರ್ನಾರ್ಥರಾಶಿಭಿಃ ।
ಅಕಿಂಚನಾ ಹಿ ಮುನಯಃ ಶ್ರದ್ಧಾವಂತೋ ದಿವಂ ಗತಾಃ ॥ ೪೫ ॥
ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।
ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶ್ರುಣು ॥ ೪೬ ॥

---

೪೧. ದಾನಕ್ಕೆ ಅಭ್ಯುದಯವನ್ನುಂಟುಮಾಡುವುದು ಅಲ್ಪತ್ವವೋ ಅಥವಾ ಬಹುತ್ವವೋ? ಶ್ರದ್ಧೆ ಮತ್ತು ಭಕ್ತಿ ಈ ಎರಡೇ ದಾನಗಳಿಗೆ ವೃದ್ಧಿಯನ್ನೂ ಅಕ್ಷಯವನ್ನೂ ಉಂಟುಮಾಡುವಂಥವು.

೪೨–೪೩. ಶ್ರದ್ಧೆಯ ವಿಷಯದಲ್ಲಿ ಈ ಶ್ಲೋಕಗಳಿವೆ: ಬಹು ಬಗೆಯಾದ ಕಾಯಕ್ಲೇಶಗಳಿಂದಲೂ (ಎಂದರೆ ದೇಹಕ್ಕೆ ಆಯಾಸವುಂಟುಮಾಡುವುದರಿಂದ) ಹಣದ ರಾಶಿಗಳಿಂದಲೂ ಧರ್ಮವನ್ನು ಪಡೆಯಲಾಗುವುದಿಲ್ಲವು. ಶ್ರದ್ಧಾ ಧರ್ಮವು ಬಹು ಸೂಕ್ಷ್ಮವಾದುದು. ಶ್ರದ್ಧೆಯೇ ಅದ್ಭುತವಾದ ತಪಸ್ಸು; ಶ್ರದ್ಧೆಯೇ ಸ್ವರ್ಗ; ಶ್ರದ್ಧೆಯೇ ಮೋಕ್ಷ; ಈ ಸಮಸ್ತ ಜಗತ್ತೂ ಶ್ರದ್ಧೆಯೇ (ಜಗತ್ತೆಲ್ಲವೂ ಶ್ರದ್ಧಾರೂಪವೇ ಆಗಿರುತ್ತದೆ).

೪೪. ಅಶ್ರದ್ಧೆಯಿಂದ (ಎಂದರೆ ಶ್ರದ್ಧೆಯಿಲ್ಲದೆ) ಸರ್ವಸ್ವವನ್ನೂ ಕೊಟ್ಟರೂ, ತನ್ನ ಪ್ರಾಣಗಳನ್ನು ಕೂಡ ಕೊಟ್ಟರೂ ಹಾಗೆ ಕೊಟ್ಟವನು ಅದರಿಂದ ಸ್ವಲ್ಪವೂ ಫಲವನ್ನು ಪಡೆಯುವುದಿಲ್ಲವು. ಆದುದರಿಂದ ಶ್ರದ್ಧೆಯುಳ್ಳವನಾಗಬೇಕು.

೪೫. ಶ್ರದ್ಧೆಯಿಂದ ಧರ್ಮವು ಸಾಧಿಸಲಾಗುತ್ತದೆ; ಮಹತ್ತಾದ ಧನ ರಾಶಿಗಳಿಂದಲ್ಲ. ಸ್ವಲ್ಪವೂ ಧನವಿಲ್ಲದವರಾದ ಮುನಿಗಳು ಶ್ರದ್ಧಾವಂತರಾಗಿ (ಆ ಶ್ರದ್ಧೆಯ ಪ್ರಭಾವದಿಂದ) ಸ್ವರ್ಗವನ್ನು ಪಡೆದರಷ್ಟೆ.

೪೬. ಶ್ರದ್ಧೆಯು ಮೂರು ವಿಧವಾದುದಾಗುವುದು. ಅದು ದೇಹಿಗಳಿಗೆ ಸ್ವಭಾವದಿಂದಲೇ ಹುಟ್ಟುತ್ತದೆ. ಸಾತ್ತ್ವಿಕಗುಣದ ಶ್ರದ್ಧೆ, ರಾಜಸಗುಣದ ಶ್ರದ್ಧೆ ಮತ್ತು ತಾಮಸಗುಣದ ಶ್ರದ್ಧೆ—ಇವೇ ಆ ಮೂರು ಬಗೆಗಳು. ಅದರ ವಿಚಾರವನ್ನು ಕೇಳುವವನಾಗು.

ಯುಜಂತೇ ಸಾತ್ತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ ।
ಪ್ರೇತಾನ್ ಭೂತ ಪಿಶಾಚಾಂಶ್ಚ ಯುಜಂತೇ ತಾಮಸಾ ಜನಾಃ ॥ ೪೭ ॥
ತಸ್ಮಾಚ್ಛ್ರದ್ಧಾವತೇ ಪಾತ್ರೇ ದತ್ತಂ ನ್ಯಾಯಾರ್ಜಿತಂ ಹಿ ಯತ್ ।
ತೇನೈವ ಭಗವಾನ್ ರುದ್ರಃ ಸ್ವಲ್ಪಕೇನಾಪಿ ತುಷ್ಯತಿ ॥ ೪೮ ॥
ಶಕ್ತಿವಿಷಯೇ ಚ ಶ್ಲೋಕಾ ಭವಂತಿ ।
ಕುಟುಂಬ ಭುಕ್ತವಸನಾದ್ದೇಯಂ ಯದತಿ ರಿಚ್ಯತೇ ।
ಮಧ್ವಾಸ್ವಾದೋ ವಿಷಂ ಪಶ್ಚಾದ್ದಾತುರ್ಧರ್ಮೋಽನ್ಯಥಾ ಭವೇತ್ ॥೪೯॥
ಶಕ್ತೇ ಪರಜನೇ ದಾತಾ ಸ್ವಜನೇ ದುಃಖಜೀವಿನಿ ।
ಮಧ್ವಾಪಾನ ವಿಷಾದಃ ಸ ಧರ್ಮಾಣಾಂ ಪ್ರತಿರೂಪಕಃ ॥ ೫೦ ॥
ಭೃತ್ಯಾನಾಮುಪರೋಧೇನ ಯತ್ಕರೋತ್ಯೌರ್ಧ್ವದೈಹಿಕಂ ।
ತದ್ಭವತ್ಯಸುಖೋದರ್ಕಂ ಜೀವತೋಽಸ್ಯ ಮೃತಸ್ಯ ಚ ॥ ೫೧ ॥
ಸಾಮಾನ್ಯಂ ಯಾಚಿತಂ ನ್ಯಾಸಮಾಧಿರ್ದಾರಾಶ್ಚ ದರ್ಶನಂ ।
ಅನ್ವಾಹಿತಂ ಚ ನಿಕ್ಷೇಪಃ ಸರ್ವಸ್ವಂ ಚಾನ್ವಯೇ ಸತಿ ॥ ೫೨ ॥

---

೪೭. ಸಾತ್ವಿಕರು ದೇವತೆಗಳನ್ನು ಪೂಜಿಸುತ್ತಾರೆ. ರಾಜಸರು ಯಕ್ಷರನ್ನೂ, ರಾಕ್ಷಸರನ್ನೂ ಪೂಜಿಸುತ್ತಾರೆ. ತಾಮಸರಾದ ಜನರು ಭೂತ, ಪ್ರೇತ, ಪಿಶಾಚಗಳನ್ನು ಪೂಜಿಸುತ್ತಾರೆ.

೪೮. ಆದುದರಿಂದ ಶ್ರದ್ಧಾವಂತನಾಗಿ ಯೋಗ್ಯನಾದ ಪಾತ್ರನಲ್ಲಿ ನ್ಯಾಯವಾಗಿ ಸಂಪಾದಿಸಿದ ದ್ರವ್ಯವನ್ನು ಸ್ವಲ್ಪವನ್ನೇ ದಾನಮಾಡಿದರೂ ಆ ಸ್ವಲ್ಪದಿಂದಲೇ ಭಗವಂತನಾದ ರುದ್ರನು ತೃಪ್ತನಾಗುತ್ತಾನೆ.

೪೯. ಶಕ್ತಿಯ ವಿಷಯದಲ್ಲಿ ಕೂಡ ಈ ಶ್ಲೋಕಗಳು ಹೇಳಲ್ಪಟ್ಟಿವೆ: ಕುಟುಂಬಕ್ಕೆ ಬೇಕಾದ ಅನ್ನ ಬಟ್ಟೆಗಳಿಗಿಂತ ದಾನಮಾಡುವ ದ್ರವ್ಯವು ಹೆಚ್ಚಾದಲ್ಲಿ ಆ ಬಳಿಕ ಆ ದಾನವು ದಾನಕರ್ತನಿಗೆ ಜೇನಿನಂತೆ ನಾಲಗೆಗೆ ರುಚಿಯಾಗಿರುವ ವಿಷವಾಗುತ್ತದೆ. ಧರ್ಮವೂ ಬೇರೆ ರೀತಿ ಆಗುತ್ತದೆ (ಎಂದರೆ, ಹಾಗೆ ದಾನ ಮಾಡುವುದು ಅಧರ್ಮವಾಗುತ್ತದೆ).

೫೦–೫೩. ಸ್ವಜನಗಳು ಕಷ್ಟಕ್ಕೊಳಗಾಗಿ ಜೀವಿಸುತ್ತಿರುವಾಗ ಶಕ್ತರಾದ ಪರಜನರಿಗೆ ದಾನಮಾಡುವಾತನು ಅತಿಯಾಗಿ ಮಧುಪಾನಮಾಡಿ ವಿಷಾದ ಪಡುವವನಂತಾಗುತ್ತಾನೆ. ಅವನು ಧರ್ಮಗಳಿಗೆ ವಿರೋಧಿಯೆನ್ನಿಸಿಕೊಳ್ಳುವನು. ಒತ್ತಾಯಕ್ಕೆ ಒಳಪಟ್ಟು ಭೃತ್ಯರಿಗೆ ಉತ್ತರಕ್ರಿಯೆಗಳನ್ನು ಮಾಡುವುದು ಅಸುಖವನ್ನು ಹೆಚ್ಚಿಸುವಂಥದಾಗುತ್ತದೆ. ಬದುಕಿರುವ ಈತನಿಗೂ ಮೃತನಾದ ಆತನಿಗೂ ದುಃಖವನ್ನುಂಟುಮಾಡುತ್ತದೆ. ಸಾಮಾನ್ಯ (ಎಂದರೆ ಹಲವರಿಗೆ ಸೇರಿದ ಮಧ್ಯಕದ ದ್ರವ್ಯ), ಯಾಚಿತ(ಎಂದರೆ ಬೇರೊಬ್ಬರು ಬೇಡಿರುವ ವಸ್ತು),

ಆಪತ್ಸ್ವಪಿ ನದೇಯಾನಿ ನವ ವಸ್ತೂನಿ ಪಂಡಿತೈಃ ।
ಯೋ ದದಾತಿ ಸಮೂಢಾತ್ಮಾ ಪ್ರಾಯಶ್ಚಿತ್ತೀಯತೇ ನರಃ ॥ ೫೩ ॥
ಇತಿ ತೇ ಗದಿತೌ ರಾಜನ್ ದ್ವೌ ಹೇತೂ ಶ್ರೂಯತಾಮತಃ ।
ಅಧಿಷ್ಠಾನಾನಿ ವಕ್ಷ್ಯಾಮಿ ಷಡೇವ ಶೃಣು ತಾನ್ಯಪಿ ॥ ೫೪ ॥
ಧರ್ಮಮರ್ಥಂ ಚ ಕಾಮಂ ಚ ವ್ರೀಡಾ ಹರ್ಷಭಯಾನಿಚ ।
ಅಧಿಷ್ಠಾನಾನಿ ದಾನಾನಾಂ ಷಡೇತಾನಿ ಪ್ರಚಕ್ಷತೇ ॥ ೫೫ ॥
ಪಾತ್ರೇಭ್ಯೋ ದೀಯತೇ ನಿತ್ಯಮನಪೇಕ್ಷ್ಯ ಪ್ರಯೋಜನಂ ।
ಕೇವಲಂ ಧರ್ಮಬುದ್ಧ್ಯಾ ಯದ್ಧರ್ಮದಾನಂ ತದುಚ್ಯತೇ ॥ ೫೬ ॥
ಧನಿನಂ ಧನಲೋಭೇನ ಲೋಭಯಿತ್ವಾರ್ಥಮಾಹರೇತ್ ।
ತದರ್ಥದಾನಮಿತ್ಯಾಹುಃ ಕಾಮದಾನಮತಃ ಶೃಣು ॥ ೫೭ ॥

---

ನ್ಯಾಸ (ರಕ್ಷಣೆಗಾಗಿ ಇಟ್ಟಿರುವಂಥದು), ಆಧಿ (ಅಡವು, ಭೋಗ್ಯ ಮುಂತಾದ ಬಾಧೆಗಳಿಗೆ ಒಳಪಟ್ಟಿರುವುದು), ಹೆಂಡರು, ದರ್ಶನ ಅಕಸ್ಮಾತ್ತಾಗಿ ಕಣ್ಣಿಗೆ ಬಿದ್ದ ದ್ರವ್ಯ ಅನ್ವಾಹಿತ (ಇತರರು ಸತ್ಕಾರ್ಯಕ್ಕಾಗಿ ಕೊಟ್ಟಿರುವ ದ್ರವ್ಯ) ನಿಕ್ಷೇಪ (ಹೂಳಿಟ್ಟಿರುವ ವಸ್ತು) ಮತ್ತು ಸರ್ವಸ್ವ (ತನಗಿರುವ ಸಮಸ್ತವೂ)— ಇವಿಷ್ಟೂ ಅನ್ವಯಿಸುವಂತಿರುವ ಪಕ್ಷದಲ್ಲಿ ಈ ಒಂಬತ್ತು ವಸ್ತುಗಳನ್ನು ಎಂಥ ಆಪತ್ತುಗಳಲ್ಲಿ ಕೂಡ ಪಂಡಿತರಾದವರು ಕೊಡತಕ್ಕುದಲ್ಲ. ಯಾವ ಮೂಢಾತ್ಮನಾದ ಮನುಷ್ಯನು ಇವನ್ನು ದಾನಮಾಡುತ್ತಾನೆಯೋ ಅವನು ಪ್ರಾಯಶ್ಚಿತ್ತಕ್ಕೆ ಒಳಪಡಿಸತಕ್ಕವನಾಗುತ್ತಾನೆ. (ಆದುದರಿಂದ ದಾನಮಾಡಬೇಕಾದರೆ ಈ ವಿಷಯಗಳೆಲ್ಲವನ್ನೂ ಚೆನ್ನಾಗಿ ಗಮನಿಸುತ್ತಿರಬೇಕು. ಇಲ್ಲವಾದರೆ ಪುಣ್ಯ ಬರುವುದಂತಿರಲಿ; ಬರುವ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದೂ ಕಷ್ಟವಾಗುವುದು.)

೫೪. ಎಲೈ ರಾಜನೇ! ಈ ಪ್ರಕಾರವಾಗಿ ಎರಡು ಹೇತುಗಳನ್ನೂ ನಿನಗೆ ವಿವರಿಸಿದುದಾಯಿತು. ಮುಂದೆ ಕೇಳುವವನಾಗು. ಇನ್ನು ಆರು ಅಧಿಷ್ಠಾನಗಳನ್ನು ಹೇಳುತ್ತೇನೆ ಕೇಳು.

೫೫. ಧರ್ಮ, ಅರ್ಥ, ಕಾಮ, ವ್ರೀಡಾ (ಲಜ್ಜೆ), ಹರ್ಷ ಮತ್ತು ಭಯ ಈ ಆರೂ ದಾನಗಳಿಗೆ ಅಧಿಷ್ಠಾನಗಳೆಂದು ಹೇಳುತ್ತಾರೆ.

೫೬—೫೭. ಸತ್ಪಾತ್ರರಾದವರಿಗೆ ಪ್ರಯೋಜನವನ್ನು ಅಪೇಕ್ಷಿಸದೆ ಕೇವಲ ಧರ್ಮಬುದ್ಧಿಯಿಂದ ನಿತ್ಯವೂ ಯಾವುದು ಕೊಡಲ್ಪಡುವುದೊ ಆ ದಾನವು ಧರ್ಮದಾನವೆನ್ನಿಸಿಕೊಳ್ಳುತ್ತದೆ. ಧನಲೋಭವುಳ್ಳವನಾಗಿ ಧನಿಕನಾದವನಿಗೆ ಲೋಭಹುಟ್ಟಿಸಿ ದ್ರವ್ಯವನ್ನು ಪಡೆಯುವುದು ಯಾವುದುಂಟೋ ಅದನ್ನು ಅರ್ಥದಾನವೆನ್ನುತ್ತಾರೆ. ಇನ್ನು ಕಾಮದಾನದ ಸ್ವರೂಪವನ್ನು ಕೇಳು.

ಪ್ರಯೋಜನಮುಪೇಕ್ಷ್ಯೈವ ಪ್ರಸಂಗಾದ್ಯತ್ ಪ್ರದೀಯತೇ ।
ಅನರ್ಹೇಷು ಸರಾಗೇಣ ಕಾಮದಾನಂ ತದುಚ್ಯತೇ ॥ ೫೮ ॥
ಸಂಸದಿ ವ್ರೀಡಯಾಽಽಶ್ರುತ್ಯ ಅರ್ಥಿಭ್ಯಃ ಪ್ರದದಾತಿ ಚ ।
ಪ್ರತಿದೀಯತೇ ಚ ಯದ್ದಾನಂ ವ್ರೀಡಾದಾನಮಿತಿ ಶ್ರುತಂ ॥ ೫೯ ॥
ದೃಷ್ಟ್ವಾ ಪ್ರಿಯಾಣಿ ಶ್ರುತ್ವಾ ವಾ ಹರ್ಷವದ್ಯತ್ ಪ್ರದೀಯತೇ ।
ಹರ್ಷದಾನಮಿತಿ ಪ್ರೋಕ್ತಂ ದಾನಂ ತದ್ಧರ್ಮಚಿಂತಕೈಃ ॥ ೬೦ ॥
ಆಕ್ರೋಶಾನರ್ಥಹಿಂಸಾನಾಂ ಪ್ರತೀಕಾರಾಯ ಯದ್ಭವೇತ್ ।
ದೀಯತೇಽನುಪಕರ್ತೃಭ್ಯೋ ಭಯದಾನಂ ತದುಚ್ಯತೇ ॥ ೬೧ ॥
ಪ್ರೋಕ್ತಾನಿ ಷಡಧಿಷ್ಠಾನಾನ್ಯಂಗಾನ್ಯಪಿ ಚ ಷಟ್ಛೃಣು ।
ದಾತಾ ಪ್ರತಿಗೃಹೀತಾ ಚ ಶುದ್ಧಿರ್ದೇಯಂ ಚ ಧರ್ಮಯುಕ್ ॥ ೬೨ ॥
ದೇಶಕಾಲೌ ಚ ದಾನಾನಾಮಂಗಾನ್ಯೇತಾನಿ ಷಡ್ವಿದುಃ ।
ಅಪರೋಗೀ ಚ ಧರ್ಮಾತ್ಮಾ ದಿತ್ಸುರವ್ಯಸನಃ ಶುಚಿಃ ॥ ೬೩ ॥

---

೫೮—೬೧. ಪ್ರಯೋಜನವನ್ನು ಅಪೇಕ್ಷಿಸಿಕೊಂಡೇ ಸಂದರ್ಭವಶದಿಂದ ಅನರ್ಹರಾದವರಿಗೆ ರಾಗಯುಕ್ತನಾದವನಿಂದ ಯಾವುದು ಕೊಡಲ್ಪಡುವುದೋ ಆ ದಾನವು ಕಾಮದಾನವೆಂದು ಹೇಳಲ್ಪಡುತ್ತದೆ. ಸಭೆಯಲ್ಲಿ ಲಜ್ಜೆಯಿಂದ ಕೊಡುವೆನೆಂದು ನುಡಿದು ಇಷ್ಟವಿಲ್ಲದಿದ್ದರೂ ಹೇಗೆ ಹೇಗೆಯೋ ಬೇಡುವವರಿಗೆ ಕೊಡುವುದೂ ಕೊಟ್ಟುದಕ್ಕೆ ಪ್ರತಿಯಾಗಿ ಕೊಡುವುದೂ ವ್ರೀಡಾದಾನವೆನ್ನಿಸಿ ಕೊಳ್ಳುತ್ತದೆ. ಸಂತೋಷ ವಿಷಯಗಳನ್ನು ಕಂಡಾಗಲಿ, ಪ್ರಿಯವಾದ ಸಮಾಚಾರವನ್ನು ಕೇಳಿಯಾಗಲಿ ಹರ್ಷಗೊಂಡು ಯಾವುದು ಕೊಡಲ್ಪಡುವುದೋ ಅದನ್ನು ಧರ್ಮಚಿಂತಕರು ಹರ್ಷದಾನವೆಂದು ಕರೆಯುತ್ತಾರೆ. ಆಕ್ರೋಶ, ಅನರ್ಥ, ಹಿಂಸೆ— ಇವುಗಳಿಗೆ ಪ್ರತೀಕಾರಮಾಡುವುದಕ್ಕಾಗಿ ಉಪಕಾರ ಮಾಡುವವರಲ್ಲದವರಿಗೆ ಯಾವುದು ಕೊಡಲ್ಪಡುವುದೋ ಅದು ಭಯದಾನವೆನ್ನಲ್ಪಡುತ್ತದೆ.

೬೨—೬೬. ಹೀಗೆ ದಾನದ ಆರು ಅಧಿಷ್ಠಾನಗಳನ್ನು ಹೇಳಿ ಆಯಿತು. ಆರು ಅಂಗಗಳನ್ನೂ ಕೇಳುವವನಾಗು. ದಾತ (ದಾನಕೊಡುವವನು), ಪ್ರತಿಗೃಹೀತ (ತೆಗೆದುಕೊಳ್ಳುವವನು), ಶುದ್ಧಿ ಧರ್ಮಯುಕ್ತವಾದ ದೇಯ (ಕೊಡಬೇಕಾದ ವಸ್ತು), ದೇಶ ಮತ್ತು ಕಾಲ ಈ ಆರನ್ನೂ ದಾನಕ್ಕೆ ಅಂಗಗಳೆಂದು ತಿಳಿಯುತ್ತಾರೆ. ರೋಗವಿಲ್ಲದವನೂ, ಧರ್ಮಾತ್ಮನೂ, ಕೊಡಬೇಕೆಂಬ ಅಪೇಕ್ಷೆಯುಳ್ಳವನೂ, ದ್ಯೂತ ಮುಂತಾದ ವ್ಯಸನಗಳಿಲ್ಲದವನೂ, ಶುಚಿಯೂ, ನಿಂದ್ಯವಲ್ಲದಿರುವ ಜೀವನೋಪಾಯ ಸಾಧನೆಯ ಉದ್ಯೋಗವುಳ್ಳವನೂ ಆದವನೇ ಉತ್ತಮನಾದ ದಾತನು. ಈ ಆರುಗುಣಗಳಿಂದ ದಾತನು ಶ್ರೇಷ್ಠನಾಗುತ್ತಾನೆ.

ಅನಿಂದ್ಯಾ ಜೀವಕರ್ಮಾ ಚ ಷಡ್ಭಿರ್ದಾತಾ ಪ್ರಶಸ್ಯತೇ ।
ಅನೃಜುಶ್ಚಾಶ್ರದ್ದಧಾನೋಽಶಾಂತಾತ್ಮಾ ಧೃಷ್ಟಭೀರುಕಃ ॥ ೬೪ ॥
ಅಸತ್ಯಸಂಧೋ ನಿದ್ರಾಲುರ್ದಾತಾಽಯಂ ತಾಮಸೋಽಧಮಃ ।
ತ್ರಿಶುಕ್ಲಃ ಕೃಶವೃತ್ತಿಶ್ಚ ಘೃಣಾಲುಃ ಸಕಲೇಂದ್ರಿಯಃ ॥ ೬೫ ॥
ವಿಮುಕ್ತೋ ಯೋನಿದೋಷೇಭ್ಯೋ ಬ್ರಾಹ್ಮಣಃ ಪಾತ್ರಮುಚ್ಯತೇ ।
ಸೌಮುಖ್ಯಾದಭಿ ಸಂಪ್ರೀತಿರರ್ಥಿನಾಂ ದರ್ಶನೇ ಸದಾ ।
ಸತ್ಕೃತಿಶ್ಚಾನಸೂಯಾ ಚ ತದಾ ಶುದ್ಧಿರಿತಿ ಸ್ಮೃತಾ ॥ ೬೬ ॥
ಅಪರಾಬಾಧಮಕ್ಲೇಶಂ ಸ್ವಯತ್ನೇನಾರ್ಜಿತಂ ಧನಂ ।
ಸ್ವಲ್ಪಂ ವಾ ವಿಪುಲಂ ವಾಪಿ ದೇಯಮಿತ್ಯಭಿಧೀಯತೇ ॥ ೬೭ ॥
ತೇನಾಪಿ ಕಿಲ ಧರ್ಮೇಣ ಉದ್ದಿಶ್ಯ ಕಿಲ ಕಿಂಚನ ।
ದೇಯಂ ತದ್ಧರ್ಮಯುಗತಿ ಶೂನ್ಯೇ ಶೂನ್ಯಂ ಫಲಂ ಮತಂ ॥ ೬೮ ॥
ನ್ಯಾಯೇನ ದುರ್ಲಭಂ ದ್ರವ್ಯಂ ದೇಶೇ ಕಾಲೇಪಿವಾ ಪುನಃ ।
ದಾನಾರ್ಹೌ ದೇಶಕಾಲೌ ತೌ ಸ್ಯಾತಾಂ ಶ್ರೇಷ್ಠೌ ನ ಚಾನ್ಯಥಾ ॥ ೬೯ ॥

---

ಋಜುವಲ್ಲದವನು (ಸರಳವಾಗಿರದ ವಕ್ರಸ್ವಭಾವದವನು), ಶ್ರದ್ಧೆಯಿಲ್ಲದವನು, ಅಶಾಂತಿಯಿಂದ ಕೂಡಿದವನು, ಧೃಷ್ಟನೂ (ವಿನಯವನ್ನು ಬಿಟ್ಟು ದುಡುಕಿ ನಡೆಯುವವನು), ಭೀರುವೂ ಆದವನು (ಪುಕ್ಕಲ), ಸತ್ಯಸಂಧನಲ್ಲದವನು; ನಿದ್ರಾಳು ಈರೀತಿ ತಾಮಸನಾಗಿರುವ ದಾತನು ಅಧಮನೆನ್ನಿಸಿಕೊಳ್ಳುವನು. ತ್ರಿಶುಕ್ಲನಾಗಿ (ಮನಸ್ಸು, ಮಾತು, ಕೆಲಸಗಳಿಂದ ಶುದ್ಧನಾಗಿ) ಕೃಶವಾದ ವೃತ್ತಿಯುಳ್ಳವನೂ (ಎಂದರೆ ಆದಾಯ ಕಡಮೆಯಾಗಿರುವ), ದಯಾಪರನೂ, ಇಂದ್ರಿಯಗಳನ್ನು ಗೆದ್ದವನೂ, ಯೋನಿದೋಷಗಳಿಲ್ಲದವನೂ ಆದ ಬ್ರಾಹ್ಮಣನು ಪಾತ್ರನೆನ್ನಲ್ಪಡುತ್ತಾನೆ. ಅರ್ಥಿಗಳ ದರ್ಶನಕಾಲದಲ್ಲಿ ಯಾವಾಗಲೂ ಒಳ್ಳೆಯ ನಗುಮುಖದಿಂದ ಇದ್ದು ಪ್ರೀತಿ ತೋರಿಸುವುದು, ಸತ್ಕಾರಮಾಡುವುದು, ಅಸೂಯೆಯಿಲ್ಲದಿರುವುದು—ಇದೇ ಶುದ್ಧಿಯೆಂದು ಹೆಸರುಗೊಳ್ಳುತ್ತದೆ.

೬೭. ಪರರಿಗೆ ಯಾವರೀತಿಯಾಗಿಯೂ ಬಾಧೆಯುಂಟುಮಾಡದಿರುವುದೂ, ಕ್ಲೇಶವಿಲ್ಲದುದೂ, ಸ್ವಂತ ಪ್ರಯತ್ನದಿಂದ ಸಂಪಾದಿಸಿದುದೂ ಆದ ಧನವು ಸ್ವಲ್ಪವೇ ಆಗಲಿ, ಬಹಳವೇ ಆಗಲಿ ' ದೇಯ 'ವೆನ್ನಿಸಿಕೊಳ್ಳುತ್ತದೆ.

೬೮. ಧರ್ಮಸಮ್ಮತವಾಗಿ ಕೊಡಬೇಕೆಂದು ಉದ್ದೇಶಮಾಡಿಕೊಂಡು ಯಾವುದನ್ನಾದರೂ ದಾನಮಾಡುವುದು ಧರ್ಮಯುಕ್ತವಾಗುವುದು. ಅಂಥ ಉದ್ದೇಶವಿಲ್ಲದುದಾದರೆ ಫಲವೂ ಶೂನ್ಯವಾಗುವುದು.

೬೯. ಒಂದು ಸ್ಥಳದಲ್ಲಿ ಅಥವಾ ಕಾಲದಲ್ಲಿ ದುರ್ಲಭವಾದ ದ್ರವ್ಯವನ್ನು ನ್ಯಾಯವಾಗಿ ಕೊಡುವುದಾದರೆ ಆ ದೇಶಕಾಲಗಳೇ ದಾನಕ್ಕೆ ಅರ್ಹವಾದ ದೇಶ

ಷಡಂಗಾನೀತಿ ಚೋಕ್ತಾನಿ ದ್ವೌ ಚ ಪಾಕಾವತಃ ಶೃಣು ।
ದ್ವೌಪಾಕೌ ದಾನಿನೋ ಪ್ರಾಹುಃ ಪರತ್ರಾಥ ತ್ವಿಹೋಚ್ಯತೇ ॥ ೭೦ ॥
ಸದ್ಭ್ಯೋ ಯದ್ದೀಯತೇ ಕಿಂಚಿತ್ ತತ್ ಪರತ್ರೋಪತಿಷ್ಠತಿ ।
ಅಸತ್ಸು ದೀಯತೇ ಕಿಂಚಿತ್ ತದ್ದಾನಮಿಹ ಭುಜ್ಯತೇ ॥ ೭೧ ॥
ದ್ವೌ ಪಾಕಾವಿತಿ ನಿರ್ದಿಷ್ಟೌ ಪ್ರಕಾರಾಂಶ್ಚತುರಃ ಶೃಣು ।
ಧ್ರುವಮಾಹುಸ್ತ್ರಿಕಂ ಕಾಮ್ಯಂ ನೈಮಿತ್ತಿಕಮಿತಿ ಕ್ರಮಾತ್ ॥ ೭೨ ॥
ವೈದಿಕೋ ದಾನಮಾರ್ಗೋಽಯಂ ಚತುರ್ಧಾ ವರ್ಣ್ಯತೇ ದ್ವಿಜೈಃ ।
ಪ್ರಪಾರಾಮ ತಡಾಗಾದಿ ಸರ್ವಕಾಮಫಲಂ ಧ್ರುವಮ್ ॥ ೭೩ ॥
ತದಾಹುಸ್ತ್ರಿಕಮಿತ್ಯಾಹುರ್ದೀಯತೇ ಯದ್ದಿನೇ ದಿನೇ ।
ಅಪತ್ಯವಿಜಯೈಶ್ವರ್ಯ ಸ್ತ್ರೀಬಾಲಾರ್ಥಂ ಪ್ರದೀಯತೇ ॥ ೭೪ ॥

---

ಕಾಲಗಳಾಗುತ್ತವೆ. ಅಂಥ ದೇಶಕಾಲಗಳೇ ಶ್ರೇಷ್ಠವಾಗುವುವು. ಬೇರೆಯಾದರೆ ಅಲ್ಲ.

೭೦. ಇಂತು ಷಡಂಗಗಳನ್ನು ವಿವರಿಸಿದ್ದಾಯಿತು. ಇನ್ನು ಮುಂದೆ ಎರಡು ಪಾಕಗಳ ವಿಷಯವನ್ನು ಕೇಳು. ದಾನದಿಂದ ಉಂಟಾಗುವುದು ಎರಡು ಪಾಕಗಳೆಂದು ಹೇಳುತ್ತಾರೆ. ಪರಲೋಕದಲ್ಲಿ ಫಲವಾಗುವುದು ಮತ್ತು ಇಲ್ಲಿ ಫಲವಾಗುವುದು—ಎಂಬಿವೇ ಆ ಪಾಕಗಳು.

೭೧. ಸತ್ಪುರುಷರಿಗೆ ಅಲ್ಪವೋ ಸ್ವಲ್ಪವೋ ಯಾವುದು ಕೊಡಲ್ಪಡುವುದೋ ಅದು ಪರಲೋಕದಲ್ಲಿ ಫಲಕೊಡುತ್ತದೆ. ಅಸತ್ಪುರುಷರಿಗೆ (ಕೆಟ್ಟವರಿಗೆ) ಕೊಟ್ಟುದು ಯಾವುದೋ ಆ ದಾನದ ಫಲವು ಇಲ್ಲಿಯೇ ಅನುಭವಿಸಲ್ಪಡುತ್ತದೆ.

೭೨. ಇಂತೆಂದು ಎರಡು ಪಾಕಗಳನ್ನು ನಿರ್ದೇಶಿಸಲಾಯಿತು. ಇನ್ನು ನಾಲ್ಕು ಪ್ರಕಾರಗಳನ್ನು ಕೇಳುವವನಾಗು. ಆ ಪ್ರಕಾರಗಳು ಕ್ರಮವಾಗಿ ಧ್ರುವ, ಆಹುಸ್ತ್ರಿಕ, ಕಾಮ್ಯ ಮತ್ತು ನೈಮಿತ್ತಿಕ ಎಂದಾಗುತ್ತವೆ.

೭೩. ವೈದಿಕವಾದ (ವೇದದಲ್ಲಿ ಹೇಳಲ್ಪಟ್ಟಿರುವ) ಈ ದಾನಮಾರ್ಗವು ದ್ವಿಜರಿಂದ ನಾಲ್ಕು ಪ್ರಕಾರವಾಗಿ ವರ್ಣಿಸಲ್ಪಡುತ್ತದೆ. ಅರವಟ್ಟಿಗೆ, ತೋಟ (ತೋಪು), ಕೆರೆ ಮೊದಲಾಗಿ ಸರ್ವರ ಇಷ್ಟಾರ್ಥವನ್ನೂ ಸಲ್ಲಿಸುವಂಥ ವಸ್ತುಗಳ ದಾನವೇ ಧ್ರುವದಾನವು.

೭೪. ಮಕ್ಕಳು, ವಿಜಯ, ಐಶ್ವರ್ಯ ಇವುಗಳನ್ನು ಬಯಸಿಕೊಂಡೂ ಸ್ತ್ರೀ ಬಾಲಕರಿಗಾಗಿಯೂ ದಿನದಿನವೂ ಮಾಡುವ ದಾನವನ್ನು ಆಹುಸ್ತ್ರಿಕವೆನ್ನುತ್ತಾರೆ.

ಇಚ್ಛಾಸಂಸ್ಥಂ ಚ ಯದ್ದಾನಂ ಕಾಮ್ಯಮಿತ್ಯಭಿಧೀಯತೇ ।
ಕಾಲಾಪೇಕ್ಷಂ ಕ್ರಿಯಾಪೇಕ್ಷಂ ಗುಣಾಪೇಕ್ಷಮಿತಿ ಸ್ಮೃತೌ ॥ ೭೫ ॥
ತ್ರಿಧಾ ನೈಮಿತ್ತಿಕಂ ಪ್ರೋಕ್ತಂ ಸದಾ ಹೋಮವಿವರ್ಜಿತಂ ।
ಇತಿ ಪ್ರೋಕ್ತಾಃ ಪ್ರಕಾರಾಸ್ತೇ ತ್ರೈವಿಧ್ಯಮಭಿಧೀಯತೇ ॥ ೭೬ ॥
ಅಷ್ಟೋತ್ತಮಾನಿ ಚತ್ವಾರಿ ಮಧ್ಯಮಾನಿ ವಿಧಾನತಃ ।
ಕಾನೀಯಸಾನಿ ಶೇಷಾಣಿ ತ್ರಿವಿಧತ್ವಮಿದಂ ವಿದುಃ ॥ ೭೭ ॥
ಗೃಹಪ್ರಾಸಾದ ವಿದ್ಯಾ ಭೂಗೋಕೂಪ ಪ್ರಾಣಹಾಟಕಂ ।
ಏತಾನ್ಯುತ್ತಮ ದಾನಾನಿ ಉತ್ತಮದ್ರವ್ಯ ದಾನತಃ ॥ ೭೮ ॥
ಅನ್ನಾರಾಮಂ ಚ ವಾಸಾಂಸಿ ಹಯಪ್ರಭೃತಿ ವಾಹನಂ ।
ದಾನಾನಿ ಮಧ್ಯಮಾನೀತಿ ಮಧ್ಯಮದ್ರವ್ಯದಾನತಃ ॥ ೭೯ ॥
ಉಪಾನಚ್ಛತ್ರ ಪಾತ್ರಾದಿ ದಧಿಮಧ್ವಾಸನಾನಿ ಚ ॥ ೮೦ ॥

---

೭೫–೭೬. ಮನಸ್ಸಿನಲ್ಲಿ ಯಾವುದಾದರೊಂದು ಇಚ್ಛೆಯನ್ನಿಟ್ಟುಕೊಂಡು ಮಾಡತಕ್ಕ ದಾನವು ಕಾಮ್ಯದಾನವೆಂದು ಹೇಳಲ್ಪಡುತ್ತದೆ. ಕಾಲಾಪೇಕ್ಷ ವಾದುದು (ಒಂದು ಗೊತ್ತಾದ ಕಾಲವನ್ನು ಅಪೇಕ್ಷಿಸುವಂಥದು) ಕ್ರಿಯಾಪೇಕ್ಷ ವಾದುದು (ಕ್ರಿಯೆಯನ್ನು ಅಪೇಕ್ಷಿಸುವಂಥದು) ಮತ್ತು ಗುಣಾಪೇಕ್ಷವಾದುದು ಎಂದು ನೈಮಿತ್ತಿಕದಾನವು ಮೂರು ಬಗೆಯಾಗಿ ಹೇಳಲ್ಪಟ್ಟಿದೆ. ಈ ನೈಮಿತ್ತಿಕ ದಾನಕ್ಕೆ ಯಾವಾಗಲೂ ಹೋಮವಿಲ್ಲ. ಹೀಗೆ ನಿನಗೆ ದಾನಪ್ರಕಾರಗಳನ್ನು ಹೇಳಲಾಯಿತು. ಇನ್ನು ಮುಂದೆ ತ್ರೈವಿಧ್ಯವನ್ನು (ಮೂರು ವಿಧವಾಗಿರುವುದನ್ನು) ವಿವರಿಸುತ್ತೇನೆ.

೭೭. ಎಂಟು ಉತ್ತಮದಾನಗಳು; ನಾಲ್ಕು ಮಧ್ಯಮದಾನಗಳು, ಉಳಿದವು ಕನಿಷ್ಠದಾನಗಳು ವಿಧಾನವನ್ನನುಸರಿಸಿ ಈ ರೀತಿ ದಾನದಲ್ಲಿ ತ್ರಿವಿಧತ್ವ ವನ್ನು ತಿಳಿಯುತ್ತಾರೆ.

೭೮. ಮನೆ ಪ್ರಾಸಾದ (ದೇವಾಲಯ, ಭವ್ಯಮಂದಿರ), ವಿದ್ಯೆ, ಭೂಮಿ, ಗೋವು, ಬಾವಿ, ಪ್ರಾಣ, ಚಿನ್ನ—ಇವನ್ನು ಕೊಡುವುದೇ ಉತ್ತಮದಾನಗಳು. ಉತ್ತಮ ದ್ರವ್ಯವನ್ನು ಕೊಡುವುದರಿಂದ ಇವು ಉತ್ತಮದಾನಗಳೆನ್ನಿಸಿ ಕೊಳ್ಳುತ್ತವೆ.

೭೯. ಅನ್ನ, ತೋಟ, ಬಟ್ಟೆ, ಕುದುರೆ ಮೊದಲಾದ ವಾಹನ ಇವೇ ಮಧ್ಯಮದಾನಗಳು, ಮಧ್ಯಮ ದ್ರವ್ಯಗಳನ್ನು ಕೊಡುವುದರಿಂದ ಇವು ಮಧ್ಯಮ ದಾನಗಳಾಗುತ್ತವೆ.

೮೦–೮೨. ಎಕ್ಕಡ (ಪಾದರಕ್ಷೆ), ಛತ್ರಿ, ಪಾತ್ರೆ ಮೊದಲಾದುದು, ಮೊಸರು, ಮಧು (ಜೇನು ತುಪ್ಪ), ಪೀಠಗಳು, ದೀಪ, ಕಟ್ಟಿಗೆ, ಕಲ್ಲು, ಇವೇ

ದೀಪಕಾಷ್ಠೋಪಲಾದೀನಿ ಚರಮಂ ಬಹುವಾರ್ಷಿಕಂ ।
ಇತಿ ಕಾನೀಯಸಾನ್ಯಾಹುರ್ದಾನನಾಶತ್ರಯಂ ಶೃಣು ॥ ೭೧ ॥
ಯದ್ದತ್ವಾ ತಪ್ಯತೇ ಪಶ್ಚಾದಾಸುರಂ ತದ್ವೃಥಾ ಮತಂ ।
ಅಶ್ರದ್ಧಯಾ ಯದ್ದದಾತಿ ರಾಕ್ಷಸಂ ಸ್ಯಾದ್ವೃಥೈವ ತತ್ ॥ ೭೨ ॥
ಯಚ್ಚಾಕ್ರುಶ್ಯ ದದಾತ್ಯಂಗ ದತ್ವಾ ವಾಕ್ರೋಶತಿ ದ್ವಿಜಂ ।
ಪೈಶಾಚಂ ತದ್ವೃಥಾ ದಾನಂ ದಾನನಾಶಾಸ್ತ್ರಯಸ್ತ್ವಿಮಾ ॥ ೭೩ ॥
ಇತಿ ಸಪ್ತಪದೈರ್ಬದ್ಧಂ ದಾನಮಾಹಾತ್ಮ್ಯಮುತ್ತಮಂ ।
ಶಕ್ತ್ಯಾ ತೇ ಕೀರ್ತಿತಂ ರಾಜನ್ ಸಾಧು ವಾಽಸಾಧು ವಾ ವದ ॥ ೭೪ ॥

ಧರ್ಮವರ್ಮೋವಾಚ :—

ಅದ್ಯಮೇ ಸಫಲಂ ಜನ್ಮ ಅದ್ಯ ಮೇ ಸಫಲಂ ತಪಃ ।
ಅದ್ಯ ತೇ ಕೃತಕೃತ್ಯೋಽಸ್ಮಿ ಕೃತಃ ಕೃತಿಮತಾಂ ವರ ॥ ೭೫ ॥
ಪಠಿತ್ವಾ ಸಕಲಂ ಜನ್ಮ ಬ್ರಹ್ಮಚಾರೀ ಯಥಾ ವೃಥಾ ।
ಬಹುಕ್ಲೇಶಾತ್ ಪ್ರಾಪ್ತಭಾರ್ಯಾ ಸಾ ವೃದಾಽಪ್ರಿಯವಾದಿನೀ ॥ ೭೬ ॥

---

ಮೊದಲಾದುವು ಕನಿಷ್ಠ ದಾನಗಳೆಂದು ಹೇಳುತ್ತಾರೆ. ಇನ್ನು ಮೂರು ದಾನನಾಶಗಳನ್ನಾಲಿಸು. ಕೊಟ್ಟು ಆಮೇಲೆ 'ಅಯ್ಯೋ, ಕೊಟ್ಟೆನಲ್ಲಾ' ಎಂದು ಸಂಕಟಪಟ್ಟುಕೊಳ್ಳುವುದಾದರೆ ಅದು ಅಸುರದಾನವೆನ್ನಿಸುವುದು. ಆ ದಾನವು ನಿಷ್ಫಲವಾಗುವುದು. ಅಶ್ರದ್ಧೆಯಿಂದ ಯಾವುದು ಕೊಡಲ್ಪಡುವುದೋ ಅದು ಕೂಡ ವ್ಯರ್ಥವೇ ಸರಿ.

೭೩. ಆಕ್ರೋಶಗೊಂಡು (ಅಂದು ಆಡಿ) ದಾನ ಕೊಡುವುದೂ ಅಥವಾ ಕೊಟ್ಟು ಆಮೇಲೆ ಅಂದು ಆಡಿ ಆಕ್ರೋಶಮಾಡುವುದೂ ಪೈಶಾಚ ದಾನವೆನ್ನಲ್ಪಡುವುದು; ಆ ದಾನವೂ ವ್ಯರ್ಥವಾಗುವುದು. ಇವೇ ಮೂರು ದಾನನಾಶಗಳು.

೭೪. ಎಲೈ ರಾಜನೇ! ಈ ರೀತಿಯಾಗಿ ಏಳು ಪದ (ಅವಯವ)ಗಳಿಂದ ಕೂಡಿದ್ದಾಗಿರುವ ಉತ್ತಮವಾದ ದಾನ ಮಹಾತ್ಮೆಯನ್ನು ನನಗೆ ಶಕ್ತಿಯಿದ್ದ ಮಟ್ಟಿಗೂ ನಿನಗೆ ವಿವರಿಸಿದ್ದೇನೆ. ಇದು ಸಾಧುವೋ ಅಸಾಧುವೋ ಹೇಳು."

೭೫-೭೬. ನನ್ನ ಈ ಮಾತುಗಳನ್ನು ಕೇಳಿ ಧರ್ಮವರ್ಮನು ಇಂತೆಂದನು: "ಈಗ ನನ್ನ ಜನ್ಮವು ಸಫಲವಾಯಿತು. ಈಗ ನನ್ನ ತಪಸ್ಸು ಸಫಲವಾಯಿತು. ಅಯ್ಯಾ, ಕೃತಿಗಳಲ್ಲಿ ಶ್ರೇಷ್ಠನಾದವನೇ! ಈಗ ನಿನ್ನಿಂದ ನಾನು ಕೃತಕೃತ್ಯನಾಗಿ ಮಾಡಲ್ಪಟ್ಟೆನು. ಜನ್ಮವೆಲ್ಲಾ ಅಧ್ಯಯನವನ್ನೇ ಮಾಡುತ್ತಿರುವ ಬ್ರಹ್ಮಚಾರಿಯ ಬಾಳು ಹೇಗೆ ವ್ಯರ್ಥವೋ, ಹಾಗೆಯೇ ಬಹು ಕ್ಲೇಶಪಟ್ಟು ಹೆಂಡತಿಯನ್ನು ಮದುವೆಯಾಗಲು ಆಕೆಯು ಅಪ್ರಿಯವಾದಿನಿಯಾದರೆ ಆ ಹೆಂಡತಿಯೂ ವ್ಯರ್ಥವೇ ಸರಿ.

ಕ್ಲೇಶೇನ ಕೃತ್ವಾ ಕೂಪಂ ವಾ ಸ ಚ ಕ್ಷಾರೋದಕೋ ವೃಥಾ ।
ಬಹುಕ್ಲೇಶೈರ್ಜನ್ಮ ನೀತಂ ವಿನಾ ಧರ್ಮಂ ತಥಾ ವೃಥಾ ॥ ೮೭ ॥
ಏವಂ ಮೇ ಯದ್ವೃಥಾ ನಾಮ ಜಾತಂ ತತ್ ಸಫಲಂ ತ್ವಯಾ ।
ಕೃತಂ ತಸ್ಮಾನ್ನಮಸ್ತುಭ್ಯಂ ದ್ವಿಜೇಭ್ಯಶ್ಚ ನಮೋನಮಃ ॥ ೮೮ ॥
ಸತ್ಯಮಾಹ ಪುರಾ ವಿಷ್ಣುಃ ಕುಮಾರಾನ್ವಿಷ್ಣುಸದ್ಮನಿ ॥ ೮೯ ॥

ನಾಹಂ ತಥಾದ್ಮಿ ಯಜಮಾನ ಹವಿರ್ವಿತಾನ
ಶ್ಚ್ಯೋತದ್ಘೃತಪ್ಲುತಮದನ್ ಹುತಭುಙ್ಮುಖೇನ ।
ಯದ್ ಬ್ರಾಹ್ಮಣಸ್ಯ ಮುಖತಶ್ಚರತೋಽನುಘಾಸಂ
ತುಷ್ಟಸ್ಯ ಮಯ್ಯವಹಿತೈರ್ನಿಜಕರ್ಮಪಾಕೈಃ ॥ ೯೦ ॥

ತನ್ಮಯಾಽಶರ್ಮಣಾವಾಪಿ ಯದ್ವಿಪ್ರೇಷ್ವಪ್ರಿಯಂ ಕೃತಂ ।
ಸರ್ವಸ್ಯ ಪ್ರಭವೋ ವಿಪ್ರಾಸ್ತತ್ ಕ್ಷಮಂತಾಂ ಪ್ರಸಾದಯೇ ॥ ೯೧ ॥
ತ್ವಂ ಚ ಕೋಽಸಿ ನ ಸಾಮಾನ್ಯಃ ಪ್ರಣಮ್ಯಾಹಂ ಪ್ರಸಾದಯೇ ।
ಆತ್ಮಾನಂ ಖ್ಯಾಪಯ ಮುನೇ ಪ್ರೋಕ್ತ್ಯಶ್ಚೇತ್ಯಬ್ರುವಂ ತದಾ ॥ ೯೨ ॥

---

೮೭–೯೦. ಕಷ್ಟಪಟ್ಟು ಬಾವಿಯನ್ನು ತೋಡಿ ಅದರಲ್ಲಿ ಉಪ್ಪುನೀರು ಬಂದರೆ ಆ ಬಾವಿಯು ವ್ಯರ್ಥವಾಗುತ್ತದೆ. ಅದೇ ರೀತಿ ಧರ್ಮಮಾಡದೆ ಬಹು ಕ್ಲೇಶಗಳಿಂದ ಜನ್ಮವನ್ನು ಕಳೆದರೆ ಆ ಬಾಳೂ ವ್ಯರ್ಥವೇ. ಹೀಗೆಯೇ ನನ್ನ ಜನ್ಮವು ವ್ಯರ್ಥವಾಗಿದ್ದಿತು. ಆ ನನ್ನ ವ್ಯರ್ಥಜನ್ಮವು ನಿನ್ನಿಂದ ಸಫಲವಾಗಿ ಮಾಡಲ್ಪಟ್ಟಿತು. ಆದುದರಿಂದ ನಿಮಗೆ ನಮಸ್ಕಾರ ಮಾಡುತ್ತೇನೆ. ಬ್ರಾಹ್ಮಣರಿಗೂ ಮತ್ತೆ ಮತ್ತೆ ನಮಸ್ಕರಿಸುತ್ತೇನೆ. ಪೂರ್ವದಲ್ಲಿ ವಿಷ್ಣುವು ವಿಷ್ಣುಮಂದಿರದಲ್ಲಿ ಕುಮಾರರನ್ನು ಕುರಿತು ಈ ರೀತಿ ಸತ್ಯವನ್ನೇ ನುಡಿದಿದ್ದಾನೆ. "ನನ್ನಲ್ಲಿಯೇ ಮನಸ್ಸಿಟ್ಟವನಾಗಿ ತನ್ನ ಕರ್ಮಪರಿಪಾಕಗಳಿಂದ ತೃಪ್ತನಾಗಿರುವ ಬ್ರಾಹ್ಮಣನ ಮುಖದಿಂದ ಹೊರಡುವ ಆಶಿಷಗಳು ಹೇಗೋ ಹಾಗೆ, ಯಜ್ಞಮಾಡುತ್ತಿರುವ ಯಜಮಾನನು ಕೊಡುವ ಹವಿಸ್ಸಿನಿಂದ ಸುರಿಯುತ್ತಿರುವ ಘೃತ (ತುಪ್ಪ)ವನ್ನು ತಿನ್ನುವ ಅಗ್ನಿಮುಖದಿಂದ ನಾನು ಭಕ್ಷಿಸುವುದಿಲ್ಲ." (ಬ್ರಾಹ್ಮಣರಿಂದ ನನಗೆ ಉಂಟಾಗುವ ತೃಪ್ತಿ ಯಜ್ಞದ ಹವಿಸ್ಸಿನಿಂದಲೂ ಆಗುವುದಿಲ್ಲ ಎಂದು ತಾತ್ಪರ್ಯ).

೯೧. ಸರ್ವಕ್ಕೂ ಬ್ರಾಹ್ಮಣರೇ ಉತ್ಪತ್ತಿಸ್ಥಾನ. ನಿರ್ಭಾಗ್ಯನಾದ ನಾನು ಈ ಹಿಂದೆ ಬ್ರಾಹ್ಮಣರಿಗೆ ಯಾವ ಯಾವ ಅಪ್ರಿಯವನ್ನು ಮಾಡಿದ್ದೇನೆಯೋ ಅದನ್ನೆಲ್ಲ ಕ್ಷಮಿಸಬೇಕೆಂದು ನಾನು ಪ್ರಾರ್ಥನೆ ಮಾಡುತ್ತಿದ್ದೇನೆ.

೯೨. ನೀನು ಯಾರು ? ಸಾಮಾನ್ಯನಂತೂ ಅಲ್ಲ. ನೀನು ಯಾರೆಂಬುದನ್ನು ಎಲೈ ಮುನಿಯೇ, ತಿಳಿಸು. ಅನುಗ್ರಹಿಸೆಂದು ಬೇಡುತ್ತೇನೆ.'' ಹೀಗೆಂದು ನನ್ನನ್ನು ಪ್ರಾರ್ಥಿಸಲಾಗಿ, ಆಗ ನಾನು ಹೀಗೆ ಉತ್ತರ ಹೇಳಿದೆನು.

ನಾರದ ಉವಾಚ :—

ನಾರದೋಽಸ್ಮಿ ನೃಪಶ್ರೇಷ್ಠ ಸ್ಥಾನಕಾರ್ಥೀ ಸಮಾಗತಃ ।
ಪ್ರೋಕ್ತಂ ಚ ದೇಹಿ ಮೇ ದ್ರವ್ಯಂ ಭೂಮಿಂ ಚ ಸ್ಥಾನಹೇತವೇ ॥ ೯೩ ॥
ಯದ್ಯಪೀಯಂ ದೇವತಾನಾಂ ಭೂಮಿರ್ದ್ರವ್ಯಂ ಚ ಪಾರ್ಥಿವ ।
ತಥಾಪಿ ಯಸ್ಮಿನ್ ಯಃ ಕಾಲೇ ರಾಜಾ ಪ್ರಾರ್ಥ್ಯಃ ಸ ನಿಶ್ಚಿತಂ ॥ ೯೪ ॥
ಸಹೀಶ್ವರಸ್ಯಾವತಾರೋ ಭರ್ತಾ ದಾತಾಭಯಸ್ಯ ಸಃ ।
ತಥೈವ ತ್ವಾಮಹಂ ಯಾಚೇ ದ್ರವ್ಯಶುದ್ಧಿ ಪರೀಪ್ಸಯಾ ।
ಪೂರ್ವಂ ಮಮಾಲಯಂ ದೇಹಿ ದೇಯಾರ್ಥೇ ಪ್ರಾರ್ಥನಾಪರಃ ॥ ೯೫ ॥

ರಾಜೋವಾಚ :—

ಯದಿ ತ್ವಂ ನಾರದೋ ವಿಪ್ರ ರಾಜ್ಯಮಸ್ತ್ವಖಿಲಂ ತವ ।
ಅಹಂ ಹಿ ಬ್ರಾಹ್ಮಣಾನಾಂ ತೇ ದಾಸ್ಯಂ ಕರ್ತಾ ನ ಸಂಶಯಃ ॥ ೯೬ ॥

ನಾರದ ಉವಾಚ :—

ಯದ್ಯಸ್ಮಾಕಂ ಭವಾನ್ ಭಕ್ತಸ್ತತ್ ತೇ ಕಾರ್ಯಂ ಚ ನೋ ವಚಃ ॥೯೭॥

---

೯೩. ನಾರದನಿಂತೆಂದನು :—"ಎಲೈ ನೃಪಶ್ರೇಷ್ಠನೇ! ನಾನು ನಾರದನು. ಸ್ಥಳವನ್ನು ಅಪೇಕ್ಷಿಸುವವನಾಗಿ ಇಲ್ಲಿಗೆ ಬಂದೆನು. ನೀನು ಕೊಡುವುದಾಗಿ ಘೋಷಿಸಿರುವ ದ್ರವ್ಯವನ್ನೂ ಭೂಮಿಯನ್ನೂ ಸ್ಥಾನಕ್ಕೋಸ್ಕರ (ಅಗ್ರಹಾರ ಸ್ಥಾಪನೆಗೆ ಬೇಕಾದ ಸ್ಥಳಕ್ಕೋಸ್ಕರ) ನನಗೆ ಕೊಡುವವನಾಗು.

೯೪. ಎಲೈ ಪಾರ್ಥಿವನೇ! ಈ ಭೂಮಿಯೂ, ದ್ರವ್ಯವೂ ದೇವತೆಗಳದೇ ಸರಿ. ಆದರೂ ಯಾವ ಕಾಲದಲ್ಲಿ ಯಾರು ರಾಜನಾಗಿರುತ್ತಾನೆಯೋ ಆತನನ್ನೇ ಪ್ರಾರ್ಥಿಸತಕ್ಕದ್ದು ಯುಕ್ತವಾಗಿದೆ. ಇದೇ ನಿಶ್ಚಯವಾದ ಗೊತ್ತುಪಾಟು.

೯೫. ಅವನೇ (ಎಂದರೆ ರಾಜನೇ) ಈಶ್ವರನ ಅವತಾರ; ಅವನೇ ಪೋಷಣೆಯಿತ್ತು ರಕ್ಷಿಸತಕ್ಕವನು; ಅಭಯಕೊಡುವವನೂ ಅವನೇ. ಆದುದರಿಂದ, ದ್ರವ್ಯಶುದ್ಧಿಯನ್ನು ಬಯಸುವವನಾಗಿ ನಾನು ನಿನ್ನನ್ನು ಯಾಚಿಸುತ್ತೇನೆ. ಬೇಡಿದವರ ಬೇಡಿಕೆಗಳನ್ನು ಪೂರ್ಣಗೊಳಿಸುವ ಎಲೈ ರಾಜನೇ, ನೀನು ನನಗೆ ಕೊಡಬೇಕಾಗಿರುವುದರಲ್ಲಿ ಮೊದಲು ನನಗೆ ಆಲಯವನ್ನು (ಮನೆಯನ್ನು) ಕೊಡುವವನಾಗು."

೯೬. ಈ ಮಾತನ್ನು ಕೇಳಿ ರಾಜನಿಂತೆಂದನು: "ಎಲೈ ಬ್ರಾಹ್ಮಣನೇ! ನೀನು ನಾರದನೇ ಆಗಿದ್ದರೆ ನನ್ನ ರಾಜ್ಯವೆಲ್ಲವೂ ನಿನ್ನದಾಗಲಿ. ನಾನಾದರೋ ಬ್ರಾಹ್ಮಣರಿಗೂ, ನಿನಗೂ ದಾಸ್ಯವನ್ನು ಮಾಡತಕ್ಕವನು. ಇದರಲ್ಲಿ ಸಂಶಯವಿಲ್ಲವು.

೯೭. ನಾರದನು ಹೀಗೆಂದನು: "ನೀನು ನಮಗೆ ಭಕ್ತನಾಗಿರುವ ಪಕ್ಷದಲ್ಲಿ ಅದನ್ನು ಮಾಡಿತೋರಿಸಬೇಕು; ಆಡತಕ್ಕುದಲ್ಲ.

ಸರ್ವಂ ಯತ್ ತತ್ ದೇಹಿಮೇ ದ್ರವ್ಯಮುಕ್ತಂ
ಭುವಂ ಚ ಮೇ ಸಪ್ತಗವ್ಯೂತಿ ಮಾತ್ರಾಂ ।
ಭೂಯಾತ್ತ್ವತ್ತೋಽಪ್ಯಸ್ಯ ರಕ್ಷೇತಿ ಸೋಽಪಿ
ಮೇನೇ ತ್ವಹಂ ಚಿಂತಯೇ ಚಾರ್ಥಶೇಷಂ ॥ ೯೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ನಾರದಾರ್ಜುನ ಸಂವಾದೇ ದಾನಭೇದಪ್ರಶಂಸಾ ವರ್ಣನಂ" ನಾಮ ಚತುರ್ಥೋಽಧ್ಯಾಯಃ

---

೯೮. ಹಿಂದೆಯೇ ನೀನು ಕೊಡುವುದಾಗಿ ಹೇಳಿರುವ ದ್ರವ್ಯವೆಲ್ಲವನ್ನೂ ನನಗೆ ಕೊಡು. ಏಳು ಗವ್ಯೂತಿ (ಗಾವುದ)ಯಷ್ಟು ಮಾತ್ರ ಭೂಮಿಯನ್ನು ಕೊಡು. ಈ ಹಣದ ಮತ್ತು ಭೂಮಿಯ ರಕ್ಷಣೆಯೂ ನಿನ್ನಿಂದಲೇ ಆಗಲಿ" ಎಂದು ಕೇಳಿದೆನು. ಅವನೂ ಅದನ್ನೊಪ್ಪಿಕೊಂಡನು. ನಾನು ಮಾಡಬೇಕಾಗಿ ಉಳಿದಿರುವ ಕಾರ್ಯವನ್ನು ಕುರಿತು ಯೋಚಿಸತೊಡಗಿದೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾ ಖಂಡದಲ್ಲಿ "ನಾರದಾರ್ಜುನ ಸಂವಾದ ದಾನಭೇದ ಪ್ರಶಂಸಾವರ್ಣನ"ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಮೋಽಧ್ಯಾಯಃ

## ಕಲಾಪಗ್ರಾಮವಾಸಿ ಸುತನುಬ್ರಾಹ್ಮಣೇನ ನಾರದ ಪ್ರಶ್ನೋತ್ತರ ಕಥನಂ

ನಾರದ ಉವಾಚ :—

ತತೋಽಹಂ ಧರ್ಮವರ್ಮಾಣಂ ಪ್ರೋಚ್ಯ ತಿಷ್ಠೇದ್ಧನಂ ತ್ವಯಿ ।
ಕೃತ್ಯಕಾಲೇ ಗೃಹೀಷ್ಯಾಮಿತ್ಯಾಗಮಂ ರೈವತಂ ಗಿರಿಂ ॥ ೧ ॥
ಆಸಂ ಪ್ರಮುದಿತಶ್ಚಾಹಂ ಪಶ್ಯಂಸ್ತಂ ಗಿರಿಸತ್ತಮಂ ।
ಆಹ್ವಯಾನಂ ನರಾನ್ ಸಾಧೂನ್ ಭೂಮೇರ್ಭುಜಮಿವೋಚ್ಛ್ರಿತಂ ॥೨॥
ಯಸ್ಮಿನ್ ನಾನಾವಿಧಾ ವೃಕ್ಷಾಃ ಪ್ರಕಾಶಂತೇ ಸಮಂ ತತಃ ।
ಸಾಧುಂ ಗೃಹಪತಿಂ ಪ್ರಾಪ್ಯ ಪುತ್ರ ಭಾರ್ಯಾದಯೋ ಯಥಾ ॥ ೩ ॥
ಮುದಿತಾ ಯತ್ರ ಸಂತೃಪ್ತಾ ವಾಶಂತೇ ಕೋಕಿಲಾದಯಃ ।
ಸದ್ಗುರೋರ್ಜ್ಞಾನಸಂಪನ್ನಾ ಯಥಾ ಶಿಷ್ಯಗಣಾ ಭುವಿ ॥ ೪ ॥
ಯತ್ರ ತಪ್ತ್ವಾ ತಪೋ ಮರ್ತ್ಯಾ ಯಥೇಪ್ಸಿತಮವಾಪ್ನುಯುಃ ।
ಶ್ರೀಮಹಾದೇವಮಾಸಾದ್ಯ ಭಕ್ತೋ ಯದ್ವನ್ಮನೋರಥಂ ॥ ೫ ॥

---

### ಕನ್ನಡದ ಅನುವಾದ

#### ಕಲಾಪಗ್ರಾಮವಾಸಿಯಾದ ಸುತನುವೆಂಬ ಬ್ರಾಹ್ಮಣನಿಗೂ ನಾರದನಿಗೂ ನಡೆದ ಪ್ರಶ್ನೋತ್ತರ ಕಥನ

೧. ನಾರದನು ಹೇಳುತ್ತಾನೆ:—ಆ ಬಳಿಕ ಧರ್ಮವರ್ಮನಿಗೆ "ಈ ಧನವು ನಿನ್ನಲ್ಲೇ ಇರಲಿ; ಕಾರ್ಯವೊದಗಿಬಂದ ಕಾಲದಲ್ಲಿ ತೆಗೆದುಕೊಳ್ಳುತ್ತೇನೆ" ಎಂದು ಹೇಳಿ ರೈವತಗಿರಿಗೆ ಬಂದೆನು.

೨. ಸಾಧುಗಳಾದ ಜನರನ್ನು 'ಬನ್ನಿ, ಬನ್ನಿ' ಎಂದು ಕರೆಯುವುದಕ್ಕಾಗಿ ಮೇಲೆತ್ತಿರುವ ಭೂಮಿಯ ಭುಜವೋ ಎಂಬಂತಿದ್ದ ಆ ಗಿರಿಶ್ರೇಷ್ಠವನ್ನು ನೋಡಿ ನಾನು ಬಹಳ ಹರ್ಷಗೊಂಡವನಾದೆನು.

೩. ಸಾಧುವಾದ ಮನೆಯ ಯಜಮಾನನನ್ನು ಹೊಂದಿಕೊಂಡು ಹೆಂಡತಿ ಮಕ್ಕಳು ಮೊದಲಾದವರು ಹೇಗೋ ಹಾಗೆ ಆ ಪರ್ವತದಲ್ಲಿ ಎಲ್ಲ ಕಡೆಯಲ್ಲಿಯೂ ನಾನಾ ವಿಧವಾದ ವೃಕ್ಷಗಳು ಪ್ರಕಾಶಿಸುತ್ತಿವೆ.

೪–೫. ಭೂಮಿಯಲ್ಲಿ ಸದ್ಗುರುವಿನ ಕೃಪೆಯಿಂದ ಜ್ಞಾನಸಂಪನ್ನರಾದ ಶಿಷ್ಯಸಮೂಹವು ಹೇಗೋ ಹಾಗೆ ಅಲ್ಲಿ ಕೋಗಿಲೆ ಮೊದಲಾದವುಗಳು ಆನಂದ ಹೊಂದಿ ತೃಪ್ತಿಯಿಂದ ಧ್ವನಿಮಾಡುತ್ತಿರುವುವು. ಆ ಪರ್ವತದಲ್ಲಿ ತಪಸ್ಸು ಮಾಡಿದ ಮನುಷ್ಯರು ತಾವು ಬಯಸಿದ ಇಷ್ಟಾರ್ಥಗಳನ್ನು ಪಡೆಯುತ್ತಾರೆ;

ತಸ್ಯಾಹಂ ಚ ಗಿರೇಃ ಪಾರ್ಥ ಸಮಾಸಾದ್ಯ ಮಹಾಶಿಲಾಂ ।
ಶೀತಸೌರಭ್ಯಮಂದೇನ ಪ್ರೀಣಿತೋಽಚಿಂತಯಂ ಹೃದಿ ॥ ೬ ॥
ತಾವನ್ಮಯಾ ಸ್ಥಾನಮಾಪ್ತಂ ಯದತೀವ ಸುದುರ್ಲಭಂ ।
ಇದಾನೀಂ ಬ್ರಾಹ್ಮಣಾರ್ಥೇಽಹಂ ಕುರ್ವೇ ತಾವದುಪಕ್ರಮಂ ॥ ೭ ॥
ಬ್ರಾಹ್ಮಣಾಶ್ಚ ವಿಲೋಕ್ಯಾ ಮೇ ಯೇ ಹಿ ಪಾತ್ರತಮಾ ಮತಾಃ ।
ತಥಾ ಹಿ ಚಾತ್ರ ಶ್ರೂಯಂತೇ ವಚಾಂಸಿ ಶ್ರುತಿವಾದಿನಾಂ ॥ ೮ ॥
ನ ಜಲೋತ್ತರಣೇ ಶಕ್ತಾ ಯದ್ವನ್ನೌಃ ಕರ್ಣವರ್ಜಿತಾ ।
ತದ್ವಚ್ಛ್ರೇಷ್ಠೋಪ್ಯನಾಚಾರೋ ವಿಪ್ರೋ ನೋದ್ಧರಣಕ್ಷಮಃ ॥ ೯ ॥
ಬ್ರಾಹ್ಮಣೋ ಹ್ಯನಧೀಯಾನಸ್ತೃಣಾಗ್ನಿರಿವ ಶಾಮ್ಯತಿ ।
ತಸ್ಮೈ ಹವ್ಯಂ ನದಾತವ್ಯಂ ನ ಹಿ ಭಸ್ಮನಿ ಹೂಯತೇ ॥ ೧೦ ॥
ದಾನಪಾತ್ರಮತಿಕ್ರಮ್ಯ ಯದಪಾತ್ರೇ ಪ್ರದೀಯತೇ ।
ತದ್ದತ್ತಂ ಗಾಮತಿಕ್ರಮ್ಯ ಗರ್ದಭಸ್ಯ ಗವಾಹ್ನಿಕಂ ॥ ೧೧ ॥

---

ಭಕ್ತನಾದವನು ಶ್ರೀ ಮಹಾದೇವನ ಸನ್ನಿಧಿಯನ್ನು ಸಾರಿ ತನ್ನ ಮನೋರಥವನ್ನು ಪಡೆಯುವುದನ್ನು ಅದು ಹೋಲುತ್ತದೆ.

೬. ಅಯ್ಯಾ ಪಾರ್ಥಾ! ನಾನು ಆ ಗಿರಿಯ ಒಂದು ಮಹಾ ಶಿಲೆಯನ್ನು ಹೋಗಿ ಸೇರಿದೆನು. ಅಲ್ಲಿ ತಣ್ಣಗೆ ಸುಗಂಧಯುಕ್ತವಾಗಿ ನಿದಾನವಾಗಿ ಬೀಸುತ್ತಿದ್ದ ಗಾಳಿಯಿಂದ ಸುಪ್ರೀತನಾದೆನು. ಅಲ್ಲಿ ಕುಳಿತು ಮನಸ್ಸಿನಲ್ಲಿ ಹೀಗೆ ಯೋಚಿಸಿದೆನು.

೭–೮. ಸ್ಥಾನವನ್ನು ದೊರಕಿಸಿಕೊಳ್ಳುವುದು ಕಷ್ಟ. ಅದನ್ನು ಈಗ ಪಡೆದು ದಾಯಿತು. ಇನ್ನು ಬ್ರಾಹ್ಮಣರನ್ನು ಹುಡುಕುವುದಕ್ಕಾಗಿ ಪ್ರಯತ್ನಮಾಡ ಬೇಕಾಗಿದೆ. ಅತ್ಯಂತ ಶ್ರೇಷ್ಠಪಾತ್ರರೆನ್ನಿಸಿಕೊಳ್ಳುವ ಬ್ರಾಹ್ಮಣರನ್ನು ನಾನು ನೋಡಿ ಹುಡುಕಬೇಕಾಗಿದೆ. ಈ ಸಂದರ್ಭದಲ್ಲಿ ಶ್ರುತಿ (ವೇದ) ವಾದಿಗಳ ವಾಕ್ಯಗಳು ಈ ರೀತಿ ಕೇಳಿಬರುತ್ತಿವೆ.

೯. ಕರ್ಣರಹಿತವಾದ (ಚುಕ್ಕಾಣಿಯಿಲ್ಲದ) ಹಡಗು ನೀರನ್ನು ದಾಟಿಸಲು ಹೇಗೆ ಶಕ್ತವಾಗುವುದಿಲ್ಲವೋ ಹಾಗೆ ಶ್ರೇಷ್ಠನಾದರೂ ಆಚಾರಹೀನನಾದ ಬ್ರಾಹ್ಮಣನು ಉದ್ಧಾರಮಾಡಲು ಸಮರ್ಥನಾಗುವುದಿಲ್ಲ.

೧೦–೧೧. ಅಧ್ಯಯನ ಮಾಡದಿರುವ ಬ್ರಾಹ್ಮಣನು ಹುಲ್ಲಿನ ಬೆಂಕಿಯಂತೆ ತಣ್ಣಗಾಗುತ್ತಾನೆ. ಅವನಿಗೆ ಹವ್ಯವನ್ನು ಕೊಡತಕ್ಕುದಲ್ಲ. ಬೂದಿಯಲ್ಲಿ ಹೋಮಮಾಡುವುದಿಲ್ಲವಷ್ಟೆ! ದಾನಕ್ಕೆ ಪಾತ್ರನಾದವನನ್ನು ಬಿಟ್ಟು ಅಪಾತ್ರನಲ್ಲಿ ದಾನಮಾಡಿದ್ದು ಗೋವಿಗೆ ಮಾಡುವ ಸೇವೆಯನ್ನು ಗೋವನ್ನು ಬಿಟ್ಟು ಕತ್ತೆಗೆ ಮಾಡಿದಂತಾಗುತ್ತದೆ.

ಊಷರೇ ವಾಪಿತಂ ಬೀಜಂ ಭಿನ್ನಭಾಂಡೇ ಚ ಗೋದುಹಂ ।
ಭಸ್ಮನೀವ ಹುತಂ ಹವ್ಯಂ ಮೂರ್ಖೇ ದಾನಮಶಾಶ್ವತಂ ॥ ೧೨ ॥
ವಿಧಿಹೀನೇ ತಥಾಽಪಾತ್ರೇ ಯೋ ದದಾತಿ ಪ್ರತಿಗ್ರಹಂ ।
ನ ಕೇವಲಂ ಹಿ ತದ್ಯಾತಿ ಶೇಷಂ ಪುಣ್ಯಂ ಪ್ರಣಶ್ಯತಿ ॥ ೧೩ ॥
ಭೂರಾಪ್ತಾ ಗೌಸ್ತಥಾ ಭೋಗಾಃ ಸುವರ್ಣಂ ದೇಹಮೇವಚ ।
ಅಶ್ವಶ್ಚಕ್ಷುಸ್ತಥಾ ವಾಸೋ ಘೃತಂ ತೇಜಸ್ತಿಲಾಃ ಪ್ರಜಾಃ ॥ ೧೪ ॥
ಘ್ನಂತಿ ತಸ್ಮಾದವಿದ್ವಾಂಸ್ತು ಬಿಭೀಯಾಚ್ಚ ಪ್ರತಿಗ್ರಹಾತ್ ।
ಸ್ವಲ್ಪಕೇನಾಪ್ಯವಿದ್ವಾಂಸ್ತು ಪಂಕೇ ಗೌರಿವ ಸೀದತಿ ॥ ೧೫ ॥
ತಸ್ಮಾದ್ಯೇ ಗೂಢತಪಸೋ ಗೂಢಸ್ವಾಧ್ಯಾಯ ಸಾಧಕಾಃ ।
ಸ್ವದಾರನಿರತಾಃ ಶಾಂತಾಸ್ತೇಷು ದತ್ತಂ ಸದಾಕ್ಷಯಂ ॥ ೧೬ ॥
ದೇಶೇ ಕಾಲ ಉಪಾಯೇನ ದ್ರವ್ಯಂ ಶ್ರದ್ಧಾ ಸಮನ್ವಿತಂ ।
ಪಾತ್ರೇ ಪ್ರದೀಯತೇ ಯತ್ತತ್ಸಕಲಂ ಧರ್ಮಲಕ್ಷಣಂ ॥ ೧೭ ॥

---

೧೨. ಮರಳು ನೆಲದಲ್ಲಿ ಬಿತ್ತಿದ ಬೀಜ, ಒಡೆದ ಪಾತ್ರೆಯಲ್ಲಿ ಹಾಲನ್ನು ಹಾಕುವುದು, ಬೂದಿಯಲ್ಲಿ ಮಾಡಿದ ಹೋಮ ಮತ್ತು ಮೂರ್ಖನಿಗೆ ಮಾಡಿದ ದಾನ ಇವೆಲ್ಲವೂ ಅಶಾಶ್ವತವಾದವುಗಳೇ.

೧೩. ವಿಧಿಹೀನವಾಗಿ ಅಪಾತ್ರನಲ್ಲಿ ಯಾವನು ದಾನ ಕೊಡುತ್ತಾನೆಯೋ ಅವನು ಆ ದ್ರವ್ಯವನ್ನು ಮಾತ್ರವೇ ಕೊಡುವವನಾಗುವುದಿಲ್ಲ. ಅವನಿಗೆ ಉಳಿದಿರುವ ಪುಣ್ಯವೂ ಕೂಡ ನಾಶವಾಗುತ್ತದೆ.

೧೪–೧೫. ದಾನ ತೆಗೆದುಕೊಂಡ ಭೂಮಿಯು ಆಪ್ತರನ್ನೂ, ಗೋವು ಭೋಗಗಳನ್ನೂ, ಸುವರ್ಣವು (ಚಿನ್ನವು) ದೇಹವನ್ನೂ, ಕುದುರೆಯೂ ಬಟ್ಟೆಯೂ ಕಣ್ಣನ್ನೂ, ತುಪ್ಪವು ತೇಜಸ್ಸನ್ನೂ, ಎಳ್ಳು ಪ್ರಜೆಗಳನ್ನೂ (ಎಂದರೆ ಸಂತಾನವನ್ನೂ) ನಾಶಪಡಿಸುತ್ತದೆ. ಆದುದರಿಂದ ವಿದ್ವಾಂಸನಲ್ಲದವನು ದಾನ ತೆಗೆದುಕೊಳ್ಳುವುದಕ್ಕೆ ಹೆದರಬೇಕು (ಎಂದರೆ ತೆಗೆದುಕೊಳ್ಳಬಾರದು). ಅವಿದ್ವಾಂಸನು ಸ್ವಲ್ಪವನ್ನು ತೆಗೆದುಕೊಂಡರೂ ಆ ಸ್ವಲ್ಪದಿಂದಲೇ ಕೆಸರಿನಲ್ಲಿ ಬಿದ್ದ ಗೋವಿನಂತೆ ಕುಗ್ಗಿ ಹೋಗುತ್ತಾನೆ.

೧೬. ಆದುದರಿಂದ ಯಾರು ಗೂಢತಪಸ್ವಿಗಳೋ, ಗೂಢವಾಗಿ ಅಧ್ಯಯನವನ್ನು ಸಾಧಿಸುತ್ತಿರುವರೋ, ತಮ್ಮತಮ್ಮ ಹೆಂಡಿರಲ್ಲಿಯೇ ಆಸಕ್ತರಾಗಿರುವರೋ ಶಾಂತರಾಗಿರುವರೋ ಅಂಥವರಿಗೆ ದಾನ ಕೊಟ್ಟುದು ಸದಾ ಅಕ್ಷಯವಾಗುವುದು.

೧೭. ಸರಿಯಾದ ದೇಶದಲ್ಲಿ, ಕಾಲದಲ್ಲಿ ಮತ್ತು ಪಾತ್ರನಲ್ಲಿ ಶ್ರದ್ಧೆಯಿಂದ ಕೂಡಿ ಉಪಾಯದಿಂದ ಯಾವ ದ್ರವ್ಯವು ಕೊಡಲ್ಪಡುವುದೋ ಆ ಎಲ್ಲವೂ ಧರ್ಮಲಕ್ಷಣವಾದುದು.

ನ ವಿದ್ಯಯಾ ಕೇವಲಯಾ ತಪಸಾ ವಾಪಿ ಪಾತ್ರತಾ ।
ಯತ್ರ ವೃತ್ತಮಿಮೇಚೋಭೇ ತದ್ಧಿ ಪಾತ್ರಂ ಪ್ರಚಕ್ಷತೇ ॥ ೧೮ ॥
ತೇಷಾಂ ತ್ರಯಾಣಾಂ ಮಧ್ಯೇ ಚ ವಿದ್ಯಾಮುಖ್ಯೋ ಮಹಾಗುಣಃ ।
ವಿದ್ಯಾಂ ವಿನಾಂಧವದ್ವಿಪ್ರಾಶ್ಚಕ್ಷುಷ್ಮಂತೋ ಹಿ ತೇ ಮತಾಃ ॥ ೧೯ ॥
ತಸ್ಮಾಚ್ಚಕ್ಷುಷ್ಮತೋ ವಿದ್ವಾನ್ ದೇಶೇದೇಶೇ ಪರೀಕ್ಷಯೇತ್ ।
ಪ್ರಶ್ನಾನ್ ಯೇ ಮಮ ವಕ್ಷ್ಯಂತಿ ತೇಭ್ಯೋ ದಾಸ್ಯಾಮ್ಯಹಂ ತತಃ ॥೨೦॥
ಇತಿ ಸಂಚಿಂತ್ಯ ಮನಸಾ ತಸ್ಮಾದ್ದೇಶಾತ್ಸಮುತ್ಥಿತಃ ।
ಆಶ್ರಮೇಷು ಮಹರ್ಷೀಣಾಂ ವಿಚರಾಮ್ಯಸ್ಮಿ ಫಾಲ್ಗುನ ॥ ೨೧ ॥
ಇಮಾನ್‌ಶ್ಲೋಕಾನ್ ಗಾಯಮಾನಃ ಪ್ರಶ್ನರೂಪಾನ್‌ಶೃಣುಷ್ವ ತಾನ್ ।
ಮಾತೃಕಾಂ ಕೋ ವಿಜಾನಾತಿ ಕತಿಧಾ ಕೀದೃಶಾಕ್ಷರಾಂ ॥ ೨೨ ॥
ಪಂಚಪಂಚಾದ್ಭುತಂ ಗೇಹಂ ಕೋ ವಿಜಾನಾತಿ ವಾ ದ್ವಿಜಃ ।
ಬಹುರೂಪಾಂ ಸ್ತ್ರಿಯಂ ಕರ್ತುಮೇಕರೂಪಾಂ ಚ ವೇತ್ತಿ ಕಃ ॥ ೨೩ ॥

---

೧೮. ಕೇವಲ ವಿದ್ಯೆಯೊಂದರಿಂದಲೇ ಪಾತ್ರತ್ವವುಂಟಾಗುವುದಿಲ್ಲ; ಬರಿಯ ತಪಸ್ಸಿನಿಂದಲೂ ಪಾತ್ರತ್ವವುಂಟಾಗುವುದಿಲ್ಲ. ಯಾರಲ್ಲಿ ಒಳ್ಳೆಯ ನಡತೆಯೂ ಈ ಎರಡೂ (ವಿದ್ಯೆ ಮತ್ತು ತಪಸ್ಸುಗಳು) ಇವೆಯೋ ಅವನೇ ಸರಿಯಾದ ಪಾತ್ರನೆನ್ನಿಸಿಕೊಳ್ಳುತ್ತಾನೆ.

೧೯. ಆ ಮೂರರ ನಡುವೆ ವಿದ್ಯೆಯೇ ಬಹು ಮುಖ್ಯವಾದ ಮಹಾಗುಣ. ವಿದ್ಯೆಯಿಲ್ಲದಿದ್ದರೆ ಬ್ರಾಹ್ಮಣರು ಕಣ್ಣಿದ್ದವರಾದರೂ ಅವರು ಕುರುಡರೆಂದೇ ಎನ್ನಿಸಿಕೊಳ್ಳುತ್ತಾರೆ.

೨೦. ಆದುದರಿಂದ ವಿದ್ವಾಂಸನಾದವನು ಕಣ್ಣುಳ್ಳವನನ್ನು ದೇಶದೇಶದಲ್ಲೂ ಪರೀಕ್ಷಿಸಬೇಕು. ಆದುದರಿಂದ, ನನ್ನ ಪ್ರಶ್ನೆಗಳಿಗೆ ಯಾರು ಉತ್ತರ ಹೇಳುತ್ತಾರೆಯೋ ಅವರಿಗೆ ದಾನ ಕೊಡುತ್ತೇನೆ.

೨೧. ಎಲೈ ಫಾಲ್ಗುನನೇ! ಹೀಗೆಂದು ಮನಸ್ಸಿನಲ್ಲಿ ಆಲೋಚಿಸಿಕೊಂಡು ಎದ್ದು, ಆ ಪ್ರದೇಶದಿಂದ ಹೊರಟು ಮಹರ್ಷಿಗಳ ಆಶ್ರಮಗಳಲ್ಲಿ ಸುತ್ತತೊಡಗಿದೆನು.

೨೨. ಹಾಗೆ ಸುತ್ತುವಾಗ ಪ್ರಶ್ನರೂಪವಾದ ಈ ಶ್ಲೋಕಗಳನ್ನು ಹಾಡುತ್ತಿದ್ದೆನು. ಆ ಶ್ಲೋಕಗಳನ್ನು ಹೇಳುತ್ತೇನೆ ಕೇಳು; ಮಾತೃಕೆಯನ್ನು ತಿಳಿದವನು ಯಾರು? ಅದು ಎಷ್ಟು ಬಗೆಯಾಗಿದೆ? ಅಕ್ಷರಗಳು ಯಾವ ರೀತಿಯವು?

೨೩. ಐದೈದು (ಇಪ್ಪತ್ತೈದು) ಅದ್ಭುತಗಳುಳ್ಳ ಮನೆಯನ್ನು ಯಾವ ದ್ವಿಜನು ಬಲ್ಲವನಾಗಿದ್ದಾನೆ? ಬಹುರೂಪಿಯಾದ ಸ್ತ್ರೀಯನ್ನು ಏಕರೂಪಿಯಾಗಿ ಮಾಡುವುದಕ್ಕೆ ಯಾರಿಗೆ ತಿಳಿಯುತ್ತದೆ?

**ಕೋ ವಾ ಚಿತ್ರಕಥಾಬಂಧಂ ವೇತ್ತಿ ಸಂಸಾರಗೋಚರಃ ।**
**ಕೋ ವಾರ್ಣವಮಹಾಗ್ರಾಹಂ ವೇತ್ತಿ ವಿದ್ಯಾಪರಾಯಣಃ ॥ ೨೪ ॥**
**ಕೋ ವಾಷ್ಟವಿಧಬ್ರಾಹ್ಮಣ್ಯಂ ವೇತ್ತಿ ಬ್ರಾಹ್ಮಣಸತ್ತಮಃ ।**
**ಯುಗಾನಾಂ ಚ ಚತುರ್ಣಾಂ ವಾ ಕೋ ಮೂಲದಿವಸಾನ್ ವದೇತ್ ॥**
**ಚತುರ್ದಶ ಮನೂನಾಂ ವಾ ಮೂಲವಾಸರಂ ವೇತ್ತಿ ಕಃ ।**
**ಕಸ್ಮಿಂಶ್ಚೈವ ದಿನೇ ಪ್ರಾಪ ಪೂರ್ವಂ ವಾ ಭಾಸ್ಕರೋ ರಥಂ ॥ ೨೬ ॥**
**ಉದ್ವೇಜಯತಿ ಭೂತಾನಿ ಕೃಷ್ಣಾಹಿರಿವ ವೇತ್ತಿ ಕಃ ।**
**ಕೋ ವಾಽಸ್ಮಿನ್ ಘೋರಸಂಸಾರೇ ದಕ್ಷದಕ್ಷತಮೋ ಭವೇತ್ ॥ ೨೭ ॥**
**ಪಂಥಾನಾವಪಿ ದ್ವೌ ಕಶ್ಚಿದ್ವೇತ್ತಿ ವಕ್ತಿ ಚ ಬ್ರಾಹ್ಮಣಃ ।**
**ಇತಿ ಮೇ ದ್ವಾದಶಪ್ರಶ್ನಾನ್ಯೇ ವಿದುರ್ಬ್ರಾಹ್ಮಣೋತ್ತಮಾಃ ॥ ೨೮ ॥**
**ತೇ ಮೇ ಪೂಜ್ಯತಮಾಸ್ತೇಷಾಮಹಮಾರಾಧಕಶ್ಚಿರಂ ।**
**ಇತ್ಯಹಂ ಗಾಯಮಾನೋ ವೈ ಭ್ರಮಿತಃ ಸಕಲಾಂ ಮಹೀಂ ॥ ೨೯ ॥**
**ತೇ ಚಾಹುರ್ದುಃಖದಾಃ ಖ್ಯಾತಾಃ ಪ್ರಶ್ನಾಸ್ತೇ ಕುರ್ಮಹೇ ನಮಃ ।**
**ಇತ್ಯಹಂ ಸಕಲಾಂ ಪೃಥ್ವೀಂ ವಿಚಿಂತ್ಯಾಲಬ್ಧ ಬ್ರಾಹ್ಮಣಃ ॥ ೩೦ ॥**

---

೨೪. ಸಂಸಾರದಲ್ಲಿ ಕಂಡುಬರುವ ವಿಚಿತ್ರ ಕಥೆಯನ್ನು ಯಾವನು ಅರಿತಿದ್ದಾನೆ? ವಿದ್ಯಾಪರಾಯಣನಾದ ಯಾವಾತನು ಸಮುದ್ರದ ಮಹಾ ಮೊಸಳೆಯನ್ನು ಬಲ್ಲವನಾಗಿದ್ದಾನೆ?

೨೫. ಅಷ್ಟವಿಧವಾದ ಬ್ರಾಹ್ಮಣ್ಯವನ್ನರಿತಿರುವ ಬ್ರಾಹ್ಮಣಶ್ರೇಷ್ಠನು ಯಾರು? ನಾಲ್ಕು ಯುಗಗಳ ಪ್ರಾರಂಭ ದಿನಗಳನ್ನು ಯಾವಾತನು ಹೇಳುತ್ತಾನೆ?

೨೬. ಹದಿನಾಲ್ಕು ಮನುಗಳ ಮೂಲ ದಿನಗಳನ್ನು ಯಾವನು ಬಲ್ಲನು? ಯಾವ ದಿನದಲ್ಲಿ ಸೂರ್ಯನು ಪೂರ್ವರಥವನ್ನು ಹೊಂದಿದನು?

೨೭. ಭೂತಗಳನ್ನು (ಎಂದರೆ ಪ್ರಾಣಿಗಳನ್ನು) ಕೃಷ್ಣಸರ್ಪದ ಹಾಗೆ ಉದ್ವೇಗಗೊಳಿಸುವುದೇನು ಎಂಬುದನ್ನು ಯಾರು ಬಲ್ಲರು? ಘೋರವಾದ ಈ ಸಂಸಾರದಲ್ಲಿ ಯಾವನು ಅತ್ಯಂತ ದಕ್ಷನಾಗುತ್ತಾನೆ?

೨೮–೩೧. ಎರಡು ಪಂಥ (ಎಂದರೆ ಮಾರ್ಗ)ಗಳನ್ನು ಯಾವನಾದರೊಬ್ಬನು ತಿಳಿದಿರುವನೆ? ಹೇಳಬಲ್ಲನೆ?—ಇಂತೆಂಬ ನನ್ನ ಹನ್ನೆರಡು ಪ್ರಶ್ನೆಗಳನ್ನು ಯಾವ ಬ್ರಾಹ್ಮಣೋತ್ತಮರು ಅರಿತಿರುವರೋ ಅವರು ನನಗೆ ಪೂಜ್ಯತಮರು. ನಾನು ಸತತವೂ ಅವರನ್ನು ಆರಾಧಿಸುತ್ತಿರುವವನಾಗುತ್ತೇನೆ. ಹೀಗೆಂದು ಗಾನಮಾಡುತ್ತ ಸಮಸ್ತ ಭೂಮಂಡಲವನ್ನೂ ಸುತ್ತಿದೆನು. ಅವರುಗಳು ಕೂಡ 'ಆ ಪ್ರಶ್ನೆಗಳು ಬಹು ಕಷ್ಟಕೊಡುತ್ತಿವೆ. ಅವಕ್ಕೆ

ಹಿಮಾದ್ರಿಶಿಖರಾಸೀನೋ ಭೂಯಶ್ಚಿಂತಾಮವಾಪ್ತವಾನ್ ।
ಸರ್ವೇ ವಿಲೋಕಿತಾ ವಿಪ್ರಾಃ ಕಿಮತಃ ಕರ್ತುಮುತ್ಸಹೇ ॥ ೩೧ ॥
ತತೋ ಮೇ ಚಿಂತಯಾನಸ್ಯ ಪುನರ್ಜಾತಾ ಮತಿಸ್ತ್ವಿಯಂ ।
ಅದ್ಯಾಪಿ ನಗತಶ್ಚಾಹಂ ಕಲಾಪಗ್ರಾಮಮುತ್ತಮಂ ॥ ೩೨ ॥
ಯಸ್ಮಿನ್ ವಿಪ್ರಾಃ ಸಂವಸಂತಿ ಮೂರ್ತಾನೀವ ತಪಾಂಸಿ ಚ ।
ಚತುರಾಶೀತಿ ಸಾಹಸ್ರಾಃ ಶ್ರುತಾಧ್ಯಯನ ಶಾಲಿನಃ ॥ ೩೩ ॥
ಸ್ಥಾನೇ ತಸ್ಮಿನ್ ಗಮಿಷ್ಯಾಮೀತ್ಯುಕ್ತ್ವಾಹಂ ಚಲಿತಸ್ತದಾ ।
ಖೇಚರೋ ಹಿಮಮಾಕ್ರಮ್ಯ ಪರಂ ಪಾರಂ ಗತಸ್ತತಃ ॥ ೩೪ ॥
ಅದ್ರಾಕ್ಷಂ ಪುಣ್ಯಭೂಮಿಸ್ಥಂ ಗ್ರಾಮರತ್ನಮಹಂ ಮಹತ್ ।
ಶತಯೋಜನವಿಸ್ತೀರ್ಣಂ ನಾನಾವೃಕ್ಷಸಮಾಕುಲಂ ॥ ೩೫ ॥
ಯತ್ರ ಪುಣ್ಯವತಾಂ ಸಂತಿ ಶತಶಃ ಪ್ರವರಾಶ್ರಮಾಃ ।
ಸರ್ವೇಷಾಮಪಿ ಜೀವಾನಾಂ ಯತ್ರಾನ್ಯೋನ್ಯಂ ನ ದುಷ್ಟತಾ ॥ ೩೬ ॥

---

ನಮಸ್ಕಾರ ಮಾಡುತ್ತೇವೆ' ಎಂದು ಮರುನುಡಿಯುತ್ತಿದ್ದರು. ಈ ರೀತಿ ಸಮಸ್ತ ಪೃಥ್ವಿಯನ್ನೂ ಹುಡುಕಿ, ತಕ್ಕ ಬ್ರಾಹ್ಮಣನನ್ನು ಪಡೆಯದವನಾಗಿ, ಹಿಮವತ್ಪರ್ವತದ ಶಿಖರದಲ್ಲಿ ಕುಳಿತು "ಎಲ್ಲ ಬ್ರಾಹ್ಮಣರನ್ನು ನೋಡಿ ಆಯಿತು. ಇನ್ನೇನುತಾನೇ ಮಾಡಲಿ" ಎಂದುಕೊಂಡು ಬಹಳ ಚಿಂತೆಯನ್ನು ಪಡೆದವನಾದೆನು.

೩೨. ಬಳಿಕ ಹಾಗೆ ಚಿಂತಿಸುತ್ತಿದ್ದ ನನಗೆ ಮತ್ತೆ ಈ ಬುದ್ಧಿ ಹುಟ್ಟಿತು. "ಉತ್ತಮವಾದ ಕಲಾಪಗ್ರಾಮಕ್ಕೆ ಇನ್ನೂ ನಾನು ಹೋಗಿಲ್ಲ.

೩೩. ಆ ಕಲಾಪಗ್ರಾಮದಲ್ಲಿ ದೇಹಧಾರಿಗಳಾದ ತಪಸ್ಸುಗಳೇ ಎಂಬಂತೆ ಇರುವ ವೇದಾಧ್ಯಯನಶಾಲಿಗಳಾದ ಎಂಬತ್ತನಾಲ್ಕುಸಾವಿರ ಬ್ರಾಹ್ಮಣರು ವಾಸ ಮಾಡುತ್ತಿದ್ದಾರೆ.

೩೪. ಆ ಸ್ಥಳಕ್ಕೆ ಹೋಗುತ್ತೇನೆ" ಎಂದು ಹೇಳಿ ಅಲ್ಲಿಂದ ಹೊರಟೆನು. ಆಕಾಶದಲ್ಲಿ ಸಂಚರಿಸುವವನಾಗಿ ಹಿಮವತ್ಪರ್ವತವನ್ನು ದಾಟಿ ಅದರ ಆಚೆಕಡೆಗೆ ಹೋಗಿ ಸೇರಿದೆನು.

೩೫. ಪುಣ್ಯಭೂಮಿಯಲ್ಲಿದ್ದ ಮಹತ್ತಾದ ಆ ಗ್ರಾಮರತ್ನವನ್ನು ಕಂಡೆನು. ಅದು ನೂರುಯೋಜನ ವಿಸ್ತೀರ್ಣವುಳ್ಳದು; ಮತ್ತು ಬಗೆಬಗೆಯ ಮರಗಳಿಂದ ತುಂಬಿರುವಂಥದು.

೩೬. ಅಲ್ಲಿ ಪುಣ್ಯವಂತರಾದವರ ಅತ್ಯುತ್ಕೃಷ್ಟವಾದ ಆಶ್ರಮಗಳು ನೂರಾರು ಇವೆ. ಅಲ್ಲಿ ಸರ್ವಜೀವಿಗಳೂ ಕೂಡ ಪರಸ್ಪರವಾಗಿ ಮೈತ್ರಿಯಿಂದಿರುವುವು. ದುಷ್ಟತನವೇ ಇಲ್ಲ.

ಯಜ್ಞಭಾಜಾಂ ಮುನೀನಾಂ ಯದುಪಕಾರಕರಂ ಸದಾ ।
ಸತಾಂ ಧರ್ಮವತಾಂ ಯದ್ವದುಪಕಾರೋ ನ ಶಾಮ್ಯತಿ ॥ ೩೭ ॥
ಮುನೀನಾಂ ಯತ್ರ ಪರಮಂ ಸ್ಥಾನಂ ಚಾಪ್ಯವಿನಾಶಕೃತ್ ।
ಸ್ವಾಹಾ ಸ್ವಧಾ ವಷಟ್ಕಾರ ಹಂತಕಾರೋ ನ ನಶ್ಯತಿ ॥ ೩೮ ॥
ಯತ್ರಕೃತಯುಗಸ್ಯಾರ್ಥಂ ಬೀಜಂ ಪಾರ್ಥಾವಶಿಷ್ಯತೇ ।
ಸೂರ್ಯಸ್ಯ ಸೋಮವಂಶಸ್ಯ ಬ್ರಾಹ್ಮಣಾನಾಂ ತಥೈವ ಚ ॥ ೩೯ ॥
ಸ್ಥಾನಕಂ ತತ್ ಸಮಾಸಾದ್ಯ ಪ್ರವಿಷ್ಟೋಽಹಂ ದ್ವಿಜಾಶ್ರಮಾನ್ ।
ತತ್ರ ತೇ ವಿವಿಧಾನ್ವಾದಾನ್ನಿವದಂತೇ ದ್ವಿಜೋತ್ತಮಾಃ ॥ ೪೦ ॥
ಪರಸ್ಪರಂ ಚಿಂತಯಾನಾ ವೇದಾ ಮೂರ್ತಿಧರಾ ಯಥಾ ।
ತತ್ರ ಮೇಧಾವಿನಃ ಕೇಚಿದರ್ಥಮನ್ಯೈಃ ಪ್ರಪೂರಿತಂ ॥ ೪೧ ॥
ವಿಚಿಕ್ಷಿಪುರ್ಮಹಾತ್ಮಾನೋ ನಭೋಗತಮಿವಾಮಿಷಂ ।
ತತ್ರಾಹಂ ಕರಮುದ್ಯಮ್ಯ ಪ್ರಾವೋಚಂ ಪೂರ್ಯತಾಂ ದ್ವಿಜಾಃ ॥ ೪೨ ॥

---

೩೭. ಧರ್ಮವಂತರಾದ ಸತ್ಪುರುಷರ ಉಪಕಾರವು ಕೊನೆಗೊಂಡು ನಿಂತುಹೋಗುವುದಿಲ್ಲವಷ್ಟೆ. ಹಾಗೆಯೇ ಆ ಗ್ರಾಮವು ಯಜ್ಞಭಾಗಿಗಳಾದ ಮುನಿಗಳಿಗೆ ಸದಾ ಉಪಕಾರವಾಗಿರುವುದು.

೩೮. ಮುನಿಗಳಿಗೆ ಪರಮಪಾತ್ರವಾದ ಅವಿನಾಶಕಾರಿಯಾದ ಸ್ಥಾನವು ಅಲ್ಲಿ ಉಂಟು. ಅಲ್ಲಿ ಸ್ವಾಹಾಕಾರ, ಸ್ವಧಾಕಾರ, ವಷಟ್‌ಕಾರ ಮತ್ತು ಹಂತಕಾರಗಳು ಯಾವಾಗಲೂ ನಾಶವಾಗುವುದಿಲ್ಲ.

೩೯. ಎಲೈ ಪಾರ್ಥನೇ! ಅಲ್ಲಿ ಮುಂದಿನ ಕೃತಯುಗಕ್ಕೋಸ್ಕರವಾಗಿ ಸೂರ್ಯವಂಶ, ಚಂದ್ರವಂಶ ಮತ್ತು ಬ್ರಾಹ್ಮಣವಂಶಗಳ ಬೀಜವು ಇನ್ನೂ ಉಳಿದಿದೆ.

೪೦. ನಾನು ಆ ಸ್ಥಳಕ್ಕೆ ಹೋಗಿ ಸೇರಿ ಬ್ರಾಹ್ಮಣರ ಆಶ್ರಮಗಳನ್ನು ಹೊಕ್ಕವನಾದೆನು. ಅಲ್ಲಿ ಆ ದ್ವಿಜೋತ್ತಮರು ವಿವಿಧವಾದ ಶಾಸ್ತ್ರವಾದಗಳನ್ನು ಮಾಡುತ್ತಿದ್ದರು.

೪೧–೪೨. ದೇಹವನ್ನೇ ಧರಿಸಿ ಬಂದಿರುವ ಋಕ್, ಯಜುಸ್, ಸಾಮಗಳೆಂಬ ಮೂರು ವೇದಗಳೋ ಎಂಬಂತೆ ಅವರು ಪರಸ್ಪರವಾಗಿ ತರ್ಕಮೂಲಕ ಆಲೋಚನೆಮಾಡುತ್ತಿದ್ದರು. ಅಲ್ಲಿ ಮೇಧಾವಿಗಳಾದ ಕೆಲವರು ಅರ್ಥವನ್ನು ಪೂರ್ತಿಮಾಡಬೇಕೆಂದು ಅನ್ಯರು ಒಡ್ಡಿದ್ದ ಸಮಸ್ಯೆಗಳ ಅರ್ಥವನ್ನು ಹಕ್ಕಿಗಳು ಆಕಾಶದಲ್ಲಿರುವ ಆಮಿಷ (ಮಾಂಸ)ವನ್ನೆಂತೋ ಅಂತೆ ಬಹು ಸುಲಭವಾಗಿಯೇ ವ್ಯಾಖ್ಯಾನಿಸಿ ಹಾರಿಸಿಬಿಡುತ್ತಿದ್ದರು. ಇಂತಹ ಪಂಡಿತರಿಂದ ತುಂಬಿದ ಆ ಕಲಾಪಗ್ರಾಮದಲ್ಲಿ ನಾನು ಕೈಯೆತ್ತಿ ಹೀಗೆ ಹೇಳುವವನಾದೆನು. “ಎಲೈ

ಕಾಕಾರಾವೈಃ ಕಿಮೇತೈರ್ವೋ ಯದ್ಯಸ್ತಿ ಜ್ಞಾನಶಾಲಿತಾ ।
ವ್ಯಾಕುರುಧ್ವಂ ತತಃ ಪ್ರಶ್ನಾನ್ ಮಮ ದುರ್ವಿಷಹಾನ್ ಬಹೂನ್ ॥೪೩॥
ಬ್ರಾಹ್ಮಣಾ ಊಚುಃ :—
ವದ ಬ್ರಾಹ್ಮಣ ಪ್ರಶ್ನಾನ್ ಸ್ವಾನ್ಶ್ರುತ್ವಾಽಽಥಾಸ್ಯಾಮಹೇ ವಯಂ ।
ಪರಮೋ ಹ್ಯೇಷ ನೋ ಲಾಭಃ ಪ್ರಶ್ನಾನ್ ಪೃಚ್ಛಸಿ ಯದ್ಭವಾನ್ ॥ ೪೪ ॥
ಅಹಂಪೂರ್ವಿಕಯಾ ತೇ ವೈ ನ್ಯಷೇಧಂತ ಪರಸ್ಪರಂ ।
ಅಹಂ ಪೂರ್ವಮಹಂ ಪೂರ್ವಮಿತಿ ವೀರಾ ಯಥಾ ರಣೇ ॥ ೪೫ ॥
ತತಸ್ತಾನಬ್ರುವಂ ಪ್ರಶ್ನಾನಹಂ ದ್ವಾದಶಪೂರ್ವಕಾನ್ ।
ಶ್ರುತ್ವಾ ತೇ ಮಾಮವೋಚಂತ ಲೀಲಾಯಂತೋ ಮುನೀಶ್ವರಾಃ ॥ ೪೬ ॥
ಕಿಂ ತೇ ದ್ವಿಜ ಬಾಲಪ್ರಶ್ನೈರವಿಾಭಿಃ ಸ್ವಲ್ಪಕೈರಪಿ ।
ಅಸ್ಮಾಕಂ ಯನ್ನಿಹೀನಂ ತ್ವಂ ಮನ್ಯಸೇ ಸ ಬ್ರವೀತ್ವಮೂನ್ ॥ ೪೭ ॥

---

ಬ್ರಾಹ್ಮಣರೇ! ನಾನು ಒಡ್ಡುವ ಪ್ರಶ್ನೆಯನ್ನು ಪೂರ್ತಿಮಾಡಿರಿ. ಈಗ ನೀವು ಮಾಡುತ್ತಿರುವ ಈ ಕಾಗೆಗಳ ಕೂಗಿನಿಂದೇನು ಪ್ರಯೋಜನ? ನಿಮಗೆ ಅಂತಹ ಜ್ಞಾನಶಾಲಿತ್ವವಿರುವುದಾದರೆ ನಾನು ಕೇಳುವ ಸಹಿಸಲಸದಳವಾದ ಬಹು ಪ್ರಶ್ನೆಗಳಿಗೆ ಅರ್ಥ ಹೇಳಿ ವ್ಯಾಖ್ಯಾನಮಾಡಿರಿ."

೪೪. ನನ್ನ ಮಾತನ್ನು ಕೇಳಿ ಬ್ರಾಹ್ಮಣರಿಂತೆಂದರು :— "ಅಯ್ಯಾ ಬ್ರಾಹ್ಮಣಾ! ನಿನ್ನ ಪ್ರಶ್ನೆಗಳೇನು? ಹೇಳು. ಅವೇನೆಂಬುದನ್ನು ಕೇಳಿ ತಿಳಿದು ನಾವು ಉತ್ತರ ಹೇಳಲೊಪ್ಪುತ್ತೇವೆ. ನೀನು ಪ್ರಶ್ನೆಗಳನ್ನು ಕೇಳುತ್ತಿರುವೆಯಲ್ಲಾ ಇದೇ ನಮಗೆ ಪರಮಲಾಭವಾಯಿತು."

೪೫. ಹೀಗೆಂದು ನುಡಿದು ಅವರು ನಾನು ಮೊದಲು ತಾನು ಮೊದಲು ಎಂದು ಹುರುಡಿನಿಂದ ಒಬ್ಬರನ್ನೊಬ್ಬರು ನಿಷೇಧಿಸತೊಡಗಿದರು. ರಣದಲ್ಲಿ ವೀರರು ನಾ ಮುಂದು ತಾ ಮುಂದೆಂದು ನುಗ್ಗುವ ಹಾಗೆ ಅವರು ಉತ್ತರ ಹೇಳಲು ಮುಂಬರಿಯುತ್ತಿದ್ದರು.

೪೬. ಬಳಿಕ ನಾನು ಹಿಂದೆಯೇ ತಿಳಿಸಿರುವ ಹನ್ನೆರಡು ಪ್ರಶ್ನೆಗಳನ್ನು ಅವರಿಗೆ ಹೇಳಿದೆನು. ಆ ಪ್ರಶ್ನೆಗಳನ್ನು ಕೇಳಿ ಆ ಮುನೀಶ್ವರರು ಆಟವಾಡುವವರಂತೆ (ಸ್ವಲ್ಪವೂ ಕಷ್ಟವೆಂದು ಭಾವಿಸದೆಯೇ) ನನಗೆ ಈ ರೀತಿ ಮರು ನುಡಿದರು.

೪೭. "ಅಯ್ಯಾ ಬ್ರಾಹ್ಮಣಾ! ನಿನ್ನ ಈ ಬಾಲಪ್ರಶ್ನೆಗಳಿಂದೇನು! ಅಲ್ಪವೆ! ಪ್ರಶ್ನೆಗಳೂ ಸ್ವಲ್ಪವೇ ಆಗಿವೆ. ನಮ್ಮಲ್ಲಿ ಯಾವನು ಬುದ್ಧಿಯು ಕಡಮೆಯಾದ ದಡ್ಡನೆಂದು ನೀನು ಭಾವಿಸುವೆಯೋ ಅವನು ಇವಕ್ಕೆ ಉತ್ತರ ಹೇಳಲಿ" ಎಂದರು.

**ತತೋಽತಿವಿಸ್ಮಿತಶ್ಚಾಹಂ ಮನ್ಯಮಾನಃ ಕೃತಾರ್ಥತಾಂ ।**
**ತೇಷಾಂ ನಿಹೀನಂ ಸಂಚಿಂತ್ಯ ಪ್ರಾವೋಚಂ ಪ್ರಬ್ರವೀತ್ವಯಂ ॥ ೪೮ ॥**
**ತತಃ ಸುತನುನಾಮಾ ಸ ಬಾಲೋಽಬಾಲೋಽಭ್ಯುವಾಚ ಮಾಂ ।**
**ಮಮ ಮಂದಾಯತೇ ವಾಣೀಪ್ರಶ್ನೈಃ ಸ್ವಲ್ಪೈಸ್ತವ ದ್ವಿಜ ।**
**ತಥಾಪಿ ವಚ್ಮಿ ಮಾಂ ಯಸ್ಮಾನ್ನಿಹೀನಂ ಮನ್ಯತೇ ಭವಾನ್ ॥ ೪೯ ॥**

ಸುತನುರುವಾಚ :—

**ಅಕ್ಷರಾಸ್ತು ದ್ವಿಪಂಚಾಶನ್ಮಾತೃಕಾಯಾಃ ಪ್ರಕೀರ್ತಿತಾಃ ॥ ೫೦ ॥**
**ಓಂಕಾರಃ ಪ್ರಥಮಸ್ತತ್ರ ಚತುರ್ದಶ ಸ್ವರಾಸ್ತಥಾ ।**
**ಸ್ಪರ್ಶಾಶ್ಚೈವ ತ್ರಯಸ್ತ್ರಿಂಶದನುಸ್ವಾರಾಸ್ತಥೈವ ಚ ॥ ೫೧ ॥**
**ವಿಸರ್ಜನೀಯಶ್ಚ ಪರೋ ಜಿಹ್ವಾಮೂಲೀಯ ಏವ ಚ ।**
**ಉಪಧ್ಮಾನೀಯ ಏವಾಪಿ ದ್ವಿಪಂಚಾಶದಮೀ ಸ್ಮೃತಾಃ ॥ ೫೨ ॥**
**ಇತಿ ತೇ ಕಥಿತಾ ಸಂಖ್ಯಾ ಅರ್ಥಂ ಚೈಷಾಂ ಶೃಣು ದ್ವಿಜ ।**
**ಅಸ್ಮಿನ್ನರ್ಥೇ ಚೇತಿಹಾಸಂ ತವ ವಕ್ಷ್ಯಾಮಿ ಯಃ ಪುರಾಃ ॥ ೫೩ ॥**

---

೪೮. ಅನಂತರ ನಾನು ಅತಿ ವಿಸ್ಮಿತನಾದೆನು. 'ನಾನು ಕೃತಾರ್ಥನಾದೆ' ಎಂದು ಭಾವಿಸಿಕೊಂಡೆನು. ಅವರಲ್ಲಿ ಯಾರು ಬುದ್ಧಿಕಡಮೆಯಾದವನಾಗಿರಬಹುದು ಎಂದು ಯೋಚಿಸಿನೋಡಿ (ಒಬ್ಬನನ್ನು ತೋರಿಸಿ) 'ಇವನು ಹೇಳಲಿ' ಎಂದೆನು.

೪೯. ಬಳಿಕ, ಬಾಲಕನಾದರೂ ಬುದ್ಧಿಯಲ್ಲಿ ಬಾಲಕನಲ್ಲದಿರುವ ಸುತನುವೆಂಬ ಹೆಸರುಳ್ಳ ಆತನು ನನ್ನನ್ನು ಕುರಿತು ಹೇಳತೊಡಗಿದನು: "ಅಯ್ಯಾ ಬ್ರಾಹ್ಮಣನೇ! ನಿನ್ನ ಈ ಸ್ವಲ್ಪ ಪ್ರಶ್ನೆಗಳಿಂದ ನನ್ನ ವಾಣಿಯು ಮಂದವಾಗುತ್ತಿದೆ. "ಇಷ್ಟು ಅಲ್ಪವಾದ ಪ್ರಶ್ನೆಗಳಿಗೆ ಉತ್ತರ ಹೇಳಬೇಕಲ್ಲಾ ಎಂದು ನಾಚಿಕೆಯಿಂದ ನನ್ನ ಮಾತು ತಡೆಯುತ್ತಿದೆ. ಹಾಗಿದ್ದರೂ, ನನ್ನನ್ನು ಬುದ್ಧಿಕಡಮೆಯಾದವನೆಂದು ನೀನು ಭಾವಿಸಿದೆಯಾದುದರಿಂದ, ನಾನು ಉತ್ತರ ಹೇಳುತ್ತೇನೆ."

೫೦. ಎಂದು ನುಡಿದು, ಸುತನುವು ಮುಂದುವರಿಸಿ ಹೇಳತೊಡಗಿದನು. "ಮಾತೃಕೆಗೆ (ವರ್ಣಮಾಲೆಗೆ) ಅಕ್ಷರಗಳು ಐವತ್ತೆರಡೆಂದು ಹೇಳಲ್ಪಟ್ಟಿವೆ.

೫೧. ಅದರಲ್ಲಿ ಓಂಕಾರವೇ ಮೊದಲನೆಯದು. ಆಮೇಲೆ ಹದಿನಾಲ್ಕು ಸ್ವರಗಳು. ಸ್ಪರ್ಶಗಳು ಮೂವತ್ತುಮೂರು. ಅನುಸ್ವಾರ ಒಂದು.

೫೨. ವಿಸರ್ಜನೀಯ (ವಿಸರ್ಗ), ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯ ಇವು ಒಂದೊಂದು. ಈ ರೀತಿ ಅಕ್ಷರಗಳು ಐವತ್ತೆರಡೆನ್ನಿಸಿಕೊಳ್ಳುತ್ತವೆ.

೫೩–೫೪. ಹೀಗೆ ಅಕ್ಷರಗಳ ಸಂಖ್ಯೆಯನ್ನು ನಿನಗೆ ತಿಳಿಸಿಯಾಯಿತು. ಅಯ್ಯಾ ದ್ವಿಜನೇ! ಇವುಗಳ ಅರ್ಥವನ್ನು ಕೇಳು. ಈ ವಿಷಯಕ್ಕೆ ಹೊಂದುವ

ಮಿಥಿಲಾಯಾಂ ಪ್ರವೃತ್ತೋಽಭೂದ್ಬ್ರಾಹ್ಮಣಸ್ಯ ನಿವೇಶನೇ ।
ಮಿಥಿಲಯಾಂ ಪುರಾ ಪುರ್ಯಾಂ ಬ್ರಾಹ್ಮಣಃ ಕೌಥುಮಾಭಿದಃ ॥ ೫೪ ॥
ಯೇನ ವಿದ್ಯಾಃ ಪ್ರಪಠಿತಾ ವರ್ತಂತೇ ಭುವಿ ಯಾ ದ್ವಿಜ ।
ಏಕತ್ರಿಂಶತ್ಸಹಸ್ರಾಣಿ ವರ್ಷಾಣಾಂ ಸ ಕೃತಾದರಃ । ॥ ೫೫ ॥
ಕ್ಷಣಮಪ್ಯನವಚ್ಛಿನ್ನಂ ಪಠಿತ್ವಾ ಗೇಹವಾನಭೂತ್ ।
ತತಃ ಕೇನಾಪಿ ಕಾಲೇನ ಕೌಥುಮಸ್ಯಾಭವತ್ಸುತಃ ॥ ೫೬ ॥
ಜಡವದ್ವರ್ತಮಾನಃ ಸ ಮಾತೃಕಾಂ ಪ್ರತ್ಯಪದ್ಯತ ।
ಪಠಿತ್ವಾ ಮಾತೃಕಾಮನ್ಯನ್ನಾಧ್ಯೇತಿ ಸ ಕಥಂಚನ ॥ ೫೭ ॥
ತತಃ ಪಿತಾ ಖಿನ್ನರೂಪೀ ಜಡಂ ತಂ ಸಮಭಾಷತ ।
ಅಧೀಷ್ವ ಪುತ್ರಕಾಧೀಷ್ವ ತವ ದಾಸ್ಯಾಮಿ ಮೋದಕಾನ್ ॥ ೫೮ ॥
ಅಥಾನ್ಯಸ್ಮೈ ಪ್ರದಾಸ್ಯಾಮಿ ಕರ್ಣಾವುತ್ಪಾಟಯಾಮಿ ತೇ ॥ ೫೯ ॥
ಪುತ್ರ ಉವಾಚ:—
ತಾತ ಕಿಂ ಮೋದಕಾರ್ಥಾಯ ಪಠ್ಯತೇ ಲೋಭಹೇತವೇ ।
ಪಠನಂ ನಾಮ ಯತ್ಪುಂಸಾಂ ಪರಮಾರ್ಥಂ ಹಿ ತತ್ ಸ್ಮೃತಂ ॥ ೬೦ ॥

---

ದಾಗಿಯೂ ಪೂರ್ವದಲ್ಲಿ ಮಿಥಿಲೆಯಲ್ಲಿ ಬ್ರಾಹ್ಮಣನ ಮನೆಯಲ್ಲಿ ನಡೆದುದಾಗಿಯೂ ಇರುವ ಒಂದಾನೊಂದು ಇತಿಹಾಸವನ್ನು ನಿನಗೆ ವಿವರಿಸುತ್ತೇನೆ. ಪೂರ್ವದಲ್ಲಿ ಮಿಥಿಲಾ ಪಟ್ಟಣದಲ್ಲಿ ಕೌಥುಮನೆಂಬ ಒಬ್ಬ ಬ್ರಾಹ್ಮಣನಿದ್ದನು.

೫೫–೫೯. ಅವನು ಭೂಮಿಯಲ್ಲಿ ಯಾವ ಯಾವ ವಿದ್ಯೆಗಳುಂಟೋ ಅವನ್ನೆಲ್ಲ ಬಹು ಆದರದಿಂದ ಮೂವತ್ತೊಂದು ಸಾವಿರ ವರ್ಷಗಳವರೆಗೆ ಅಭ್ಯಾಸ ಮಾಡಿದನು. ಅಷ್ಟುಕಾಲದವರೆಗೂ ಒಂದು ಕ್ಷಣವೂ ಬಿಡುವಿಲ್ಲದಂತೆ ಓದಿ ಆಮೇಲೆ ಗೃಹಸ್ಥನಾದನು. ಬಳಿಕ ಕೆಲವುಕಾಲ ಕಳೆಯಲು ಕೌಥುಮನಿಗೆ ಒಬ್ಬ ಮಗನಾದನು. ಅವನು ಜಡನಂತೆಯೇ ಇರುತ್ತ ಮಾತೃಕೆಯನ್ನು (ಅಕ್ಷರ ಮಾಲೆಯನ್ನು) ಮಾತ್ರ ಕಲಿತುಕೊಂಡನು. ಮಾತೃಕೆಯನ್ನೋದಿ ಆಮೇಲೆ ಆ ಹುಡುಗನು ಹೇಗೂ ಬೇರೊಂದನ್ನೂ ಕಲಿಯಲಿಲ್ಲ. ಬಳಿಕ ತಂದೆಯು ಖಿನ್ನನಾಗಿ ಆ ಜಡನನ್ನು ಕುರಿತು, "ಓದು ಮಗು ಓದು, ನಿನಗೆ ಕಡುಬುಗಳನ್ನು ಕೊಡುತ್ತೇನೆ. ಹಾಗೆ ನೀನು ಓದದೆ ಹೋದರೆ, ಅವನ್ನು ಬೇರೆಯವನಿಗೆ ಕೊಟ್ಟುಬಿಡುತ್ತೇನೆ; ನಿನ್ನ ಕಿವಿಗಳನ್ನೂ ಕಿತ್ತುಬಿಡುತ್ತೇನೆ" ಎಂದು ಹೇಳಿದನು.

೬೦. ಅದಕ್ಕೆ ಆ ಮಗನು, "ಅಪ್ಪಾ, ಕಡುಬು ಸಿಕ್ಕುವುದೆಂಬ ಆಸೆಯಿಂದ ಓದಬೇಕೆ? ಲೋಭಕಾರಣದಿಂದ ಓದುತ್ತಾರೆಯೇ? ಓದುವುದೆಂಬುದು ಮನುಷ್ಯರಿಗೆ ಪರಮಾರ್ಥವೆಂದು ಹೇಳಲ್ಪಟ್ಟಿದೆಯಲ್ಲವೆ?" ಎಂದು ಉತ್ತರವಿತ್ತನು.

ಕೌಥುಮ ಉವಾಚ :—
ಏವಂ ತೇ ವದಮಾನಸ್ಯ ಆಯುರ್ಭವತು ಬ್ರಹ್ಮಣಃ ।
ಸಾಧ್ವೀ ಬುದ್ಧಿರಿಯಂ ತೇಽಸ್ತು ಕುತೋ ನಾಧ್ಯೇಷ್ಯತಃ ಪರಂ ॥ ೬೦ ॥
ಪುತ್ರ ಉವಾಚ :—
ತಾತ ಸರ್ವಂ ಪರಿಜ್ಞೇಯಂ ಜ್ಞಾತಮತ್ರೈವ ವೈ ಯತಃ ।
ತತಃ ಪರಂ ಕಂಠಶೋಷಃ ಕಿಮರ್ಥಂ ಕ್ರಿಯತೇ ವದ ॥ ೬೨ ॥
ಪಿತೋವಾಚ :—
ವಿಚಿತ್ರಂ ಭಾಷಸೇ ಬಾಲ ಜ್ಞಾತೋಽತ್ರಾರ್ಥಶ್ಚ ಕಸ್ತ್ವಯಾ ।
ಬ್ರೂಹಿ ಬ್ರೂಹಿ ಪುನರ್ವತ್ಸ ಶ್ರೋತುಮಿಚ್ಛಾಮಿ ತೇ ಗಿರಂ ॥ ೬೩ ॥
ಪುತ್ರ ಉವಾಚ :—
ಏಕತ್ರಿಂಶಸ್ಸಹಸ್ರಾಣಿ ಪಠಿತ್ವಾಪಿ ತ್ವಯಾ ಪಿತಃ ।
ನಾನಾ ತರ್ಕಾನ್ ಭ್ರಾಂತಿರೇವ ಸಂಧಿತಾ ಮನಸಿ ಸ್ವಕೇ ॥ ೬೪ ॥
ಅಯಮಯಂಚಾಯಮಿತಿ ಧರ್ಮೋ ಯೋ ದರ್ಶನೋದಿತಃ ।
ತೇಷು ವಾತಾಯತೇ ಚೇತಸ್ತವ ತನ್ನಾಶಯಾಮಿ ತೇ ॥ ೬೫ ॥

---

೬೧. ಮಗನ ಮಾತನ್ನು ಕೇಳಿ ಕೌಥುಮನಿಂತೆಂದನು :—" ಹೀಗೆ ಹೇಳುತ್ತಿರುವ ನಿನಗೆ ಬ್ರಹ್ಮನ ಆಯುಸ್ಸುಂಟಾಗಲಿ; ನಿನಗೆ ಇಂಥ ಒಳ್ಳೆಯ ಬುದ್ಧಿಯೇ ಉಂಟಾಗಲಿ. ನೀನು ಅದೇಕೆ ಅಧ್ಯಯನಮಾಡುವುದಿಲ್ಲ ಹೇಳು."

೬೨. ಅದಕ್ಕೆ ಮಗನು, " ಅಪ್ಪಾ, ತಿಳಿದುಕೊಳ್ಳಬೇಕಾದದ್ದು ಏನೇನು ಇದೆಯೋ ಅದೆಲ್ಲವೂ ಇಷ್ಟರಲ್ಲಿಯೇ ತಿಳಿದುಹೋಯಿತು. ತಿಳಿಯಬೇಕಾದ ಸರ್ವವೂ ತಿಳಿದಮೇಲೆ ಮತ್ತೇಕೆ ಓದಿ ಗಂಟಲೊಣಗಿಸಿಕೊಳ್ಳಬೇಕು? ಹೇಳು" ಎಂದನು.

೬೩. ಅದನ್ನು ಕೇಳಿ, ತಂದೆಯು " ಮಗೂ, ವಿಚಿತ್ರವಾಗಿ ಮಾತಾಡುತ್ತಿರುವೆಯಲ್ಲಾ; ಇಲ್ಲಿ ನೀನು ಯಾವ ಅರ್ಥವನ್ನು ತಿಳಿದುಕೊಂಡಿರುವೆ? ಹೇಳು, ಹೇಳು; ಮಗನೇ, ಮತ್ತೂ ಹೇಳು, ನಿನ್ನ ಮಾತುಗಳನ್ನು ಕೇಳಲಿಚ್ಛಿಸುತ್ತಿದ್ದೇನೆ" ಎಂದನು.

೬೪. ಮಗನು ಈ ರೀತಿ ಉತ್ತರ ಕೊಟ್ಟನು :—" ತಂದೆಯೇ! ನೀನು ಮೂವತ್ತೊಂದುಸಾವಿರ ವರ್ಷಗಳವರೆಗೆ ನಾನಾ ಬಗೆಯ ತರ್ಕಗಳನ್ನು ಓದಿದೆ; ಆದರೂ ನಿನ್ನ ಮನಸ್ಸಿನಲ್ಲಿ ಬರಿಯ ಭ್ರಾಂತಿಯೇ ನೆಲೆಗೊಂಡಿರುವುದು.

೬೫. ದರ್ಶನಗಳಲ್ಲಿ ಧರ್ಮವೆಂಬುದು ಇದು, ಇದು, ಇದು ಎಂದು ಅನೇಕ ಬಗೆಯಾಗಿ ಹೇಳಲ್ಪಟ್ಟಿದೆ. ಅವುಗಳಲ್ಲಿ ನಿನ್ನ ಮನಸ್ಸು ಗಾಳಿಯಂತೆ ಹುಯ್ದಾಡುತ್ತಿದೆ. ಆ ಬಗೆಯ ನಿನ್ನ ಮನಸ್ಸಿನ ಹುಯ್ದಾಟವನ್ನು ನಾಶ ಮಾಡುತ್ತೇನೆ.

ಉಪದೇಶಂ ಪಠಸ್ಯೇವ ನೈವಾರ್ಥಜ್ಞೋಽಸಿ ತತ್ತ್ವತಃ ।
ಪಾಠಮಾತ್ರಾ ಹಿ ಯೇ ವಿಪ್ರಾ ದ್ವಿಪದಾಃ ಪಶವೋ ಹಿ ತೇ ॥ ೬೬ ॥
ತತ್ತೇ ಬ್ರವೀಮಿ ತದ್ವಾಕ್ಯಂ ಮೋಹಮಾರ್ತಾಂಡಮದ್ಭುತಂ ॥ ೬೭ ॥
ಅಕಾರಃ ಕಥಿತೋ ಬ್ರಹ್ಮಾ ಉಕಾರೋ ವಿಷ್ಣುರುಚ್ಯತೇ ।
ಮಕಾರಶ್ಚ ಸ್ಮೃತೋ ರುದ್ರಸ್ತ್ರಯಶ್ಚೈತೇ ಗುಣಾಃ ಸ್ಮೃತಾಃ ॥ ೬೮ ॥
ಅರ್ಧಮಾತ್ರಾ ಚ ಯಾ ಮೂರ್ಧ್ನಿ ಪರಮಃ ಸ ಸದಾಶಿವಃ ।
ಏವಮೋಂಕಾರ ಮಾಹಾತ್ಮ್ಯಂ ಶ್ರುತಿರೇಷಾ ಸನಾತನೀ ॥ ೬೯ ॥
ಓಂಕಾರಸ್ಯ ಚ ಮಾಹಾತ್ಮ್ಯಂ ಯಾಥಾತ್ಮ್ಯೇನ ನ ಶಕ್ಯತೇ ।
ವರ್ಷಾಣಾಮಯುತೇನಾಪಿ ಗ್ರಂಥಕೋಟಿಭಿರೇವ ವಾ ॥ ೭೦ ॥
ಪುನರ್ಯತ್ಸಾರಸರ್ವಸ್ವಂ ಪ್ರೋಕ್ತಂ ತಚ್ಛ್ರೂಯತಾಂ ಪರಂ ।
ಅಃ ಕಾರಾಂತಾ ಅಕಾರಾದ್ಯಾ ಮನವಸ್ತೇ ಚತುರ್ದಶ ॥ ೭೧ ॥

---

೬೬. ನೀನು ಗುರುಗಳಿಂದ ಪಡೆದಿರುವ ಉಪದೇಶವನ್ನು ಪಠಿಸುತ್ತಲೇ ಇದ್ದೀಯೆ. ನಿಜವಾಗಿಯೂ ಅದರ ಅರ್ಥವೇನೆಂಬುದನ್ನು ಅರಿಯದವನಾಗಿದ್ದೀಯೆ. ಯಾವ ಬ್ರಾಹ್ಮಣರು ಅರ್ಥವನ್ನು ತಿಳಿದು ಜ್ಞಾನಿಗಳಾಗದೆ ಸುಮ್ಮನೆ ಕುರುಡುಕುರುಡಾಗಿ ಪಾಠ ಮಾಡುತ್ತಿರುವರೋ ಅವರು ಕೇವಲ ಎರಡು ಕಾಲಿನ ಪಶುಗಳೇ ಸರಿ.

೬೭. ಆದುದರಿಂದ ಮೋಹಮಾರ್ತಂಡವೆನಿಸಿರುವ (ಮೋಹವನ್ನು ಹೋಗಲಾಡಿಸುವ—ಅಜ್ಞಾನವೆಂಬ ಕತ್ತಲೆಯನ್ನು ಕಳೆಯುವ ಸೂರ್ಯನಿಗೆ ಸಾಟಿಯಾದ) ಅದ್ಭುತವಾದ ವಾಕ್ಯವನ್ನು ನಿನಗೆ ಹೇಳುತ್ತೇನೆ.

೬೮. ಅಕಾರವು ಬ್ರಹ್ಮನೆಂದು ಹೇಳಲ್ಪಡುತ್ತದೆ. ಉಕಾರವು ವಿಷ್ಣುವೆನಿಸುತ್ತದೆ. ಮಕಾರವು ರುದ್ರನೆಂದು ಹೇಳಲಾಗಿದೆ. ಈ ಮೂರೂ ಸತ್ತ್ವ, ರಜಸ್ಸು, ತಮಸ್ಸು ಎಂಬ ಗುಣಗಳೆಂದು ಭಾವಿಸಲ್ಪಡುತ್ತವೆ.

೬೯. ತಲೆಯಮೇಲಿರುವ ಅರ್ಧಮಾತ್ರೆ (ಬಿಂದು) ಯಾವುದುಂಟೋ ಅದು ಎಲ್ಲಕ್ಕೂ ಉತ್ಕೃಷ್ಟನಾದ ಸದಾಶಿವನು. ಹೀಗಿರುವುದು ಓಂಕಾರದ ಮಹಾತ್ಮೆಯು. ಸನಾತನವಾದ ಶ್ರುತಿಯು ಹೇಳುವುದೇ ಇದು.

೭೦. ಓಂಕಾರದ ಮಹಾತ್ಮೆಯನ್ನು ಇದ್ದದ್ದಿದ್ದಂತೆ ವರ್ಣಿಸಲು ಹತ್ತು ಸಾವಿರ ವರ್ಷಗಳಾದರೂ ಶಕ್ಯವಾಗುವುದಿಲ್ಲ ; ಕೋಟಿಗಟ್ಟಳೆ ಗ್ರಂಥಗಳಿಂದಲೂ ವರ್ಣಿಸಲು ಸಾಧ್ಯವಾಗುವುದಿಲ್ಲ.

೭೧. ಸಾರಸರ್ವಸ್ವವೆಂದು ಯಾವುದು ಹೇಳಲಾಗಿದೆಯೋ ಆ ಶ್ರೇಷ್ಠ ವಿಷಯವನ್ನು ಕೇಳುವವನಾಗು. ಅಕಾರದಿಂದ ಮೊದಲಾಗಿ ಅಃಕಾರದಲ್ಲಿ ಕೊನೆಯಾಗುವ ವರ್ಣಗಳು, ಅವು ಹದಿನಾಲ್ಕು ಮನುಗಳು.

ಸ್ವಾಯಂಭುವಶ್ಚ ಸ್ವಾರೋಚಿರೌತ್ತಮೋ ರೈವತಸ್ತಥಾ ।
ತಾಮಸಶ್ಚಾಕ್ಷುಷಃ ಷಷ್ಠಸ್ತಥಾ ವೈವಸ್ವತೋಽಧುನಾ ॥ ೭೨ ॥
ಸಾವರ್ಣಿರ್ಬ್ರಹ್ಮಸಾವರ್ಣೀ ರುದ್ರಸಾವರ್ಣಿರೇವ ಚ ।
ದಕ್ಷಸಾವರ್ಣಿರೇವಾಪಿ ಧರ್ಮಸಾವರ್ಣಿರೇವ ಚ ॥ ೭೩ ॥
ರೌಚ್ಯೋ ಭೌತ್ಯಸ್ತಥಾ ಚಾಪಿ ಮನವೋಽಮೀ ಚತುರ್ದಶ ।
ಶ್ವೇತಃ ಪಾಂಡುಸ್ತಥಾ ರಕ್ತಸ್ತಾಮ್ರಃ ಪೀತಶ್ಚ ಕಾಪಿಲಃ ॥ ೭೪ ॥
ಕೃಷ್ಣಃ ಶ್ಯಾಮಸ್ತಥಾ ಧೂಮ್ರಃ ಸುಪಿಶಂಗಃ ಪಿಶಂಗಕಃ ।
ತ್ರಿವರ್ಣಃ ಶಬಲೋ ವರ್ಣೈಃ ಕರ್ಕಂಧುರ ಇತಿ ಕ್ರಮಾತ್ ॥ ೭೫ ॥
ವೈವಸ್ವತಃ ಕ್ಷಕಾರಶ್ಚ ತಾತ ಕೃಷ್ಣಃ ಪ್ರದೃಶ್ಯತೇ ।
ಕಕಾರಾದ್ಯಾ ಹಕಾರಾಂತಾಸ್ತ್ರಯಸ್ತ್ರಿಂಶಚ್ಚ ದೇವತಾಃ ॥ ೭೬ ॥
ಕಕಾರಾದ್ಯಾಷ್ಟಕಾರಾಂತಾ ಆದಿತ್ಯಾ ದ್ವಾದಶ ಸ್ಮೃತಾಃ ।
ಧಾತಾ ಮಿತ್ರೋಽರ್ಯಮಾ ಶಕ್ರೋ ವರುಣಶ್ಚಾಂಶುರೇವಚ ॥ ೭೭ ॥
ಭಗೋ ವಿವಸ್ವಾನ್ ಪೂಷಾ ಚ ಸವಿತಾ ದಶಮಸ್ತಥಾ ।
ಏಕಾದಶಸ್ತಥಾ ತ್ವಷ್ಟಾ ವಿಷ್ಣುರ್ದ್ವಾದಶ ಉಚ್ಯತೇ ॥ ೭೮ ॥

---

೭೨–೭೫. ಸ್ವಾಯಂಭುವ, ಸ್ವಾರೋಚಿ, ಔತ್ತಮ, ರೈವತ, ತಾಮಸ, ಆರನೆಯವನಾದ ಚಾಕ್ಷುಷ, ಈಗಿನ ವೈವಸ್ವತ, ಸಾವರ್ಣಿ, ಬ್ರಹ್ಮಸಾವರ್ಣಿ, ರುದ್ರಸಾವರ್ಣಿ, ದಕ್ಷಸಾವರ್ಣಿ, ಧರ್ಮಸಾವರ್ಣಿ, ರೌಚ್ಯ, ಭೌತ್ಯ—ಈ ಹದಿನಾಲ್ಕು ಮಂದಿಗಳು ಮನುಗಳು; ಶ್ವೇತ, ಪಾಂಡು (ಈ ಎರಡೂ ಬಿಳುಪಿನ ಭೇದಗಳು); ರಕ್ತವರ್ಣ, ತಾಮ್ರವರ್ಣ, ಹಳದಿ, ಕಪಿಲ, ಕೃಷ್ಣ, ಶ್ಯಾಮ, ಧೂಮ್ರ (ಈ ಮೂರೂ ಕಪ್ಪಿನಲ್ಲಿ ಪ್ರಭೇದಗಳು), ಬಹುಪಿಶಂಗ (ಅಚ್ಚ ಕೇಸರಿಯ ಬಣ್ಣ), ಪಿಶಂಗ, ತ್ರಿವರ್ಣ (ಮೂರು ಬಣ್ಣ), ಶಬಲ (ಮಿಶ್ರವರ್ಣ), ಕರ್ಕಂಧುರ (ಕಂದು ಬಣ್ಣ) ಇವು ಕ್ರಮವಾಗಿ ಆ ಹದಿನಾಲ್ಕು ಮನುಗಳ ಬಣ್ಣಗಳು.

೭೬. ವೈವಸ್ವತ ಮನುವೇ ಕ್ಷಕಾರವು. ಅವನು ಕೃಷ್ಣವರ್ಣವಾಗಿ ಕಾಣುತ್ತಾನೆ. ಕಕಾರದಿಂದ ಮೊದಲಾಗಿ ಹಕಾರವೇ ಕೊನೆಯಾಗಿರುವ ಮೂವತ್ತುಮೂರು ಅಕ್ಷರಗಳೇ ಮೂವತ್ತುಮೂರು ದೇವತೆಗಳು.

೭೭–೭೮. ಕಕಾರದಿಂದ ಟಕಾರದವರೆಗಿನ ಅಕ್ಷರಗಳು ದ್ವಾದಶಾದಿತ್ಯರೆಂದು (ಹನ್ನೆರಡು ಮಂದಿ ಆದಿತ್ಯರೆಂದು) ಭಾವಿಸಲ್ಪಟ್ಟಿವೆ. ಧಾತಾ, ಮಿತ್ರ, ಅರ್ಯಮ, ಶಕ್ರ, ವರುಣ, ಅಂಶು, ಭಗ, ವಿವಸ್ವಾನ್, ಪೂಷ, ಹತ್ತನೆಯ ಸವಿತೃ, ಹನ್ನೊಂದನೆಯ ತ್ವಷ್ಟೃ, ಹನ್ನೆರಡನೆಯ ವಿಷ್ಣು — ಇವರೇ ದ್ವಾದಶಾದಿತ್ಯರು.

**ಜಘನ್ಯಜಃ ಸ ಸರ್ವೇಷಾ ಮಾದಿತ್ಯಾನಾಂ ಗುಣಾಧಿಕಃ ।**
**ಡಕಾರಾದ್ಯಾ ಬಕಾರಾಂತ ರುದ್ರಾಶ್ಚೈಕಾದಶೈವತು ॥ ೭೯ ॥**
**ಕಪಾಲೀ ಪಿಂಗಲೋ ಭೀಮೋ ವಿರೂಪಾಕ್ಷೋ ವಿಲೋಹಿತಃ ।**
**ಅಜಕಃ ಶಾಸನಃ ಶಾಸ್ತಾ ಶಂಭುಶ್ಚಂಡೋ ಭವಸ್ತಥಾ ॥ ೮೦ ॥**
**ಭಕಾರಾದ್ಯಾಃ ಷಕಾರಾಂತಾ ಅಷ್ಟೌ ಹಿ ವಸವೋ ಮತಾಃ ।**
**ಧ್ರುವೋ ಘೋರಶ್ಚ ಸೋಮಶ್ಚ ಆಪಶ್ಚೈವ ನಲೋಽನಿಲಃ ॥ ೮೧ ॥**
**ಪ್ರತ್ಯೂಷಶ್ಚ ಪ್ರಭಾಸಶ್ಚ ಅಷ್ಟೌ ತೇ ವಸವಃ ಸ್ಮೃತಾಃ ।**
**ಸೌ ಹಶ್ಚೇತ್ಯಶ್ವಿನೌ ಖ್ಯಾತೌ ತ್ರಯಸ್ತ್ರಿಂಶದಿಮೇ ಸ್ಮೃತಾಃ ॥ ೮೨ ॥**
**ಅನುಸ್ವಾರೋ ವಿಸರ್ಗಶ್ಚ ಜಿಹ್ವಾಮೂಲೀಯಮ ಏವ ಚ ।**
**ಉಪಧ್ಮಾನೀಯ ಇತ್ಯೇತೇ ಜರಾಯುಜಾಸ್ತಥಾಂಡಜಾಃ ॥ ೮೩ ॥**
**ಸ್ವೇದಜಾಶ್ಚೋದ್ಭಿಜಾಶ್ಚೇತಿ ತತ ಜೀವಾಃ ಪ್ರಕೀರ್ತಿತಾಃ ।**
**ಭಾವಾರ್ಥಃ ಕಥಿತಶ್ಚಾಯಂ ತತ್ತ್ವಾರ್ಥಂ ಶ್ರುಣು ಸಾಂಪ್ರತಂ ॥ ೮೪ ॥**

---

೭೯. ಆ ಎಲ್ಲ ಆದಿತ್ಯರಲ್ಲಿಯೂ ಕೊಟ್ಟ ಕೊನೆಯವನೇ ಗುಣದಲ್ಲಿ ಅಧಿಕನಾಗಿರುವವನು. ಡಕಾರದಿಂದ ಹಿಡಿದು ಬಕಾರವೇ ಕೊನೆಯಾಗಿರುವ ಅಕ್ಷರಗಳು ಏಕಾದಶ (ಹನ್ನೊಂದು) ರುದ್ರರು.

೮೦. ಅವರು ಯಾರೆಂದರೆ:—ಕಪಾಲಿ, ಪಿಂಗಲ, ಭೀಮ, ವಿರೂಪಾಕ್ಷ, ವಿಲೋಹಿತ, ಅಜಕ, ಶಾಸನ, ಶಾಸ್ತಾ, ಶಂಭು, ಚಂಡ ಮತ್ತು ಭವ.

೮೧-೮೨. ಭಕಾರವು ಆದಿಯಾಗಿಯೂ ಷಕಾರವು ಅಂತ (ಕೊನೆ) ವಾಗಿಯೂ ಉಳ್ಳ ಅಕ್ಷರಗಳು ಅಷ್ಟ (ಎಂಟು) ವಸುಗಳೆನ್ನಲ್ಪಡುವುವು. ಧ್ರುವ, ಘೋರ, ಸೋಮ, ಆಪ, ನಲ, ಅನಿಲ, ಪ್ರತ್ಯೂಷ, ಪ್ರಭಾಸ ಎಂಬ ಎಂಟು ಮಂದಿಯೇ ಆ ಅಷ್ಟವಸುಗಳು. ಸಕಾರ ಹಕಾರಗಳು ಅಶ್ವಿನೀ ದೇವತೆಗಳು. ಇವರೇ ಮೂವತ್ತುಮೂರು ದೇವತೆಗಳೆಂದು ಪ್ರಸಿದ್ಧರಾಗಿರುವರು.

೮೩–೮೪. ಅನುಸ್ವಾರ, ವಿಸರ್ಗ, ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯ— ಇವು ಜರಾಯುಜ (ಗರ್ಭಚೀಲದಿಂದ ಹುಟ್ಟುವವು), ಅಂಡಜ (ಮೊಟ್ಟೆಯಿಂದ ಹುಟ್ಟುವವು), ಸ್ವೇದಜ (ಬೆವರಿನಿಂದ ಹುಟ್ಟುವಂಥವು) ಮತ್ತು ಉದ್ಭಿಜ (ಭೂಮಿಯಿಂದ ಹುಟ್ಟುವಂಥವು)— ಎಂಬ ಇವು ನಾಲ್ಕು ಬಗೆಯ ಜೀವಗಳೆಂದು ಹೇಳಲ್ಪಡುವುವು. ಭಾವಾರ್ಥವನ್ನು ಹೇಳಿದುದಾಯಿತು. ಇನ್ನು ತತ್ತ್ವಾರ್ಥವನ್ನು ಆಲಿಸುವವನಾಗು.

ಯೇ ಪುಮಾಂಸಸ್ತ್ವಮೂನ್ ದೇವಾನ್ ಸಮಾಶ್ರಿತ್ಯ ಕ್ರಿಯಾಪರಾಃ ।
ಅರ್ಧಮಾತ್ರಾತ್ಮಕೇ ನಿತ್ಯೇ ಪದೇ ಲೀನಾಸ್ತ ಏವ ಹಿ ॥ ೮೫ ॥
ಚತುರ್ಣಾಂ ಜೀವಯೋನೀನಾಂ ತದೈವ ಪರಿಮುಚ್ಯತೇ ।
ಯದಾಭ್ಯೂನ್ಮನಸಾ ವಾಚಾ ಕರ್ಮಣಾ ಚ ಜಯೇತ್ ಸುರಾನ್ ॥ ೮೬ ॥
ಯಸ್ಮಿನ್‌ಶಾಸ್ತ್ರೇ ತ್ವಮೀ ದೇವಾ ಮಾನಿತಾ ನೈವ ಪಾಪಿಭಿಃ ।
ತಚ್ಛಾಸ್ತ್ರಂ ಹಿ ನ ಮಂತವ್ಯಂ ಯದಿ ಬ್ರಹ್ಮಾ ಸ್ವಯಂ ವದೇತ್ ॥ ೮೭ ॥
ಅಮೀ ಚ ದೇವಾಃ ಸರ್ವತ್ರ ಶ್ರೌತೇ ಮಾರ್ಗೇ ಪ್ರತಿಷ್ಠಿತಾಃ ।
ಪಾಷಂಡಶಾಸ್ತ್ರೇ ಸರ್ವತ್ರ ನಿಷಿದ್ಧಾಃ ಪಾಪಕರ್ಮಭಿಃ ॥ ೮೮ ॥
ತದಮೂನ್ಯೇ ವ್ಯತಿಕ್ರಮ್ಯ ತಪೋದಾನಮುಖೋ ಜಪಂ ।
ಪ್ರಕುರ್ವಂತಿ ದುರಾತ್ಮಾನೋ ವೇಪಂತೇ ಮರುತಃ ಪಥಿ ॥ ೮೯ ॥
ಅಹೋ ಮೋಹಸ್ಯ ಮಾಹಾತ್ಮ್ಯಂ ಪಶ್ಯತಾವಿಜಿತಾತ್ಮನಾಂ ।
ಪಠಂತಿ ಮಾತೃಕಾಂ ಪಾಪಾ ಮನ್ಯಂತೇ ನ ಸುರಾನಿಹ ॥ ೯೦ ॥

---

೮೫. ಯಾವ ಮನುಷ್ಯರು ಈ ದೇವತೆಗಳನ್ನು ಚೆನ್ನಾಗಿ ಆಶ್ರಯಿಸಿ ಕ್ರಿಯೆಗಳನ್ನು ನಡೆಸುತ್ತಿರುತ್ತಾರೆಯೋ ಅವರು ಅರ್ಧಮಾತ್ರಾರೂಪವಾದ ನಿತ್ಯಪದದಲ್ಲಿ ಪ್ರಣವಬಿಂದುವಿನಲ್ಲಿ (ಶಾಶ್ವತ ಪದವಿಯಲ್ಲಿ) ಲೀನರಾಗಿರುತ್ತಾರೆ.

೮೬. ಮನುಷ್ಯರು ಮನಸ್ಸಿನಿಂದ, ಮಾತಿನಿಂದ ಮತ್ತು ಕರ್ಮದಿಂದ ಈ ಮೂರರಿಂದಲೂ ದೇವತೆಗಳನ್ನು ಯಾವಾಗ ಪೂಜಿಸುವರೋ ಆಗಲೆಯೇ ನಾಲ್ಕು ಬಗೆಯಾದ ಜೀವಯೋನಿಗಳಿಂದಲೂ ಬಿಡುಗಡೆ ಹೊಂದುವವರಾಗುತ್ತಾರೆ.

೮೭. ಯಾವ ಶಾಸ್ತ್ರದಲ್ಲಿ ಪಾಪಿಗಳಿಂದ (ಪಾಪಿಗಳಾದ ಆ ಶಾಸ್ತ್ರಕರ್ತೃಗಳಿಂದ) ಈ ದೇವತೆಗಳಿಗೆ ಮರ್ಯಾದೆ ಸಲ್ಲುವುದಿಲ್ಲವೋ, ಆ ಶಾಸ್ತ್ರವನ್ನು ಬ್ರಹ್ಮನೇ ಸ್ವಂತವಾಗಿ ಬಂದು ಹೇಳಿದರೂ ಮನ್ನಿಸತಕ್ಕುದಲ್ಲ.

೮೮. ಈ ದೇವತೆಗಳು ಶ್ರೌತಮಾರ್ಗದಲ್ಲಿ ಎಲ್ಲೆಡೆಗಳಲ್ಲಿಯೂ ಪ್ರತಿಷ್ಠಿಸಲ್ಪಟ್ಟಿದ್ದಾರೆ. ಪಾಷಂಡ ಶಾಸ್ತ್ರಗಳಲ್ಲಿ ಪಾಪಕರ್ಮಿಗಳಿಂದ ಎಲ್ಲೆಡೆಗಳಲ್ಲಿಯೂ ನಿಷೇಧಿಸಲಾಗಿದ್ದಾರೆ.

೮೯. ಆದುದರಿಂದ ಈ ದೇವತೆಗಳನ್ನು ಆದರಿಸದೆ ಮೀರಿ, ಯಾವ ದುರಾತ್ಮರು ತಪಸ್ಸು, ದಾನ ಮತ್ತು ಜಪಗಳನ್ನು ಮಾಡುತ್ತಾರೋ ಅವರು ಗಾಳಿಯಲ್ಲಿ ತೂರಿಹೋಗುವ ತರಗಿನಂತೆ ನಡಗುತ್ತಾರೆ.

೯೦. ಆಹಾ! ಆತ್ಮವನ್ನು ಜಯಿಸದಿರುವವರ ಮೋಹದ ಮಹಿಮೆಯನ್ನು ಎಷ್ಟೆಂದು ಹೇಳೋಣ! ಆ ಪಾಪಿಗಳು ಮಾತೃಕೆಯನ್ನು ಪಾಠಮಾಡುತ್ತಾರೆ, ಆದರೆ ದೇವತೆಗಳನ್ನು ಮಾತ್ರ ಮನ್ನಿಸುವುದಿಲ್ಲ.''

ಸುತನುರುವಾಚ :—

ಇತಿ ತಸ್ಯ ವಚಃ ಶ್ರುತ್ವಾ ಪಿತಾಭೂದತಿವಿಸ್ಮಿತಃ ।
ಪಪ್ರಚ್ಛ ಚ ಬಹೂನ್ ಪ್ರಶ್ನಾನ್ ಸೋಽಪ್ಯವಾದೀತ್ತಥಾತಥಾ ॥ ೯೧ ॥
ಮಯಾಪಿ ತವ ಪ್ರೋಕ್ತೋಽಯಂ ಮಾತೃಕಾ ಪ್ರಶ್ನ ಉತ್ತಮಃ ।
ದ್ವಿತೀಯಂ ಶೃಣು ತಂ ಪ್ರಶ್ನಂ ಪಂಚ ಪಂಚಾದ್ಭುತಂ ಗೃಹಂ ॥ ೯೨ ॥
ಪಂಚಭೂತಾನಿ ಪಂಚೈವ ಕರ್ಮಜ್ಞಾನೇಂದ್ರಿಯಾಣಿ ಚ ।
ಪಂಚ ಪಂಚಾಪಿ ವಿಷಯಾ ಮನೋ ಬುಧ್ಯಹಮೇವ ಚ ॥ ೯೩ ॥
ಪ್ರಕೃತಿಃ ಪುರುಷಶ್ಚೈವ ಪಂಚವಿಂಶಃ ಸದಾಶಿವಃ ।
ಪಂಚ ಪಂಚಾಭಿರೇತೈಸ್ತು ನಿಷ್ಪನ್ನಂ ಗೃಹಮುಚ್ಯತೇ ॥ ೯೪ ॥
ದೇಹಮೇತದಿದಂ ವೇದ ತತ್ತ್ವತೋ ಯಾತ್ಯಸೌ ಶಿವಂ ।
ಬಹುರೂಪಾಂ ಸ್ತ್ರಿಯಂ ಪ್ರಾಹುರ್ಬುದ್ಧಿಂ ವೇದಾಂತವಾದಿನಃ ॥ ೯೫ ॥
ಸಾ ಹಿ ನಾನಾರ್ಥಭಜನಾನ್ನಾನಾರೂಪಂ ಪ್ರಪದ್ಯತೇ ।
ಧರ್ಮಸ್ಯೈಕಸ್ಯ ಸಂಯೋಗಾದ್ಬಹುಧಾಪ್ಯೈಕಕೈವ ಸಾ ॥ ೯೬ ॥

---

೯೧. ಸುತನುವು ಹೇಳುತ್ತಾನೆ:—ಹೀಗೆ ಹೇಳಿದ ಆ ಮಗನ ಮಾತುಗಳನ್ನು ಕೇಳಿ ತಂದೆಯು ಅತಿ ವಿಸ್ಮಿತನಾದನು. ಅವನನ್ನು ಬಹು ಪ್ರಶ್ನೆಗಳನ್ನು ಕೇಳಿದನು. ಅವನು ಕೇಳಿದ ಪ್ರಶ್ನೆಗಳೆಲ್ಲಕ್ಕೂ ತಕ್ಕ ತಕ್ಕ ಉತ್ತರಗಳನ್ನು ಕೊಟ್ಟನು.

೯೨. ಈ ಉತ್ತಮವಾದ ಮಾತೃಕಾ ಪ್ರಶ್ನೆಯನ್ನು ನಾನೂ ಸಹ ನಿನಗೆ ಹೇಳಿದ್ದೇನೆ. ಐದೈದು (ಪಂಚ ಪಂಚ) ಅದ್ಭುತಗಳುಳ್ಳ ಮನೆ ಯಾವುದೆಂಬ ಆ ಎರಡನೆಯ ಪ್ರಶ್ನೆಗೂ ಉತ್ತರವನ್ನು ಆಲಿಸುವವನಾಗು.

೯೩–೯೫. ಪಂಚ(ಐದು) ಭೂತಗಳು, ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು, ಐದು ವಿಷಯಗಳು, ಮನಸ್ಸು, ಬುದ್ಧಿ, ಅಹಂಕಾರ (ನಾನು ಎಂಬ ಅರಿವು), ಪ್ರಕೃತಿ, ಪುರುಷ ಇವುಗಳಲ್ಲಿ ಇಪ್ಪತ್ತೈದನೆಯದೇ ಎಂದರೆ ಪುರುಷನೇ ಸದಾಶಿವನು. ಈ ಇಪ್ಪತ್ತೈದರಿಂದ ಕೂಡಿ ಆಗಿರುವುದೇ ಗೃಹವೆನ್ನಿಸಿಕೊಳ್ಳುತ್ತದೆ. ಇದು ದೇಹವೆಂದು ತಿಳಿಯುತ್ತಾರೆ. ಇದು ತತ್ತ್ವತಃ ಶಿವನನ್ನೇ ಹೋಗಿ ಸೇರುತ್ತದೆ. ವೇದಾಂತವಾದಿಗಳು ಬುದ್ಧಿಯನ್ನೇ ಬಹುರೂಪಿಯಾದ ಸ್ತ್ರೀಯೆಂದು ಹೇಳುತ್ತಾರೆ.

೯೬. ಆ ಬುದ್ಧಿಯಾದರೋ ನಾನಾರ್ಥಗಳನ್ನು (ಬಗೆಬಗೆಯ ವಸ್ತುಗಳನ್ನು) ಆಶ್ರಯಿಸುವುದರಿಂದ ನಾನಾ ರೂಪವನ್ನು ಪಡೆಯುತ್ತದೆ. ಧರ್ಮವೊಂದರ ಸಂಗದಿಂದ ಅದು ಬಹುರೂಪಿಯಾದರೂ ಏಕರೂಪಿಯೇ (ಒಂದೇ ಒಂದು ರೂಪವುಳ್ಳುದೇ) ಸರಿ.

ಇತಿ ಯೋ ವೇದ ತತ್ತ್ವಾರ್ಥಂ ನಾಸೌ ನರಕಮಾಪ್ನುಯಾತ್ ।
ಮುನಿಭಿರ್ಯಚ್ಚ ನ ಪ್ರೋಕ್ತಂ ಯನ್ನಮನ್ಯೇತ ದೈವತಾನ್ ॥ ೯೭ ॥
ವಚನಂ ತದ್ಬುಧಾಃ ಪ್ರಾಹುರ್ಬಂಧಂ ಚಿತ್ರಕಥಂ ತ್ವಿತಿ ।
ಯಚ್ಚ ಕಾಮಾನ್ವಿತಂ ವಾಕ್ಯಂ ಪಂಚಮಂ ವಾಪ್ಯತಃ ಶ್ರುಣು ॥ ೯೮ ॥

ಏಕೋ ಲೋಭೋ ಮಹಾನ್ ಗ್ರಾಹೋ
ಲೋಭಾತ್ ಪಾಪಂ ಪ್ರವರ್ತತೇ ।
ಲೋಭಾತ್ ಕ್ರೋಧಃ ಪ್ರಭವತಿ
ಲೋಭಾತ್ ಕಾಮಃ ಪ್ರವರ್ತತೇ ॥ ೯೯ ॥

ಲೋಭಾನ್ಮೋಹಶ್ಚ ಮಾಯಾ ಚ ಮಾನಃ ಸ್ತಂಭಃ ಪರೇಪ್ಸುತಾ ।
ಅವಿದ್ಯಾಽಪ್ರಜ್ಞತಾ ಚೈವ ಸರ್ವಂ ಲೋಭಾತ್ ಪ್ರವರ್ತತೇ ॥ ೧೦೦ ॥
ಹರಣಂ ಪರವಿತ್ತಾನಾಂ ಪರದಾರಾಭಿಮರ್ಶನಂ ।
ಸಾಹಸಾನಾಂ ಚ ಸರ್ವೇಷಾಮಕಾರ್ಯಾಣಾಂ ಕ್ರಿಯಾಸ್ತಥಾ ॥ ೧೦೧ ॥

---

೯೭–೯೮. ಹೀಗೆಂಬ ತತ್ತ್ವಾರ್ಥವನ್ನು ಯಾವನು ತಿಳಿದಿರುವನೋ ಅವನು ನರಕವನ್ನು ಹೊಂದುವುದಿಲ್ಲ. ಯಾವುದು ಮುನಿಗಳಿಂದ ಹೇಳಲ್ಪಟ್ಟಿಲ್ಲವೋ, ಯಾವುದು ದೇವತೆಗಳನ್ನು ಮನ್ನಿಸುವುದಿಲ್ಲವೋ, ಅಂಥ ವಚನವನ್ನೂ, ಕಾಮದಿಂದ ಇದು ಬೇಕು, ಅದೂ ಬೇಕು ಎಂಬ ದುರಾಸೆಯಿಂದ ಕೂಡಿರುವ ವಾಕ್ಯವು ಯಾವುದೋ ಅದನ್ನೂ ಪಂಡಿತರು ಚಿತ್ರಕಥಾಬಂಧವೆಂದು (ಬಣ್ಣ ಕಟ್ಟಿದ ಕೊಂಕುಮಾತಿನ ಕಂತೆಯೆಂದು) ಹೇಳುತ್ತಾರೆ. ಇನ್ನು ನಿನ್ನ ಐದನೆಯ ಪ್ರಶ್ನೆಗೆ ಉತ್ತರವನ್ನು ಕೇಳುವವನಾಗು.

೯೯. ಲೋಭವೊಂದೇ (ದುರಾಸೆಯೆಂಬುದೊಂದೇ) ಮಹಾ ಮೊಸಳೆಯು. ಲೋಭದಿಂದ ಪಾಪವುಂಟಾಗುತ್ತದೆ; ಲೋಭದಿಂದ ಕ್ರೋಧವು ಹುಟ್ಟುತ್ತದೆ; ಲೋಭದಿಂದ ಕಾಮವು ತಲೆದೋರುತ್ತದೆ.

೧೦೦. ಲೋಭದಿಂದ ಮೋಹವೂ, ಮಾಯೆಯೂ (ಎಂದರೆ ಮೋಸವೂ) ಆಗುತ್ತವೆ. ಮಾನ (ತಾನೇ ಹೆಚ್ಚೆಂಬ ಅಹಂಭಾವ), ಸ್ತಂಭಪರರ (ಲೋಭಿಗಳಾಗಿರುವವರ) ದ್ರವ್ಯವನ್ನು ಪಡೆದುಕೊಳ್ಳಬೇಕೆಂಬ ಅಪೇಕ್ಷೆ, ಅವಿದ್ಯೆ, ಅಪ್ರಜ್ಞತೆ ಈ ಎಲ್ಲವೂ ಲೋಭದಿಂದಲೇ ಉಂಟಾಗುತ್ತದೆ.

೧೦೧. ಅದೇ ರೀತಿಯಲ್ಲಿಯೇ, ಪರರ ದ್ರವ್ಯಗಳನ್ನು ಹರಣಮಾಡುವುದು, ಇತರರ ಹೆಂಡಿರನ್ನು ಕೂಡುವುದು, ಸಮುಸ್ತ ರೀತಿಯ ಸಾಹಸಗಳನ್ನೂ (ಲೂಟಿ, ದರೋಡೆ, ಮುಂತಾದ ಕೆಲಸಗಳು), ಇನ್ನೂ ಇತರ ಅಕಾರ್ಯಗಳನ್ನೂ ಮಾಡುವುದೂ ಇವೆಲ್ಲವೂ ಲೋಭದಿಂದಲೇ. (ಆದುದರಿಂದಲೇ ಈ ಲೋಭವನ್ನು ಮೊಸಳೆಗೆ ಹೋಲಿಸಿರುವುದು.)

ಸಲೋಭಸ್ಸಹ ಮೋಹೇನ ವಿಜೇತವ್ಯೋ ಜಿತಾತ್ಮನಾ ।
ದಂಭೋ ದ್ರೋಹಶ್ಚ ನಿಂದಾ ಚ ಪೈಶುನ್ಯಂ ಮತ್ಸರಸ್ತಥಾ ॥ ೧೦೨ ॥
ಭವಂತ್ಯೇತಾನಿ ಸರ್ವಾಣಿ ಲುಬ್ಧಾನಾಮಕೃತಾತ್ಮನಾಂ ।
ಸುಮಹಾಂತ್ಯಪಿ ಶಾಸ್ತ್ರಾಣಿ ಧಾರಯಂತಿ ಬಹುಶ್ರುತಾಃ ॥ ೧೦೩ ॥
ಛೇತ್ತಾರಃ ಸಂಶಯಾನಾಂ ಚ ಲೋಭಗ್ರಸ್ತಾ ವ್ರಜಂತ್ಯಧಃ ।
ಲೋಭಕ್ರೋಧಪ್ರಸಕ್ತಾಶ್ಚ ಶಿಷ್ಟಾಚಾರ ಬಹಿಷ್ಕೃತಾಃ ॥ ೧೦೪ ॥
ಅಂತಃ ಕ್ಷುರಾ ವಾಙ್ಮಧುರಾಃ ಕೂಪಾಶ್ಛನ್ನಾಸ್ತೃಣೈರಿವ ।
ಕುರ್ವತೇ ಯೇ ಬಹೂನ್ಮಾರ್ಗಾಂ ಸ್ತಾಂಸ್ತಾನ್ ಹೇತುಬಲಾನ್ವಿತಾಃ ॥
ಸರ್ವಮಾರ್ಗಂ ವಿಲುಂಪಂತಿ ಲೋಭಾಜ್ಞಾತಿಷು ನಿಷ್ಠುರಾಃ ।
ಧರ್ಮಾವತಂಸಕಾಃ ಕ್ಷುದ್ರಾ ಮುಷ್ಣಂತಿ ಧ್ವಜಿನೋ ಜಗತ್ ॥ ೧೦೬ ॥
ಏತೇಽತಿಪಾಪಿನೋ ಜ್ಞೇಯಾ ನಿತ್ಯಂ ಲೋಭಸಮನ್ವಿತಾಃ ।
ಜನಕೋ ಯುವನಾಶ್ವಶ್ಚ ವೃಷಾದರ್ಭಿಃ ಪ್ರಸೇನಜಿತ್ ॥ ೧೦೭ ॥

---

೧೦೨–೧೦೬. ಜಿತಾತ್ಮನಾದವನು (ಇಂದ್ರಿಯನಿಗ್ರಹ ಮಾಡಿದವನು) ಮೋಹದಿಂದೊಡಗೂಡಿದ ಆ ಲೋಭವನ್ನು ಜಯಿಸಿಬಿಡಬೇಕು. ದಂಭ, ದ್ರೋಹ, ನಿಂದೆ, ಚಾಡಿಕೋರತನ, ಮತ್ಸರ—ಈ ಸರ್ವವೂ ಆತ್ಮನಿಗ್ರಹಿಗಳಲ್ಲದ ಲುಬ್ಧರಿಗೆ ತಾವಾಗಿಯೇ ಉಂಟಾಗುತ್ತವೆ. ಅನೇಕ ಶಾಸ್ತ್ರಗಳನ್ನು ಬಲ್ಲವರಾಗಿಯೂ, ಬಹು ಪಂಡಿತರಾಗಿಯೂ, ಸಂಶಯಗಳನ್ನು ಪರಿಹರಿಸುವವರಾಗಿಯೂ ಇರುವವರು ಕೂಡ ಲೋಭಗ್ರಸ್ತರಾದರೆ ಅಧೋಗತಿಗೆ ಹೋಗುತ್ತಾರೆ. ಲೋಭ ಮತ್ತು ಕ್ರೋಧಗಳಲ್ಲಿ ಆಸಕ್ತರಾಗಿ, ಶಿಷ್ಟಾಚಾರಗಳಿಂದ ಬಹಿಷ್ಕೃತರಾಗಿ (ಎಂದರೆ ಶಿಷ್ಟಾಚಾರಗಳನ್ನು ತೊರೆದವರಾಗಿ) ಅಂತರಂಗದಲ್ಲಿ ಕತ್ತಿಯಲಗಿನಂತಿದ್ದರೂ, ಮಾತಿನಲ್ಲಿ ಮಾತ್ರ ಮಧುರರಾಗಿರುವವರು ಮೇಲುಗಡೆ ಹುಲ್ಲುಮುಚ್ಚಿರುವ ಭಾವಿಗಳಂತೆ. ಅದಕ್ಕೆ ತಕ್ಕ ಹೇತು ಮತ್ತು ಬಲಗಳಿಂದ ಕೂಡಿದವರಾಗಿ ಬಹು ಮಾರ್ಗಗಳಲ್ಲಿ ಯಾರು ನಡೆಯುವರೋ ಲೋಭದಿಂದ ಕೂಡಿದ ಆ ನಿಷ್ಠುರರು ಸರ್ವ ಮಾರ್ಗಗಳನ್ನೂ ನಾಶಗೊಳಿಸಿಕೊಳ್ಳುತ್ತಾರೆ. ಧರ್ಮವನ್ನು ಅಲಂಕಾರದೊಡವೆಯಾಗಿ ಬಳಸುವ ಆ ಕ್ಷುದ್ರರು ಧರ್ಮಿಷ್ಠರ ವೇಷಧಾರಿಗಳಾಗಿ ಜಗತ್ತನ್ನು ಸೂರೆಮಾಡುತ್ತಾರೆ.

೧೦೭–೧೦೯. ಸದಾ ಲೋಭದಿಂದ ಕೂಡಿದವರಾದ ಇವರೆಲ್ಲರೂ ಅತಿ ಪಾಪಿಗಳೆಂದು ತಿಳಿಯಲ್ಪಡುತ್ತಾರೆ. ಜನಕ, ಯುವನಾಶ್ವ, ವೃಷಾದರ್ಭಿ, ಪ್ರಸೇನಜಿತ್ ಇವರೂ ಅದೇ ರೀತಿ ಇನ್ನೂ ಇತರ ರಾಜರುಗಳೂ, ಲೋಭವನ್ನು ನಾಶಮಾಡಿಕೊಂಡುದರಿಂದ ಸ್ವರ್ಗವನ್ನು ಪಡೆದರು. ಆದುದರಿಂದ ಯಾರು

ಲೋಭಭಕ್ಷ್ಯಯಾದ್ವಿವಂ ಪ್ರಾಪ್ತಾಸ್ತಥೈವಾನ್ಯೇ ಜನಾಧಿಪಾಃ ।
ತಸ್ಮಾತ್ ತ್ಯಜಂತಿ ಯೇ ಲೋಭಂ ತೇಽತಿಕ್ರಾಮಂತಿ ಸಾಗರಂ ॥ ೧೦೮ ॥
ಸಂಸಾರಾಖ್ಯಮತೋಽನ್ಯೇ ಯೇ ಗ್ರಾಹಗ್ರಸ್ತಾ ನ ಸಂಶಯಃ ।
ಅಥ ಬ್ರಾಹ್ಮಣ ಭೇದಾಂಸ್ತ್ವಮಷ್ಟೌ ವಿಪ್ರಾವಧಾರಯ ॥ ೧೦೯ ॥
ಮಾತ್ರಶ್ಚ ಬ್ರಾಹ್ಮಣಶ್ಚೈವ ಶ್ರೋತ್ರಿಯಶ್ಚ ತತಃ ಪರಂ ।
ಅನೂಚಾನಸ್ತಥಾ ಭ್ರೂಣ ಋಷಿಕಲ್ಪ ಋಷಿರ್ಮುನಿಃ ॥ ೧೧೦ ॥
ಏತೇ ಹ್ಯಷ್ಟೌ ಸಮುದ್ದಿಷ್ಟಾ ಬ್ರಾಹ್ಮಣಾಃ ಪ್ರಥಮಂ ಶ್ರುತೌ ।
ತೇಷಾಂ ಪರಃಪರಃ ಶ್ರೇಷ್ಠೋ ವಿದ್ಯಾವೃತ್ತ ವಿಶೇಷತಃ ॥ ೧೧೧ ॥
ಬ್ರಾಹ್ಮಣಾನಾಂ ಕುಲೇ ಜಾತೋ ಜಾತಿಮಾತ್ರೋ ಯದಾ ಭವೇತ್ ।
ಅನುಪೇತಃ ಕ್ರಿಯಾಹೀನೋ ಮಾತ್ರ ಇತ್ಯಭಿಧೀಯತೇ ॥ ೧೧೨ ॥
ಏಕೋದ್ದೇಶ್ಯಮತಿಕ್ರಮ್ಯ ವೇದಸ್ಯಾಚಾರವಾನೃಜುಃ ।
ಸ ಬ್ರಾಹ್ಮಣ ಇತಿಪ್ರೋಕ್ತೋ ನಿಭೃತಃ ಸತ್ಯವಾಗ್ಘೃಣೀ ॥ ೧೧೩ ॥

---

ಲೋಭವನ್ನು ತ್ಯಜಿಸುತ್ತಾರೆಯೋ ಅವರು ಸಂಸಾರವೆಂಬ ಸಾಗರವನ್ನು ದಾಟುತ್ತಾರೆ. ಹಾಗೆ ಲೋಭವನ್ನು ತೊರೆಯದೆ ಉಳಿದ ಬೇರೆಯವರು ಯಾರೋ ಅವರು ಮೊಸಳೆಗಳಿಗೆ ಸಿಕ್ಕಿಹಾಕಿಕೊಂಡು ದುಃಖಕ್ಕೆ ಒಳಗಾಗುತ್ತಾರೆ. ಇದರಲ್ಲಿ ಸಂಶಯವಿಲ್ಲ. ಎಲೈ ವಿಪ್ರನೇ! ಇನ್ನು ಬ್ರಾಹ್ಮಣ ಭೇದಗಳೆಂಟನ್ನು ವಿವರಿಸುತ್ತೇನೆ ಕೇಳು.

೧೧೦–೧೧೧. ಮಾತ್ರ, ಬ್ರಾಹ್ಮಣ, ಶ್ರೋತ್ರಿಯ, ಅನೂಚಾನ, ಭ್ರೂಣ, ಋಷಿಕಲ್ಪ, ಋಷಿ ಮತ್ತು ಮುನಿ—ಈ ಎಂಟು ಬಗೆಯವರು ಆದಿಯಲ್ಲಿ ಶ್ರುತಿಯಲ್ಲಿ ಉದ್ದಿಷ್ಟರಾಗಿರುವ ಬ್ರಾಹ್ಮಣರು. ಅವರಲ್ಲಿ ವಿದ್ಯೆ, ನಡತೆ ಮೊದಲಾದ ವಿಶೇಷ ಗುಣಗಳುಳ್ಳವರಾಗಿರುವ ಮುಂದು ಮುಂದಿನವರು ಶ್ರೇಷ್ಠರು (ಎಂದರೆ, ಒಂದನೆಯ ಮಾತ್ರನಿಗಿಂತ ಎರಡನೆಯ ಬ್ರಾಹ್ಮಣನು, ಅವನಿಗಿಂತ ಆ ಮುಂದಿನ ಶ್ರೋತ್ರಿಯನು ಈ ರೀತಿ).

೧೧೨. ಬ್ರಾಹ್ಮಣರ ಕುಲದಲ್ಲಿ ಹುಟ್ಟಿದವನು ವಿದ್ಯೆಯಿಲ್ಲದೆ ಕ್ರಿಯಾವಿಹೀನನಾಗಿ ಬ್ರಾಹ್ಮಣ ಜಾತಿ ಮಾತ್ರ (ಉಳ್ಳವ)ನಾಗಿರುವವನಾದರೆ ಅವನು 'ಮಾತ್ರ'ನೆನ್ನಿಸಿಕೊಳ್ಳುತ್ತಾನೆ.

೧೧೩. ಯಾವುದೊಂದೂ ಉದ್ದೇಶವನ್ನಿಟ್ಟುಕೊಳ್ಳದೆ ವೇದವಿಹಿತವಾದ ಆಚಾರಗಳನ್ನು ನಡಸುವವನೂ, ಋಜು (ಸರಳ) ಸ್ವಭಾವವುಳ್ಳವನೂ, ಏಕಾಂತವಾಗಿರುವವನೂ, ಸತ್ಯವಾಕ್ಯವನ್ನಾಡುವವನೂ, ದಯಾವಂತನೂ ಯಾವನೋ ಅವನು ಬ್ರಾಹ್ಮಣನೆನಿಸಿಕೊಳ್ಳುವನು.

ಏಕಾಂ ಶಾಖಾಂ ಸಕಲ್ಪಾಂ ಚ ಷಡ್ಭಿರಂಗೈರಧೀತ್ಯಚ ।
ಷಟ್ಕರ್ಮನಿರತೋ ವಿಪ್ರಃ ಶ್ರೋತ್ರಿಯೋ ನಾಮ ಧರ್ಮವಿತ್ ॥ ೧೧೪ ॥
ವೇದವೇದಾಂಗ ತತ್ತ್ವಜ್ಞಃ ಶುದ್ಧಾತ್ಮಾ ಪಾಪವರ್ಜಿತಃ ।
ಶ್ರೇಷ್ಠಃ ಶ್ರೋತ್ರಿಯವಾನ್ ಪ್ರಾಜ್ಞಃ ಸೋಽನೂಚಾನ ಇತಿಸ್ಮೃತಃ ॥
ಅನೂಚಾನ ಗುಣೋಪೇತೋ ಯಜ್ಞಸ್ವಾಧ್ಯಾಯ ಯಂತ್ರಿತಃ ।
ಭ್ರೂಣ ಇತ್ಯುಚ್ಯತೇ ಶಿಷ್ಟೈಃ ಶೇಷ ಭೋಜೀ ಜಿತೇಂದ್ರಿಯಃ ॥ ೧೧೬ ॥
ವೈದಿಕಂ ಲೌಕಿಕಂ ಚೈವ ಸರ್ವಜ್ಞಾನಮವಾಪ್ಯ ಯಃ ।
ಆಶ್ರಮಸ್ಥೋ ವಶೀ ನಿತ್ಯಮೃಷಿಕಲ್ಪ ಇತಿಸ್ಮೃತಃ ॥ ೧೧೭ ॥
ಊರ್ಧ್ವರೇತಾ ಭವತ್ಯಗ್ರ್ಯೋ ನಿಯತಾಶೀ ನ ಸಂಶಯೀ ।
ಶಾಪಾನುಗ್ರಹಯೋಃ ಶಕ್ತಃ ಸತ್ಯಸಂಧೋ ಭವೇದೃಷಿಃ ॥ ೧೧೮ ॥
ನಿವೃತ್ತಃ ಸರ್ವತತ್ವಜ್ಞಃ ಕಾಮಕ್ರೋಧ ವಿವರ್ಜಿತಃ ।
ಧ್ಯಾನಸ್ಥೋ ನಿಷ್ಕ್ರಿಯೋ ದಾಂತಸ್ತುಲ್ಯಮೃತ್ಕಾಂಚನೋ ಮುನಿಃ ॥

---

೧೧೪. ಒಂದು (ವೇದ) ಶಾಖೆಯನ್ನು ಕಲ್ಪ ಮತ್ತು ಆರು ಅಂಗಗಳೊಡನೆ ಅಧ್ಯಯನಮಾಡಿ ಯಾವ ವಿಪ್ರನು ಷಟ್‌ಕರ್ಮನಿರತನಾಗಿರುವನೋ ಆ ಧರ್ಮಜ್ಞನಾದ ವಿಪ್ರನೇ ಶ್ರೋತ್ರಿಯನು.

೧೧೫. ವೇದ ಮತ್ತು ವೇದಾಂಗಗಳ ತತ್ತ್ವವನ್ನು ಬಲ್ಲವನೂ, ಶುದ್ಧಾತ್ಮನೂ, ಪಾಪವಿಲ್ಲದವನೂ, ಶ್ರೇಷ್ಠನೂ, ಶ್ರೋತ್ರಿಯನೂ, ಪ್ರಾಜ್ಞನೂ ಯಾವನೋ ಅವನು 'ಅನೂಚಾನ' ಎನ್ನಿಸಿಕೊಳ್ಳುತ್ತಾನೆ.

೧೧೬. ಅನೂಚಾನನ ಗುಣಗಳಿಂದ ಕೂಡಿದವನೂ ಯಜ್ಞ ಮತ್ತು ಅಧ್ಯಯನಗಳಲ್ಲಿ ನಿರತನಾಗಿರುವವನೂ, ಜಿತೇಂದ್ರಿಯನೂ, ದೇವತೆಗಳಿಗೆ ನಿವೇದಿಸಿದ ಶೇಷಾನ್ನವನ್ನು ಭೋಜನಮಾಡುವವನೂ ಶಿಷ್ಟರಿಂದ 'ಭ್ರೂಣ' ಎನ್ನಲ್ಪಡುತ್ತಾನೆ.

೧೧೭. ವೈದಿಕ ಮತ್ತು ಲೌಕಿಕವಾದ ಸರ್ವಜ್ಞಾನವನ್ನೂ ಪಡೆದು ಯಾವನು ಆಶ್ರಮವಾಸಿಯಾಗಿ ಇಂದ್ರಿಯಗಳನ್ನು ನಿಗ್ರಹಿಸಿ ಸದಾ ವಶದಲ್ಲಿಟ್ಟು ಕೊಂಡಿರುವನೋ ಅವನು ಋಷಿಕಲ್ಪನೆಂದು ತಿಳಿಯಲ್ಪಡುತ್ತಾನೆ.

೧೧೮–೧೧೯. ಊರ್ಧ್ವರೇತಸ್ಸುಳ್ಳವನೂ (ಬ್ರಹ್ಮಚರ್ಯವ್ರತನಿಷ್ಠನಾಗಿ ರುವವನು), ನಿಯಮಕ್ಕೊಳಪಟ್ಟಂತೆ ಆಹಾರವನ್ನು ತೆಗೆದುಕೊಳ್ಳುವವನೂ, ಸಂಶಯರಹಿತನಾದವನೂ, ಶಾಪಕೊಡುವುದಕ್ಕೂ, ಅನುಗ್ರಹ ಮಾಡುವುದಕ್ಕೂ ಸಮರ್ಥನೂ, ಸತ್ಯಸಂಧನೂ ಆದವನು ಅಗ್ರಗಣ್ಯನಾಗುತ್ತಾನೆ; ಆತನೇ ಋಷಿಯು. ಸಂಸಾರ ವ್ಯಾಪಾರಗಳಿಂದ ನಿವೃತ್ತನಾಗಿ, ಸರ್ವತತ್ತ್ವಗಳನ್ನೂ ತಿಳಿದವನಾಗಿ, ಕಾಮಕ್ರೋಧಗಳಿಲ್ಲದವನಾಗಿ, ಧ್ಯಾನಸ್ಥನೂ (ಧ್ಯಾನದಲ್ಲೇ

ಏವಮನ್ವಯ ವಿದ್ಯಾಭ್ಯಾಂ ವೃತ್ತೇನ ಚ ಸಮುಚ್ಛ್ರಿತಾಃ ।
ತ್ರಿಶುಕ್ಲಾ ನಾಮ ವಿಪ್ರೇಂದ್ರಾಃ ಪೂಜ್ಯಂತೇ ಸವನಾದಿಷು ॥ ೧೨೦ ॥
ಇತ್ಯೇವಂವಿಧ ವಿಪ್ರತ್ವಮುಕ್ತಂ ಶೃಣು ಯುಗಾದಯಃ ।
ನವಮೀ ಕಾರ್ತಿಕೇ ಶುಕ್ಲಾ ಕೃತಾದಿಃ ಪರಿಕೀರ್ತಿತಾಃ ॥ ೧೨೧ ॥
ವೈಶಾಖಸ್ಯ ತೃತೀಯಾ ಯಾ ಶುಕ್ಲಾ ತ್ರೇತಾದಿರುಚ್ಯತೇ ।
ಮಾಘೇ ಪಂಚದಶೀ ನಾಮ ದ್ವಾಪರಾದಿಃ ಸ್ಮೃತಾ ಬುಧೈಃ ॥ ೧೨೨ ॥
ತ್ರಯೋದಶೀ ನಭಸ್ಯೇ ಚ ಕೃಷ್ಣಾ ಸಾ ಹಿ ಕಲೇಃ ಸ್ಮೃತಾ ।
ಯುಗಾದಯಃ ಸ್ಮೃತಾಹ್ಯೇತಾ ದತ್ತಸ್ಯಾಕ್ಷಯ ಕಾರಕಾಃ ॥ ೧೨೩ ॥
ಏತಾಶ್ಚತಸ್ರಸ್ಥಿತಯೋ ಯುಗಾದ್ಯಾ
ದತ್ತಂ ಹುತಂ ಚಾಕ್ಷಯಮಾಶು ವಿದ್ಯಾತ್ ।
ಯುಗೇ ಯುಗೇ ವರ್ಷಶತೇನ ದಾನಂ
ಯುಗಾದಿಕಾಲೇ ದಿವಸೇನ ತತ್ಫಲಂ ॥ ೧೨೪ ॥

---

ಇರುವವನೂ), ನಿಷ್ಕ್ರಿಯನೂ (ಯಾವ ಕ್ರಿಯೆಯೂ ಇಲ್ಲದವನು), ಮಣ್ಣು ಮತ್ತು ಚಿನ್ನಗಳನ್ನು ಒಂದೆಂದೆಣಿಸುವ ಬುದ್ಧಿಯುಳ್ಳವನೂ ಆಗಿರುವವನೇ ಮುನಿಯು.

೧೨೦. ಹೀಗೆ ಅನ್ವಯ (ಕುಲ) ಮತ್ತು ವಿದ್ಯೆಗಳಿಂದಲೂ ನಡತೆಯಿಂದಲೂ ಬಹು ಉತ್ತಮರಾಗಿ ತ್ರಿಶುಕ್ಲರೆಂದು (ಮೂರು ಬಿಳುಪುಳ್ಳವರೆಂದು) ಹೆಸರುಗೊಂಡ ವಿಪ್ರೇಂದ್ರರು ಸವನ (ಯಜ್ಞ) ಮೊದಲಾದವುಗಳಲ್ಲಿ ಪೂಜಿಸಲ್ಪಡುತ್ತಾರೆ.

೧೨೧-೧೨೩. ಇಂತು ವಿಪ್ರತ್ವವು ಈ ವಿಧವಾದುದೆಂಬುದು ಹೇಳಿಯಾಯಿತು. ಇನ್ನು ಯುಗಾದಿಗಳು ಯಾವುವೆಂದರೆ:—ಕಾರ್ತಿಕದಲ್ಲಿ ಶುಕ್ಲ ನವಮಿಯು ಕೃತಯುಗದ ಆದಿಯೆಂದು ಹೇಳಲ್ಪಟ್ಟಿದೆ, ವೈಶಾಖದ ಶುಕ್ಲ ತದಿಗೆಯು ತ್ರೇತಾಯುಗದ ಆದಿಯೆನ್ನಲ್ಪಡುತ್ತದೆ, ಮಾಘದಲ್ಲಿ ಹದಿನೈದನೆಯ ತಿಥಿಯು (ಅಮಾವಾಸ್ಯೆಯು) ದ್ವಾಪರದ ಆದಿಯೆಂದು ಬುಧರಿಂದ ಹೇಳಲ್ಪಟ್ಟಿದೆ, ಭಾದ್ರಪದ ಮಾಸದ ಕೃಷ್ಣತ್ರಯೋದಶಿಯು ಕಲಿಯುಗದ ಆದಿ ದಿನವೆಂದು ಹೇಳಲ್ಪಟ್ಟಿದೆ. ಇವು ಯುಗಾದಿಗಳೆಂದು ನೆನೆಯಲ್ಪಡುತ್ತವೆ. ಆಯಾ ದಿನಗಳಲ್ಲಿ ದಾನ ಮಾಡಲ್ಪಟ್ಟುದನ್ನು ಅಕ್ಷಯವಾಗುವಂತೆ ಮಾಡತಕ್ಕುವಾಗಿವೆ.

೧೨೪. ಯುಗದ ಆದಿ ದಿನಗಳಾದ ಈ ನಾಲ್ಕು ತಿಥಿಗಳು ದಾನ ಕೊಟ್ಟುದನ್ನೂ ಹೋಮ ಮಾಡಿದುದನ್ನೂ ತಕ್ಷಣವೇ ಅಕ್ಷಯವಾಗಿ ಮಾಡಿಬಿಡುತ್ತವೆ.

ಯುಗಾದ್ಯಾಃ ಕಥಿತಾ ಹ್ಯೇತಾ ಮನ್ವಾದ್ಯಾಃ ಶೃಣು ಸಾಂಪ್ರತಂ ।
ಆಶ್ವಯುಕ್ ಶುಕ್ಲ ನವಮೀ ದ್ವಾದಶೀ ಕಾರ್ತಿಕೇ ತಥಾ ॥ ೧೨೫ ॥
ತೃತೀಯಾ ಚೈತ್ರಮಾಸಸ್ಯ ತಥಾ ಭಾದ್ರಪದಸ್ಯ ಚ ।
ಫಾಲ್ಗುನಸ್ಯ ತ್ವಮಾವಾಸ್ಯಾ ಪೌಷಸ್ಯೈಕಾದಶೀ ತಥಾ ॥ ೧೨೬ ॥
ಆಷಾಢಸ್ಯಾಪಿ ದಶಮೀ ಮಾಘಮಾಸಸ್ಯ ಸಪ್ತಮೀ ।
ಶ್ರಾವಣಸ್ಯಾಷ್ಟಮೀ ಕೃಷ್ಣಾ ತಥಾಷಾಢೀ ಚ ಪೂರ್ಣಿಮಾ ॥ ೧೨೭ ॥
ಕಾರ್ತಿಕೀ ಫಾಲ್ಗುನೀ ಚೈತ್ರೀ ಜ್ಯೈಷ್ಠೀ ಪಂಚದಶೀ ಸಿತಾ ।
ಮನ್ವಂತರಾದಯಶ್ಚೈತಾ ದತ್ತಸ್ಯಾಕ್ಷಯಕಾರಕಾಃ ॥ ೧೨೮ ॥
ಯಸ್ಯಾಂ ತಿಥೌ ರಥಂ ಪೂರ್ವಂ ಪ್ರಾಪ ದೇವೋ ದಿವಾಕರಃ ।
ಸಾ ತಿಥಿಃ ಕಥಿತಾ ವಿಪ್ರೈರ್ಮಾಘೇ ಯಾ ರಥಸಪ್ತಮೀ ॥ ೧೨೯ ॥
ತಸ್ಯಾಂ ದತ್ತಂ ಹುತಂ ಚೇಷ್ಟಂ ಸರ್ವಮೇವಾಕ್ಷಯಂ ಮತಂ ।
ಸರ್ವದಾರಿದ್ರ್ಯಶಮನಂ ಭಾಸ್ಕರಪ್ರೀತಯೇ ಮತಂ ॥ ೧೩೦ ॥

---

ಯುಗಯುಗಗಳಲ್ಲೂ (ಸಾಮಾನ್ಯ ದಿನಗಳಲ್ಲಿ ಮಾಡಿದ) ದಾನವು ನೂರು ವರ್ಷಗಳಲ್ಲಿ ಫಲಿಸುವ ಹಾಗಿದ್ದರೆ ಯುಗಾದಿ ಕಾಲದಲ್ಲಿ ಆ ಫಲವು ಒಂದೇ ದಿನದಲ್ಲಿ ಉಂಟಾಗುತ್ತದೆ.

೧೨೫–೧೨೮. ಈ ಯುಗಾದಿಗಳನ್ನು ಹೇಳಿದ್ದಾಯಿತು. ಈಗ ಮನ್ವಾದಿಗಳನ್ನು (ಮನ್ವಂತರದ ಆದಿ ದಿನಗಳನ್ನು) ಅರಿಯುವವನಾಗು. ಆಶ್ವಯುಜ ಶುಕ್ಲನವಮಿ, ಕಾರ್ತಿಕ ಶುಕ್ಲದ್ವಾದಶಿ, ಚೈತ್ರಮಾಸದ ತದಿಗೆ, ಭಾದ್ರಪದದ ತದಿಗೆ, ಫಾಲ್ಗುಣಮಾಸದ ಅಮಾವಾಸ್ಯೆ, ಪುಷ್ಯಮಾಸದ ಏಕಾದಶಿ, ಆಷಾಢದ ದಶಮಿ, ಮಾಘಮಾಸದ ಸಪ್ತಮಿ, ಶ್ರಾವಣ ಮಾಸದ ಕೃಷ್ಣಪಕ್ಷದ ಅಷ್ಟಮಿ, ಆಷಾಢದ ಪೂರ್ಣಿಮಾ, ಕಾರ್ತಿಕ, ಫಾಲ್ಗುನ, ಚೈತ್ರ ಮತ್ತು ಜ್ಯೇಷ್ಠ ಈ ತಿಂಗಳುಗಳ ಶುಕ್ಲಪಕ್ಷದ ಹದಿನೈದನೆಯ ತಿಥಿ (ಪೂರ್ಣಿಮಾ) ಇವು ಮನ್ವಂತರಗಳ ಆದಿಗಳು. ಇವು ದಾನಕೊಟ್ಟದ್ದನ್ನು ಅಕ್ಷಯವಾಗಿ ಮಾಡತಕ್ಕವು.

೧೨೯. ಯಾವ ತಿಥಿಯಲ್ಲಿ ದಿವಾಕರ (ಸೂರ್ಯ)ದೇವನು ಪೂರ್ವರಥವನ್ನು ಪಡೆದನೋ ಆ ತಿಥಿಯು ಮಾಘ ಮಾಸದಲ್ಲಿ ರಥಸಪ್ತಮಿಯೆಂದು ಯಾವುದು ಹೆಸರುಗೊಂಡಿದೆಯೋ ಅದೆಂದು ವಿಪ್ರರಿಂದ ಹೇಳಲ್ಪಡುತ್ತದೆ.

೧೩೦. ಆ ತಿಥಿಯಲ್ಲಿ ದಾನಮಾಡಿದ್ದು, ಅಗ್ನಿಯಲ್ಲಿ ಹೋಮಮಾಡಿದ್ದು ಮತ್ತು ಯಜ್ಞಮಾಡಿದ್ದು ಎಲ್ಲವೂ ಅಕ್ಷಯವೆಂದೇ ತಿಳಿಯಲ್ಪಟ್ಟಿದೆ; ಸರ್ವದಾರಿದ್ರ್ಯಗಳೂ ಪರಿಹಾರವಾಗುತ್ತದೆ; ಮತ್ತು ಭಾಸ್ಕರನಿಗೆ ಪರಮಪ್ರೀತಿಯನ್ನುಂಟುಮಾಡುತ್ತವೆ.

ನಿತ್ಯೋದ್ವೇಜಕಮಾಹುರ್ಯಂ ಬುಧಾಸ್ತಂ ಶೃಣು ತತ್ವತಃ ।
ಯಶ್ಚ ಯಾಚನಿಕೋ ನಿತ್ಯಂ ನ ಸ ಸ್ವರ್ಗಸ್ಯ ಭಾಜನಂ ॥ ೧೩೧ ॥
ಉದ್ವೇಜಯಂತಿ ಭೂತಾನಿ ಯಥಾ ಚೌರಾಸ್ತಥೈವ ಸಃ ।
ನರಕಂ ಯಾತಿ ಪಾಪಾತ್ಮಾ ನಿತ್ಯೋದ್ವೇಗಕರಸ್ತ್ವಸೌ ॥ ೧೩೨ ॥
ಇಹೋಪಪತ್ತಿರ್ಮಮ ಕೇನ ಕರ್ಮಣಾ
ಕ್ವಚಪ್ರಯಾತವ್ಯಮಿತೋ ಮಯೇತಿ ।
ವಿಚಾರ್ಯ ಚೈವಂ ಪ್ರತಿಕಾರಕಾರೀ
ಬುಧೈಃ ಸ ಚೋಕ್ತೋ ದ್ವಿಜ ದಕ್ಷದಕ್ಷಃ ॥ ೧೩೩ ॥
ಮಾಸೈರಷ್ಟಭಿರಹ್ನಾ ಚ ಪೂರ್ವೇಣ ವಯಸಾಯುಷಾ ।
ತತ್ಕರ್ಮಪುರುಷಃ ಕುರ್ಯಾದ್ಯೇನಾಂತೇ ಸುಖಮೇಧತೇ ॥ ೧೩೪ ॥
ಅರ್ಚಿರ್ಧೂಮಶ್ಚ ಮಾರ್ಗೌ ದ್ವಾವಾಹುರ್ವೇದಾಂತವಾದಿನಃ ।
ಅರ್ಚಿಷಾ ಯಾತಿ ಮೋಕ್ಷಂ ಚ ಧೂಮೇನಾವರ್ತತೇ ಪುನಃ ॥ ೧೩೫ ॥
ಯಜ್ಞೈರಾಸಾದ್ಯತೇ ಧೂಮೋ ನೈಷ್ಕರ್ಮ್ಯೇಣಾರ್ಚಿರಾಪ್ಯತೇ ।
ಏತಯೋರಪರೋ ಮಾರ್ಗಃ ಪಾಖಂಡ ಇತಿ ಕೀರ್ತ್ಯತೇ ॥ ೧೩೬ ॥

---

೧೩೧. ಉದ್ವೇಗಗೊಳಿಸುವವನೆಂದು ಯಾರನ್ನು ವಿದ್ವಾಂಸರು ನಿರ್ದೇಶಿಸುವರೋ ಅವನಿಂಥವನೆಂಬುದರ ನಿಜವನ್ನು ಕೇಳುವವನಾಗು: ಯಾವನು ಸದಾ ಯಾಚಿಸುತ್ತಲೇ ಇರುವವನೋ ಅವನು ಸ್ವರ್ಗಕ್ಕೆ ಪಾತ್ರನಲ್ಲ.

೧೩೨. ಚೋರರು ಭೂತಗಳನ್ನು (ಪ್ರಾಣಿಗಳನ್ನು) ಹೇಗೆ ಉದ್ವೇಗಗೊಳಿಸುವರೋ ಹಾಗೆ ಆ ಯಾಚಕನೂ ಉದ್ವೇಗಗೊಳಿಸುತ್ತಾನೆ. ಆ ಪಾಪಾತ್ಮನು ನರಕಕ್ಕೇ ಹೋಗುತ್ತಾನೆ. ಅವನೇ ನಿತ್ಯೋದ್ವೇಗಕರನಾದವನು.

೧೩೩–೧೩೪. 'ಇಲ್ಲಿ ನನಗೆ ಯಾವ ಕರ್ಮದಿಂದ ಉಪಪತ್ತಿ (ನಂಬಿಕೆ) ಯುಂಟಾಯಿತು? ಇಲ್ಲಿಂದ ನಾನು ಎಲ್ಲಿಗೆ ಹೋಗಬೇಕು?' ಹೀಗೆಂದು ವಿಚಾರ ಮಾಡಿ ಅದಕ್ಕೆ ತಕ್ಕ ಪ್ರತೀಕಾರಮಾಡುವವನು ಯಾವನೋ ಅವನೇ ದಕ್ಷದಕ್ಷ ಎಂದರೆ ಅತ್ಯಂತ ದಕ್ಷನೆಂದು ವಿದ್ವಾಂಸರಿಂದ ಹೇಳಲ್ಪಡುತ್ತಾನೆ. ಪುರುಷನು ಎಂಟು ಮಾಸಗಳಲ್ಲಿ ಹಗಲಿನಲ್ಲಿ, ಪೂರ್ವ ವಯಸ್ಸಿನಲ್ಲಿ ಯಾವುದರಿಂದ ಕೊನೆಯಲ್ಲಿ ಸುಖವನ್ನು ಪಡೆಯಬಹುದೋ ಅಂಥ ಕರ್ಮವನ್ನು ಮಾಡಬೇಕು.

೧೩೫. ಅರ್ಚಿಮಾರ್ಗ, ಧೂಮಮಾರ್ಗ ಎಂಬುದಾಗಿ ಮಾರ್ಗಗಳು ಎರಡೆಂದು ವೇದಾಂತವಾದಿಗಳು ಹೇಳುತ್ತಾರೆ. ಅರ್ಚಿಮಾರ್ಗದಿಂದ ಮೋಕ್ಷಕ್ಕೆ ಹೋಗುತ್ತಾರೆ. ಧೂಮಮಾರ್ಗದಿಂದ ಮತ್ತೆ ಹಿಂದಿರುಗಿಬರಬೇಕಾಗುತ್ತದೆ.

೧೩೬. ಯಜ್ಞಗಳಿಂದ ಧೂಮಮಾರ್ಗವು ಪಡೆಯಲ್ಪಡುತ್ತದೆ. ನೈಷ್ಕರ್ಮ್ಯದಿಂದ (ಎಂದರೆ ಕರ್ಮಸಂಬಂಧವಿಲ್ಲದೆ ಇರುವುದರಿಂದ) ಅರ್ಚಿಮಾರ್ಗವನ್ನು

ಯೋ ದೇವಾನ್ಮನ್ಯತೇ ನೈವ ಧರ್ಮಾಂಶ್ಚ ಮನುಸೂಚಿತಾನ್ ।
ನೈತೌ ಸ ಯಾತಿ ಪಂಥಾನೌ ತತ್ವಾರ್ಥೋಽಯಂ ನಿರೂಪಿತಃ ॥ ೧೩೭ ॥
ಇತಿ ತೇ ಕೀರ್ತಿತಾಃ ಪ್ರಶ್ನಾಃ ಶಕ್ತ್ಯಾ ಬ್ರಾಹ್ಮಣ ಸತ್ತಮ ।
ಸಾಧುವಾಽಸಾಧುವಾ ಬ್ರೂಹಿ ಖ್ಯಾಪಯಾತ್ಮಾನಮೇವಚ ॥ ೧೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ಕಲಾಪಗ್ರಾಮವಾಸಿ ಸುತನುಬ್ರಾಹ್ಮಣೇನ ನಾರದ ಪ್ರಶ್ನೋತ್ತರ ಕಥನಂ" ನಾಮ ಪಂಚಮೋಽಧ್ಯಾಯಃ

---

ಪಡೆಯಲಾಗುತ್ತದೆ. ಇವೆರಡಕ್ಕೂ ಬೇರೆಯಾದ ಮಾರ್ಗವು ಪಾಖಂಡ ಎಂದು ಎಣಿಸಲ್ಪಡುತ್ತದೆ.

೧೩೭. ಯಾವನು ದೇವತೆಗಳನ್ನು ಮನ್ನಿಸು (ಗಣಿಸು)ವುದೇ ಇಲ್ಲವೋ, ಮನುವು ಸೂಚಿಸಿರುವ ಧರ್ಮಗಳನ್ನೂ ಗಣಿಸುವುದಿಲ್ಲವೋ ಅವನು ಈ ಎರಡು ಮಾರ್ಗಗಳನ್ನೂ ಸೇರುವುದಿಲ್ಲ. ಈ ತತ್ವಾರ್ಥವನ್ನು ನಿರೂಪಿಸಿದ್ದೇನೆ.

೧೩೮. ಅಯ್ಯಾ ಬ್ರಾಹ್ಮಣಶ್ರೇಷ್ಠನೇ! ಈಗ ನೀನು ಕೇಳಿದ ಪ್ರಶ್ನೆಗಳಿಗೆ ಈ ರೀತಿಯಾಗಿ ನನಗೆ ಶಕ್ತಿಯಿರುವಮಟ್ಟಿಗೂ ಉತ್ತರ ಹೇಳಿದ್ದೇನೆ. ಇದು ಸಾಧುವೋ ಅಸಾಧುವೋ (ಸರಿಯೋ, ತಪ್ಪೋ?) ತಿಳಿಸು. ಅಲ್ಲದೆ, ನೀನು ಯಾರೆಂಬುದನ್ನೂ ತಿಳಿಸುವವನಾಗು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ಸುತನುಬ್ರಾಹ್ಮಣನಿಗೂ ನಾರದನಿಗೂ ನಡೆದ ಪ್ರಶ್ನೋತ್ತರ ಕಥನ"ವೆಂಬ ಐದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಷ್ಠೋಽಧ್ಯಾಯಃ

## ನಾರದೀಯ ಸ್ಥಾನಪ್ರತಿಷ್ಠಾ ವರ್ಣನಂ

ಶ್ರೀನಾರದ ಉವಾಚ :—

ಇತಿ ಶ್ರುತ್ವಾ ಫಲ್ಗುನಾಹಂ ರೋಮಾಂಚ ಪುಲಕೀಕೃತಃ ।
ಸ್ವರೂಪಂ ಪ್ರಕಟೀಕೃತ್ಯ ಬ್ರಾಹ್ಮಣಾನಿದಮಬ್ರುವಂ ॥ ೧ ॥
ಅಹೋ ಧನ್ಯಃ ಪಿತಾಸ್ಮಾಕಂ ಯಸ್ಯ ಸೃಷ್ಟಸ್ಯ ಪಾಲಕಾಃ ।
ಯುಷ್ಮದ್ವಿಧಾ ಬ್ರಾಹ್ಮಣೇಂದ್ರಾಃ ಸತ್ಯಮಾಹ ಪುರಾ ಹರಿಃ ॥ ೨ ॥
ಮತ್ತೋಽಪ್ಯನಂತಾತ್ ಪರತಃ ಪರಸ್ಮಾತ್
ಸಮಸ್ತ ಭೂತಾಧಿಪತೇರ್ನ ಕಿಂಚಿತ್ ।
ತೇಷಾಂ ಕಿಮು ಸ್ಯಾದಿತರೇವ ಯೇಷಾಂ
ದ್ವಿಜೇಶ್ವರಾಣಾಂ ಮಮ ಮಾರ್ಗವಾದಿನಾಂ ॥ ೩ ॥
ತತ್ಸರ್ವಥಾದ್ಯ ಧನ್ಯೋಽಸ್ಮಿ ಸಂಪ್ರಾಪ್ತಂ ಜನ್ಮನಃ ಫಲಂ ।
ಯದ್ಭವಂತೋ ಮಯಾ ದೃಷ್ಟಾಃ ಪಾಪೋಪದ್ರವವರ್ಜಿತಾಃ ॥ ೪ ॥

---

## ಕನ್ನಡದ ಅನುವಾದ

### ನಾರದನು ಸ್ಥಾನಪ್ರತಿಷ್ಠೆ ಮಾಡಿದುದು

೧. ನಾರದನು ಹೇಳುತ್ತಾನೆ:—ಅಯ್ಯಾ ಫಲ್ಗುನಾ! ಈ ವಿವರಣೆಯನ್ನು ಕೇಳಿ ರೋಮಾಂಚದಿಂದ ಪುಲಕಗೊಂಡವನಾಗಿ ನನ್ನ ಸ್ವರೂಪವನ್ನು ಪ್ರಕಟ ಮಾಡಿ ಬ್ರಾಹ್ಮಣರನ್ನು ಕುರಿತು ಈ ರೀತಿ ಹೇಳಿದೆನು.

೨. ಆಹಾ! ನಮ್ಮ ತಂದೆಯು ಧನ್ಯನು. ಆತನು ಸೃಷ್ಟಿಸಿದುದಕ್ಕೆ ಪಾಲಕರಾಗಿರುವ ನಿಮ್ಮಂಥ ಬ್ರಾಹ್ಮಣೇಂದ್ರರಿರುತ್ತಿರುವುದರಿಂದ ಆತನು ಧನ್ಯನಾದನು. ಪೂರ್ವದಲ್ಲಿ ಹರಿಯು ಈ ರೀತಿ ಸತ್ಯವನ್ನೇ ಹೇಳಿರುವನು.

೩. ಅನಂತನೂ, ಸಮಸ್ತ ಭೂತಾಧಿಪತಿಯೂ, ಸರ್ವಶ್ರೇಷ್ಠನೂ ಆದ ನನಗಿಂತಲೂ ಉತ್ಕೃಷ್ಟವಾಗಿರುವಂಥದು ಯಾವುದೂ ಇಲ್ಲವೆಂದು ನಂಬಿ ನನ್ನ ಮಾರ್ಗವನ್ನೇ ಯಾರು ನುಡಿಯುತ್ತಿರುವರೋ ಅಂಥ ದ್ವಿಜೇಶ್ವರರಿಗೆ ಬೇರೆ ವಸ್ತುವಿನಿಂದ ಏನು ಪ್ರಯೋಜನ?

೪. ಪಾಪವೆಂಬ ಉಪದ್ರವವಿಲ್ಲದವರಾದ ನಿಮ್ಮನ್ನು ನಾನು ಕಂಡೆನಾದುದರಿಂದ ಸರ್ವಪ್ರಕಾರದಿಂದಲೂ ನಾನು ಧನ್ಯನಾದೆನು; ನನ್ನ ಜನ್ಮದ ಫಲವು ಕೈಸೇರಿದಂತಾಯಿತು.

ತತಸ್ತೇ ಸಹಸೋತ್ಥಾಯ ಶಾತಾತಪ ಪುರೋಗಮಾಃ ।
ಅರ್ಘ್ಯಪಾದ್ಯಾದಿ ಸತ್ಕಾರೈಃ ಪೂಜಯಾಮಾಸತುರ್ಮಾಂ ದ್ವಿಜಾಃ ॥ ೫ ॥
ಪ್ರೋಕ್ತವಂತಶ್ಚ ಮಾಂ ಪಾರ್ಥ ವಚಃ ಸಾಧುಜನೋಚಿತಂ ।
ಧನ್ಯಾ ವಯಂ ಹಿ ದೇವರ್ಷೇ ತ್ವಮಸ್ಮಾನ್ ಯದಿಹಾಗತಃ ॥ ೬ ॥
ಕುತೋಽಽವಾಗಮನಂ ತುಭ್ಯಂ ಗಂತವ್ಯಂ ವಾ ಕ್ವ ಸಾಂಪ್ರತಂ ।
ಅತ್ರಾಪ್ಯಾಗಮನೇ ಕಾರ್ಯಮುಚ್ಯತಾಂ ಮುನಿಸತ್ತಮ ॥ ೭ ॥
ಶ್ರುತ್ವಾ ಪ್ರೀತಿಕರಂ ವಾಕ್ಯಂ ದ್ವಿಜಾನಾಮಿತಿ ಪಾಂಡವ ।
ಪ್ರತ್ಯವೋಚಂ ಮುನೀಂದ್ರಾಂಸ್ತಾನ್ ಶ್ರೂಯತಾಂ ದ್ವಿಜಸತ್ತಮಾಃ ॥೮॥
ಅಹಂ ಹಿ ಬ್ರಹ್ಮಣೋ ವಾಕ್ಯಾದ್ವಿಪ್ರಾಣಾಂ ಸ್ಥಾನಕಂ ಶುಭಂ ।
ದಾತುಕಾಮೋ ಮಹಾತೀರ್ಥೇ ಮಹೀಸಾಗರಸಂಗಮೇ ॥ ೯ ॥
ಪರೀಕ್ಷನ್ ಬ್ರಾಹ್ಮಣಾನತ್ರ ಪ್ರಾಪ್ತೋ ಯೂಯಂ ಪರೀಕ್ಷಿತಾಃ ।
ಅಹಂ ವಃ ಸ್ಥಾಪಯಿಷ್ಯಾಮಿ ಚಾನುಜಾನೀತ ತದ್ದ್ವಿಜಾಃ ॥ ೧೦ ॥

---

೫. ಅಯ್ಯಾ ಅರ್ಜುನಾ! ಹೀಗೆ ನಾನೇ ನಾರದನೆಂಬ ವಿಷಯವು ಅವರಿಗೆ ತಿಳಿದ ಬಳಿಕ ಶಾತಾತಪನೇ ಮೊದಲಾದ ಆ ದ್ವಿಜರೆಲ್ಲರೂ ತ್ವರೆಯಿಂದ ಎದ್ದು ಅರ್ಘ್ಯಪಾದ್ಯ ಮೊದಲಾದ ಸತ್ಕಾರಗಳಿಂದ ನನ್ನನ್ನು ಪೂಜೆ ಮಾಡಿದರು.

೬. ಅಯ್ಯಾ ಪಾರ್ಥನೇ! ಅವರು ನನ್ನನ್ನು ಕುರಿತು ಸಾಧುಜನರಿಗೆ ಉಚಿತವಾದ ಮಾತುಗಳನ್ನು ಆಡುವವರಾದರು. "ಎಲೈ ದೇವರ್ಷಿಯೇ! ನೀನು ನಮ್ಮ ಬಳಿಗೆ ಈಗ ದಯಮಾಡಿಸಿದುದರಿಂದ ನಾವು ನಿಜವಾಗಿಯೂ ಧನ್ಯರು. ಮಹಾತ್ಮರಾದ ತಮ್ಮಂತಹ ದೇವರ್ಷಿಗಳ ಸಂದರ್ಶನವು ನಮಗೆ ದೊರಕುವುದು ದುರ್ಲಭವೇ ಸರಿ!

೭. ತಾವು ಎಲ್ಲಿಂದ ಬಂದಿರಿ? ಈಗ ಎಲ್ಲಿಗೆ ಹೋಗಬೇಕಾಗಿದೆ? ಎಲೈ ಮುನಿಶ್ರೇಷ್ಠನೇ! ಇಲ್ಲಿಗೆ ದಯಮಾಡಿಸಿದ್ದಕ್ಕೂ ಯಾವ ಕಾರ್ಯವುಂಟೆಂಬು ದನ್ನು ತಿಳಿಸಬೇಕು."

೮. ಎಲೈ ಪಾಂಡುಪುತ್ರನೇ! ಈ ರೀತಿ ಆ ಬ್ರಾಹ್ಮಣರು ಆಡಿದ ಪ್ರೀತಿಕರ ವಾದ ವಾಕ್ಯಗಳನ್ನು ಕೇಳಿ ಆ ಮುನೀಂದ್ರರಿಗೆ ಈ ರೀತಿ ಮರುನುಡಿದೆನು.

೯–೧೦. "ದ್ವಿಜಶ್ರೇಷ್ಠರೇ! ಲಾಲಿಸಬೇಕು. ನಾನಾದರೋ ಬ್ರಹ್ಮನ ಮಾತಿನ ಪ್ರಕಾರವಾಗಿ ಮಹೀಸಾಗರ ಸಂಗಮವೆಂಬ ಮಹಾತೀರ್ಥದಲ್ಲಿ ವಿಪ್ರರಿಗೆ ಶುಭಕರವಾದ ಸ್ಥಾನವನ್ನು ಕೊಡಬೇಕೆಂಬ ಅಪೇಕ್ಷೆಯುಳ್ಳವನಾಗಿ ಬ್ರಾಹ್ಮಣರನ್ನು ಪರೀಕ್ಷಿಸುತ್ತ ಇಲ್ಲಿಗೆ ಬಂದೆನು. ನೀವು ಪರೀಕ್ಷಿಸಲ್ಪಟ್ಟವ ರಾದಿರಿ. ನಾನು ನಿಮ್ಮನ್ನು ಮಹೀಸಾಗರ ಸಂಗಮಕ್ಷೇತ್ರದಲ್ಲಿ ಸ್ಥಾಪಿಸು ತ್ತೇನೆ. ಆದುದರಿಂದ ಎಲೈ ದ್ವಿಜರೇ! ನೀವು ಸಮ್ಮತಿ ಕೊಡುವವರಾಗಿರಿ."

ಏವಮುಕ್ತೋ ವಿಲೋಕ್ಯೈವ ದ್ವಿಜಾನ್‌ಶಾತಾತಪೋಽಬ್ರವೀತ್ ।
ದೇವಾನಾಮಪಿ ದುಷ್ಪ್ರಾಪ್ಯಂ ಸತ್ಯಂ ನಾರದ ಭಾಷಿತಂ ॥ ೧೧ ॥
ಕಿಂ ಪುನಶ್ಚಾಪಿ ತತ್ರೈವ ಮಹೀಸಾಗರ ಸಂಗಮಃ ।
ಯತ್ರ ಸ್ನಾತೋ ಮಹಾತೀರ್ಥ ಫಲಂ ಸರ್ವಮುಪಾಶ್ನುತೇ ॥ ೧೨ ॥
ಪುನರೇಕೋ ಮಹಾನ್ ದೋಷೋ ಬಿಭೀಮೋ ನಿತರಾಂ ಯತಃ ।
ತತ್ರ ಚೋರಾಃ ಸುಬಹವೋ ನಿರ್ಘೃಣಾಃ ಪ್ರಿಯಸಾಹಸಾಃ ॥ ೧೩ ॥
ಸ್ಪರ್ಶೇಷು ಷೋಡಶಂ ಚೈಕವಿಂಶಂ ಗೃಹ್ಣಂತಿ ನೋಧನಂ ।
ಧನೇನ ತೇನ ಹೀನಾನಾಂ ಕೀದೃಶಂ ಜನ್ಮನೋ ಭವೇತ್ । ॥ ೧೪ ॥
ವರಂ ಬುಭುಕ್ಷಯಾ ವಾಸೋ ಮಾ ಚೌರಕರಗಾ ವಯಂ ।

ಅರ್ಜುನ ಉವಾಚ :—

ಅದ್ಭುತಂ ವರ್ಣ್ಯತೇ ವಿಪ್ರ ಕೇಹಿ ಚೌರಾಃ ಪ್ರಕೀರ್ತಿತಾಃ ॥ ೧೫ ॥
ಕಿಂ ಧನಂ ಚ ಹರಂತ್ಯೇತೇ ಯೇಭ್ಯೋ ಬಿಭ್ಯತಿ ಬ್ರಾಹ್ಮಣಾಃ ।

ನಾರದ ಉವಾಚ :—

ಕಾಮಕ್ರೋಧಾದಯಾಶ್ಚೌರಾಸ್ತಪ ಏವ ಧನಂ ತಥಾ ॥ ೧೬ ॥

---

೧೧. ನಾನು ಹೀಗೆ ಹೇಳಿದುದನ್ನು ಕೇಳಿ, ಶಾತಾತಪನು ದ್ವಿಜರನ್ನು ನೋಡುತ್ತಲೇ ಈ ರೀತಿ ಉತ್ತರ ಹೇಳಿದನು. "ಅಯ್ಯಾ ನಾರದಾ! ಭಾರತ ದೇಶವು ದೇವತೆಗಳಿಗೆ ಕೂಡ ಪಡೆಯಲಸದಳವಾದುದು; ಇದು ಸತ್ಯ.

೧೨. ಅದರಲ್ಲೂ ಮಹೀಸಾಗರ ಸಂಗಮವನ್ನು ಪಡೆಯುವುದು ಎಷ್ಟು ದುರ್ಲಭವೆಂಬುದನ್ನು ಹೇಳುವುದೇನು? ಆ ತೀರ್ಥದಲ್ಲಿ ಸ್ನಾನಮಾಡಿದವನು ಮಹಾ ತೀರ್ಥ ಫಲಗಳೆಲ್ಲವನ್ನೂ ಪಡೆಯುವನಲ್ಲವೆ?

೧೩–೧೬. ಆದರೆ, ಇದರಲ್ಲಿ ಒಂದು ಮಹಾ ದೋಷವುಂಟು. ಅದಕ್ಕೆ ನಾವು ತುಂಬ ಭಯಪಡುತ್ತಿದ್ದೇವೆ. ಅಲ್ಲಿ ದಯವೇ ಇಲ್ಲದವರಾಗಿಯೂ, ಸಾಹಸಗಳಲ್ಲಿ ಅತಿ ಪ್ರೀತಿಯುಳ್ಳವರಾಗಿಯೂ ಇರುವ ಕಳ್ಳರು ಬಹಳ ಮಂದಿ ಇದ್ದಾರೆ. ಅವರು ಸ್ಪರ್ಶಗಳಲ್ಲಿ ಹದಿನಾರು ಮತ್ತು ಇಪ್ಪತ್ತೊಂದನೆಯವನ್ನು ಕೂಡಿಸಿ ಆಗುವ ನಮ್ಮ ಧನವನ್ನು (ತಪೋಧನವನ್ನು) ಕಿತ್ತುಕೊಂಡುಬಿಡುತ್ತಾರೆ. ಆ ಧನವನ್ನು ಕಳೆದುಕೊಂಡವರಾದ ನಮ್ಮ ಜನ್ಮವು ಆಮೇಲೆ ಹೇಗಾಗುತ್ತದೆ! ಹಸಿದಿರುವುದಾದರೂ ಮೇಲು; ಕಳ್ಳರ ಕೈಗೆ ಸಿಕ್ಕಲಾರೆವು." ಆಗ ಅರ್ಜುನನೆಂದನು: "ಎಲೈ ವಿಪ್ರನೇ! ಅದ್ಭುತವನ್ನು ನುಡಿಯುತ್ತಿರುವೆ. ಕಳ್ಳರೆಂದು ಹೇಳಲ್ಪಡುವವರು ಯಾರು? ಅವರು ಯಾವ ಧನವನ್ನು ಕಿತ್ತುಕೊಂಡು ಹೋಗುತ್ತಾರೆ? ಬ್ರಾಹ್ಮಣರನ್ನು ಎದುರಿಸುವ ಆ ಕಳ್ಳರಾರು?" ನಾರದನು ಹೇಳುತ್ತಾನೆ:—ಕಾಮ, ಕ್ರೋಧ, ಮೊದಲಾದುವೇ ಕಳ್ಳರು. ತಪಸ್ಸೇ ಧನವು.

ತಸ್ಯಾಪಹಾರ ಭೀತಾಸ್ತೇ ಮಾಮೂಚುರಿತಿ ಬ್ರಾಹ್ಮಣಾಃ ।
ತಾನಹಂ ಪ್ರಾಬ್ರವಂ ಪಶ್ಚಾದ್ದ್ವಿಜಾನೀತ ದ್ವಿಜೋತ್ತಮಾಃ ॥ ೧೭ ॥
ಜಾಗ್ರತಾಂ ತು ಮನುಷ್ಯಾಣಾಂ ಚೌರಾಃ ಕುರ್ವಂತಿ ಕಿಂ ಖಲಾಃ ।
ಭಯಭೀತಶ್ಚಾಲಸಶ್ಚ ತಥಾಚಾಶುಚಿರೇವ ಯಃ ॥ ೧೮ ॥
ತೇನ ಕಿಂ ನಾಮ ಸಂಸಾಧ್ಯಂ ಭೂಮಿಸ್ತಂ ಗ್ರಸತೇ ನರಂ ॥ ೧೯ ॥

ಶಾತಾತಪ ಉವಾಚ :—

ವಯಂ ಚೌರಭಯಾದ್ಭೀತಾಸ್ತೇ ಹರಂತಿ ಧನಂ ಮಹತ್ ।
ಕರ್ತುಂ ತದಾ ಕಥಂ ಶಕ್ಯಮಂಗ ಜಾಗರಣಂ ತಥಾ ॥ ೨೦ ॥
ಖಲಾಶ್ಚೌರಾ ಗತಾಃ ಕ್ವಾಪಿ ತತೋ ನ ತ್ವಾಽಽಗತಾ ವಯಂ ।
ತಸ್ಮಾತ್ಸರ್ವಂ ಸಂತ್ಯಜಾಮೋ ಭಯಭೀತಾ ವಯಂಮುನೇ ॥ ೨೧ ॥
ಪ್ರತಿಗ್ರಹಶ್ಚ ವೈ ಘೋರಃ ಷಷ್ಠಾಂಶ ಫಲದಸ್ತಥಾ ।
ಏವಂ ಬ್ರುವತಿ ತಸ್ಮಿಂಶ್ಚ ಹಾರಿತೋ ನಾಮ ಚಾ ಬ್ರವೀತ್ ॥ ೨೨ ॥
ಮೂಢಬುದ್ಧ್ಯಾ ಹಿ ಕೋ ನಾಮ ಮಹೀಸಾಗರ ಸಂಗಮಂ ।
ತ್ಯಜೇಚ್ಚ ಯತ್ರ ಮೋಕ್ಷಶ್ಚ ಸ್ವರ್ಗಶ್ಚ ಕರಗೋಽಥವಾ ॥ ೨೩ ॥

---

೧೬–೧೯. ಆ ತಪಸ್ಸೆಂಬ ಧನವು ಕಾಮ ಕ್ರೋಧಾದಿಗಳಿಂದ ಅಪಹಾರವಾಗುವುದೆಂದು ಹೆದರಿ ಆ ಬ್ರಾಹ್ಮಣರು ನನಗೆ ಹಾಗೆ ಹೇಳಿದರು. ಆಮೇಲೆ ನಾನು ಅವರಿಗೆ ಹೀಗೆ ಹೇಳಿದೆನು. "ಎಲೈ ದ್ವಿಜೋತ್ತಮರೇ! ತಿಳಿದು ನೋಡಿರಿ. ಎಚ್ಚತ್ತಿರುವ ಮನುಷ್ಯರಿಗಾದರೋ ಖಳರಾದ ಚೋರರು ಏನು ತಾನೇ ಮಾಡುತ್ತಾರೆ? ಭಯದಿಂದ ಹೆದರಿ ನಡುಗುವವನೂ, ಸೋಮಾರಿಯೂ, ಅಶುಚಿಯೂ ಆದವನು ಯಾರೋ ಅವನಿಂದ ಏನುತಾನೆ ಸಾಧಿಸಲಾದೀತು? ಅಂಥ ನರನನ್ನು ಭೂಮಿಯು ನುಂಗುವುದು."

೨೦–೨೨. ಶಾತಾಪನಿಂತೆಂದನು:—"ನಾವು ಚೋರಭಯಕ್ಕೆ ಹೆದರಿದ್ದೇವೆ. ಅವರು ಮಹತ್ತಾದ ಧನವನ್ನು ಹರಣಮಾಡುತ್ತಾರೆ. ಆಗ ಜಾಗರಣ ಮಾಡುವುದಕ್ಕೆ ಹೇಗೆ ಶಕ್ಯವಾಗುತ್ತದೆ? ಖಳರಾದ ಚೋರರು ಎಲ್ಲಿಯೋ ಹೋಗಿದ್ದಾರೆ. ಆದ್ದರಿಂದ ನಾವು ಬರುವುದಿಲ್ಲ. ಎಲೈ ಮುನಿಯೇ! ಭಯಭೀತರಾಗಿರುವ ನಾವು ಸರ್ವವನ್ನೂ ತ್ಯಜಿಸಿಬಿಡುತ್ತೇವೆ. ಪ್ರತಿಗ್ರಹವಾದರೋ ಘೋರವಾದುದಷ್ಟೆ; ಆರನೆಯ ಒಂದು ಪಾಲು ಫಲವನ್ನು ಕೂಡ ಕೊಡಬೇಕಾಗುತ್ತದೆ." ಹೀಗೆಂದು ಶಾತಾತಪನು ಹೇಳುತ್ತಿರುವಷ್ಟರಲ್ಲೇ ಹಾರೀತನೆಂಬುವನು ಇಂತು ನುಡಿದನು.

೨೩. ಆ ಮಹೀಸಾಗರ ಸಂಗಮದಲ್ಲಿ ಸ್ವರ್ಗವೂ ಮೋಕ್ಷವೂ ಕೈಯಲ್ಲಿ ಇದ್ದಂತೆಯೇ ಆಗಿರುವುದು. ಹೀಗಿರುವಲ್ಲಿ ಮೂಢಬುದ್ಧಿಯಿಂದ ಯಾವನು ತಾನೇ ಅದನ್ನು ತ್ಯಜಿಸುತ್ತಾನೆ?

ಕಲಾಪಾದಿಷು ಗ್ರಾಮೇಷು ಕೋ ವಸೇತ ವಿಚಕ್ಷಣಃ ।
ಯದಿ ವಾಸಃ ಸ್ತಂಭತೀರ್ಥೇ ಕ್ಷಣಾರ್ಧಮಪಿ ಲಭ್ಯತೇ ॥ ೨೪ ॥
ಭಯಂ ಚ ಚೌರಜಂ ಸರ್ವಂ ಕಿಂ ಕರಿಷ್ಯತಿ ತತ್ರ ನಃ ।
ಕುಮಾರನಾಥಂ ಮನಸಿ ಪಾಲಕಂ ಕುರ್ವತಾಂ ದೃಢಂ ॥ ೨೫ ॥
ಸಾಹಸಂ ಚ ವಿನಾ ಭೂತಿರ್ನ ಕಥಂಚನ ಪ್ರಾಪ್ಯತೇ ।
ತಸ್ಮಾನ್ನಾರದ ತತ್ರಾಹಮಾಯಾಸ್ಯೇ ತವ ವಾಕ್ಯತಃ ॥ ೨೬ ॥
ಷಡ್ವಿಂಶತಿ ಸಹಸ್ರಾಣಿ ಬ್ರಾಹ್ಮಣಾ ಮೇ ಪರಿಗ್ರಹೇ ।
ಷಟ್ಕರ್ಮನಿರತಾಃ ಶುದ್ಧಾ ಲೋಭದಂಭವಿವರ್ಜಿತಾಃ ॥ ೨೭ ॥
ತೈಃ ಸಾರ್ಧಮಾಗಮಿಷ್ಯಾಮಿ ಮಮೇದಂ ಮತಮುತ್ತಮಂ ।
ಇತ್ಯುಕ್ತೋ ವಚನೇ ತಾಂಶ್ಚ ಕೃತ್ವಾಹಂ ದಂಡಮೂರ್ಧನಿ ॥ ೨೮ ॥
ನಿವೃತ್ತಃ ಸಹಸಾ ಪಾರ್ಥ ಖೇಚರೋಽತಿ ಮುದಾನ್ವಿತಃ ।
ಶತಯೋಜನ ಮಾತ್ರಂ ತು ಹಿಮಮಾರ್ಗಮತೀತ್ಯ ಚ ॥ ೨೯ ॥
ಕೇದಾರಂ ಸಮುಪಾಯಾತೋ ಯುಕ್ತಸ್ತೈರ್ದ್ವಿಜಸತ್ತಮೈಃ ।
ಆಕಾಶೇನ ಸುಶಕ್ಯಶ್ಚ ಬಿಲೇನಾಥ ಸ ದೇಶಕಃ ॥ ೩೦ ॥

---

೨೪–೨೬. ಸ್ತಂಭತೀರ್ಥದಲ್ಲಿ ಅರ್ಧಕ್ಷಣವಾದರೂ ವಾಸವು ಲಭಿಸುವ ಹಾಗಿದ್ದರೆ ವಿಚಕ್ಷಣ (ಬುದ್ಧಿವಂತ)ನಾದ ಯಾವನು ತಾನೇ ಕಲಾಪಾದಿ ಗ್ರಾಮಗಳಲ್ಲಿ ವಾಸಮಾಡುತ್ತಾನೆ? ಅಲ್ಲಿ ಪಾಲಕನಾದ ಕುಮಾರನಾಥನನ್ನು ಮನಸ್ಸಿನಲ್ಲಿ ದೃಢವಾಗಿ ನೆಲೆಗೊಳಿಸಿರುವ ನಮಗೆ ಚೋರರಿಂದುಂಟಾಗುವ ಸರ್ವ ಭಯವೂ ನಮ್ಮನ್ನೇನುಮಾಡೀತು? ಸಾಹಸವಿಲ್ಲದೆ ಮಹತ್ಫಲವು ಹೇಗೂ ಪ್ರಾಪ್ತವಾಗುವುದಿಲ್ಲ. ಆದುದರಿಂದ ಎಲೈ ನಾರದನೇ! ನಿನ್ನ ಮಾತಿನ ಪ್ರಕಾರ ವಾಗಿ ನಾನು ಅಲ್ಲಿಗೆ ಬರುತ್ತೇನೆ.

೨೭–೩೦. ಇಪ್ಪತ್ತಾರುಸಾವಿರ ಬ್ರಾಹ್ಮಣರು ನನ್ನ ಪರಿವಾರದಲ್ಲಿರುವರು; ಅವರೆಲ್ಲರೂ ಷಟ್ಕರ್ಮನಿರತರು, ಶುದ್ಧರು, ಲೋಭ ದಂಭಗಳಿಂದ ಬಿಡಲ್ಪಟ್ಟ ವರು. ಅವರಿಂದೊಡಗೂಡಿದವನಾಗಿ ಬರುತ್ತೇನೆ. ಇದೇ ನನ್ನ ಉತ್ತಮವಾದ ಅಭಿಪ್ರಾಯವು." ಹೀಗೆಂದು ಆತನು ನುಡಿಯಲು, ನಾನು ಅವರೆಲ್ಲರನ್ನೂ ದಂಡದ ತುದಿಯಲ್ಲಿಟ್ಟುಕೊಂಡು, ಅತ್ಯಂತ ಹರ್ಷದಿಂದ ಕೂಡಿದವನಾಗಿ ತಕ್ಷಣವೇ ಅಲ್ಲಿಂದ ಹೊರಟು, ಖೇಚರನಾಗಿ (ಆಕಾಶದಲ್ಲಿ ಸಂಚರಿಸುತ್ತ) ನೂರುಯೋಜನ ದೂರವಿರುವ ಹಿಮಮಾರ್ಗವನ್ನು ದಾಟಿ, ಆ ದ್ವಿಜಶ್ರೇಷ್ಠ ರಿಂದೊಡಗೂಡಿದವನಾಗಿ ಕೇದಾರಕ್ಕೆ ಬಂದು ತಲುಪಿದೆನು. ಆ ಪ್ರದೇಶವು ಆಕಾಶ ಮಾರ್ಗದಿಂದ ಬಂದು ಸೇರಲು ಸುಲಭಶಕ್ಯವಾಗಿರುವುದು. ಮತ್ತು ಬಿಲಮಾರ್ಗವಾಗಿಯಾದರೂ ಬರಲು ಶಕ್ಯವಾಗಿರುವುದು.

ಅತಿಕ್ರಾಂತುಂ ನಾನ್ಯಥಾ ಚ ತಥಾ ಸ್ಕಂದಪ್ರಸಾದತಃ ॥ ೩೦ ॥

ಅರ್ಜುನ ಉವಾಚ :—

ಕ್ವ ಕಲಾಪಂ ಚ ತದ್ಗ್ರಾಮಂ ಕಥಂ ಶಕ್ಯಂ ಬಿಲೇನ ಚ ।
ಕಥಂ ಸ್ಕಂದಪ್ರಸಾದಃ ಸ್ಯಾದೇತನ್ಮೇ ಬ್ರೂಹಿ ನಾರದ ॥ ೩೧ ॥

ನಾರದ ಉವಾಚ :—

ಕೇದಾರಾದ್ಧಿಮಸಂಯುಕ್ತಂ ಯೋಜನಾನಾಂ ಶತಂ ಸ್ಮೃತಂ ।
ತದಂತೇ ಯೋಜನ ಶತಂ ವಿಸ್ತೃತಾ ತತ್ ಕಲಾಪಕಂ ॥ ೩೨ ॥
ತದಂತೇ ಯೋಜನಶತಂ ವಾಲುಕಾರ್ಣವಮುಚ್ಯತೇ ।
ಶತಯೋಜನ ಮಾತ್ರಃ ಸ ಭೂಮಿಸ್ಸ್ವರ್ಗಸ್ತತಃ ಸ್ಮೃತಃ ॥ ೩೪ ॥
ಬಿಲೇನ ಚ ಯಥಾ ಶಕ್ಯಂ ಗಂತುಂ ತತ್ರ ಶ್ರುಣುಷ್ವ ತತ್ ।
ನಿರನ್ನಂ ವೈ ನಿರುದಕಂ ದೇವಮಾರಾಧಯೇದ್ಗುಹಂ ॥ ೩೫ ॥
ದಕ್ಷಿಣಾಯಾಂ ದಿಶಿ ತತೋ ನಿಷ್ಪಾಪಂ ಮನ್ಯತೇ ಯದಾ ।
ತದಾ ಗುಹೋಽಸ್ಯ ದಿಶತಿ ಸ್ವಪ್ನೇ ಗಚ್ಛೇತಿ ಭಾರತ ॥ ೩೬ ॥

---

೩೦. ಅದೇ ರೀತಿ ಸ್ಕಂದಪ್ರಸಾದದಿಂದಲಾದರೂ ಬರಬಹುದು. ಬೇರೆ ರೀತಿಯಲ್ಲಿ ದಾಟಿಬರಲು ಸಾಧ್ಯವೇ ಇಲ್ಲ.

೩೧. ಅರ್ಜುನನಿಂತೆಂದನು :—"ಕಲಾಪವೆಂಬ ಆ ಗ್ರಾಮವೆಲ್ಲಿ? ಬಿಲದ ಮಾರ್ಗವಾಗಿ ಅಲ್ಲಿಗೆ ಹೋಗುವುದು ಹೇಗೆ ಸಾಧ್ಯ? ಸ್ಕಂದನ ಪ್ರಸಾದವು ಹೇಗೆ ಉಂಟಾಗುವುದು? ಎಲೈ ನಾರದನೇ! ಇದನ್ನು ನನಗೆ ತಿಳಿಸು."

೩೨. ನಾರದನು ಹೇಳುತ್ತಾನೆ:—"ಕೇದಾರದಿಂದ ಮುಂದಕ್ಕೆ ನೂರು ಯೋಜನಗಳವರೆಗೆ ಹಿಮತುಂಬಿದ ಪ್ರದೇಶವಿದೆ. ಅದರ ಕೊನೆಯಲ್ಲಿ ನೂರು ಯೋಜನ ವಿಸ್ತಾರವಾಗಿರುವುದು ಆ ಕಲಾಪಗ್ರಾಮವು.

೩೪. ಆದಾದ ಬಳಿಕ ನೂರು ಯೋಜನದವರೆಗೆ ಮರಳಿನ ಸಮುದ್ರವೆಂದು ಹೇಳಲ್ಪಡುತ್ತದೆ. ಅಲ್ಲಿ ನೂರು ಯೋಜನದಷ್ಟು ಮಾತ್ರವಿರುವುದೇ ಭೂಮಿಯು. ಅಲ್ಲಿಂದ ಮುಂದೆ ಸ್ವರ್ಗವೆಂದು ಭಾವಿಸಲ್ಪಡುತ್ತದೆ.

೩೫. ಬಿಲದಿಂದ ಅಲ್ಲಿಗೆ ಹೇಗೆ ಹೋಗಲು ಶಕ್ಯವೆಂಬುದನ್ನು ಕೇಳುವವನಾಗು. ಅನ್ನವನ್ನು ತೊರೆದು, ನೀರನ್ನು ಬಿಟ್ಟು, ಗುಹದೇವನನ್ನು ಆರಾಧಿಸಬೇಕು.

೩೬. ಬಳಿಕ ಹಾಗೆ ಆರಾಧಿಸುತ್ತಿರುವವನು ಪಾಪರಹಿತನಾದನೆಂದು ಯಾವಾಗ ಭಾವಿಸುತ್ತಾನೋ ಆಗ ಎಲೈ ಭಾರತನೇ! ಗುಹನು ಸ್ವಪ್ನದಲ್ಲಿ ಬಂದು 'ದಕ್ಷಿಣ ದಿಕ್ಕಿನಲ್ಲಿ ಹೋಗು' ಎಂದು ಅಪ್ಪಣೆಮಾಡುತ್ತಾನೆ.

ತತೋ ಗುಹಾತ್ಪಶ್ಚಿಮತೋ ಬಿಲಮಸ್ತಿ ಬೃಹತ್ತರಂ ।
ತತ್ರ ಪ್ರವಿಶ್ಯ ಗಂತವ್ಯಂ ಕ್ರಮಾಣಾಂ ಶತಸಪ್ತಕಂ ॥ ೩೭ ॥
ತತ್ರ ಮಾರಕತಂ ಲಿಂಗಮಸ್ತಿ ಸೂರ್ಯಸಮಪ್ರಭಂ ।
ತದಗ್ರೇ ಮೃತ್ತಿಕಾ ಚಾಸ್ತಿ ಸ್ವರ್ಣವರ್ಣಾ ಸುನಿರ್ಮಲಾ ॥ ೩೮ ॥
ನಮಸ್ಕೃತ್ಯ ಚ ತಲ್ಲಿಂಗಂ ಗೃಹೀತ್ವಾ ಮೃತ್ತಿಕಾಂ ಚ ತಾಂ ।
ಆಗಂತವ್ಯಂ ಸ್ತಂಭತೀರ್ಥೇ ಸಮಾರಾಧ್ಯ ಕುಮಾರಕಂ ॥ ೩೯ ॥
ಕೋಲಂ ವಾ ಕೂಪತೋ ಗ್ರಾಹ್ಯಂ ಭೂತಾಯಾಂ ನಿಶಿ ತಜ್ಜಲಂ ।
ತೇನೋದಕೇನ ಮೃತ್ತಿಕಯಾ ಕೃತ್ವಾ ನೇತ್ರದ್ವಯಾಂಜನಂ ॥ ೪೦ ॥
ಉದ್ವರ್ತನಂ ಚ ದೇಹಸ್ಯ ಕದಾಚಿತ್ಷಷ್ಟಿಮೇ ಪದೇ ।
ನೇತ್ರಾಂಜನಪ್ರಭಾವಾಚ್ಚ ಬಿಲಂ ಪಶ್ಯತಿ ಶೋಭನಂ ॥ ೪೧ ॥
ತನ್ಮಧ್ಯೇನ ತತೋ ಯಾತಿ ಗಾತ್ರೋದ್ವರ್ತ ಪ್ರಭಾವತಃ ।
ಕಾರೀಷೈರ್ನಾಮ ಚಾತ್ಯುಗ್ರೈರ್ಭಕ್ಷ್ಯತೇ ನೈವ ಕೀಟಕೈಃ ॥ ೪೨ ॥
ಬಿಲಮಧ್ಯೇ ಚ ಸಂಪಶ್ಯನ್ ಸಿದ್ಧಾನ್ ಭಾಸ್ಕರ ಸನ್ನಿಭಾನ್ ।
ಯಾತ್ಯೇವಂ ಯಾತ್ಯಸೌ ಪಾರ್ಥ ಕಲಾಪಂ ಗ್ರಾಮಮುತ್ತಮಂ ॥ ೪೩ ॥

---

೩೭–೪೨. ಪಶ್ಚಿಮ ಭಾಗದಲ್ಲಿ ಬಹು ದೊಡ್ಡದಾದ ಒಂದು ಬಿಲವಿದೆ. ಆ ಬಿಲದಲ್ಲಿ ಪ್ರವೇಶಮಾಡಿ ಏಳುನೂರು ಹೆಜ್ಜೆ ಹೋಗಬೇಕು. ಅಲ್ಲಿ ಮರಕತ ಮಯವಾದ ಒಂದು ಲಿಂಗವು ಸೂರ್ಯನಿಗೆ ಸಮಾನವಾಗಿ ಪ್ರಕಾಶಿಸುತ್ತಿದೆ. ಆ ಲಿಂಗದ ತುದಿಯಲ್ಲಿ ಚಿನ್ನದ ಬಣ್ಣವುಳ್ಳುದಾಗಿಯೂ, ನಿರ್ಮಲವಾಗಿಯೂ ಇರುವ ಮೃತ್ತಿಕೆಯುಂಟು. ಆ ಲಿಂಗಕ್ಕೆ ನಮಸ್ಕಾರಮಾಡಿ, ಆ ಮೃತ್ತಿಕೆಯನ್ನು ತೆಗೆದುಕೊಂಡು ಸ್ತಂಭತೀರ್ಥದಲ್ಲಿ ಕುಮಾರನನ್ನಾರಾಧಿಸಿ ಬರಬೇಕು. ಭಾವಿ ಯಿಂದ ಮೃತ್ತಿಕೆಯನ್ನಾಗಲಿ ರಾತ್ರಿಯಾಗುತ್ತಿರಲಾಗಿ ಅದರ ಜಲವನ್ನಾಗಲಿ ತೆಗೆದುಕೊಳ್ಳಬೇಕು. ಆ ನೀರಿನಿಂದಲೂ ಮೃತ್ತಿಕೆಯಲ್ಲಿ ಅಂಜನಮಾಡಿಕೊಂಡು ಎರಡು ಕಣ್ಣುಗಳಿಗೂ ಹಚ್ಚಿಕೊಳ್ಳಬೇಕು. ಕೆಲವು ವೇಳೆ, ಅರವತ್ತನೆಯ ಹೆಜ್ಜೆಯಲ್ಲಿ ಆ ಮೃತ್ತಿಕೆಯನ್ನು ಮೈಗೂ ಬಳಿದುಕೊಳ್ಳಬೇಕು. ಕಣ್ಣಿಗೆ ಹಚ್ಚಿ ಕೊಂಡಿರುವ ಅಂಜನದ ಪ್ರಭಾವದಿಂದ ಬಿಲವು ಬಹು ಚೆನ್ನಾಗಿ (ಸೊಗಸಾಗಿ) ಕಾಣುತ್ತದೆ. ಬಳಿಕ ಮೈಗೆ ಬಳಿದುಕೊಂಡಿರುವ ಮೃತ್ತಿಕೆಯ ಪ್ರಭಾವದಿಂದ ಆ ಬಿಲದ ಮಧ್ಯಭಾಗದಲ್ಲಿಯೇ ಹೋಗುತ್ತಾನೆ. ಹಾಗೆ ಹೋಗುತ್ತಿರುವಾಗ, ಕಾರೀಷವೆಂಬ ಅತ್ಯುಗ್ರವಾದ ಕೀಟಗಳಿಂದ ಅವನು ಭಕ್ಷಿಸಲ್ಪಡುವುದಿಲ್ಲ.

೪೩. ಬಿಲ ಮಧ್ಯದಲ್ಲಿ ಸೂರ್ಯನಿಗೆ ಸಮಾನರಾದ ಸಿದ್ಧರನ್ನು ನೋಡುತ್ತ ಪ್ರಯಾಣಮಾಡುತ್ತಾನೆ. ಹೀಗೆ ಹೋಗುತ್ತ ಹೋಗುತ್ತ, ಎಲೈ ಪಾರ್ಥನೇ! ಅವನು ಉತ್ತಮವಾದ ಕಲಾಪಗ್ರಾಮವನ್ನು ತಲುಪುತ್ತಾನೆ.

ತತ್ರ ವರ್ಷ ಸಹಸ್ರಾಣಿ ಚತ್ವಾರ್ಯಾಯುಃ ಪ್ರಕೀರ್ತಿತಂ ।
ಫಲಾನಾಂ ಭೋಜನಂ ಚ ಸ್ಯಾತ್ಪುನಃ ಪುಣ್ಯಂ ಚ ನಾರ್ಜಯೇತ್ ॥ ೪೪ ॥
ಇತ್ಯೇತತ್ಕಥಿತಂ ತುಭ್ಯಮತಶ್ಚಾಭೂಚ್ಛೃಣುಷ್ವ ತತ್ ।
ತಪಃ ಸಾಮರ್ಥ್ಯತಃ ಸೂಕ್ಷ್ಮಾನ್ ದಂಡಸ್ಯಾಗ್ರೇ ನಿಧಾಯ ತಾನ್ ॥೪೫॥
ದ್ವಿಜಾನಹಂ ಸಮಾಯಾತೋ ಮಹೀಸಾಗರಸಂಗಮಂ ॥ ೪೬ ॥
ತದೋತ್ತಾರ್ಯ ಮಯಾ ಮುಕ್ತಾಸ್ತೀರೇ ಪುಣ್ಯಜಲಾಶಯೇ ।
ತತೋ ಮಯಾಕೃತಂ ಸ್ನಾನಂ ಸಹ ತೈರ್ದ್ವಿಜಸತ್ತಮೈಃ ॥ ೪೭ ॥
ನಿಃಶೇಷದೋಷದಾವಾಗ್ನೌ ಮಹೀಸಾಗರಸಂಗಮೇ ।
ಪಿತೄಣಾಂ ದೇವತಾನಾಂ ಚ ಕೃತ್ವಾ ತರ್ಪಣ ಸತ್ಕ್ರಿಯಾಃ ॥ ೪೮ ॥
ಜಪಮಾನಾಃ ಪರಂ ಜಪ್ಯಂ ನಿವಿಷ್ಟಾಃ ಸಂಗಮೇ ವಯಂ ।
ಭಾಸ್ಕರಂ ಸಮವೇಕ್ಷಂತಶ್ಚಿಂತಯಂತೋ ಹರಿಂ ಹೃದಿ ॥ ೪೯ ॥
ತಸ್ಮಿಂಶ್ಚೈವಾಂತರೇ ಪಾರ್ಥ ದೇವಾಃ ಶಕ್ರಪುರೋಗಮಾಃ ।
ಆದಿತ್ಯಾದ್ಯಾ ಗ್ರಹಾಃ ಸರ್ವೇ ಲೋಕಪಾಲಾಶ್ಚ ಸಂಗತಾಃ ॥ ೫೦ ॥

---

೪೪. ಅಲ್ಲಿ ನಾಲ್ಕುಸಾವಿರ ವರ್ಷ ಆಯುಸ್ಸೆಂದು ಹೇಳಲ್ಪಟ್ಟಿದೆ. ಅಲ್ಲಿ ಫಲಗಳನ್ನು ಅನುಭವಿಸಲಾಗುವುದೇ ಹೊರತು ಮತ್ತೆ ಹೊಸದಾಗಿ ಪುಣ್ಯವನ್ನು ಸಂಪಾದಿಸಲಾಗುವುದಿಲ್ಲ.

೪೫-೪೬. ಇಂತೀ ವಿಷಯವನ್ನು ನಿನಗೆ ತಿಳಿಸಿದ್ದೇನೆ. ಅಲ್ಲಿಂದ ಮುಂದೆ ಏನಾಯಿತೆಂಬುದನ್ನು ಹೇಳುತ್ತೇನೆ, ಕೇಳು. ತಪಸ್ಸಾಮರ್ಥ್ಯದಿಂದ ಸೂಕ್ಷ್ಮ ರೂಪಿಗಳಾದ ಆ ದ್ವಿಜರನ್ನು ದಂಡದ ತುದಿಯಲ್ಲಿ ನೆಲೆಗೊಳಿಸಿಕೊಂಡು ನಾನು ಮಹೀಸಾಗರಸಂಗಮಕ್ಕೆ ಬಂದು ಸೇರಿದೆನು.

೪೭. ಆಗ ಆ ಪುಣ್ಯ ಜಲಾಶಯದ ತೀರದಲ್ಲಿ ಅವರನ್ನು ದಂಡಾಗ್ರದಿಂದ ಕೆಳಗಿಳಿಸಿದೆನು. ಬಳಿಕ ಆ ದ್ವಿಜಶ್ರೇಷ್ಠರೊಡಗೂಡಿ ನಾನು ಸ್ನಾನಮಾಡಿದೆನು.

೪೮. ಸಮಸ್ತ ದೋಷಗಳನ್ನೂ ನಿಶ್ಶೇಷವಾಗಿ ಸುಟ್ಟುರಿಸುವ ಕಾಡು ಬೆಂಕಿಯಂತಿರುವ ಆ ಮಹೀಸಾಗರಸಂಗಮದಲ್ಲಿ ಪಿತೃಗಳಿಗೂ, ದೇವತೆಗಳಿಗೂ ತರ್ಪಣವೇ ಮೊದಲಾದ ಸತ್ಕ್ರಿಯೆಗಳನ್ನು ನೆರವೇರಿಸಿದೆನು.

೪೯. ಶ್ರೇಷ್ಠವಾದ ಜಪ್ಯ ವಿಷಯವನ್ನು ಜಪಿಸುವವರಾಗಿ ಸಂಗಮದಲ್ಲಿ ನಾವು ಕುಳಿತುಕೊಂಡು ಭಾಸ್ಕರನನ್ನು ನೋಡುತ್ತ ಮನಸ್ಸಿನಲ್ಲಿ ಹರಿಯನ್ನು ಚಿಂತಿಸುತ್ತಿದ್ದೆವು.

೫೦. ಅಯ್ಯಾ ಪಾರ್ಥ! ಆ ಅವಕಾಶದಲ್ಲಿ ಇಂದ್ರನೇ ಮೊದಲಾದ ದೇವತೆಗಳೂ, ಆದಿತ್ಯನೇ ಮೊದಲಾದ ಗ್ರಹಗಳೂ, ಎಲ್ಲಾ ಲೋಕಪಾಲರೂ ಅಲ್ಲಿಗೆ ಬಂದು ಸೇರಿದರು.

ದೇವಾನಾಂ ಯೋನಯೋ ಹ್ಯಷ್ಟೌ ಗಂಧರ್ವಾಪ್ಸರಸಾಂ ಗಣಾಃ ।
ಮಹೋತ್ಸವೇ ತತಸ್ತಸ್ಮಿನ್ ಗೀತವಾದಿತ್ರ ಉತ್ತಮೇ ॥ ೫೧ ॥
ಪಾದಪ್ರಕ್ಷಾಲನಂ ಕರ್ತುಂ ವಿಪ್ರಾಣಾಂ ಉದ್ಯತಸ್ತ್ವಹಂ ।
ತಸ್ಮಿನ್ಕಾಲೇ ಚಾ ಶ್ರುಣವಮಹಮಾತಿಥ್ಯ ವಾಕ್ಯತಾಂ ॥ ೫೨ ॥
ಸಾಮಧ್ವನಿಸಮಾಯುಕ್ತಾಂ ತೃತೀಯಸ್ವರನಾದಿತಾಂ ।
ಅತೀವ ಮನಸೋ ರಮ್ಯಾಂ ಶಿವಭಕ್ತಿಮಿವೋತ್ತಮಾಂ ॥ ೫೩ ॥
ವಿಪ್ರೈರುತ್ಥಾಯ ಸಂಪೃಷ್ಟಃ ಕಸ್ತ್ವಂ ವಿಪ್ರ ಕ್ವ ಚಾಗತಃ ।
ಕಿಂ ವಾ ಪ್ರಾರ್ಥಯಸೇ ಬ್ರೂಹಿ ಯತ್ತೇ ಮನಸಿ ರೋಚತೇ ॥ ೫೪ ॥

ವಿಪ್ರ ಉವಾಚ:—

ಮುನಿಃ ಕಪಿಲನಾಮಾಹಂ ನಾರದಾಯ ನಿವೇದ್ಯತಾಂ ।
ಆಗತಃ ಪ್ರಾರ್ಥನಾಯೈವ ತಚ್ಛ್ರುತ್ವಾಹಮಥಾಬ್ರವಂ ॥ ೫೫ ॥
ಧನ್ಯೋಽಹಂ ಯದಿಹಾಯಾತಃ ಕಪಿಲ ತ್ವಂ ಮಹಾಮುನೇ ।
ನಾಸ್ತ್ಯದೇಯಂ ತವಾಸ್ಮಾಭಿಃ ಪಾತ್ರಂ ನಾಸ್ತಿ ತವಾಧಿಕಂ ॥ ೫೬ ॥

---

೫೧-೫೨. ಎಂಟು ವಿಧವಾದ ದೇವಯೋನಿಗಳವರೂ, ಗಂಧರ್ವ ಮತ್ತು ಅಪ್ಸರೆಯರ ಗಣಗಳೂ ಅಲ್ಲಿಗೆ ಬಂದರು. ಬಳಿಕ ಗೀತವಾದ್ಯಗಳ ಇಂಚರದಿಂದ ಕೂಡಿದ ಆ ಉತ್ತಮವಾದ ಮಹೋತ್ಸವದಲ್ಲಿ ನಾನು ಬ್ರಾಹ್ಮಣರ ಪಾದ ಪ್ರಕ್ಷಾಳನೆಮಾಡಲು ಸಿದ್ಧನಾದೆನು. ಅದೇ ಸಮಯದಲ್ಲಿ ಅತಿಥಿಯು ಬಂದ ಸುದ್ದಿಯನ್ನು ನಾನು ಕೇಳಿದೆನು.

೫೩. ಸಾಮಧ್ವನಿಯಿಂದ ಕೂಡಿದುದಾಗಿಯೂ, ಮೂರನೆಯ ಸ್ವರದಲ್ಲಿ ನುಡಿಯಲ್ಪಡುತ್ತಿರುವುದಾಗಿಯೂ, ಮನಸ್ಸಿಗೆ ಅತ್ಯಂತ ರಮ್ಯವಾಗಿಯೂ, ಉತ್ತಮವಾದ ಶಿವಭಕ್ತಿಯಂತೆ ಮೆರೆಯುವುದಾಗಿಯೂ ಇದ್ದ ವಾಕ್ಯಗಳನ್ನು ನಾನು ಕೇಳಿದೆನು.

೫೪. ಅಲ್ಲಿದ್ದ ಬ್ರಾಹ್ಮಣರು ಎದ್ದು, "ಎಲೈ ವಿಪ್ರನೇ! ನೀನು ಯಾರು? ಎಲ್ಲಿಂದ ಬಂದೆ? ಏನನ್ನು ಬಯಸುವೆ? ನಿನ್ನ ಮನಸ್ಸಿಗೆ ಯಾವುದು ರುಚಿಸುತ್ತದೆ? ಹೇಳು" ಎಂದು ಪ್ರಶ್ನೆಮಾಡಿದರು.

೫೫. ಆ ವಿಪ್ರನು "ನಾನು ಕಪಿಲನೆಂಬ ಮುನಿಯು; ನಾರದನಿಗೆ ತಿಳಿಸಿರಿ. ಪ್ರಾರ್ಥನೆಗಾಗಿಯೇ ನಾನು ಬಂದಿದ್ದೇನೆ" ಎಂದನು. ಅದನ್ನು ಕೇಳಿ, ಬಳಿಕ ನಾನು ಹೀಗೆ ಹೇಳಿದೆನು.

೫೬. "ಅಯ್ಯಾ ಕಪಿಲಮಹಾಮುನಿಯೇ! ನೀನು ಇಲ್ಲಿಗೆ ಬಂದುದರಿಂದ ನಾನು ಧನ್ಯನಾದೆನು. ನಮ್ಮಿಂದ ನಿನಗೆ ಅದೇಯವಾದದ್ದು (ಕೊಡಬಾರದಾದದ್ದು) ಏನೂ ಇಲ್ಲ. ನಿನಗಿಂತ ಉತ್ತಮನಾದ ಪಾತ್ರನು ಯಾರೂ ಇಲ್ಲ."

ಕಪಿಲ ಉವಾಚ:—

ಬ್ರಹ್ಮಪುತ್ರ ತ್ವಯಾದೇಯಂ ಯದಿ ಮೇ ತ್ವಂ ಶೃಣುಷ್ವ ತತ್ ।
ಅಷ್ಟೌವಿಪ್ರಸಹಸ್ರಾಣಿ ಮಮ ದೇಹೀತಿ ನಾರದ ॥ ೫೭ ॥
ಭೂಮಿದಾನಂ ಕರಿಷ್ಯಾಮಿ ಕಲಾಪಗ್ರಾಮವಾಸಿನಾಂ ।
ಬ್ರಾಹ್ಮಣಾನಾಮಹಂ ಚೈಷಾಂ ತದಿದಂ ಕ್ರಿಯತಾಂ ವಿಭೋ ॥ ೫೮ ॥
ತತೋ ಮಯಾ ಪ್ರತಿಜ್ಞಾತಮೇವಮಸ್ತು ಮಹಾಮುನೇ ।
ತ್ವಯಾ ಪಿ ಕ್ರಿಯತಾಂ ಸ್ಥಾನಂ ಕಾಪಿಲಂ ಕಪಿಲೋತ್ತಮಾ ॥ ೫೯ ॥
ಶ್ರಾದ್ಧೇ ವಾ ಪ್ರಾಪ್ತಕಾಲೇ ವಾ ಹ್ಯತಿಥಿರ್ವಿಮುಖೀ ಭವೇತ್ ।
ಯಸ್ಯಾಶ್ರಮಮುಪಾಯಾತಸ್ತಸ್ಯ ಸರ್ವಂ ಹಿ ನಿಷ್ಫಲಂ ॥ ೬೦ ॥
ಸಗಚ್ಛೇ ದ್ರೌರವಾಂಲ್ಲೋಕಾನ್ಯೋಽತಿಥಿಂ ನಾಭಿಪೂಜಯೇತ್ ।
ಅತಿಥಿಃ ಪೂಜಿತೋ ಯೇನ ಸ ದೇವೈರಪಿ ಪೂಜ್ಯತೇ ॥ ೬೧ ॥
ದಾನೈರ್ಯಜ್ಞೈಸ್ತತಸ್ತಸ್ಮಿನ್ ಭೋಜಿತಃ ಕಪಿಲೋ ಮುನಿಃ ।
ತತೋ ಮಹಾಮುನಿಃ ಶ್ರೀಮಾನ್ ಹಾರೀತೋ ಹ್ವಯಿತಸ್ತದಾ ॥ ೬೨ ॥

---

೫೭. ಕಪಿಲನಿಂತೆಂದನು :—"ಎಲೈ ಬ್ರಹ್ಮಪುತ್ರನೇ! ನೀನು ನನಗೆ ದಾನ ಮಾಡುವಹಾಗಿದ್ದರೆ, ಯಾವುದನ್ನು ಕೊಡಬೇಕೆಂಬುದನ್ನು ಕೇಳುವವನಾಗು. ಎಲೈ ನಾರದನೇ! ನನಗೆ ಎಂಟುಸಾವಿರ ಬ್ರಾಹ್ಮಣರನ್ನು ಕೊಡು.

೫೮. ಕಲಾಪಗ್ರಾಮವಾಸಿಗಳಾದ ಈ ಬ್ರಾಹ್ಮಣರಿಗೆ ನಾನೂ ಕೂಡ ಭೂಮಿ ದಾನಮಾಡಬೇಕೆಂದಿದ್ದೇನೆ. ಆದುದರಿಂದ ಎಲೈ ವಿಭುವೇ! ಇದನ್ನು ನೆರವೇರಿಸಿಕೊಡು."

೫೯. ಬಳಿಕ ನಾನು ಹೀಗೆ ಪ್ರತಿಜ್ಞೆಮಾಡಿದೆನು. "ಎಲೈ ಮಹಾಮುನಿಯೇ! ಹಾಗೆಯೇ ಆಗಲಿ. ಎಲೈ ಕಪಿಲನೇ! ನಿನ್ನಿಂದಲೂ ಕಾಪಿಲವೆಂಬ ಉತ್ತಮ ಸ್ಥಾನವು ನಿರ್ಮಿಸಲ್ಪಡಲಿ.

೬೦. ಶ್ರಾದ್ಧದಲ್ಲಾಗಲಿ, ಸರಿಯಾದ ಕಾಲ ಕೂಡಿಬಂದಿರುವಾಗಲಾಗಲಿ ಯಾರ ಆಶ್ರಮಕ್ಕೆ ಬಂದ ಅತಿಥಿಯು ತನ್ನ ಇಷ್ಟಾರ್ಥವೀಡೇರದೆ ಮುಖದಿರುಗಿಸಿ ಹೋಗುತ್ತಾನೋ ಅವನು ಮಾಡಿದ ಕರ್ಮವೆಲ್ಲವೂ ನಿಷ್ಫಲವಾಗುತ್ತದೆ.

೬೧. ಯಾವನು ಅತಿಥಿಯನ್ನು ಪೂಜಿಸುವುದಿಲ್ಲವೋ ಅವನು ರೌರವ ಲೋಕಗಳನ್ನು ಪಡೆಯುತ್ತಾನೆ. ಯಾವನಿಂದ ಅತಿಥಿಗಳು ಪೂಜಿಸಲ್ಪಡುತ್ತಾರೆಯೋ ಅವನು ದೇವತೆಗಳಿಂದಲೂ ಪೂಜಿಸಲ್ಪಡುತ್ತಾನೆ.

೬೨. ಹೀಗೆಂದು ನುಡಿದು, ಆ ಮಹೀಸಾಗರ ಸಂಗಮದಲ್ಲಿ ಕಪಿಲ ಮುನಿಯು ದಾನಗಳಿಂದಲೂ ಯಜ್ಞಗಳಿಂದಲೂ ತೃಪ್ತಿಗೊಳಿಸಲ್ಪಟ್ಟನು. ಆಮೇಲೆ ಶ್ರೀಮಂತನಾದ ಹಾರೀತನೆಂಬ ಮಹಾಮುನಿಯು ಆಹ್ವಾನಿಸಲ್ಪಟ್ಟನು.

ಪಾದಪ್ರಕ್ಷಾಳನಾರ್ಥಾಯ ಸಿದ್ಧದೇವಸಮಾಗಮೇ ।
ಹಾರೀತಶ್ಚ ಪುರಸ್ಕೃತ್ಯ ವಾಮಂ ಪಾದಂ ತದಾ ಸ್ಥಿತಃ ॥ ೬೩ ॥
ತತೋ ಹಾಸೋ ಮಹಾನ್ ಜಜ್ಞೇ ಸಿದ್ಧಾಪ್ಸರಸುಪರ್ವಣಾಂ ।
ವಿಚಿಂತ್ಯ ಬಹುಧಾ ಪೃಥ್ವೀಂ ಸಾಧು ಸಾಧು ಕೃತಾ ದ್ವಿಜಾಃ ॥ ೬೪ ॥
ತತೋ ಮಮಾಪಿ ಮನಸಿ ಶೋಕವೇಗೋ ಮಹಾನಭೂತ್ ।
ಸತ್ಯಾಂ ಚೈವ ತಥಾ ಮೇನೇ ಗಾಥಾಂ ಪೂರ್ವಬುಧೇರಿತಾಂ ॥ ೬೫ ॥
ಸರ್ವೇಷ್ವಪಿ ಚ ಕಾರ್ಯೇಷು ಹೇತಿ ಶಬ್ದೋ ವಿಗರ್ಹಿತಃ ।
ಕುರ್ವತಾಮತಿಕಾರ್ಯಾಣಿ ಶಿಲಾಪಾತೋ ಧ್ರುವಂ ಭವೇತ್ ॥ ೬೬ ॥
ತತೋಽಹಮಬ್ರುವಂ ವಿಪ್ರಾನ್ ಯೂಯಂ ಮೂರ್ಖಾ ಭವಿಷ್ಯಥ ।
ಧನಧಾನ್ಯಾಲ್ಪಸಂಯುಕ್ತಾ ದಾರಿದ್ರ್ಯಕಲಿಲಾವೃತಾಃ ॥ ೬೭ ॥
ಏವಮುಕ್ತೇ ಪ್ರಹಸ್ಯೈವ ಹಾರೀತಃ ಪ್ರಾಬ್ರವೀದಿದಂ ।
ತವೈವೇಯಂ ಮುನೇ ಹಾನಿರ್ಯದಸ್ಮಾನ್ ಶಪಸೇ ಭವಾನ್ ॥ ೬೮ ॥

---

೬೩. ಪಾದಪ್ರಕ್ಷಾಲನಕ್ಕಾಗಿ ಆಹ್ವಾನಿತನಾದ ಆ ಹಾರೀತನಾದರೋ ಆಗ ಸಿದ್ಧರ ಮತ್ತು ದೇವತೆಗಳ ಎದುರಿಗೆ ಎಡಗಾಲನ್ನು ಮುಂದಕ್ಕೆ ನೀಡಿ ನಿಂತುಕೊಂಡನು.

೬೪. ಆಗ ಸಿದ್ಧರು, ಅಪ್ಸರೆಯರು, ದೇವತೆಗಳು ಇವರೆಲ್ಲರೂ ಬಹಳವಾಗಿ ನಗತೊಡಗಿದರು.

೬೫. ಆಗ ನನಗೂ ಮನಸ್ಸಿನಲ್ಲಿ ಮಹತ್ತಾದ ಶೋಕವುಂಟಾಯಿತು. ಹಾಗೆಯೇ ಪೂರ್ವದ ಜ್ಞಾನಿಗಳಿಂದ ಹೇಳಲ್ಪಟ್ಟಿರುವ ಈ ಗಾಥೆಯು ಸತ್ಯವೆಂದು ಭಾವಿಸಿಕೊಂಡೆನು.

೬೬. "ಎಲ್ಲ ಕಾರ್ಯಗಳಲ್ಲಿಯೂ 'ಹಾ! ಹಾ!' ಎಂಬ ಹಾಸ್ಯ ಶಬ್ದವು ಬಹು ಗರ್ಹಿತವಾದುದು. ಅತಿಯಾದ ಕಾರ್ಯಗಳನ್ನು (ಎಂದರೆ ಶಕ್ತಿಮಿಾರಿದ ಕಾರ್ಯಗಳನ್ನು) ಮಾಡುವವರಿಗೆ ಶಿಲಾಪಾತವು (ತಲೆಯಮೇಲೆ ಕಲ್ಲು ಬೀಳುವುದು) ಖಂಡಿತವಾಗಿಯೂ ಉಂಟಾಗುತ್ತದೆ."

೬೭. ಬಳಿಕ ನಾನು ಆ ಬ್ರಾಹ್ಮಣರನ್ನು ಕುರಿತು, "ನೀವು ಮೂರ್ಖರೂ, ಕೇವಲ ಸ್ವಲ್ಪ ಧನಧಾನ್ಯಗಳಿಂದ ಕೂಡಿದವರೂ, ದಾರಿದ್ರ್ಯವೆಂಬ ಕೆಸರಿನಿಂದ ಆವರಿಸಲ್ಪಟ್ಟವರೂ ಆಗಿರುತ್ತೀರಿ" ಎಂದು ನುಡಿದೆನು.

೬೮. ಹೀಗೆ ಹೇಳಲಾಗಿ, ಹಾರೀತನು ಗಟ್ಟಿಯಾಗಿ ನಕ್ಕುಬಿಟ್ಟು, ಇಂತು ಮರುನುಡಿದನು: "ಎಲೈ ಮುನಿಯೇ, ನೀನು ನಮ್ಮನ್ನು ಶಪಿಸುತ್ತಿರುವೆಯಲ್ಲಾ ಅದು ನಿನಗೇ ಹಾನಿಯು.

ಕಃ ಶಾಪೋ ದೀಯತೇ ತುಭ್ಯಂ ಶಾಪೋಽಯಮಯಮೇವ ತೇ ।
ತತೋ ವಿಮೃಶ್ಯ ಭೂಯೋಽಹಮಬ್ರುವಂ ಕಿಮಹಂ ದ್ವಿಜ ॥ ೭೯ ॥
ತಥಾ ವಿಧಸ್ಯ ಭವತೋ ವಾಮಪಾದಪ್ರದಾನತಃ ॥ ೨೦ ॥

ಹಾರೀತ ಉವಾಚ:—

ಶೃಣು ತತ್ಕಾರಣಂ ಧೀಮನ್ ಶೂನ್ಯತಾ ಮೇ ಯತೋ ಭವೇತ್ ॥೨೧॥
ಇತಿ ಚಿಂತಯತಶ್ಚಿತ್ತೇ ಹಾ ದುಃಖೋಽಯಂ ಪ್ರತಿಗ್ರಹಃ ।
ಪ್ರತಿಗ್ರಹೇಣ ವಿಪ್ರಾಣಾಂ ಬ್ರಾಹ್ಮ್ಯಂ ತೇಜೋ ಹಿ ಶಾಮ್ಯತಿ ॥ ೨೨ ॥
ಮಹಾದಾನಂ ಹಿ ಗೃಹ್ಣಾನೋ ಬ್ರಾಹ್ಮಣಃ ಸ್ವಂ ಶುಭಂ ಹಿ ಯತ್ ।
ದದಾತಿ ದಾತುರ್ದಾತಾ ಚ ಅಶುಭಂ ಯಚ್ಛತಿ ಸ್ವಕಂ ॥ ೨೩ ॥
ದಾತಾ ಪ್ರತಿಗ್ರಹೀತಾ ಚ ವಚನಂ ಹಿ ಪರಸ್ಪರಂ ।
ಮನ್ಯತೇಽಧಃಕರೋ ಯಸ್ಯ ಸೋಽಲ್ಪಬುದ್ಧಿಃ ಪ್ರಹೀಯತೇ ॥ ೨೪ ॥
ಇತಿ ಚಿಂತಯತೋ ಮಹ್ಯಂ ಶೂನ್ಯತಾಭೂದ್ಧಿ ನಾರದ ।
ನಿದ್ರಾರ್ತಶ್ಚ ಭಯಾರ್ತಶ್ಚ ಕಾಮಾರ್ತಃ ಶೋಕಪೀಡಿತಃ ॥ ೨೫ ॥

---

೭೯–೨೦. ನಿನಗೆ ಯಾವ ಶಾಪವು ಕೊಡಲ್ಪಡುವುದು? ಈ ಶಾಪವಿದೆಯಲ್ಲಾ, ನಿನಗೂ ಇದೇ ಇರಲಿ.'' ಆಮೇಲೆ ವಿಮರ್ಶೆ ಮಾಡಿನೋಡಿ ಮತ್ತೆ ನಾನು "ಎಲೈ ದ್ವಿಜನೇ! ನೀನು ಎಡಗಾಲನ್ನು ನೀಡಿದ್ದರಿಂದ ಪಡೆದಂಥ ಆ ಬಗೆಯ ಶಾಪಕ್ಕೆ ನಾನು ಹೇಗೆ ಅರ್ಹನಾದೇನು?'' ಎಂದು ಕೇಳಿದೆನು.

೨೧. ಹಾರೀತನಿಂತೆಂದನು: "ಎಲೈ ಧೀಮಂತನೇ! ಯಾವ ಕಾರಣದಿಂದ ನನಗೆ ಶೂನ್ಯತೆಯುಂಟಾಯಿತೋ ಅದರ ಕಾರಣವನ್ನು ಕೇಳುವವನಾಗು.

೨೨. ನಾನು ಮನಸ್ಸಿನಲ್ಲಿ ಹೀಗೆ ಯೋಚಿಸುತ್ತಿದ್ದೆನು. ಹಾ! ಈ ಪ್ರತಿಗ್ರಹವು ದುಃಖಕರವಾದುದು. ಪ್ರತಿಗ್ರಹದಿಂದ ವಿಪ್ರರ ಬ್ರಹ್ಮತೇಜಸ್ಸು ತಣ್ಣಗಾಗಿ ಹೋಗುತ್ತದೆ.

೨೩. ಮಹಾದಾನವನ್ನು ತೆಗೆದುಕೊಳ್ಳುವ ಬ್ರಾಹ್ಮಣನು ತನ್ನ ಶುಭವು ಯಾವುದುಂಟೋ ಅದನ್ನು ದಾತನಿಗೆ ಕೊಡುತ್ತಾನೆ. ದಾತನೂ ಕೂಡ ತನ್ನ ಅಶುಭವನ್ನು ದಾನ ತೆಗೆದುಕೊಳ್ಳುವವನಿಗೆ ಕೊಡುತ್ತಾನೆ.

೨೪. ದಾತನೂ, ಪ್ರತಿಗ್ರಹೀತನೂ ಇಬ್ಬರೂ ಈ ವಚನವನ್ನು ಪರಸ್ಪರವಾಗಿ ನೆನೆಯುತ್ತಾರೆ. ಯಾರ ಕೈ ಕೆಳಗಿರುವುದೋ ಆ ಅಲ್ಪಬುದ್ಧಿಯು ಕ್ಷೀಣಿಸುತ್ತಾನೆ.

೨೫–೨೬. ಎಲೈ ನಾರದನೇ! ಹೀಗೆಂದು ಯೋಚಿಸುತ್ತಿದ್ದ ನನಗೆ, ಶೂನ್ಯತೆಯುಂಟಾಯಿತು. ನಿದ್ರೆಯಿಂದ ಆರ್ತನಾದವನೂ, ಭಯಾರ್ತನೂ, ಕಾಮಾರ್ತನೂ, ಶೋಕದಿಂದ ಪೀಡಿತನಾದವನೂ, ತನ್ನ ಸರ್ವ ಸಂಪತ್ತೂ

ಹೃತಸ್ವಶ್ಚಾನ್ಯಚಿತ್ತಶ್ಚ ಶೂನ್ಯಾ ಹ್ಯೇತೇ ಭವಂತಿ ಚ ।
ತದೇಷು ಮತಿಮಾನ್‌ಕೋಪಂ ನ ಕುರ್ವೀತ ಯದಿ ತ್ವಯಾ ॥ ೭೬ ॥
ಕೃತಃ ಕೋಪಸ್ತತಸ್ತುಭ್ಯಮೇವಂ ಹಾನಿರಿಯಂ ಮುನೇ ।
ತತಸ್ತಾಪಾನ್ವಿತಶ್ಚಾಹಂ ತಾನ್ವಿಪ್ರಾನಬ್ರವಂ ಪುನಃ ॥ ೭೭ ॥
ಧಿಕ್ ಮಾಮಸ್ತು ಚ ದುರ್ಬುದ್ಧಿಮವಿಮೃಶ್ಯಾರ್ಥಕಾರಿಣಂ ।
ಕುರ್ವತಾಮವಿಮೃಶ್ಯೈವ ತತ್ಕಿಮಸ್ತಿ ನ ಯದ್ಭವೇತ್ ॥ ೭೮ ॥
ಸಹಸಾ ನ ಕ್ರಿಯಾಂ ಕುರ್ಯಾತ್ಪದಮೇತನ್ಮಹಾಪದಾಂ ।
ವಿಮೃಶ್ಯಕಾರಿಣಂ ಧೀರಂ ವೃಣುತೇ ಸರ್ವಸಂಪದಃ ॥ ೭೯ ॥
ಸತ್ಯಮಾಹ ಮಹಾಬುದ್ಧಿಶ್ಚಿರಕಾರೀ ಪುರಾ ಹಿ ಸಃ ।
ಪುರಾ ಹಿ ಬ್ರಾಹ್ಮಣಃ ಕಶ್ಚಿತ್ಪ್ರಖ್ಯಾತೋಽಂಗಿರಸಾಂ ಕುಲೇ ॥ ೮೦ ॥
ಚಿರಕಾರೀ ಮಹಾಪ್ರಾಜ್ಞೋ ಗೌತಮಸ್ಯಾಭವತ್ಸುತಃ ।
ಚಿರೇಣ ಸರ್ವಕಾರ್ಯಾಣಿ ಯೋ ವಿಮೃಶ್ಯ ಪ್ರಪದ್ಯತೇ ॥ ೮೧ ॥

---

ಇತರರಿಂದ ಹರಣಮಾಡಲ್ಪಟ್ಟವನೂ, ಬೇರೆ ಕಡೆ ಮನಸ್ಸುಳ್ಳವನೂ ಈ ಎಲ್ಲರೂ ಶೂನ್ಯರಾಗುತ್ತಾರೆ. ಆದುದರಿಂದ ಇವರ ವಿಷಯದಲ್ಲಿ ಬುದ್ಧಿವಂತನಾದವನು ಕೋಪ ಮಾಡಬಾರದು. ನೀನು ಕೋಪ ಮಾಡಿದೆ. ಆದುದರಿಂದ ಎಲೈ ಮುನಿಯೇ! ಈ ಪ್ರಕಾರವಾಗಿ ಇದು ನಿನಗೇ ಹಾನಿಯಾಗಿದೆ.''

೭೭. ಈ ಮಾತನ್ನು ಕೇಳಿದ ಬಳಿಕ ನಾನು ಸಂಕಟದಿಂದ ಕೂಡಿದವನಾಗಿ ಆ ಬ್ರಾಹ್ಮಣರನ್ನು ಕುರಿತು ಮತ್ತಿಂತೆಂದೆನು.

೭೮. ''ದುರ್ಬುದ್ಧಿಯಾದ ನನಗೆ ಧಿಃಕ್ಕಾರ! ವಿಮರ್ಶೆಮಾಡದೆ ಕೆಲಸ ಮಾಡುವ ನನಗೆ ಧಿಃಕ್ಕಾರ! ವಿಮರ್ಶಿಸದೆಯೇ ಕೆಲಸಮಾಡುವವರಿಗೆ ಆಗದೆ ಇರುವುದು ಯಾವುದುಂಟು?

೭೯. ಯಾವ ಕೆಲಸವನ್ನೂ ಆಲೋಚನೆಮಾಡದೆ ತಟಕ್ಕನೆ ಮಾಡಿಬಿಡಬಾರದು. ಇದು (ಎಂದರೆ ತಟಕ್ಕನೆ ಮಾಡಿಬಿಡುವುದು) ಮಹಾ ಆಪತ್ತುಗಳಿಗೆ ಆಸ್ಪದವಾಗುವುದು. ವಿಮರ್ಶಿಸಿ ಕಾರ್ಯಮಾಡುವವನಾದ ಧೀರನನ್ನು ಸರ್ವ ಸಂಪತ್ತುಗಳೂ ಬಂದು ವರಿಸುತ್ತವೆ.

೮೦. ಹಿಂದೆ ಆ ಮಹಾಬುದ್ಧಿವಂತನಾದ ಚಿರಕಾರಿಯು ಸತ್ಯವನ್ನೇ ಹೇಳಿದ್ದಾನೆ. ಅವನು ಪೂರ್ವಕಾಲದಲ್ಲಿ ಅಂಗಿರಸ ಕುಲದಲ್ಲಿ ಪ್ರಖ್ಯಾತನಾಗಿದ್ದ ಒಬ್ಬಾನೊಬ್ಬ ಬ್ರಾಹ್ಮಣನು.

೮೧. ಮಹಾಪ್ರಾಜ್ಞನಾದ ಆ ಚಿರಕಾರಿಯು ಗೌತಮನಿಗೆ ಮಗನಾಗಿ ಹುಟ್ಟಿದನು. ಅವನು ಎಲ್ಲ ಕೆಲಸಗಳನ್ನೂ ಚೆನ್ನಾಗಿ ವಿಮರ್ಶಿಸಿ ನಿಧಾನವಾಗಿ ಮಾಡುತ್ತಿದ್ದನಾದುದರಿಂದ ಅವನಿಗೆ ಆ ಹೆಸರು ಬಂತು.

ಚಿರಕಾರ್ಯಾಭಿಸಂಪತ್ತೇಶ್ಚಿರಕಾರೀ ತಥೋಚ್ಯತೇ ।
ಅಲಸಗ್ರಹಣಂ ಪ್ರಾಪ್ತೋ ದುರ್ಮೇಧಾವೀ ತಥೋಚ್ಯತೇ ॥ ೮೨ ॥
ಬುದ್ಧಿಲಾಘವಯುಕ್ತೇನ ಜನೇನಾದೀರ್ಘದರ್ಶಿನಾ ।
ವ್ಯಭಿಚಾರೇಣ ಕಸ್ಮಿನ್ ಸ ವ್ಯತಿಕ್ರಮ್ಯಾಪರಾನ್ ಸುತಾನ್ ॥ ೮೩ ॥
ಪಿತ್ರೋಕ್ತಃ ಕುಪಿತೇನಾಥ ಜಹೀಮಾಂ ಜನನೀಮಿತಿ ।
ಸ ತಥೇತಿ ಚಿರೇಣೋಕ್ತ್ವಾ ಸ್ವಭಾವಾಚ್ಚಿರಕಾರಕಃ ॥ ೮೪ ॥
ವಿಮೃಶ್ಯ ಚಿರಕಾರಿತ್ವಾಚ್ಚಿಂತಯಾಮಾಸ ವೈ ಚಿರಂ ।
ಪಿತುರಾಜ್ಞಾಂ ಕಥಂ ಕುರ್ಯಾಂ ನ ಹನ್ಯಾಂ ಮಾತರಂ ಕಥಂ ॥ ೮೫ ॥
ಕಥಂ ಧರ್ಮಚ್ಛಲೇನಾಸ್ಮಿನ್ನಿಮಜ್ಜೇಯಮಸಾಧುವತ್ ।
ಪಿತುರಾಜ್ಞಾ ಪರೋ ಧರ್ಮೋ ಹ್ಯಧರ್ಮೋ ಮಾತೃರಕ್ಷಣಂ ॥ ೮೬ ॥
ಅಸ್ವತಂತ್ರಂ ಚ ಪುತ್ರತ್ವಂ ಕಿಂತು ಮಾಂ ನಾತ್ರ ಪೀಡಯೇತ್ ।
ಸ್ತ್ರಿಯಂ ಹತ್ವಾ ಮಾತರಂ ಚ ಕೋ ಹಿ ಜಾತು ಸುಖೀ ಭವೇತ್ ॥ ೮೭ ॥

---

೮೨. ಚಿರಕಾರಿ ಎಂದರೆ ಬಹು ನಿಧಾನವಾಗಿ ಕಾರ್ಯಗಳನ್ನು ನೆರವೇರಿಸುವುದರಿಂದ ಚಿರಕಾರಿಯು ಹಾಗೆ ಕರೆಯಲ್ಪಡುತ್ತಾನೆ. ಹಾಗೆಯೇ, ಆಲಸ ಸ್ವಭಾವವನ್ನು ಪಡೆದವನಾದ (ಆಲಸ್ಯ ಹಿಡಿದುಕೊಂಡವನು) ಮೇಧಾವಿಯೂ ಹಾಗೆಯೇ ಹೇಳಲ್ಪಡುತ್ತಾನೆ.

೮೩–೮೪. ಬುದ್ಧಿಲಾಘವದಿಂದ ಕೂಡಿದವನೂ, ಮುಂದಿನದನ್ನು ಆಲೋಚಿಸಿ ನೋಡುವ ದೀರ್ಘದರ್ಶಿಯಲ್ಲದವನೂ, ಯಾವುದೋ ಒಂದು ವ್ಯಭಿಚಾರದಿಂದ ಕೋಪಗೊಂಡವನೂ ಆದ ತಂದೆಯು ಇತರ ಮಕ್ಕಳನ್ನು ಕರೆಯದೆ ಬಿಟ್ಟು ಚಿರಕಾರಿಯನ್ನು ಕುರಿತು, 'ಈ ನಿನ್ನ ತಾಯಿಯನ್ನು ಕೊಂದುಹಾಕು' ಎಂದು ಅಪ್ಪಣೆಮಾಡಿದನು'. ಸ್ವಭಾವವಾಗಿಯೇ ನಿಧಾನವಾಗಿ ಕೆಲಸಮಾಡುವ ಆ ಚಿರಕಾರಿಯು 'ಆಗಲಿ' ಎಂದು ನಿಧಾನವಾಗಿ ಹೇಳಿದನು.

೮೫. ವಿಮರ್ಶಿಸಿ ನಿಧಾನವಾಗಿ ಕಾರ್ಯಮಾಡುವವನಾದುದರಿಂದ ಬಹಳ ಹೊತ್ತು ಹೀಗೆ ಆಲೋಚನೆ ಮಾಡಿದನು: 'ತಂದೆಯ ಅಪ್ಪಣೆಯನ್ನು ಹೇಗೆ ನಡೆಸಲಿ? ತಾಯಿಯನ್ನು ಹೇಗೆ ಕೊಲ್ಲದೆ ಇರಲಿ?

೮೬. ಈ ಧರ್ಮಚ್ಛಲದಲ್ಲಿ ಅಸಾಧುವಿನಂತೆ ಅದು ಹೇಗೆ ಬೀಳದೆ ತಪ್ಪಿಸಿಕೊಳ್ಳಲಿ? ತಂದೆಯ ಅಪ್ಪಣೆಯನ್ನು ನಡೆಸುವುದು ಪರಮ ಧರ್ಮ. ಅದರ ಪ್ರಕಾರ ತಾಯಿಯನ್ನು ಕಾಪಾಡುವುದು ಅಧರ್ಮವಾಗುತ್ತದೆ.

೮೭. ಮಗನಾಗಿರುವವನು ಅಸ್ವತಂತ್ರನು. ಈ ಅಸ್ವಾತಂತ್ರ್ಯವು ಈ ಸಂದರ್ಭದಲ್ಲಿ ನನ್ನನ್ನು ಪೀಡಿಸದಿರುವುದು ಹೇಗೆ? ಹೆಂಗಸನ್ನು ಅದರಲ್ಲೂ ತಾಯಿಯನ್ನು ಕೊಂದು ಯಾವನು ತಾನೇ ಎಂದಿಗಾದರೂ ಸುಖಿಯಾಗಿರುತ್ತಾನೆ.

ಪಿತರಂ ಚಾಪ್ಯವಜ್ಞಾಯ ಕಃ ಪ್ರತಿಷ್ಠಾಮವಾಪ್ನುಯಾತ್ ।
ಅನವಜ್ಞಾ ಪಿತುರ್ಯುಕ್ತಾ ಯುಕ್ತಂ ಮಾತುಶ್ಚ ರಕ್ಷಣಂ ॥ ೮೮ ॥
ಕ್ಷಮಾಯೋಗ್ಯಾವುಭಾವೇತೌ ನಾತಿವರ್ತೇತ ವೈ ಕಥಂ ।
ಪಿತಾ ಹ್ಯಾತ್ಮಾನಮಾಧತ್ತೇ ಜಾಯಾಯಾಂ ಜಜ್ಞಿವಾನಿತಿ ॥ ೮೯ ॥
ಶೀಲಚಾರಿತ್ರಗೋತ್ರಸ್ಯ ಧಾರಣಾರ್ಥಂ ಕುಲಸ್ಯ ಚ ।
ಸೋಽಹಮಾತ್ಮಾ ಸ್ವಯಂ ಪಿತ್ರಾ ಪುತ್ರತ್ವೇ ಪರಿಕಲ್ಪಿತಃ ॥ ೯೦ ॥
ಜಾತಕರ್ಮಣಿ ಯತ್ಪ್ರಾಹ ಪಿತಾ ಯಚ್ಚೋಪಕರ್ಮಣಿ ।
ಪರ್ಯಾಪ್ತಃ ದೃಢೀಕಾರಃ ಪಿತುರ್ಗೌರವಲಿಪ್ಸಯಾ ॥ ೯೧ ॥
ಶರೀರಾದೀನಿ ದೇಯಾನಿ ಪಿತಾ ತ್ವೇಕಃ ಪ್ರಯಚ್ಛತಿ ।
ತಸ್ಮಾತ್ಪಿತುರ್ವಚಃ ಕಾರ್ಯಂ ನ ವಿಚಾರ್ಯಂ ಕಥಂಚನ ॥ ೯೨ ॥
ಪಾತಕಾನ್ಯಪಿ ಚೂರ್ಯಂತೇ ಪಿತುರ್ವಚನಕಾರಿಣಃ ।
ಪಿತಾ ಸ್ವರ್ಗಃ ಪಿತಾ ಧರ್ಮಃ ಪಿತಾ ಪರಮಕಂ ತಪಃ ॥ ೯೩ ॥

---

೮೮. ತಂದೆಯನ್ನು ಕಡೆಗಾಣಿಸಿ ಯಾವನು ತಾನೇ ಶಾಶ್ವತವಾದ ಕೀರ್ತಿಯನ್ನು ಪಡೆಯುತ್ತಾನೆ? ತಂದೆಯನ್ನು ಕಡೆಗಣಿಸದಿರುವುದು ಯುಕ್ತವಾದುದು. ಅದರಂತೆಯೇ ತಾಯಿಯನ್ನು ರಕ್ಷಿಸುವುದೂ ಯುಕ್ತವೇ ಆಗಿದೆ.

೮೯–೯೦. ಈ ಇಬ್ಬರೂ ಕ್ಷಮೆಗೆ ಯೋಗ್ಯರು. ಇವರನ್ನು ಮೀರಿ ನಡೆಯದಿರುವುದು ಹೇಗೆ? ತಂದೆಯು ಶೀಲ, ಚಾರಿತ್ರ ಮತ್ತು ಗೋತ್ರದ ಮುಂಬರಿವಿಗಾಗಿಯೂ ಮಗನು ಹುಟ್ಟಲಿ ಎಂದು ಹೆಂಡತಿಯಲ್ಲಿ ಆತ್ಮನನ್ನು (ತನ್ನನ್ನು) ಇಡುತ್ತಾನೆ. ಪುತ್ರನಾಗಿ ಕಲ್ಪಿಸಿಕೊಂಡಿರುವ ಅಂಥ ನಾನು ತಂದೆಯ ಸ್ವಯಂ ಆತ್ಮವೇ ಆಗಿದ್ದೇನೆ.

೯೧. ಪಿತನು ಜಾತಕರ್ಮದಲ್ಲಿ ಯಾವುದನ್ನು ಹೇಳಿದನೋ, ಉಪನಯನ ಕರ್ಮದಲ್ಲಿ ಯಾವುದನ್ನು ಹೇಳಿದನೋ ಅದರ ಧೃಢೀಕರಣವು ಪೂರ್ಣವಾಯಿತು; ತಂದೆಗೆ ಗೌರವ ತೋರಿಸಬೇಕೆಂಬ ಅಪೇಕ್ಷೆಯಿಂದ ಅದನ್ನು ದೃಢಪಡಿಸಿದೆನು.

೯೨. ಶರೀರ ಮೊದಲಾದ ದೇಯ ವಸ್ತುಗಳನ್ನು ತಂದೆಯೊಬ್ಬನೇ ಕೊಡತಕ್ಕವನು. ಆದುದರಿಂದ ತಂದೆಯ ಮಾತನ್ನು ನಡೆಸಬೇಕು. ಹೇಗೂ ಅದನ್ನು ವಿಚಾರಮಾಡತಕ್ಕದ್ದಲ್ಲ.

೯೩. ತಂದೆಯ ಮಾತು ನಡೆಸುವವನ ಪಾತಕಗಳು ಕೂಡ ಪುಡಿಪುಡಿಯಾಗಿಹೋಗುತ್ತವೆ. ತಂದೆಯೇ ಸ್ವರ್ಗ; ತಂದೆಯೇ ಧರ್ಮ; ತಂದೆಯೇ ಅತ್ಯುತ್ಕೃಷ್ಟವಾದ ತಪಸ್ಸು.

ಪಿತರಿ ಪ್ರೀತಿಮಾಪನ್ನೇ ಸರ್ವಾಃ ಪ್ರೀಣಂತಿ ದೇವತಾಃ ।
ಆಶಿಷಸ್ತಾ ಭಜಂತ್ಯೇನಂ ಪುರುಷಂ ಪ್ರಾಹ ಯಾಃ ಪಿತಾ ॥ ೯೪ ॥
ನಿಷ್ಕೃತಿಃ ಸರ್ವಪಾಪಾನಾಂ ಪಿತಾ ಯದಭಿನಂದತಿ ।
ಮುಚ್ಯತೇ ಬಂಧನಾತ್ಪುಷ್ಪಂ ಫಲಂ ವೃಂತಾತ್ಪ್ರಮುಚ್ಯತೇ ॥ ೯೫ ॥
ಕ್ಲಿಶ್ಯನ್ನಪಿ ಸುತಃ ಸ್ನೇಹಂ ಪಿತಾ ಸ್ನೇಹಂ ನ ಮುಂಚತಿ ।
ಏತದ್ವಿಚಿಂತ್ಯ ತಂ ತಾವತ್ಪುತ್ರಸ್ಯ ಪಿತೃಗೌರವಂ ॥ ೯೬ ॥
ಪಿತಾ ನಾಲ್ಪತರಂ ಸ್ಥಾನಂ ಚಿಂತಯಿಷ್ಯಾಮಿ ಮಾತರಂ ।
ಯೋ ಹ್ಯಯಂ ಮಯಿ ಸಂಘಾತೋ ಮರ್ತ್ಯತ್ವೇ ಪಾಂಚಭೌತಿಕಃ ॥೯೭॥
ಅಸ್ಯ ಮೇ ಜನನೀ ಹೇತುಃ ಪಾವಕಸ್ಯ ಯಥಾರಣಿಃ ।
ಮಾತಾ ದೇಹಾರಣಿಃ ಪುಂಸಃ ಸರ್ವಸ್ಯಾರ್ಥಸ್ಯ ನಿರ್ವೃತಿಃ ॥ ೯೮ ॥
ಮಾತೃಲಾಭೇ ಸನಾಥತ್ವಮನಾಥತ್ವಂ ವಿಪರ್ಯಯೇ ।
ನ ಸ ಶೋಚತಿ ನಾಪ್ಯೇನಂ ಸ್ಥಾವರ್ಯಮಪಿ ಕರ್ಷತಿ ॥ ೯೯ ॥

---

೯೪. ತಂದೆಯ ಪ್ರೀತಿಯನ್ನು ಪಡೆದವನಾದರೆ ಸರ್ವದೇವತೆಗಳೂ ಪ್ರೀತರಾಗುತ್ತಾರೆ. ಒಬ್ಬನನ್ನು ಕುರಿತು ಅವನ ತಂದೆಯು ಹೇಳಿದ ಹರಕೆಗಳು ಆ ಪುರುಷನನ್ನು ಬಂದು ಸೇರುತ್ತವೆ.

೯೫. ತಂದೆಯು ಯಾವುದನ್ನು ಅಭಿನಂದಿಸುತ್ತಾನೋ ಅದರಿಂದ (ತಂದೆ ಅಭಿನಂದಿಸುವಂಥದನ್ನು ಮಾಡುವುದರಿಂದ) ಸರ್ವಪಾಪಗಳಿಗೂ ಪರಿಹಾರವುಂಟಾಗುತ್ತದೆ. ಹೂವು ಸೇರಿಕೆಯ ಕಟ್ಟಿನಿಂದ ಬಿಡಲ್ಪಡುತ್ತದೆ. ಹಣ್ಣು ತೊಟ್ಟಿನಿಂದ ಬಿಡಲ್ಪಡುತ್ತದೆ.

೯೬–೯೮. ಮಗನು ಸ್ನೇಹವನ್ನು ಕಡಮೆಮಾಡಿದರೂ ಕೂಡ ತಂದೆಯು ಆ ಮಗನ ಮೇಲಿನ ಸ್ನೇಹವನ್ನು ಬಿಡುವುದಿಲ್ಲ. ಇದನ್ನು ಚೆನ್ನಾಗಿ ಮನಸ್ಸಿನಲ್ಲಿ ನೆನೆದು, ಮಗನಿಗೆ ತಂದೆಯಲ್ಲಿರಬೇಕಾದ ಗೌರವವನ್ನು ಸ್ಮರಿಸಿ, ತಂದೆಯು ಅಲ್ಪತರವಾದ ಸ್ಥಾನವಲ್ಲ ಎಂದು ನಿರ್ಧರಿಸುತ್ತೇನೆ. ಇನ್ನು ತಾಯಿಯ ವಿಷಯವನ್ನು ಯೋಚಿಸುತ್ತೇನೆ. ನನ್ನ ಮನುಷ್ಯತ್ವಕ್ಕೆ ಕಾರಣವಾಗಿರುವ ಪಂಚಭೂತಗಳ ಒಟ್ಟುಗೂಡಿಕೆ ಯಾವುದುಂಟೋ, ಅದಕ್ಕೆ ಬೆಂಕಿಗೆ ಅರಣಿ ಹೇಗೆ ಕಾರಣವೋ ಹಾಗೆ ನನ್ನ ತಾಯಿಯೇ ಕಾರಣವು. ತಾಯಿಯೇ ದೇಹವೆಂಬ ಬೆಂಕಿಗೆ ಅರಣಿಯು. ಮನುಷ್ಯನ ಸರ್ವ ಇಷ್ಟಾರ್ಥಗಳಿಗೂ ಪೂರಕಸ್ಥಾನವು.

೯೯–೧೦೬. ತಾಯಿಯಿದ್ದರೆ ಸನಾಥತ್ವ; ಇಲ್ಲದಿದ್ದರೆ ಅನಾಥತ್ವವುಂಟಾಗುವುದು. ಸಂಪತ್ತಿಲ್ಲದವನಾದರೂ ಯಾವನಿಗೆ ಮನೆಯಲ್ಲಿ ತಾಯಿಯೆಂಬುವಳಿರುವಳೋ ಅವನು ಶೋಕಕ್ಕೆ ಗುರಿಯಾಗುವುದಿಲ್ಲ; ಅವನನ್ನು ಮುಪ್ಪು ಕೂಡ ಎಳೆದು ಕುಗ್ಗಿಸುವುದಿಲ್ಲ. ಪುತ್ರ, ಪೌತ್ರರಿಂದ ಕೂಡಿದವನಾಗಿ ಯಾವನು

ಶ್ರಿಯಾ ಹೀನೋಽಪಿ ಯೋ ಗೇಹೇ ಅಂಬೇತಿ ಪ್ರತಿಪದ್ಯತೇ ।
ಪುತ್ರ ಪೌತ್ರ ಸಮಾಪನ್ನೋ ಜನನೀಂ ಯಃ ಸಮಾಶ್ರಿತಃ ॥ ೧೦೦ ॥
ಅಪಿ ವರ್ಷಶತಸ್ಯಾಂತೇ ಸ ದ್ವಿಹಾಯನವಚ್ಚರೇತ್ ।
ಸಮರ್ಥಂ ವಾಽಸಮರ್ಥಂ ವಾ ಕೃಶಂ ವಾಪ್ಯಕೃಶಂ ತಥಾ ॥ ೧೦೧ ॥
ರಕ್ಷಯೇಚ್ಚ ಸುತಂ ಮಾತಾ ನಾನ್ಯಃ ಪೋಷ್ಯ ವಿಧಾನತಃ ।
ತದಾ ಸ ವೃದ್ಧೋ ಭವತಿ ತದಾ ಭವತಿ ದುಃಖಿತಃ ॥ ೧೦೨ ॥
ತದಾ ಶೂನ್ಯಂ ಜಗತ್ತಸ್ಯ ಯದಾ ಮಾತ್ರಾ ವಿಯುಜ್ಯತೇ ।
ನಾಸ್ತಿ ಮಾತೃಸಮಾ ಚ್ಛಾಯಾ ನಾಸ್ತಿ ಮಾತೃಸಮಾ ಗತಿಃ ॥ ೧೦೩ ॥
ನಾಸ್ತಿ ಮಾತೃಸಮಂ ತ್ರಾಣಂ ನಾಸ್ತಿ ಮಾತೃಸಮಾ ಪ್ರಪಾ ।
ಕುಕ್ಷಿಸಂಧಾರಣಾದ್ಧಾತ್ರೀ ಜನನಾಜ್ಜನನೀ ತಥಾ ॥ ೧೦೪ ॥
ಅಂಗಾನಾಂ ವರ್ಧನಾದಂಬಾ ವೀರಸೂತ್ವೇ ಚ ವೀರಸೂಃ ।
ಶಿಶೋಃ ಶುಶ್ರೂಷಣಾಚ್ಛ್ವಶ್ರೂರ್ಮಾತಾ ಸ್ಯಾನ್ಮಾನನಾತ್ತಥಾ ॥ ೧೦೫ ॥
ದೇವತಾನಾಂ ಸಮಾವಾಪಮೇಕತ್ವಂ ಪಿತರಂ ವಿದುಃ ।
ಮರ್ತ್ಯಾನಾಂ ದೇವತಾನಾಂ ಚ ಪೂಗೋ ನಾತ್ಯೇತಿ ಮಾತರಂ ॥ ೧೦೬ ॥

---

ತಾಯಿಯನ್ನು ಆಶ್ರಯಿಸಿರುವನೋ, ಅವನು ನೂರುವರ್ಷಗಳ ಕೊನೆಯಲ್ಲಿ ಕೂಡ ಎರಡು ವರ್ಷದವನಂತೆ ವರ್ತಿಸುತ್ತಾನೆ. ಸಮರ್ಥನೇ ಆಗಲಿ, ಅಸಮರ್ಥನೇ ಆಗಲಿ, ಕೃಶನೇ ಆಗಿರಲಿ ಅಥವಾ ಅಕೃಶನಾದವನೇ ಆಗಿರಲಿ, ಮಗನನ್ನು ತಾಯಿಯು ರಕ್ಷಿಸುವಳು. ಆ ರೀತಿ ಪೋಷಿಸಿ ರಕ್ಷಿಸುವವರು ಬೇರೊಬ್ಬರೂ ಇಲ್ಲ. ಯಾವಾಗ ತಾಯಿಯಿಂದ ಅಗಲಿ ವಿಯೋಗಹೊಂದುತ್ತಾನೋ ಆಗಲೇ ಅವನು ವೃದ್ಧನಾಗುತ್ತಾನೆ. ಆಗ ಅವನು ದುಃಖಿತನಾಗುತ್ತಾನೆ; ಅವನಿಗೆ ಜಗತ್ತು ಶೂನ್ಯವಾಗಿ ಕಾಣುತ್ತದೆ. ತಾಯಿಗೆ ಸಮನಾದ ನೆರಳಿಲ್ಲ. ತಾಯಿಗೆ ಸಮನಾದ ಗತಿಯಿಲ್ಲ. ತಾಯಿಗೆ ಸಮಾನವಾದ ತ್ರಾಣವಿಲ್ಲ; ತಾಯಿಗೆ ಸಮಾನವಾದ ಅರವಟ್ಟಿಗೆಯಿಲ್ಲ; ಹೊಟ್ಟೆಯಲ್ಲಿ ಹೊರುವವಳಾದ್ದರಿಂದ ಅವಳು 'ಧಾತ್ರೀ' ಎನ್ನಿಸಿಕೊಳ್ಳುವವಳು; ಅದೇ ರೀತಿ ಜನನಕ್ಕೆ ಆಶ್ರಯಳಾದುದರಿಂದ ಜನನಿ ಯೆನ್ನಿಸುವಳು. ಅಂಗಗಳನ್ನು ಪೋಷಿಸಿ ಬೆಳೆಸುವುದರಿಂದ ಆಕೆಯು 'ಅಂಬಾ' ಎನ್ನಿಸಿಕೊಳ್ಳುವಳು. ವೀರರನ್ನು ಹಡೆಯುವವಳಾದುದರಿಂದ ಅವಳು 'ವೀರಸೂಃ' ಎಂದು ಕರೆಯಲ್ಪಡುವಳು. ಶಿಶುವಿಗೆ ಶುಶ್ರೂಷೆ ಮಾಡುವುದರಿಂದ ಅವಳು ಶ್ವಶ್ರುವೆನ್ನಲ್ಪಡುವಳು. ಮನಸ್ಸಿನಲ್ಲಿ ಸದಾ ನೆನೆಯುವುದರಿಂದ ಮಾತೆಯೆನ್ನಲ್ಪಡುವಳು. ದೇವತೆಗಳೆಲ್ಲರೂ ಒಟ್ಟುಗೂಡಿದರೆ ತಂದೆಗೆ ಸಮನಾಗುವರೆಂದು ತಿಳಿಯುವರು. ಮರ್ತ್ಯರ ಮತ್ತು ದೇವತೆಗಳ ಗುಂಪೂ ತಾಯಿಗಿಂತ ಮಿಗಿಲಾಗಲಾರದು.

ಪತಿತಾ ಗುರವಸ್ತ್ಯಾಜ್ಯಾ ಮಾತಾ ಚ ನ ಕಥಂಚನ ।
ಗರ್ಭಧಾರಣಪೋಷಾಭ್ಯಾಂ ತೇನ ಮಾತಾ ಗರೀಯಸೀ ॥ ೧೦೭ ॥
ಏವಂ ಸ ಕೌಶಿಕೀ ತೀರೇ ಬಲಿಂ ರಾಜಾನಮೀಕ್ಷಿತೀಂ ।
ಸ್ತ್ರೀವೃತ್ತಿಂ ಚಿರಕಾಲತ್ವಾತ್ ಹಂತುಂ ದ್ವಿಷ್ಟಃ ಸ್ವಮಾತರಂ ॥ ೧೦೮ ॥
ವಿಮೃಶ್ಯ ಚಿರಕಾಲಂ ಹಿ ಚಿಂತಾಂತಂ ನಾಭ್ಯಪದ್ಯತ ।
ಏತಸ್ಮಿನ್ನಂತರೇ ಶಕ್ರೋ ಬ್ರಾಹ್ಮಣಂ ರೂಪಮಾಸ್ಥಿತಃ ॥ ೧೦೯ ॥
ಗಾಯನ್ ಗಾಥಾಮುಪಾಯಾತಃ ಪಿತುಸ್ತಸ್ಯಾಶ್ರಮಾಂತಿಕೇ ।
ಅನೃತಾ ಹಿ ಸ್ತ್ರಿಯಃ ಸರ್ವಾಃ ಸೂತ್ರಕಾರೋ ಯದಬ್ರವೀತ್ ॥ ೧೧೦ ॥
ಅತಸ್ತಾಭ್ಯಃ ಫಲಂ ಗ್ರಾಹ್ಯಂ ನಸ್ಯಾದ್ದೋಷೇಕ್ಷಣಃ ಸುಧೀಃ ।
ಇತಿ ಶ್ರುತ್ವಾ ತಮಾನರ್ಚ ಮೇಧಾತಿಥಿರುದಾರಧೀಃ ॥ ೧೧೧ ॥
ದುಃಖಿತಶ್ಚಿಂತಯನ್ ಪ್ರಾಪ್ತೋ ಭೃಶಮಶ್ರೂಣಿ ವರ್ತಯನ್ ।
ಅಹೋಽಹಮೀರ್ಷ್ಯಯಾ ಕ್ಷಿಪ್ತೋ ಮಗ್ನೋಽಹಂ ದುಃಖಸಾಗರೇ ॥
ಹತ್ವಾ ನಾರೀಂ ಚ ಸಾಧ್ವೀಂ ಚ ಕೋ ನು ಮಾಂ ತಾರಯಿಷ್ಯತಿ ।
ಸತ್ವರೇಣ ಮಯಾಜ್ಞಪ್ತಶ್ಚಿರಕಾರೀ ಹ್ಯುದಾರಧೀಃ ॥ ೧೧೩ ॥

---

೧೦೭. ಪತಿತರಾದ ಗುರುಗಳು ತ್ಯಾಜ್ಯರು. ಆದರೆ ಹೇಗೇ ಆದರೂ ತಾಯಿಯು ತ್ಯಾಜ್ಯಳಲ್ಲ. ಗರ್ಭದಲ್ಲಿ ಧರಿಸುವುದು ಮತ್ತು ಪೋಷಿಸುವುದು ಇವುಗಳಿಂದ ತಾಯಿಯೇ ತಂದೆಗಿಂತ ಹೆಚ್ಚಿನವಳಾಗುವಳು.

೧೦೮. ಹೀಗೆ ಆತನು ಯೋಚಿಸಿದನು. ಕೌಶಿಕೀನದಿಯ ತೀರದಲ್ಲಿ ಆಕೆ ಸ್ತ್ರೀ ಸಹಜವಾದ ವೃತ್ತಿಯಿಂದ (ಕುತೂಹಲದಿಂದ) ಬಲಿರಾಜನನ್ನು ಬಹು ಹೊತ್ತು ನೋಡುತ್ತಿದ್ದಾಗ, ಆ ತನ್ನ ತಾಯಿಯನ್ನು ಕೊಲ್ಲುವಂತೆ ಚಿರಕಾರಿಯು ಅಪ್ಪಣೆ ಮಾಡಲ್ಪಟ್ಟನು.

೧೦೯–೧೧೦. ಆ ಚಿರಕಾರಿಯು ಮೇಲೆ ಹೇಳಿದಂತೆ ವಿಮರ್ಶೆಮಾಡುತ್ತ ಆಲೋಚನೆಗೆ ಅಂತವನ್ನೇ ಕಾಣಲಿಲ್ಲ. ಈ ನಡುವೆ ಇಂದ್ರನು ಬ್ರಾಹ್ಮಣರೂಪ ವನ್ನು ಧರಿಸಿ, ಮುಂದೆ ಹೇಳುವ ಗಾಥೆಯನ್ನು ಗಾನಮಾಡುತ್ತ ಆ ಚಿರಕಾರಿಯ ತಂದೆಯ ಆಶ್ರಮದ ಸಮೀಪಕ್ಕೆ ಬಂದನು. ಸ್ತ್ರೀಯರೆಲ್ಲರೂ ಸುಳ್ಳರು. ಹೀಗೆಂದು ಸೂತ್ರಕಾರನು ಹೇಳಿದ್ದಾನೆ.

೧೧೧–೧೧೩. ಆದುದರಿಂದ ಅವರಿಂದ ದೊರೆಯುವ ಫಲವನ್ನು ಗ್ರಹಿಸ ಬೇಕು. ಬುದ್ಧಿವಂತನಾದವನು ಅವರಲ್ಲಿ ತಪ್ಪು ಕಾಣುತ್ತಿರಬಾರದು. ಇಂತೆಂದು ಹಾಡಿದ ಆ ಗಾಥೆಯನ್ನು ಕೇಳಿ, ಉದಾರಬುದ್ಧಿಯುಳ್ಳ ಆ ಗೌತಮನು ದುಃಖಿತ ನಾಗಿ ಬಹಳವಾಗಿ ಕಣ್ಣೀರು ಸುರಿಸುತ್ತ, "ಅಯ್ಯೋ, ನಾನು ಈರ್ಷ್ಯೆಯಿಂದ ಎಳೆಯಲ್ಪಟ್ಟವನಾಗಿ ಹೆಂಗಸನ್ನು, ಸಾಧ್ವಿಯನ್ನು ಕೊಂದು ದುಃಖಸಾಗರದಲ್ಲಿ

ಯದ್ಯಯಂ ಚಿರಕಾರೀ ಸ್ಯಾತ್ಸ ಮಾಂ ತ್ರಾಯೇತ ಪಾತಕಾತ್ ।
ಚಿರಕಾರಿತ ಭದ್ರಂತೇ ಭದ್ರಂ ತೇ ಚಿರಕಾರಿತ ॥ ೧೧೪ ॥
ಯದದ್ಯ ಚಿರಕಾರೀ ತ್ವಂ ತತೋಽಸಿ ಚಿರಕಾರಿಕಃ ।
ತ್ರಾಹಿ ಮಾಂ ಮಾತರಂ ಚೈವ ತಪೋ ಯಚ್ಚಾರ್ಜಿತಂ ಮಯಾ ॥೧೧೫॥
ಆತ್ಮಾನಂ ಪಾತಕೇ ವಿಷ್ಟಂ ಶುಭಾಹ್ವ ಚಿರಕಾರಿಕ ।
ಏವಂ ಸ ದುಃಖಿತಃ ಪ್ರಾಪ್ತೋ ಗೌತಮೋ ಚಿಂತಿತಸ್ತದಾ ॥ ೧೧೬ ॥
ಚಿರಕಾರಿಂ ದದರ್ಶಾಥ ಪುತ್ರಂ ಮಾತುರುಪಾಂತಿಕೇ ।
ಚಿರಕಾರೀತು ಪಿತರಂ ದೃಷ್ಟ್ವಾ ಪರಮದುಃಖಿತಃ ॥ ೧೧೭ ॥
ಶಸ್ತ್ರಂ ತ್ಯಕ್ತ್ವಾ ಸ್ಥಿತೋ ಮೂರ್ಧ್ನಾ ಪ್ರಸಾದಾಯೋಪಚಕ್ರಮೇ ।
ಮೇಧಾತಿಥಿಃ ಸುತಂ ದೃಷ್ಟ್ವಾ ಶಿರಸಾ ಪತಿತಂ ಭುವಿ ॥ ೧೧೮ ॥
ಪತ್ನೀಂ ಚೈವ ತು ಜೀವಂತೀ ಪರಾಮಭ್ಯಗಮನ್ ಮುದಂ ।
ಹನ್ಯಾದಿತಿ ನ ಸಾ ವೇದ ಶಸ್ತ್ರಪಾಣೌ ಸ್ಥಿತೇ ಸುತೇ ॥ ೧೧೯ ॥

---

ಮುಳುಗಿದೆನು. ನನ್ನನ್ನು ಈ ದುಃಖಸಮುದ್ರದಿಂದ ದಾಟಿಸುವವರು ಯಾರು? ನಾನು ಬಹು ಆತುರಪಟ್ಟು ಆಜ್ಞೆಮಾಡಿದೆನು. ಚಿರಕಾರಿಯಾದರೋ ಉದಾರ ಬುದ್ಧಿಯು. ಅವನು ಚಿರಿಕಾರಿಯೇ ಆಗಿದ್ದರೆ ಈ ಪಾತಕದಿಂದ ನನ್ನನ್ನು ರಕ್ಷಿಸುತ್ತಾನೆ. ಚಿರಕಾರಿಯೇ, ನಿನಗೆ ಮಂಗಳವಾಗಲಿ. ಚಿರಕಾರೀ, ನಿನಗೆ ಮಂಗಳವಾಗಲಿ.

೧೧೫. ಈಗ ನೀನು ಅತಿ ನಿಧಾನವಾಗಿ ಕೆಲಸಮಾಡುವವನಾಗಿದ್ದರೆ, ಆಗ ನಿಜವಾಗಿಯೂ ನೀನು ಚಿರಿಕಾರಿಯೇ ಹೌದು. ನನ್ನನ್ನು ಕಾಪಾಡು; ನಿನ್ನ ತಾಯಿಯನ್ನು ಕಾಪಾಡು; ನಾನು ಸಂಪಾದಿಸಿರುವ ತಪಸ್ಸನ್ನೂ ಕಾಪಾಡು.

೧೧೬. ಶುಭನಾಮನಾದ ಎಲೈ ಚಿರಕಾರಿಯೇ! ಪಾತಕದಲ್ಲಿ ಪ್ರವಿಷ್ಟನಾಗಿರುವ ನಿನ್ನನ್ನೂ ರಕ್ಷಿಸು." ಹೀಗೆ ದುಃಖಿತನಾಗಿ ಆ ಗೌತಮನು ಚಿಂತಿಸುವವನಾದನು.

೧೧೭–೧೧೯. ಅನಂತರದಲ್ಲಿ ತನ್ನ ಪುತ್ರನಾದ ಚಿರಕಾರಿಯನ್ನು ತಾಯಿಯ ಸಮೀಪದಲ್ಲಿ ಕಂಡನು. ಚಿರಕಾರಿಯಾದರೋ ತಂದೆಯನ್ನು ನೋಡಿ ಪರಮ ದುಃಖಿತನಾಗಿ, ಶಸ್ತ್ರವನ್ನು ಬಿಸುಟು ನಿಂತುಕೊಂಡನು; ತಲೆಬಾಗಿ ವಂದಿಸಿ ತಂದೆಯನ್ನು ಪ್ರಸನ್ನಗೊಳಿಸಲು ಪ್ರಾರಂಭಿಸಿದನು. ಮೇಧಾತಿಥಿಯು ತಲೆಯಿಂದ ನೆಲಮುಟ್ಟಿ ನಮಸ್ಕರಿಸಿದ ಮಗನನ್ನು ಕಂಡು, ಜೀವಂತಳಾಗಿರುವ ಪತ್ನಿಯನ್ನು ನೋಡಿ ಅತ್ಯಂತ ಆನಂದಗೊಂಡವನಾದನು. ಮಗನು ಶಸ್ತ್ರಪಾಣಿಯಾಗಿ ನಿಂತಿರಲಾಗಿ ತಾಯಿಯು ಅವನು ತನ್ನನ್ನು ಕೊಲ್ಲುತ್ತಾನೆ ಎಂದು ತಿಳಿಯಲಿಲ್ಲ.

ಬುದ್ಧಿರಾಸೀತ್ಸುತಂ ದೃಷ್ಟ್ವಾ ಪಿತುಶ್ಚರಣಯೋರ್ನತಂ ।
ಶಸ್ತ್ರಗ್ರಹಣ ಚಾಪಲ್ಯಂ ಸಂವೃಣೋತಿ ಭಯಾದಿತಿ ॥ ೧೨೦ ॥
ತತಃ ಪಿತ್ರಾ ಚಿರಂ ಸ್ಮೃತ್ವಾ ಚಿರಂ ಚಾಘ್ರಾಯ ಮೂರ್ಧನಿ ।
ಚಿರಂ ದೋರ್ಭ್ಯಾಂ ಪರಿಷ್ವಜ್ಯ ಚಿರಂಜೀವೇತ್ಯುದಾಹೃತಃ ॥ ೧೨೧ ॥
ಚಿರಂ ಮುದಾನ್ವಿತಃ ಪುತ್ರಂ ಮೇಧಾತಿಥಿರಥಾಬ್ರವೀತ್ ।
ಚಿರಕಾರಿಕ ಭದ್ರಂ ತೇ ಚಿರಕಾರೀ ಭವೇಚ್ಚಿರಂ ॥ ೧೨೨ ॥
ಚಿರಾಯ ಯತ್ಕೃತಂ ಸೌಮ್ಯ ಚಿರಮಸ್ಮನ್ನದುಃಖಿತಃ ।
ಗಾಥಾಶ್ಚಾಪ್ಯಬ್ರವೀದ್ವಿದ್ವಾನ್ ಗೌತಮೋ ಮುನಿಸತ್ತಮಃ ॥ ೧೨೩ ॥
ಚಿರೇಣ ಮಂತ್ರಂ ಸಂಧೀಯಾ ಚ್ಚಿರೇಣ ಚ ಕೃತಂ ತ್ಯಜೇತ್ ।
ಚಿರೇಣ ವಿಹಿತಂ ಮಿತ್ರಂ ಚಿರಂ ಧಾರಣಮರ್ಹತಿ ॥ ೧೨೪ ॥
ರೋಗೇ ದರ್ಪೇಚ ಮಾನೇಚ ದ್ರೋಹೇ ಪಾಪ್ತೇ ಚ ಕರ್ಮಣಿ ।
ಅಪ್ರಿಯೇ ಚೈವ ಕರ್ತವ್ಯೇ ಚಿರಕಾರೀ ಪ್ರಶಸ್ಯತೇ ॥ ೧೨೫ ॥

---

೧೨೦–೧೨೧. ತಂದೆಯ ಕಾಲುಗಳ ಮೇಲೆ ಮಣಿದ ಮಗನನ್ನು ಕಂಡು, 'ಇವನು ಶಸ್ತ್ರಹಿಡಿಯಬೇಕೆಂಬ ಚಾಪಲ್ಯವನ್ನು ಭಯದಿಂದ ಅಡಗಿಸಿಕೊಳ್ಳುತ್ತಿದ್ದಾನೆ' ಎಂದು ಆಕೆಗೆ ಭಾವನೆಯುಂಟಾಯಿತು. ಬಳಿಕ ತಂದೆಯು ಚಿರಕಾಲ ಸ್ಮರಿಸಿ, ಮಗನ ತಲೆಯನ್ನು ಬಹುಹೊತ್ತು ಮೂಸಿ, ಚಿರಕಾಲ ತೋಳುಗಳಿಂದ ತಬ್ಬಿಕೊಂಡು, 'ಚಿರಕಾಲ ಜೀವಿಸು' ಎಂದು ಆಶೀರ್ವದಿಸಿದನು.

೧೨೨–೧೨೩. ಬಳಿಕ ಮೇಧಾತಿಥಿಯು ಬಹು ಸಂತೋಷಗೊಂಡವನಾಗಿ ಮಗನನ್ನು ಕುರಿತು ಇಂತೆಂದನು :—"ಚಿರಕಾರೀ! ನಿನಗೆ ಮಂಗಳವಾಗಲಿ. ಚಿರಕಾಲವೂ ಚಿರಕಾರಿಯಾಗಿರು. ಈಗ ನೀನು ಮಾಡಬೇಕಾಗಿದ್ದ ಕೆಲಸದಲ್ಲಿ ಬಹು ತಡಮಾಡಿದೆಯಲ್ಲ; ಈ ವಿಷಯದಲ್ಲಿ ನಾನು ದುಃಖಿತನಾಗಿಲ್ಲ." ಹೀಗೆಂದು ನುಡಿದು, ಮುನಿಶ್ರೇಷ್ಠನೂ, ವಿದ್ವಾಂಸನೂ ಆದ ಆ ಗೌತಮನು ಈ ಗಾಥೆಗಳನ್ನು ಹೇಳುವವನಾದನು.

೧೨೪. "ಮಂತ್ರವನ್ನು ಚಿರಕಾಲ ಸಂಧಾನ ಮಾಡಬೇಕು. ಮಾಡಿದ್ದನ್ನು ಚಿರಕಾಲ ಯೋಚನೆಮಾಡಿ ತ್ಯಜಿಸಬೇಕು. ಚಿರಕಾಲದಿಂದ ಮಾಡಿಕೊಂಡ ಮಿತ್ರನನ್ನು ಚಿರಕಾಲವೂ ಮಿತ್ರನನ್ನಾಗಿಯೇ ಉಳಿಸಿಕೊಳ್ಳಬೇಕು. (ಸ್ನೇಹ ಮಾಡುವಾಗ ನಿಧಾನವಾಗಿ ಚೆನ್ನಾಗಿ ಪರೀಕ್ಷಿಸಬೇಕು. ಹಾಗೆ ಮಾಡಿದಮೇಲೆ ಆ ಸ್ನೇಹವನ್ನು ಚಿರಕಾಲ ಕಾಪಾಡಿಕೊಳ್ಳಬೇಕು ಎಂದು ತಾತ್ಪರ್ಯ.)

೧೨೫. ರೋಗದಲ್ಲಿ, ದರ್ಪದಲ್ಲಿ, ಮಾನದಲ್ಲಿ (ಎಂದರೆ ದಂಭದಲ್ಲಿ), ದ್ರೋಹದಲ್ಲಿ, ಪಾಪಕರ್ಮದಲ್ಲಿ ಮತ್ತು ಅಪ್ರಿಯವಾದ ಕರ್ತವ್ಯದಲ್ಲಿ— ಈ ಸಂದರ್ಭಗಳಲ್ಲಿ ಬಹು ತಡಮಾಡುವವನೇ ಪ್ರಶಸ್ತನಾಗುವನು.

ಬಂಧೂನಾಂ ಸುಹೃದಾಂ ಚೈವ ಭೃತ್ಯಾನಾಂ ಸ್ತ್ರೀಜನಸ್ಯ ಚ ।
ಅವ್ಯಕ್ತೇಷ್ವಪರಾಧೇಷು ಚಿರಕಾರೀ ಪ್ರಶಸ್ಯತೇ ॥ ೧೨೬ ॥
ಚಿರಂ ಧರ್ಮಾನ್ನಿಷೇವೇತ ಕುರ್ಯಾಚ್ಚಾನ್ವೇಷಣಂ ಚಿರಂ ।
ಚಿರಮನ್ವಾಸ್ಯ ವಿದುಷಶ್ಚಿರಮಿಷ್ಟಾನುಪಾಸ್ಯ ಚ ॥ ೧೨೭ ॥
ಚಿರಂ ವಿನೀಯ ಚಾತ್ಮಾನಂ ಚಿರಂ ಯಾತ್ಯನವಜ್ಞತಾಂ ।
ಬ್ರುವತಶ್ಚ ಪರಸ್ಯಾಪಿ ವಾಕ್ಯಂ ಧರ್ಮೋಪಸಂಹಿತಂ ॥ ೧೨೮ ॥
ಚಿರಂ ಪೃಚ್ಛೇಚ್ಛ ಶೃಣುಯಾಚ್ಚಿರಂ ನ ಪರಿಭೂಯತೇ ।
ಧರ್ಮೇ ಶತ್ರೌ ಶಸ್ತ್ರಹಸ್ತೇ ಪಾತ್ರೇ ಚ ನಿಕಟಸ್ಥಿತೇ ॥ ೧೨೯ ॥
ಭಯೇ ಚ ಸಾಧು ಪೂಜಾಯಾಂ ಚಿರಕಾರೀ ನ ಶಸ್ಯತೇ ।
ಏವಮುಕ್ತ್ವಾ ಪುತ್ರಭಾರ್ಯಾ ಸಹಿತಃ ಪ್ರಾಪ್ಯ ಚಾಶ್ರಮಂ ॥ ೧೩೦ ॥
ತತಶ್ಚಿರಮುಪಾಸ್ಯಾಥ ದಿವಂ ಯಾತಶ್ಚಿರಂ ಮುನಿಃ ।
ವಯಂ ತ್ವೇವಂ ಬ್ರುವಂತೋಽಪಿ ಮೋಹೇನೈವ ಪ್ರತಾರಿತಾಃ ॥ ೧೩೧ ॥

---

೧೨೬. ಬಂಧುಗಳು, ಸ್ನೇಹಿತರು, ಸೇವಕರು ಮತ್ತು ಸ್ತ್ರೀ ಜನರು—ಇವರ ಸಂಬಂಧವಾದ ಅವ್ಯಕ್ತವಾದ ಅಪರಾಧಗಳ ವಿಷಯದಲ್ಲಿ ಚಿರಕಾರಿಯೇ ಪ್ರಶಂಸನೀಯನು.

೧೨೭–೧೩೦. ಧರ್ಮಗಳನ್ನು ಚಿರಕಾಲ ಸೇವಿಸಬೇಕು. ಚಿರಕಾಲ ಹೀಗೆ ಸೇವಿಸಿದ ಧರ್ಮವನ್ನು ಚಿರಕಾಲವೇ ಅನ್ವೇಷಣ ಮಾಡಬೇಕು. ಚಿರಕಾಲ ವಿದ್ವಾಂಸರನ್ನು ಆಶ್ರಯಿಸಿ ಅವರ ಸಹವಾಸ ಮಾಡಿ ಚಿರಕಾಲ ಇಷ್ಟಗಳನ್ನು ಉಪಾಸನೆ ಮಾಡಿ, ಚಿರಕಾಲ ಆತ್ಮವನ್ನು ಅಂಕೆಗೊಳಪಡಿಸಿ ನಿಗ್ರಹಮಾಡಿ, ಚಿರಕಾಲದವರೆಗೂ ಅನವಜ್ಞತೆಯನ್ನೇ ಪಡೆಯುತ್ತಾನೆ (ಅಜ್ಞಾನಿಯೇ ಆಗುತ್ತಾನೆ). ಆದುದರಿಂದ ಪರರು ಯಾರಾದರೂ ಧರ್ಮ ವಿಷಯಗಳಿಂದ ಕೂಡಿದ ಮಾತುಗಳನ್ನು ಹೇಳುತ್ತಲಿದ್ದರೆ ಅವರನ್ನು ಚಿರಕಾಲವೂ ಪ್ರಶ್ನೆ ಮಾಡಬೇಕು; ಚಿರಕಾಲ ಅವರ ಮಾತನ್ನು ಕೇಳಬೇಕು. ಅಂಥವನು ಪರಿಭವವನ್ನು ಪಡೆಯುವುದಿಲ್ಲ. ಧರ್ಮದಲ್ಲಿ, ಶತ್ರುವಿನಲ್ಲಿ, ಕೈಯಲ್ಲಿ ಶಸ್ತ್ರ ಹಿಡಿದವನಲ್ಲಿ, ಸಮೀಪದಲ್ಲಿರುವ ಪಾತ್ರನ ವಿಷಯದಲ್ಲಿ, ಭಯದಲ್ಲಿ ಮತ್ತು ಸಾಧುಗಳ ಪೂಜೆಯಲ್ಲಿ— ಈ ಸಂದರ್ಭಗಳಲ್ಲಿ ಚಿರಕಾರಿಯು ಪ್ರಶಸ್ತನಾಗುವುದಿಲ್ಲವು.''

೧೩೧. ಹೀಗೆ ನುಡಿದು, ಪುತ್ರನನ್ನೂ ಭಾರ್ಯೆಯನ್ನೂ ಜೊತೆಗೊಂಡು ತನ್ನ ಆಶ್ರಮವನ್ನು ಸೇರಿ, ಚಿರಕಾಲ ಉಪಾಸನೆ ಮಾಡುತ್ತಿದ್ದು ಆ ಮುನಿಯು ಸ್ವರ್ಗವನ್ನು ಸೇರಿದನು. ನಾವಾದರೋ ಧರ್ಮವಿವೇಚನೆಯ ವಿಷಯದಲ್ಲಿ ಹೀಗೆ ಹೇಳುತ್ತಿರುವೆವಾದರೂ ಮೋಹದಿಂದ ಈ ರೀತಿ ವಂಚಿತರಾದೆವು.

ಕಲೌ ಚ ಭವತಾಂ ವಿಪ್ರಾ ಮಚ್ಛಾಪೋ ನಿಪತಿಷ್ಯತಿ ।
ಕೇಚಿತ್ಸದಾ ಭವಿಷ್ಯಂತಿ ವಿಪ್ರಾಃ ಸರ್ವಗುಣೈರ್ಯುತಾಃ ॥ ೧೩೨ ॥
ಪಾದಪ್ರಕ್ಷಾಲನಂ ಕೃತ್ವಾ ತತೋಽಹಂ ಧರ್ಮವರ್ಮಣಃ ।
ಸಮೀಪೇ ಸಾಕ್ಷಿಣೋ ದೇವಾನ್ ಕೃತ್ವಾ ಸಂಕಲ್ಪಮಾಚರಂ ॥ ೧೩೩ ॥
ಕಾಂಚನೈರ್ಗೋಽಪ್ರದಾನೈಶ್ಚ ಗೃಹದಾನೈರ್ಧನಾದಿಭಿಃ ।
ಭಾರ್ಯಾಭೂಷಣ ವಸ್ತ್ರೈಶ್ಚ ಕೃತಾರ್ಥಾ ಬ್ರಾಹ್ಮಣಾಃ ಕೃತಾಃ ॥ ೧೩೪ ॥
ತತಃ ಕರಂ ಸಮುದ್ಯಮ್ಯ ಪ್ರಾಹೇಂದ್ರೋ ದೇವಸಂಗಮೇ ।
ಹರಾಂಗರುದ್ಧವಾಮಾರ್ಧಾ ಯಾವದ್ದೇವೀ ಗಿರೇಃ ಸುತಾ ॥ ೧೩೫ ॥
ಗಣಾಧೀಶೋ ವಯಂ ಯಾವದ್ಯಾವತ್ತ್ರಿಭುವನಂ ತ್ವಿದಂ ।
ತಾವನ್ನಂದ್ಯಾದಿದಂ ಸ್ಥಾನಂ ನಾರದಸ್ಥಾಪಿತಂ ಸುರಾಃ ॥ ೧೩೬ ॥
ಬ್ರಹ್ಮಶಾಪೋ ರುದ್ರಶಾಪೋ ವಿಷ್ಣುಶಾಪಸ್ತಥೈವ ಚ ।
ದ್ವಿಜಶಾಪಸ್ತಥಾ ಭೂಯಾದಿದಂ ಸ್ಥಾನಂ ವಿಲುಂಪತಃ ॥ ೧೩೭ ॥

---

೧೩೨. ಎಲೈ ವಿಪ್ರರೇ! ನನ್ನ ಶಾಪವು ಕಲಿಯುಗದಲ್ಲಿ ನಿಮ್ಮ ಮೇಲೆ ಬೀಳುತ್ತದೆ. ಆದರೆ ಕೆಲವರು ವಿಪ್ರರು ಮಾತ್ರ ಸದಾ ಕಾಲವೂ ಸರ್ವಗುಣಗಳಿಂದಲೂ ಕೂಡಿದವರಾಗಿರುತ್ತಾರೆ.''

೧೩೩. ಬಳಿಕ ನಾನು ಬ್ರಾಹ್ಮಣರಿಗೆ ಪಾದಪ್ರಕ್ಷಾಳನೆಯನ್ನು ಮಾಡಿ ಧರ್ಮವರ್ಮನ ಸಮೀಪದಲ್ಲಿ ದೇವತೆಗಳನ್ನು ಸಾಕ್ಷಿಗಳನ್ನಾಗಿ ಮಾಡಿ ಸಂಕಲ್ಪವನ್ನಾಚರಿಸಿದೆನು.

೧೩೪. ತರುವಾಯ ಹೊನ್ನುಗಳಿಂದಲೂ, ಗೋದಾನಗಳಿಂದಲೂ, ಗೃಹದಾನಗಳಿಂದಲೂ, ಧನ ಮೊದಲಾದುವುಗಳಿಂದಲೂ, ಭಾರ್ಯೆ, ಭೂಷಣ ಮತ್ತು ವಸ್ತ್ರಗಳಿಂದಲೂ ಬ್ರಾಹ್ಮಣರು ಕೃತಾರ್ಥರಾಗಿಸಲ್ಪಟ್ಟರು.

೧೩೫–೧೩೬. ಬಳಿಕ ದೇವತೆಗಳು ನೆರೆದಿದ್ದ ಆ ಸಭೆಯಲ್ಲಿ ಇಂದ್ರನು ಕೈಯನ್ನು ಮೇಲೆತ್ತಿ ಹೀಗೆಂದನು: "ಹರನ ಅಂಗದಲ್ಲಿ ನೆಲಸಿದ ವಾಮಾರ್ಧ (ಎಡಭಾಗದ ದೇಹಾರ್ಧ)ವುಳ್ಳ ಗಿರಿಸುತೆಯಾದ ಆ ದೇವಿಯು ಎಲ್ಲಿಯವರೆಗಿರುವಳೋ, ಗಣಾಧೀಶನೂ ನಾವೂ ಎಲ್ಲಿಯವರೆಗಿರುವೆವೋ, ಈ ತ್ರಿಭುವನವು ಎಲ್ಲಿಯವರೆಗೆ ನೆಲಸಿರುವುದೋ, ಅಲ್ಲಿಯವರೆಗೂ ಎಲೈ ದೇವತೆಗಳೇ! ನಾರದನಿಂದ ಸ್ಥಾಪಿತವಾದ ಈ ಸ್ಥಾನವು ಆನಂದದಿಂದ ಮೆರೆಯುತ್ತಿರಲಿ!

೧೩೭. ಈ ಸ್ಥಾನವನ್ನು ಲೋಪಗೊಳಿಸುವವನಿಗೆ ಬ್ರಹ್ಮಶಾಪವೂ, ರುದ್ರಶಾಪವೂ, ವಿಷ್ಣುಶಾಪವೂ, ಅದೇ ರೀತಿ ಬ್ರಾಹ್ಮಣಶಾಪವೂ ಉಂಟಾಗಲಿ.''

ತತಸ್ತಥೇತಿ ತೈಃ ಸರ್ವೈರ್ಹರ್ಷ್ಯೈಸ್ತತ್ರ ತಥೋದಿತಂ ।
ಏವಂ ಮಯಾ ಸ್ಥಾಪಿತೇ ಸ್ಥಾನಕೇಽಸ್ಮಿನ್
ಸಂಸ್ಥಾಪಯಾಮಾಸ ಚ ಕಾಪಿಲಂ ಮುನಿಃ ।
ಸ್ಥಾತೇ ಉಭೇ ದೇವಕೃತೇ ಪ್ರಸನ್ನಾ
ಸ್ತತೋ ಯಯುರ್ದೇವತಾ ದೇವಸದ್ಮ ॥ ೧೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ನಾರದೀಯಸ್ಥಾನ
ಪ್ರತಿಷ್ಠಾ ವರ್ಣನಂ"ನಾಮ ಷಷ್ಠೋಽಧ್ಯಾಯಃ

---

೧೩೮. ಬಳಿಕ ಅವರೆಲ್ಲರೂ ಹರ್ಷಗೊಂಡವರಾಗಿ "ಹಾಗೆಯೇ ಆಗಲಿ" ಎಂದು ನುಡಿದರು. ಈ ರೀತಿಯಾಗಿ ನನ್ನಿಂದ ಸ್ಥಾಪಿತವಾದ ಈ ಸ್ಥಾನದಲ್ಲಿ ಕಪಿಲಮುನಿಯು ಕೂಡ ಕಾಪಿಲವೆಂಬ ಸ್ಥಾನವೊಂದನ್ನು ಸ್ಥಾಪನೆ ಮಾಡಿದನು. ಈ ಎರಡು ಸ್ಥಾನಗಳೂ ದೇವತೆಗಳಿಂದಲೇ ಸೃಷ್ಟಿಮಾಡಲ್ಪಟ್ಟಿರುವುವು. ಆ ಬಳಿಕ ದೇವತೆಗಳು ಪ್ರಸನ್ನರಾಗಿ ದೇವಲೋಕಕ್ಕೆ ಹೊರಟುಹೋದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾ ಖಂಡದಲ್ಲಿ
"ನಾರದೀಯ ಸ್ಥಾನಪ್ರತಿಷ್ಠಾ ವರ್ಣನ"ವೆಂಬ
ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಮೋಽಧ್ಯಾಯಃ

## ಮಹೀಪ್ರಾದುರ್ಭಾವಃ

ಅರ್ಜುನ ಉವಾಚ :—

ಮಹೀಸಾಗರಮಾಹಾತ್ಮ್ಯಮದ್ಭುತಂ ಕೀರ್ತಿತಂ ತ್ವಯಾ ।
ವಿಸ್ಮಯಃ ಪರಮೋ ಮಹ್ಯಂ ಪ್ರಹರ್ಷಶ್ಚೋಪಜಾಯತೇ ॥ ೧ ॥
ತದಹಂ ವಿಸ್ತರಾಚ್ಛ್ರೋತುಮಿದಮಿಚ್ಛಾಮಿ ನಾರದ ।
ಕಸ್ಯ ಯಜ್ಞೇ ಮಹೀ ಗ್ಲಾನಾ ವಹ್ನಿತಾಪಾಭಿತಾಪಿತಾ ॥ ೨ ॥

ನಾರದ ಉವಾಚ :—

ಮಹದಾಖ್ಯಾನಮಾಖ್ಯಾಸ್ಯೇ ಯಥಾ ಜಾತಾ ಮಹಾನದೀ ।
ಶೃಣ್ವನ್ನೇತಾಂ ಕಥಾಂ ಪುಣ್ಯಾಂ ಪುಣ್ಯಮಾಪ್ಸ್ಯಸಿ ಪಾಂಡವ ॥ ೩ ॥
ಪುರಾಭೂದ್ಭೂಪತಿರ್ಭೂಮಾವಿಂದ್ರದ್ಯುಮ್ನ ಇತಿ ಶ್ರುತಃ ।
ವದಾನ್ಯಃ ಸರ್ವಧರ್ಮಜ್ಞೋ ಮಾನ್ಯೋ ಮಾನಯಿತಾ ಪ್ರಭುಃ ॥ ೪ ॥

---

## ಕನ್ನಡದ ಅನುವಾದ

### ಮಹೀಪ್ರಾದುರ್ಭಾವವು

೧. ನಾರದನ ನುಡಿಗಳನ್ನು ಕೇಳಿ ಅರ್ಜುನನು ಇಂತೆಂದನು :— ಅದ್ಭುತವಾದ ಮಹೀಸಾಗರ ಮಹಾತ್ಮ್ಯೆಯು ನಿನ್ನಿಂದ ಹೇಳಲ್ಪಟ್ಟಿತು. ನನಗೆ ಪರಮ ವಿಸ್ಮಯವಾಯಿತು. ಅತ್ಯಂತ ಹರ್ಷವೂ ಉಂಟಾಗುತ್ತಿದೆ.

೨. ಆದುದರಿಂದ ಎಲೈ ನಾರದನೇ! ಇದನ್ನು ವಿಸ್ತಾರವಾಗಿ ಕೇಳಲು ಅಪೇಕ್ಷಿಸುತ್ತೇನೆ. ಯಾರ ಯಜ್ಞದಲ್ಲಿ ಭೂಮಿಯು ಬೆಂಕಿಯ ಕಾವಿನಿಂದ ಕಾದು ಗ್ಲಾನಿಯನ್ನು ಹೊಂದಿತು?

೩. ಅರ್ಜುನನ ಪ್ರಶ್ನೆಯನ್ನಾಲಿಸಿದ ನಾರದನು ಈ ರೀತಿ ಉತ್ತರ ಕೊಟ್ಟನು :—ಮಹೀನದಿಯು ಹೇಗೆ ಉತ್ಪತ್ತಿ ಹೊಂದಿತೆಂಬುದನ್ನು ಕುರಿತು ಮಹತ್ತಾದ ಕಥೆಯನ್ನು ಹೇಳುವೆನು. ಪುಣ್ಯಕರವಾದ ಈ ಕಥೆಯನ್ನು ಕೇಳುವವನಾಗು. ಎಲೈ ಪಾಂಡವನೇ! ಇದರಿಂದ ನೀನು ಪುಣ್ಯವನ್ನು ಪಡೆಯುತ್ತೀಯೆ.

೪. ಪೂರ್ವದಲ್ಲಿ ಭೂಮಿಯಲ್ಲಿ ಇಂದ್ರದ್ಯುಮ್ನನೆಂದು ಹೆಸರುಗೊಂಡ ಒಬ್ಬಾನೊಬ್ಬ ದೊರೆಯಿದ್ದನು. ಆ ಪ್ರಭುವು ಉದಾರಿಯು, ಸರ್ವಧರ್ಮಗಳನ್ನೂ ತಿಳಿದವನು, ಮಾನ್ಯನು, ಇತರರಿಗೆ ತಕ್ಕ ಮನ್ನಣೆ ತೋರಿಸುವವನು.

ಉಚಿತಜ್ಞೋ ವಿವೇಕಸ್ಯ ನಿವಾಸೋ ಗುಣಸಾಗರಃ ।
ನ ತದಸ್ತಿ ಧರಾಪೃಷ್ಠೇ ನಗರಂ ಗ್ರಾಮಪತ್ತನಂ ॥ ೫ ॥
ತದೀಯಪೂರ್ತಧರ್ಮಸ್ಯ ಚಿಹ್ನೇನ ನ ಯದಂಕಿತಂ ।
ಕನ್ಯಾದಾನಾನಿ ಬಹುಧಾ ಬ್ರಾಹ್ಮೇನ ವಿಧಿನಾ ವ್ಯಧಾತ್ ॥ ೬ ॥
ಭೂಪಾಲೋಽಸೌ ದದೌ ದಾನಮಾಸಹಸ್ರಾದ್ಧನಾರ್ಥಿನಾಂ ।.
ದಶಮೀದಿವಸೇ ರಾತ್ರೌ ಗಜಪೃಷ್ಠೇನ ದುಂದುಭಿಃ ॥ ೭ ॥
ತಾಡ್ಯತೇ ತತ್ಪುರೇ ಪ್ರಾತಃ ಕಾರ್ಯಮೇಕಾದಶೀವ್ರತಂ ।
ಯಜ್ವನಾ ತೇನ ಭೂಪೇನ ವಿಚ್ಛಿನಂ ಸೋಮಪಾಯಿನಾಂ ॥ ೮ ॥
ಸ್ವರಣ್ಯೈರಾಸ್ತೃತಾ ದರ್ಭೈರ್ದ್ವ್ಯಂಗುಲೋತ್ಸಾರಿತಾ ಮಹೀ ।
ಗಂಗಾಯಾಂ ಸಿಕತಾಧಾರಾ ವರ್ಷತೋ ದಿವಿ ತಾರಕಾಃ ॥ ೯ ॥
ಶಕ್ಯಾ ಗಣಯಿತುಂ ಪ್ರಾಜ್ಞೈಸ್ತದೀಯಂ ಸುಕೃತಂ ನತು ।
ಈದೃಶೈಃ ಸುಕೃತೈರೇಷ ತೇನೈವ ವಪುಷಾ ನೃಪಃ ॥ ೧೦ ॥
ಧಾಮ ಪ್ರಜಾಪತೇಃ ಪ್ರಾಪ್ತೋ ವಿಮಾನೇನ ಕುರೂದ್ವಹ ।
ಬುಭುಜೇ ಸ ತದಾ ಭೋಗಾನ್ ದುರ್ಲಭಾನಮರೈರಪಿ ॥ ೧೧ ॥

---

೪–೫. ಉಚಿತಜ್ಞನಾದವನು, ವಿವೇಕಕ್ಕೆ ನಿವಾಸವಾಸವಾಗಿದ್ದವನು, ಗುಣಸಾಗರನು. ಭೂಮಿಯಮೇಲೆ ನಗರವಾಗಲಿ, ಗ್ರಾಮವಾಗಲಿ, ಪಟ್ಟಣವಾಗಲಿ ಆ ಇಂದ್ರದ್ಯುಮ್ನನ ಯಜ್ಞಧರ್ಮದ ಚಿಹ್ನೆಯಿಂದ ಅಂಕಿತವಾಗದೆ ಇರುವಂಥದು ಒಂದೂ ಇರಲಿಲ್ಲ. ಆತನು ಬ್ರಾಹ್ಮವಿಧಿಯಿಂದ ಬಹಳವಾಗಿ ಕನ್ಯಾದಾನಗಳನ್ನು ಮಾಡಿದನು.

೭–೧೧. ಆ ಭೂಪಾಲನು ಧನಾರ್ಥಿಗಳಿಗೆ ಸಾವಿರಗಟ್ಟಳೆ ದಾನಮಾಡುತ್ತಿದ್ದನು. ದಶಮಿಯ ದಿನದ ರಾತ್ರಿಯಲ್ಲಿ ಆನೆಯ ಮೇಲೆ ನಗಾರಿಯನ್ನಿಟ್ಟು ಬಾರಿಸುತ್ತ, ಆತನ ಪಟ್ಟಣದಲ್ಲಿ 'ಬೆಳಿಗ್ಗೆ ಏಕಾದಶೀ ವ್ರತ'ವೆಂದು ಸಾರಲಾಗುತ್ತಿದ್ದಿತು. ಯಜ್ಞದೀಕ್ಷಿತನಾದ ಆ ಭೂಪನಿಂದ ಸೋಮಯಾಜಿಗಳಿಗಾಗಿ ಕುಯ್ದುತಂದ ದರ್ಭೆಗಳಿಂದ ಹರಡಲ್ಪಟ್ಟುದಾಗಿ ಭೂಮಿಯು ಎರಡಂಗುಲ ಎತ್ತರವಾಯಿತು. ಗಂಗೆಯಲ್ಲಿರುವ ಮರಳುಕಣಗಳನ್ನೂ, ಮಳೆಯ ಧಾರೆಗಳನ್ನೂ ಆಕಾಶದಲ್ಲಿನ ನಕ್ಷತ್ರಗಳನ್ನೂ ಪ್ರಾಜ್ಞರಾದವರಿಂದ ಎಣಿಸಲು ಶಕ್ಯವಾಗಬಹುದು. ಆದರೆ ಆತನ ಸುಕೃತವನ್ನೆಣಿಸಲು ಶಕ್ಯವಿಲ್ಲ. ಈ ರೀತಿಯಾದ ಸುಕೃತಗಳಿಂದ ಆ ದೊರೆಯು ಅದೇ ಶರೀರದಿಂದ ಕೂಡಿ ವಿಮಾನವನ್ನೇರಿ, ಎಲೈ ಕುರುಕುಲ ಸಂಭೂತನೇ! ಪ್ರಜಾಪತಿಯ (ಬ್ರಹ್ಮನ) ಲೋಕವನ್ನು ಹೋಗಿ ಸೇರಿದನು. ಅವನು ಅಮರರಿಗೂ ದುರ್ಲಭಗಳಾದ ಭೋಗಗಳನ್ನೂ ಅನುಭವಿಸಿದನು.

ಅಥ ಕಲ್ಪ ಶತಸ್ಯಾಂತೇ ವ್ಯತೀತೇ ತಂ ಮಹೀಪತಿಂ ।
ಪ್ರಾಹ ಪ್ರಜಾಪತಿಃ ಸೇವಾವಸರಾಯಾತಮಾತ್ಮನಃ ॥ ೧೨ ॥

ಬ್ರಹ್ಮೋವಾಚ :—

ಇಂದ್ರದ್ಯುಮ್ನ ದ್ರುತಂ ಗಚ್ಛ ಧರಾಪೃಷ್ಠಂ ನೃಪೋತ್ತಮ ।
ನ ಸ್ಥಾತವ್ಯಂ ಮದೀಯೇಽದ್ಯ ಲೋಕೇ ಕ್ಷಣಮಪಿ ತ್ವಯಾ ॥ ೧೩ ॥

ಇಂದ್ರದ್ಯುಮ್ನ ಉವಾಚ :—

ಕಸ್ಮಾದ್ಬ್ರಹ್ಮನ್ನಿತೋ ಭೂಮೌ ಮಾಂ ಪ್ರೇಷಯಸಿ ಸಂಪ್ರತಿ ।
ಸತಿ ಪುಣ್ಯೇ ಮದೀಯೇ ತು ಬಹುಲೇ ವದ ಕಾರಣಂ ॥ ೧೪ ॥

ಬ್ರಹ್ಮೋವಾಚ :—

ನಪುಣ್ಯಂ ಕೇವಲಂ ರಾಜನ್ ಗುಪ್ತಂ ಸ್ವರ್ಗಸ್ಯ ಸಾಧಕಂ ।
ವಿನಾ ನಿಷ್ಕಲ್ಮಷಾಂ ಕೀರ್ತಿಂ ತ್ರಿಲೋಕೀ ಸ್ಥಲವಿಸ್ತೃತಾಂ ॥ ೧೫ ॥
ತವಕೀರ್ತಿಸಮುಚ್ಛೇದಃ ಸಾಂಪ್ರತಂ ವಸುಧಾತಲೇ ।
ಸಂಜಾತಶ್ಚಿರಕಾಲೇನ ಗತ್ವಾ ತಾಂ ಕುರು ನೂತನಾಂ ॥ ೧೬ ॥
ಯದಿ ವಾಂಛಾ ಮಹೀಪಾಲ ಮಮ ಧಾಮನಿ ಸಂಸ್ಥಿತೌ ॥ ೧೭ ॥

---

೧೨. ಬಳಿಕ ನೂರು ಕಲ್ಪಗಳು ಕಳೆಯಲಾಗಿ ಆ ಕೊನೆಗಾಲದಲ್ಲಿ, ಪ್ರಜಾಪತಿಯು ತನ್ನ ಸೇವೆಗಾಗಿ ಬಂದಿದ್ದ ಆ ಭೂಪತಿಯನ್ನು ಕುರಿತು ಹೀಗೆ ಹೇಳಿದನು.

೧೩. ಬ್ರಹ್ಮನಿಂತೆಂದನು :—"ಎಲೈ ಇಂದ್ರದ್ಯುಮ್ನನೇ! ಬೇಗ ನೀನು ಭೂಲೋಕಕ್ಕೆ ಹೋಗು. ಎಲೈ ನೃಪೋತ್ತಮನೇ! ಈಗ ನೀನು ನನ್ನ ಲೋಕದಲ್ಲಿ ಒಂದು ಕ್ಷಣವೂ ನಿಲ್ಲತಕ್ಕುದಲ್ಲ."

೧೪. ಇದನ್ನು ಕೇಳಿದ ಇಂದ್ರದ್ಯುಮ್ನನು, ಎಲೈ ಬ್ರಹ್ಮನೇ! ಈಗ ನನ್ನನ್ನು ಭೂಮಿಗೆ ಅದೇಕೆ ಕಳುಹಿಸುವೆ? ನನ್ನ ಪುಣ್ಯವು ಬಹಳವಾಗಿ ಇನ್ನೂ ಉಳಿದಿರುವಾಗ ಹೀಗೆ ಕಳುಹಿಸುವುದಕ್ಕೆ ಕಾರಣವೇನು? ಹೇಳಬೇಕು" ಎಂದು ಕೇಳಿದನು.

೧೫–೧೭. ಅದಕ್ಕೆ ಬ್ರಹ್ಮನಿಂತೆಂದನು :—"ಅಯ್ಯಾ ರಾಜನೇ! ಸ್ವರ್ಗಕ್ಕೆ ಸಾಧಕವಾದುದು ಕೇವಲ ಗುಪ್ತವಾದ ಪುಣ್ಯವು ಮಾತ್ರವೇ ಅಲ್ಲ. ಮೂರು ಲೋಕಗಳಲ್ಲೆಲ್ಲ ವಿಸ್ತಾರವಾಗಿ ಹರಡಿರುವ ನಿಷ್ಕಲ್ಮಷವಾದ ಕೀರ್ತಿಯನ್ನುಳಿದು ಆ ಪುಣ್ಯವು ಸ್ವರ್ಗಕ್ಕೆ ಸಾಧಕವಾಗುವುದಿಲ್ಲ. ಈಗ ಬಹುಕಾಲದಿಂದಲೂ ಭೂತಲದಲ್ಲಿ ನಿನ್ನ ಕೀರ್ತಿಗೆ ವಿನಾಶಉಂಟಾಗಿದೆ (ನಿನ್ನ ಕೀರ್ತಿಯು ಮರೆಯಾಗಿದೆ). ನೀನು ಹೋಗಿ ಆ ಕೀರ್ತಿಯನ್ನು ನೂತನಪಡಿಸು. ನನ್ನ ಲೋಕದಲ್ಲಿ ಇರುವ ಇಚ್ಛೆಯೇನಾದರೂ ನಿನಗಿರುವುದಾದರೆ ಹೀಗೆ ಮಾಡು."

ಇಂದ್ರದ್ಯುಮ್ನ ಉವಾಚ:—

ಮದೀಯಂ ಸುಕೃತಂ ಬ್ರಹ್ಮನ್ ಕಥಂ ಭೂಮೌ ಭವೇದಿತಿ ।
ಕಿಂ ಕರ್ತವ್ಯಂ ಮಯಾ ನೈತತ್ ಮಮ ಚೇತಸಿ ತಿಷ್ಠತಿ ॥ ೧೮ ॥

ಬ್ರಹ್ಮೋವಾಚ:—

ಬಲವಾನೇಷ ಭೂಪಾಲ ಕಾಲಃ ಕಲಯತಿ ಸ್ವಯಂ ॥ ೧೯ ॥
ಬ್ರಹ್ಮಾಂಡಾನ್ಯಪಿ ಮಾಂ ಚೈವ ಗಣನಾ ಕಾ ಭವಾದೃಶಾಂ ।
ತದೇತದೇವ ಮನ್ಯೇಽಹಂ ತವ ಭೂಪಾಲ ಸಾಂಪ್ರತಂ ॥ ೨೦ ॥
ಯತ್ಕೀರ್ತಿಮಾತ್ಮನೋ ವ್ಯಕ್ತಂ ನೀತ್ವಾಭ್ಯೇಹಿ ಪುನರ್ದಿವಂ ।
ಶುಶ್ರುವಾನಿತಿ ವಾಚಂ ಸ ಬ್ರಹ್ಮಣಃ ಪೃಥಿವೀಪತಿಃ ॥ ೨೧ ॥
ಪಶ್ಯತಿಸ್ಮ ತಥಾತ್ಮಾನಂ ಮಹೀತಲಮುಪಾಗತಂ ।
ಕಾಂಪಿಲ್ಯನಗರೇ ಭೂಯಃ ಪಪ್ರಚ್ಛಾತ್ಮಾನಮಾತ್ಮನಾ ॥ ೨೨ ॥
ನಗರಂ ಸ ತದಾ ದೇಶಮಪ್ರಾಕ್ಷೀದತಿ ವಿಸ್ಮಿತಃ ।

ಜನಾ ಊಚುಃ:—

ನ ಜಾನೀಮೋ ವಯಂ ಭೂಪಮಿಂದ್ರದ್ಯುಮ್ನಂ ನ ತತ್ಪುರಂ ॥ ೨೩ ॥

---

೧೮. ಬ್ರಹ್ಮನು ನುಡಿದುದನ್ನು ಕೇಳಿ ಇಂದ್ರದ್ಯುಮ್ನನು, "ಎಲೈ ಬ್ರಹ್ಮನೇ! ನನ್ನ ಪುಣ್ಯವು ಭೂಮಿಯಲ್ಲಿ ಹೇಗೆ ನೆಲೆಸಿರುವುದು? ಅದಕ್ಕೆ ನಾನೇನು ಮಾಡಬೇಕು? ಇದು ನನ್ನ ಮನಸ್ಸಿಗೆ ಹೊಳೆಯುವುದಿಲ್ಲವು" ಎಂದು ಮರುನುಡಿ ನುಡಿದನು.

೧೯–೨೦. ಬ್ರಹ್ಮನಿಂತೆಂದನು:—"ಎಲೈ ಭೂಪನೇ! ಕಾಲವೆಂಬುದು ಬಲವಂತವಾದುದು, ಅದು ತಾನೇ ಬ್ರಹ್ಮಾಂಡಗಳನ್ನೂ, ಏಕೆ? ನನ್ನನ್ನು ಕೂಡ, ಆಡಿಸುತ್ತಿರುವುದು. ಅಂಥದರಲ್ಲಿ ನಿನ್ನಂಥವರ ಲೆಕ್ಕವೇನು? ಆದುದರಿಂದ ಎಲೈ ಭೂಪಾಲನೇ! ಸದ್ಯದಲ್ಲಿ ನಿನಗೆ ಇದೇ ಸರಿಯೆಂದು ಭಾವಿಸುತ್ತೇನೆ.

೨೧–೨೨. ನಿನ್ನ ಕೀರ್ತಿಯನ್ನು ಹೊರಹೊಮ್ಮಿಸಿ ವ್ಯಕ್ತವಾಗುವಂತೆ ಮಾಡಿ ಮತ್ತೆ ಸ್ವರ್ಗಕ್ಕೆ ಹಿಂದಿರುಗಿ ಬಾ." ಈ ರೀತಿಯಾಗಿ ನುಡಿದ ಬ್ರಹ್ಮನ ಮಾತನ್ನು ಕೇಳಿ ಆ ಭೂಪತಿಯು ಭೂತಲಕ್ಕೆ ಹೋಗಿ ಸೇರಿದನು. ಆತನು ಕಾಂಪಿಲ್ಯನಗರದಲ್ಲಿ ತನ್ನ ಹೆಸರನ್ನು ಹೇಳುತ್ತ ಅನೇಕಬಾರಿ ಪ್ರಶ್ನೆಮಾಡತೊಡಗಿದನು.

೨೩. ಅವನು ಅತಿ ವಿಸ್ಮಿತನಾಗಿ "ಇಂದ್ರದ್ಯುಮ್ನನ ನಗರವನ್ನೂ, ದೇಶವನ್ನೂ ನೋಡಿದ್ದೀರಾ" ಎಂದು ಕೇಳತೊಡಗಿದನು. ಅದಕ್ಕೆ ಜನರು ಇಂತೆಂದು ಮರುನುಡಿದರು:—"ನಾವು ಇಂದ್ರದ್ಯುಮ್ನ ರಾಜನನ್ನೂ ಅರಿಯೆವು, ಅವನ ಪಟ್ಟಣವನ್ನೂ ತಿಳಿಯೆವು.

ಯತ್ತ್ವಂ ಪೃಚ್ಛಸಿ ಭೋ ಭದ್ರ ಕಂಚಿತ್ಪೃಚ್ಛ ಚಿರಾಯುಷಂ ।
ಇಂದ್ರದ್ಯುಮ್ನ ಉವಾಚ :—
ಕಃ ಸಂಪ್ರತಿ ಧರಾಪೃಷ್ಠೇ ಚಿರಾಯುಃ ಪ್ರಥಿತೋ ಜನಾಃ ॥ ೨೪ ॥
ಪೃಥಿವೀಜಯರಾಜ್ಯೇಸ್ಮಿನ್ಯತ್ರ ಪ್ರಬ್ರೂತ ಮಾಂ ಚಿರಂ ।
ಜನಾ ಊಚುಃ :—
ಶ್ರೂಯತೇ ನೈಮಿಷಾರಣ್ಯೇ ಸಪ್ತಕಲ್ಪಸ್ಮರೋ ಮುನಿಃ ॥ ೨೫ ॥
ಮಾರ್ಕಂಡೇಯ ಇತಿ ಖ್ಯಾತಸ್ತಂ ಗತ್ವಾ ಪೃಚ್ಛ ಸಂಶಯಂ ।
ತಥೋಪದಿಷ್ಟಸ್ತೈರ್ಗತ್ವಾ ತತ್ರ ತಂ ಮುನಿಪುಂಗವಂ ॥ ೨೬ ॥
ನಿಶಮ್ಯ ಪ್ರಣಿಪತ್ಯಾಹ ನೃಪಃ ಸ್ವಹೃದಯಸ್ಥಿತಂ ।
ಇಂದ್ರದ್ಯುಮ್ನ ಉವಾಚ :—
ಚಿರಾಯುರ್ಭಗವಾನ್ ಭೂಮೌ ವಿಶ್ರುತಃ ಸಾಪ್ರತಂ ತತಃ ॥ ೨೭ ॥
ಪೃಚ್ಛಾಮ್ಯಹಂ ಭವಾನ್ವೇತ್ತಿ ಇಂದ್ರದ್ಯುಮ್ನಂ ನೃಪಂ ನವಾ ॥ ೨೮ ॥
ಶ್ರೀ ಮಾರ್ಕಂಡೇಯ ಉವಾಚ :—
ಸಪ್ತಕಲ್ಪಾಂತರೇ ನಾಭೂತ್ಕೋಪೀಂದ್ರದ್ಯುಮ್ನಸಂಜ್ಞಿತಃ ।
ಭೂಪಾಲ ಕಿಮಹಂ ವಚ್ಮಿ ತಾವನ್ಯತ್ಪೃಚ್ಛ ಸಂಶಯಂ ॥ ೨೯ ॥

---

೨೪–೨೫. ಅಯ್ಯಾ ಭದ್ರನೇ! ನೀನು ನಮ್ಮನ್ನು ಕೇಳುತ್ತಿರುವ ವಿಷಯವನ್ನು ಚಿರಾಯುವಾದ ಯಾವನನ್ನಾದರೂ ಕೇಳು.'' ಅದಕ್ಕೆ ಇಂದ್ರದ್ಯುಮ್ನನು ಇಂತೆಂದನು :—'' ಎಲೈ ಜನರೇ! ಈಗ ಭೂಮಿಯ ಮೇಲೆ ಚಿರಾಯುವೆಂದು ಹೆಸರುಗೊಂಡಿರುವವನು ಯಾರು? ಪೃಥಿವೀಜಯರಾಜ್ಯದಲ್ಲಿ ಆತನು ಎಲ್ಲಿದ್ದಾನೆ? ಹೇಳಿರಿ. ತಡಮಾಡಬೇಡಿರಿ.'' ಜನರಿಂತೆಂದರು :—'' ನೈಮಿಷಾರಣ್ಯದಲ್ಲಿ ಏಳು ಕಲ್ಪಗಳ ನೆನವುಳ್ಳ ಮುನಿಯಿದ್ದಾನೆಂದು ಕೇಳಿದ್ದೇವೆ.

೨೬–೨೮. ಆತನು ಮಾರ್ಕಂಡೇಯನೆಂದು ಪ್ರಸಿದ್ಧನಾಗಿದ್ದಾನೆ. ಅವನ ಬಳಿಗೆ ಹೋಗಿ ನಿನ್ನ ಸಂಶಯವನ್ನು ಕುರಿತು ಪ್ರಶ್ನೆಮಾಡು.'' ಅವರಿಂದ ಹಾಗೆ ಉಪದೇಶಿಸಲ್ಪಟ್ಟವನಾಗಿ ಅಲ್ಲಿಗೆ ಹೋಗಿ ಆ ಮುನಿಪುಂಗವನ ಬಳಿಸಾರಿ, ಆತನನ್ನು ವಂದಿಸಿ ಆ ರಾಜನು ತನ್ನ ಮನಸ್ಸಿನಲ್ಲಿದ್ದುದನ್ನು ಹೇಳಿದನು. ಇಂದ್ರದ್ಯುಮ್ನನಿಂತೆಂದನು :—'' ಭಗವನ್! ಈಗ ಭೂಮಂಡಲದಲ್ಲಿ ನೀವು ಚಿರಾಯುವೆಂದು ಪ್ರಸಿದ್ಧರಾಗಿದ್ದೀರಿ. ಆದುದರಿಂದ ನಿಮ್ಮನ್ನು ಪ್ರಶ್ನೆಮಾಡುತ್ತೇನೆ. ನೀವು ಇಂದ್ರದ್ಯುಮ್ನ ರಾಜನನ್ನು ಬಲ್ಲಿರೋ, ಇಲ್ಲವೋ ತಿಳಿಸಿರಿ.''

೨೯. ಶ್ರೀಮಾರ್ಕಂಡೇಯನಿಂತೆಂದನು:—'' ಏಳು ಕಲ್ಪಗಳ ಕಾಲದಲ್ಲಿ ಇಂದ್ರದ್ಯುಮ್ನನೆಂಬ ಹೆಸರಿನ ಯಾವ ರಾಜನೂ ಹುಟ್ಟಲಿಲ್ಲ. ಎಲೈ ರಾಜನೇ! ನಾನೇನು ಹೇಳಲಿ! ನಿನಗೆ ಬೇರೆ ಯಾವುದಾದರೂ ಸಂಶಯವಿದ್ದರೆ ಕೇಳು.''

ಸ ನಿರಾಶಸ್ತದಾಕರ್ಣ್ಯ ವಚೋ ಭೂಪೋಗ್ನಿಸಾಧನೇ ।
ಸಮುದ್ಯೋಗಂ ತದಾ ಚಕ್ರೇ ತಂ ದೃಷ್ಟ್ವಾಹಂ ತದಾಮುನಿಃ ॥ ೩೦ ॥

ಮಾರ್ಕಂಡೇಯ ಉವಾಚ :—

ಮಾ ಸಾಹಸಮಿದಂ ಕಾರ್ಷೀರ್ಭದ್ರ ವಾಚಂ ಶೃಣುಷ್ವ ಮೇ ।
ಏತಿ ಜೀವಂತಮಾನಂದೋ ನರಂ ವರ್ಷ ಶತಾದಪಿ ॥ ೩೧ ॥
ತತ್ಕರೋಮಿ ಪ್ರತೀಕಾರಂ ತವ ದುಃಖೋಪಶಾಂತಯೇ ।
ಶೃಣು ಭದ್ರ ಮಮಾಸ್ತೀಹ ಬಕೋ ಮಿತ್ರಂ ಚಿರಂತನಃ ॥ ೩೨ ॥
ನಾಡೀಜಂಘ ಇತಿ ಖ್ಯಾತಃ ಸತ್ವಾ ಜ್ಞಾಸ್ಯತ್ಯಸಂಶಯಂ ।
ತಸ್ಮಾದೇಹಿ ದ್ರುತಂ ಯಾವದಾವಾಂ ತತ್ರ ವ್ರಜಾಮಹೇ ॥ ೩೩ ॥
ಪರೋಪಕಾರೈಕಫಲಂ ಜೀವಿತಂ ಹಿ ಮಹಾತ್ಮನಾಂ ।
ಯದಿ ಜ್ಞಾಸ್ಯತ್ಯಸಂದಿಗ್ಧಂ ಇಂದ್ರದ್ಯುಮ್ನಂ ಸ ವಕ್ಷ್ಯತಿ ॥ ೩೪ ॥
ತೌ ಪ್ರಸ್ಥಿತಾವಿತಿ ತದಾ ವಿಪ್ರೇಂದ್ರ ನೃಪಪುಂಗವೌ ।
ಹಿಮಾಚಲಂ ಪ್ರತಿ ಪ್ರೀತೌ ನಾಡೀಜಂಘಾಲಯಂ ಪ್ರತಿ ॥ ೩೫ ॥

---

೩೦. ಆ ಮಾತನ್ನು ಕೇಳಿ ಆ ರಾಜನು ನಿರಾಶನಾಗಿ ಬೆಂಕಿಯನ್ನು ಹೊತ್ತಿಸಲು ಪ್ರಯತ್ನ ಮಾಡತೊಡಗಿದನು. ಅದನ್ನು ಕಂಡು ಆಗಲಾ ಮುನಿಯು ಹೇಳಿದನು.

೩೧. ಮಾರ್ಕಂಡೇಯನಿಂತೆಂದನು :—“ ಎಲೈ ಭದ್ರನೇ ! ಈ ಸಾಹಸ ಕಾರ್ಯವನ್ನು ಮಾಡಬೇಡ. ನನ್ನ ಮಾತು ಕೇಳು. ಮನುಷ್ಯನು ಬದುಕಿದ್ದರೆ ನೂರು ವರ್ಷಗಳ ಮೇಲಾದರೂ ಆನಂದವು ಬರುತ್ತದೆ.

೩೨. ಆದುದರಿಂದ ನಿನ್ನ ದುಃಖವನ್ನು ಸಮಾಧಾನಗೊಳಿಸಲು ತಕ್ಕ ಪ್ರತೀಕಾರವನ್ನು ಮಾಡುತ್ತೇನೆ. ಎಲೈ ಭದ್ರನೇ ! ಕೇಳು. ಬಹು ಚಿರಂತನನಾದ (ಬಹಳ ಹಿಂದಿನಕಾಲದವನಾದ) ಒಬ್ಬ ಮಿತ್ರನು ನನಗಿದ್ದಾನೆ.

೩೩. ನಾಡೀಜಂಘನೆಂದು ಪ್ರಖ್ಯಾತನಾದ ಬಕನೇ ಆ ಮಿತ್ರನು. ಆ ನಾಡೀಜಂಘನು ನೀನು ಕೇಳುವ ಇಂದ್ರದ್ಯುಮ್ನನನ್ನು ತಿಳಿದಿರುವನೆಂಬುದರಲ್ಲಿ ಸಂಶಯವಿಲ್ಲವು. ಆದುದರಿಂದ ಬಾ ; ನಾವಿಬ್ಬರೂ ಬೇಗ ಅಲ್ಲಿಗೆ ಹೋಗೋಣ.

೩೪. ಪರೋಪಕಾರವೊಂದೇ ತಮ್ಮ ಬಾಳಿನ ಫಲವೆಂದು ಮಹಾತ್ಮರು ಭಾವಿಸುತ್ತಾರೆ. ಇಂದ್ರದ್ಯುಮ್ನನನ್ನು ಸ್ಪಷ್ಟವಾಗಿ ತಿಳಿದ ಪಕ್ಷದಲ್ಲಿ ಆ ಬಕನು ಹೇಳಿಯೇ ಹೇಳುತ್ತಾನೆ.

೩೫. ಹೀಗೆ ಆಲೋಚಿಸಿ, ಆಗಲಾ ಮುನಿಪುಂಗವನೂ, ನೃಪಪುಂಗವನೂ ಪ್ರೀತರಾಗಿ ಹಿಮಾಚಲದಲ್ಲಿ ನಾಡೀಜಂಘನ ವಾಸಸ್ಥಾನವನ್ನು ಕುರಿತು ಪ್ರಯಾಣ ಮಾಡಿದರು.

ಬಕೋಽಥ ಮಿತ್ರಂ ಸ್ವಂ ವೀಕ್ಷ್ಯ ಚಿರಕಾಲಾದುಪಾಗತಂ ।
ಮಾರ್ಕಂಡೇಯಂ ಯಯೌ ಪ್ರೀತ್ಯೋತ್ಕಂಠಿತಃ ಸಮ್ಮುಖಂ ದ್ವಿಜೈಃ ॥ ೩೬ ॥
ಕೃತಸಂವಿದಭೂತ್ಪೂರ್ವಂ ಕುಶಲಸ್ವಾಗತಾದಿನಾ ।
ಪಪ್ರಚ್ಛಾನಂತರಂ ಕಾರ್ಯಂ ಪದಾಗಮನಕಾರಣಂ ॥ ೩೭ ॥
ಮಾರ್ಕಂಡೇಯೋಽಥ ತಂ ಪ್ರಾಹ ಬಕಂ ಪ್ರಸ್ತುತಮೀಪ್ಸಿತಂ ।
ಇಂದ್ರದ್ಯುಮ್ನಂ ಭವಾನ್ ವೇತ್ತಿ ಭೂಪಾಲಂ ಪೃಥಿವೀತಲೇ ॥ ೩೮ ॥
ಏತಸ್ಯ ಮಮ ಮಿತ್ರಸ್ಯ ತೇನ ಜ್ಞಾತೇನ ಕಾರಣಂ ।
ನೋಚೇದಯಂ ತ್ಯಜತಿ ಪ್ರಾಣಾನ್ ಪುರಾ ವಹ್ನಿಪ್ರವೇಶನಾತ್ ॥ ೩೯ ॥
ಏತಸ್ಯ ಪ್ರಾಣರಕ್ಷಾರ್ಥಂ ಬ್ರೂಹಿ ಜಾನಾಸಿ ಚೇನ್ನೃಪಂ ॥ ೪೦ ॥

ನಾಡೀಜಂಘ ಉವಾಚ :—

ಚತುರ್ದಶ ಸ್ಮರಾಮ್ಯಸ್ಮಿ ಕಲ್ಪಾನ್ ವಿಪ್ರೇಂದ್ರ ಸಾಂಪ್ರತಂ ।
ಆಸ್ತಾಂ ತದ್ದರ್ಶನಂ ವಾರ್ತಾಮಪಿ ವಾ ನ ಸ್ಮರಾಮ್ಯಹಂ ॥ ೪೧ ॥

---

೩೬. ಆಗ ಆ ಬಕನು ಬಹುಕಾಲ ಕಳೆದ ಮೇಲೆ ಬಂದ ತನ್ನ ಮಿತ್ರನಾದ ಮಾರ್ಕಂಡೇಯನನ್ನು ಕಂಡು, ಪ್ರೀತಿಯಿಂದ ಉತ್ಕಂಠಿತನಾಗಿ ದ್ವಿಜರೊಡನೆ ಕೂಡಿ ಆತನನ್ನು ಎದುರುಗೊಂಡನು.

೩೭. ಮೊದಲು ಆತನಿಗೆ ಸ್ವಾಗತವನ್ನು ಕೋರಿ ಕುಶಲಪ್ರಶ್ನೆ ಮುಂತಾದುದರಿಂದ ಉಪಚರಿಸಿದನು. ಬಳಿಕ, 'ನೀನು ಬಂದುದಕ್ಕೆ ಕಾರಣವೇನು? ಹೇಳು' ಎಂದು ಪ್ರಶ್ನೆಮಾಡಿದನು.

೩೮. ಆ ಬಳಿಕ ಮಾರ್ಕಂಡೇಯನು ಆ ಬಕನಿಗೆ ಆಗಿನ ತನ್ನ ಇಷ್ಟಾರ್ಥವನ್ನು ತಿಳಿಸಿದನು. "ಭೂಮಂಡಲದಲ್ಲಿದ್ದ ಇಂದ್ರದ್ಯುಮ್ನರಾಜನನ್ನು ನೀನು ಬಲ್ಲವನಾಗಿರಬೇಕು.

೩೯. ಈ ನನ್ನ ಮಿತ್ರನು ಅವನನ್ನು ತಿಳಿದುಕೊಳ್ಳಬೇಕಾಗಿದೆ. ಅದರ ಕಾರಣವು ಅವನಿಗೆ ಗೊತ್ತು. ನೀನು ಇಂದ್ರದ್ಯುಮ್ನನನ್ನು ತಿಳಿದಿಲ್ಲವಾದರೆ ಇವನು ಪ್ರಾಣಗಳನ್ನು ತ್ಯಾಗಮಾಡುತ್ತಾನೆ; ಹಿಂದೊಮ್ಮೆ ಅಗ್ನಿಪ್ರವೇಶ ಮಾಡುವುದರಲ್ಲಿದ್ದನು.

೪೦. ಆ ರಾಜನನ್ನು ನೀನು ಬಲ್ಲೆಯಾದರೆ, ಈತನ ಪ್ರಾಣರಕ್ಷಣೆಗಾಗಿ ಆ ಸಂಗತಿಯನ್ನು ತಿಳಿಸು" ಎಂದನು.

೪೧. ಅದನ್ನು ಕೇಳಿ ನಾಡೀಜಂಘನಿಂತೆಂದನು :—"ಎಲೈ ವಿಪ್ರೇಂದ್ರನೇ! ಈಗ ನಾನು ಹದಿನಾಲ್ಕು ಕಲ್ಪಗಳ ಕಾಲವನ್ನು ನೆನೆಯಬಲ್ಲವನಾಗಿದ್ದೇನೆ. ಅವನನ್ನು ಕಾಣುವುದು ಹಾಗಿರಲಿ, ಅವನ ಸುದ್ದಿಯನ್ನು ಕೂಡ ನಾನು ನೆನೆಯಲಾರದವನಾಗಿದ್ದೇನೆ.

ಇಂದ್ರದ್ಯುಮ್ನೋ ಮಹೀಪಾಲಃ ಕೋಽಪಿ ನಾಸೀನ್ಮಹೀತಲೇ ।
ಏತಾವಾನ್ಮಾತ್ರಮೇವಾಹಂ ಜಾನಾಮಿ ದ್ವಿಜಪುಂಗವ ॥ ೪೨ ॥

ನಾರದ ಉವಾಚ :—

ತತಃ ಸ ವಿಸ್ಮಯಾವಿಷ್ಟಸ್ತಸ್ಯಾಯುರಿತಿ ಶುಶ್ರುವಾನ್ ।
ಪಪ್ರಚ್ಛ ರಾಜಾ ಕೋ ಹೇತುರ್ದಾನಸ್ಯ ತಪಸೋಽಥವಾ ।
ಯದಾಯುರೀದೃಶಂ ದೀರ್ಘಂ ಸಂಜಾತಮಿತಿ ವಿಸ್ಮಿತಃ ॥ ೪೩ ॥

ನಾಡೀಜಂಘ ಉವಾಚ :—

ಘೃತಕಂಬಲಮಾಹಾತ್ಮ್ಯಾತ್ ಮಮ ದೇವಸ್ಯ ಶೂಲಿನಃ ।
ದೀರ್ಘಮಾಯುರಿದಂ ವಿಪ್ರ ಶಾಪಾದ್ಬಕವಪುಃ ಶೃಣು ॥ ೪೪ ॥
ಪುರಾಜನ್ಮನ್ಯಹಂ ಬಾಲೋ ಬ್ರಾಹ್ಮಣಸ್ಯಾಭವಂ ಭುವಿ ।
ಪಾರಾಶರ್ಯಸಗೋತ್ರಸ್ಯ ವಿಶ್ವರೂಪಸ್ಯ ಸನ್ಮುನೇಃ ॥ ೪೫ ॥
ಬಾಲಕೋ ಬಕ ಇತ್ಯೇವ ಪ್ರತೀತೋಽತಿ ಪ್ರಿಯಃ ಪಿತುಃ ।
ಚಪಲೋಽತೀವ ಬಾಲತ್ವೇ ನಿಸರ್ಗಾದೇವ ಭದ್ರಕ ॥ ೪೬ ॥

---

೪೨. ಈ ಹದಿನಾಲ್ಕು ಕಲ್ಪಗಳ ಕಾಲದಲ್ಲಿ ಇಂದ್ರದ್ಯುಮ್ನನೆಂಬ ರಾಜನಾವನೂ ಭೂಮಿಯಲ್ಲಿರಲಿಲ್ಲ. ಎಲೈ ದ್ವಿಜಪುಂಗವನೇ! ನನಗೆ ಗೊತ್ತಿರುವುದು ಇಷ್ಟುಮಾತ್ರವೇ.''

೪೩. ನಾರದನಿಂತೆಂದನು :—ಬಳಿಕ ಈ ರೀತಿಯಾಗಿ ಆ ಬಕನ ಆಯುಸ್ಸು ಇಷ್ಟೆಂದು ಕೇಳಿದವನಾದ ಆ ರಾಜನು ವಿಸ್ಮಯದಿಂದ ಕೂಡಿದವನಾಗಿ 'ನಿನ್ನ ಆಯುಸ್ಸು ಇಷ್ಟು ದೀರ್ಘವಾಗಿರುವುದಲ್ಲಾ, ಇದಕ್ಕೆ ಕಾರಣವೇನು? ದಾನವೇ, ತಪಸ್ಸೆ?' ಎಂದು ಪ್ರಶ್ನೆಮಾಡಿದನು.

೪೪. ಆ ಪ್ರಶ್ನೆಗೆ ನಾಡೀಜಂಘನು ಇಂತು ಮರುನುಡಿದನು :—"ಎಲೈ ವಿಪ್ರನೇ! 'ಘೃತಕಂಬಲ' ಮಹಾತ್ಮ್ಯದಿಂದ (ತುಪ್ಪ-ಕಂಬಳಿಯ ಮಹಾತ್ಮೆಯಿಂದ) ಶೂಲಧಾರಿಯಾದ ದೇವನ ವರದಿಂದ ನನಗೆ ಇಷ್ಟು ದೀರ್ಘವಾದ ಆಯುಸ್ಸುಂಟಾಯಿತು. ಶಾಪದಿಂದ ಈ ಬಕ (ಕೊಕ್ಕರೆಯ) ಶರೀರ ವುಂಟಾಯಿತು. ಆ ವಿವರವನ್ನು ಕೇಳು.

೪೫. ಪೂರ್ವಜನ್ಮದಲ್ಲಿ ನಾನು ಭೂಮಿಯಲ್ಲಿ ಪಾರಾಶರ್ಯಸ ಗೋತ್ರನಾದ ವಿಶ್ವರೂಪನೆಂಬ ಶ್ರೇಷ್ಠಮುನಿಯ ಮಗನಾಗಿ, ಬ್ರಾಹ್ಮಣ ಬಾಲಕನಾಗಿ, ಹುಟ್ಟಿದೆನು.

೪೬. ಬಾಲಕನಾಗಿದ್ದ ನನ್ನನ್ನು 'ಬಕ' ಎಂದು ಕರೆಯುತ್ತಿದ್ದರು. ನಾನು ತಂದೆಗೆ ತುಂಬ ಪ್ರಿಯನಾಗಿದ್ದೆನು. ಎಲೈ ಭದ್ರಕನೇ! ಬಾಲ್ಯದಲ್ಲಿ ಸ್ವಭಾವವಾಗಿಯೇ ನಾನು ಬಹಳ ಚಪಲನಾಗಿದ್ದೆನು.

ಅಥ ಮಾರಕತಂ ಲಿಂಗಂ ದೇವತಾವಸರಾತ್ಪಿತುಃ ।
ಚಾಪಲ್ಯಾದ್ಬಾಲಭಾವಾಚ್ಚಾಪಹೃತ್ಯ ನಿಹಿತಂ ಮಯಾ ॥ ೪೭ ॥
ಘೃತಸ್ಯ ಕುಂಭೇ ಸಂಕ್ರಾಂತೌ ಮಕರಸ್ಯೋತ್ತರಾಯಣೇ ।
ಅಥ ಪ್ರಾತರ್ವ್ಯತೀತಾಯಾಂ ನಿಶಿ ಯಾವತ್ಪಿತಾ ಮಮ ॥ ೪೮ ॥
ನಿರ್ಮಾಲ್ಯಾಪನಯಂ ಚಕ್ರೇ ತಾವಚ್ಛೂನ್ಯಂ ಶಿವಾಲಯಂ ।
ನಿಶಮ್ಯ ಕಾಂದಿಶೀಕೋ ಮಾಂ ಪಪ್ರಚ್ಛ ಮಧುರಸ್ವರಂ ॥ ೪೯ ॥
ವತ್ಸ ಕ್ವನು ತ್ವಯಾ ಲಿಂಗಂ ನೂನಂ ವಿನಿಹಿತಂ ವದ ।
ದಾಸ್ಯಾಮಿ ವಾಂಛಿತಂ ಯತ್ತೇ ಭಕ್ಷ್ಯಮನ್ಯತ್ತ್ವವೇಪ್ಸಿತಂ ॥ ೫೦ ॥
ತತೋ ಮಯಾ ಬಾಲಭಾವಾದ್ಭಕ್ಷ್ಯಲುಬ್ಧೇನ ತತ್ಪಿತುಃ ।
ಘೃತಕುಂಭಾಂತರಾಕೃಷ್ಯ ಭದ್ರಲಿಂಗಂ ಸಮರ್ಪಿತಂ ॥ ೫೧ ॥
ಅಥ ಕಾಲೇತು ಸಂಪ್ರಾಪ್ತೇ ಪ್ರಮೀತೋಽಹಂ ನೃಪಾಲಯೇ ।
ಜಾತೋ ಜಾತಿಸ್ಮರಸ್ತ್ವಾವದಾನರ್ತಾಧಿಪತೇಃ ಸುತಃ ॥ ೫೨ ॥
ಘೃತಕಂಬಲಮಾಹಾತ್ಮ್ಯಾನ್ಮಕರಸ್ಥೇ ದಿವಾಕರೇ ।
ಅಪಿ ಬಾಲ್ಯಾದವಜ್ಞಾನಾತ್ಸಂಯೋಗಾದ್ಘೃತಲಿಂಗಯೋಃ ॥ ೫೩ ॥

---

೪೭–೫೨. ಅನಂತರದಲ್ಲಿ ಒಂದು ಸಲ ತಂದೆಯು ದೇವತಾಪೂಜೆಗೆ ಇಟ್ಟು ಕೊಂಡಿದ್ದ ಮರಕತದ ಲಿಂಗವನ್ನು ಚಾಪಲ್ಯದಿಂದಲೂ ಹುಡುಗುತನದಿಂದಲೂ ಕದ್ದುಕೊಂಡುಹೋಗಿ ಮುಚ್ಚಿಟ್ಟೆನು. ಉತ್ತರಾಯಣದ ಮಕರ ಸಂಕ್ರಾಂತಿಯಲ್ಲಿ ಆ ಲಿಂಗವನ್ನು ತುಪ್ಪದ ಕುಂಭದಲ್ಲಿ ಮುಚ್ಚಿಟ್ಟೆನು. ಆಮೇಲೆ ಹಗಲು ಕಳೆಯಲಾಗಿ, ರಾತ್ರಿಯಲ್ಲಿ ನಮ್ಮ ತಂದೆಯು ನಿರ್ಮಾಲ್ಯವನ್ನು ತೆಗೆದುಹಾಕಿದಾಗ ಶಿವಾಲಯವು ಶೂನ್ಯವಾಗಿತ್ತು. ಅದನ್ನು ಕಂಡು ಏನುಮಾಡಲೂ ತೋರದವನಾಗಿ ನಮ್ಮ ತಂದೆಯು ಮಧುರಸ್ವರದಿಂದ ನನ್ನನ್ನು ಈ ರೀತಿ ಪ್ರಶ್ನೆ ಮಾಡಿದನು. 'ಮಗೂ! ಲಿಂಗವನ್ನು ನೀನೆಲ್ಲಿಟ್ಟಿದ್ದೀಯೆ ? ನಿಜವಾಗಿ ಹೇಳು. ನಿನಗೆ ಯಾವ ಭಕ್ಷ್ಯವು ಬೇಕೋ ಅದನ್ನು ಕೊಡುತ್ತೇನೆ. ಅಲ್ಲದೆ, ನಿನಗೆ ಬೇರೆ ಏನುಬೇಕಾಗಿದ್ದರೂ ಕೊಡುತ್ತೇನೆ.' ಆಮೇಲೆ, ಬಾಲಭಾವದಿಂದಲೂ ಭಕ್ಷ್ಯದ ಮೇಲಿನ ಆಸೆಯಿಂದಲೂ ನಾನು ತುಪ್ಪದ ಗಡಿಗೆಯೊಳಗಿನಿಂದ ಹೊರದೆಗೆದು ಆ ಭದ್ರಲಿಂಗವನ್ನು ತಂದೆಗೆ ಕೊಟ್ಟೆನು. ಆ ಬಳಿಕ ಕಾಲ ಬಂದು ನಾನು ಮರಣಹೊಂದಿದ ಮೇಲೆ ದೊರೆಯ ಮನೆಯಲ್ಲಿ ಆನರ್ತಾಧಿಪತಿಯ ಮಗನಾಗಿ ಹುಟ್ಟಿದೆನು. ಆಗ ಜಾತಿಸ್ಮರನಾಗಿದ್ದೆನು.

೫೩. ಘೃತಕಂಬಲ ಮಾಹಾತ್ಮ್ಯದಿಂದ, ಸೂರ್ಯನು ಮಕರದಲ್ಲಿರುವಾಗ ಬಾಲ್ಯದಲ್ಲಿ ತಿಳಿಯದೆಯೇ ಮಾಡಿದುದಾದರೂ ಘೃತ ಲಿಂಗಗಳಿಗೆ ಸಂಯೋಗ ವುಂಟುಮಾಡಿದುದರಿಂದ ನಾನು ದೊರೆಮಗನಾಗಿ ಹುಟ್ಟಿದೆನು.

ತತಃ ಸಂಸ್ಥಾಪಿತಂ ಲಿಂಗಂ ಪ್ರಾಗ್ಜನ್ಮಸ್ಮರತಾ ಮಯಾ ।
ತತಃ ಪ್ರಭೃತಿ ಲಿಂಗಾನಿ ಘೃತೇನಾಚ್ಛಾದಯಾಮ್ಯಹಂ ॥ ೫೪ ॥
ಪಿತೃಪೈತಾಮಹಂ ಪ್ರಾಪ್ಯ ರಾಜ್ಯಂ ಶಕ್ತ್ಯನುರೂಪತಃ ।
ತತಃ ಪ್ರಸನ್ನೋ ಭಗವಾನ್ ಪಾರ್ವತೀಪತಿರಾಹ ಮಾಂ ॥ ೫೫ ॥
ಪೂರ್ವಜನ್ಮನಿ ತುಷ್ಟೋಽಹಂ ಘೃತಕಂಬಲಪೂಜಯಾ ।
ಪ್ರಯಚ್ಛಾಮ್ಯಸ್ಮಿ ತೇ ರಾಜ್ಯಮಧುನಾಭಿಮತಂ ವೃಣು ॥ ೫೬ ॥
ತತೋ ಮಯಾ ವೃತಃ ಪ್ರಾದಾದ್ಗಾಣಪತ್ಯಂ ಮದೀಪ್ಸಿತಂ ।
ಕೈಲಾಸೇ ಮಾಂ ಶಿವೋ ನಿತ್ಯಂ ಸಂತುಷ್ಟಃ ಪ್ರಾಹಚೇತಿಚ ॥ ೫೭ ॥
ತೇನೈವ ಹಿ ಶರೀರೇಣ ಪ್ರಣತಂ ಪುರತಃ ಸ್ಥಿತಂ ।
ಅದ್ಯ ಪ್ರಭೃತಿ ಸಂಕ್ರಾಂತೌ ಮಕರಸ್ಯಾಪರೋಽಪಿ ಯಃ ॥ ೫೮ ॥
ಘೃತೇನ ಪೂಜಾಂ ಕರ್ತಾಽಸೌ ಭಾವೀ ಮಮ ಗಣಃ ಸ್ಫುಟಂ ।
ಇತ್ಯುಕ್ತ್ವಾ ಮಾಂ ಶಿವೋ ಭದ್ರ ಗಣಕೋಟೀಶ್ವರಂ ವ್ಯಧಾತ್ ॥ ೫೯ ॥

---

೫೪. ಹಿಂದಿನ ಜನ್ಮವನ್ನು ಸ್ಮರಿಸುತ್ತಿದ್ದ ನಾನು ಲಿಂಗವನ್ನು ಸ್ಥಾಪನೆ ಮಾಡಿದೆನು. ಅಲ್ಲಿಂದ ಮುಂದೆ ಆ ಮೊದಲುಗೊಂಡು ಲಿಂಗಗಳನ್ನು ತುಪ್ಪದಿಂದ ಮುಚ್ಚುತ್ತಿದ್ದೆನು.

೫೫. ತಂದೆ ತಾತಂದಿರಿಂದ ಕ್ರಮಾನುಸಾರವಾಗಿ ಬಂದ ರಾಜ್ಯವನ್ನು ಪಡೆದು ಶಕ್ತಿಗನುರೂಪವಾಗಿ ಲಿಂಗಗಳನ್ನು ತುಪ್ಪದಲ್ಲಿ ಆಚ್ಛಾದನೆ ಮಾಡುತ್ತಿದ್ದೆನು. ಆಗ ಭಗವಂತನಾದ ಪಾರ್ವತೀಪತಿಯು ಪ್ರಸನ್ನನಾಗಿ ನನ್ನನ್ನು ಕುರಿತು ಇಂತೆಂದನು :—

೫೬. 'ಪೂರ್ವ ಜನ್ಮದಲ್ಲಿ ನೀನು ಮಾಡಿದ ಘೃತಕಂಬಲ ಪೂಜೆಯಿಂದ ನಾನು ಸಂತುಷ್ಟನಾಗಿ ನಿನಗೆ ರಾಜ್ಯವನ್ನು ಕೊಟ್ಟಿದ್ದೇನೆ. ಈಗ ನಿನಗೇನು ಬೇಕೋ ಆ ಅಭಿಮತವನ್ನು ಕೇಳಿಕೊ' ಎಂದನು.

೫೭–೫೯. ಆಮೇಲೆ ನಾನು ಗಣಾಧಿಪತ್ಯವನ್ನು ಆಯ್ದುಕೊಂಡೆನು. ಶಿವನು ಆ ನನ್ನ ಇಷ್ಟಾರ್ಥವನ್ನು ದಯಪಾಲಿಸಿದನು. ಕೈಲಾಸದಲ್ಲಿ ಅದೇ ಶರೀರದಿಂದಲೇ ನಮಸ್ಕಾರಮಾಡಿ ಎದುರಿಗೆ ನಿಂತ ನನ್ನನ್ನು ನೋಡಿ ನಿತ್ಯವೂ ಸಂತುಷ್ಟನಾದ ಶಿವನು ಈ ರೀತಿ ನುಡಿದನು :—'ಈಗಿನಿಂದ ಮೊದಲುಗೊಂಡು ಮಕರಮಾಸದ ಸಂಕ್ರಾಂತಿಯಲ್ಲಿ ಬೇರೆ ಯಾವನೇ ಆದರೂ ತುಪ್ಪದಿಂದ ಪೂಜೆ ಮಾಡುತ್ತಾನೋ ಅವನು ನನ್ನ ಗಣಗಳಲ್ಲೊಬ್ಬನಾಗುತ್ತಾನೆ. ಇದು ಸ್ಪಷ್ಟವು.' ಎಲೈ ಭದ್ರನೇ! ಇಂತೆಂದು ನುಡಿದು, ಶಿವನು ನನ್ನನ್ನು ಗಣಕೋಟಿಗೆ ಈಶ್ವರನನ್ನಾಗಿ ಮಾಡಿದನು.

ಪ್ರತೀಪಪಾಲಕಂ ನಾಮ ಸಂಸ್ಥಿತಂ ಶಿವಶಾಸನಂ ।
ತತಃ ಕಾಮಾದಿಭಿಃ ಷಡ್ಭಿಃ ಪದ್ಭೈಶ್ಚಂಕ್ರಮಣಾತ್ಮಿಕಾಂ ॥ ೬೦ ॥
ನಿಸರ್ಗಚಪಲಾಂ ಪ್ರಾಪ್ಯ ಭ್ರಮರೀಮಿವ ತಾಂ ಶ್ರಿಯಂ ।
ನೈವಾಲಮಭವಂ ತಸ್ಯಾ ಧಾರಣೇ ದೈವಯೋಗತಃ ॥ ೬೧ ॥
ವಿಚಚಾರ ತದಾಮತ್ತಃ ಕಿಲಾಹಂ ವಾರಣೋ ಯಥಾ ।
ಕೃತ್ಯಾಕೃತ್ಯವಿಚಾರೇಣ ವಿಮುಕ್ತೋಽತೀವ ಗರ್ವಿತಃ ॥ ೬೨ ॥
ವಿದ್ಯಾಮಭಿಜನಂ ಲಕ್ಷ್ಮೀಂ ಪ್ರಾಪ್ಯ ನೀಚನರೋ ಯಥಾ ।
ಆಪದಾಂ ಪಾತ್ರತಾಮೇತಿ ಸಿಂಧೂನಾಮಿವ ಸಾಗರಃ ॥ ೬೩ ॥
ಅಥ ಕಾಲೇ ವ್ಯತಿಕ್ರಾಂತೇ ಕಿಯನ್ಮಾತ್ರೇ ಯದೃಚ್ಛಯಾ ।
ವಿಚರನ್ನಗಮಂ ಶೈಲಂ ಹಿಮಾನೀರುದ್ಧಕಂದರಂ ॥ ೬೪ ॥
ತಪಸ್ಯತಿ ಮುನಿಸ್ತತ್ರ ಗಾಲವೋ ಭಾರ್ಯಯಾ ಸಹ ।
ಸದೈವ ತೀವ್ರತಪಸಾ ಕೃಶೋ ಧಮನಿಸಂತತಃ ॥ ೬೫ ॥
ಬ್ರಾಹ್ಮಣಸ್ಯ ಹಿ ದೇಹೋಽಯಂ ನೈವೈಹಿಕ ಫಲಪ್ರಿಯಃ ।
ಕೃಚ್ಛ್ರಾಯ ತಪಸೇ ಚೇಹ ಪ್ರೇತ್ಯಾನಂತಸುಖಾಯ ಚ ॥ ೬೬ ॥

---

೬೦–೬೧. ಶಿವನ ಅಪ್ಪಣೆಯ ಪ್ರಕಾರ ಪ್ರತೀಪಪಾಲಕನೆಂಬ ಗಣೇಶ್ವರನಾಗಿ ಇದ್ದೆನು. ಬಳಿಕ ಕಾಮ ಮೊದಲಾದ ಆರೂ ಕಾಲಿಡಲು ಆಸ್ಪದವುಳ್ಳದೂ, ಸ್ವಭಾವವಾಗಿಯೇ ಚಂಚಲವೂ ಆದ ಸಿರಿಯನ್ನು ಪಡೆದು, ಕೊನೆಯವರೆಗೂ ದಕ್ಕಿಸಿಕೊಂಡು ಉಳಿಸಿಕೊಳ್ಳಲು ದೈವಯೋಗದಿಂದ ನಾನು ಶಕ್ತನಾಗಲಿಲ್ಲ.

೬೨. ಆಗ ನಾನು ಕೃತ್ಯಾಕೃತ್ಯ ವಿಚಾರಗಳಿಂದ ಬಿಡಲ್ಪಟ್ಟವನಾಗಿಯೂ, ಅತಿ ಗರ್ವಿತನಾಗಿಯೂ ಆನೆಯಂತೆ ಮದಿಸಿ ಅಲೆಯತೊಡಗಿದೆನು.

೬೩–೬೬. ವಿದ್ಯೆಯನ್ನೂ, ಬಂಧುಜನರನ್ನೂ, ಐಶ್ವರ್ಯವನ್ನೂ ಪಡೆದ ನೀಚ ಮನುಷ್ಯನು ಹೇಗೆ ಆಪತ್ತುಗಳಿಗೆ ಪಾತ್ರನಾಗುತ್ತಾನೋ ಹಾಗೆ ನಾನೂ ಮತ್ತನಾಗಿ ಆಪತ್ತಿಗೆ ಪಾತ್ರನಾದೆನು. ನದಿಗಳಿಗೆ ಸಾಗರವೇ ಹೇಗೆ ಗತಿಯೋ ಹಾಗೆ ನನಗೆ ಅವನತಿಯೇ ಗತಿಯಾಯಿತು. ಬಳಿಕ ಕೆಲವು ಕಾಲ ಕಳೆಯಲಾಗಿ, ಮನಬಂದಲ್ಲಿ ಸುತ್ತಾಡುತ್ತಾ ಹಿಮದಿಂದ ಮುಚ್ಚಿಹೋದ ಕಣಿವೆಗಳುಳ್ಳ ಒಂದು ಪರ್ವತವನ್ನು ಹೋಗಿ ಸೇರಿದೆನು. ಅಲ್ಲಿ ಗಾಲವಮುನಿಯು ಹೆಂಡತಿಯೊಡನೆ ತಪಸ್ಸು ಮಾಡುತ್ತಿದ್ದನು. ಸದಾ ಕಾಲವೂ ತೀವ್ರ ತಪಸ್ಸಿನಲ್ಲಿ ತೊಡಗಿ ಆತನು ಕೃಶನಾಗಿದ್ದನು. ಬ್ರಾಹ್ಮಣನ ಈ ದೇಹವು ಐಹಿಕಫಲವನ್ನು ಪ್ರಿಯವೆಂದು ಬಯಸಿದುದಲ್ಲವೇ ಅಲ್ಲವು. ಇಹಲೋಕದಲ್ಲಿ ಕೃಚ್ಛ್ರ ಮತ್ತು ತಪಸ್ಸುಗಳಿಗೋಸ್ಕರವೂ ಮೃತಿಹೊಂದಿದ ಬಳಿಕ ಅನಂತ ಸುಖವನ್ನು ಸಾಧಿಸುವುದಕ್ಕೋಸ್ಕರವೂ ಆ ದೇಹವಿರುವುದು.

ತಸ್ಯ ಭಾರ್ಯಾತಿರೂಪೇಣ ವಿಜಿಗ್ಯೇ ವಿಶ್ವವರ್ಣಿನೀ ।
ತನ್ವೀ ಶ್ಯಾಮಾ ಮೃಗಾಕ್ಷೀ ಸಾ ಪೀನೋನ್ನತ ಪಯೋಧರಾ ॥ ೬೭ ॥
ಹಂಸಗದ್ಗದಸಂಭಾಷಾ ಮತ್ತಮಾತಂಗಗಾಮಿನೀ ।
ವಿಸ್ತೀರ್ಣಂ ಜಘನಾಮಧ್ಯೇ ಕ್ಷಾಮಾ ದೀರ್ಘಶಿರೋರುಹಾ ॥ ೬೮ ॥
ನಿಮ್ನನಾಭಿರ್ವಿಧಾತ್ರೈಷಾ ನಿರ್ಮಿತಾ ಸಂದಿದೃಕ್ಷುಣಾ ।
ವಿಕೀರ್ಣಮಿವ ಸೌಂದರ್ಯಮೇಕಪಾತ್ರಮಿವ ಸ್ಥಿತಿಂ ॥ ೬೯ ॥
ತತೋಽವಿನೀತಸ್ತಾಂ ವೀಕ್ಷ್ಯ ಭದ್ರೇ ಗಾಲವ ವಲ್ಲಭಾಂ ।
ಅಹಮಾಸಂ ಶರವ್ರಾತೈಸ್ತಾಡಿತಃ ಪುಷ್ಪಧನ್ವಿನಾ ।
ವಿವೇಕಿನೋಽಪಿ ಮುನಯಸ್ತಾವದೇವ ವಿವೇಕಿನಃ ॥ ೭೦ ॥
ಯಾವನ್ನ ಹರಿಣಾಕ್ಷೀಣಾಮಪಾಂಗವಿವರೇಕ್ಷಿತಾಃ ।
ಮಯಾ ವ್ಯವಸಿತಂ ಚಿತ್ತೇ ತದಾನೀಂ ತಾಂ ಜಿಹೀರ್ಷುಣಾ ॥ ೭೧ ॥
ಇತಿ ಚೇತಿ ಹರಿಷ್ಯಾಮಿ ತಪಸಾ ರಕ್ಷಿತಾಂ ಮುನೇಃ ।
ಅಸ್ಯಾಃ ಕೃತೇ ಯದಿ ಶಪೇನ್ಮುನಿಸ್ತತ್ರ ಪರಾಭವಃ ॥ ೭೨ ॥

---

೬೭. ವಿಶ್ವವರ್ಣನಿಯೆಂಬ ಆತನ ಹೆಂಡತಿಯು ಅತ್ಯಂತ ಮಿಗಿಲಾದ ರೂಪದಿಂದ ಮೆರೆಯುತ್ತಿದ್ದಳು. ಆಕೆಯು ತೆಳ್ಳನೆಯ ದೇಹವುಳ್ಳವಳು, ಶ್ಯಾಮಲ ವರ್ಣದವಳು, ಜಿಂಕೆಯ ಕಣ್ಣುಗಳಂತೆ ಕಣ್ಣುಗಳುಳ್ಳವಳು, ದಪ್ಪವಾಗಿಯೂ ಉನ್ನತವಾಗಿಯೂ ಇರುವ ಸ್ತನಗಳುಳ್ಳವಳು.

೬೮. ಹಂಸದಂತೆ ಗದ್ಗದ ಧ್ವನಿಯಿಂದ ಮಾತನಾಡುವವಳು, ಮದಿಸಿದ ಆನೆಯಂತೆ ಗಮನವುಳ್ಳವಳು, ವಿಸ್ತೀರ್ಣವಾದ ಜಘನವುಳ್ಳವಳು, ಕೃಶವಾಗಿರುವ ನಡುವುಳ್ಳವಳು, ಉದ್ದವಾದ ತಲೆಗೂದಲುಳ್ಳವಳು.

೬೯–೭೨. ಆಳವಾದ ಹೊಕ್ಕುಳುಳ್ಳವಳು, ಎಲ್ಲೆಲ್ಲೋ ಚದುರಿಹೋಗಿರುವ ಸೌಂದರ್ಯವನ್ನು ಒಂದು ಕಡೆ ತಂದಿಟ್ಟು ನೋಡಬಯಸಿ ಬ್ರಹ್ಮನು ಇವಳನ್ನು ನಿರ್ಮಿಸಿದನೋ ಎಂಬಂತೆ ಇದ್ದಳು. ಎಲೈ ಭದ್ರನೇ! ಅನಂತರ, ಆ ಗಾಲವ ವಲ್ಲಭೆಯನ್ನು ನೋಡಿ ಅವಿನೀತನಾದ ನಾನು ಪುಷ್ಪಬಾಣನಾದ ಮನ್ಮಥನಿಂದ ಬಾಣಸಮೂಹಗಳಿಂದ ಹೊಡೆಯಲ್ಪಟ್ಟವನಾದೆನು. ವಿವೇಕಿಗಳಾದ ಮುನಿಗಳೂ ಕೂಡ ಎಲ್ಲಿಯವರೆಗೆ ವಿವೇಕಿಗಳೆಂದರೆ, ಹರಿಣಾಕ್ಷಿಯರ ಕಡೆಗಣ್ಣಿನ ಕುಡಿ ನೋಟಕ್ಕೆ ಎಲ್ಲಿಯವರೆಗೆ ಗುರಿಯಾಗುವುದಿಲ್ಲವೋ ಅಲ್ಲಿಯವರೆಗೆ. ಆಕೆಯನ್ನು ಹರಣಮಾಡಬೇಕೆಂಬ ಅಪೇಕ್ಷೆಯುಳ್ಳವನಾಗಿ ನಾನು ಆಗ ಮನಸ್ಸಿನಲ್ಲಿ ಹೀಗೆ ಯೋಚನೆ ಮಾಡಿದೆನು. 'ಮುನಿಯ ತಪಸ್ಸಿನಿಂದ ರಕ್ಷಿತಳಾದ ಇವಳನ್ನು ನಾನು ಹರಣಮಾಡುತ್ತೇನೆ. ಇವಳಿಗೋಸ್ಕರವಾಗಿ ಮುನಿಯು ಶಪಿಸಿದ ಪಕ್ಷದಲ್ಲಿ, ಆಗ ನನಗೆ ಪರಾಭವವುಂಟಾಗುತ್ತದೆ.

ಮಮ ಭಾವೀ ಭವೇದೇಷಾ ಭಾರ್ಯಾ ಮೃತ್ಯುರುತಾಪಿ ಮೇ ।
ತಸ್ಮಾಚ್ಛಿಷ್ಯೋ ಭವಾಮ್ಯಸ್ಯ ಶುಶ್ರೂಷಾನಿರತೋ ಮುನೇಃ ॥ ೭೩ ॥
ಪ್ರಾಪ್ಯಾಂತರಂ ಹರಿಷ್ಯಾಮಿ ನಾಸ್ಯಯೋಗ್ಯೇಯಮಂಗನಾ ।
ಇತಿ ವ್ಯವಸ್ಯ ವಿದ್ಯಾರ್ಥಿಮೂರ್ತಿಮಾಸ್ಥಾಯ ಗಾಲವಂ ॥ ೭೪ ॥
ನಮಸ್ಕೃತ್ಯ ವಚೋಽವೋಚಮಿತಿ ಭಾವ್ಯರ್ಥನೋದಿತಃ ।
ತಥಾಮತಿಸ್ತಥಾ ಮಿತ್ರಂ ವ್ಯವಸಾಯಸ್ತಥಾ ನೃಣಾಂ ॥ ೭೫ ॥
ಭವೇದವಶ್ಯಂ ತದ್ಭಾವಿ ಯಥಾ ಪುಂಭಿಃ ಪುರಾಕೃತಂ ।
ವಿವೇಕವೈರಾಗ್ಯಯುತೋ ಭಗವಂಸ್ತ್ವಾಮುಪಸ್ಥಿತಃ ॥ ೭೬ ॥
ಶಿಷ್ಯೋಽಹಂ ಭವತಾ ಪಾಠ್ಯಂ ಕರ್ಣಧಾರಂ ಮಹಾಮುನಿಂ ।
ಅಪಾರಪಾರದಂ ವಿಷ್ಣುಂ ವಿಪ್ರಮೂರ್ತಿಮುಪಾಶ್ರಿತಂ ॥ ೭೭ ॥
ನಮಸ್ತೇ ಚೇತನಂ ಬ್ರಹ್ಮ ಪ್ರತ್ಯಕ್ಷಂ ಗಾಲವಾಖ್ಯಯಾ ।
ಅವಿದ್ಯಾಕೃಷ್ಣಸರ್ಪೇಣ ದಷ್ಟಂ ತದ್ವಿಷಪೀಡಿತಂ ॥ ೭೮ ॥

---

೭೩. ನನಗೆ ಇವಳೇ ಮೃತ್ಯುವಾಗುವ ಹಾಗಿದ್ದರೂ ಇವಳು ನನಗೆ ಹೆಂಡತಿಯಾಗಬೇಕು. ಆದುದರಿಂದ ಈ ಮುನಿಗೆ ಶಿಷ್ಯನಾಗಿ ಅವನ ಶುಶ್ರೂಷೆಯಲ್ಲಿ ನಿರತನಾಗುತ್ತೇನೆ.

೭೪–೭೬. ತಕ್ಕ ಅವಕಾಶವು ದೊರೆತಕೂಡಲೇ ಇವಳನ್ನು ಹಿಡಿದೊಯ್ಯುತ್ತೇನೆ. ಈ ಅಂಗನೆಯು ಇವನಿಗೆ ಯೋಗ್ಯಳಲ್ಲವು.' ಹೀಗೆಂದು ನಿಶ್ಚಯ ಮಾಡಿಕೊಂಡು ವಿದ್ಯಾರ್ಥಿಯ ರೂಪವನ್ನು ತಾಳಿ ಆ ಗಾಲವನನ್ನು ನಮಸ್ಕರಿಸಿ, ಮುಂದಾಗುವ ಸಂಗತಿಯಿಂದ ಪ್ರೇರಿತನಾಗಿ ಈ ರೀತಿಯಾಗಿ ನುಡಿದೆನು:— ಮನುಷ್ಯನ ಪೂರ್ವಕರ್ಮವು ಹೇಗಿರುವುದೋ ಅದಕ್ಕೆ ತಕ್ಕಂತೆಯೇ ಅದೇ ಬುದ್ಧಿಯು ಹುಟ್ಟುತ್ತದೆ; ಅದೇ ಮಿತ್ರರೊಡಗೂಡುತ್ತಾರೆ; ಅದೇ ರೀತಿಯ ಪ್ರಯತ್ನವುಂಟಾಗುತ್ತದೆ. ಯಾವುದು ಆಗಬೇಕೋ ಅದು ಅವಶ್ಯವಾಗಿ ಆಗಿಯೇ ತೀರುವುದು. ವಿವೇಕ ವೈರಾಗ್ಯಗಳಿಂದ ಕೂಡಿದವನಾಗಿ, 'ಎಲೈ ಭಗವಂತನೇ! ನಿನ್ನ ಬಳಿಗೆ ಬಂದಿದ್ದೇನೆ.

೭೭. ನಾನು ನಿಮ್ಮ ಶಿಷ್ಯನು. ನನಗೆ ಪಾಠ ಹೇಳಬೇಕು. ನನ್ನ ಸಂಸಾರ ಸಾಗರವನ್ನು ದಾಟಿಸುವ ಕರ್ಣಧಾರನು (ಹಡಗು ನಡೆಸುವವನು) ನೀನು. ದಡಕಾಣದ ಈ ಸಂಸಾರ ಸಾಗರದ ದಡವನ್ನು ತೋರಿಸುವವನು ನೀನು. ವಿಪ್ರಮೂರ್ತಿಯನ್ನು ಧರಿಸಿರುವ ವಿಷ್ಣುವು.

೭೮–೭೯. ಅಂಥ ನಿನಗೆ ಗಾಲವನೆಂಬ ಹೆಸರಿನಿಂದ ಪ್ರತ್ಯಕ್ಷನಾಗಿ ಬಂದಿರುವ ಸಚೇತನ ಬ್ರಹ್ಮವಸ್ತುವಿಗೆ ನಮಸ್ಕರಿಸುತ್ತೇನೆ. ಅವಿದ್ಯೆಯೆಂಬ ಕೃಷ್ಣ ಸರ್ಪದಿಂದ ಕಚ್ಚಲ್ಪಟ್ಟು, ಅದರ ವಿಷದಿಂದ ಪೀಡಿತನಾದ ನನ್ನನ್ನು ಉಪದೇಶ

ಉಪದೇಶಮಹಾಮಂತ್ರೈರ್ಮಾಂ ಜಾಂಗುಲಿಕ ಜೀವಯ ।
ಮಹಾಮೋಹ ಮಹಾವೃಕ್ಷೋ ಹೃದ್ಯಾವಾಪ ಸಮುತ್ಥಿತಃ ॥ ೭೯ ॥
ತದ್ವಾಕ್ಯತೀಕ್ಷ್ಣಧಾರೇಣ ಕುಠಾರೇಣ ಕ್ಷಯಂ ವ್ರಜೇತ್ ।
ಅಪವರ್ಗಪಥವ್ಯಾಪೀ ಮೂಢಸಂಸರ್ಗಸೇಚನಃ ॥ ೮೦ ॥
ಛಿದ್ಯತಾಂ ಸೂತ್ರಧಾರೇಣ ವಿದ್ಯಾಪರಶುನಾಧುನಾ ।
ಭಜಾಮಿ ತವ ಶಿಷ್ಯೋಽಹಂ ವರಿವಸ್ಯಾಪರಶ್ಚಿರಂ ॥ ೮೧ ॥
ಸಮಿದ್ದರ್ಭಾನ್ಮೂಲಫಲಂ ದಾರೂಣಿ ಜಲಮೇವಚ ।
ಆಹರಿಷ್ಯೇಽನುಗೃಹ್ಣೀಷ್ವ ವಿನೀತಂ ಮಾಮುಪಸ್ಥಿತಂ ॥ ೮೨ ॥
ಇತ್ಥಂ ಪುರಾ ಬಕಾಭಿಖ್ಯಂ ಬಕವೃತ್ತಿಮುಪಾಶ್ರಿತಂ ।
ತದಾಽರ್ಜವೇ ಕೃತಮತಿರನುಜಗ್ರಾಹ ಮಾಂ ಮುನಿಃ ॥ ೮೩ ॥
ತತೋಽತೀವ ವಿನೀತೋಽಹಂ ಭೂತ್ವಾ ತಂ ಬ್ರಾಹ್ಮಣೀಯುತಂ ।
ವಿಶ್ವಾಸನಾಯ ಸುದೃಢಂ ತೋಷಯಾಮಿ ದಿನೇ ದಿನೇ ॥ ೮೪ ॥

---

ವೆಂಬ ಮಹಾ ಮಂತ್ರಗಳಿಂದ, ಎಲೈ ವಿಷವೈದ್ಯನೇ! ಜೀವಿಸುವಂತೆ ಮಾಡು. ಮಹಾ ಮೋಹವೆಂಬ ಮಹಾ ವೃಕ್ಷವು ಮನಸ್ಸಿಗೆ ರುಚಿಸಿ ಬೇಕಾಗಿರುವಂಥ ಆಸೆಗಳೆಂಬ ಬೀಜದಿಂದ ಹುಟ್ಟಿ ಬೆಳೆದಿದೆ.

೮೦. ಆ ವೃಕ್ಷವು ಮೋಕ್ಷವೆಂಬ ದಾರಿಗೆ ಅಡ್ಡಲಾಗಿ ವ್ಯಾಪಿಸಿಬಿಟ್ಟಿದೆ; ಮೂಢರ ಸಹವಾಸವೆಂಬ ನೀರೆರೆದು ಪೋಷಿತವಾಗಿದೆ. ಅಂಥ ಆ ಮಹಾ ವೃಕ್ಷವು ನಿನ್ನ ವಾಕ್ಯಗಳೆಂಬ ಹರಿತವಾದ ಬಾಯುಳ್ಳ ಕೊಡಲಿಯಿಂದ ಕ್ಷಯ ವನ್ನು ಪಡೆಯಲಿ.

೮೧. ಆ ವೃಕ್ಷವು ಸೂತ್ರಧಾರನಾದ (ಸೌದೆ ಒಡೆಯುವವನಾದ) ನಿನ್ನಿಂದ ವಿದ್ಯೆಯೆಂಬ ಕೊಡಲಿಯಿಂದ ಈಗ ಒಡೆದು ಕತ್ತರಿಸಲ್ಪಡಲಿ. ಚಿರಕಾಲ ನಿನ್ನ ಸೇವೆಮಾಡಿಕೊಂಡು ನಿನ್ನನ್ನಾಶ್ರಯಿಸುತ್ತೇನೆ; ನಿನ್ನ ಶಿಷ್ಯನಾಗಿರುತ್ತೇನೆ.

೮೨. ಸಮಿತ್ತು ದರ್ಭೆಗಳನ್ನೂ, ಗೆಡ್ಡೆ ಹಣ್ಣುಗಳನ್ನೂ, ಸೌದೆಯನ್ನೂ, ನೀರನ್ನೂ ತರುತ್ತೇನೆ. ನಿನ್ನ ಸಮೀಪಕ್ಕೆ ಬಂದಿರುವ ವಿನೀತನಾದ ನನ್ನನ್ನು ಅನುಗ್ರಹಿಸು.

೮೩. ಈ ರೀತಿಯಾಗಿ ನುಡಿದು, ಹಿಂದೆ ಬಕನೆಂಬ ಹೆಸರುಳ್ಳವನಾಗಿದ್ದು ಈಗ ಬಕವೃತ್ತಿಯನ್ನನುಸರಿಸಿದ ನನ್ನನ್ನು ಆಗ ಆ ಮುನಿಯು ಋಜುಸ್ವಭಾವದಲ್ಲೇ ಮನಸ್ಸುಳ್ಳವನಾಗಿ ಶಿಷ್ಯನಾಗಿ ಪರಿಗ್ರಹಿಸಿದನು.

೮೪. ಬಳಿಕ ನಾನು ಅತ್ಯಂತ ವಿನೀತನಾಗಿ ಬ್ರಾಹ್ಮಣಿಯಿಂದೊಡಗೂಡಿದ ಆತನಿಗೆ ನಂಬಿಕೆ ಹುಟ್ಟಿಸುವುದಕ್ಕಾಗಿ ದಿನ ದಿನವೂ ಬಹು ದೃಢವಾಗಿ ಸಂತೋಷ ಗೊಳಿಸುತ್ತ ಬಂದೆನು.

ಸಚ ಜಾನನ್ಮುನಿಃ ಪತ್ನೀಂ ಪಾತ್ರಭೂತಾಮವಿಶ್ವಸನ್ ।
ಸ್ತ್ರೀಚರಿತ್ರವಿದಂಕೇ ತಾಂ ವಿಧಾಯ ಸ್ವಪಿತಿ ದ್ವಿಜಃ ॥ ೮೫ ॥
ಅಥಾನ್ಯಸ್ಮಿನ್ ದಿನೇ ಸಾಭೂದ್ಬ್ರಾಹ್ಮಣ್ಯಥ ರಜಸ್ವಲಾ ।
ತದ್ದೂರಶಾಯಿನೀ ರಾತ್ರೌ ವಿಶ್ವಾಸಾನ್ಮೇ ತಪಸ್ವಿನೀ ॥ ೮೬ ॥
ಇದಮಂತರಮಿತ್ಯಂತರ್ವಿಚಿಂತ್ಯಾಹಂ ಪ್ರಹರ್ಷಿತಃ ।
ಮಲಿಮ್ಲುಚಾಕೃತಿರ್ಭೂತ್ವಾ ನಿಶೀಥೇ ತಾಮಥಾಹರಂ ॥ ೮೭ ॥
ವಿಲಲಾಪ ತದಾ ಬಾಲಾ ಹ್ರಿಯಮಾಣಾ ಮಯೋಚ್ಚಕೈಃ ।
ಮೈವಂ ಮೈವಮಿತಿ ಜ್ಞಾತ್ವಾ ಮಾಂ ಸ್ವರೇಣಾಬ್ರವೀನ್ಮುನಿಂ ॥ ೮೮ ॥
ಬಕವೃತ್ತಿರಯಂ ದುಷ್ಟೋ ಧರ್ಮಕಂಚುಕಮಾಶ್ರಿತಃ ।
ಹರತೇ ಮಾಂ ದುರಾಚಾರಸ್ತಸ್ಮಾತ್ತ್ವಂ ತ್ರಾಹಿ ಗಾಲವ ॥ ೮೯ ॥
ತವ ಶಿಷ್ಯಃ ಪುರಾ ಭೂತ್ವಾ ಕೋಽಪ್ಯೇಷೋಽದ್ಯ ಮಲಿಮ್ಲುಚಃ ।
ಮಾಂ ಜಿಹೀರ್ಷತಿ ತದ್ರಕ್ಷ ಶರಣ್ಯ ಶರಣಂ ಭವ ॥ ೯೦ ॥

---

೮೫. ಆ ಮುನಿಯೂ ಕೂಡ ಪತ್ನಿಯು ಪಾತ್ರಭೂತಳಾದವಳೆಂದು ಅರಿತವನಾಗಿ ನಂಬಿಕೆಯಿಡದೆಹೋದನು; ಸ್ತ್ರೀ ಚರಿತ್ರೆಯನ್ನು ಬಲ್ಲ ಆ ದ್ವಿಜನು ಅವಳನ್ನು ತೊಡೆಯಮೇಲೆಯೇ ಮಲಗಿಸಿಕೊಂಡು ಮಲಗುತ್ತಿದ್ದನು.

೮೬. ಹೀಗಿರುವಲ್ಲಿ ಒಂದಾನೊಂದು ದಿನ ಆ ಬ್ರಾಹ್ಮಣಿಯು ರಜಸ್ವಲೆಯಾದಳು. ಆದುದರಿಂದ ತಪಸ್ವಿನಿಯಾದ ಆಕೆಯು ನನ್ನಲ್ಲಿ ನಂಬಿಕೆಯಿಟ್ಟಿದ್ದುದರಿಂದ ದೂರದಲ್ಲಿ ಮಲಗಿದ್ದಳು.

೮೭. 'ಇದು ಸರಿಯಾದ ಸಮಯ'ವೆಂದು ನಾನು ಒಳಗೇ ಯೋಚನೆಮಾಡಿಕೊಂಡು ಬಹಳ ಹರ್ಷಿತನಾಗಿ, ಕಳ್ಳನ ವೇಷವನ್ನು ತಳೆದವನಾಗಿ ರಾತ್ರಿಯಲ್ಲಿ ಅವಳನ್ನು ಹೊತ್ತುಕೊಂಡುಹೋದೆನು.

೮೮. ಆಗ ನಾನು ಹರಣಮಾಡುತ್ತಿದ್ದ ಆ ಬಾಲೆಯು ಗಟ್ಟಿಯಾಗಿ ಗೋಳಿಟ್ಟಳು. 'ಬೇಡ, ಬೇಡ' ಎಂದು ನಾನು ನುಡಿಯಲು ಸ್ವರದಿಂದ ನನ್ನನ್ನು ಗುರುತಿಸಿ, ಮುನಿಯನ್ನು ಕುರಿತು ಹೀಗೆ ಹೇಳಿದಳು :—

೮೯. ಈ ದುಷ್ಟನು ಬಕವೃತ್ತಿಯುಳ್ಳವನು; ಧರ್ಮದ ಚಿಹ್ನೆಯನ್ನು ತಾಳಿ ಬಂದಿರುವ ಕಪಟಿಯು; ಈ ದುರಾಚಾರಿಯು ನನ್ನನ್ನು ಹೊತ್ತುಕೊಂಡು ಹೋಗುತ್ತಿದ್ದಾನೆ; ಆದುದರಿಂದ ಎಲೈ ಗಾಲವನೇ! ನನ್ನನ್ನು ಕಾಪಾಡು.

೯೦. ಯಾವನೋ ಒಬ್ಬ ಮಾಯಾವಿಯು ಪೂರ್ವದಲ್ಲಿ ನಿನ್ನ ಶಿಷ್ಯನಾಗಿದ್ದು ಈಗ ನನ್ನನ್ನು ಹೊತ್ತುಕೊಂಡು ಹೋಗುತ್ತಿದ್ದಾನೆ. ಆದುದರಿಂದ ನನ್ನನ್ನು ಕಾಪಾಡು. ಎಲೈ ಶರಣ್ಯನೆ! ನನಗೆ ಶರಣನಾಗು.

ತದ್ವಾಕ್ಯ ಸಮಕಾಲಂ ಸ ಪ್ರಬುದ್ಧೋ ಗಾಲವೋ ಮುನಿಃ ।
ತಿಷ್ಠ ತಿಷ್ಠೇತಿ ಮಾಮುಕ್ತ್ವಾ ಗತಿಸ್ತಂಭಂ ವ್ಯಧಾನ್ಮಮ ॥ ೯೧ ॥
ತತಶ್ಚಿತ್ರಾಕೃತಿರಹಂ ಸ್ತಂಭಿತೋ ಮುನಿನಾಽಭವಂ ।
ವ್ರೀಡಿತೋ ಪ್ರವಿಶಾಮೀವ ಸ್ವಾಂಗಾನಿ ಕಿಲ ಲಜ್ಜಯಾ ॥ ೯೨ ॥
ತತಃ ಪ್ರಕುಪಿತಃ ಪ್ರಾಹ ಮಾಮಭ್ಯೇತ್ಯಾಥ ಗಾಲವಃ ।
ತದ್ವಜ್ರದುಃಸಹಂ ವಾಕ್ಯಂ ಯೇನಾಹಮಭವಂ ಬಕಃ ॥ ೯೩ ॥

ಗಾಲವ ಉವಾಚ :—

ಬಕವೃತ್ತಿಮುಪಾಶ್ರಿತ್ಯ ವಂಚಿತೋಽಹಂ ಯತಸ್ತ್ವಯಾ ।
ತಸ್ಮಾದ್ಬಕಸ್ತ್ವಂ ಭವಿತಾ ಚಿರಕಾಲಂ ನರಾಧಮ ॥ ೯೪ ॥
ಇತಿ ಶಪ್ತೋಽಹಮಭವಂ ಮುನಿನಾಽಧರ್ಮಮಾಶ್ರಿತಃ ।
ಪರದಾರೋಪಸೇವಾರ್ಥಮನರ್ಥಮಿಮಮಾಗತಃ ॥ ೯೫ ॥
ನ ಹೀದೃಶಮನಾಯುಷ್ಯಂ ಲೋಕೇ ಕಿಂಚನ ವಿದ್ಯತೇ ।
ಯಾದೃಶಂ ಪುರುಷಸ್ಯೇಹ ಪರದಾರೋಪಸೇವನಂ ॥ ೯೬ ॥

---

೯೧. ಆಕೆಯು ಹೀಗೆ ಮಾತಾಡುತ್ತಿರುವಷ್ಟರಲ್ಲಿಯೇ ಆ ಗಾಲವ ಮುನಿಯು ಎಚ್ಚತ್ತವನಾಗಿ, ನನ್ನನ್ನು ಕುರಿತು ‘ ನಿಲ್ಲು ನಿಲ್ಲು ’ ಎಂದು ನುಡಿದು ನನಗೆ ಗತಿಸ್ತಂಭವನ್ನುಂಟುಮಾಡಿದನು.

೯೨. ಬಳಿಕಲಾ ಮುನಿಯಿಂದ ಸ್ತಂಭಿತನಾದ ನಾನು ಚಿತ್ರದಲ್ಲಿ ಬರೆದ ಆಕೃತಿಯಂತಾದೆನು. ನಾಚಿಕೆಯಿಂದ ಕುಗ್ಗಿಹೋದೆನು. ಲಜ್ಜೆಯಿಂದ ನನ್ನ ಅಂಗಗಳೊಳಕ್ಕೇ ಪ್ರವೇಶಮಾಡಿ ಅಡಗಿಕೊಂಡುಬಿಡಲೋ ಎಂಬಂತಾದೆನು.

೯೩. ಅನಂತರದಲ್ಲಿ ಗಾಲವನು ನನ್ನ ಬಳಿಗೆ ಬಂದು ಬಹಳ ಕೋಪಗೊಂಡವನಾಗಿ ನನ್ನನ್ನು ಕುರಿತು, ಯಾವುದರಿಂದ ನಾನು ಬಕನಾದೆನೋ (ಕೊಕ್ಕರೆಯಾದೆನೋ) ಅಂಥ ವಜ್ರದಷ್ಟು ದುಃಸಹವಾದ ವಾಕ್ಯವನ್ನುನುಡಿದನು.

೯೪. ಗಾಲವನೆಂದನು :— “ ಎಲೈ ನರಾಧಮನೇ! ಬಕವೃತ್ತಿಯನ್ನು ತಳೆದ ನಿನ್ನಿಂದ ನಾನು ವಂಚಿತನಾದೆನಾದುದರಿಂದ, ನೀನು ಚಿರಕಾಲ ಬಕವೇ ಆಗಿಹೋಗು.”

೯೫. ಈ ರೀತಿ ಆ ಮುನಿಯಿಂದ ನಾನು ಶಾಪಹೊಂದಿದೆನು. ಅಧರ್ಮವನ್ನಾಶ್ರಯಿಸಿ ಹೆರರ ಹೆಂಡಿರನ್ನು ಅನುಭವಿಸಬೇಕೆಂದು ಹೋಗಿ ಈ ಅನರ್ಥವನ್ನು ಪಡೆದವನಾದೆನು.

೯೬. ಪುರುಷನಿಗೆ ಪರದಾರೋಪಸೇವನೆಯು (ಹೆರರ ಹೆಂಡಿರನ್ನನುಭವಿಸುವುದು) ಎಷ್ಟರಮಟ್ಟಿಗೋ ಅಷ್ಟರಮಟ್ಟಿಗೇ ಆಯುಷ್ಯಹಾನಿಯುಂಟುಮಾಡುವಂತಹುದು ಲೋಕದಲ್ಲಿ ಮತ್ತಾವುದೂ ಇಲ್ಲವೇ ಇಲ್ಲವು.

ತತಃ ಸತೀ ಸಾ ಮತ್ಸ್ಪರ್ಶದೂಷಿತಾಂಗೀ ತಪಸ್ವಿನೀ ।
ಮಯಾ ವಿಮುಕ್ತಾ ಸ್ನಾತ್ವಾ ಮಾಂ ತಥೈವಾನುಶಶಾಪ ಹ ॥ ೯೭ ॥
ಏವಂ ತಾಭ್ಯಾಮಹಂ ಶಪ್ತೋ ಹ್ಯಶ್ವತ್ಥಪರ್ಣವದ್ಭಯಾತ್ ।
ಕಂಪಮಾನಃ ಪ್ರಣಮ್ಯೋಭಾವವೋಚಂ ತತ್ರ ದಂಪತೀ ॥ ೯೮ ॥
ಗಣೋಽಹಮೀಶ್ವರಸ್ಯೈವ ದುರ್ವಿನೀತತರೋ ಯುವಾಂ ।
ನಿರೋಧಮೇವಂ ಕುರುತಂ ಭಗವಂತಾವನುಗ್ರಹಂ ॥ ೯೯ ॥
ವಾಚಿ ಕ್ಷುರೋ ನಾವನೀತಂ ಹೃದಯಂ ಹಿ ದ್ವಿಜನ್ಮನಾಂ ।
ಪ್ರಕುಪ್ಯಂತಿ ಪ್ರಸೀದಂತಿ ಕ್ಷಣೇನಾಪಿ ಪ್ರಸಾದಿತಾಃ ॥ ೧೦೦ ॥
ತ್ವಯಿ ವಿಪ್ರತಿಪನ್ನಸ್ಯ ತ್ವಮೇವ ಶರಣಂ ಮಮ ।
ಭೂಮೌ ಸ್ಖಲಿತಪಾದಾನಾಂ ಭೂಮಿರೇವಾವಲಂಬನಂ ॥ ೧೦೧ ॥
ಗಣಾಧಿಪತ್ಯಮಪಿ ಮೇ ಜಾತಂ ಪರಿಭವಾಸ್ಪದಂ ।
ವಿಪದಂತಾ ಹಿ ಜಾಯಂತೇ ದುರ್ವಿನೀತಸ್ಯ ಸಂಪದಃ ॥ ೧೦೨ ॥

---

೯೭. ಬಳಿಕ ಆ ಸತಿಯು ನನ್ನ ಸ್ಪರ್ಶದಿಂದ ದೂಷಿತವಾದ ಅಂಗವುಳ್ಳವಳಾಗಿ ವ್ಯಥೆಪಡುತ್ತಾ, ನನ್ನಿಂದ ಬಿಡಲ್ಪಟ್ಟವಳಾಗಿ, ಸ್ನಾನಮಾಡಿ ಅದೇ ರೀತಿಯಾಗಿ ತಾನೂ ನನ್ನನ್ನು ಶಪಿಸಿದಳು.

೯೮. ಹೀಗೆ ಆ ಇಬ್ಬರಿಂದಲೂ ಶಾಪ ಹೊಂದಿದ ನಾನು ಅರಳಿಯ ಎಲೆಯಂತೆ ಭಯದಿಂದ ನಡುಗುತ್ತಾ ಇಬ್ಬರಿಗೂ ನಮಸ್ಕಾರಮಾಡಿ, ಆ ದಂಪತಿಗಳನ್ನು ಕುರಿತು ಹೀಗೆ ಹೇಳಿದೆನು :—

೯೯. "ನಾನು ಈಶ್ವರನ ಗಣೇಶ್ವರನು. ನಿಮ್ಮಿಬ್ಬರಿಗೂ ನಾನು ಹೆಚ್ಚು ದುರ್ವಿನೀತನಾಗಿದ್ದೇನೆ. ನೀವು ಈ ರೀತಿ ನನಗೆ ಶಿಕ್ಷೆ ಮಾಡಿದ್ದೀರಿ. ಹಾಗೆಯೇ, ಭಗವಂತರಾದ ನೀವು ನನ್ನಲ್ಲಿ ಅನುಗ್ರಹವನ್ನು ತೋರಿಸಿರಿ.

೧೦೦. ದ್ವಿಜರಾದವರಿಗೆ ಮಾತೇ ಕತ್ತಿಯಲಗು; ಹೃದಯವಾದರೋ ಬೆಣ್ಣೆಯಂತಹುದು. ವಿಪ್ರರು ಒಂದು ಕ್ಷಣದಲ್ಲಿಯೇ ಬಹು ಕೋಪಗೊಳ್ಳುತ್ತಾರೆ. ಪ್ರಸನ್ನರಾಗಬೇಕೆಂದು ಬೇಡಿಕೊಂಡರೆ ಕ್ಷಣಮಾತ್ರದಲ್ಲಿ ಪ್ರಸನ್ನರಾಗುತ್ತಾರೆ.

೧೦೧. ನಿನ್ನಲ್ಲಿ ಅಪರಾಧ ಮಾಡಿರುವ ನನಗೆ ನೀನೇ ಶರಣನು. ನೆಲದ ಮೇಲೆ ಹೆಜ್ಜೆಯೂರಿ ಕಾಲುಜಾರಿದವರಿಗೆ ನೆಲವೇ ಅವಲಂಬನವಷ್ಟೆ?

೧೦೨. ನನ್ನ ಗಣಾಧಿಪತ್ಯವೂ ಕೂಡ ನಿಂದೆಗೆ ಆಸ್ಪದವಾಯಿತು. ದುರ್ವಿನೀತನಿಗೆ ಸಂಪತ್ತು ಬಂದರೆ ಆ ಸಂಪತ್ತು ಕೊನೆಯಲ್ಲಿ ವಿಪತ್ತನ್ನೇ ಉಂಟುಮಾಡುತ್ತದೆ.

ವಿದುರೇಷ್ಯದ್ಧಿಯಾಽಪಾಯಂ ಪರತೋಽನ್ಯೇ ವಿವೇಕಿನಃ ।
ನೈವೋಭಯಂ ವಿದುರ್ನೀಚಾ ವಿನಾನುಭವಮಾತ್ಮನಃ ॥ ೧೦೩ ॥
ದುರ್ವಿನೀತಃ ಶ್ರಿಯಂ ಪ್ರಾಪ್ಯ ವಿದ್ಯಾಮೈಶ್ವರ್ಯಮೇವ ವಾ ।
ನ ತಿಷ್ಠತಿ ಚಿರಂ ಸ್ಥಾನೇ ಯಥಾಹಂ ಮದಗರ್ವಿತಃ ॥ ೧೦೪ ॥
ವಿದ್ಯಾಮದೋ ಧನಮದಸ್ತೃತೀಯೋಽಭಿಜನೋ ಮದಃ ।
ಏತೇ ಮದಾ ಮದಾಂಧಾನಾಮೇತ ಏವ ಸತಾಂ ದಮಾಃ ॥ ೧೦೫ ॥
ನೋದರ್ಕಶಾಲಿನೀ ಬುದ್ಧಿರ್ಯೇಷಾಮವಿಜಿತಾತ್ಮನಾಂ ।
ತೈಃ ಶ್ರಿಯಶ್ಚಪಲಾ ವಾಚ್ಯಂ ನೀಯಂತೇ ಮಾದೃಶೈರ್ಜನೈಃ ॥ ೧೦೬ ॥
ತತ್ಪ್ರಸೀದ ಮುನಿಶ್ರೇಷ್ಠ ಶಾಪಾಂತಂ ಮೇಽಧುನಾ ಕುರು ।
ದುರ್ವಿನೀತೇಷ್ವಪಿ ಸದಾ ಕ್ಷಮಾಚಾರಾ ಹಿ ಸಾಧವಃ ॥ ೧೦೭ ॥
ಇತ್ಥಂ ವಚಸಿ ವಿಜ್ಞಪ್ತೇ ವಿನೀತೇನಾಪಿ ವೈ ಮಯಾ ।
ಪ್ರಸಾದಪ್ರವಣೋ ಭೂತ್ವಾ ಶಾಪಾಂತಂ ಮೇ ತದಾ ವ್ಯಧಾತ್ ॥ ೧೦೮ ॥

---

೧೦೩. ವಿವೇಕಿಗಳಾದವರು ಬೇರೊಂದರಿಂದ ಬರುವ ಅಪಾಯವನ್ನು ಅದು ಬರುವ ಮೊದಲೇ ಬುದ್ಧಿಬಲದಿಂದ ತಿಳಿದುಕೊಳ್ಳುತ್ತಾರೆ. ನೀಚರಾದವರು ಸ್ವಂತವಾಗಿ ಅನುಭವದಿಂದ ಕಾಣುವವರೆಗೂ ಎರಡನ್ನೂ ತಿಳಿಯಲಾರರು.

೧೦೪. ದುರ್ವಿನೀತನು ಮೇಲ್ಮೆಯನ್ನು ಪಡೆದು, ವಿದ್ಯೆಯನ್ನಾಗಲಿ, ಐಶ್ವರ್ಯವನ್ನಾಗಲಿ ಸಂಪಾದಿಸಿ ಚಿರಕಾಲ ಆ ಸ್ಥಾನದಲ್ಲಿ ನಿಂತಿರುವುದಿಲ್ಲ. ಮದದಿಂದ ಗರ್ವಿತನಾದ ನಾನೇ ಇದಕ್ಕೆ ಉದಾಹರಣೆ.

೧೦೫. ವಿದ್ಯಾಮದ, ಧನಮದ, ಮೂರನೆಯದು ತನ್ನವರಾದ ಬಂಧುಜನಗಳ ಮದ—ಇವು ಮದಾಂಧರಾದವರಿಗೆ ಮದಗಳು. ಸತ್ಪುರುಷರಿಗೆ ಇವೇ ದಮಗಳು.

೧೦೬. ಜಿತೇಂದ್ರಿಯರಲ್ಲದ ಯಾರ ಬುದ್ಧಿಯು ಸತ್ಫಲಸಾಧಕವಾಗಿರುವುದಿಲ್ಲವೋ ಅಂತಹ ನನ್ನಂತಹ ಜನರ ಸಂಪತ್ತು 'ಚಂಚಲ'ವೆಂಬ ದೋಷವುಳ್ಳುದಾಗುತ್ತದೆ. ಮದಾಂಧರ ಸಂಪತ್ತು ಬೇಗ ನಾಶವಾಗುವುದು.

೧೦೭. ಆದುದರಿಂದ ಎಲೈ ಮುನಿಶ್ರೇಷ್ಠನೇ! ಪ್ರಸನ್ನನಾಗು. ಈ ನನ್ನ ಶಾಪಕ್ಕೆ ಒಂದು ಅವಧಿಯನ್ನು ವಿಧಿಸು. ಸಾಧುಗಳು ದುರ್ವಿನೀತರಾದವರಲ್ಲಿ ಕೂಡ ಕ್ಷಮೆದೋರುವ ಸ್ವಭಾವವುಳ್ಳವರಲ್ಲವೆ?"

೧೦೮. ಈ ರೀತಿಯಾಗಿ ವಿನೀತನಾಗಿ ನಾನು ವಿಜ್ಞಾಪಿಸಿಕೊಳ್ಳಲು, ಆ ಮುನಿಯು ಅನುಗ್ರಹದೋರುವ ಮನಸ್ಸುಳ್ಳವನಾಗಿ ಆಗ ಶಾಪಾಂತವನ್ನು ಗೊತ್ತುಮಾಡಿದನು.

ಗಾಲವ ಉವಾಚ:—
ಛನ್ನಕೀರ್ತಿಸಮುದ್ಧಾರಸಹಾಯಸ್ತ್ವಂ ಭವಿಷ್ಯಸಿ ।
ಯದೇಂದ್ರದ್ಯುಮ್ನಭೂಪಸ್ಯ ತದಾ ಮೋಕ್ಷಮವಾಪ್ಸ್ಯಸಿ ॥ ೧೦೯ ॥
ಇತ್ಯಹಂ ಮುನಿಶಾಪೇನ ತದಾಪ್ರಭೃತಿ ಪರ್ವತೇ ।
ಹಿಮಾಚಲೇ ಬಕೋ ಭೂತ್ವಾ ಕಾಶ್ಯಪೇಯೋ ವಸಾಮಿ ಚ ॥ ೧೧೦ ॥
ರಾಜ್ಯಂ ಚಿರಾಯುರಿತಿ ಮೇ ಘೃತಕಂಬಲಸ್ಯ
ಜಾತಿಸ್ಮರತ್ವಮಧುನಾಪಿ ತಥಾನುಭಾವಾನ್ ।
ಶಾಪಾದ್ಬಕತ್ವಮಭವನ್ಮುನಿಗಾಲವಸ್ಯ
ತದ್ಭದ್ರ ಸರ್ವಮುದಿತಂ ಭವತಾದ್ಯ ಪೃಷ್ಟಂ ॥ ೧೧೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ಮಹೀಪ್ರಾದುರ್ಭಾವೋ" ನಾಮ ಸಪ್ತಮೋಽಧ್ಯಾಯಃ

---

೧೦೯. ಗಾಲವನಿಂತೆಂದನು:—"ಯಾವಾಗ ನೀನು ಇಂದ್ರದ್ಯುಮ್ನ ಮಹಾರಾಜನ (ಗುಪ್ತವಾಗಿ) ಮರೆಯಾಗಿರುವ ಕೀರ್ತಿಯ ಪುನರುದ್ಧಾರ ಕಾರ್ಯದಲ್ಲಿ ಸಹಾಯಕನಾಗುವೆಯೋ ಆಗ ಈ ಶಾಪದಿಂದ ಬಿಡುಗಡೆಯನ್ನು ಪಡೆಯುವೆ."

೧೧೦. ಈ ರೀತಿ ಮುನಿಶಾಪದಿಂದ ಬಕನಾಗಿ ಕಶ್ಯಪಕುಲೋತ್ಪನ್ನನಾದ ನಾನು ಹಿಮಾಚಲ ಪರ್ವತದಲ್ಲಿ ಅಂದಿನಿಂದಲೂ ವಾಸಮಾಡುತ್ತಿದ್ದೇನೆ.

೧೧೧. ಘೃತಕಂಬಲದ ಪ್ರಭಾವದಿಂದ ರಾಜ್ಯವನ್ನೂ, ಚಿರಾಯುವನ್ನೂ, ಈಗಲೂ ಕೂಡ ಹಿಂದಿನ ಜನ್ಮಗಳ ಸ್ಮರಣೆಯನ್ನೂ, ಹಾಗೆಯೇ ಅನುಭವಗಳನ್ನೂ ಪಡೆದೆನು. ಗಾಲವಮುನಿಯ ಶಾಪದಿಂದ ನನಗೆ ಬಕತ್ವವುಂಟಾಯಿತು. ಆದುದರಿಂದ ಎಲೈ ಭದ್ರನೇ! ನೀನು ಈಗ ಕೇಳಿದ್ದಕ್ಕೆಲ್ಲ ಉತ್ತರ ಹೇಳಿದ್ದೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ಮಹೀಪ್ರಾದುರ್ಭಾವ"ವೆಂಬ ಏಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಅಷ್ಟಮೋಽಧ್ಯಾಯಃ

### ಬಿಲ್ವದಲಮಾಹಾತ್ಮ್ಯಂ

ನಾರದ ಉವಾಚ :—

ನಾಡೀಜಂಘುಬಕೇನೋಕ್ತಾಂ ವಾಚಮಾಕರ್ಣ್ಯ ಭೂಪತಿಃ ।
ಮಾರ್ಕಂಡೇಯೇನ ಸಂಯುಕ್ತೋ ಬಭೂವಾತೀವ ದುಃಖಿತಃ ॥ ೧ ॥
ತಂ ನಿಶಮ್ಯ ಮುನಿರ್ಭೂಪಂ ದುಃಖಿತಂ ಸಾಶ್ರುಲೋಚನಂ ।
ಸಮಾನವ್ಯಸನಃ ಪ್ರಾಹ ತದರ್ಥಂ ಸ ಪುನರ್ಬಕಂ ॥ ೨ ॥
ವಿಧಾಯಾಶಾಂ ಮಹಾಭಾಗ ತ್ವದಂತಿಕಮುಪಾಗತೌ ।
ಆವಾಂ ಚಿರಾಯುಜ್ಞಾತಾಂ ತಾವಿಂದ್ರದ್ಯುಮ್ನಮಿತಿ ದ್ವಿಜ ॥ ೩ ॥
ನಿಷ್ಪನ್ನ ನಾಸ್ಯ ತತ್ಕಾರ್ಯಂ ಪ್ರಾಣಾನೇಷ ಮುಮುಕ್ಷತಿ ।
ವಹ್ನಿಪ್ರವೇಶನಪರಂ ವೈರಾಗ್ಯಂ ಸಮುಪಾಗತಃ ॥ ೪ ॥
ತನ್ಮಾಮುಪಾಗತೋಽಹಂ ಚ ತ್ವಾಂ ಸಿದ್ಧಂ ನಾಸ್ಯ ವಾಂಛಿತಂ ।
ತದೇನಮನುಯಾಸ್ಯಾಮಿ ಮರಣೇನ ತ್ವಯಾ ಶಪೇ ॥ ೫ ॥

---

### ಕನ್ನಡದ ಅನುವಾದ

#### ಬಿಲ್ವದಳಮಾಹಾತ್ಮ್ಯ

೧–೨. ನಾರದನಿಂತೆಂದನು :—ನಾಡೀಜಂಘನೆಂಬ ಬಕನು ಹೇಳಿದ ಈ ಮಾತನ್ನು ಕೇಳಿ ಆ ಭೂಪತಿಯು ಮಾರ್ಕಂಡೇಯನೊಡನೆ ಬಹು ದುಃಖಿತನಾದನು. ಆ ರಾಜನು ದುಃಖಿತನಾಗಿ ಕಣ್ಣೀರುತುಂಬಿದುದನ್ನು ಕಂಡು ಮಾರ್ಕಂಡೇಯಮುನಿಯು ಅವನಿಗೆ ಸಮಾನವಾದ ದುಃಖವನ್ನೇ ತಾನೂ ಪಡೆದು ಆ ರಾಜನಿಗೋಸ್ಕರವಾಗಿ ಬಕನನ್ನು ಕುರಿತು ಮತ್ತೂ ಇಂತೆಂದನು :—

೩–೪. " ಎಲೈ ಮಹಾಭಾಗನೇ ! ನಾವು ಆಸೆಯಿಟ್ಟುಕೊಂಡು, ಚಿರಾಯುವಾದ ನೀನು ಇಂದ್ರದ್ಯುಮ್ನನನ್ನು ಬಲ್ಲವನೆಂದು ಭಾವಿಸಿ ನಿನ್ನ ಬಳಿಗೆ ಬಂದೆವು. ಆ ಕಾರ್ಯವು ನೆರವೇರಲಿಲ್ಲ. ದೊರೆಯು ಪ್ರಾಣಗಳನ್ನು ತೊರೆಯುತ್ತಾನೆ. ಹೆಚ್ಚಾದ ವೈರಾಗ್ಯವನ್ನು ಹೊಂದಿದವನಾಗಿ ಅಗ್ನಿಪ್ರವೇಶದಿಂದ ಪ್ರಾಣಗಳನ್ನು ನೀಗಿಬಿಡುತ್ತಾನೆ.

೫. ಆದುದರಿಂದ ಇವನು ನನ್ನ ಬಳಿಗೆ ಬಂದನು ; ನಾನು ನಿನ್ನ ಬಳಿಗೆ ಬಂದೆನು. ಇವನ ಇಷ್ಟಾರ್ಥವು ಮಾತ್ರ ಸಿದ್ಧಿಯಾಗಲಿಲ್ಲ. ಆದುದರಿಂದ ನಾನು ಕೂಡ ಮರಣವನ್ನಾಶ್ರಯಿಸಿ ಆ ಮೂಲಕ ಇವನನ್ನು ಹಿಂಬಾಲಿಸುತ್ತೇನೆ. ಇದಕ್ಕೆ ನನ್ನಾಣೆ.

ಆಸಾಂ ಕೃತ್ವಾಭ್ಯುಪಾಯಾತಂ ನಿರಾಶಂ ನೇಕ್ಷಿತುಂ ಕ್ಷಮಾಃ ।
ಭವಂತಿ ಸಾಧವಸ್ತಸ್ಮಾಜ್ಜೀವಿತಾನ್ಮರಣಂ ವರಂ ॥ ೬ ॥
ಪ್ರಾರ್ಥಿತಂ ಚಾಮುನಾ ಹೃತ್ಸ್ಥಂ ಮಯಾ ಚಾಸ್ಮೈ ಪ್ರತಿಶ್ರುತಂ ।
ತ್ವಾಂ ಮಿತ್ರ ತತ್ಪರಿಜ್ಞಾನೇ ಧೃತ್ವಾ ಹೃದಿ ಚಿರಾಯುಷಂ ॥ ೭ ॥
ಅಸಂಪಾದಯತೋ ನಾರ್ಥಂ ಪ್ರತಿಜ್ಞಾತಂ ಮಯಾಯುಷಾ ।
ಕಲುಷೇಣಾರ್ಥಿನಾಮಾಶಾಪೂರಕೇಣ ಸಖೇಽಧುನಾ ॥ ೮ ॥
ಪ್ರತಿಶ್ರುತಂ ಕೃತಂ ಶ್ಲಾಘ್ಯಾ ದಾಸತಾಂ ತ್ಯಜಪಕ್ಷಣೇ ।
ಹರಿಶ್ಚಂದ್ರಸ್ಯೇವ ನೃಣಾಂ ನ ಶ್ಲಾಘ್ಯಾಽಸತ್ಯಸಂಧತಾ ॥ ೯ ॥
ಮಿತ್ರಸ್ನೇಹಸ್ಯ ಪರ್ಯಾಯಸ್ತಚ್ಚ ಸಾಪ್ತಪದಂ ಸ್ಮೃತಂ ।
ಸ್ನೇಹಃ ಸ ಕೀದೃಶೋ ಮಿತ್ರೇ ದುಃಖಿತೇ ಯೋ ನ ದೃಶ್ಯತೇ ॥ ೧೦ ॥
ತದವಶ್ಯಮಹಂ ಸಾಧ್ಯಮಧುನಾ ವಹ್ನಿಸಾಧನಂ ।
ಕರಿಷ್ಯೇ ಕೀರ್ತಿವಪುಷಃ ಕೃತೇ ಸತ್ಯಮಿದಂ ಸಖೇ ॥ ೧೧ ॥

---

೬. ಆಸೆಯಿಟ್ಟುಕೊಂಡು ಬಳಿಗೆ ಬಂದವನು ನಿರಾಶನಾಗಿಬಿಟ್ಟರೆ ಅಂಥವನನ್ನು ಸಾಧುಗಳು ನೋಡಲಾರರು; ನೋಡಿ ತಡೆಯಲಾರದವರಾಗುತ್ತಾರೆ. ಆದುದರಿಂದ ಬದುಕಿರುವುದಕ್ಕಿಂತ ಸಾಯುವುದೇ ಮೇಲು.

೭–೮. ಇವನು ತನ್ನ ಮನಸ್ಸಿನಲ್ಲಿದ್ದುದನ್ನು ನನ್ನಲ್ಲಿ ಪ್ರಾರ್ಥಿಸಿಕೊಂಡನು. ನಾನು ಇವನಿಗೆ ಮಾತುಕೊಟ್ಟೆನು. ಆ ವಿಚಾರವನ್ನು ತಿಳಿಯುವುದಕ್ಕಾಗಿ ಮಿತ್ರನಾದ ನೀನು ಚಿರಾಯುವೆಂಬುದನ್ನು ಮನಸ್ಸಿನಲ್ಲಿಟ್ಟುಕೊಂಡು ಇವನಿಗೆ ವಾಗ್ದಾನ ಮಾಡಿದೆನು. ಅಯ್ಯಾ ಸಖನೇ! ಅರ್ಥಿಗಳ ಆಸೆಯನ್ನು ಈಡೇರಿಸುವೆನೆಂದು ನಾನು ಕಪಟದಿಂದ ನುಡಿದಂತಾಯಿತು; ನನ್ನ ಆಯುಸ್ಸಿನಮೇಲೆ ಆಣೆಯಿಟ್ಟು ಪ್ರತಿಜ್ಞೆಮಾಡಿ ಹಾಗೆ ಪ್ರತಿಜ್ಞೆಮಾಡಿದುದರ ಪ್ರಯೋಜನವನ್ನು ಸಂಪಾದಿಸಲಿಲ್ಲವಾದುದರಿಂದ ನಾನು ಕಪಟಪ್ರತಿಜ್ಞೆ ಮಾಡಿದವನಾದೆನು.

೯. ಮನುಷ್ಯರು ತಾವು ವಾಗ್ದಾನ ಮಾಡಿದುದನ್ನು ನಡೆಸುವುದಕ್ಕಾಗಿ ಹರಿಶ್ಚಂದ್ರನಂತೆ ಅಂತ್ಯಜರ ಗುಡಿಸಿಲಿನಲ್ಲಿ ದಾಸತ್ವವನ್ನು ಪಡೆಯುವುದೂ ಶ್ಲಾಘ್ಯವೇ ಸರಿ. ಅಸತ್ಯಸಂಧತ್ವವು ಎಂದಿಗೂ ಶ್ಲಾಘ್ಯವಲ್ಲ.

೧೦. ಮಿತ್ರರಸ್ನೇಹಕ್ಕೆ ಬೇರೊಂದು ಹೆಸರುಂಟು. ಅದನ್ನು 'ಸಾಪ್ತಪದ' ಎಂದು ಹೇಳುತ್ತಾರೆ (ಏಳು ಹೆಜ್ಜೆಗಳನ್ನು ಒಬ್ಬರ ಜೊತೆಯಲ್ಲಿ ನಡೆದರೆ, ಅವರಿಗೆ ಸ್ನೇಹವಾದಂತಾಯಿತೆಂದು ತಾತ್ಪರ್ಯ). ಹಾಗಿರುವಲ್ಲಿ, ಮಿತ್ರನು ದುಃಖಿತನಾಗಿರುವಲ್ಲಿ ಅದನ್ನು ನೋಡದಿದ್ದಪಕ್ಷದಲ್ಲಿ ಅದೆಂತಹ ಸ್ನೇಹ?

೧೧. ಆದುದರಿಂದ ಈಗ ನಾನು ಕೀರ್ತಿಶರೀರದ ರಕ್ಷಣೆಗಾಗಿ ಈತನೊಡನೆಯೇ ಅಗ್ನಿಪ್ರವೇಶ ಮಾಡುತ್ತೇನೆ. ಅಯ್ಯಾ ಸಖನೇ! ಇದು ಸತ್ಯ.

ಅನುಜಾನೀಹಿ ಮಾಮೇತದ್ದರ್ಶನಂ ತವ ಪಶ್ಚಿಮಂ ।
ತ್ವಯಾ ಸಹ ಮಹಾಭಾಗ ನಾಡೀಜಂಘ ದ್ವಿಜೋತ್ತಮ ॥ ೧೨ ॥

ನಾರದ ಉವಾಚ :—

ವಜ್ರವದ್ದುಃಸಹಾಂ ವಾಚಂ ಮಾರ್ಕಂಡೇಯ ಸಮೀರಿತಾಂ ।
ಶುಶ್ರುವಾನ್ಸ ಕ್ಷಣಂ ಧ್ಯಾತ್ವಾ ಪ್ರತೀತಃ ಪ್ರಾಹ ತಾವುಭೌ ॥ ೧೩ ॥

ನಾಡೀಜಂಘ ಉವಾಚ :—

ಯದ್ಯೇವಂ ತದಿದಂ ಮಿತ್ರಂ ವಿಶಂತಂ ಜ್ವಲನೇಧುನಾ ।
ನಿವಾರಯ ಮುನಿಶ್ರೇಷ್ಠ ಮತ್ತೋಽಸ್ತಿ ಚಿರಜೀವಿತಃ ॥ ೧೪ ॥
ಪ್ರಾಕಾರಕರ್ಣನಾಮಾಸಾವುಲೂಕಃ ಶಿವಪರ್ವತೇ ।
ಸ ಜ್ಞಾಸ್ಯತಿ ಮಹೀಪಾಲಮಿಂದ್ರದ್ಯುಮ್ನಂ ನ ಸಂಶಯಃ ॥ ೧೫ ॥
ತಸ್ಮಾದಹಂ ತ್ವಯಾ ಸಾರ್ಧಮಮುನಾ ಚ ಶಿವಾಲಯಂ ।
ವ್ರಜಾಮಿ ತಂ ಶಿಖರಿಣಂ ಮಿತ್ರಕಾರ್ಯಪ್ರಸಿದ್ಧಯೇ ॥ ೧೬ ॥
ಇತ್ಯೇವಮುಕ್ತ್ವಾ ತೇ ಜಗ್ಮುಸ್ತ್ರಯೋಽಪಿ ದ್ವಿಜಪುಂಗವಾಃ ।
ಕೈಲಾಸಂ ದದೃಶುಸ್ತತ್ರ ತಮುಲೂಕಂ ಸ್ವನೀಡಗಂ ॥ ೧೭ ॥

---

೧೨. ಎಲೈ ಮಹಾಭಾಗನೇ! ನನಗೆ ಅಪ್ಪಣೆಕೊಡು. ದ್ವಿಜೋತ್ತಮನಾದ ನಾಡೀಜಂಘಾ! ನನಗೆ ಇದೇ ನಿನ್ನ ಕಡೆಯ ಸಂದರ್ಶನ."

೧೩. ನಾರದನಿಂತೆಂದನು :— ಮಾರ್ಕಂಡೇಯನಾಡಿದ ವಜ್ರದಂತೆ ದುಃಸಹವಾದ ಮಾತುಗಳನ್ನು ಕೇಳಿದವನಾಗಿ ನಾಡೀಜಂಘನು ಒಂದು ಕ್ಷಣಹೊತ್ತು ಧ್ಯಾನಮಾಡಿ ಒಂದು ನಿಶ್ಚಯಮಾಡಿಕೊಂಡು ಅವರಿಬ್ಬರನ್ನೂ ಕುರಿತು ಹೀಗೆ ಹೇಳಿದನು :—

೧೪. ನಾಡೀಜಂಘನಿಂತೆಂದನು :—"ಎಲೈ ಮುನಿಶ್ರೇಷ್ಠನೇ! ಹೀಗಿರುವ ಪಕ್ಷದಲ್ಲಿ ಅಗ್ನಿಪ್ರವೇಶಮಾಡಲಿರುವ ಈ ಮಿತ್ರನನ್ನು ಹಾಗೆ ಮಾಡದಂತೆ ತಡೆಯುವವನಾಗು. ನನಗಿಂತಲೂ ಚಿರಜೀವಿಯಾದವನಿದ್ದಾನೆ.

೧೫–೧೬. ಶಿವಪರ್ವತದಲ್ಲಿರುವ ಪ್ರಾಕಾರಕರ್ಣನೆಂಬ ಹೆಸರಿನ ಉಲೂಕನೇ ಅವನು. ಅವನು ಇಂದ್ರದ್ಯುಮ್ನ ರಾಜನನ್ನು ಬಲ್ಲವನಾಗಿರುವನೆಂಬುದರಲ್ಲಿ ಸಂಶಯವಿಲ್ಲವು. ಆದುದರಿಂದ ನಾನು ನಿನ್ನೊಡನೆಯೂ ಈತನೊಡನೆಯೂ ಮಿತ್ರನ ಕಾರ್ಯಸಾಧನೆಗಾಗಿ ಶಿವನ ನಿವಾಸಸ್ಥಾನವಾದ ಆ ಪರ್ವತವನ್ನು ಕುರಿತು ಪ್ರಯಾಣಮಾಡುತ್ತೇನೆ."

೧೭. ಇಂತೀರೀತಿಯಾಗಿ ನುಡಿದು, ಆ ಮೂವರು ದ್ವಿಜಪುಂಗವರೂ —ಬ್ರಾಹ್ಮಣ, ಕ್ಷತ್ರಿಯ, ವೈಶ್ಯಪಕ್ಷಿಗಳು—ಕೈಲಾಸಪರ್ವತಕ್ಕೆ ಹೋಗಿ ಸೇರಿದರು. ಅಲ್ಲಿ ತನ್ನ ಗೂಡಿನಲ್ಲಿದ್ದ ಆ ಉಲೂಕನನ್ನು ಕಂಡರು.

ಕೃತ ಸಂವಿದಸೌ ತೇನೋಲುಕಃ ಸ್ವಾಗತಪೂಜಯಾ ।
ಪೃಷ್ಟಶ್ಚ ತಾವುಭೌ ಪ್ರಾಹ ತತ್ಸರ್ವಮಭಿವಾಂಛಿತಂ ॥ ೧೮ ॥
ಚಿರಾಯುರಸಿ ಜಾನೀಷೇ ಯದೀಂದ್ರದ್ಯುಮ್ನಭೂಪತಿಂ ।
ತದ್ಬ್ರೂಹಿ ತೇನ ಜ್ಞಾನೇನ ಕಾರ್ಯಂ ಜೀವಾಮಹೇ ವಯಂ ॥ ೧೯ ॥
ಇತಿ ಪೃಷ್ಟಃ ಸವಿಮನಾ ಮಿತ್ರಕಾರ್ಯಪ್ರಸಾಧನಾತ್ ।
ಕೌಶಿಕಃ ಪ್ರಾಹ ಜಾನಾಮಿ ನೇಂದ್ರದ್ಯುಮ್ನಮಹಂ ನೃಪಂ ॥ ೨೦ ॥
ಅಷ್ಟಾವಿಂಶತ್ಪ್ರಮಾಣಾ ಮೇ ಕಲ್ಪಾ ಜಾತಸ್ಯ ಭೂತಲೇ ।
ನ ದೃಷ್ಟೋ ನ ಶ್ರುತೋ ವಾಸಾವಿಂದ್ರದ್ಯುಮ್ನೋ ನೃಪಃ ಕ್ಷಿತೌ ॥ ೨೧ ॥
ತಚ್ಛ್ರುತ್ವಾ ವಿಸ್ಮಿತೋ ಭೂಪಸ್ತಸ್ಯಾಯುರತಿಮಾತ್ರತಃ ।
ದುಃಖಿತೋಽಪಿ ತದಾ ಹೇತುಂ ಪಪ್ರಚ್ಛಾಸೌ ತದಾಯುಷಃ ॥ ೨೨ ॥
ಏವಮಾಯುರ್ಯದಿ ತವ ಕಥಂ ಪ್ರಾಪ್ತ ಬ್ರವೀಹಿ ತತ್ ।
ಉಲೂಕತ್ವಂ ಕಥಮಿದಂ ಜುಗುಪ್ಸಿತಮತೀವ ಚ ॥ ೨೩ ॥

---

೧೮. ಆ ಉಲೂಕನಿಂದ ಸ್ವಾಗತಪೂಜೆಯಿಂದ ಸತ್ಕೃತನಾದ ಆ ಬಕನು ಅವರಿಬ್ಬರನ್ನೂ ಕುರಿತು ಪ್ರಶ್ನಿಸಲ್ಪಟ್ಟವನಾಗಿ ಅವರಿಗೆ ಸಂಬಂಧಿಸಿದ ಎಲ್ಲ ಸಂಗತಿಗಳನ್ನೂ ಅವರ ಅಭಿಲಾಷೆಯನ್ನೂ ತಿಳಿಸಿದನು.

೧೯. "ನೀನು ಚಿರಾಯುವಾಗಿದ್ದೀಯೆ. ಇಂದ್ರದ್ಯುಮ್ನ ರಾಜನನ್ನು ಬಲ್ಲೆಯಾದರೆ ಅದನ್ನು ತಿಳಿಸು. ಆ ಜ್ಞಾನದಿಂದ ಪ್ರಯೋಜನವುಂಟು. ಅದರಿಂದ ನಾವು ಬದುಕಿಕೊಳ್ಳುತ್ತೇವೆ."

೨೦. ಈ ರೀತಿಯಾಗಿ ಪ್ರಶ್ನೆಮಾಡಲ್ಪಟ್ಟ ಆ ಕೌಶಿಕನು ಮಿತ್ರಕಾರ್ಯ ಸಾಧನೆಯಲ್ಲಿ ಮನಸ್ಸು ಕುಗ್ಗಿದವನಾಗಿ, "ಇಂದ್ರದ್ಯುಮ್ನ ರಾಜನನ್ನು ನಾನರಿಯೆ" ಎಂದು ಹೇಳಿದನು.

೨೧. ಭೂಮಿಯಮೇಲೆ ಹುಟ್ಟಿದ ನನಗೆ ಇಪ್ಪತ್ತೆಂಟು ಕಲ್ಪಗಳಕಾಲ ಆಯುಸ್ಸು ಕಳೆಯಿತು. ಈ ಇಂದ್ರದ್ಯುಮ್ನ ಮಹಾರಾಜನನ್ನು ಭೂಮಿಯಲ್ಲಿ ನಾನು ಕಂಡಿಲ್ಲ; ಅವನ ಹೆಸರನ್ನು ಕೇಳಿಯೂ ಇಲ್ಲ."

೨೨. ಈ ರೀತಿಯಾಗಿ ನುಡಿದ ಆ ಗೂಬೆಯ ಮಾತುಗಳನ್ನು ಕೇಳಿ ಅದರ ಆಯುಸ್ಸು ಅಷ್ಟೊಂದು ಹೆಚ್ಚಾಗಿದ್ದುದಕ್ಕಾಗಿ ಆ ಭೂಪನು ವಿಸ್ಮಿತನಾಗಿ, ದುಃಖಿತನಾಗಿದ್ದರೂ ಆ ದೀರ್ಘಾಯುಷ್ಯಕ್ಕೆ ಕಾರಣವೇನೆಂದು ಪ್ರಶ್ನೆ ಮಾಡಿದನು.

೨೩. "ನಿನಗೆ ಈ ರೀತಿ ಆಯುಸ್ಸಿರುವುದಾದರೆ ಆ ಆಯುಸ್ಸನ್ನು ನೀನು ಹೇಗೆ ಪಡೆದೆ? ಅತಿ ಜುಗುಪ್ಸೆಗೆ ಗುರಿಯಾಗಿರುವ ಈ ಉಲೂಕತ್ವವು (ಗೂಬೆಯ ಜನ್ಮವು) ನಿನಗೆ ಹೇಗೆ ಉಂಟಾಯಿತು? ಅದನ್ನು ಹೇಳು."

ಪ್ರಾಕಾರಕರ್ಣ ಉವಾಚ :—

ಶ್ರುಣು ಭದ್ರ ಯಥಾ ದೀರ್ಘಮಾಯುರ್ಮೇ ಶಿವಪೂಜನಾತ್ ।
ಜುಗುಪ್ಸಿತಮುಲೂಕತ್ವಂ ಶಾಪೇನ ಚ ಮಹಾಮುನೇಃ ॥ ೨೪ ॥
ವಸಿಷ್ಠಕುಲಸಂಭೂತಃ ಪುರಾಹಮಭವಂ ದ್ವಿಜಃ ।
ಘಂಟ ಇತ್ಯಭಿವಿಖ್ಯಾತೋ ವಾರಾಣಸ್ಯಾಂ ಶಿವೇ ರತಃ ॥ ೨೫ ॥
ಧರ್ಮಶ್ರವಣನಿಷ್ಠಸ್ಯ ಸಾಧೂನಾಂ ಸಂಸದಿ ಸ್ವಯಂ ।
ಶ್ರುತ್ವಾಸ್ಮಿ ಪೂಜಯಾಮೀಶಂ ಬಿಲ್ವಪತ್ರೈರಖಂಡಿತೈಃ ॥ ೨೬ ॥
ನ ಮಾಲತೀ ನ ಮಂದಾರಃ ಶತಪತ್ರಂ ನ ಮಲ್ಲಿಕಾ ।
ತಥಾ ಪ್ರಿಯಾಣಿ ಶ್ರೀವೃಕ್ಷೋ ಯಥಾ ಮದನವಿದ್ವಿಷಃ ॥ ೨೭ ॥
ಅಖಂಡ ಬಿಲ್ವಪತ್ರೇಣ ಏಕೇನ ಶಿವಮೂರ್ಧನಿ ।
ನಿಹಿತೇನ ನರೈಃ ಪುಣ್ಯಂ ಪ್ರಾಪ್ಯತೇ ಲಕ್ಷಪುಷ್ಪಜಂ ॥ ೨೮ ॥
ಅಖಂಡಿತೈರ್ಬಿಲ್ವಪತ್ರೈಃ ಶ್ರದ್ಧಯಾ ಸ್ವಯಮಾಹೃತೈಃ ।
ಲಿಂಗಪ್ರಪೂಜನಂ ಕೃತ್ವಾ ವರ್ಷಲಕ್ಷಂ ವಸೇದ್ದಿವಿ ॥ ೨೯ ॥

---

೨೪. ಅದಕ್ಕೆ ಪ್ರಾಕಾರಕರ್ಣನಿಂತೆಂದನು :— "ಅಯ್ಯಾ ಭದ್ರನೇ! ಕೇಳು. ನನ್ನ ಈ ದೀರ್ಘಾಯುಸ್ಸು ಶಿವಪೂಜೆಯಿಂದುಂಟಾಯಿತು. ಜುಗುಪ್ಸಿತವಾದ ಈ ಗೂಬೆಯ ಜನ್ಮವು ಮಹಾಮುನಿಯ ಶಾಪದಿಂದ ಸಂಭವಿಸಿತು.

೨೫. ಪೂರ್ವದಲ್ಲಿ ನಾನು ವಾರಾಣಸಿ (ಕಾಶಿ)ಯಲ್ಲಿ ವಸಿಷ್ಠಕುಲದಲ್ಲಿ ಹುಟ್ಟಿದ ಘಂಟನೆಂದು ಪ್ರಸಿದ್ಧನಾದ ಬ್ರಾಹ್ಮಣನಾಗಿ ಮಂಗಳಕಾರ್ಯಗಳಲ್ಲಿ ಆಸಕ್ತನಾಗಿದ್ದೆನು.

೨೬. ಧರ್ಮಶ್ರವಣದಲ್ಲಿ ನಿಷ್ಠನಾಗಿದ್ದ ನಾನು ಸಾಧುಗಳ ಸಭೆಯಲ್ಲಿ ಕಿವಿಯಾರ ಕೇಳಿ, ಖಂಡವಾಗದೆ ಇರುವ ಇಡಿಯ ಬಿಲ್ವಪತ್ರಗಳಿಂದ ಶಿವನನ್ನು ಪೂಜಿಸುತ್ತಿದ್ದೆನು.

೨೭. ಮದನದ್ವೇಷಿಯಾದ ಶಿವನಿಗೆ ಶ್ರೀವೃಕ್ಷವು (ಬಿಲ್ವವೃಕ್ಷವು) ಹೇಗೆ ಪ್ರಿಯವಾಗಿರುವುದೋ ಹಾಗೆ ಪ್ರಿಯವಾದುದು ಮಾಲತಿಯೂ ಅಲ್ಲ, ಮಂದಾರವೂ ಅಲ್ಲ, ತಾವರೆಯೂ ಅಲ್ಲ, ಮಲ್ಲಿಗೆಯೂ ಅಲ್ಲ.

೨೮. ಒಂದೇ ಒಂದು ಅಖಂಡ ಬಿಲ್ವಪತ್ರವನ್ನು ಶಿವನ ತಲೆಯಮೇಲೆ ಇಟ್ಟರೆ ಅದರಿಂದ ಮನುಷ್ಯರಿಗೆ ಲಕ್ಷ ಪುಷ್ಪಪೂಜೆಯಿಂದುಂಟಾಗುವಷ್ಟು ಪುಣ್ಯವು ಲಭಿಸುತ್ತದೆ.

೨೯. ಶ್ರದ್ಧೆಯಿಂದ ಕೂಡಿದವನಾಗಿ ತಾನೇ ಆಯ್ದು ತಂದ ಅಖಂಡಿತವಾದ ಬಿಲ್ವಪತ್ರಗಳಿಂದ ಲಿಂಗಕ್ಕೆ ಪೂಜೆಮಾಡಿ ಅದರ ಫಲವಾಗಿ ಸ್ವರ್ಗದಲ್ಲಿ ಒಂದು ಲಕ್ಷ ವರ್ಷಗಳ ವಾಸವುಂಟಾಗುತ್ತದೆ.

ಸಚ್ಛಾಸ್ತ್ರೇಭ್ಯ ಇತಿ ಶ್ರುತ್ವಾ ಪೂಜಯಾಮ್ಯಹಮೀಶ್ವರಂ ।
ತ್ರಿಕಾಲಂ ಶ್ರದ್ಧಯಾ ಪತ್ರೈಃ ಶ್ರೀವೃಕ್ಷಸ್ಯ ತ್ರಿಭಿಸ್ತ್ರಿಭಿಃ ॥ ೩೦ ॥
ತತೋ ವರ್ಷಶತಸ್ಯಾಂತೇ ತುತೋಽಷ ಶಶಿಶೇಖರಃ ।
ಪ್ರತ್ಯಕ್ಷೀಭೂಯ ಮಾಮಾಹ ಮೇಘಗಂಭೀರಯಾ ಗಿರಾ ॥ ೩೧ ॥
ಈಶ್ವರ ಉವಾಚ :—
ತುಷ್ಟೋಽಸ್ಮಿ ತವ ವಿಪ್ರೇಂದ್ರಾಖಂಡಬಿಲ್ವದಲಾರ್ಚನಾತ್ ।
ವೃಣೀಷ್ವಾಭಿಮತಂ ಯತ್ತೇ ದಾಸ್ಯಾಮ್ಯಪಿಚ ದುರ್ಲಭಂ ॥ ೩೨ ॥
ಅಖಂಡಬಿಲ್ವಪತ್ರೇಣ ಮಹಾತುಷ್ಟಿಃ ಪ್ರಜಾಯತೇ ।
ಏಕೇನಾಪಿ ಯಥಾನ್ಯೇಷಾಂ ತಥಾ ನ ಮಮ ಕೋಟಿಭಿಃ ॥ ೩೩ ॥
ಇತ್ಯುಕ್ತೋಽಹಂ ಭಗವತಾ ಶಂಭುನಾ ಸ್ವಮನಸ್ಥಿತಂ ।
ವೃಣೋಮಿ ಸ್ಮ ವರಂ ದೇವ ಕುರು ಮಾಮಜರಾಮರಂ ॥ ೩೪ ॥
ಅಥ ಲೀಲಾವಿಲಾಸೋ ಮಾಂ ತಥೇತ್ಯುಕ್ತ್ವಾ ವಿಚಾರಿತಂ ।
ಯಥಾವದ್ದರ್ಶನಂ ಪ್ರೀತಿಮಹಂ ಚ ಮಹತೀಂ ಗತಃ ॥ ೩೫ ॥

---

೩೦. ಹೀಗೆಂದು ಸಚ್ಛಾಸ್ತ್ರಗಳಿಂದ ಕೇಳಿದವನಾಗಿ, ಪ್ರಾತಃಕಾಲ, ಮಧ್ಯಾಹ್ನ, ಸಂಧ್ಯಾಕಾಲ ಈ ತ್ರಿಕಾಲಗಳಲ್ಲೂ ಶ್ರದ್ಧೆಯಿಂದ ಶ್ರೀವೃಕ್ಷದ ಮೂರು ಮೂರು ಪತ್ರಗಳಿಂದ ಈಶ್ವರನನ್ನು ಪೂಜಿಸುತ್ತಿದ್ದೆನು.

೩೧. ಬಳಿಕ ನೂರು ವರ್ಷಗಳ ಕಡೆಯಲ್ಲಿ ಶಶಿಶೇಖರನಾದ ಶಿವನು ಸಂತುಷ್ಟನಾಗಿ ಪ್ರತ್ಯಕ್ಷನಾಗಿ ಬಂದು ಮೇಘದಂತೆ ಗಂಭೀರವಾದ ಧ್ವನಿಯಿಂದ ಕೂಡಿದ ಮಾತುಗಳಿಂದ ನನ್ನನ್ನು ಕುರಿತು ಇಂತೆಂದನು :—

೩೨–೩೩. ಈಶ್ವರನು ಹೇಳಿದನು :—'ಎಲೈ ವಿಪ್ರಶ್ರೇಷ್ಠನೇ! ನೀನು ಮಾಡಿದ ಅಖಂಡ ಬಿಲ್ವಾರ್ಚನೆಯಿಂದ ನಾನು ಸಂತುಷ್ಟನಾಗಿದ್ದೇನೆ. ನಿನಗೆ ಏನುಬೇಕೋ ಆ ಅಭಿಮತವನ್ನು ಕೇಳಿಕೊ. ಅದು ದುರ್ಲಭವಾದುದಾದರೂ ಕೊಡುವೆನು. ಅಖಂಡವಾದ ಒಂದೇ ಒಂದು ಬಿಲ್ವಪತ್ರದಿಂದಲಾದರೂ ನನಗೆ ಮಹಾ ಸಂತುಷ್ಟಿಯುಂಟಾಗುತ್ತದೆ. ಅಷ್ಟು ಸಂತುಷ್ಟಿಯು ಬೇರೆ ಪತ್ರಗಳನ್ನು ಕೋಟಿಗಟ್ಟಳೆ ತಂದು ಪೂಜಿಸಿದರೂ ಉಂಟಾಗುವುದಿಲ್ಲ.'

೩೪. ಭಗವಂತನಾದ ಶಂಭುವಿನಿಂದ ಈ ರೀತಿ ಹೇಳಲ್ಪಟ್ಟ ನಾನು, ನನ್ನ ಮನಸ್ಸಿನಲ್ಲಿದ್ದ ವರವನ್ನು 'ನನ್ನನ್ನು ಮುಪ್ಪು ಮರಣಗಳಿಲ್ಲದವನನ್ನಾಗಿ ಮಾಡು' ಎಂದು ಕೇಳಿಕೊಂಡೆನು.

೩೫. ಬಳಿಕ ಲೀಲಾವಿಲಾಸಿಯಾದ ಪರಮೇಶ್ವರನು ಯಾವ ವಿಚಾರವನ್ನೂ ಮಾಡದೆ 'ಹಾಗೆಯೇ ಆಗಲಿ' ಎಂದು ನುಡಿದು ಅಂತರ್ಧಾನ ಹೊಂದಿದನು. ನಾನು ಕೂಡ ಮಹತ್ತಾದ ಪ್ರೀತಿಯನ್ನು ಪಡೆದೆನು.

ಕೃತಕೃತ್ಯಂ ತದಾತ್ಮಾನಮಜ್ಞಾಸಿಷಮಹಂ ಕ್ಷಿತೌ ।
ಏತಸ್ಮಿನ್ನೇವ ಕಾಲೇ ತು ಭೃಗುವಂಶ್ಯೋಽಭವದ್ದ್ವಿಜಃ ॥ ೩೬ ॥
ಅವದಾತತ್ರಿಜನ್ಮಾ ಸಾವಕ್ಷವಿದ್ಯಾಕ್ಷರಾರ್ಥವತ್ ।
ಸುದರ್ಶನೇತಿ ಪ್ರಥಿತಾ ಪ್ರಿಯಾ ತಸ್ಯಾಭವತ್ಸತೀ ॥ ೩೭ ॥
ಅತೀವ ಮುದಿತಾ ಪತ್ಯುರ್ಮುಖಂ ಪ್ರೇಕ್ಷ್ಯಾಸ್ಯ ದರ್ಶನಾತ್ ।
ತನಯಾ ದೇವಲಸ್ಯೈಷಾ ರೂಪೇಣಾಪ್ರತಿಮಾ ಭುವಿ ॥ ೩೮ ॥
ತಸ್ಯಾಂ ತಸ್ಮಾದಭೂತ್ಕನ್ಯಾ ನಿರ್ವಿಶೇಷಾನಿಜಾರಣೇಃ ।
ನಿವೃತ್ತಬಾಲಭಾವಾಭೂತ್ಕುಮಾರೀ ಯೌವನೋನ್ಮುಖೀ ॥ ೩೯ ॥
ನಾಲಂ ಬಭೂವ ತಾಂ ದಾತುಂ ತನಯಾಂ ಗುಣಶಾಲಿನೀಂ ।
ಕಸ್ಮೈಚಿ ಜನಕಃ ಸಾ ಚ ವಯಃಸಂಧೌ ಮಯೇಕ್ಷಿತಾ ॥ ೪೦ ॥
ಪ್ರವಿಶದ್ಯೌವನಾಭೋಗಭಾವೈರತಿಮನೋಹರಾ ।
ನಿರ್ವಾಸ್ಯಮಾನೈರಪರೈಸ್ತಿಲತಂದುಲಿತಾಕೃತಿಃ ॥ ೪೧ ॥
ಕ್ರೀಡಮಾನಾ ವಯಸ್ಯಾಭಿರ್ಲಾವಣ್ಯಪ್ರತಿಮೇವ ಸಾ ।
ವ್ಯಂಚಿತಯಮಹಂ ವಿಪ್ರ ತಾಂ ನಿರೀಕ್ಷ್ಯ ಸುಮಧ್ಯಮಾಂ ॥ ೪೨ ॥

---

೩೬. ಆಗ ಭೂಮಿಯಲ್ಲಿ ನಾನೇ ಕೃತಕೃತ್ಯನೆಂದು ತಿಳಿದುಕೊಂಡೆನು. ಅದೇ ಕಾಲದಲ್ಲಿ ಭೃಗುವಂಶದಲ್ಲಿ ಹುಟ್ಟಿದವನಾದ ಒಬ್ಬ ಬ್ರಾಹ್ಮಣನಿದ್ದನು.

೩೭–೩೮. ಆತನು ಮೂರು ಜನ್ಮಗಳಿಂದಲೂ ಪರಿಶುದ್ಧನು, ಅಕ್ಷವಿದ್ಯೆಯನ್ನು ಬಲ್ಲವನು; ಅಕ್ಷರಾರ್ಥವನ್ನರಿತವನು. ಸುದರ್ಶನೆಯೆಂದು ಪ್ರಸಿದ್ಧಳಾದ ಸತಿಯು ಆತನಿಗೆ ಪ್ರಿಯೆಯಾಗಿದ್ದಳು. ಪತಿಯ ಮುಖವನ್ನು ನೋಡಿ, ಆತನ ದರ್ಶನದಿಂದ ಆಕೆಯು ಅತ್ಯಂತ ಆನಂದಗೊಳ್ಳುತ್ತಿದ್ದಳು. ಆಕೆಯು ದೇವಲನ ಮಗಳು. ರೂಪದಲ್ಲಿ ಭೂಮಿಯಲ್ಲೇ ಎಣೆಯಿಲ್ಲದವಳಾಗಿದ್ದಳು.

೩೯. ಆಕೆಯಲ್ಲಿ ಆತನಿಂದ ಒಬ್ಬ ಕನ್ಯೆಯುದಿಸಿದಳು. ಆ ಕನ್ಯೆಯು ಆತನಿಗೆ ತನ್ನ ಅರಣಿಯಂತೆಯೇ ಪರಮಾದರಕ್ಕೆ ಪಾತ್ರಳಾಗಿದ್ದಳು. ಬಾಲಭಾವವನ್ನು ಕಳೆದು ಆ ಕುಮಾರಿಯು ಯೌವನೋನ್ಮುಖಿಯಾದಳು.

೪೦–೪೨. ಗುಣಶಾಲಿನಿಯಾದ ಆ ಮಗಳನ್ನು ಯಾರಿಗೂ ಕೊಡುವುದಕ್ಕೆ ಅವಳ ತಂದೆಯು ಸಮರ್ಥನಾಗಲಿಲ್ಲವು. ವಯಸ್ಸಿನ ಸಂಧಿಕಾಲದಲ್ಲಿ ಅವಳು ನನ್ನಿಂದ ನೋಡಲ್ಪಟ್ಟಳು.ಆಗತಾನೇ ಪ್ರವೇಶಮಾಡುತ್ತಿದ್ದ ಯೌವನಸಂಪತ್ತಿನ ಭಾವಗಳಿಂದ ಮನೋಹರಳಾಗಿಯೂ ಬಿಟ್ಟುಹೋಗುತ್ತಿದ್ದ ಇತರ ಭಾವಗಳಿಂದ ಸ್ಪೃಹಣೀಯವಾದ ಆಕೃತಿಯುಳ್ಳವಳಾಗಿಯೂ ಇದ್ದಳು. ತನ್ನ

ಅನನ್ಯಾಕೃತಿಮನ್ಯೋಽಸೌ ವಿಧಿರ್ಯೇನೇತಿ ನಿರ್ಮಿತಾ ।
ತತಃ ಸಾತ್ವಿಕಭಾವಾನಾಂ ತತ್ಕ್ಷಣಾದಸ್ಮಿ ಗೋಚರಃ ॥ ೪೩ ॥
ಪ್ರಾಪಿತೋ ಲೀಲಯಾಹತ್ಯ ಬಾಣೈಃ ಕುಸುಮಧನ್ವಿನಾ ।
ತತೋ ಮಯಾ ಸ್ಖಲದ್ವಾಚಂ ಪೃಷ್ಟ್ವಾ ಕಸ್ಯೇತಿ ತತ್ಸಖೀ ॥ ೪೪ ॥
ಪ್ರಾಹೇತಿ ಭೃಗುವಂಶಸ್ಯ ಕನ್ಯೇಯಂ ದ್ವಿಜಜನ್ಮನಃ ।
ಅನೂಢಾಽದ್ಯಾಪಿ ಕೇನಾಪಿ ಸಮಾಯಾತಾತ್ರ ಖೇಲಿತುಂ ॥ ೪೫ ॥
ತತಃ ಕುಸುಮಬಾಣೇನ ಶರವ್ರಾತೈರ್ಭೃಶಂ ಹತಃ ।
ಪಿತರಂ ಪ್ರಾಣತೋ ಗತ್ವಾ ಯಯಾಚೇ ತಾಂ ಭೃಗೂದ್ವಹಂ ॥ ೪೬ ॥
ಸ ಚ ಮಾಂ ಸದೃಶಂ ಜ್ಞಾತ್ವಾ ಶೀಲೇನ ಚ ಕುಲೇನ ಚ ।
ಅತೀವ ಚಾರ್ಥಿನಂ ಮಹ್ಯಂ ದದೌ ವಾಚಾ ಪುರಃ ಕ್ರಮಾತ್ ॥ ೪೭ ॥

---

ಸಮವಯಸ್ಕರಾದ ಸಖಿಯರೊಡನೆ ಕ್ರೀಡಿಸುತ್ತಿದ್ದ ಆಕೆಯು ಲಾವಣ್ಯದ ಪ್ರತಿಮೆಯಂತಿದ್ದಳು. ಸುಮಧ್ಯಮೆಯಾದ (ಸೊಗಸಾದ ಸೊಂಟದಿಂದ ಶೋಭಿಸುವವಳಾದ) ಆಕೆಯನ್ನು ಕಂಡು, ಎಲೈ ವಿಪ್ರನೇ! ನಾನು ಈ ರೀತಿ ಚಿಂತಿಸಿದೆನು :—

೪೩. 'ಇವಳು ಇತರರಿಗೆ ದೊರೆಯದಿರುವ ಸುಂದರಾಕೃತಿಯುಳ್ಳವಳಾಗಿದ್ದಾಳೆ. ವಿಧಿಯು ಏತಕ್ಕಾಗಿ ಇವಳನ್ನು ನಿರ್ಮಿಸಿರುವನೋ' ಹೀಗೆ ಯೋಚಿಸುತ್ತಿದ್ದಂತೆಯೇ ನನ್ನಲ್ಲಿ ಸಾತ್ತ್ವಿಕಭಾವಗಳು ತಕ್ಷಣವೇ ಕಾಣಿಸಿಕೊಂಡವು.

೪೪. ಕುಸುಮಬಾಣನಾದ ಮನ್ಮಥನು ಲೀಲೆಯಿಂದ ಬಾಣಹೊಡೆದು ಆ ಸಾತ್ತ್ವಿಕ ಭಾವಗಳಿಗೆ ನನ್ನನ್ನು ಗುರಿಮಾಡಿದನು. ಬಳಿಕ ನಾನು ಕಷ್ಟದಿಂದ ಜಾರಿಬರುವ ಮಾತುಗಳುಳ್ಳವನಾಗಿ 'ಇವಳು ಯಾರ ಮಗಳು?' ಎಂದು ಆಕೆಯ ಸಖಿಯನ್ನು ಪ್ರಶ್ನೆಮಾಡಿದೆನು.

೪೫. ಆಕೆಯು ಈ ರೀತಿ ಉತ್ತರ ಹೇಳಿದಳು :—'ಇವಳು ಭೃಗುವಂಶದಲ್ಲಿ ಹುಟ್ಟಿದವನಾದ ಬ್ರಾಹ್ಮಣನ ಮಗಳು. ಇವಳು ಈಗಲೂ ಅವಿವಾಹಿತಳು. ಯಾರೂ ಇವಳನ್ನು ಮದುವೆಮಾಡಿಕೊಂಡಿಲ್ಲ. ಇಲ್ಲಿಗೆ ಆಡುವದಕ್ಕಾಗಿ ಬಂದಿರುವಳು.'

೪೬. ಬಳಿಕ ಕುಸುಮಬಾಣನಾದ ಮನ್ಮಥನಿಂದ ಶರಪರಂಪರೆಗಳಿಂದ ಬಹುವಾಗಿ ಹೊಡೆಯಲ್ಪಟ್ಟು, ಭೃಗುಕುಲೋದ್ಧಾರಕನಾದ ಆಕೆಯ ತಂದೆಯ ಬಳಿಗೆ ಹೋಗಿ ನಮಸ್ಕರಿಸಿ ಆಕೆಯನ್ನು ನನಗೆ ಕೊಡೆಂದು ಯಾಚಿಸಿದೆನು.

೪೭. ಆತನು ಕೂಡ ಶೀಲದಲ್ಲಿಯೂ ಕುಲದಲ್ಲಿಯೂ ನಾನು ಆಕೆಗೆ ಅನುರೂಪನೆಂದು ತಿಳಿದು, ನಾನು ಆಕೆಯನ್ನಪೇಕ್ಷಿಸಿ ಬಹುಪ್ರಕಾರವಾಗಿ

ತತಃ ಸಾ ತನಯಾ ತಸ್ಯ ಭಾರ್ಗವಸ್ಯಾಶೃಣೋದಿತಿ ।
ದತ್ತಾಸ್ಮಿ ತಸ್ಮೈ ವಿಪ್ರಾಯ ವಿರೂಪಾಯೇತಿ ಜಲ್ಪತಾಂ ॥ ೪೮ ॥
ರೋರೂಯಮಾಣಾ ಜನನೀಮಾಹ ಪಶ್ಯ ಯಥಾಕೃತಂ ।
ಅತೀವಾನುಚಿತಂ ದತ್ತಾ ಜನಕೇನ ತಥಾವರೇ ॥ ೪೯ ॥
ವಿಷಮಾಲೋಡ್ಯ ಪಾಸ್ಯಾಮಿ ಪ್ರವೇಕ್ಷ್ಯಾಮಿ ಹುತಾಶನಂ ।
ವರಂ ನ ತು ವಿರೂಪಾಸ್ಯೋದ್ವೋಢುಂ ಭಾರ್ಯಾ ಕಥಂಚನ ॥ ೫೦ ॥
ತತಃ ಸಂಬೋಧ್ಯ ಜನನೀ ತಾಂ ಸುತಾಮಾಹ ಭಾರ್ಗವಂ ।
ನ ದೇಯಾಸ್ಮೈ ತ್ವಯಾ ಕನ್ಯಾ ವಿರೂಪಾಯೇತಿ ಚಾಗ್ರಹಾತ್ ॥ ೫೧ ॥
ಸ ವಲ್ಲಭಾವಚಃ ಶ್ರುತ್ವಾ ಧರ್ಮಶಾಸ್ತ್ರಾಣ್ಯವೇಕ್ಷ್ಯ ಚ ।
ದತ್ತಾಮಪಿ ಹರೇತ್ಪೂರ್ವಾಂ ಶ್ರೇಯಾಂಶ್ಚೇದ್ವರ ಆವ್ರಜೇತ್ ॥ ೫೨ ॥
ಅರ್ವಾಕ್ಶಿಲಾಕ್ರಮಣತೋ ನಿಷ್ಠಾ ಸ್ಯಾತ್ಸಪ್ತಮೇ ಪದೇ ।
ಇತಿ ವ್ಯವಸ್ಯ ಪ್ರದದಾವನ್ಯಸ್ಮೈ ತಾಂ ದ್ವಿಜಃ ಸುತಾಂ ॥ ೫೩ ॥

---

ಕೇಳುತ್ತಿದ್ದುದನ್ನು ಕಂಡು ಆಕೆಯನ್ನು ನನಗೆ ಕೊಡುವುದಾಗಿ ಕ್ರಮಪ್ರಕಾರ ವಾಗಿ ವಾಗ್ದಾನ ಮಾಡಿದನು.

೪೮. ಬಳಿಕ ಮಗಳು ವಿರೂಪಿಯಾದ ಆ ವಿಪ್ರನಿಗೆ ನನ್ನನ್ನು ಕೊಟ್ಟರೆಂದು ಆಡಿಕೊಳ್ಳುವವರ ಮಾತುಗಳನ್ನು ಕೇಳಿದಳು.

೪೯. ಗೋಳಾಡುತ್ತ ತಾಯಬಳಿ ಹೋಗಿ ಅವಳನ್ನು ಕುರಿತು ಹೀಗೆ ಹೇಳಿದಳು :—'ನೋಡು, ಏನುಮಾಡಿಬಿಟ್ಟಿದ್ದಾರೆ. ಅಂಥ ವರನಿಗೆ ನನ್ನನ್ನು ಕೊಟ್ಟು ತಂದೆಯು ಅತ್ಯಂತ ಅನುಚಿತವನ್ನು ಮಾಡಿಬಿಟ್ಟಿದ್ದಾನೆ.

೫೦. ನಾನು ವಿಷವನ್ನಾದರೂ ಕುಡಿಯುತ್ತೇನೆ, ಬೆಂಕಿಯಲ್ಲಾದರೂ ಬೀಳುತ್ತೇನೆ, ವಿರೂಪನಾಗಿರುವವನಿಗೆ ಮಾತ್ರ ಹೇಗೂ ಹೆಂಡತಿಯಾಗು ವುದಿಲ್ಲ.'

೫೧. ಆಗಲಾ ತಾಯಿಯು ಆ ಮಗಳನ್ನು ಸಮಾಧಾನಮಾಡಿ, ಭಾರ್ಗವ ನನ್ನು ಕುರಿತು, 'ಈ ಕುರೂಪಿಗೆ ನೀನು ಕನ್ಯೆಯನ್ನು ಕೊಡತಕ್ಕುದಲ್ಲ' ಎಂದು ಆಗ್ರಹಮಾಡಿ ಹೇಳಿದಳು.

೫೨. ಆತನು ತನ್ನ ವಲ್ಲಭೆಯ ಮಾತುಗಳನ್ನು ಕೇಳಿ, ಧರ್ಮಶಾಸ್ತ್ರಗಳನ್ನೂ ನೋಡಿ, 'ಹೆಚ್ಚು ಶ್ರೇಯಸ್ಕರನಾದ ವರನು ದೊರತು ಬಂದ ಪಕ್ಷದಲ್ಲಿ ಹಿಂದೆ ವಾಗ್ದಾನದಿಂದ ಕೊಟ್ಟಿರುವವಳನ್ನಾದರೂ ಹಿಂತೆಗೆದುಕೊಳ್ಳಬಹುದು (ಬೇರೆ ವರನಿಗೆ ಕೊಡಬಹುದು).

೫೩. ಶಿಲಾರೋಹಣಮಾಡಿದ ಬಳಿಕ ಏಳನೆಯ ಪದದಲ್ಲಿ (ಎಂದರೆ "ಸಪ್ತಪದಿ" ಅನುಷ್ಠಾನವು ಮುಗಿದಮೇಲೆ) ವಿವಾಹವು ಸ್ಥಿರವಾಗುತ್ತದೆ.'

ಶ್ವೋಭಾವಿನಿ ವಿವಾಹೇ ತು ತಚ್ಚ ಸರ್ವಂ ಮಯಾ ಶ್ರುತಂ ।
ತತೋಽತೀವ ವಿಲಕ್ಷ್ಯೋಽಹಂ ವಯಸ್ಯಾನಾಂ ಪುರಸ್ತದಾ ॥ ೫೪ ॥
ನಾಶಕಂ ವದನಂ ಭದ್ರೇ ತಥಾ ದರ್ಶಯಿತುಂ ನಿಜಂ ।
ಕಾಮಾರ್ತೋಽತೀವ ತಾಂ ಸುಪ್ತಾಮಹಾರ್ಷಂ ನಿಶಿ ತದಾಹರಂ ॥ ೫೫ ॥
ನೀತ್ವಾ ದುರ್ಗತಮೇಕಾಂತೇಽಕಾರ್ಷಮುದ್ವಾಹಿಕಂ ವಿಧಿಂ ।
ಗಾಂಧರ್ವೇಣ ವಿವಾಹೇನ ತತೋಽಕಾರ್ಷಂ ಹೃದೀಪ್ಸಿತಂ ॥ ೫೬ ॥
ಅನಿಚ್ಛಂತೀಂ ತದಾ ಬಾಲಾಂ ಬಲಾತ್ಸುರತ ಸೇವನಂ ।
ಅಥಾನುಪದಮಾಗತ್ಯ ತತ್ಪಿತಾ ಪ್ರಾತರೇವ ಮಾಂ ॥ ೫೭ ॥
ನಿಶ್ವಸ್ಯ ಸಂವೃತೋ ವಿಪ್ರೈಸ್ತಾಂ ವೀಕ್ಷ್ಯೋದ್ವಾಹಿತಾಂ ಸುತಾಂ ।
ಶಶಾಪ ಕುಪಿತೋ ಭದ್ರೇ ಮಾಂ ತದಾನೀಂ ಸ ಭಾರ್ಗವಃ ॥ ೫೮ ॥

ಭಾರ್ಗವ ಉವಾಚ :—

ನಿಶಾಚರಸ್ಯ ಧರ್ಮೇಣ ಯತ್ತ್ವಯೋದ್ವಾಹಿತಾ ಸುತಾ ।
ತಸ್ಮಾನ್ನಿಶಾಚರಃ ಪಾಪ ಭವ ತ್ವಮವಿಲಂಬಿತಂ ॥ ೫೯ ॥

---

ಹೀಗೆಂದು ವ್ಯವಸ್ಥೆಮಾಡಿಕೊಂಡು ಆ ದ್ವಿಜನು ಆ ಮಗಳನ್ನು ಬೇರೆಯೊಬ್ಬನಿಗೆ ಕೊಟ್ಟುಬಿಟ್ಟನು.

೫೪–೫೫. ನಾಳೆ ಮದುವೆ ನಡೆಯಲಿರುವುದೆಂಬ ಸಮಯದಲ್ಲಿ ಆ ವಿಷಯವೆಲ್ಲವೂ ನನಗೆ ತಿಳಿಯಬಂದಿತು. ಎಲೈ ಭದ್ರನೇ! ಆಗ ನಾನು ಬಹಳ ಲಜ್ಜಿತನಾಗಿ ಸ್ನೇಹಿತರೆದುರಿಗೆ ನನ್ನ ಮುಖವನ್ನೂ ತೋರಿಸಲಾರದವನಾಗಿ ಅತ್ಯಂತ ಕಾಮಾರ್ತನಾಗಿ ರಾತ್ರಿಯಲ್ಲಿ ಅವಳನ್ನು ಹರಣಮಾಡಿದೆನು.

೫೬. ದುರ್ಗತಮವಾದ (ಬಂದು ಸೇರಲು ಅತ್ಯಂತ ಕಷ್ಟಕರವಾದ) ಏಕಾಂತ ಪ್ರದೇಶಕ್ಕೆ ಆಕೆಯನ್ನು ತೆಗೆದುಕೊಂಡುಹೋಗಿ ಗಾಂಧರ್ವ ವಿವಾಹ ವಿಧಾನದಿಂದ ಅವಳನ್ನು ಮದುವೆ ಮಾಡಿಕೊಂಡೆನು. ಬಳಿಕ ನನ್ನ ಮನಸ್ಸಿನ ಬಯಕೆಯನ್ನೂ ಈಡೇರಿಸಿಕೊಂಡೆನು.

೫೭. ನನ್ನಲ್ಲಿ ಇಚ್ಛೆಯಿಲ್ಲದಿರುವ ಆ ಬಾಲೆಯಲ್ಲಿ ಸುರತಸೇವನೆ ಮಾಡಿದೆನು. ಅನಂತರದಲ್ಲಿ ಆಕೆಯ ತಂದೆಯು ನನ್ನನ್ನು ಹಿಂಬಾಲಿಸಿ ಮರುದಿನ ಪ್ರಾತಃಕಾಲದಲ್ಲಿಯೇ ನನ್ನ ಬಳಿಗೆ ಬಂದನು.

೫೮–೫೯. ಎಲೈ ಭದ್ರನೇ ! ವಿಪ್ರರಿಂದ ಸುತ್ತುವರಿಯಲ್ಪಟ್ಟವನಾಗಿ, ಮದುವೆಯಾಗಿ ಹೋಗಿರುವ ಆ ಮಗಳನ್ನು ಕಂಡು ಕೋಪಗೊಂಡವನಾಗಿ, ಆ ಭಾರ್ಗವನು ಆಗ ನನ್ನನ್ನು ಇಂತು ಶಪಿಸಿದನು. ಭಾರ್ಗವನಿಂತೆಂದನು :— 'ನಿಶಾಚರರ ಧರ್ಮವನ್ನನುಸರಿಸಿ ನನ್ನ ಮಗಳನ್ನು ನೀನು ಹೊತ್ತುಕೊಂಡು

ಇತಿಶಪ್ತಃ ಪ್ರಣಮ್ಯೈನಂ ಪಾದೋಪಗ್ರಹಪೂರ್ವಕಂ ।
ಹಾಹೇತಿಚ ಬ್ರುವನ್ ಗಾಢಂ ಸಾಶ್ರುನೇತ್ರಂ ಸಗದ್ಗದಂ ॥ ೬೦ ॥
ತತೋಽಹಮಬ್ರವಂ ಕಸ್ಮಾದದೋಷಂ ಮಾಂ ಭವಾನಿತಿ ।
ಶಪತೇ ಭವತಾ ದತ್ತಾ ಮಮ ವಾಚಾ ಪುರಾ ಸುತಾ ॥ ೬೧ ॥
ಸೋದ್ವಾಹಿತಾ ಮಯಾ ಕನ್ಯಾ ದಾನಂ ಸಕೃದಿತಿ ಸ್ಮೃತಿಃ ।
ಸಕೃಜ್ಜಲ್ಪಂತಿ ರಾಜಾನಃ ಸಕೃಜ್ಜಲ್ಪಂತಿ ಪಂಡಿತಾಃ ॥ ೬೨ ॥
ಸಕೃತ್ಕನ್ಯಾ ಪ್ರದೀಯಂತೇ ತ್ರೀಣ್ಯೇತಾನಿ ಸಕೃತ್ಸಕೃತ್ ।
ಕಿಂ ಚ ಪ್ರತಿಶ್ರುತಾರ್ಥಸ್ಯ ನಿರ್ವಾಹಸ್ತತ್ಸತಾಂ ವ್ರತಂ ॥ ೬೩ ॥
ಭವಾದೃಶಾನಾಂ ಸಾಧೂನಾಂ ತಸ್ಯ ತ್ಯಾಗೋ ವಿಗರ್ಹಿತಃ ।
ಪ್ರತಿಶ್ರುತ್ವಾ ತ್ವಯಾ ಲಬ್ಧಾ ತದಾ ಕಾಲವಿಂಯಂ ಮಯಾ ॥ ೬೪ ॥
ಉದ್ವೋಢಾ ಚಾಧುನಾ ನಾಹಮುಚಿತಂ ಶಾಪಭಾಜನಂ ।
ವೃಥಾ ಶಪಂತಿ ಮಹ್ಯಂ ಚ ಭವಂತಸ್ತದ್ವಿಚಾರ್ಯತಾಂ ॥ ೬೫ ॥

---

ಹೋಗಿ ಮದುವೆಯಾದುದರಿಂದ, ಎಲಾ ಪಾಪಿ! ಸ್ವಲ್ಪವೂ ತಡವಿಲ್ಲದಂತೆ ತಕ್ಷಣವೇ ನೀನು ನಿಶಾಚರನಾಗು.'

೬೦–೬೧. ಈ ರೀತಿ ಶಪಿಸಲ್ಪಟ್ಟವನಾದ ನಾನು ಆತನನ್ನು ಕಾಲುಹಿಡಿದು ಪ್ರಣಾಮಮಾಡಿ, 'ಹಾ! ಹಾ!' ಎಂದು ಕಣ್ಣೀರು ಸುರಿಸುತ್ತ ಗದ್ಗದಸ್ವರದಿಂದ ಕೂಡಿದವನಾಗಿ, ಇಂತೆಂದೆನು:—'ತಪ್ಪಿಲ್ಲದ ನನ್ನನ್ನು ತಾವೇಕೆ ಹೀಗೆ ಶಪಿಸುತ್ತೀರಿ? ತಾವು ಮಗಳನ್ನು ನನಗೆ ಕೊಡುವುದಾಗಿ ಮೊದಲೇ ಮಾತು ಕೊಟ್ಟದ್ದಿರಿ.

೬೨. ಹಾಗೆ ತಾವು ಮಾತು ಕೊಟ್ಟು ದಾನ ಮಾಡಿರುವ ಈ ಕನ್ಯೆಯನ್ನು ನಾನು ವಿವಾಹ ಮಾಡಿಕೊಂಡೆನು. 'ದಾನವು ಒಂದೇ ಸಲ'ವೆಂದು ಸ್ಮೃತಿಯು ಹೇಳುತ್ತದೆ. ರಾಜರು ಒಂದು ಸಲವೇ ನುಡಿಯುತ್ತಾರೆ. ಪಂಡಿತರೂ ಒಂದು ಸಲವೇ ನುಡಿಯುತ್ತಾರೆ.

೬೩. ಕನ್ಯೆಯರೂ ಒಂದೇ ಸಲ ಕೊಡಲ್ಪಡುತ್ತಾರೆ. ಈ ಮೂರೂ ಒಂದೊಂದೇ ಸಲ ನಡೆಯುವಂಥವು. ಇದೂ ಅಲ್ಲದೆ, ಮಾತುಕೊಟ್ಟ ವಿಷಯ ವನ್ನು ನೆರವೇರಿಸಿಕೊಡುವುದು ಸತ್ಪುರುಷರ ವ್ರತವು.

೬೪. ತಮ್ಮಂಥ ಸಾಧುಗಳಿಗೆ ಆ ವ್ರತವನ್ನು ತ್ಯಾಗಮಾಡುವುದು ಬಹು ನಿಂದನೀಯವಾದುದು. ನಿಮ್ಮಿಂದ ವಾಗ್ದಾನಮಾಡಿಕೊಟ್ಟವಳಾದ ಇವಳನ್ನು ಆ ಕಾಲದಲ್ಲಿಯೇ ನಾನು ಪಡೆದಿದ್ದೆನು.

೬೫. ಆದುದರಿಂದಲೇ ಈಗ ಇವಳನ್ನು ಮದುವೆ ಮಾಡಿಕೊಂಡೆನು.

**ಯೋ ದತ್ವಾ ಕನ್ಯಕಾಂ ವಾಚಾ ಪಶ್ಚಾದ್ಧರತಿ ದುರ್ಮತಿಃ ।**
**ಸ ಯಾತಿ ನರಕಂ ಚೇತಿ ಧರ್ಮಶಾಸ್ತ್ರೇಷು ನಿಶ್ಚಿತಂ ॥ ೬೬ ॥**
**ತದಾಕರ್ಣ್ಯ ವ್ಯವಸ್ಯಾಸೌ ತಥ್ಯಂ ಮದ್ವಚನಂ ಹೃದಾ ।**
**ಪಶ್ಚಾತ್ತಾಪಸಮಾಪೇತೋ ಮುನಿರ್ಮಾಮಿತ್ಯಥಾಬ್ರವೀತ್ ॥ ೬೭ ॥**
**ನ ಮೇ ಸ್ಯಾದನ್ಯಥಾ ವಾಣೀ ಉಲೂಕಸ್ತ್ವಂ ಭವಿಷ್ಯತಿ ।**
**ನಿಶಾಚರೋಽಹ್ಯುಲೂಕೋಽಪಿ ಪ್ರೋಚ್ಯತೇ ದ್ವಿಜಸತ್ತಮ ॥ ೬೮ ॥**
**ನ ಮೇ ಸ್ಯಾದನ್ಯಥಾ ವಾಣೀ ಉಲೂಕಸ್ತ್ವಂ ಭವಿಷ್ಯಸಿ ।**
**ತದಾ ತ್ವಂ ಪ್ರಕೃತಿಂ ವಿಪ್ರ ಪ್ರಾಪ್ಸ್ಯಸೀತ್ಯಬ್ರವೀತ್ಸಮಾಂ ॥ ೬೯ ॥**
**ತದ್ವಾಕ್ಯ ಸಮಕಾಲಂಚ ಕೌಶಿಕತ್ವಮಿದಂ ಮಮ ।**
**ಏತಾವಂತಿ ದಿನಾನ್ಯಾಸೀದಷ್ಟಾವಿಂಶದ್ದಿನಂ ವಿಧೇಃ ॥ ೭೦ ॥**

---

ಈ ಕಾರಣದ ಸಲುವಾಗಿ ನಾನು ತಮ್ಮ ಶಾಪಕ್ಕೆ ಪಾತ್ರನಾಗುವುದು ಉಚಿತವಲ್ಲವು. ನನ್ನನ್ನು ವ್ಯರ್ಥವಾಗಿ ಶಪಿಸುತ್ತಿದ್ದೀರಿ. ತಾವು ಅದನ್ನು ವಿಚಾರ ಮಾಡಿ ನೋಡಬೇಕು.

೬೬. "ಯಾವನು ಕನ್ಯಕೆಯನ್ನು ಮಾತಿನಿಂದ ಒಬ್ಬ ವರನಿಗೆ ದಾನಮಾಡಿ ಆಮೇಲೆ ದುರ್ಬುದ್ಧಿಯುಳ್ಳವನಾಗಿ ಹಾಗೆ ನಡೆಯದೆ ಆ ದಾನವನ್ನು ಹಿಂತೆಗೆದುಕೊಳ್ಳುತ್ತಾನೆಯೋ ಅವನು ನರಕಕ್ಕೆ ಹೋಗುತ್ತಾನೆ" ಎಂದು ಧರ್ಮಶಾಸ್ತ್ರದಲ್ಲಿ ನಿಶ್ಚಯಿಸಲ್ಪಟ್ಟಿದೆ."

೬೭. ಅದನ್ನು ಕೇಳಿ ನನ್ನ ಮಾತು ಸರಿಯೆಂದು ಮನಸ್ಸಿನಲ್ಲಿ ಅರಿತುಕೊಂಡವನಾಗಿ ಆತನು ಪಶ್ಚಾತ್ತಾಪ ಹೊಂದಿದನು. ಪಶ್ಚಾತ್ತಾಪಗೊಂಡು ಆ ಮುನಿಯು ನನ್ನನ್ನು ಕುರಿತು ಇಂತೆಂದನು :—

೬೮. 'ಎಲೈ ದ್ವಿಜಶ್ರೇಷ್ಠನೇ! ನನ್ನ ಮಾತು ಸಟೆಯಾಗದು. ನೀನು ಗೂಬೆಯಾಗುವೆ. ಗೂಬೆಯೂ ನಿಶಾಚರನೆಂದು ಹೇಳಲ್ಪಟ್ಟಿದೆ.

೬೯. ಯಾವಾಗ ಇಂದ್ರದ್ಯುಮ್ನ ಮಹಾರಾಜನನ್ನು ತಿಳಿಯುವುದರಲ್ಲಿಯೂ, ಆತನ ಕೀರ್ತಿಯನ್ನು ಉದ್ಧರಿಸುವ ಕಾರ್ಯದಲ್ಲಿಯೂ ನೀನು ನೆರವಾಗುವೆಯೋ, ಆಗ ನೀನು ನಿನ್ನ ಸ್ವರೂಪವನ್ನು ಪಡೆಯುವೆ' ಹೀಗೆಂದು ಆತನು ನನ್ನನ್ನು ಕುರಿತು ಹೇಳಿದನು.

೭೦. ಅಯ್ಯಾ ಗೆಳೆಯರೇ ! ಆ ಬ್ರಾಹ್ಮಣನು ಆ ಮಾತಾಡುತ್ತಿದ್ದಾಗಲೇ ನನಗೆ ಗೂಬೆಯ ರೂಪವುಂಟಾಯಿತು. ಇಷ್ಟು ದಿನಗಳೂ — ಬ್ರಹ್ಮನ ಇಪ್ಪತ್ತೆಂಟು ದಿನಗಳೂ — ಆ ರೂಪವೇ ನನಗೆ ಉಂಟಾಗಿದೆ.

ಬಿಲ್ವೀದಲೈರಿತಿ ಪುರಾ ಶಶಿಶೇಖರಸ್ಯ
ಸಂಪೂಜನೇನ ಮಮ ದೀರ್ಘತರಂ ಕಿಲಾಯುಃ ।
ಸಂಜಾತಮತ್ರ ಚ ಜುಗುಪ್ಸಿತಮಸ್ಯ ಶಾಪಾ
ತ್ಕೈಲಾಸರೋಧಸಿ ನಿಶಾಚರರೂಪಮಾಸೀತ್ ॥೭೧॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ಮಹೀನದೀ
ಪ್ರಾದುರ್ಭಾವೇ ಬಿಲ್ವದಲಮಾಹಾತ್ಮ್ಯ ವರ್ಣನಂ" ನಾಮ
ಅಷ್ಟಮೋಽಧ್ಯಾಯಃ

---

೭೧. ಪೂರ್ವದಲ್ಲಿ ಬಿಲ್ವದಳಗಳಿಂದ ಶಶಿಶೇಖರನಾದ ಶಿವನನ್ನು ಪೂಜೆ ಮಾಡಿದುದರಿಂದ ನನಗೆ ಬಹು ದೀರ್ಘವಾದ ಆಯುಸ್ಸುಂಟಾಯಿತು. ಈತನ ಶಾಪದಿಂದ ಕೈಲಾಸಪರ್ವತದ (ಈ ಗಂಗಾನದೀ ತೀರದಲ್ಲಿ) ನಿಶಾಚರನಾಗಿರುವ ಈ ಜುಗುಪ್ಸೆಯ ರೂಪವುಂಟಾಯಿತು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಬಿಲ್ವದಳಮಾಹಾತ್ಮ್ಯ ವರ್ಣನ"ವೆಂಬ ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ನವಮೋಽಧ್ಯಾಯಃ

## ಮಹೀಪ್ರಾದುರ್ಭಾವೇ ದಮನಕ ಮಾಹಾತ್ಮ್ಯ ವರ್ಣನಂ

ಉಲೂಕ ಉವಾಚ:—

ಇತೀದಮುಕ್ತಮಖಿಲಂ ಪೂರ್ವಜನ್ಮಸಮುದ್ಭವಂ ।
ಸ್ವರೂಪಮಾಯುಷೋ ಹೇತುಃ ಕೌಶಿಕತ್ವಸ್ಯ ಚೇತಿ ಮೇ ॥ ೧ ॥
ಇತ್ಯುಕ್ತ್ವಾ ವಿರತೇ ತಸ್ಮಿನ್ ಪುರುಹೂತಸನಾಮನಿ ।
ನಾಡೀಜಂಘೋ ಬಕೋ ಮಿತ್ರಮಾಹ ತಂ ದುಃಖಿತೋ ವಚಃ ॥ ೨ ॥

ನಾಡೀಜಂಘ ಉವಾಚ—

ಯದರ್ಥಂ ವಯಮಾಯಾತಾಸ್ತತ್ರ ಸಿದ್ಧಂ ಮಹಾಮತೇ ।
ಕಾರ್ಯಂ ತನ್ಮರಣಂ ನೂನಂ ತ್ರಯಾಣಾಮುಪ್ಯುಪಾಗತಂ ॥ ೩ ॥
ಇಂದ್ರದ್ಯುಮ್ನಾಪರಿಜ್ಞಾನೇ ಭದ್ರ ಕೋಽಯಂ ಮುಮೂರ್ಷತಿ ।
ತಸ್ಯಾನುಮಿತ್ರಂ ಮಾರ್ಕಂಡಸ್ತಂ ಚಾನ್ವಹಮಪಿ ಸ್ಫುಟಂ ॥ ೪ ॥
ಮಿತ್ರಕಾರ್ಯೇ ವಿನಿರ್ವೃತ್ತೇ ಮ್ರಿಯಮಾಣಂ ನಿರೀಕ್ಷತೇ ।
ಯೋ ಮಿತ್ರಂ ಜೀವಿತಂ ತಸ್ಯ ಧಿಗಸ್ನಿಗ್ಧಂ ದುರಾತ್ಮನಃ ॥ ೫ ॥

---

### ಕನ್ನಡದ ಅನುವಾದ

#### ಮಹೀಪ್ರಾದುರ್ಭಾವ — ದಮನಕ ಮಾಹಾತ್ಮ್ಯ

೧. ಉಲೂಕನಿಂತೆಂದನು:—"ಹೀಗೆ ಪೂರ್ವಜನ್ಮದಲ್ಲಿ ನಡೆದ ಸಂಗತಿಗಳನ್ನೆಲ್ಲ—ನನ್ನ ಆಯುಸ್ಸಿಗೆ ಕಾರಣವೇನೆಂಬುದನ್ನೂ, ಈ ಗೂಬೆಯ ರೂಪವು ಬಂದುದಕ್ಕೆ ಕಾರಣವೇನೆಂಬುದನ್ನೂ—ಪೂರ್ತಿಯಾಗಿ ಹೇಳಿರುವೆನು."

೨. ಹೀಗೆ ನುಡಿದು ಆ ಉಲೂಕನು ಸುಮ್ಮನಾಗಲು, ನಾಡೀಜಂಘನೆಂಬ ಬಕನು ದುಃಖಿತನಾಗಿ ಆ ಮಿತ್ರನನ್ನು ಕುರಿತು ಇಂತು ನುಡಿದನು.

೩. ನಾಡೀಜಂಘನಿಂತೆಂದನು:—"ಎಲೈ ಮಹಾಮತಿಯೇ! ನಾವು ಯಾವ ಉದ್ದೇಶಕ್ಕಾಗಿ ಇಲ್ಲಿಗೆ ಬಂದೆವೋ ಆ ಕಾರ್ಯವು ಸಿದ್ಧಿಯಾಗಲಿಲ್ಲವು; ಆದುದರಿಂದ ನಮ್ಮ ಮೂವರಿಗೂ ಮರಣವು ಹತ್ತಿರ ಬಂದಿರುವುದೇ ನಿಜ.

೪–೫. ಇಂದ್ರದ್ಯುಮ್ನನ ವಿಷಯವನ್ನು ಅರಿಯಲಾಗದಿದ್ದಲ್ಲಿ ಈ ಭದ್ರಕನು ಮರಣಹೊಂದುತ್ತಾನೆ. ಅವನನ್ನನುಸರಿಸಿ ಮಿತ್ರನಾದ ಮಾರ್ಕಂಡನು ಪ್ರಾಣ ಬಿಡುತ್ತಾನೆ. ಅವನನ್ನು ಹಿಂಬಾಲಿಸಿ ನಾನೂ ಕೂಡ ಅಸುವನ್ನು ತೊರೆಯುತ್ತೇನೆ. ಇದು ಖಂಡಿತವು. ಮಿತ್ರಕಾರ್ಯವು ನೆರವೇರದಿರಲಾಗಿ ಆ ಮಿತ್ರನು ಮರಣಕ್ಕೆ ಗುರಿಯಾಗುತ್ತಿರುವುದನ್ನು ಯಾವನು ನೋಡುತ್ತಿರುವನೋ ಆ ದುರಾತ್ಮನ ಸ್ನೇಹರಹಿತವಾದ ಜೀವನಕ್ಕೆ ಧಿಕ್ಕಾರ!

ತದೇತಾವನುಯಾಸ್ಯಾಮಿ ಮ್ರಿಯಮಾಣಾವಹಂ ದ್ವಿಜ ।
ಆಪೃಚ್ಛೇ ತ್ವಾಂ ನಮಸ್ಕಾರ ಆಶ್ಲೇಷಶ್ಚಾಥ ಪಶ್ಚಿಮಃ ॥ ೬ ॥
ಪ್ರತಿಜ್ಞಾತಮನಿಷ್ಪಾದ್ಯ ಮಿತ್ರಸ್ಯಾಭ್ಯಾಗತಸ್ಯ ಚ ।
ಕಥಂ ಕಾರಂ ನ ಲಜ್ಜಂತೇ ಹತಾಶಾ ಜೀವಿತೇಪ್ಸವಃ ॥ ೭ ॥
ತಸ್ಮಾದ್ವಹ್ನಿಂ ಪ್ರವೇಕ್ಷ್ಯಾಮಿ ಸಾರ್ಧಮಾಭ್ಯಾಮಸಂಶಯಂ ।
ಆಪೃಷ್ಟೋಽಸ್ಯಧುನಾ ಸ್ನೇಹಾನ್ಮಮ ದೇಹಿ ಜಲಾಂಜಲಿಂ ॥ ೮ ॥
ಇತ್ಯುಕ್ತವತ್ಯುಲೂಕೋಽಸೌ ನಾಡೀಜಂಘೇ ಸಗದ್ಗದಂ ।
ಸಾಶ್ರುನೇತ್ರಂ ಸ್ಥಿರೀಭೂಯ ಪ್ರಾಹ ವಾಚಂ ಸುಧಾಮುಚಂ ॥ ೯ ॥

ಉಲೂಕ ಉವಾಚ :—

ಮಯಿ ಜೀವತಿ ಮಿತ್ರೇ ಮೇ ಭವಾನ್ಮರಣಮೇತಿ ಚ ।
ಅದ್ಯಪ್ರಭೃತಿ ಕಸ್ತರ್ಹಿ ಹೃದಾ ಮಮ ಲಭಿಷ್ಯತಿ ॥ ೧೦ ॥
ಅಸ್ತ್ಯುಪಾಯೋ ಮಹಾನತ್ರ ಗಂಧಮಾದನ ಪರ್ವತೇ ।
ಮತ್ತಶ್ಚಿರಾಯುರ್ಮಿತ್ರೋಽಸ್ತಿ ಗೃಧ್ರಃ ಪ್ರಾಣಸಮಃ ಸುಹೃತ್ ॥ ೧೧ ॥

---

೬. ಆದುದರಿಂದ ಎಲೈ ದ್ವಿಜನೇ! ಮರಣಹೊಂದುವವರಾದ ಇವರನ್ನು ಬೆಂಬತ್ತಿ ನಾನೂ ಹೋಗುತ್ತೇನೆ. ಇದಕ್ಕೆ ನಿನ್ನ ಅಪ್ಪಣೆಯನ್ನು ಬೇಡುತ್ತೇನೆ. ನಿನಗೆ ನಮಸ್ಕಾರ; ಇದೋ ಆಲಿಂಗನವು.

೭. ಮಿತ್ರನೂ, ಅಭ್ಯಾಗತನೂ ಆದವನ ಇಷ್ಟಸಂಪಾದನೆಗಾಗಿ ಪ್ರತಿಜ್ಞೆ ಮಾಡಿ ಅದನ್ನು ನೆರವೇರಿಸದೆ ಹತಾಶರಾಗಿ, ಜೀವಿಸಬಯಸುವವರು ಹೇಗೆ ತಾನೇ ನಾಚಿಕೊಳ್ಳದಿರುವರು!

೮. ಆದುದರಿಂದ ಇವರೊಡನೆ ನಾನು ನಿಸ್ಸಂಶಯವಾಗಿ ಅಗ್ನಿಪ್ರವೇಶ ಮಾಡುತ್ತೇನೆ. ಈಗ ಸ್ನೇಹದಿಂದ ನಿನ್ನನ್ನು ನಾನು ಕೇಳಿಕೊಳ್ಳುತ್ತಿದ್ದೇನೆ. ನನಗೆ ನೀನು ಜಲಾಂಜಲಿಯನ್ನು ನೀಡು.”

೯. ಇಂತೆಂದು ನಾಡೀಜಂಘನು ನುಡಿಯಲಾಗಿ, ಆ ಉಲೂಕನು ಗದ್ಗದ ಸ್ವರದಿಂದ ಕಣ್ಣೀರು ತಂದುಕೊಂಡು ಸ್ಥಿರನಾಗಿ ಅಮೃತವನ್ನು ಸುರಿಸುವಂಥ ಮಾತನ್ನಾಡಿದನು.

೧೦. ಉಲೂಕನಿಂತೆಂದನು :— “ಮಿತ್ರನಾದ ನಾನು ಬದುಕಿರುವಲ್ಲಿ ನೀನು ಮರಣವನ್ನೈದುವುದೆಂದರೇನು? ನೀನು ಮಡಿದರೆ ಇಂದಿನಿಂದ ಮುಂದೆ ನನ್ನ ಹೃದಯದ ಪ್ರೀತಿಯನ್ನು ಪಡೆಯುವವರಾರು?

೧೧–೧೨. ಈ ಕಾರ್ಯಸಾಧನೆಗೆ ಮಹತ್ತಾದ ಉಪಾಯವೊಂದುಂಟು. ಗಂಧಮಾದನ ಪರ್ವತದಲ್ಲಿ ನನಗಿಂತಲೂ ಚಿರಾಯುವಾದ ಮಿತ್ರನೊಬ್ಬನಿರುವನು; ಪ್ರಾಣಸಮಸ್ನೇಹಿತನಾದ ಗೃಧ್ರನೇ ಆತನು. ನಮ್ಮ ಅಭೀಷ್ಟವಸ್ತು

ಸ ವಿಜ್ಞಾಸ್ಯತಿ ವೋಽಭೀಷ್ಟಮಿಂದದ್ಯುಮ್ನಂ ಮಹೀಪತಿಂ ।
ಇತ್ಯುಕ್ತ್ವಾ ಪುರತಸ್ತಸ್ಥಾವುಲೂಕಃ ಸ ಚ ಭೂಪತಿಃ ॥ ೧೨ ॥
ಮಾರ್ಕಂಡೇಯಃ ಬಕಶ್ಚೈವ ಪ್ರಯಯುರ್ಗಂಧಮಾದನಂ ।
ತಮಾಯಾಂತಮಥಾಲೋಕ್ಯ ವಯಸ್ಯಂ ಪುರತಃಸ್ಥಿತಿಂ ॥ ೧೩ ॥
ಸ್ವಕುಲಾ ಯಾತ್ಪ್ರಹೃಷ್ಟೋಽಸೌ ಗೃಧ್ರಃ ಸಮುಖಮಾಯಯೌ ।
ಕೃತಸಂವಿದಸೌ ಪೂರ್ವಂ ಸ್ವಾಗತಾಸನಭೋಜನೈಃ ॥ ೧೪ ॥
ಉಲೂಕಂ ಗೃಧ್ರರಾಜಶ್ಚ ಕಾರ್ಯಂ ಪಪ್ರಚ್ಛ ತಂ ತಥಾ ।
ಸ ಚಾಚಖ್ಯಾವಯಂ ಮಿತ್ರಂ ಬಕೋಽಮೋಽಸ್ಯ ಮುನಿಃ ಕಿಲ ॥ ೧೫ ॥
ಮುನೇರಪಿ ತೃತೀಯೋಽಯಂ ಮಿತ್ರಂ ಚಾಥೋಽಯಮುದ್ಯತಃ ।
ಇಂದ್ರದ್ಯುಮ್ನ ಪರಿಜ್ಞಾನೇ ಸ್ವಯಂ ಜೀವತಿ ನಾನ್ಯಥಾ ॥ ೧೬ ॥
ವಹ್ನಿಂ ಪ್ರವೇಕ್ಷ್ಯತೇ ವ್ಯಕ್ತಮಯಂ ತದನು ವೈ ವಯಂ ।
ಮಯಾ ನಿಷಿದ್ಧೋಽಯಂ ಜ್ಞಾತ್ವಾ ತ್ವಾಂ ಚಿರಂತನಮಾತ್ಮನಾ ॥ ೧೭ ॥
ತಚ್ಚೇಜ್ಞಾನಾಸಿ ತಂ ಬ್ರೂಹಿ ಚತುರ್ಣಾಂ ದೇಹಿ ಜೀವಿತಂ ।
ಸಂರಕ್ಷ್ಯಾಸ್ಮಾಹಿ ಸತ್ಕೀರ್ತಿಂ ಕ್ಷಯಾ ಚಾಖಿಲಪಾಪ್ಮನಃ ॥ ೧೮ ॥

---

ವಾದ ಇಂದ್ರದ್ಯುಮ್ನ ಮಹಾರಾಜನನ್ನು ಅವನು ತಿಳಿದಿರಬೇಕು." ಹೀಗೆಂದು ನುಡಿದು ಉಲೂಕನು ಎದುರಿಗೆ ಬಂದು ನಿಂತನು. ಆ ಭೂಪತಿಯೂ, ಮಾರ್ಕಂಡೇಯನೂ, ಬಕನೂ ಗಂಧಮಾದನ ಪರ್ವತಕ್ಕೆ ಪ್ರಯಾಣ ಮಾಡಿದರು. ಆಗ ಅವರಿಗೆ ಮುಂದಾಳಾಗಿ ತನ್ನೆಡೆಗೆ ಬರುತ್ತಿರುವ ಗೆಳೆಯನನ್ನು ಕಂಡು ಅತ್ಯಂತ ಹರ್ಷಗೊಂಡ ಆ ಗೃಧ್ರನು ತನ್ನ ಗೂಡಿನಿಂದ ಹೊರಗೆ ಬಂದು ಅವರ ಸಮ್ಮುಖಕ್ಕೆ ಬಂದನು. ಮೊದಲು ಸ್ವಾಗತವನ್ನು ನುಡಿದು ಪೀಠ ಮತ್ತು ಭೋಜನಗಳಿಂದ ಉಪಚಾರ ಮಾಡಿದ ಬಳಿಕ ಆ ಗೃಧ್ರರಾಜನು ಆ ಉಲೂಕನನ್ನು ಬಂದ ಕಾರ್ಯವೇನೆಂದು ಪ್ರಶ್ನೆಮಾಡಿದನು. ಆ ಉಲೂಕನು ಇಂತು ಮರುನುಡಿದನು :—"ಈ ಬಕನು ನನ್ನ ಮಿತ್ರನು. ಇವನಿಗೆ ಈ ಮುನಿಯು ಸ್ನೇಹಿತನು. ಮುನಿಗೆ ಕೂಡ ಈ ಮೂರನೆಯವನು ಗೆಳೆಯನು. ನಮ್ಮ ಉದ್ದೇಶವಿದು: ಇಂದ್ರದ್ಯುಮ್ನನನ್ನರಿತರೆ ಈತನು ಬದುಕುತ್ತಾನೆ. ಇಲ್ಲವಾದರೆ ಬದುಕುವುದಿಲ್ಲವು. ಅಗ್ನಿಯನ್ನು ಪ್ರವೇಶಿಸುತ್ತಾನೆ. ಇದು ಸ್ಪಷ್ಟವಾದುದು. ಆ ಬಳಿಕ ನಾವು ಅಗ್ನಿಪ್ರವೇಶ ಮಾಡುತ್ತೇವೆ. ನನಗಿಂತಲೂ ನೀನು ಚಿರಂಜೀವಿಯೆಂಬುದನ್ನು ನೆನೆದು ನಾನು ಇವನನ್ನು ಅಗ್ನಿಪ್ರವೇಶ ಮಾಡದಂತೆ ತಡೆದೆನು.

೧೮. ಆದುದರಿಂದ ಆ ಇಂದ್ರದ್ಯುಮ್ನನನ್ನು ಬಲ್ಲೆಯಾದರೆ ಹೇಳು; ನಾಲ್ವರಿಗೂ ಪ್ರಾಣದಾನ ಮಾಡು; ನಮ್ಮನ್ನು ಸಂರಕ್ಷಿಸಿ ಒಳ್ಳೆಯ ಕೀರ್ತಿಯನ್ನು ಪಡೆದುಕೊ; ಸಮಸ್ತ ಪಾಪಕ್ಕೂ ನಾಶವನ್ನುಂಟುಮಾಡಿಕೊ."

ಗೃಧ್ರ ಉವಾಚ:—

ಷಟ್ ಪಂಚಾಶದ್ವ್ಯತೀತಾ ಮೇ ಕಲ್ಪಾ ಜಾತಸ್ಯ ಕೌಶಿಕ ।
ನ ದೃಷ್ಟೋ ನ ಶ್ರುತೋಽಸ್ಮಾಭಿರಿಂದ್ರದ್ಯುಮ್ನೋ ಮಹೀಪತಿಃ ॥ ೧೯ ॥
ತಚ್ಛ್ರುತ್ವಾ ವಿಸ್ಮಯಾವಿಷ್ಟ ಇಂದ್ರದ್ಯುಮ್ನೋಽಪಿ ದುಃಖಿತಃ ।
ಪಪ್ರಚ್ಛ ಜೀವಿತೇ ಹೇತುಮತಿಮಾತ್ರೇ ವಿಹಂಗಮಂ ॥ ೨೦ ॥
ಶ್ರುಣು ಭದ್ರ ಪುರಾ ಜಾತೋ ಮರ್ಕಟೋಽಹಂ ಚ ಚಾಪಲಃ ।
ಆಸಂ ಕದಾಚಿದಭವದ್ವಸಂತೋಥ ಋತುಃ ಕ್ರಮಾತ್ ॥ ೨೧ ॥
ತತ್ರಾಗ್ರೇ ದೇವದೇವಸ್ಯ ವನಮಧ್ಯೇ ಶಿವಾಲಯೇ ।
ಭವೋದ್ಭವಸ್ಯ ಪುರತೋ ಜಗದ್ಯೋಗೇಶ್ವರಾಭಿಧೇ ॥ ೨೨ ॥
ಚತುರ್ದಶೀ ದಿನೇ ಹಸ್ತನಕ್ಷತ್ರೇ ಹರ್ಷಣಾಭಿಧೇ ।
ಯೋಗೇ ಚೈತ್ರೇ ಸಿತೇ ಪಕ್ಷ ಆಸೀದ್ದಮನಕೋತ್ಸವಃ ॥ ೨೩ ॥
ಅತ್ರ ಸೌವರ್ಣದೋಲಾಯಾಂ ಲಿಂಗ ಆರೋಪಿತೇ ಜನೈಃ ।
ನಿಶಾಯಾಮಧಿರುಹ್ಯಾಽಹಂ ದೋಲಾಂ ತಾಂ ಚ ವ್ಯಚಾಲಯಂ ॥ ೨೪ ॥

---

೧೯. ಗೃಧ್ರನಿಂತೆಂದನು:—"ಎಲೈ ಕೌಶಿಕನೇ! ನನಗೆ ಹುಟ್ಟಿದಂದಿನಿಂದ ಐವತ್ತಾರು ಕಲ್ಪಗಳು ಕಳೆದವು. ಆದರೂ ಇಂದ್ರದ್ಯುಮ್ನ ಮಹಾರಾಜನನ್ನು ನಾನು ಕಂಡಿಲ್ಲವು. ಅವನ ವಿಷಯವನ್ನು ಕೇಳಿಯೂ ಇಲ್ಲವು" ಎಂದನು.

೨೦. ಅದನ್ನು ಕೇಳಿ ಇಂದ್ರದ್ಯುಮ್ನನು ಅತ್ಯಂತ ವಿಸ್ಮಯಹೊಂದಿದನಲ್ಲದೆ, ದುಃಖಿತನೂ ಆದನು. ತರುವಾಯ ಅವನು ಅಷ್ಟೊಂದು ಹೆಚ್ಚು ಕಾಲದ ಜೀವಿತಕ್ಕೆ ಕಾರಣವೇನೆಂದು ಆ ಗೃಧ್ರನನ್ನು ಪ್ರಶ್ನೆಮಾಡಿದನು.

೨೧. ಗೃಧ್ರನಿಂತೆಂದನು:— "ಅಯ್ಯಾ ಭದ್ರನೇ! ಕೇಳು. ಹಿಂದೆ ನಾನು ಕಪಿಯಾಗಿ ಹುಟ್ಟಿದ್ದೆನು. ಬಹು ಚಪಲನಾಗಿದ್ದೆನು. ಒಂದಾನೊಂದು ಕಾಲದಲ್ಲಿ ಕ್ರಮವಾಗಿ ವಸಂತಋತುವು ಪ್ರಾಪ್ತವಾಯಿತು.

೨೨–೨೩. ದೇವದೇವನ ವನಮಧ್ಯದ ಶಿವಾಲಯದಲ್ಲಿ ಭವೋದ್ಭವನ ಎದುರಿಗೆ ಜಗದ್ಯೋಗೇಶ್ವರನೆಂಬ ಹೆಸರುಳ್ಳ ಆ ಸ್ವಾಮಿಗೆ ಚತುರ್ದಶೀ ದಿನದಲ್ಲಿ ಹಸ್ತಾ ನಕ್ಷತ್ರದಲ್ಲಿ ಹರ್ಷಣವೆಂಬ ಯೋಗದಲ್ಲಿ ಚೈತ್ರಮಾಸದ ಶುಕ್ಲಪಕ್ಷದಲ್ಲಿ ದಮನಕೋತ್ಸವವು ನಡೆಯಿತು.

೨೪. ಅಲ್ಲಿ ಚಿನ್ನದ ಉಯ್ಯಾಲೆಯ ಮೇಲೆ ಲಿಂಗವನ್ನು ಜನರು ಬಿಜಯ ಮಾಡಿಸಿರಲಾಗಿ ರಾತ್ರಿಯ ಕಾಲದಲ್ಲಿ ನಾನು ಉಯ್ಯಾಲೆಯ ಮೇಲೇರಿ ಅದನ್ನು ತೂಗಿದೆನು.

ನಿಸರ್ಗಜ್ಞಾತಿಚಾಪಲ್ಯಾಚ್ಚಿರಕಾಲಂ ಪುನಃ ಪುನಃ ।
ಅಥ ಪ್ರಭಾತ ಆಯಾತಾ ಜನಾಃ ಪೂಜಾಕೃತೇ ಕಪಿಂ ॥ ೨೫ ॥
ದೋಲಾಧಿರೂಡಮಾಲೋಕ್ಯ ಲಕುಟೈರ್ಮಾಂ ವ್ಯತಾಡಯನ್ ।
ದೋಲಾಸಂಸ್ಥಿತ ಏವಾಹಂ ಪ್ರಮಿತಃ ಶಿವಮಂದಿರೇ ॥ ೨೬ ॥
ತೇಷಾಂ ಪ್ರಹಾರೈಃ ಸುದೃಢೈರ್ಬಹುಭಿರ್ವಜ್ರದುಃಸಹೈಃ ।
ಶಿವಾಂದೋಲನಮಾಹಾತ್ಮ್ಯಾಜ್ಜಾತೋಽಹಂ ನೃಪಮಂದಿರೇ ॥ ೨೭ ॥
ಕಾಶೀಶ್ವರಸ್ಯ ತನಯಃ ಪ್ರತೀತೋಽಸ್ಮಿ ಕುಶಧ್ವಜಃ ।
ಜಾತಿಸ್ಮರಸ್ತತೋ ರಾಜ್ಯೇ ಕ್ರಮಾತ್ಪ್ರಾಪ್ಯಾಹಮೈಶ್ವರಂ ॥ ೨೮ ॥
ಕಾರಯಾಮಿ ಧರಾಪೃಷ್ಠೇ ಚೈತ್ರೇ ದಮನಕೋತ್ಸವಂ ।
ಯಥಾ ಯಥಾ ದೋಲಯತಿ ಶಿವಂ ದೋಲಾಸ್ಥಿತಂ ನರಃ ॥ ೨೯ ॥
ತಥಾ ತಥಾಽಶುಭಂ ಯಾತಿ ಪುಣ್ಯಮಾಯಾತಿ ಭದ್ರಕ ।
ಶಿವದೀಕ್ಷಾಮುಪಾಗಮ್ಯಾಖಿಲಸಂಸ್ಕಾರಸಂಸ್ಕೃತಃ ॥ ೩೦ ॥
ಶಿವಾಚಾರ್ಯೈರ್ವಿಮುಕ್ತೋಽಹಂ ಪಶುಪಾಶೈಸ್ತದಾಗಮಾತ್ ।
ನಿರ್ವಾಹದೀಕ್ಷಾಪರ್ಯಂತಾನ್ ಸಂಸ್ಕಾರಾನ್ಪ್ರಾಪ್ಯ ಸರ್ವತಃ ॥ ೩೧ ॥

---

೨೫–೨೬. ಸ್ವಾಭಾವಿಕವಾದ ಜಾತಿ ಚಾಪಲ್ಯದಿಂದ ಮತ್ತೆ ಮತ್ತೆ ಬಹು ಹೊತ್ತಿನವರೆಗೂ ಹಾಗೆಯೇ ತೂಗುತ್ತಿದ್ದೆನು. ಬಳಿಕ ಬೆಳಗ್ಗೆ ಪೂಜೆಗಾಗಿ ಬಂದ ಜನರು ಉಯ್ಯಾಲೆಯ ಮೇಲೆ ಹತ್ತಿದ್ದ ಕಪಿಯಾದ ನನ್ನನ್ನು ಕಂಡು ದೊಣ್ಣೆ ಗಳಿಂದ ಹೊಡೆದರು. ಉಯ್ಯಾಲೆಯ ಮೇಲಿರುವಾಗಲೆ ಶಿವಮಂದಿರದಲ್ಲಿಯೇ ನಾನು ಮೃತನಾದೆನು.

೨೭–೨೮. ವಜ್ರದಂತೆ ದುಸ್ಸಹವೂ, ಬಹು ದೃಢವೂ ಆದ ಅವರ ಪ್ರಹಾರ ಗಳಿಂದ ನಾನು ಜೀವವನ್ನು ನೀಗಿದೆನು. ಶಿವನ ಉಯ್ಯಾಲೆಯ ಮಾಹಾತ್ಮ್ಯ ದಿಂದ ನಾನು ಕಾಶೀಶ್ವರನೆಂಬ ದೊರೆಗೆ ಮಗನಾಗಿ ಕುಶಧ್ವಜನೆಂದು ಪ್ರಸಿದ್ಧ ನಾದೆನು. ಆಗ ನಾನು ಜನ್ಮಾಂತರ ಜ್ಞಾನವುಳ್ಳವನಾಗಿದ್ದೆನು. ತರುವಾಯ ಕಾಲಕ್ರಮದಲ್ಲಿ ರಾಜ್ಯದ ಒಡೆತನವನ್ನು ಪಡೆದು ದೊರೆಯಾದೆನು.

೨೯–೩೦. ಆಗ ಚೈತ್ರಮಾಸದಲ್ಲಿ ದಮನಕೋತ್ಸವವನ್ನು ಮಾಡಿಸಿದೆನು. ಉಯ್ಯಾಲೆಯೇರಿದ ಶಿವನನ್ನು ಮನುಷ್ಯನು ಹೇಗೆ ಹೇಗೆ ತೂಗುತ್ತಾನೆಯೋ ಹಾಗೆ ಹಾಗೆ ಆತನ ಅಶುಭವು ಕಳೆದುಹೋಗುತ್ತದೆ. ಎಲೈ ಭದ್ರಕನೇ! ಅವನಲ್ಲಿ ಪುಣ್ಯವು ಬಂದು ಸೇರುತ್ತದೆ. ಬಳಿಕ ನಾನು ಶಿವದೀಕ್ಷೆಯನ್ನು ಪಡೆದು ಎಲ್ಲ ಶೈವಸಂಸ್ಕಾರಗಳಿಂದಲೂ ಸಂಸ್ಕೃತನಾದೆನು.

೩೧–೩೨. ಶೈವಾಗಮಗಳ ಪ್ರಕಾರ ಶಿವಾಚಾರ್ಯರು ನನ್ನನ್ನು ಪಶುಪಾಶ ಗಳಿಂದ ಮುಕ್ತನನ್ನಾಗಿ ಮಾಡಿದರು. ನಿರ್ವಾಹದೀಕ್ಷೆಯವರೆಗಿನ ಎಲ್ಲ

ಆರಾಧಯಾಮಿ ದೇವೇಶಂ ಪ್ರತ್ಯಕ್ಷಿತ್ತಮುಮಾಪತಿಂ ।
ಸಮಸ್ತಕ್ಲೇಶವಿಚ್ಛೇದಕಾರಣಂ ಜಗತಾಂ ಗುರುಂ ॥ ೩೨ ॥
ಚಿತ್ತವೃತ್ತಿನಿರೋಧೇನ ವೈರಾಗ್ಯಾಭ್ಯಾಸಯೋಗತಃ ।
ಜಪನ್ನುದ್ಗೀತಮಸ್ಯಾರ್ಥಂ ಭಾವಯನ್ನಷ್ಟಮಂ ರಸಂ ॥ ೩೩ ॥
ತತೋ ಮಾಂ ಪ್ರಣಿಧಾನೇನಾಭ್ಯಾಸೇನ ದೃಢಭೂಮಿನಾ ।
ಅಂತರಾಯಾನುಪಹತಂ ಜ್ಞಾತ್ವಾ ತುಷ್ಟೋಽಬ್ರವೀದ್ಧರಃ ॥ ೩೪ ॥

ಈಶ್ವರ ಉವಾಚ:—

ಕುಶಧ್ವಜಾಹಂ ತುಷ್ಟೋಽದ್ಯ ವರಂ ವರಯ ವಾಂಛಿತಂ ।
ನ ಹೀದೃಶಮನುಷ್ಠಾನಂ ಕಸ್ಯಾಪ್ಯಸ್ತಿ ಮಹೀತಲೇ ॥ ೩೫ ॥
ಶ್ರುತ್ವೇತ್ಯುಕ್ತೋ ಮಯಾ ಶಂಭುರ್ಭೂಯಾಸಂ ತೇ ಗಣೋ ಹ್ಯಹಂ ।
ಅನೇನೈವ ಶರೀರೇಣ ತಥೇತ್ಯೇವಾಹ ಗಾಂ ಪ್ರಭುಃ ॥ ೩೬ ॥
ತತಃ ಕೈಲಾಸಮಾನೀಯ ವಿಮಾನಂ ಮಮ ಚಾದಿಶತ್ ।
ಸರ್ವರತ್ನಮಯಂ ದಿವ್ಯಂ ದಿವ್ಯಾಶ್ಚರ್ಯಸಮಾವೃತಂ ॥ ೩೭ ॥

---

ಸಂಸ್ಕಾರಗಳನ್ನು ಎಲ್ಲ ಬಗೆಯಿಂದಲೂ ಪಡೆದುಕೊಂಡು ಉಳಿದೆಲ್ಲ ವಿಷಯಗಳಿಂದಲೂ ಬೇರ್ಪಡಿಸಿದ ಮನಸ್ಸುಳ್ಳವನಾಗಿ, ಸಮಸ್ತ ಕ್ಲೇಶಗಳನ್ನೂ ಛೇದಿಸಲು ಕಾರಣನೂ, ಜಗತ್ತುಗಳಿಗೆಲ್ಲ ಗುರುವೂ, ದೇವೇಶನೂ ಆದ ಉಮಾಪತಿಯನ್ನು ಆರಾಧಿಸುತ್ತಿದ್ದೆನು.

೩೩–೩೪. ಚಿತ್ತವೃತ್ತಿಗಳ ನಿರೋಧದಿಂದಲೂ, ವೈರಾಗ್ಯಾಭ್ಯಾಸದ ಯೋಗದಿಂದಲೂ ಉದ್ಗೀತವನ್ನು ಜಪಿಸುವವನಾಗಿ ಅದರ ಅರ್ಥವನ್ನು (ಎಂಟನೆಯ ರಸವನ್ನು) ಮನದಲ್ಲಿ ಭಾವಿಸುವವನಾದೆನು. ಬಳಿಕ ನಮಸ್ಕಾರದಿಂದಲೂ, ದೃಢವಾದ ಅಭ್ಯಾಸದಿಂದಲೂ ಕೂಡಿ ನಾನು ವಿಘ್ನಗಳಿಂದ ಕೂಡ ಕುಗ್ಗದುದನ್ನು ಅರಿತು ಹರನು ಸಂತುಷ್ಟನಾಗಿ ಈ ರೀತಿ ಹೇಳಿದನು.

೩೫. ಈಶ್ವರನಿಂತೆಂದನು :—'ಎಲೈ ಕುಶಧ್ವಜನೇ! ನಾನು ಇದೀಗ ನಿನ್ನ ವ್ರತದಿಂದ ಸಂತುಷ್ಟನಾದೆನು. ನಿನಗೆ ಬೇಕಾದ ವರವನ್ನು ಕೇಳಿಕೊ. ಈ ರೀತಿ ನಿನ್ನಂತೆ ಅನುಷ್ಠಾನ ಮಾಡಿದವರು ಭೂಲೋಕದಲ್ಲಿ ಯಾರೂ ಇಲ್ಲವು.'

೩೬–೩೭. ಈ ಮಾತನ್ನು ಕೇಳಿ ಶಂಭುವಿಗೆ ಹೀಗೆ ಉತ್ತರ ಕೊಟ್ಟೆನು :—"ನಾನು ಈ ಶರೀರದಿಂದ ಕೂಡಿದವನಾಗಿಯೇ ನಿನ್ನ ಗಣಗಳಲ್ಲೊಬ್ಬನಾಗ ಬಯಸುವೆನು' ಎಂದೆನು. 'ಹಾಗೆಯೇ ಆಗಲಿ' ಎಂದು ಆ ಪ್ರಭುವು ನುಡಿದನು. ಬಳಿಕ ಆ ಪ್ರಭುವು ಕೈಲಾಸಕ್ಕೆ ಕರೆದುಕೊಂಡುಹೋಗಿ ಸರ್ವರತ್ನಮಯವಾಗಿಯೂ, ದಿವ್ಯಾಶ್ಚರ್ಯಗಳಿಂದ ತುಂಬಿರುವುದೂ ಆದ ದಿವ್ಯ ವಿಮಾನವನ್ನು ನನಗೆ ಕರುಣಿಸಿದನು.

ವಿಚರಾಮಿ ಪ್ರತೀತೋಽಹಂ ತದಾರೂಢೋ ಯದೃಚ್ಛಯಾ ।
ಅಥ ಕಾಲೇ ಕಿಯನ್ಮಾತ್ರೇ ವ್ಯತೀತೇಽತ್ರೈವ ಪರ್ವತೇ ॥ ೩೮ ॥
ಗವಾಕ್ಷಾಧಿಷ್ಠಿತೋಽಪಶ್ಯಂ ವಸಂತೇ ಮುನಿಕನ್ಯಕಾಂ ।
ಪ್ರವಾತಿ ದಕ್ಷಿಣೇ ವಾಯೌ ಮದನಾಗ್ನಿಪ್ರದೀಪಿತಃ ॥ ೩೯ ॥
ಅಗ್ನಿವೇಶ್ಯಸುತಾಂ ಭದ್ರ ವಿವಸ್ತ್ರಾಂ ಜಲಮಧ್ಯಗಾಂ ।
ಉದ್ಭಿನ್ನಯೌವನಾಂ ಶ್ಯಾಮಾಂ ಮಧ್ಯಕ್ಷಾಮಾಂ ಮೃಗೇಕ್ಷಣಾಂ ॥ ೪೦ ॥
ವಿಸ್ತೀರ್ಣಜಘನಾಭೋಗಾಂ ರಂಭೋರುಂ ಸಂಹತಸ್ತನೀಂ ।
ತಾಮುಕುಂಠಿತಲಾವಣ್ಯಾಂ ಜಲಸೇಕಾದಿವಾಗ್ರತಃ ॥ ೪೧ ॥
ಪ್ರೋನ್ನಿದ್ರಪಂಕಜಮುಖೀಂ ವರ್ಣನೀಯತಮಾಕೃತಿಂ ।
ಯಥಾ ಪ್ರಜ್ಞಾನಯಾಥಾತ್ಮ್ಯೈರ್ದ್ವಿದ್ವದ್ಭಿರಪಿ ವರ್ಣಿನೀಂ ॥ ೪೨ ॥
ಪ್ರೋದ್ಯತ್ಕಟಾಕ್ಷವಿಕ್ಷೇಪೈಃ ಶರವ್ರಾತೈರಿವ ಸ್ಮರಃ ।
ಸ್ವಯಂ ತದಂಗಮಾಸ್ಥಾಯ ತಾಡಯಾಮಾಸ ಮಾಂ ದೃಢಂ ॥ ೪೩ ॥

---

೩೮–೩೯. ಹೀಗೆ ಪ್ರಸಿದ್ಧನಾದ ನಾನು ಆ ವಿಮಾನವನ್ನೇರಿ ಇಚ್ಛೆಬಂದ ಕಡೆಗಳಲ್ಲೆಲ್ಲ ಸಂಚರಿಸುತ್ತಿದ್ದೆನು. ಅನಂತರದಲ್ಲಿ ಸ್ವಲ್ಪಕಾಲ ಕಳೆಯಲಾಗಿ, ಅದೇ ಪರ್ವತದಲ್ಲಿ ಗವಾಕ್ಷಿಯ ಬಳಿಯಲ್ಲಿರುವವನಾಗಿ ವಸಂತಕಾಲದಲ್ಲಿ ಮುನಿಕನ್ಯೆಯೊಬ್ಬಳನ್ನು ಕಂಡೆನು. ಆಗ ಮಲಯಮಾರುತವು ಬೀಸುತ್ತಿರಲಾಗಿ ನನ್ನಲ್ಲಿ ಮದನಾಗ್ನಿಯು ಬುಗ್ಗೆಂದು ಹೊತ್ತಿ ಉರಿಯತೊಡಗಿತು.

೪೦. ಎಲೈ ಭದ್ರನೇ! ಅಗ್ನಿವೇಶ್ಯನ ಮಗಳಾದ ಆಕೆಯು ಮೈಮೇಲೆ ಬಟ್ಟೆಯಿಲ್ಲದೆ ನೀರಿನ ಮಧ್ಯದಲ್ಲಿ ವಿಹರಿಸುತ್ತಿದ್ದಳು. ಆಕೆಯ ಯೌವನವು ಆಗತಾನೆ ಒಡೆದು ಮೂಡಿದ್ದಿತು. ಆಕೆಯು ಶ್ಯಾಮಲವರ್ಣದವಳು; ಸಣ್ಣ ನಡುವಿನವಳು; ಎರಳೆಗಂಗಳವಳು;

೪೧. ವಿಸ್ತೀರ್ಣವಾದ ಜಘನಪ್ರದೇಶವುಳ್ಳವಳು; ಬಾಳೆಯ ಕಂಬದಂತೆ ದುಂಡನೆಯೂ, ಕೋಮಲವೂ ಆದ ತೊಡೆಗಳೂ, ಒತ್ತಾದ ಸ್ತನಗಳೂ ಉಳ್ಳವಳು; ಅವಳು ನೀರೆರೆಯುವುದರಿಂದಲೋ ಎಂಬಂತೆ ಅಂಕುರಗೊಂಡ ಲಾವಣ್ಯವುಳ್ಳವಳಾಗಿದ್ದಳು.

೪೨. ಇಷ್ಟೆಯಲ್ಲದೆ ಆಕೆಯು ಚೆನ್ನಾಗಿ ಅರಳಿದ ಕಮಲದಂತೆ ಮುಖವುಳ್ಳವಳು; ವರ್ಣನೀಯತಮವಾದ ಆಕೃತಿಯುಳ್ಳವಳು; ವಿದ್ವಾಂಸರಾದವರು ಕೂಡ ತಮ ತಮಗೆ ಇರುವ ಪಾಂಡಿತ್ಯಕ್ಕೆ ತಕ್ಕಂತೆ ವರ್ಣಿಸಲು ಯೋಗ್ಯಳಾದವಳು.

೪೩. ಅವಳನ್ನು ಕಂಡಾಗ ಮನ್ಮಥನು ತಾನೇ ಸ್ವಂತವಾಗಿ ಆಕೆಯ ಅಂಗವನ್ನೇರಿದವನಾಗಿ ಬಾಣಸಮೂಹಗಳಿಂದಲೋ ಎಂಬಂತೆ ಬಹು ಪ್ರಕಾಶಯುಕ್ತವಾದ ಕಟಾಕ್ಷವೀಕ್ಷಣಗಳಿಂದ ನನ್ನನ್ನು ಬಲವಾಗಿ ಹೊಡೆದನು.

ವಯಸ್ಯಾಸು ವೃತಾಮೇವಂ ಖೇಲಮಾನಾಂ ಯದೃಚ್ಛಯಾ ।
ಅವತೀರ್ಯಾಹಮಹರಂ ವಿಮಾನಾನ್ಮದನಾತುರಃ ॥ ೪೪ ॥
ಸಾ ಗೃಹೀತಾ ಮಯಾ ದೀರ್ಘಂ ಪ್ರಕುರ್ವಾಣಾ ಮಹಾಸ್ವನಂ ।
ತಾತೇತಿ ಚ ವಿಮಾನಸ್ಥಾ ರುರೋದಾತೀವ ಭದ್ರಕ ॥ ೪೫ ॥
ತತೋ ವಯಸ್ಯಾಸ್ತಾ ದೀನಾ ಮುನಿಮಾಹುಃ ಪ್ರಧಾವಿತಾಃ ।
ವೈಮಾನಿಕೇನ ಕೇನಾಪಿ ಹ್ರಿಯತೇ ತವ ಪುತ್ರಿಕಾ ॥ ೪೬ ॥
ರುದನ್ತೀ ಭಗವನ್ನೇತಾಂ ತ್ರಾಹ್ಯುತ್ತಿಷ್ಠೇತಿ ಸರ್ವತಃ ।
ತಾಸಾಂ ತದಾಕರ್ಣ್ಯ ವಚೋ ಮುನಿರ್ಭದ್ರ ತಪೋನಿಧಿಃ ॥ ೪೭ ॥
ಅಗ್ನಿವೇಶ್ಯೋಽಭ್ಯಗಾತ್ತಸ್ಯಾ ವ್ಯೋಮನ್ನುಪಪದಂ ತ್ವರನ್ ।
ತಿಷ್ಠ ತಿಷ್ಠೇತಿ ಮಾಮುಕ್ತ್ವಾ ಸಂಸ್ತಭ್ಯ ತಪಸಾ ಗತಿಂ ॥ ೪೮ ॥
ತತಃ ಪ್ರಕುಪಿತಃ ಪ್ರಾಹ ಮುನಿರ್ಮಾಮತಿದುಸ್ಸಹಂ ।

ಅಗ್ನಿವೇಶ್ಯ ಉವಾಚ :—

ಯಸ್ಮಾನ್ಮದೀಯಾ ತನಯಾ ಮಾಂಸಪೇಶೀವ ತೇ ಹೃತಾ ॥ ೪೯ ॥

---

೪೪. ತನ್ನ ಸಮವಯಸ್ಸಿನ ಗೆಳತಿಯರೊಡಗೂಡಿ ಮನಬಂದಂತೆ ಆಟವಾಡುತ್ತಿದ್ದ ಆಕೆಯನ್ನು ಮದನಾತುರನಾದ ನಾನು ವಿಮಾನದಿಂದ ಇಳಿದು ಬಂದು ಹಿಡಿದುಕೊಂಡುಹೋದೆನು.

೪೫. ಆಕೆಯು ನನ್ನಿಂದ ಹಿಡಿಯಲ್ಪಟ್ಟವಳಾಗಿ, 'ತಾತಾ, ತಾತಾ' ಎಂದು ನಿಡಿದಾಗಿ ಮಹಾ ಧ್ವನಿಮಾಡುತ್ತ, ವಿಮಾನದಲ್ಲಿ ಕುಳಿತು ಬಹಳವಾಗಿ ಅತ್ತಳು.

೪೬. ಬಳಿಕ ಅವಳ ಆ ಗೆಳತಿಯರು ದೀನರಾಗಿ ಮುನಿಯ ಬಳಿಗೆ ಬೇಗನೆ ಓಡಿಹೋಗಿ ಆತನಿಗಿಂತೆಂದರು :—'ನಿಮ್ಮ ಮಗಳು ಯಾವನೋ ಒಬ್ಬ ವೈಮಾನಿಕನಿಂದ ಹಿಡಿದೊಯ್ಯಲ್ಪಡುತ್ತಿದ್ದಾಳೆ.

೪೭–೪೮. ಭಗವನ್! ಅಳುತ್ತಿರುವ ಆಕೆಯನ್ನು ಕಾಪಾಡಿ; ಏಳಿರಿ' ಎಂದು ಎಲ್ಲ ಕಡೆಯಿಂದಲೂ ಮೊರೆಯಿಟ್ಟರು. ಎಲೈ ಭದ್ರನೇ! ಅವರ ಆ ಮಾತನ್ನಾಲಿಸಿ, ತಪೋನಿಧಿಯಾದ ಅಗ್ನಿವೇಶ್ಯಮುನಿಯು ತ್ವರೆಯಿಂದ ಬೆಂಬತ್ತಿ ಬಂದವನಾಗಿ ಆಕಾಶದಲ್ಲಿ ಅವಳ ಸಮೀಪಕ್ಕೇ ಬಂದುಬಿಟ್ಟನು. ನನ್ನನ್ನು ಕುರಿತು 'ನಿಲ್ಲು, ನಿಲ್ಲು' ಎಂದು ನುಡಿದು, ತನ್ನ ತಪಸ್ಸಿನ ಮಹಿಮೆಯಿಂದ ನಾನು ಮುಂದೆ ಚಲಿಸದಂತೆ ನನ್ನ ಗತಿಯನ್ನು ತಡೆದುಬಿಟ್ಟನು.

೪೯–೫೦. ಬಳಿಕಲಾ ಮುನಿಯು ಬಹು ಕುಪಿತನಾಗಿ ನನ್ನನ್ನು ಕುರಿತು ಅತಿ ದುಸ್ಸಹವಾದ ಈ ನುಡಿಯನ್ನು ನುಡಿದನು :—'ನೀನು ಯಾವ ಕಾರಣದಿಂದ ನನ್ನ ಮಗಳನ್ನು ಗೃಧ್ರನು ಮಾಂಸದ ತುಂಡನ್ನು ಹೇಗೋ ಹಾಗೆ

ಗೃಧ್ರೇಣೇವಾಽಧುನಾ ವ್ಯೋಮ್ನಿ ತಸ್ಮಾದ್ಗೃಧ್ರೋ ಭವ ದ್ರುತಂ ।
ಅನಿಚ್ಛಂತೀ ಮದೀಯೇಯಂ ಸುತಾ ಬಾಲಾ ತಪಸ್ವಿನೀ ॥ ೫೦ ॥
ತ್ವಯಾ ಹೃತಾಧುನಾ ಸ್ವೈತತ್ಫಲಮಾಪ್ನುಹಿ ದುರ್ಮತೇ ।
ಇತ್ಯಾಕರ್ಣ್ಯ ಭಯಾವಿಷ್ಟೋ ಲಜ್ಜಯಾಧೋಮುಖೋ ಮುನೇಃ ॥
ಪಾದೌ ಪ್ರಗೃಹ್ಯ ನೃಪ ತಂ ರುದನ್ನತಿತರಾಂ ತದಾ ।
ನಮಯೇಯಂ ಪರಿಜ್ಞಾಯ ಹೃತಾ ನಾದ್ಯಾಪಿ ಧರ್ಷಿತಾ ॥ ೫೨ ॥
ಪ್ರಸಾದಂ ಕುರು ತೇ ಶಾಪಂ ವ್ಯಾವರ್ತಯ ತಪೋನಿಧೇ ।
ಪ್ರಣತೇಷು ಕ್ಷಮಾವಂತೋ ನಿಸರ್ಗೇಣ ತಪೋಧನಾಃ ॥ ೫೩ ॥
ಭವಂತಿ ಸಂತಸ್ತದ್ಗೃಧ್ರೋ ಮಾ ಭವೇಯಂ ಪ್ರಸೀದ ಮೇ ।
ಇತಿ ಪ್ರಪನ್ನೇನ ಮಯಾ ಪ್ರಣತೋಽಸೌ ಮಹಾಮುನಿಃ ॥ ೫೪ ॥
ಪ್ರಸನ್ನಃ ಪ್ರಾಹ ನೋ ಮಿಥ್ಯಾ ಮಮ ವಾಕ್ಯಂ ಭವೇತ್ಕ್ವಚಿತ್ ।
ಕಿಂ ತ್ವಿಂದ್ರದ್ಯುಮ್ನಭೂಪಾಲಪರಿಜ್ಞಾನೇ ಸಹಾಯತಾಂ ॥ ೫೫ ॥
ಯದಾ ಯಾಸ್ಯಸಿ ಶಾಪಸ್ಯ ತದಾ ಮುಕ್ತಿಮವಾಪ್ಸ್ಯಸಿ ॥ ೫೬ ॥

---

ಆಕಾಶದಲ್ಲಿ ಈ ರೀತಿ ಹರಣಮಾಡಿದೆಯೋ ಆ ಕಾರಣದಿಂದ ಕೂಡಲೇ ನೀನು ಗೃಧ್ರನಾಗು. ಈ ನನ್ನ ಮಗಳು ನಿನ್ನಲ್ಲಿ ಇಚ್ಛೆಯಿಲ್ಲದವಳು; ಬಾಲೆ, ತಪಸ್ವಿನಿ.

೫೧. ಇಂಥವಳನ್ನು ನೀನು ಈಗ ಅಪಹರಿಸಿರುವೆ. ಎಲಾ ದುರ್ಮತಿ! ಈ ಕೃತ್ಯಕ್ಕೆ ಈ ಫಲವನ್ನು ಪಡೆ' ಇಂತೆಂದು ನುಡಿದ ಮಾತನ್ನು ಕೇಳಿ ನಾನು ಭಯದಿಂದ ತತ್ತಳಿಸಿದೆನು.

೫೨. ತರುವಾಯ ನಾನು ಲಜ್ಜೆಯಿಂದ ಮುಖ ತಗ್ಗಿಸಿ ಆ ಮುನಿಯ ಪಾದಗಳನ್ನು ಹಿಡಿದುಕೊಂಡು ಬಹುವಾಗಿ ರೋದಿಸುತ್ತ ನೆಲದಮೇಲೆ ಬಿದ್ದೆನು. 'ಭಗವನ್! ಇವಳನ್ನು ನಾನು ಅರಿತರಿತು ಹರಣಮಾಡಲಿಲ್ಲ. ಈಗಲೂ ಕೂಡ ಇವಳು ದೂಷಿತೆಯಾಗಿಲ್ಲ.

೫೩. ಎಲೈ ತಪೋನಿಧಿಯೇ! ನನ್ನಲ್ಲಿ ಪ್ರಸಾದವನ್ನು ತೋರು. ತಪೋಧನರು ತಮಗೆ ತಗ್ಗಿ ನಡೆದ ಶರಣಾಗತರಲ್ಲಿ ಸ್ವಭಾವವಾಗಿಯೇ ಕ್ಷಮೆ ತೋರುತ್ತಾರೆ. ಅಂತಹ ಕ್ಷಮಾವಂತರೇ ಸತ್ಪುರುಷರು.

೫೪. ಆದುದರಿಂದ ನಾನು ಗೃಧ್ರನಾಗದಂತಾಗಲಿ. ನನ್ನಲ್ಲಿ ಪ್ರಸನ್ನ ನಾಗು.' ಈ ರೀತಿ ನಾನು ನಮಸ್ಕಾರ ಮಾಡಲಾಗಿ, ಆ ಮುನಿಯು ಪ್ರಸನ್ನ ನಾಗಿ ಇಂತೆಂದನು:—

೫೫–೫೬. 'ನನ್ನ ಮಾತು ಎಂದಿಗೂ ಸುಳ್ಳಾಗುವುದಿಲ್ಲ. ಆದರೂ ಇಂದ್ರದ್ಯುಮ್ನ ಮಹಾರಾಜನನ್ನು ತಿಳಿಯುವುದರಲ್ಲಿ ಸಹಾಯವನ್ನು ಯಾವಾಗ ಮಾಡುವೆಯೋ ಆಗ ಶಾಪಮೋಕ್ಷವನ್ನು ಪಡೆಯುತ್ತೀಯೆ.'

ಇತ್ಯುಕ್ತ್ವಾ ಸ ಮುನಿಃ ಪ್ರಾಯಾದ್ಗೃಹೀತ್ವಾ ನಿಜಕನ್ಯಕಾಂ ।
ಅಖಂಡಶೀಲಾಂ ಸ್ವಾವಾಸಮಹಂ ಗೃಧ್ರೋಽಭವಂ ತದಾ ॥ ೫೭ ॥
ಏವಂ ತದಾ ದಮನಕೋತ್ಸವ ಈಶ್ವರಸ್ಯ
ಆಂದೋಲನೇನ ನೃಪವೇಶ್ಮನಿ ಮೇಽವತಾರಃ ।
ಶಂಭೋರ್ಗಣತ್ವಮಭವಚ್ಚ ತಥಾಗ್ನಿವೇಶ್ಯ
ಶಾಪೇನ ಗೃಧ್ರ ಇಹ ಭದ್ರ ತವೇದಮುಕ್ತಂ ॥ ೫೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಮಹೀಪ್ರಾದುರ್ಭಾವೇ ದಮನಕಮಾಹಾತ್ಮ್ಯಂ" ನಾಮ
ನವಮೋಧ್ಯಾಯಃ

---

೫೭. ಹೀಗೆಂದು ನುಡಿದು ಆ ಮುನಿಯು ಅಖಂಡಶೀಲವುಳ್ಳ ಆ ತನ್ನ ಮಗಳನ್ನು ಜೊತೆಯಲ್ಲಿಯೇ ಕರೆದುಕೊಂಡು ತನ್ನ ವಾಸಸ್ಥಾನಕ್ಕೆ ಹೊರಟು ಹೋದನು. ಆಗಲೇ ನಾನು ಗೃಧ್ರನಾದೆನು.

೫೮. ಈ ರೀತಿ ಆಗ ದಮನಕೋತ್ಸವದಲ್ಲಿ ಈಶ್ವರನ ಉಯ್ಯಾಲೆಯನ್ನು ತೂಗಿದುದರಿಂದ ದೊರೆಯ ಮನೆಯಲ್ಲಿ ನನಗೆ ಜನ್ಮವುಂಟಾಯಿತು; ಶಂಭುವಿನ ಗಣತ್ವವೂ ಉಂಟಾಯಿತು. ಹಾಗೆಯೇ, ಅಗ್ನಿವೇಶ್ಯನ ಶಾಪದಿಂದ ನಾನು ಗೃಧ್ರನಾದೆನು. ಎಲೈ ಭದ್ರನೇ! ಈ ನನ್ನ ವಿಷಯವನ್ನು ನಿನಗೆ ಹೇಳಿದ್ದೇನೆ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾ ಖಂಡದಲ್ಲಿ
"ದಮನಕ ಮಾಹಾತ್ಮ್ಯ"ವೆಂಬ ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದಶಮೋಽಧ್ಯಾಯಃ

## ಮಹೀಪ್ರಾದುರ್ಭಾವೇ ಕೂರ್ಮಾಖ್ಯಾನ ವರ್ಣನಂ

ನಾರದ ಉವಾಚ :—

ಗೃಧ್ರಸ್ಯೈತದ್ವಚಃ ಶ್ರುತ್ವಾ ದುಃಖವಿಸ್ಮಯ ಸಂಯುತಃ ।
ಇಂದ್ರದ್ಯುಮ್ನಸ್ತಮಾಪೃಚ್ಛ್ಯ ಮರಣಾಯೋಪಚಕ್ರಮೇ ॥ ೧ ॥
ತತಸ್ತಮಾಲೋಕ್ಯ ತಥಾ ಮುಮೂರ್ಷುಂ ಕೌಶಿಕಾದಿಭಿಃ ।
ಸ ಸಂಹಿತಂ ವಿಚಿಂತ್ಯಾಹ ದೀರ್ಘಾಯುಷಮಥಾತ್ಮನಃ ॥ ೨ ॥
ಮೈವಂ ಕಾರ್ಷೀಃ ಶೃಣು ಗಿರಂ ಭದ್ರಕ ತ್ವಂ ಚಿರಂತನಃ ।
ಮತ್ತೋಽಪ್ಯಸ್ತಿ ಸ್ಫುಟಂಚೈವ ಜ್ಞಾಸ್ಯತಿ ತ್ವದಭೀಪ್ಸಿತಂ ॥ ೩ ॥
ಮಾನಸೇ ಸರಸಿ ಖ್ಯಾತಃ ಕೂರ್ಮೋಽಮಂಥರಕಾಖ್ಯಯಾ ।
ತಸ್ಯ ನಾವಿದಿತಂ ಕಿಂಚಿದೇಹಿ ತತ್ರ ವ್ರಜಾಮಹೇ ॥ ೪ ॥
ತತಃ ಪ್ರತೀತಾಸ್ತೇ ಭೂಪಮುನಿಗೃಧ್ರಬಕಾಸ್ತಥಾ ।
ಉಲೂಕಸಹಿತಾ ಜಗ್ಮುಃ ಸರ್ವೇ ಕೂರ್ಮದಿದೃಕ್ಷವಃ ॥ ೫ ॥

---

## ಕನ್ನಡದ ಅನುವಾದ

### ಮಹೀಪ್ರಾದುರ್ಭಾವ ಕಥನ — ಕೂರ್ಮಾಖ್ಯಾನ ವರ್ಣನ

೧. ನಾರದನು ಹೇಳುತ್ತಾನೆ:—ಗೃಧ್ರನ ಈ ವಚನವನ್ನು ಕೇಳಿ ದುಃಖ ವಿಸ್ಮಯಗಳಿಂದ ಕೂಡಿದವನಾಗಿ, ಆ ಇಂದ್ರದ್ಯುಮ್ನನು ಆ ಗೃಧ್ರನಿಗೆ ಹೋಗಿ ಬರುವೆನೆಂದು ಹೇಳಿ ಮರಣಕ್ಕೆ ಉಪಕ್ರಮ ಮಾಡಿದನು.

೨. ಅನಂತರದಲ್ಲಿ ಕೌಶಿಕಾದಿಗಳೊಡನೆ ಹಾಗೆ ಮರಣಹೊಂದಬೇಕೆಂದು ಹವಣಿಸುತ್ತಿರುವ ಆತನನ್ನು ಕಂಡು ಆ ಗೃಧ್ರನು ತನ್ನ ದೀರ್ಘಾಯುಸ್ಸೆಲ್ಲವನ್ನೂ ಗಮನಿಸಿಕೊಂಡು ಹೀಗೆ ಹೇಳಿದನು.

೩. "ಹೀಗೆ ಮಾಡಬೇಡ. ನನ್ನ ಮಾತನ್ನು ಕೇಳು. ಎಲೈ ಭದ್ರಕನೇ! ನನಗಿಂತಲೂ ಚಿರಂಜೀವಿಯಾದವನೊಬ್ಬನಿರುವನು. ನಿನ್ನ ಅಭೀಷ್ಟವನ್ನು ಅವನು ಖಂಡಿತವಾಗಿಯೂ ತಿಳಿದಿರುವನು.

೪–೫. ಮಾನಸಸರೋವರದಲ್ಲಿ ಮಂಥರಕನೆಂಬ ಹೆಸರಿನಿಂದ ಖ್ಯಾತನಾದ ಕೂರ್ಮನಿರುವನು. ಆತನಿಗೆ ತಿಳಿಯದುದು ಜಗತ್ತಿನಲ್ಲಿಯೇ ಏನೂ ಇರುವುದಿಲ್ಲವು. ಎಲ್ಲರೂ ಅಲ್ಲಿಗೆ ಹೋಗೋಣ ಬನ್ನಿರಿ." ಬಳಿಕ ದೊರೆ, ಮುನಿ, ಗೃಧ್ರ, ಬಕ, ಉಲೂಕ ಇವರೆಲ್ಲರೂ ಆ ಕೂರ್ಮನನ್ನು ನೋಡಲೆಳಸಿದವರಾಗಿ ಅಲ್ಲಿಗೆ ಪ್ರಯಾಣ ಮಾಡಿದರು.

ಸರಸ್ತೀರೇ ಸ್ಥಿತಃ ಕೂರ್ಮಸ್ತಾನ್ನಿರೀಕ್ಷ್ಯ ವಿದೂರಗಾನ್ ।
ಕಾಂದಿಶೀಕೋ ವಿವೇಶಾಸೌ ಜಲಂ ಶೀಘ್ರತರಂ ತದಾ ॥ ೬ ॥
ಕೌಶಿಕೋಽಥ ತಮಾಹೇದಂ ಪ್ರಹಸ್ಯ ವಚನಂ ಸ್ವಯಂ ।
ಕಸ್ಮಾತ್ಕೂರ್ಮ ಪ್ರನಷ್ಟೋಽದ್ಯ ವಿಮುಖೋಽಭ್ಯಾಗತೇಷ್ವಪಿ ॥ ೭ ॥
ಅಗ್ನಿರ್ದ್ವಿಜಾನಾಂ ವಿಪ್ರಶ್ಚ ವರ್ಣಾನಾಂ ರಮಣಸ್ತ್ರಿಯಾಂ ।
ಗುರುಃ ಪಿತಾ ಚ ಪುತ್ರಾಣಾಂ ಸರ್ವಸ್ಯಾಭ್ಯಾಗತೋ ಗುರುಃ ॥ ೮ ॥
ವಿಹಾಯ ತಮಿಮಂ ಧರ್ಮಮಾತಿಥ್ಯ ವಿಮುಖಃ ಕಥಂ ।
ಗೃಹ್ಣಾಸಿ ಪಾಪಂ ಸರ್ವೇಷಾಂ ಬ್ರೂಹಿ ಕೂರ್ಮಾಧುನೋತ್ತರಂ ॥ ೯ ॥
ಚಿರಂತನೋ ಹಿ ಜಾನಾಮಿ ಕರ್ತುಮಾತಿಥ್ಯಸತ್ಕ್ರಿಯಾಂ ।
ಅಭ್ಯಾಗತೇಷ್ವಪಚಿತಿಂ ಧರ್ಮಶಾಸ್ತ್ರೇಷು ನಿಶ್ಚಿತಂ ॥ ೧೦ ॥
ಸುಮಹತ್ಕಾರಣಂ ಚಾತ್ರ ಶ್ರೂಯತಾಂ ತದ್ವದಾಮಿ ವಃ ।
ನಾಹಂ ಪರಾಙ್ಮುಖೋ ಜಾತ ಏತಾವಂತಿ ದಿನಾನ್ಯಪಿ ॥ ೧೧ ॥

---

೬. ಸರೋವರದ ತೀರದಲ್ಲಿದ್ದ ಆ ಕೂರ್ಮನು ದೂರದಲ್ಲಿ ಬರುತ್ತಿದ್ದ ಅವರನ್ನು ಕಂಡು ಭಯಪಟ್ಟು ಬಹು ಬೇಗನೆಯೇ ಸರೋವರದ ನೀರನ್ನು ಪ್ರವೇಶ ಮಾಡಿದನು.

೭. ಆಗ ಕೌಶಿಕನು ಗಟ್ಟಿಯಾಗಿ ನಕ್ಕು, ಆ ಕೂರ್ಮನನ್ನು ಕುರಿತು ತಾನೇ ಈ ಮಾತನ್ನು ಹೇಳಿದನು :—" ಎಲೈ ಕೂರ್ಮನೇ ! ಈಗ ಅಭ್ಯಾಗತರಲ್ಲಿ ಕೂಡ ವಿಮುಖನಾಗಿ ಅದೇಕೆ ಕಣ್ಮರೆಯಾಗಿಹೋದೆ ?

೮. ಅಗ್ನಿಯು ದ್ವಿಜರಿಗೆ, ವಿಪ್ರನು ವರ್ಣಗಳಿಗೆ, ಪತಿಯು ಸ್ತ್ರೀಯರಿಗೆ, ತಂದೆಯು ಪುತ್ರರಿಗೆ ಹೇಗೆ ಗುರುವೋ ಹಾಗೆಯೇ ಸರ್ವರಿಗೂ ಅಭ್ಯಾಗತನೇ ಗುರುವು.

೯. ಹೀಗೆ ಪ್ರಸಿದ್ಧವಾಗಿರುವ ಈ ಧರ್ಮವನ್ನು ತೊರೆದು ಆತಿಥ್ಯದಲ್ಲಿ ವಿಮುಖನಾಗಿ ಸರ್ವರ ಪಾಪವನ್ನೂ ಹೇಗೆತಾನೆ ತೆಗೆದುಕೊಳ್ಳುತ್ತೀಯೆ ? ಎಲೈ ಕೂರ್ಮಾ ! ಈಗ ಇದಕ್ಕೆ ಉತ್ತರ ಹೇಳು."

೧೦. ಕೂರ್ಮನಿಂತೆಂದನು :—" ನಾನು ಬಹುಕಾಲ ಬಾಳಿದವನು. ಧರ್ಮಶಾಸ್ತ್ರಗಳಲ್ಲಿ ನಿಶ್ಚಿತವಾಗಿರುವ ಹಾಗೆ ಅಭ್ಯಾಗತರಲ್ಲಿ ಆತಿಥ್ಯಸತ್ಕ್ರಿಯೆ ಮಾಡುವುದನ್ನು ಬಲ್ಲವನು.

೧೧–೧೬. ನಾನು ಆತಿಥ್ಯವನ್ನು ನೀಡದೆ ಮರೆಯಾಗಿಹೋದುದಕ್ಕೆ ಬಹು ಮಹತ್ತರವಾದ ಕಾರಣವುಂಟು. ಅದನ್ನು ನಿಮಗೆ ಹೇಳುತ್ತೇನೆ; ಕೇಳಿರಿ. ಇಷ್ಟು ದಿನಗಳೂ ನಾನು ಯಾವ ಅಭ್ಯಾಗತನಾದವನಿಗೂ ಸತ್ಕಾರಮಾಡದೆ ವಿಮುಖನಾಗಿಲ್ಲ. ಸರ್ವರನ್ನೂ ಸತ್ಕರಿಸುವ ಸದ್ವ್ರತವನ್ನೇ ನಾನು ಧರಿಸಿದ್ದೆನು.

ಅಭ್ಯಾಗತಸ್ಯ ಕಸ್ಯಾಪಿ ಸರ್ವಸತ್ಕಾರ ಸದ್ವ್ರತೀ ।
ಕಿಂ ತ್ವೇಷ ಪಂಚವೋ ಯೋ ವಾ ದೃಶ್ಯತೇ ಸರಲಾಕೃತಿಃ ॥ ೧೨ ॥
ಇಂದ್ರದ್ಯುಮ್ನೋ ಮಹೀಪಾಲೋ ಬಿಭೇಮ್ಯಸ್ಮಾದಲಂ ತರಾಂ ।
ಅಮುನಾ ಯಜಮಾನೇನ ಶೌಚಕಾಖ್ಯೇ ಪುರಾ ಪುರೇ ॥ ೧೩ ॥
ಯಜ್ಞಪಾವಕದಗ್ಧಾ ಮೇ ಪೃಷ್ಟಿರ್ನಾದ್ಯಾಪಿ ನಿರ್ವ್ರಣಾ ।
ತನ್ಮೇ ಭಯಂ ಪುನರ್ಜಾತಂ ಕಿಮಯಂ ಪುನರೇವ ಮಾಂ ॥ ೧೪ ॥
ಆಸುತೀವಲಮಾಧಾಯ ಭುವಿ ಧಕ್ಷ್ಯತಿ ಸಂಪ್ರತಿ ।
ಇತಿ ವಾಕ್ಯಾವಸಾನೇಷು ಕೂರ್ಮಸ್ಯ ಕುರುಸತ್ತಮ ॥ ೧೫ ॥
ಪಪಾತ ಪುಷ್ಪವೃಷ್ಟಿಃ ಸ್ಯಾದ್ದಿವಮುಕ್ತಾಪ್ಸರಸಾಂ ಗಣೈಃ ।
ಸಸ್ವನುರ್ದೇವವಾದ್ಯಾನಿ ಕೀರ್ತ್ಯುದ್ಧಾರೇ ಮಹೀಪತೇಃ ॥ ೧೬ ॥
ವಿಸ್ಮಿತಾಸ್ತೇ ಚ ದದೃಶುರ್ವಿಮಾನಂ ಪುರತಃ ಸ್ಥಿತಂ ।
ಇಂದ್ರದ್ಯುಮ್ನಕೃತೇ ದೇವದೂತೇನಾಧಿಷ್ಠಿತಂ ತದಾ ॥ ೧೭ ॥
ಆಯಾತಯಾಮಾಃ ಪ್ರದದುರಾಶಿಷೋಽಸ್ಮೈ ಸುರದ್ವಿಜಾಃ ।
ಸಾಧುವಾದೋ ದಿವಿ ಮಹಾನಾಸೀತ್ತಸ್ಯ ಮಹೀಪತೇಃ ॥ ೧೮ ॥

---

ಆದರೆ ನಿಮ್ಮಲ್ಲಿ ಸರಲಾಕೃತಿಯುಳ್ಳವನಾಗಿ ಕಾಣಿಸುತ್ತಿರುವ ಈ ಐದನೆಯವನೇ ಇಂದ್ರದ್ಯುಮ್ನ ಮಹೀಪಾಲನು. ಇವನನ್ನು ಕಂಡರೆ ನನಗೆ ಸಾಕೆನ್ನಿಸುವಷ್ಟು ಭಯವಾಗುತ್ತದೆ. ಹಿಂದಿನ ಕಾಲದಲ್ಲಿ ಶೌಚಕವೆಂಬ ಪಟ್ಟಣದಲ್ಲಿ ಯಜ್ಞ ದೀಕ್ಷಿತನಾದ ಈತನ ಯಜ್ಞದ ಅಗ್ನಿಯಿಂದ ನನ್ನ ಬೆನ್ನು ಸುಟ್ಟುಹೋಯಿತು. ಈಗಲೂ ಅದರ ಗಾಯವು ಮಾಯ್ದು ನಿರ್ವ್ರಣವಾಗಿಲ್ಲ. ಆದುದರಿಂದ ನನಗೆ ಮತ್ತೆ ಭಯವುಂಟಾಯಿತು. ಇವನೇನು ಮತ್ತೊ ಒಮ್ಮೆ ನನ್ನನ್ನು ಹಿಡಿದು ಕಟ್ಟಿ, ಯಾಗಮಾಡಿ ನನ್ನ ಬೆನ್ನನ್ನು ಸುಡುವನೋ ಎಂದು ಬಗೆದು ಈ ರೀತಿ ನೀರಿನಲ್ಲಡಗಿದೆನು.'' ಈ ರೀತಿಯಾಗಿ ನುಡಿದ ಕೂರ್ಮನ ಮಾತು ಮುಗಿಯುತ್ತಿರುವಂತೆಯೇ, ಅಪ್ಸರಸ್ತ್ರೀಯರೆರಚಿದ ಪುಷ್ಪವೃಷ್ಟಿಯು ಆಕಾಶದಿಂದ ಕೆಳಗೆ ಬಿದ್ದಿತು. ಆ ಮಹಾರಾಜನ ಕೀರ್ತಿಯು ಉದ್ಧಾರವಾದ ಆ ಸಮಯದಲ್ಲಿ ದೇವವಾದ್ಯಗಳು ಧ್ವನಿಗೊಂಡವು.

೧೭. ಆಗ ಅವರೆಲ್ಲರೂ ವಿಸ್ಮಿತರಾಗಿ ಇಂದ್ರದ್ಯುಮ್ನನಿಗಾಗಿ ಬಂದು ಎದುರಿಗೆ ನಿಂತಿರುವ ದೇವದೂತನಿಂದೊಡಗೂಡಿದ ವಿಮಾನವನ್ನು ಕಂಡರು.

೧೮. ಸುರದ್ವಿಜರು ಕೈಗಳನ್ನು ಮೇಲಕ್ಕೆತ್ತಿ ಆ ದೊರೆಗೆ ಆಶೀರ್ವಾದ ಮಾಡಿದರು. ಆ ಮಹಾರಾಜನಿಗೆ ದೇವಲೋಕದಲ್ಲಿ (ಆಕಾಶದಲ್ಲಿ) ಮಹತ್ತಾದ ಸಾಧುವಾದವುಂಟಾಯಿತು.

ತತೋ ವಿಮಾನಮಾಲಂಬ್ಯ ದೇವದೂತಸ್ತ್ವಮುಚ್ಚಕೈಃ ।
ಇಂದ್ರದ್ಯುಮ್ನಮುವಾಚೇದಂ ಶೃಣ್ವತಾಂ ನಾಕವಾಸಿನಾಂ ॥ ೧೯ ॥
ದೇವದೂತ ಉವಾಚ :—
ನವೀಕೃತಾಧುನಾ ಕೀರ್ತಿಸ್ತ್ವವ ಭೂಪಾಲ ನಿರ್ಮಲಾ ।
ತ್ರಿಲೋಕ್ಯಾಮಪಿ ತಚ್ಛೀಘ್ರಂ ವಿಮಾನಮಿದಮಾರುಹ ॥ ೨೦ ॥
ಗಮ್ಯತಾಂ ಬ್ರಹ್ಮಣೋ ಲೋಕಮಾಕಲ್ಪಂ ತಪಸೋರ್ಜಿತಂ ।
ಪ್ರೇಷಿತೋಽಹಮನೇನೈವ ತವಾನಯನಕಾರಣಾತ್ ॥ ೨೧ ॥
ಯಾವತ್ಕೀರ್ತಿರ್ಮನುಷ್ಯಸ್ಯ ಪೃಥಿವ್ಯಾಂ ಪ್ರಥಿತಾ ಭವೇತ್ ।
ತಾವಾನೇವ ಭವೇತ್ಸ್ವರ್ಗೇ ಸತಿ ಪುಣ್ಯೇ ಹ್ಯನಂತಕೇ ॥ ೨೨ ॥
ಸುರಾಲಯ ಸರೋವಾಪೀಕೂಪಾರಾಮಾದಿ ಕಲ್ಪನಾ ।
ಏತದರ್ಥಂ ಹಿ ಪೂರ್ತಖ್ಯಾ ಧರ್ಮಶಾಸ್ತ್ರೇಷು ನಿಶ್ಚಿತಾ ॥ ೨೩ ॥
ಇಂದ್ರದ್ಯುಮ್ನ ಉವಾಚ :—
ಅಮೀ ಮಮೈವ ಸುಹೃದೋ ಮಾರ್ಕಂಡಬಕಕೌಶಿಕಾಃ ।
ಗೃಧ್ರಕೂರ್ಮೌ ಪ್ರಭಾವೋಽಯಮಮೀಷಾಂ ಮಮ ವೃದ್ಧಯೇ ॥

---

೧೯–೨೦. ಬಳಿಕ ವಿಮಾನವನ್ನು ಅವಲಂಬಿಸಿ ಹಿಡಿದು ದೇವದೂತನು ಇಂದ್ರದ್ಯುಮ್ನನನ್ನು ಕುರಿತು ಸ್ವರ್ಗನಿವಾಸಿಗಳಿಗೆಲ್ಲ ಕೇಳಿಸುವಂತೆ ಗಟ್ಟಿಯಾಗಿ ಹೀಗೆ ಹೇಳಿದನು. ದೇವದೂತನಿಂತೆಂದನು :—" ಎಲೈ ಭೂಪಾಲನೇ ! ನಿರ್ಮಲ ವಾದ ನಿನ್ನ ಕೀರ್ತಿಯು ಈಗ ಮೂರು ಲೋಕಗಳಲ್ಲಿಯೂ ಹೊಸದಾಗಿಸ ಲಾಯಿತು. ಆದುದರಿಂದ ನೀನು ಬೇಗನೆಯೇ ಈ ವಿಮಾನವನ್ನೇರುವವನಾಗು.

೨೧–೨೩. ಇನ್ನೊಂದು ಕಲ್ಪದವರೆಗೂ ತಪಸ್ಸಿನಿಂದ ಊರ್ಜಿತವಾಗಿರುವ ಬ್ರಹ್ಮಲೋಕಕ್ಕೆ ಹೋಗುವವನಾಗು. ನಿನ್ನನ್ನು ಕರೆದುಕೊಂಡುಬರುವುದಕ್ಕಾಗಿ ಆ ಬ್ರಹ್ಮನಿಂದಲೇ ನಾನು ಕಳುಹಿಸಲಾಗಿರುವೆನು. ಮನುಷ್ಯನ ಪುಣ್ಯವು ಅನಂತವಾಗಿರುವಾಗ ಆತನ ಕೀರ್ತಿಯು ಎಲ್ಲಿಯವರೆಗೆ ಪೃಥಿವಿಯಲ್ಲಿ ಪ್ರಸಿದ್ಧ ವಾಗಿರುವುದೋ ಅಲ್ಲಿಯವರೆಗೆ ಮಾತ್ರವೇ ಅವನು ಸ್ವರ್ಗನಿವಾಸಿಯಾಗಿರುವನು. ದೇವಾಲಯ, ಸರೋವರ, ಕೊಳ, ಬಾವಿ, ತೋಪು ಮೊದಲಾದುವುಗಳನ್ನು ನಿರ್ಮಿಸುವುದು ಕೂಡ ಇದಕ್ಕಾಗಿಯೇ ಎಂಬುದಾಗಿ ಧರ್ಮಶಾಸ್ತ್ರಗಳಲ್ಲಿ ನಿಶ್ಚಿತ ವಾಗಿದೆ. ಈ ರೀತಿಯ ಸರೋವರಾದಿ ನಿರ್ಮಾಣಕ್ಕೆ 'ಪೂರ್ತ' ಎಂದು ಹೆಸರು."

೨೪. ದೇವದೂತನ ಮಾತುಗಳನ್ನಾಲಿಸಿ ಇಂದ್ರದ್ಯುಮ್ನನಿಂತೆಂದನು :— "ಎಲೈ ದೇವದೂತನೇ ! ಈ ಮಾರ್ಕಂಡ, ಬಕ, ಕೌಶಿಕ, ಗೃಧ್ರ ಮತ್ತು ಕೂರ್ಮ— ಇವರೆಲ್ಲರೂ ನನ್ನ ಸ್ನೇಹಿತರೇ. ನನ್ನ ಅಭಿವೃದ್ಧಿಗೆ ಇವರ ಪ್ರಭಾವವೇ ಕಾರಣವು.

ತಚ್ಛೇದಮೀ ಮಯಾ ಸಾಕಂ ಬ್ರಹ್ಮಲೋಕಂ ಪ್ರಯಾಂತ್ವಿತ ।
ಪುರಸ್ಥಿತಾಸ್ತದಾ ಯಾಸ್ಯೇ ಬ್ರಹ್ಮಲೋಕಂ ಚ ನಾನ್ಯಥಾ ॥ ೨೫ ॥
ಪರೇಷಾಮನಪೇಕ್ಷ್ಯೈವ ಕೃತಪ್ರತಿಕೃತಂ ಹಿ ಯಃ ।
ಪ್ರವರ್ತತೇ ಹಿತಾಯೈವ ಸ ಸುಹೃತ್ಪ್ರೋಚ್ಯತೇ ಬುಧೈಃ ॥ ೨೬ ॥
ಸ್ವಾರ್ಥೋದ್ಯುಕ್ತಧಿಯೋ ಯೇ ಸ್ಯುರನ್ವರ್ಥಾಸ್ತೇಽಪ್ಯಸುಂಧರಾಃ ।
ಮರಣಂ ಪ್ರಕೃತಿಶ್ಚೈವ ಜೀವಿತಂ ವಿಕೃತಿರ್ಯದಾ ॥ ೨೭ ॥
ಪ್ರಾಣಿನಾಂ ಪರಮೋ ಲಾಭಃ ಕೇವಲಂ ಪ್ರಾಣಿಸೌಹೃದಂ ।
ದರಿದ್ರಾ ರಾಗಿಣೋಽಸತ್ಯಪ್ರತಿಜ್ಞಾತಾ ಗುರುದ್ರುಹಃ ॥ ೨೮ ॥
ಮಿತ್ರಾವಸಾನಿನಃ ಪಾಪಾಃ ಪ್ರಾಯೋ ನರಕಮಂಡನಾಃ ।
ಪರಾರ್ಥನಷ್ಟಾಸ್ತದಮೀ ಪಂಚ ಸಂಪ್ರತಿ ಸಾಧವಃ ॥ ೨೯ ॥
ಮಮಕೀರ್ತಿಸಮುದ್ಧಾರಂ ಸ ಪ್ರಭಾವೋ ಮಹಾತ್ಮನಾಂ ।
ಅಮೀಷಾಂ ಯದಿ ತೇ ಸ್ವರ್ಗಂ ಪ್ರಯಾಸ್ಯಂತಿ ಮಯಾ ಸಹ ।
ತದಾಽಹಮಪಿ ಯಾಸ್ಯಾಮಿ ದೇವದೂತಾನ್ಯಥಾ ನ ಹಿ ॥ ೩೦ ॥

---

೨೫. ಇವರೂ ನನ್ನ ಸಂಗಡಲೇ ಬ್ರಹ್ಮಲೋಕಕ್ಕೆ ಬರುವವರಾಗಲಿ. ಆಗ ಇವರೆಲ್ಲರಿಗೂ ಮುಂದಾಳಾಗಿ ನಾನು ಬ್ರಹ್ಮಲೋಕಕ್ಕೆ ಬರುತ್ತೇನೆ. ಇಲ್ಲದಿದ್ದರೆ ನಾನೆಂದಿಗೂ ಬರುವುದಿಲ್ಲವು.

೨೬. ಯಾವನು, ಯಾವ ಸ್ವಂತ ಅಪೇಕ್ಷೆಯೂ ಇಲ್ಲದೆ, ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವೋ ಎಂಬಂತೆ ಇತರರ ಹಿತಕ್ಕಾಗಿಯೇ ಪ್ರಯತ್ನಮಾಡುತ್ತಿರುವನೋ ಅವನನ್ನು ವಿದ್ವಾಂಸರು ಮಿತ್ರನೆಂದು ಕರೆಯುತ್ತಾರೆ.

೨೭. ಯಾರು ಸ್ವಾರ್ಥದಲ್ಲಿಯೇ ತಮ್ಮಬುದ್ಧಿಯನ್ನು ಉಪಯೋಗಿಸುತ್ತಿರುವರೋ ಅವರೂ ಕೂಡ 'ಅಸುಂಧರ'ರೆಂದು (ಕೇವಲ ಪ್ರಾಣಧಾರಣ ಮಾಡಿರುವವರೆಂದು) ಅನ್ವರ್ಥನಾಮವುಳ್ಳವರಾಗುವರು. ಆ ಸಂದರ್ಭದಲ್ಲಿ ಮರಣವೇ ಪ್ರಕೃತಿಯಾಗಿಯೂ ಜೀವನವೇ ವಿಕೃತಿಯಾಗಿಯೂ ಪರಿಣಮಿಸುವುದು.

೨೮–೩೦. ಪ್ರಾಣಿಗಳ ಕೇವಲ ಸ್ನೇಹವೇ ಪ್ರಾಣಿಗಳಿಗೆ ಪರಮ ಲಾಭ. ದರಿದ್ರರು, ಅನುರಾಗಿಗಳು, ಅಸತ್ಯ ಪ್ರತಿಜ್ಞೆ ಮಾಡಿದವರು, ಗುರುವಿಗೆ ದ್ರೋಹಮಾಡಿದವರು, ಮಿತ್ರರಿಗೆ ಅವಸಾನ ಕಾರಣರಾದವರು—ಈ ಪಾಪಿಗಳು ಪ್ರಾಯಶಃ ನರಕಕ್ಕೆ ಅಲಂಕಾರವಾಗತಕ್ಕವರು. ಈಗ ಪರಾರ್ಥಕ್ಕಾಗಿ ತಮ್ಮನ್ನು ತಾವು ನಷ್ಟಕ್ಕೀಡುಮಾಡಿಕೊಂಡಿರುವ ಈ ಐವರೂ ಸಾಧುಗಳು. ನನ್ನ ಕೀರ್ತಿಯ ಉದ್ಧಾರವು ಈ ಮಹಾತ್ಮರ ಪ್ರಭಾವದಿಂದಲೇ ಉಂಟಾಗಿರುವುದು. ಅವರೂ ನನ್ನೊಡನೆ ಸ್ವರ್ಗಕ್ಕೆ ಹೋಗುವಹಾಗಿದ್ದರೆಮಾತ್ರ ನಾನು ಸ್ವರ್ಗಕ್ಕೆ ಬರುತ್ತೇನೆ. ಎಲೈ ದೇವದೂತನೇ! ಹಾಗಾಗದಿದ್ದರೆ ನಾನು ಬರುವುದೇ ಇಲ್ಲವು."

ದೇವದೂತ ಉವಾಚ:—

ಏತೇ ಹರಗಣಾಃ ಸರ್ವೇ ಶಾಪಭ್ರಷ್ಟಾಃ ಕ್ಷಿತಿಂ ಗತಾಃ ॥ ೩೦ ॥
ಶಾಪಾಂತೇ ಹರಪಾರ್ಶ್ವೇ ತು ಯಾಸ್ಯಂತಿ ಪೃಥಿವೀಪತೇ ।
ವಿಹಾಯೇಮಾನತೋ ಭೂಪ ತ್ವಮಾಗಚ್ಛ ಮಯಾ ಸಹ ॥ ೩೧ ॥
ನ ಹ್ಯೇಷಾಂ ರೋಚತೇ ಸ್ವರ್ಗೋ ಹಿತ್ವಾ ದೇವಂ ಮಹೇಶ್ವರಂ ।

ಇಂದ್ರದ್ಯುಮ್ನ ಉವಾಚ:—

ಯದ್ಯೇವಂ ಗಚ್ಛ ತದ್ದೂತ ನಾಯಾಸ್ಯೇಹಂ ತ್ರಿವಿಷ್ಟಪಂ ॥ ೩೨ ॥
ತಥಾ ತಥಾ ಯತಿಷ್ಯಾಮಿ ಭವಿಷ್ಯಾಮಿ ಯಥಾ ಗಣಃ ।
ಅವಿಶುದ್ಧಿಕ್ಷಯಾಧಿಕ್ಯ ದೂಷಣೈರೇಷ ನಿಂದಿತಃ ॥ ೩೪ ॥
ಸ್ವರ್ಗಃ ಸದಾನುಶ್ರವಿಕಸ್ತಸ್ಮಾದೇನಂ ನ ಕಾಮಯೇ ।
ತತ್ರಸ್ಥಸ್ಯ ಪುನಃಪಾತೋ ಭಯಂ ನ ವ್ಯೇತಿ ಮಾನಸಾತ್ ॥ ೩೫ ॥
ಪುನಃ ಪಾತೋ ಯತಃ ಪುಂಸಸ್ತಸ್ಮಾತ್ಸ್ವರ್ಗಂ ನ ಕಾಮಯೇ ।
ಸತಿ ಪುಣ್ಯೇ ಸ್ವಯಂ ತೇನ ಪಾತಿತೋ ನಿಜಲೋಕತಃ ॥ ೩೬ ॥

---

೩೦—೩೧. ಇಂದ್ರದ್ಯುಮ್ನನು ಹೀಗೆನ್ನಲಾಗಿ, ದೇವದೂತನಿಂತೆಂದನು:— "ಎಲೈ ಪೃಥಿವೀಪತಿಯೇ! ಇವರೆಲ್ಲರೂ ಶಿವನ ಗಣಗಳು. ಶಾಪದಿಂದ ಭ್ರಷ್ಟರಾಗಿ ಭೂಮಿಗೆ ಬಂದಿರುವರು. ಶಾಪವು ಕೊನೆಯಾಗಲಾಗಿ ಹರನ ಪಾರ್ಶ್ವಕ್ಕೇ ಹೋಗುತ್ತಾರೆ. ಎಲೈ ರಾಜನೇ! ಆದುದರಿಂದ ಇವರನ್ನು ಬಿಟ್ಟು ನೀನು ನನ್ನ ಸಂಗಡ ಬೇಗನೆ ಹೊರಟು ಬಾ.

೩೩. ದೇವದೇವನಾದ ಮಹೇಶ್ವರನನ್ನುಳಿದು ಇವರಿಗೆ ಸ್ವರ್ಗವು ರುಚಿಸುವುದಿಲ್ಲವು." ಅದಕ್ಕೆ ಇಂದ್ರದ್ಯುಮ್ನನು ಹೇಳುತ್ತಾನೆ:—"ಹೀಗಿರುವ ಪಕ್ಷದಲ್ಲಿ ಎಲೈ ದೂತನೇ! ನೀನು ಹೋಗಿ ಬಾ; ನಾನು ಸ್ವರ್ಗಕ್ಕೆ ಬರುವುದಿಲ್ಲವು.

೩೪. ಶಿವಗಣವಾಗುವುದಕ್ಕೆ ಹೇಗೆ ಹೇಗೆ ಪ್ರಯತ್ನ ಮಾಡಬೇಕೋ ಹಾಗೆ ಹಾಗೆಯೇ ನಾನೂ ಪ್ರಯತ್ನಮಾಡುತ್ತೇನೆ. ಅವಿಶುದ್ಧಿ (ಶುದ್ಧಿಯಿಲ್ಲದಿರುವುದು), ಕ್ಷಯ (ನಾಶ), ಆಧಿಕ್ಯ (ಮಿತಿಮೀರಿರುವುದು), ದೂಷಣ— ಇವುಗಳಿಂದ ಈ ಸ್ವರ್ಗವು ನಿಂದಿತವಾಗಿರುವುದು.

೩೫. ಸದಾ ಕಾಲವೂ ಈ ಸ್ವರ್ಗವು ಆನುಶ್ರವಿಕ (ತನ್ನ ಕೀರ್ತಿಯನ್ನು ಕೇಳುತ್ತಿರುವವರಿಗೆ ಮಾತ್ರ ಇರುವಂಥದು) ವಾಗಿರುವುದು. ಆದುದರಿಂದ ಇದನ್ನು ನಾನು ಅಪೇಕ್ಷಿಸುವುದಿಲ್ಲ. ಅಲ್ಲಿರುವವನಿಗೆ ಮತ್ತೆ ಸ್ವರ್ಗದಿಂದ ಬೀಳಬೇಕಾದೀತೆಂಬ ಭಯವು ಮನಸ್ಸಿನಿಂದ ತೊಲಗುವುದಿಲ್ಲ.

೩೬. ಮನುಷ್ಯನಿಗೆ ಪುನಃ ಅಲ್ಲಿಂದ ಪತನವುಂಟಾಗುವುದಾದುದರಿಂದ ಸ್ವರ್ಗವನ್ನು ನಾನು ಇಚ್ಛಿಸುವುದಿಲ್ಲ. ಇನ್ನೂ ನನಗೆ ಪುಣ್ಯವಿರುವಾಗಲೇ ನಾನೇ ಆ ಬ್ರಹ್ಮನಿಂದ ತನ್ನ ಲೋಕದಿಂದ ಅಲಕ್ಷಿಸಿ ಹೊರದೂಡಲಾದೆನು.

ಚತುರ್ಮುಖೇನ ವೈಲಕ್ಷ್ಯಂ ಗತೋಽಸ್ಮಿ ಕಥಮೇಮಿ ತಂ ।
ಇತೀದಮುಕ್ತ್ವಾ ದೂತಂ ತಂ ಶೃಣ್ವತೋಽಸ್ಯೈವ ವಿಸ್ಮಯಾತ್ ॥ ೩೭ ॥
ಅಪ್ರಾಕ್ಷೀದ್ಭೂಪತಿಃ ಕೂರ್ಮಂ ತದಾಯುಃಕಾರಣಂ ತದಾ ।
ಇದಮಾಯುಃ ಕಥಂ ಜಾತಂ ಕೂರ್ಮ ದೀರ್ಘತಮಂ ತವ ॥ ೩೮ ॥
ಸುಹೃನ್ಮಿತ್ರಂ ಗುರುಸ್ತ್ವಂ ಮೇ ಯೇನ ಕೀರ್ತಿರ್ಮಮೋದ್ಧೃತಾ ॥ ೩೯ ॥

ಕೂರ್ಮ ಉವಾಚ :—

ಶೃಣು ಭೂಪ ಕಥಾಂ ದಿವ್ಯಾಂ ಶ್ರವಣಾತ್ಪಾಪನಾಶಿನೀಂ ।
ಕಥಾಂ ಸುಮಧುರಾಮೇತಾಂ ಶಿವಮಾಹಾತ್ಮ್ಯ ಸಂಯುತಾಂ ॥ ೪೦ ॥

ಶೃಣ್ವನ್ನಿಮಾಮಪಿ ಕಥಾಂ ನೃಪತೇ ಮನುಷ್ಯಃ
ಸುಶ್ರದ್ಧಯಾ ಭವತಿ ಪಾಪವಿಮುಕ್ತದೇಹಃ ।
ಶಂಭೋಃ ಪ್ರಸಾದಮಭಿಗಮ್ಯ ಯಥಾಯತೀದ
ಮಾಸೀತ್ ಪ್ರಸಾದತ ಇಯಂ ಮಮ ಕೂರ್ಮತಾಚ ॥ ೪೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಮಹೀಪ್ರಾದುರ್ಭಾವೇ ಕೂರ್ಮಾಖ್ಯಾನ ವರ್ಣನಂ" ನಾಮ ದಶಮೋಽಧ್ಯಾಯಃ

---

೩೭–೩೮. ಹೀಗೆ ನಾನು ಅವಮಾನಿತನಾದೆನೆಂದಮೇಲೆ ಆ ಸ್ವರ್ಗಕ್ಕೆ ಹೇಗೆತಾನೇ ಹೋಗಲಿ?" ಹೀಗೆಂದು ದೂತನನ್ನು ಕುರಿತು ನುಡಿದು, ವಿಸ್ಮಯದಿಂದ ಕೇಳುತ್ತಿರುವ ಅವನೆದುರಿಗೇ ಆ ಭೂಪತಿಯು ಕೂರ್ಮನನ್ನು ಕುರಿತು ಅವನ ಆಯುಸ್ಸಿನ ಕಾರಣವನ್ನು ಪ್ರಶ್ನಿಮಾಡಿದನು :—"ಎಲೈ ಕೂರ್ಮನೇ! ದೀರ್ಘತಮವಾಗಿರುವ ಈ ಆಯುಸ್ಸು ನಿನಗೆ ಹೇಗೆ ಉಂಟಾಯಿತು ?

೩೯. ನೀನೇ ನನ್ನ ಆಪ್ತಮಿತ್ರನು. ನೀನೇ ನನ್ನ ಗುರುವು. ನಿನ್ನಿಂದಲೇ ನನ್ನ ಕೀರ್ತಿಯು ಉದ್ಧರಿಸಲ್ಪಟ್ಟಿತು."

೪೦–೪೧. ಆಗ ಕೂರ್ಮನಿಂತೆಂದನು :—"ದಿವ್ಯವಾದ ಈ ಕಥೆಯನ್ನು ಕೇಳುವವನಾಗು. ಇದನ್ನು ಕೇಳುವುದರಿಂದ ಪಾಪವು ಕಳೆಯುತ್ತದೆ. ಪರಶಿವನ ಮಾಹಾತ್ಮ್ಯದಿಂದ ಕೂಡಿರುವ ಈ ಕಥೆಯನ್ನು ಆಲಿಸುವವನಾಗು. ಎಲೈ ನೃಪತಿಯೇ! ಬಹು ಶ್ರದ್ಧೆಯಿಂದ ಈ ರೀತಿಯ ಆಯುಸ್ಸೂ ಕೂರ್ಮತ್ವವೂ ನನಗುಂಟಾದುದೆಂತೆಂಬ ಈ ಕಥೆಯನ್ನು ಕೇಳುವ ಮನುಷ್ಯನು ಶಂಭುವಿನ ಪ್ರಸಾದವನ್ನು ಪಡೆದು ಪಾಪವಿಮೋಚನೆಯನ್ನು ಹೊಂದಿದವನಾಗುತ್ತಾನೆ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಕೂರ್ಮಾಖ್ಯಾನ ವರ್ಣನ"ವೆಂಬ ಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಾದಶೋಽಧ್ಯಾಯಃ

## ಮಹೀಪ್ರಾದುರ್ಭಾವೇ — ಕೂರ್ಮಾಖ್ಯಾನಂ

**ಕೂರ್ಮ ಉವಾಚ :—**

**ಶಾಂಡಿಲ್ಯ ಇತಿ ವಿಖ್ಯಾತಃ ಪುರಾಹಮಭವಂ ದ್ವಿಜಃ ।**
**ಬಾಲಭಾವೇ ಮಯಾ ಭೂಪ ಕ್ರೀಡಮಾನೇನ ನಿರ್ಮಿತಂ ॥ ೧ ॥**
**ಪುರಾ ಪ್ರಾವೃಷಿ ಪ್ರಾಂಶೂತ್ಥಂ ಶಿವಾಯತನಮುಚ್ಛ್ರಿತಂ ।**
**ಜಲಾರ್ದ್ರವಾಲುಕಾಪ್ರಾಯಂ ಪ್ರಾಂಶುಪ್ರಾಕಾರ ಶೋಭಿತಂ ॥ ೨ ॥**
**ಪಂಚಾಯತನವಿನ್ಯಾಸಂ ಮನೋಹರತರಂ ನೃಪ ।**
**ವಿನಾಯಕಶಿವಾಸೂರ್ಯ ಮಧುಸೂದನಮೂರ್ತಿಮತ್ ॥ ೩ ॥**
**ಪೀತಮೃತ್ಸ್ವರ್ಣಕಲಶಂ ಧ್ವಜಮಾಲಾವಿಭೂಷಿತಂ ।**
**ಕಾಷ್ಠತೋರಣ ವಿನ್ಯಸ್ತಂ ದೋಲಕೇನ ವಿಭೂಷಿತಂ ॥ ೪ ॥**
**ದೃಢಪ್ರಾಂಶು ಸಮುದ್ಭೂತಸೋಪಾನಶ್ರೇಣಿಭಾಸುರಂ ।**
**ಸರ್ವಾಶ್ಚರ್ಯಮಯಂ ದಿವ್ಯಂ ವಯಸ್ಯೈಃ ಸಂವೃತೇನ ಮೇ ॥ ೫ ॥**

---

### ಕನ್ನಡದ ಅನುವಾದ

#### ಮಹೀಪ್ರಾದುರ್ಭಾವ — ಕೂರ್ಮಾಖ್ಯಾನ

೧–೨. ಕೂರ್ಮನು ಹೇಳುತ್ತಾನೆ:—"ಪೂರ್ವದಲ್ಲಿ ನಾನು ಶಾಂಡಿಲ್ಯನೆಂದು ಹೆಸರುಗೊಂಡ ದ್ವಿಜನಾಗಿದ್ದೆನು. ಎಲೈ ಭೂಪನೇ! ನಾನು ಬಾಲಕನಾಗಿದ್ದಾಗ ಆಟವಾಡುತ್ತಾ ಮಳೆಗಾಲದಲ್ಲಿ ನೀರಿನಲ್ಲಿ ನೆನೆದು ಮರಳುತುಂಬಿದ ಮಣ್ಣು ದೂಳಿನಿಂದ ಎತ್ತರವಾದ ಒಂದು ಶಿವಾಲಯವನ್ನು ನಿರ್ಮಿಸಿದೆನು. ಆ ಶಿವಾಲಯವು ಎತ್ತರವಾದ ಪ್ರಾಕಾರದಿಂದ ಶೋಭಿಸುತ್ತಿದ್ದಿತು.

೩. ವಿನಾಯಕ, ಪಾರ್ವತಿ, ಶಿವ, ಸೂರ್ಯ, ಮಧುಸೂದನ ಎಂಬ ಪಂಚಾಯತನ ಮೂರ್ತಿಗಳ ವಿನ್ಯಾಸದಿಂದ ಅದು ಮನೋಹರತರವಾಗಿದ್ದಿತು.

೪. ಹಳದಿಯ ಮಣ್ಣಿನ ಹೊಂಗಳಸದಿಂದ ಆ ಆಲಯವು ಬಹುವಾಗಿ ಶೋಭಿಸುತ್ತಿದ್ದಿತು; ಧ್ವಜ ಮತ್ತು ಮಾಲೆಗಳಿಂದ ಅಲಂಕೃತವಾಗಿದ್ದಿತು. ಕಡ್ಡಿಯ ತೋರಣಗಳನ್ನಿಟ್ಟು ಉಯ್ಯಾಲೆಯಿಂದ ವಿಭೂಷಿತವಾಗಿದ್ದಿತು.

೫. ಇಷ್ಟೆಯಲ್ಲದೆ, ದೃಢವಾಗಿಯೂ ಎತ್ತರವಾಗಿಯೂ ಇದ್ದ ಮೆಟ್ಟಲು ಸಾಲಿನಿಂದ ಮನೋಹರವಾಗಿದ್ದಿತು. ಹೀಗೆ ಸರ್ವಾಶ್ಚರ್ಯಮಯವಾದ ದಿವ್ಯ ದೇವಾಲಯವನ್ನು ಜೊತೆಯ ಹುಡುಗರೊಡಗೂಡಿದ ನಾನು ನಿರ್ಮಿಸಿದೆನು.

ತತ್ರ ಜಾಗೇಶ್ವರಂ ಲಿಂಗಂ ಕೃತ್ವಾಥ ವಿನಿವೇಶಿತಂ ।
ಬಾಲ್ಯಾದುಪಲರೂಪಂ ತದ್ವರ್ಷಾವಾರಿ ವಿಶುದ್ಧಿಮತ್ ॥ ೬ ॥
ಬಕಪುಷ್ಪೈಸ್ತಥಾನ್ಯೈಶ್ಚ ಕೇದಾರೋತ್ಥೈಃ ಸಮಾಹೃತೈಃ ।
ಕೋಮಲೈರಪರೈಃ ಪುಷ್ಪೈಃ ವೃತಿವಲ್ಲೀ ಸಮುದ್ಭವೈಃ ॥ ೭ ॥
ಕೂಷ್ಮಾಂಡೈಶ್ಚೈವ ವರ್ಣಾದ್ಯೈರುನ್ಮತ್ತಕುಸುಮಾಯುತೈಃ ।
ಮಂದಾರೈರ್ಬಿಲ್ವಪತ್ರೈಶ್ಚ ದೂರ್ವಾದ್ಯೈಶ್ಚ ನವಾಂಕುರೈಃ ॥ ೮ ॥
ಪೂಜಾ ವಿರಚಿತಾ ರಮ್ಯಾ ಶಂಭೋರಿತಿ ಮಯಾ ನೃಪ ।
ತತಸ್ತಾಂಡವಮಾರಬ್ಧಮನಪೇಕ್ಷಿತಸತ್ಕ್ರಿಯಂ ॥ ೯ ॥
ಶಿವಸ್ಯ ಪುರತೋ ಬಾಲ್ಯಾದ್ಗೀತಂ ಚ ಸ್ವರವರ್ಜಿತಂ ।
ಅಕಾರ್ಷಂ ಸಕೃದೇವಾಹಂ ಬಾಲ್ಯೇ ಶಿಶುಗಣಾವೃತಃ ॥ ೧೦ ॥
ತತೋ ಮೃತಾಽಹಂ ಜಾತಶ್ಚ ವಿಪ್ರೋ ಜಾತಿಸ್ಮರೋ ನೃಪ ।
ವೈದಿಶೇ ನಗರೇಽಕಾರ್ಷಂ ಶಿವಪೂಜಾಂ ವಿಶೇಷತಃ ॥ ೧೧ ॥
ಶಿವದೀಕ್ಷಾಮುಪಾಗಮ್ಯಾನುಗೃಹೀತಃ ಶಿವಾಗಮೈಃ ।
ಶಿವಪ್ರಾಸಾದ ಆಧಾಯ ಲಿಂಗಂ ಶ್ರದ್ಧಾ ಸಮನ್ವಿತಃ ॥ ೧೨ ॥

---

೬. ತರುವಾಯ ನಾನು ಜಾಗೇಶ್ವರಲಿಂಗವನ್ನು ಮಾಡಿ ಆ ದೇವಾಲಯದಲ್ಲಿ ಇಟ್ಟೆನು. ಮಳೆಯ ನೀರಿನಿಂದ ತೊಳೆದ ಕಲ್ಲೊಂದನ್ನು ಬಾಲ್ಯಸ್ವಭಾವದಿಂದ ಲಿಂಗವೆಂದು ಭಾವಿಸಿ ಅಲ್ಲಿಟ್ಟೆನು.

೭–೧೦. ಎಲೈ ನೃಪನೇ! ಆ ಬಳಿಕ ಬಕಪುಷ್ಪಗಳಿಂದಲೂ, ಗದ್ದೆಯಲ್ಲಿ ಬೆಳೆದು ತಂದಿದ್ದ ಬೇರೆಯ ಹೂವುಗಳಿಂದಲೂ, ಬೇಲಿಯ ಬಳ್ಳಿಗಳಲ್ಲಿ ಅರಳಿದ್ದ ಮತ್ತೆ ಹಲವು ಬಗೆಯ ಕೋಮಲ ಪುಷ್ಪಗಳಿಂದಲೂ ಕುಂಬಳ, ಉಮ್ಮತ್ತಿ ಮೊದಲಾದ ಬಣ್ಣ ಬಣ್ಣದ ಹೂವುಗಳಿಂದಲೂ, ಮಂದಾರ ಪುಷ್ಪಗಳಿಂದಲೂ, ಬಿಲ್ವಪತ್ರೆಗಳಿಂದಲೂ, ದೂರ್ವೆಯೇ ಮೊದಲಾದ ಹೊಸ ಚಿಗುರುಗಳಿಂದಲೂ 'ಶಂಭುವಿಗೆ' ಎಂದು ರಮ್ಯವಾದ ಪೂಜೆಮಾಡಿದೆನು. ಬಳಿಕ ಅನಪೇಕ್ಷಿತವಾಗಿ ತಾಂಡವನೃತ್ಯವನ್ನಾರಂಭಿಸಿದೆನು. ಶಿವನೆದುರಿಗೆ ಬಾಲ್ಯಸ್ವಭಾವಕ್ಕೆ ತಕ್ಕಂತೆ ಹುಡುಗರ ಗುಂಪಿನಿಂದ ಸುತ್ತುವರಿದು ಸ್ವರವಿಲ್ಲದೆ ಗೀತವನ್ನು ಹಾಡಿದೆನು.

೧೧–೧೨. ಬಳಿಕ ನಾನು ಹೀಗೆಯೇ ಶಿವನಿಗೆ ಸೇವೆಯನ್ನು ಸಲ್ಲಿಸುತ್ತಲೇ ಒಂದು ದಿನ ಸತ್ತುಹೋದೆನು. ಎಲೈ ದೊರೆಯೇ! ತರುವಾಯ ನಾನು ವಿದಿಶಾ ನಗರದಲ್ಲಿ ಪೂರ್ವಜನ್ಮಸ್ಮರಣೆಯುಳ್ಳ ಬ್ರಾಹ್ಮಣನಾಗಿ ಹುಟ್ಟಿದೆನು. ಆಗ ಶಿವಪೂಜೆಯನ್ನು ವಿಶೇಷವಾಗಿ ಮಾಡಿದೆನು. ಶಿವದೀಕ್ಷೆಯನ್ನು ಪಡೆದುಕೊಂಡು ಶಿವಾಗಮಗಳಿಂದ ಅನುಗ್ರಹಿಸಲ್ಪಟ್ಟವನಾಗಿ, ಶ್ರದ್ಧೆಯಿಂದ ಕೂಡಿ ಶಿವಮಂದಿರದಲ್ಲಿ ಲಿಂಗವನ್ನು ಸ್ಥಾಪಿಸಿದೆನು.

ಕಲ್ಪಕೋಟಿಂ ವಸೇತ್ಸ್ವರ್ಗೇ ಯಃ ಕರೋತಿ ಶಿವಾಲಯಂ ।
ಯಾವಂತಿ ಪರಿಮಾಣೂನಿ ಶಿವಸ್ಯಾಯತನೇ ನೃಪ ॥ ೧೩ ॥
ಭವಂತಿ ತಾವದ್ವರ್ಷಾಣಿ ಕಾರಕಃ ಶಿವಸದ್ಮನಿ ।
ಇತಿ ಪೌರಾಣವಾಕ್ಯಾನಿ ಸ್ಮರಚ್ಛೈಲಂ ಶಿವಾಲಯಂ ॥ ೧೪ ॥
ಅಕಾರಿಷಮಹಂ ರಮ್ಯಂ ವಿಶ್ವಕರ್ಮ ವಿಧಾನತಃ ।
ಮೃಣ್ಮಯಂ ಕಾಷ್ಠನಿಷ್ಪನ್ನಂ ಪಕ್ವೇಷ್ಟಂ ಶೈಲಮೇವವಾ ॥ ೧೫ ॥
ಕೃತಮಾಯತನಂ ದದ್ಯಾತ್ಕ್ರಮಾದ್ದಶಗುಣಂ ಫಲಂ ।
ಭಸ್ಮಶಾಯೀ ತ್ರಿಷವಣೋ ಭಿಕ್ಷಾನ್ನಕೃತಭೋಜನಃ ॥ ೧೬ ॥
ಜಟಾಧರತಪಸ್ಯಂಶ್ಚ ಶಿವಾರಾಧನತತ್ಪರಃ ।
ಇತ್ಥಂ ಮೇ ಕುರ್ವತೋ ಜಾತಂ ಪುನರ್ಭೂಪತ್ರಮಾಪಣಂ ॥ ೧೭ ॥
ಜಾತೋ ಜಾತಿಸ್ಮರಸ್ತತ್ರ ತೃತೀಯೇಽಹಂ ಭವಾಂತರೇ ।
ಸಾರ್ವಭೌಮೋ ಮಹೀಪಾಲಃ ಪ್ರತಿಷ್ಠಾನೇ ಪುರೋತ್ತಮೇ ॥ ೧೮ ॥
ಜಯದತ್ತ ಇತಿ ಖ್ಯಾತಃ ಸೂರ್ಯವಂಶಸಮುದ್ಭವಃ ।
ತತೋ ಮಯಾ ಬಹುವಿಧಾಃ ಪ್ರಾಸಾದಾಃ ಕಾರಿತಾ ನೃಪ ॥ ೧೯ ॥

---

೧೩–೧೭. 'ಯಾವನು ಶಿವಾಲಯವನ್ನು ನಿರ್ಮಿಸುವನೋ ಅವನು ಒಂದು ಕೋಟಿ ಕಲ್ಪಗಳವರೆಗೆ ಸ್ವರ್ಗದಲ್ಲಿ ವಾಸಮಾಡುವನು. ಎಲೈ ನೃಪನೇ! ಶಿವಾಯತನದಲ್ಲಿ ಎಷ್ಟು ಪರಮಾಣುಗಳಿರುವುವೋ, ಅಷ್ಟು ವರ್ಷಗಳವರೆಗೂ ಆ ಶಿವಾಲಯ ನಿರ್ಮಾಪಕನು ಶಿವನ ಮನೆಯಲ್ಲಿ ನೆಲಸಿರುತ್ತಾನೆ. ಇಂತೆಂಬ ಪುರಾಣ ವಾಕ್ಯಗಳನ್ನು ಸ್ಮರಿಸುತ್ತ ಕಲ್ಲಿನಲ್ಲಿಯೇ ಶಿವಾಲಯವನ್ನು ರಮ್ಯವಾಗಿ ವಿಶ್ವಕರ್ಮ ವಿಧಾನದಿಂದ ಕಟ್ಟಿಸಿದೆನು. ಮಣ್ಣಿನದು, ಮರದಿಂದ ಮಾಡಿದುದು, ಸುಟ್ಟ ಇಟ್ಟಿಗೆಯದು, ಅಥವಾ ಕಲ್ಲು ಕಟ್ಟಡದ್ದು ಈ ರೀತಿಯಾಗಿ ಮಾಡಿದ ಶಿವಾಲಯವು ಕ್ರಮ ಕ್ರಮವಾಗಿ ಹತ್ತರಷ್ಟು ಹೆಚ್ಚು ಫಲವನ್ನು ಕೊಡುತ್ತದೆ. ನಾನಾದರೋ ಆಗ ಭಸ್ಮದ ಮೇಲೆ ಮಲಗುತ್ತಿದ್ದೆನು, ಮೂರು ಸಲ ಸ್ನಾನ ಮಾಡುತ್ತಿದ್ದೆನು, ಭಿಕ್ಷಾನ್ನವನ್ನು ಊಟಮಾಡುತ್ತಿದ್ದೆನು. ಜಟಾಧರನಾಗಿ ತಪಸ್ಸುಮಾಡುತ್ತ ಶಿವಾರಾಧನೆಯಲ್ಲಿ ತತ್ಪರನಾಗಿದ್ದೆನು. ಹೀಗೆ ಮಾಡುತ್ತಿರುವಲ್ಲಿ, ಎಲೈ ಮಹಾರಾಜನೇ! ನನಗೆ ಮತ್ತೆ ಮರಣವುಂಟಾಯಿತು.

೧೮–೧೯. ಬಳಿಕ ಮೂರನೆಯ ಜನ್ಮಾಂತರದಲ್ಲಿ ಜಾತಿಸ್ಮರನಾಗಿ ಪಟ್ಟಣಗಳಲ್ಲೆಲ್ಲ ಶ್ರೇಷ್ಠವಾದ ಪ್ರತಿಷ್ಠಾನ ಪುರದಲ್ಲಿ ಸಾರ್ವಭೌಮ ಮಹಾರಾಜನಾಗಿ ಹುಟ್ಟಿದೆನು. ಆಗ ನಾನು ಸೂರ್ಯವಂಶ ಸಮುದ್ಭವನಾಗಿ ಜಯದತ್ತನೆಂಬ ಹೆಸರಿನಿಂದ ಪ್ರಖ್ಯಾತನಾದೆನು. ಎಲೈ ನೃಪನೇ! ಬಳಿಕ ನನ್ನಿಂದ ಬಹುವಿಧಗಳಾದ ಶಿವಪ್ರಾಸಾದಗಳು ನಿರ್ಮಿಸಲ್ಪಟ್ಟವು.

ತಸ್ಮಿನ್ಭವಾಂತರೇ ಶಂಭೋರಾರಾಧನಪರೇಣ ಚ ।
ತತೋ ನಿರೂಪಿತಾ ಜಾತಾ ಬಕಪುಷ್ಪಪುರಸ್ಸರಾಃ ॥ ೨೦ ॥
ಸೌವರ್ಣೈ ರಾಜತೈ ರತ್ನನಿರ್ಮಿತೈಃ ಕುಸುಮೈರ್ನೃಪ ।
ತಥಾವಿಧೇಽನ್ನದಾನಾದಿ ಕರೋಮಿ ನೃಪಸತ್ತಮ ॥ ೨೧ ॥
ಕೇವಲಂ ಶಿವಲಿಂಗಾನಾಂ ಪೂಜಾಂ ಪುಷ್ಪೈಃ ಕರೋಮ್ಯಹಂ ।
ತತೋ ಮೇ ಭಗವಾನ್ ಶಂಭುಃ ಸಂತುಷ್ಟೋಽಥ ವರಂ ದದೌ ॥ ೨೨ ॥
ಅಜರಾಮರತಾಂ ರಾಜಂಸ್ತೇನೈವ ವಪುಷಾವೃತಃ ।
ತತಸ್ತಥಾವಿಧಂ ಪ್ರಾಪ್ಯಾನನ್ಯಸಾಧಾರಣಂ ವರಂ ॥ ೨೩ ॥
ವಿಚರಾಮಿ ಮಹೀಮೇತಾಂ ಮದಾಂಧ ಇವ ವಾರಣಃ ।
ಶಿವಭಕ್ತಿಂ ವಿಹಾಯಾಥ ನೃಪೋಽಹಂ ಮದನಾತುರಃ ॥ ೨೪ ॥
ಪ್ರಧರ್ಷಯಿತುಮಾರಬ್ಧಃ ಸ್ತ್ರಿಯಃ ಪರಪರಿಗ್ರಹಾಃ ।
ಆಯುಷಸ್ತಪಸಃ ಕೀರ್ತೇಸ್ತೇಜಸೋ ಯಶಸಃ ಶ್ರಿಯಃ ॥ ೨೫ ॥

---

೨೦. ಆ ಜನ್ಮದಲ್ಲಿ ನಾನು ಶಂಭುವಿನ ಆರಾಧನೆಯಲ್ಲಿಯೇ ಸದಾ ಆಸಕ್ತನಾಗಿದ್ದೆನು. ಆಗ ಚಿನ್ನದಲ್ಲಿ ಬಕಪುಷ್ಪವೇ ಮೊದಲಾದ ಹೂವುಗಳನ್ನೂ ಮಾಡಿಸಿ ಪೂಜಿಸುತ್ತಿದ್ದೆನು.

೨೧. ಅಯ್ಯಾ ಮಹಾರಾಜನೇ! ಇಷ್ಟೆಯಲ್ಲದೆ ನಾನು ಚಿನ್ನದಿಂದಲೂ ಬೆಳ್ಳಿಯಿಂದಲೂ ರತ್ನಗಳಿಂದಲೂ ನಿರ್ಮಿಸಲ್ಪಟ್ಟ ಇತರ ಹಲವಾರು ಪುಷ್ಪಗಳಿಂದ ಶಿವನನ್ನು ಪೂಜಿಸುತ್ತಿದ್ದೆನು. ಎಲೈ ನೃಪಶ್ರೇಷ್ಠನೇ! ಹೀಗೆ ಆರಾಧಿಸುತ್ತಿದ್ದ ಕಾಲದಲ್ಲಿ ಅನ್ನದಾನಾದಿಗಳನ್ನೂ ಮಾಡುತ್ತಿದ್ದೆನು.

೨೨. ಶಿವಲಿಂಗಗಳಿಗೆ ಏಕಮನಸ್ಸುಳ್ಳವನಾಗಿ ಪುಷ್ಪಗಳಿಂದ ಪೂಜೆ ಮಾಡುತ್ತಿದ್ದೆನು. ಬಳಿಕ ಭಗವಂತನಾದ ಶಂಭುವು ಸಂತುಷ್ಟನಾಗಿ ನನಗೆ ವರವನ್ನು ಕೊಟ್ಟನು.

೨೩–೨೮. ಅದೇ ಶರೀರದಿಂದ ಕೂಡಿ ಅಜರನಾಗಿಯೂ, ಅಮರನಾಗಿಯೂ ಇರುವಂತೆ ವರವನ್ನನುಗ್ರಹಿಸಿದನು. ಬಳಿಕ ಅನನ್ಯ ಸಾಧಾರಣವಾದ ಆ ಬಗೆಯ ವರವನ್ನು ಪಡೆದು ಮದ್ದಾನೆಯೋಪಾದಿಯಲ್ಲಿ ಈ ಭೂಮಂಡಲವನ್ನೆಲ್ಲಾ ಸುತ್ತಿ ಅಲೆಯುತ್ತಿದ್ದೆನು. ಅಯ್ಯಾ ರಾಜನೇ! ಆ ಬಳಿಕ ನಾನು ಶಿವಭಕ್ತಿಯನ್ನು ತೊರೆದು ಮದನಾತುರನಾಗಿ ಪರಪರಿಗೃಹೀತೆಯರಾದ ಸ್ತ್ರೀಯರನ್ನು ಬಲಾತ್ಕರಿಸಿ ಕೆಡಿಸತೊಡಗಿದೆನು. ಆಯುಸ್ಸು, ತಪಸ್ಸು, ಕೀರ್ತಿ, ತೇಜಸ್ಸು, ಯಶಸ್ಸು, ಸಂಪತ್ತು— ಇವುಗಳ ವಿನಾಶಕ್ಕೆ ಮುಖ್ಯ ಕಾರಣವೆಂದರೆ ಪರಸ್ತ್ರೀಯರನ್ನು ಬಲಾತ್ಕರಿಸಿ ಕೆಡಿಸುವುದು. ಎಲೈ ಮಹಾರಾಜನೇ! ಪುರುಷನು ಯಾವಾಗ ಹರಿಣಾಕ್ಷಿಯರ ದೃಷ್ಟಿಗೆ ಗೋಚರನಾಗುವನೋ ಆ ಕ್ಷಣವೇ ಕಿವಿಯಿದ್ದೂ

ವಿನಾಶಕಾರಣಂ ಮುಖ್ಯಂ ಪರದಾರಪ್ರಧರ್ಷಣಂ ।
ಸಕರ್ಣಃ ಶ್ರುತಿಹೀನೋಽಸೌ ಪಶ್ಯನ್ನಂಧೋ ವದನ್ ಜಡಃ ॥ ೨೬ ॥
ಅಚೇತನಶ್ಚೇತನಾವಾನ್ ಮೂರ್ಖೋ ವಿದ್ವಾನಪಿ ಸ್ಫುಟಂ ।
ತದಾ ಭವತಿ ಭೂಪಾಲ ಪುರುಷಃ ಕ್ಷಣಮಾತ್ರತಃ ॥ ೨೭ ॥
ಯದ್ಯೈವ ಹರಿಣಾಕ್ಷೀಣಾಂ ಗೋಚರಂ ಯಾತಿ ಚಕ್ಷುಷಾಂ ।
ಮೃತಸ್ಯ ನಿರಯೇ ವಾಸೋ ಜೀವತಶ್ಚೇಶ್ವರಾದ್ಭಯಂ ॥ ೨೮ ॥
ಏವಂ ಲೋಕದ್ವಯಂ ಹಂತ್ರೀ ಪರದಾರಪ್ರಧರ್ಷಣಾ ।
ಜರಾಮರಣಹೀನೋಽಹಮಿತಿ ನಿಶ್ಚಯಮಾಸ್ಥಿತಃ ॥ ೨೯ ॥
ಐಹಿಕಾಮುಷ್ಮಿಕಭಯಂ ವಿಹಾಯಾಹಂ ತತಃ ಪರಂ ।
ಪ್ರಧರ್ಷಯಿತುಮಾರಬ್ಧಸ್ತದಾ ಭೂಪ ಪರಸ್ತ್ರಿಯಃ ॥ ೩೦ ॥
ಅಥ ಮಾಂ ಸಂಪರಿಜ್ಞಾಯ ಮರ್ಯಾದಾ ರಹಿತಂ ಯಮಃ ।
ವರಪ್ರದಾನಾದೀಶಸ್ಯ ತದಂತಿಕಮುಪಾಯಯೌ ।
ವ್ಯಜಿಜ್ಞಪತ್ ಮದೀಯಂ ಚ ಶಂಭೋರ್ಧರ್ಮವ್ಯತಿಕ್ರಮಂ ॥ ೩೧ ॥

ಯಮ ಉವಾಚ :—

ನಾಹಂ ತವಾನುಭವೇನ ಗುಪ್ತಸ್ಯಾಸ್ಯ ವಿನಿಗ್ರಹಂ ॥ ೩೨ ॥
ಶಕ್ನೋಮಿ ಪಾಪಿನೋ ದೇವ ಮನ್ನಿಯೋಗೇಽನ್ಯಮಾದಿಶ ।
ಜಗದಾಧಾರರೂಪಾ ಹಿ ತ್ವಯೋಕ್ತಾಃ ಪತಿವ್ರತಾಃ ॥ ೩೩ ॥

---

ಕಿವುಡನೂ, ಕಣ್ಣಿದ್ದೂ ಕುರುಡನೂ, ಮಾತಾಡಬಂದರೂ ಜಡನೂ, ಚೈತನ್ಯ ವಿದ್ದರೂ ಅಚೇತನನೂ, ವಿದ್ವಾಂಸನಾದರೂ ಶುದ್ಧ ಮೂರ್ಖನೂ, ಆಗಿಬಿಡುವನು. ಅಂತಹನಿಗೆ ಸತ್ತಮೇಲೆ ನರಕದಲ್ಲಿ ವಾಸವು ಸಿದ್ಧವಾಗಿರುವುದು. ಬದುಕಿರುವವರೆಗೂ ಈಶ್ವರನಿಂದ ಭಯವಿರುತ್ತದೆಯಷ್ಟೆ!

೨೯–೩೦. ಈ ರೀತಿಯಲ್ಲಿ ಪರದಾರಪ್ರಧರ್ಷಣವೆಂಬುದು ಎರಡು ಲೋಕಗಳನ್ನೂ ನಾಶಮಾಡುವುದು. ನಾನಾದರೋ ಮುಪ್ಪು ಸಾವುಗಳಿಲ್ಲದವನೆಂದು ನಿಶ್ಚಯವಾಗಿದ್ದೆನು. ಅಯ್ಯಾ ಭೂಪನೇ! ಬಳಿಕ ನಾನು ಐಹಿಕ ಮತ್ತು ಆಮುಷ್ಮಿಕ ಭಯಗಳನ್ನು ನೀಗಿದವನಾಗಿ ಅಲ್ಲಿಂದ ಮುಂದೆ, ಪರಸ್ತ್ರೀಯರನ್ನು ಕೆಡಿಸಲು ಮೊದಲುಮಾಡಿದೆನು.

೩೧. ಬಳಿಕ ಯಮನು ಈಶ್ವರನ ವರಪ್ರಸಾದದಿಂದ ನಾನು ಮರಣದ ಕಟ್ಟುಗಳಿಲ್ಲದವನೆಂದು ತಿಳಿದು ಆತನ ಬಳಿ ಸಾರಿ, ನಾನು ಧರ್ಮವನ್ನು ಮೀರಿರುವ ಸಂಗತಿಯನ್ನು ಆತನಿಗೆ ವಿಜ್ಞಾಪಿಸಿದನು.

೩೨–೩೩. ಯಮನಿಂತೆಂದನು:—"ಎಲೈ ದೇವನೇ! ನಿನ್ನ ಮಹಿಮೆಯಿಂದ ರಕ್ಷಿತನಾಗಿರುವ ಈ ಪಾಪಿಯನ್ನು ನಿಗ್ರಹಮಾಡಲು ನಾನು ಶಕ್ತನಲ್ಲ.

ಗಾವೋ ವಿಪ್ರಾಃ ಸನಿಗಮಾ ಅಲುಬ್ಧಾ ದಾನಶೀಲಿನಃ ।
ಸತ್ಯನಿಷ್ಠಾ ಇತಿ ಸ್ವಾಮಿನ್ ತೇಷಾಂ ಮುಖ್ಯತಮಾ ಸತೀ ॥ ೩೪ ॥
ತಾಸ್ತೇನ ಧರ್ಷಿತಾ ಲುಪ್ತಂ ಮದೀಯಂ ಧರ್ಮಶಾಸನಂ ।
ವರದಾನಪ್ರಮತ್ತೇನ ತನ್ವೈವ ಪರಿಭೂಯ ಮಾಂ ॥ ೩೫ ॥
ಜಯದತ್ತೇನ ದೇವೇಶ ಪ್ರತಿಷ್ಠಾನಾಧಿವಾಸಿನಾ ।
ಇಮಾಂ ಧರ್ಮಸ್ಯ ಭಗವಾನ್ ಗಿರಮಾಕರ್ಣ್ಯ ಕೋಪಿತಃ ।
ಶಶಾಪ ಮಾಂ ಸಮಾನೀಯ ವೇಪಮಾನಂ ಕೃತಾಂಜಲಿಂ ॥ ೩೬ ॥

ಈಶ್ವರ ಉವಾಚ :—

ಯಸ್ಮಾದ್ದುಷ್ಟ ಸಮಾಚಾರ ಧರ್ಷಿತಾಸ್ತು ಪತಿವ್ರತಾಃ ॥ ೩೭ ॥
ಕಾಮಾರ್ತೇನ ಮಯಾ ಶಪ್ತಸ್ತಸ್ಮಾತ್ಕೂರ್ಮಃ ಕ್ಷಣಾದ್ಭವ ।
ತತಃ ಪ್ರಣಮ್ಯ ವಿಜ್ಞಪ್ತಃ ಶಾಪತಾಪಹರೋ ಮಯಾ ॥ ೩೮ ॥
ಪ್ರಾಹ ಷಷ್ಟಿತಮೇ ಕಲ್ಪೇ ವಿಶಾಪೋ ಭವಿತಾ ಗಣ ।
ಮದೀಯ ಇತಿ ಸಂಪ್ರೋಚ್ಯ ಜಗಾಮಾದರ್ಶನಂ ಶಿವಃ ॥ ೩೯ ॥

---

ನನ್ನ ಅಧಿಕಾರಕ್ಕೆ ಬೇರೊಬ್ಬನನ್ನು ನಿಯಮಿಸಬೇಕು. ಎಲೈ ಈಶ್ವರನೇ! ಪತಿವ್ರತೆಯರು ಜಗತ್ತಿಗೆ ಆಧಾರಸ್ವರೂಪರೆಂದು ನೀನೇ ಹೇಳಿರುವೆ.

೩೪. ಎಲೈ ಸ್ವಾಮಿಯೇ! ಗೋವುಗಳು, ವೇದಾಧ್ಯಯನಶಾಲಿಗಳಾದ ಬ್ರಾಹ್ಮಣರು, ಲುಬ್ಧರಲ್ಲದ ದಾನಶೀಲರು, ಸತ್ಯದಲ್ಲಿ ನಿಷ್ಠೆಯುಳ್ಳವರು—ಇವರೆಲ್ಲರೂ ಜಗದಾಧಾರರೂಪರೆಂದು ನೀನು ಹೇಳಿದ್ದೀಯೆ. ಅವರಲ್ಲಿ ಪತಿವ್ರತೆಯಾದ ಸತಿಯೇ ಮುಖ್ಯತಮಳಾದವಳು.

೩೫–೩೬. ಎಲೈ ದೇವೇಶನೇ! ಅಂಥ ಪತಿವ್ರತೆಯರು ನಿನ್ನ ವರದಾನದಿಂದ ಅತಿ ಮತ್ತನಾಗಿರುವ ಪ್ರತಿಷ್ಠಾನನಿವಾಸಿಯಾದ ಆ ಜಯದತ್ತನಿಂದ ಧರ್ಷಿತರಾಗಿದ್ದಾರೆ. ಅವನು ನನ್ನನ್ನು ಕೀಳ್ಗಣಿಸಿ ಸತಿಯರನ್ನು ಕೆಡಿಸುತ್ತಿದ್ದಾನೆ. ನನ್ನ ಧರ್ಮಶಾಸನವು ಲೋಪವಾಗಿಹೋಯಿತು.'' ಧರ್ಮರಾಜನ ಈ ಮಾತನ್ನು ಕೇಳಿ ಭಗವಂತನು ಕೋಪಗೊಂಡು ಕೂಡಲೆ ನನ್ನನ್ನು ಕರಸಿಕೊಂಡು ನಡುನಡುಗುತ್ತ ಅಂಜಲಿಬದ್ಧನಾಗಿದ್ದ ನನ್ನನ್ನು ಈ ರೀತಿ ಶಪಿಸಿದನು.

೩೭–೩೯. ಈಶ್ವರನಿಂತೆಂದನು :—'' ಎಲಾ ದುಷ್ಟಾಚಾರವುಳ್ಳವನೇ! ಕಾಮಾರ್ತನಾದ ನಿನ್ನಿಂದ ಪತಿವ್ರತೆಯರು ಧರ್ಷಿತರಾದಕಾರಣ ನನ್ನಿಂದ ಶಪಿಸಲ್ಪಟ್ಟಿರುವೆ, ಈ ಕ್ಷಣದಲ್ಲಿಯೇ ಕೂರ್ಮನಾಗಿಹೋಗು.'' ಹೀಗೆ ಭಗವಂತನು ಶಪಿಸಲಾಗಿ ಶಾಪತಾಪಹಾರಿಯಾದ ಆ ದೇವನನ್ನು ನಮಸ್ಕರಿಸಿ ನಾನು ಪುನಃ ವಿಜ್ಞಾಪಿಸಿಕೊಂಡೆನು. ಆಗ ''ಅರುವತ್ತನೆಯಕಲ್ಪದಲ್ಲಿ ಶಾಪವಿಮೋಚನೆಹೊಂದಿ ನನ್ನ ಗಣವೇ ಆಗಲಿರುವೆ'' ಎಂದು ನುಡಿದು ಶಿವನು ಅಂತರ್ಧಾನಹೊಂದಿದನು.

ಅಹಂ ಕೂರ್ಮಸ್ತದಾ ಜಾತೋ ದಶಯೋಜನವಿಸ್ತೃತಃ ।
ಸಮುದ್ರಸಲಿಲೇ ನೀತಸ್ತ್ವಯಾಽಹಂ ಯಜ್ಞಸಾಧನೇ ॥ ೪೦ ॥
ಪುರಸ್ತಾದ್ಯಾಯಜೂಕೇನ ಸ್ಮರಂಸ್ತಚ್ಚ ಬಿಭೇಮಿ ತೇ ।
ದಗ್ಧಸ್ತ್ವಯಾಹಂ ಪೃಷ್ಠೇಽತ್ರ ವ್ರಣಾನ್ಯೇತಾನಿ ಪಶ್ಯ ಮೇ ॥ ೪೧ ॥
ಚಯನಾನಿ ಬಹೂನ್ಯತ್ರ ಕಲ್ಪಸೂತ್ರ ವಿಧಾನತಃ ।
ಪೃಷ್ಠೋಽಪರಿ ಕೃತಾನ್ಯಾಸನ್ನಿಂದ್ರದ್ಯುಮ್ನ ತದಾ ತ್ವಯಾ ॥ ೪೨ ॥
ಭೂಯಃ ಸಂತಾಪಿತಾ ಯಜ್ಞೈಃ ಪೃಥಿವೀ ಪೃಥಿವೀಪತೇ ।
ಸುಸ್ರಾವ ಸರ್ವತೀರ್ಥಾನಾಂ ಸಾರಂ ಸಾಽಭೂನ್ಮಹೀನದೀ ॥ ೪೩ ॥
ತಸ್ಯಾಂ ಚ ಸ್ನಾನಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ।
ತತೋ ನೈಮಿತ್ತಿಕೇ ತಸ್ಮಿನ್ನಪಿ ಪ್ರಲಯ ಆಗತಃ ॥ ೪೪ ॥
ಪ್ಲವಮಾನಮಿದಂ ರಾಜನ್ಮಾನಸಂ ಶತಯೋಜನಂ ।
ಷಟ್ ಪಂಚಾಶತ್ಪ್ರಮಾಣೇನ ಕಲ್ಪಾ ಮಮ ಪುರಾ ನೃಪ ॥ ೪೫ ॥
ವ್ಯತೀತಾ ಇಹಚತ್ವಾರಃ ಶೇಷೇ ಮೋಕ್ಷಸ್ತತಃ ಪರಂ ।
ಏವಮಾಯುರಿದಂ ದೀರ್ಘಮೇವಂ ಶಾಪಾಚ್ಚ ಕೂರ್ಮತಾ ॥ ೪೬ ॥

---

೪೦. ಆಗ ನಾನು ಹತ್ತುಯೋಜನ ವಿಸ್ತಾರದ ಕೂರ್ಮನಾದೆನು. ಯಜ್ಞಸಾಧನಕ್ಕಾಗಿ ನೀನು ನನ್ನನ್ನು ಸಮುದ್ರದ ನೀರಿಗೆ ತೆಗೆದುಕೊಂಡುಹೋದೆ.

೪೧. ಎಣಿಕೆಯಿಲ್ಲದಷ್ಟು ಹೆಚ್ಚಾಗಿ ಯಜ್ಞಗಳನ್ನು ಮಾಡುವವನಾದ ನೀನು ಹಿಂದೆ ನನ್ನನ್ನು ತೆಗೆದುಕೊಂಡುಹೋದೆಯಷ್ಟೆ! ಅದನ್ನು ನೆನೆದು ನನಗೆ ನಾನೇ ಭಯಪಡುತ್ತಿದ್ದೇನೆ. ನನ್ನನ್ನು ನೀನು ಬೆನ್ನಿನಮೇಲೆ ಇಲ್ಲಿ ಸುಟ್ಟು ಬಿಟ್ಟಿರುವೆ. ನನ್ನ ಈ ವ್ರಣಗಳನ್ನು ನೋಡು.

೪೨. ಎಲೈ ಇಂದ್ರದ್ಯುಮ್ನನೇ! ಆಗ ನೀನು ಕಲ್ಪಸೂತ್ರವಿಧಾನವನ್ನನು ಸರಿಸಿ ಈ ನನ್ನ ಬೆನ್ನಮೇಲೆ ಅನೇಕ ಚಯನಗಳನ್ನು ನಡಸಿದೆ.

೪೩. ಎಲೈ ಪೃಥ್ವೀಪತಿಯೇ! ಪೃಥ್ವಿಯು ನಿನ್ನ ಯಜ್ಞಗಳಿಂದ ಬಹುವಾಗಿ ಸಂತಾಪಿತವಾಗಿ ಸರ್ವ ತೀರ್ಥಗಳ ಸಾರವನ್ನೂ ಹೊರಸೂಸಿತು. ಆ ಸರ್ವ ತೀರ್ಥಸಾರದ ಪ್ರವಾಹವೇ ಮಹೀನದಿಯಾಯಿತು.

೪೪–೪೬. ಆ ಮಹೀನದಿಯಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಸರ್ವ ಪಾಪಗಳಿಂದಲೂ ಬಿಡುಗಡೆಯುಂಟಾಗುತ್ತದೆ. ಎಲೈ ರಾಜನೇ! ಯಾವುದೋ ಒಂದು ಪ್ರಳಯದಲ್ಲಿ ನಾನು ತೇಲುತ್ತ ತೇಲುತ್ತ ನೂರುಯೋಜನ ವಿಸ್ತೀರ್ಣವುಳ್ಳ ಈ ಮಾನಸ ಸರೋವರಕ್ಕೆ ಬಂದು ಸೇರಿದೆನು. ಅಯ್ಯಾ ದೊರೆಯೇ! ಈ ಹಿಂದೆ ನನಗೆ ಐವತ್ತಾರು ಕಲ್ಪಗಳು ಕಳೆದುಹೋದುವು. ಇನ್ನು ನಾಲ್ಕು ಕಲ್ಪಗಳು ಉಳಿದಿವೆ. ಅಲ್ಲಿಂದ ಮುಂದೆ ಬಿಡುಗಡೆಯುಂಟಾಗುತ್ತದೆ. ನನಗೆ ಇಷ್ಟು ದೀರ್ಘಾಯುಸ್ಸು ಬಂದುದು ಹೀಗೆ. ಶಾಪದಿಂದ ಕೂರ್ಮರೂಪವುಂಟಾದುದು.

ಮಮಾಭೂದೀಶ್ವರಸ್ಯೈವ ಸತೀಧರ್ಮದ್ರುಹೋ ನೃಪ ।
ಬ್ರೂಹಿ ಕಿಂ ಕ್ರಿಯತಾಂ ಶತ್ರೋರಪಿ ತೇ ಗೃಹಗಾಮಿನಃ ॥ ೪೭ ॥
ಮಮ ಪೃಷ್ಠಶ್ಚಿರಂ ಭೂಪ ತ್ವಯಾ ದಗ್ಧಾಗ್ನಿನಾ ಪುರಾ ।
ಅಹಂ ಜ್ವಲಂತೀಮಿವ ತಾಂ ಪಶ್ಯಾಮ್ಯದ್ಯಾಪಿ ಸತ್ರಿಣಾ ॥ ೪೮ ॥
ಇದಂ ವಿಮಾನಮಾಯಾತಂ ತ್ವಯಾ ಕಸ್ಮಾನ್ನಿರಾಕೃತಂ ।
ದೇವದೂತಸಮಾಯುಕ್ತಂ ಭುಂಕ್ಷ್ವ ಭೋಗಾನ್ನಿಜಾರ್ಜಿತಾನ್ ॥ ೪೯ ॥

ಇಂದ್ರದ್ಯುಮ್ನ ಉವಾಚ :—

ಚತುರ್ಮುಖೇನ ತೇನಾಹಂ ಸ್ವರ್ಗಾನ್ನಿರ್ವಾಸಿತಃ ಸ್ವಯಂ ।
ವಿಲಕ್ಷ್ಯೋ ನ ಪ್ರಯಾಸ್ಯಾಮಿ ಪಾತಾಧಿಕ್ಯಾದ್ವಿದೂಷಿತೇ ॥ ೫೦ ॥
ತಸ್ಮಾದ್ವಿವೇಕ ವೈರಾಗ್ಯಮವಿದ್ಯಾಪಾಪನಾಶನಂ ।
ಆಲಿಂಗ್ಯಾಹಂ ಯತಿಷ್ಯಾಮಿ ಪ್ರಾಪ್ಯ ಬೋಧಂ ವಿಮುಕ್ತಯೇ ॥ ೫೧ ॥
ತನ್ಮೇ ಗೃಹಾಗತಸ್ಯಾದ್ಯ ಯಥಾತಿಥ್ಯಕರೋ ಭವಾನ್ ।
ತದಾದಿಶ ಯಥಾಽಪಾರಪಾರದೇ ಕೋಽಪಿ ಮೇ ಗುರುಃ ॥ ೫೨ ॥

---

೪೭. ಎಲೈ ನೃಪನೇ! ಸತೀಧರ್ಮಕ್ಕೆ ದ್ರೋಹಿಯಾದ ನನಗೆ ಈಶ್ವರನ ಶಾಪದಿಂದಲೇ ಹೀಗಾಯಿತು. ನೀನು ಶತ್ರುವಾದರೂ ನನ್ನ ಮನೆಗೆ ಬಂದಿರುವೆ. ಆದುದರಿಂದ ನಿನಗೇನಾಗಬೇಕು, ಹೇಳು.

೪೮. ಅಯ್ಯಾ ಭೂಪತಿಯೇ! ಪೂರ್ವದಲ್ಲಿ ನನ್ನ ಬೆನ್ನು ಬಹುಕಾಲದ ವರೆಗೆ ನಿನ್ನಿಂದ ಸುಡಲ್ಪಟ್ಟಿತು. ಯಜ್ಞದೀಕ್ಷಿತನಾದ ನಿನ್ನಿಂದ ಈಗಲೂ ಕೂಡ ಅದು ಹೊತ್ತಿ ಉರಿಯುತ್ತಿರುವುದೋ ಎಂಬಂತೆ ಕಾಣುತ್ತಿದೆ.

೪೯. ದೇವದೂತನಿಂದ ಕೂಡಿ ಇಲ್ಲಿಗೆ ಬಂದಿರುವ ಈ ವಿಮಾನವನ್ನು ನೀನು ಏಕೆ ನಿರಾಕರಿಸಿದೆ? ನೀನು ಸ್ವಂತವಾಗಿ ಸಂಪಾದಿಸಿರುವ ಭೋಗಗಳನ್ನು ಅನುಭವಿಸು.”

೫೦. ಇಂದ್ರದ್ಯುಮ್ನನಿಂತೆಂದನು :—“ಸ್ವಯಂ ಚತುರ್ಮುಖನಿಂದಲೇ ನಾನು ಸ್ವರ್ಗದಿಂದ ಹೊರದೂಡಲ್ಪಟ್ಟೆನು. ಅದರಿಂದ ಲಜ್ಜಿತನಾಗಿ, ಪತನ ಮುಂತಾದ ದೋಷಗಳಿಂದ ಕೂಡಿದ ಸ್ವರ್ಗಕ್ಕೆ ನಾನು ಹೋಗುವುದಿಲ್ಲ.

೫೧. ಆದುದರಿಂದ ಅವಿದ್ಯೆಯೆಂಬ ಪಾಪವನ್ನು ನಾಶಮಾಡುವ ವಿವೇಕ ವೈರಾಗ್ಯಗಳನ್ನಾಶ್ರಯಿಸಿ ಅಂಗೀಕರಿಸಿ ಬೋಧವನ್ನು ಪಡೆದು ಮುಕ್ತಿಯನ್ನು ಹೊಂದಲು ಪ್ರಯತ್ನಮಾಡುತ್ತೇನೆ.

೫೨. ಆದುದರಿಂದ ಈಗ ನಿನ್ನ ಮನೆಗೆ ಬಂದಿರುವ ನನಗೆ ಯೋಗ್ಯರೀತಿ ಯಲ್ಲಿ ಆತಿಥ್ಯ ಮಾಡತಕ್ಕವನಾದ ನೀನು ಅಪಾರವಾದ ಸಂಸಾರ ಸಾಗರದ ಪಾರವನ್ನು ಕಾಣಿಸುವ ಯಾರಾದರೊಬ್ಬ ಗುರುವನ್ನು ತೋರಿಸು.”

ಕೂರ್ಮ ಉವಾಚ :—

ಲೋಮಶೋ ನಾಮ ದೀರ್ಘಾಯುರ್ಮತ್ತೋಽಪ್ಯಸ್ತಿ ಮಹಾಮುನಿಃ ।
ಮಯಾ ಕಲಾಪಗ್ರಾಮೇ ಸ ಪೂರ್ವಂ ದೃಷ್ಟಃ ಕ್ವಚಿತ್ ನೃಪ ॥ ೫೩ ॥

ಇಂದ್ರದ್ಯುಮ್ನ ಉವಾಚ :—

ತಸ್ಮಾದಾಗಚ್ಛ ಗಚ್ಛಾಮಸ್ತಮೇವ ಸಹಿತಾ ವಯಂ ।
ಪ್ರಾಹುಃ ಪೂತತಮಾಂ ತೀರ್ಥಾದಪಿ ಸತ್ಸಂಗತಿಂ ಬುಧಾಃ ॥ ೫೪ ॥

ಇತ್ಥಂ ನಿಶಮ್ಯ ನೃಪತಿರ್ವಚನಂ ತದಾನೀಂ
ಸರ್ವೇಽಪಿ ತೇ ಷಡಥ ತಂ ಮುನಿಮುಖ್ಯಮಾಶು ।
ಚಿತ್ತೇ ವಿಧಾಯ ಮುದಿತಾಃ ಪ್ರಯಯುರ್ದ್ವಿಜೇಂದ್ರಂ
ಜಿಜ್ಞಾಸವಃ ಸುಚಿರಜೀವಿತ ಹೇತುಮಸ್ಯ ॥ ೫೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಮಹೀಪ್ರಾದುರ್ಭಾವೇ ಕೂರ್ಮಾಖ್ಯಾನಂ" ನಾಮ
ಏಕಾದಶೋಽಧ್ಯಾಯಃ

---

೫೩. ಕೂರ್ಮನಿಂತೆಂದನು :—"ಅಯ್ಯಾ ನೃಪತಿಯೇ! ನನಗಿಂತಲೂ ದೀರ್ಘಾಯುವಾದ ಲೋಮಶನೆಂಬ ಮಹಾಮುನಿಯೊಬ್ಬನಿದ್ದಾನೆ. ಹಿಂದೆ ಕಲಾಪಗ್ರಾಮದಲ್ಲಿ ಎಲ್ಲೋ ಒಂದು ಕಡೆ ಆತನನ್ನು ನಾನು ಕಂಡಿದ್ದೆನು."

೫೪. ಇಂದ್ರದ್ಯುಮ್ನನಿಂತೆಂದನು :—"ಹಾಗಾದರೆ ಬಾ, ಹೋಗೋಣ. ನಾವೆಲ್ಲರೂ ಒಟ್ಟಿಗೆ ಆತನ ಬಳಿಗೇ ಹೋಗೋಣ. ಸತ್ಪುರುಷರ ಸಹವಾಸವು ತೀರ್ಥಕ್ಕಿಂತಲೂ ಪರಮಪವಿತ್ರವಾದುದೆಂದು ವಿದ್ವಾಂಸರು ಹೇಳುತ್ತಾರೆ."

೫೫. ಈ ರೀತಿಯಾಗಿ ನುಡಿದ ಆ ನೃಪತಿಯ ವಚನವನ್ನು ಕೇಳಿ ಆ ಆರು ಮಂದಿಯೂ ಆ ಮುನಿಮುಖ್ಯನನ್ನೇ ಮನಸ್ಸಿನಲ್ಲಿಟ್ಟುಕೊಂಡು ಆನಂದಭರಿತರಾಗಿ ಆತನ ಅತಿ ದೀರ್ಘಜೀವನದ ಕಾರಣವನ್ನು ತಿಳಿಯಬಯಸುವವರಾಗಿ ಆ ದ್ವಿಜೇಂದ್ರನ ಸಮೀಪಕ್ಕೆ ವೇಗದಿಂದ ಹೊರಟುಹೋದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾ ಖಂಡದಲ್ಲಿ
"ಮಹೀಪ್ರಾದುರ್ಭಾವ – ಕೂರ್ಮಾಖ್ಯಾನ"ವೆಂಬ
ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾದಶೋಽಧ್ಯಾಯಃ

## ಮಹೀಪ್ರಾದುರ್ಭಾವೇ ಲೋಮಶವೃತ್ತಾಂತೇ ಶಿವಪೂಜನ ಮಾಹಾತ್ಮ್ಯ ವರ್ಣನಂ

ನಾರದ ಉವಾಚ :—

ಅಥ ತೇ ದದೃಶುಃ ಪಾರ್ಥ ಸಂಯಮಸ್ಥಂ ಮಹಾಮುನಿಂ ।
ಕ್ರಿಯಾಯೋಗಸಮಾಯುಕ್ತಂ ತಪೋಮೂರ್ತಿಧರಂ ಯಥಾ ॥ ೧ ॥
ಜಟಾಸ್ತ್ರಿಷವಣಸ್ನಾನಕಪಿಲಾಃ ಶಿರಸಾ ತದಾ ।
ಧಾರಯಂತಂ ಲೋಮಶಾಖ್ಯಮಾಜ್ಯಸಿಕ್ತಮಿವಾನಲಂ ॥ ೨ ॥
ಸವ್ಯಹಸ್ತೇ ತೃಣೌಘಂ ಚ ಚ್ಛಾಯಾರ್ಥೇ ವಿಪ್ರಸತ್ತಮಂ ।
ದಕ್ಷಿಣೇ ಚಾಕ್ಷಮಾಲಾಂ ಚ ಬಿಭ್ರತಂ ಮೈತ್ರಮಾರ್ಗಗಂ ॥ ೩ ॥
ಅಹಿಂಸಯನ್ ದುರುಕ್ತಾದ್ಯೈಃ ಪ್ರಾಣಿನೋ ಭೂಮಿಚಾರಿಣಃ ।
ಯಃ ಸಿದ್ಧಿಮೇತಿ ಜಪ್ಯೇನ ಸ ಮೈತ್ರೋ ಮುನಿರುಚ್ಯತೇ ॥ ೪ ॥
ಬಕಭೂಪದ್ವಿಜೋಲೂಕ ಗೃಧ್ರಕೂರ್ಮಾ ವಿಲೋಕ್ಯ ಚ ।
ನೇಮುಃ ಕಲಾಪಗ್ರಾಮೇ ತಂ ಚಿರಂತನತಪೋನಿಧಿಂ ॥ ೫ ॥

---

### ಕನ್ನಡದ ಅನುವಾದ

#### ಲೋಮಶ ವೃತ್ತಾಂತ — ಶಿವಪೂಜನ ಮಾಹಾತ್ಮ್ಯ

೧. ನಾರದನು ಹೇಳುತ್ತಾನೆ :— ಅಯ್ಯಾ ಪಾರ್ಥನೇ! ಅನಂತರದಲ್ಲಿ ಇಂದ್ರದ್ಯುಮ್ನನೇ ಮೊದಲಾದ ಅವರೆಲ್ಲರೂ ಸಂಯಮದಲ್ಲಿದ್ದ ಆ ಲೋಮಶ ಮಹಾಮುನಿಯನ್ನು ಸಂದರ್ಶಿಸಿದರು. ಆ ಮುನಿಯು ಕ್ರಿಯಾಯೋಗಯುಕ್ತನಾಗಿದ್ದನು. ತಪೋಮೂರ್ತಿಯನ್ನು ಧರಿಸಿದ್ದನು.

೨. ತ್ರಿಕಾಲಸ್ನಾನದಿಂದ ಕಪಿಲವರ್ಣವಾದ ಜಡೆಗಳನ್ನು ಆತನು ತಲೆಯಲ್ಲಿ ಧರಿಸಿ ತುಪ್ಪ ಹೊಯ್ದ ಅಗ್ನಿಯಂತಿದ್ದನು.

೩. ಅಲ್ಲದೆ, ಎಡಗೈಯಲ್ಲಿ ನೆರಳಿಗೋಸ್ಕರ ತೃಣಸಮೂಹವನ್ನೂ, ಬಲಗೈಯಲ್ಲಿ ಅಕ್ಷಮಾಲೆಯನ್ನೂ ಧರಿಸಿ ಮೈತ್ರಮಾರ್ಗವನ್ನು ಅನುಸರಿಸಿದ್ದನು.

೪. ಯಾವನು ಭೂಮಿಚಾರಿಗಳಾದ ಪ್ರಾಣಿಗಳಿಗೆ ಕೆಟ್ಟ ಮಾತು ಮುಂತಾದುವುಗಳಿಂದ ಹಿಂಸೆಕೊಡದೆ ಜಪಮಾಡಿ ಸಿದ್ಧಿಯನ್ನು ಪಡೆಯುತ್ತಾನೆಯೋ ಅವನು ಮೈತ್ರಮಾರ್ಗದ ಮುನಿಯೆನ್ನಿಸಿಕೊಳ್ಳುತ್ತಾನೆ.

೫. ಬಕ, ಭೂಪತಿ, ದ್ವಿಜ, ಉಲೂಕ, ಗೃಧ್ರ, ಕೂರ್ಮ— ಈ ಆರ್ವರೂ ಆತನನ್ನು ಕಂಡು, ಕಲಾಪಗ್ರಾಮದಲ್ಲಿ ಚಿರಂತನ ತಪೋನಿಧಿಯಾಗಿದ್ದ ಆತನಿಗೆ ವಂದನೆಮಾಡಿದರು.

ಸ್ವಾಗತಾಸನಸತ್ಕಾರೇಣಾಮುನಾ ತೇಽಥ ಸತ್ಕೃತಾಃ ।
ಯಥೋಚಿತಂ ಪ್ರತೀತಾಸ್ತ್ವಾಮಾಹುಃ ಕಾರ್ಯಂ ಹೃದಿ ಸ್ಥಿತಂ ॥ ೬ ॥
ಕೂರ್ಮ ಉವಾಚ:—
ಇಂದ್ರದ್ಯುಮ್ನೋಽಯಮವನೀಪತಿಃ ಸತ್ರಿಜನಾಗ್ರಣೀಃ ।
ಕೀರ್ತಿಲೋಪಾನ್ನಿರಸ್ತೋಽಯಂ ವೇಧಸಾ ನಾಕಪೃಷ್ಠತಃ ॥ ೭ ॥
ಮಾರ್ಕಂಡೇಯಾದಿಭಿಃ ಪ್ರಾಪ್ಯ ಕೀರ್ತ್ಯುದ್ಧಾರಂ ಚ ಸತ್ತಮ ।
ನಾಯಂ ಕಾಮಯತೇ ಸ್ವರ್ಗಂ ಪುನಃಪಾತಾದಿಭೀಷಣಂ ॥ ೮ ॥
ಭವತಾನುಗ್ರಹೀತೋಽಯಮಿಹೇಚ್ಛತಿ ಮಹೋದಯಂ ।
ಪ್ರಣೋದ್ಯಸ್ತದಯಂ ಭೂಪಃ ಶಿಷ್ಯಸ್ತೇ ಭಗವನ್ಮಯಾ ।
ತ್ವತ್ಸಕಾಶಮಿಹಾನೀತೋ ಬ್ರೂಹಿ ಸಾಧ್ವಸ್ಯ ವಾಂಛಿತಂ ॥ ೯ ॥
ಪರೋಪಕರಣಂ ನಾಮ ಸಾಧೂನಾಂ ವ್ರತಮಾಹಿತಂ ।
ವಿಶೇಷತಃ ಪ್ರಣೋದ್ಯಾನಾಂ ಶಿಷ್ಯವೃತ್ತಿಮುಪೇಯುಷಾಂ ॥ ೧೦ ॥

---

೬. ಸ್ವಾಗತ, ಪೀಠ ಮೊದಲಾದ ಸತ್ಕಾರಗಳಿಂದ ಆತನಿಂದಲೂ ಉಚಿತ ವರಿತು ಅತ್ಯಂತವಾಗಿ ಸತ್ಕೃತರಾದ ತರುವಾಯ ಅವರು ತಮ್ಮ ಮನಸ್ಸಿನಲ್ಲಿದ್ದ ಕಾರ್ಯವನ್ನು ಆತನಿಗೆ ತಿಳಿಸಿದರು.

೭. ಕೂರ್ಮನು ಹೇಳುತ್ತಾನೆ:—"ಎಲೈ ಲೋಮಶಮುನಿಯೇ! ಇವನು ಇಂದ್ರದ್ಯುಮ್ನ ಮಹಾರಾಜನು; ಯಜ್ಞದೀಕ್ಷಿತರಲ್ಲೆಲ್ಲ ಅಗ್ರಗಣ್ಯನಾದವನು. ಕೀರ್ತಿಲೋಪವಾದುದರಿಂದ ಬ್ರಹ್ಮನು ಈತನನ್ನು ಸ್ವರ್ಗದಿಂದ ಹೊರಹೊರಡಿಸಿದನು.

೮–೯. ಎಲೈ ಸತ್ಪುರುಷಾಗ್ರಗಣ್ಯನೇ! ಮಾರ್ಕಂಡೇಯಾದಿಗಳಿಂದ ಈತನು ಮತ್ತೆ ತನ್ನ ಕೀರ್ತಿಯ ಪುನರುದ್ಧಾರವನ್ನು ಪಡೆದಿರುವನು. ಆದರೂ ಮತ್ತೆ ಬೀಳಬೇಕಾದ ಸಂಭವ ಮೊದಲಾದುವುಗಳಿಂದ ಭೀಷಣವಾದ ಆ ಸ್ವರ್ಗವನ್ನು ಈತನು ಅಪೇಕ್ಷಿಸುವುದಿಲ್ಲ. ಈತನು ತಮ್ಮ ಅನುಗ್ರಹವನ್ನು ಪಡೆದು ಮಹೋದಯವನ್ನು ಪಡೆಯಬೇಕೆಂದು ಬಯಸುತ್ತಿರುವನು. ಆದುದರಿಂದ ಈ ಮಹಾರಾಜನು ಬೋಧನೆಗೆ ಯೋಗ್ಯನಾಗಿದ್ದಾನೆ. ತಮ್ಮ ಶಿಷ್ಯನಾಗಬೇಕೆಂದು ಬಯಸುತ್ತಿರುವ ಈತನನ್ನು ನಾನು ತಮ್ಮ ಬಳಿಗೆ ಕರೆದುತಂದಿರುವೆನು. ಎಲೈ ಸಾಧುವೇ! ಇವನ ವಾಂಛಿತವನ್ನು ದಯವಿಟ್ಟು ಪೂರ್ಣಗೊಳಿಸಬೇಕು.

೧೦. ಪರೋಪಕಾರ ಮಾಡುವುದು ಸಾಧುಗಳಿಗೆ ಸದಾ ಪರಿಗ್ರಾಹ್ಯವಾದ ವ್ರತವಾಗಿರುವುದು. ಅದರಲ್ಲಿಯೂ ಬೋಧನೆಗೆ ಯೋಗ್ಯರಾಗಿ ಶಿಷ್ಯವೃತ್ತಿಯನ್ನಪೇಕ್ಷಿಸಿ ಬಂದವರಿಗೆ ಉಪಕಾರ ಮಾಡುವುದಂತೂ ವಿಶೇಷ ವ್ರತವಾಗಿರುವುದು.

ಅಪ್ರಣೋದ್ಯೇಷು ಪಾಪೇಷು ಸಾಧುಪ್ರೋಕ್ತಮಸಂಶಯಂ ।
ವಿದ್ವೇಷಂ ಮರಣಂ ಚಾಪಿ ಕುರುತೇಽನ್ಯತರಸ್ಯ ಚ ॥ ೧೧ ॥
ಅಪ್ರಮತ್ತಃ ಪ್ರಣೋದ್ಯೇಷು ಮುನಿರೇಷ ಪ್ರಯಚ್ಛತಿ ।
ತದೇವೇತಿ ಭವಾನೇವಂ ಧರ್ಮಂ ವೇತ್ತಿ ಕುತೋ ವಯಂ ॥ ೧೨ ॥

ಲೋಮಶ ಉವಾಚ :—

ಕೂರ್ಮ ಯುಕ್ತಮಿದಂ ಸರ್ವಂ ತ್ವಯಾಭಿಹಿತಮದ್ಯ ನಃ ।
ಧರ್ಮಶಾಸ್ತ್ರೋಪನತಂ ತತ್ಸ್ಮಾರಿತಾಃ ಸ್ಮ ಪುರಾತನಂ ॥ ೧೩ ॥
ಬ್ರೂಹಿ ರಾಜನ್ ಸುವಿಶ್ರಬ್ಧಂ ಸಂದೇಹಂ ಹೃದಯಸ್ಥಿತಿಂ ।
ಕಸ್ತೇ ಕಿಮಬ್ರವೀಚ್ಛೇಷಂ ವಕ್ಷ್ಯಾಮ್ಯಹಂ ನ ಸಂಶಯಃ ॥ ೧೪ ॥

ಇಂದ್ರದ್ಯುಮ್ನ ಉವಾಚ :—

ಭಗವನ್ ಪ್ರಥಮಃ ಪ್ರಶ್ನಸ್ತಾವದೇವ ಮನೋಚ್ಯತಾಂ ।
ಗ್ರೀಷ್ಮಕಾಲೇಪಿ ಮಧ್ಯಸ್ಥೇ ರವೌ ಕಿಂ ನ ತವಾಶ್ರಮಃ ॥ ೧೫ ॥

---

೧೧. ಹಿತಬೋಧನಗೆ ಯೋಗ್ಯರಲ್ಲದ ಪಾಪಿಗಳಿಗೆ ಉಪದೇಶಮಾಡಿದ ಧರ್ಮಶಾಸ್ತ್ರ ಸಂಬಂಧವಾದ ಸಾಧುವಾಕ್ಯವು ಹಾಗೆ ಉಪದೇಶ ಮಾಡಿದ ಗುರುವಿಗಾಗಲಿ ಉಪದೇಶವನ್ನು ಪಡೆದ ಶಿಷ್ಯನಿಗಾಗಲಿ ದ್ವೇಷವನ್ನೋ ಮರಣವನ್ನೋ ಉಂಟುಮಾಡುತ್ತದೆ. ಇದರಲ್ಲಿ ಸಂಶಯವಿಲ್ಲವು.

೧೨. ಯಾವಾಗಲೂ ತಪೋನಿಯಮಾದಿಗಳಿಂದ ಜಾಗರೂಕನಾಗಿರುವ ಮುನಿಯು ಬೋಧನಯೋಗ್ಯರಾದ ಶಿಷ್ಯರಿಗೆ ಆ ಒಳ್ಳೆಯ ಉಪದೇಶವನ್ನು ಅನುಗ್ರಹಿಸುತ್ತಾನೆ. ಈ ಬಗೆಯಾದ ಧರ್ಮವನ್ನು ತಾವೇ ಬಲ್ಲವರಾಗಿದ್ದೀರಿ. ತಮ್ಮಂತಹರ ಮುಂದೆ ನಾವೆಷ್ಟರವರು ?"

೧೩. ಲೋಮಶನು ಹೇಳುತ್ತಾನೆ:—" ಎಲೈ ಕೂರ್ಮನೇ! ಈಗ ನೀನು ನನ್ನನ್ನು ಕುರಿತು ಹೇಳಿದುದೆಲ್ಲವೂ ಸಾಧುವಾಗಿರುವುದು; ಧರ್ಮಶಾಸ್ತ್ರ ಸಮ್ಮತವಾಗಿರುವುದು. ಇದರಿಂದ ನೀನು ಪುರಾತನವಾದ ಆ ವಿಷಯವನ್ನು ಮತ್ತೆ ನನ್ನ ಸ್ಮರಣೆಗೆ ತಂದುಕೊಟ್ಟಿರುವೆ.

೧೪. ಎಲೈ ರಾಜನೇ! ನಿನ್ನ ಮನಸ್ಸಿನಲ್ಲಿರುವ ಸಂದೇಹವನ್ನು ಯಾವ ಬಗೆಯ ಅಳುಕೂ ಇಲ್ಲದೆ ನನ್ನೊಡನೆ ಹೇಳು. ಯಾರಾರು ನಿನಗೆ ಏನೇನನ್ನು ಉಪದೇಶಿಸಿರುವರು? ಉಳಿದುದನ್ನು ನಾನು ತಿಳಿಸುತ್ತೇನೆ, ಸಂಶಯವಿಲ್ಲ."

೧೫. ಇಂದ್ರದ್ಯುಮ್ನನು ಹೇಳುತ್ತಾನೆ:—" ಸ್ವಾಮಿ ಇದು ನನ್ನ ಮೊದಲನೆಯ ಪ್ರಶ್ನೆ; ಇದಕ್ಕೆ ದಯಮಾಡಿ ಉತ್ತರ ಕೊಡಿ. ಗ್ರೀಷ್ಮ (ಬೇಸಿಗೆ) ಕಾಲದಲ್ಲಿ ಸೂರ್ಯನು ಆಕಾಶದ ಮಧ್ಯಕ್ಕೆ ಬಂದಾಗಲೂ ನಿಮಗೆ ಆಶ್ರಮವಿಲ್ಲವಲ್ಲ.

ಕುಟೀಮಾತ್ರೋಽಪಿ ಯಚ್ಛಾಯಾ ತೃಣೈಃ ಶಿರಸಿ ಪಾಣಿಗೈಃ ॥ ೧೬ ॥

ಲೋಮಶ ಉವಾಚ :—

ಮರ್ತವ್ಯಮಸ್ತ್ಯವಶ್ಯಂ ಚ ಕಾಯ ಏಷ ಪತಿಷ್ಯತಿ ।
ಕಸ್ಯಾರ್ಥೇ ಕ್ರಿಯತೇ ಗೇಹಮನಿತ್ಯಭವಮಧ್ಯಗೈಃ ॥ ೧೭ ॥
ಯಸ್ಯ ಮೃತ್ಯುರ್ಭವೇನ್ಮಿತ್ರಂ ಪೀತಂ ವಾಮೃತಮುತ್ತಮಂ ।
ತಸ್ಯೈತದುಚಿತಂ ವಕ್ತುಮಿದಂ ಮೇ ಶ್ವೋ ಭವಿಷ್ಯತಿ ॥ ೧೮ ॥
ಇದಂ ಯುಗಸಹಸ್ರೇಷು ಭವಿಷ್ಯಮಭವದ್ದಿನಂ ।
ತದಪ್ಯದ್ಯ ತ್ವಮಾಪನ್ನಂ ಕಾ ಕಥಾ ಮರಣಾವಧೇಃ ॥ ೧೯ ॥
ಕಾರಣಾನುಗತಂ ಕಾರ್ಯಮಿದಂ ಶುಕ್ರಾದಭೂದ್ವಪುಃ ।
ಕಥಂ ವಿಶುದ್ಧಿಮಾಯಾತಿ ಕ್ಷಾಲಿತಾಂಗಾರವದ್ವದ ॥ ೨೦ ॥
ತದಸ್ಯಾಪಿ ಕೃತೇ ಪಾಪಂ ಶತ್ರುಷಡ್ವರ್ಗನಿರ್ಜಿತಾಃ ।
ಕಥಂ ಕಾರಂ ನ ಲಜ್ಜಂತೇ ಕುರ್ವಾಣಾ ನೃಪಸತ್ತಮ ॥ ೨೧ ॥

---

೧೬. ಕಡೆಗೆ ಒಂದು ಗುಡಿಸಲು ಮಾತ್ರವಾದರೂ ಇರುವುದಿಲ್ಲವು. ಕೈಯಲ್ಲಿರುವ ಹುಲ್ಲುಗರಿಗಳನ್ನು ತಲೆಯಮೇಲೆ ಹಿಡಿದುಕೊಂಡು ನೆರಳು ಮಾಡಿಕೊಳ್ಳುತ್ತಿರುವಿರಿ. ಅದೇಕೆ?"

೧೭. ಲೋಮಶನಿಂತೆಂದನು:—"ಎಲೈ ನೃಪನೇ! ಹುಟ್ಟಿದವನು ಎಂದಾದರೊಂದು ದಿನ ಸಾಯಲೇ ಬೇಕು. ಆ ಸಾವು ನಮ್ಮ ಸ್ವಾಧೀನವಲ್ಲ. ಈ ಶರೀರವು ಬಿದ್ದುಹೋಗುತ್ತದೆ. ಅನಿತ್ಯವಾದ ಸಂಸಾರದ ಮಧ್ಯದಲ್ಲಿರುವವರು ಯಾರಿಗಾಗಿ ಮನೆಕಟ್ಟಿಕೊಳ್ಳಬೇಕು?

೧೮. ಯಾರಿಗೆ ಮೃತ್ಯುವು ಮಿತ್ರನಾಗಿರುವುದೋ ಅಥವಾ ಯಾರು ಉತ್ತಮವಾದ ಅಮೃತವನ್ನು ಕುಡಿದಿರುವನೋ ಅಂಥವನಿಗೆ ಇದನ್ನು—ನಾಳೆ ನನಗೆ ಇದು ಉಂಟಾಗುತ್ತದೆ ಎಂಬುದನ್ನು— ಹೇಳುವುದು ಉಚಿತವಾಗುತ್ತದೆ.

೧೯. ಈ ದಿನವು ಸಹಸ್ರ ಯುಗಗಳು ಕಳೆದಮೇಲೆ ಮುಂದೆ ಬರುವುದೆಂದಾಗಿತ್ತು. ಅಂಥ ದಿನವು ಕೂಡ 'ಇಂದು' ಎಂಬುದಾಗಿ ಪರಿಣಮಿಸಿತು. ಮರಣದ ಅವಧಿಯ ವಿಷಯದಲ್ಲಿ ಹೇಳತಕ್ಕುದೇನು?

೨೦. ಕಾರಣವನ್ನನುಸರಿಸಿ ಬರುವಂಥದು ಕಾರ್ಯ, ಈ ಶರೀರವು ಶುಕ್ಲದಿಂದುಂಟಾಗಿರುವುದು. ತೊಳೆದ ಇದ್ದಲಹಾಗೆ ಇದು ಹೇಗೆತಾನೇ ಪರಿಶುದ್ಧವಾದೀತು? ಹೇಳು.

೨೧. ಎಲೈ ರಾಜಶ್ರೇಷ್ಠನೇ! ಇಂಥ ಅಪರಿಶುದ್ಧವಾದ ಶರೀರಕ್ಕೋಸ್ಕರ ಕಾಮಕ್ರೋಧಾದಿ ಷಡ್ವರ್ಗಗಳೆಂಬ ಶತ್ರುಗಳಿಗೆ ಒಳಗಾಗಿ ಪಾಪ ಮಾಡುವವರು ಹೇಗೆತಾನೆ ನಾಚಿಕೆಪಡುವುದಿಲ್ಲ?

ತದ್ಬ್ರಹ್ಮಣ ಇಹೋತ್ಪನ್ನಃ ಸಿಕತಾದ್ವಯ ಸಂಭವಃ ।
ನಿಗಮೋಕ್ತಂ ಪಠನ್ ಶೃಣ್ವನ್ನಿದಂ ಜೀವಿಷ್ಯತೇ ಕಥಂ ॥ ೨೨ ॥
ತಥಾಪಿ ವೈಷ್ಣವೀ ಮಾಯಾ ಮೋಹಯತ್ಯವಿವೇಕಿನಂ ।
ಹೃದಯಸ್ಥಂ ನ ಜಾನಂತಿ ಹ್ಯಪಿ ಮೃತ್ಯುಂ ಶತಾಯುಷಃ ॥ ೨೩ ॥
ದಂತಾಶ್ಚಲಾಶ್ಚಲಾ ಲಕ್ಷ್ಮೀರ್ಯೌವನಂ ಜೀವಿತಂ ನೃಪ ।
ಚಲಾಚಲಮತೀವೇದಂ ದಾನಮೇವಂ ಗೃಹಂ ನೃಣಾಂ ॥ ೨೪ ॥
ಇತಿ ವಿಜ್ಞಾಯ ಸಂಸಾರಮಸಾರಂ ಚ ಚಲಾಚಲಂ ।
ಕಸ್ಯಾರ್ಥೇ ಕ್ರಿಯತೇ ರಾಜನ್ ಕುಟಜಾದಿಪರಿಗ್ರಹಃ ॥ ೨೫ ॥
ಇಂದ್ರದ್ಯುಮ್ನ ಉವಾಚ :—
ಚಿರಾಯುರ್ಭಗವಾನೇವ ಶ್ರೂಯತೇ ಭುವನತ್ರಯೇ ।
ತದರ್ಥಮಹಮಾಯಾತಸ್ತತ್ಕಿಮೇವಂ ವಚಸ್ತವ ॥ ೨೬ ॥
ಲೋಮಶ ಉವಾಚ :—
ಪ್ರತಿಕಲ್ಪಂ ಮಚ್ಛರೀರಾದೇಕರೋಮ ಪರಿಕ್ಷಯಃ ।
ಜಾಯತೇ ಸರ್ವನಾಶೇಚ ಮಮಭಾವಿ ಪ್ರಮಾಪಣಂ ॥ ೨೭ ॥

---

೨೨. ಎರಡು ಮರಳು ಕಣಗಳಿಂದ ಹುಟ್ಟಿ, ಬ್ರಹ್ಮನಿಂದ ಸೃಷ್ಟಿಸಲ್ಪಟ್ಟರುವವನು ನಿಗಮಗಳಲ್ಲಿ ಹೇಳಿರುವ ಈ ಸತ್ಯವನ್ನು ಓದುತ್ತಲೂ ಕೇಳುತ್ತಲೂ ಇದ್ದರೂ ಹೇಗೆತಾನೆ ಜೀವಿಸಲಿಚ್ಛಿಸಿಯಾನು ?

೨೩. ಹಾಗಿದ್ದರೂ ವೈಷ್ಣವ ಮಾಯೆಯು ಅವಿವೇಕಿಯನ್ನು ಮೋಹಗೊಳಿಸುತ್ತದೆ. ನೂರುವರ್ಷ ಬಾಳುವರಾದರೂ ತಮ್ಮ ಹೃದಯದಲ್ಲಿಯೇ ಇರುವ ಮೃತ್ಯುವನ್ನೂ ತಿಳಿಯಲಾರರು.

೨೪–೨೫. ಎಲೈ ದೊರೆಯೇ ! ಹಲ್ಲುಗಳು ಚಂಚಲವಾದುವು; ಐಶ್ವರ್ಯವು ಚಂಚಲವಾದುದು ; ಮನುಷ್ಯರ ಯೌವನವೂ, ಜೀವಿತವೂ ಚಂಚಲವಾದುವು. ದಾನವು ಕೂಡ ಬಹು ಚಂಚಲವಾದುದು ; ಅದೇ ರೀತಿಯಲ್ಲಿ ಮನೆಯೂ ಚಂಚಲವಾದುದು. ಅಯ್ಯಾ ರಾಜನೇ ! ಗುಡಿಸಲು ಮುಂತಾದ ಪರಿಗ್ರಹಗಳನ್ನು ಏತಕ್ಕಾಗಿ ಕೈಕೊಳ್ಳಬೇಕು ?"

೨೬. ಇಂದ್ರದ್ಯುಮ್ನನು ಹೇಳುತ್ತಾನೆ :—"ಭಗವನ್ ! ಮೂರು ಲೋಕಗಳಲ್ಲಿಯೂ ತಾವೇ ಚಿರಂಜೀವಿಯಾದವರೆಂದು ಕೇಳಿದ್ದೇನೆ. ಆದುದರಿಂದಲೇ ನಾನು ತಮ್ಮಲ್ಲಿಗೆ ಬಂದೆನು. ಹಾಗಿರುವಲ್ಲಿ ತಾವೇಕೆ ಹೀಗೆ ಮಾತನಾಡುವಿರಿ ?"

೨೭. ಲೋಮಶನಿಂತೆಂದನು:—"ಪ್ರತಿಕಲ್ಪದಲ್ಲಿಯೂ ನನ್ನ ಶರೀರದಿಂದ ಒಂದೊಂದು ಕೂದಲು ಉದುರುತ್ತದೆ. ಹೀಗೆ ನನ್ನ ಮೈಯಲ್ಲಿರುವ ಕೂದಲೆಲ್ಲ ಉದುರಿಹೋದಾಗ ನನಗೆ ಮರಣವುಂಟಾಗುವುದು.

ಪಶ್ಯ ಜಾನುಪ್ರದೇಶಂ ಮೇ ದ್ವ್ಯಂಗುಲಂ ರೋಮವರ್ಜಿತಂ ।
ಜಾತಂ ವಪುಸ್ತ್ವದ್ವಿಭೇಮಿ ಮರ್ತವ್ಯೇ ಸತಿ ಕಿಂ ಗೃಹೈಃ ॥ ೨೮ ॥

ನಾರದ ಉವಾಚ :—

ಇತ್ಥಂ ನಿಶಮ್ಯ ತದ್ವಾಕ್ಯಂ ಸ ಪ್ರಹಸ್ಯಾತಿ ವಿಸ್ಮಿತಃ ।
ಭೂಪಾಲಸ್ತಸ್ಯ ಪಪ್ರಚ್ಛ ಕಾರಣಂ ತಾದೃಶಾಯುಷಃ ॥ ೨೯ ॥

ಇಂದ್ರದ್ಯುಮ್ನ ಉವಾಚ :—

ಪೃಚ್ಛಾಮಿ ತ್ವಾಮಹಂ ಬ್ರಹ್ಮನ್ ಯದಾಯುರಿದಮೀದೃಶಂ ।
ತವ ದೀರ್ಘಂ ಪ್ರಭಾವೋಽಸೌ ದಾನಸ್ಯ ತಪಸೋಽಥವಾ ॥ ೩೦ ॥

ಲೋಮಶ ಉವಾಚ :—

ಶೃಣು ಭೂಪ ಪ್ರವಕ್ಷ್ಯಾಮಿ ಪೂರ್ವಜನ್ಮಸಮುದ್ಭವಾಂ ।
ಶಿವಧರ್ಮಯುತಾಂ ಪುಣ್ಯಾಂ ಕಥಾಂ ಪಾಪಪ್ರಣಾಶಿನೀಂ ॥ ೩೧ ॥
ಅಹಮಾಸಂ ಪುರಾ ಶೂದ್ರೋ ದರಿದ್ರೋಽತೀವ ಭೂತಲೇ ।
ಭ್ರಮಾಮಿ ವಸುಧಾಪೃಷ್ಠೇ ಹ್ಯಶನಾಪೀಡಿತೋ ಭೃಶಂ ॥ ೩೨ ॥

---

೨೮. ನನ್ನ ಮೊಳಕಾಲ ಬಳಿ ನೋಡು. ಅಲ್ಲಿ ಎರಡಂಗುಲ ಪ್ರದೇಶವು ರೋಮವರ್ಜಿತವಾಗಿದೆ. ಆದುದರಿಂದ ಭಯಪಡುತ್ತಿದ್ದೇನೆ. ಸಾಯಬೇಕಾಗಿರುವಾಗ ಮನೆ ಮಠಗಳಿಂದೇನು ಪ್ರಯೋಜನ?"

೨೯. ನಾರದನು ಹೇಳುತ್ತಾನೆ:—ಹೀಗೆ ಹೇಳಿದ ಲೋಮಶನ ಮಾತುಗಳನ್ನು ಕೇಳಿ ಆ ಭೂಪಾಲನು, ಅತಿ ವಿಸ್ಮಿತನಾಗಿ ಗಟ್ಟಿಯಾಗಿ ನಕ್ಕು, ಆತನಿಗೆ ಅಷ್ಟು ಹೆಚ್ಚು ಆಯುಸ್ಸುಂಟಾದುದರ ಕಾರಣವನ್ನು ಕುರಿತು ಪ್ರಶ್ನೆ ಮಾಡಿದನು.

೩೦. ಇಂದ್ರದ್ಯುಮ್ನನು ಕೇಳುತ್ತಾನೆ:— "ಅಯ್ಯಾ ಬ್ರಾಹ್ಮಣನೇ! ತಮ್ಮನ್ನು ಒಂದು ಮಾತು ಕೇಳುತ್ತೇನೆ. ತಮಗೆ ಇಷ್ಟು ದೀರ್ಘಾಯುಸ್ಸು ಹೇಗೆ ಉಂಟಾಯಿತು? ಇದು ದಾನದ ಪ್ರಭಾವವೆ? ಅಥವಾ ತಪಸ್ಸಿನ ಪ್ರಭಾವವೆ?"

೩೧. ಲೋಮಶನಿಂತೆಂದನು :—" ಎಲೈ ರಾಜನೇ ! ಕೇಳು, ಹೇಳುತ್ತೇನೆ. ನನ್ನ ಪೂರ್ವಜನ್ಮದಲ್ಲಿ ನಡೆದುದೂ, ಶಿವಧರ್ಮಗಳಿಂದ ಕೂಡಿದುದೂ, ಪಾಪಗಳನ್ನು ನಾಶಮಾಡುವುದೂ ಆದ ಆ ಪುಣ್ಯಕಥೆಯನ್ನು ಹೇಳುತ್ತೇನೆ.

೩೨. ಪೂರ್ವದಲ್ಲಿ ನಾನು ಪ್ರಪಂಚದಲ್ಲೆಲ್ಲ ಅತ್ಯಂತ ದರಿದ್ರನಾದ ಒಬ್ಬ ಶೂದ್ರನಾಗಿದ್ದೆನು. ಆಗ ನಾನು ಹೊಟ್ಟೆಗಿಲ್ಲದೆ ಬಹಳ ಸಂಕಟಪಡುತ್ತ ಭೂಮಿಯಲ್ಲೆಲ್ಲ ಅಲೆಯುತ್ತಿದ್ದೆನು.

ತತೋ ಮಯಾ ಮಹಲ್ಲಿಂಗಂ ಜಲಮಧ್ಯಗತಂ ತದಾ ।
ಮಧ್ಯಾಹ್ನೇಽಸ್ಯ ಜಲಾಧಾರೋ ದೃಷ್ಟಶ್ಚೈವಾವಿದೂರತಃ ॥ ೩೩ ॥
ತತಃ ಪ್ರವಿಶ್ಯ ತದ್ವಾರಿ ಪೀತ್ವಾ ಸ್ನಾತ್ವಾ ಚ ಶಾಂಭವಂ ।
ತಲ್ಲಿಂಗಂ ಸ್ನಾಪಿತಂ ಪೂಜಾ ವಿಹಿತಾ ಕಮಲೈಃ ಶುಭೈಃ ॥ ೩೪ ॥
ಅಥ ಕ್ಷುತ್‌ಕ್ಷಾಮಕಂಠೋಽಹಂ ಶ್ರೀಕಂಠಂ ತಂ ನಮಸ್ಯಚ ।
ಪುನಃ ಪ್ರಚಲಿತೋ ಮಾರ್ಗೇ ಪ್ರಮಿತೋ ನೃಪಸತ್ತಮ ॥ ೩೫ ॥
ತತೋಽಹಂ ಬ್ರಾಹ್ಮಣಗೃಹೇ ಜಾತೋ ಜಾತಿಸ್ಮರಃ ಸುತಃ ।
ಸ್ನಾಪನಾಚ್ಛಿವಲಿಂಗಸ್ಯ ಸಕೃತ್ಕಮಲಪೂಜನಾತ್ ॥ ೩೬ ॥
ಸ್ಮರನ್ವಿಲಸಿತಂ ಮಿಥ್ಯಾ ಸತ್ಯಾಭಾಸಮಿದಂ ಜಗತ್ ।
ಅವಿದ್ಯಾಮಯಮಿತ್ಯೇವಂ ಜ್ಞಾತ್ವಾ ಮೂಕತ್ವಮಾಸ್ಥಿತಃ ॥ ೩೭ ॥
ತೇನ ವಿಪ್ರೇಣ ವಾರ್ಧಕ್ಯೇ ಸಮಾರಾಧ್ಯ ಮಹೇಶ್ವರಂ ।
ಪ್ರಾಪ್ತೋಽಹಮಿತಿ ಮೇ ನಾಮ ಈಶಾನ ಇತಿ ಕಲ್ಪಿತಂ ॥ ೩೮ ॥

---

೩೩. ಬಳಿಕ ಒಮ್ಮೆ ಮಧ್ಯಾಹ್ನಕಾಲದಲ್ಲಿ ಪೊದರಿನ ಮಧ್ಯದಲ್ಲಿದ್ದ ಒಂದು ಮಹಾ ಲಿಂಗವನ್ನು ಕಂಡೆನು. ಹತ್ತಿರದಲ್ಲಿಯೇ ತೀರ್ಥ ಜಲಾಶಯವೂ ಕಾಣಿಸಿತು.

೩೪. ತರುವಾಯ ಆ ನೀರಿನಲ್ಲಿಳಿದು ನೀರು ಕುಡಿದು, ಸ್ನಾನಮಾಡಿ ಆ ಶಾಂಭವಲಿಂಗಕ್ಕೆ ಅಭಿಷೇಕಮಾಡಿ ಶುಭಕರವಾದ ಕಮಲಗಳಿಂದ ಪೂಜೆ ಮಾಡಿದೆನು.

೩೫. ಆಮೇಲೆ ಹಸಿವಿನಿಂದ ಗಂಟಲೊಣಗಿದವನಾಗಿ ಆ ಶ್ರೀಕಂಠನನ್ನು ನಮಸ್ಕರಿಸಿ, ಮತ್ತೆ ನನ್ನ ದಾರಿಯನ್ನು ಹಿಡಿದು ನಡೆದೆನು. ಎಲೈ ರಾಜ ಶ್ರೇಷ್ಠನೇ! ಹಾಗೆ ನಡೆಯುವಾಗಲೇ ನನಗೆ ಆಯುಸ್ಸು ಕಳೆದು ನಾನು ಸತ್ತು ಹೋದೆನು.

೩೬. ಬಳಿಕ ಶಿವಲಿಂಗಕ್ಕೆ ಒಮ್ಮೆ ಅಭಿಷೇಕಮಾಡಿ ಕಮಲದಿಂದ ಪೂಜೆ ಮಾಡಿದುದರ ಫಲವಾಗಿ ಬ್ರಾಹ್ಮಣನೊಬ್ಬನ ಮನೆಯಲ್ಲಿ ಜಾತಿಸ್ಮರಣೆಯುಳ್ಳ ಮಗನಾಗಿ ಹುಟ್ಟಿದೆನು.

೩೭. ಆಗ ಪ್ರಪಂಚದ ಲೀಲಾ ವಿಲಾಸವನ್ನೇ ಸ್ಮರಿಸುತ್ತ ಈ ಜಗತ್ತು ಮಿಥ್ಯೆಯೆಂದೂ, ಸತ್ಯವೆಂಬಂತೆ ತೋರುವುದೆಂದೂ, ಅವಿದ್ಯಾಮಯವಾಗಿರುವುದೆಂದೂ ತಿಳಿದು ಮೂಕತನವನ್ನು ತಾಳಿದೆನು.

೩೮. ಆ ಬ್ರಾಹ್ಮಣನು ಮಹೇಶ್ವರನನ್ನು ಆರಾಧಿಸಿ ಮುಪ್ಪಿನಲ್ಲಿ ನನ್ನನ್ನು ಪಡೆದನಾದುದರಿಂದ ನನಗೆ 'ಈಶಾನ' ಎಂದು ಹೆಸರಿಟ್ಟನು.

ತತಃ ಸ ವಿಪ್ರೋ ವಾತ್ಸಲ್ಯಾದಗದಾನ್ ಸುಬಾಹೂನ್ ಮಮ ।
ಚಕಾರ ವ್ಯಪನೇಷ್ಯಾಮಿ ಮೂಕತ್ವಮಿತಿ ನಿಶ್ಚಯಃ ॥ ೩೯ ॥
ಮಂತ್ರವಾದಾನ್ ಬಹೂನ್ ವೈದ್ಯಾನುಪಾಯಾನಪರಾನಪಿ ।
ಪಿತ್ರೋಸ್ತಥಾ ಮಹಾಮಾಯಾಸಂಬದ್ಧಮನಸೋಸ್ತಥಾ ।
ನಿರೀಕ್ಷ್ಯ ಮೂಢತಾಂ ಹಾಸ್ಯಮಾಸೀನ್ಮನಸಿ ಮೇ ತದಾ ॥ ೪೦ ॥
ತಥಾ ಯೌವನಮಾಸಾದ್ಯ ನಿಶಿ ಹಿತ್ವಾ ನಿಜಂ ಗೃಹಂ ॥ ೪೧ ॥
ಸಂಪೂಜ್ಯ ಕಮಲೈಃ ಶಂಭುಂ ತತಃ ಶಯನಮಭ್ಯಗಾಂ ।
ತತಃ ಪ್ರಮೀತೇ ಪಿತಂ ಮೂಢ ಇತ್ಯಹಮುಜ್ಝಿತಃ ॥ ೪೨ ॥
ಸಂಬಂಧಿಭಿಃ ಪ್ರತೀತೋಥ ಫಲಾಹಾರಮುಪಸ್ಥಿತಃ ।
ಪ್ರತೀತಃ ಪೂಜಯಾಮೀಶಮುಚ್ಚೈರ್ಬಹುವಿಧೈಸ್ತಥಾ ॥ ೪೩ ॥
ಅಥ ವರ್ಷಶತಸ್ಯಾಂತೇ ವರದಃ ಶಶಿಶೇಖರಃ ।
ಪ್ರತ್ಯಕ್ಷೋ ಯಾಚಿತೋ ದೇಹಿ ಜರಾಮರಣ ಸಂಕ್ಷಯಂ ॥ ೪೪ ॥

---

೩೯. ಬಳಿಕ ಆ ಬ್ರಾಹ್ಮಣನು ನನ್ನಲ್ಲಿನ ವಾತ್ಸಲ್ಯದಿಂದ, ನನ್ನ ಈ ಮೂಕತನವನ್ನು ಹೋಗಲಾಡಿಸುವೆನೆಂದು ನಿಶ್ಚಯಮಾಡಿಕೊಂಡು ನನಗೆ ಅನೇಕ ಔಷಧೋಪಚಾರಗಳನ್ನು ಮಾಡಿದನು.

೪೦. ಅನೇಕ ಪ್ರಕಾರವಾದ ಮಂತ್ರವಾದಗಳನ್ನೂ ಬಹುರೀತಿಯ ವೈದ್ಯಗಳನ್ನೂ ಇನ್ನೂ ಬೇರೆ ಬಹು ಉಪಾಯಗಳನ್ನೂ ಮಾಡಿದನು. ಮಹಾಮಾಯೆಯಿಂದ ಬದ್ಧವಾದ ಮನಸ್ಸುಳ್ಳವರಾದ ತಂದೆತಾಯಿಗಳ ಆ ಬಗೆಯ ಮೌಢ್ಯವನ್ನು ಕಂಡು ನನ್ನ ಮನಸ್ಸಿನಲ್ಲಿ ಬಹಳ ಹಾಸ್ಯವುಂಟಾಯಿತು.

೪೧–೪೨. ಹಾಗೆಯೇ, ಯೌವನವನ್ನು ಪಡೆದ ಬಳಿಕ ನಾನು ರಾತ್ರಿಯ ವೇಳೆಯಲ್ಲಿ ಸ್ವಂತ ಮನೆಯನ್ನು ಬಿಟ್ಟು ಹೊರಹೋಗಿ ಕಮಲಗಳಿಂದ ಶಂಭುವನ್ನು ಪೂಜಿಸಿ ಹಾಸಿಗೆಯನ್ನು ಸೇರಿದೆನು. ಕೆಲ ಕಾಲವಾದಬಳಿಕ ತಂದೆಯು ಮರಣ ಹೊಂದಲಾಗಿ, ನಾನು ಮೂಢನೆಂದು ಬಗೆದು ನನ್ನ ಸಂಬಂಧಿಗಳೆಲ್ಲರೂ ನನ್ನನ್ನು ತ್ಯಜಿಸಿಬಿಟ್ಟರು.

೪೩. ಆ ತರುವಾಯ ನಾನು ಫಲಾಹಾರದಿಂದ ಜೀವನವನ್ನು ಸಾಗಿಸತೊಡಗಿದೆನು. ಹಾಗೆಯೇ ಪರಮಭಕ್ತಿಸಂಪನ್ನನಾಗಿ ಬಹು ಬಗೆಯ ಕಮಲ ಪುಷ್ಪಗಳಿಂದ ಈಶ್ವರನನ್ನು ಪೂಜಿಸುತ್ತಿದ್ದೆನು.

೪೪. ತರುವಾಯ ನೂರು ವರ್ಷಗಳು ಕಳೆದ ಮೇಲೆ ವರದಾಯಕನಾದ ಚಂದ್ರಶೇಖರನು ನನಗೆ ಪ್ರತ್ಯಕ್ಷನಾದನು. ಆಗ ನಾನು 'ಎಲೈ ಸ್ವಾಮಿಯೇ! ಮುಪ್ಪು ಸಾವುಗಳೇ ಇಲ್ಲದಿರುವ ಸ್ಥಿತಿಯನ್ನು ನನಗೆ ದಯಪಾಲಿಸು' ಎಂದು ಆ ಶಶಿಶೇಖರನನ್ನು ಬೇಡಿಕೊಂಡೆನು.

ಈಶ್ವರ ಉವಾಚ :—

ಅಜರಾಮರತಾ ನಾಸ್ತಿ ನಾಮರೂಪಭೃತೋ ಯತಃ ।
ಮಮಾಪಿ ದೇಹಪಾತಃ ಸ್ಯಾದವಧಿಂ ಕುರು ಜೀವಿತೇ ॥ ೪೫ ॥
ಇತಿ ಶಂಭೋರ್ವಚಃ ಶ್ರುತ್ವಾ ಮಯಾವೃತಮಿದಂ ತದಾ ।
ಕಲ್ಪಾಂತೇ ರೋಮಪಾತೋಽಸ್ತು ಮರಣಂ ಸರ್ವಸಂಕ್ಷಯೇ ॥ ೪೬ ॥
ತತಸ್ತವ ಗಣೋಭೂಯಾಮಿತಿ ಮೇಽಭೀಪ್ಸಿತೋ ವರಃ ।
ತಥೇತ್ಯುಕ್ತ್ವಾ ಸ ಭಗವಾನ್ ಹರಶ್ಚಾದರ್ಶನಂ ಗತಃ ॥ ೪೭ ॥
ಅಹಂ ತಪಸಿ ನಿಷ್ಠಶ್ಚ ತತಃ ಪ್ರಭೃತಿ ಚಾಭವಂ ।
ಬ್ರಹ್ಮಹತ್ಯಾದಿಭಿಃ ಪಾಪೈರ್ಮುಚ್ಯತೇ ಶಿವಪೂಜನಾತ್ ॥ ೪೮ ॥
ಬ್ರಧ್ನಾಬ್ಜೈರಿತರೈರ್ವಾಪಿ ಕಮಲೈರ್ನಾತ್ರ ಸಂಶಯಃ ।
ಏವಂ ಕುರು ಮಹಾರಾಜ ತ್ವಮಪ್ಯಾಪ್ಸ್ಯಸಿ ವಾಂಛಿತಂ ॥ ೪೯ ॥
ಹರಭಕ್ತಸ್ಯ ಲೋಕಸ್ಯ ತ್ರಿಲೋಕ್ಯಾಂ ನಾಸ್ತಿ ದುರ್ಲಭಂ ।
ಬಹಿಃ ಪ್ರವೃತ್ತಿಂ ಸಂಗೃಹ್ಯ ಜ್ಞಾನಕರ್ಮೇಂದ್ರಿಯಾದಿ ಚ ॥ ೫೦ ॥

---

೪೫. ಈಶ್ವರನಿಂತೆಂದನು :— 'ನಾಮರೂಪಗಳನ್ನು ತಾಳಿರುವವರಿಗೆ ಅಜರಾಮರತ್ವವೆಂಬುದು ಇಲ್ಲವೇ ಇಲ್ಲವು. ನನಗೂ ಕೂಡ ದೇಹಪಾತವುಂಟು. ಆದುದರಿಂದ ಜೀವನಕ್ಕೆ ಒಂದು ಅವಧಿಯನ್ನು ಗೊತ್ತುಮಾಡು.'

೪೬. ಇಂತೆಂದು ನುಡಿದ ಶಂಭುವಿನ ಮಾತನ್ನು ಕೇಳಿ ಆಗ ನಾನು ಹೀಗೆ ಕೇಳಿಕೊಂಡೆನು :—'ಒಂದು ಕಲ್ಪದಕೊನೆಯಲ್ಲಿ ನನ್ನ ಮೈಯ ಒಂದು ಕೂದಲು ಬಿದ್ದುಹೋಗಲಿ; ಎಲ್ಲ ಕೂದಲುಗಳೂ ಬಿದ್ದುಹೋದ ಬಳಿಕ ನನಗೆ ಮರಣ ವುಂಟಾಗಲಿ.

೪೭. ಆ ಬಳಿಕ ನಿನ್ನ ಗಣದಲ್ಲೊಬ್ಬನಾಗುವೆನು. ಈ ವರವು ನನಗೆ ಇಷ್ಟವಾಗಿರುವುದು.' ಅದನ್ನಾಲಿಸಿ, 'ಹಾಗೆಯೇ ಆಗಲಿ' ಎಂದು ನುಡಿದು ಭಗವಂತನಾದ ಆ ಹರನು ಅಂತರ್ಧಾನಹೊಂದಿದನು.

೪೮–೪೯. ಅಲ್ಲಿಂದ ಮುಂದೆ ನಾನು ತಪಸ್ಸಿನಲ್ಲಿ ನಿಷ್ಠನಾದೆನು. ಅರುಣ ಕಮಲಗಳಿಂದಲಾಗಲಿ, ಇತರ ಬಗೆಯ ತಾವರೆಗಳಿಂದಲಾಗಲಿ ಶಿವನನ್ನು ಪೂಜಿಸಿದರೆ ಆ ಪೂಜೆಯ ಫಲವಾಗಿ ಬ್ರಹ್ಮಹತ್ಯವೇ ಮೊದಲಾದ ಪಾಪಗಳಿಂದ ಬಿಡುಗಡೆಯುಂಟಾಗುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲವು. ಅಯ್ಯಾ ಮಹಾರಾಜನೇ! ನೀನೂ ಹೀಗೆಯೇ ಮಾಡು. ನೀನೂ ಸಹ ನಿನ್ನ ಇಷ್ಟಾರ್ಥ ವನ್ನು ಪಡೆಯುತ್ತೀಯೆ.

೫೦–೫೧. ಹರಭಕ್ತನಾದವನಿಗೆ ದುರ್ಲಭವಾದುದೆಂಬುದಾವುದೂ ಇಲ್ಲವು. ಬಹಿಃಪ್ರವೃತ್ತಿಯನ್ನೂ, ಜ್ಞಾನೇಂದ್ರಿಯ ಕರ್ಮೇಂದ್ರಿಯ ಮೊದಲಾ

ಲಯಃ ಸದಾಶಿವೇ ನಿತ್ಯಮಂತರ್ಯೋಗೋಽಯಮುಚ್ಯತೇ ।
ದುಷ್ಕರತ್ವಾದ್ಬಹಿರ್ಯೋಗಂ ಶಿವ ಏವ ಸ್ವಯಂ ಜಗೌ ॥ ೫೦ ॥
ಪಂಚಭಿಶ್ಚಾರ್ಚನಂ ಭೂತೈರ್ವಿಶಿಷ್ಟಫಲದಂ ಧ್ರುವಂ ।
ಕ್ಲೇಶಕರ್ಮವಿಪಾಕಾದ್ಯೈರಾಶಯೈಶ್ಚಾಪ್ಯಸಂಯುತಂ ॥ ೫೨ ॥
ಈಶಾನಮಾರಾಧ್ಯ ಜಪನ್ ಪ್ರಣವಂ ಮುಕ್ತಿಮಾಪ್ನುಯಾತ್ ।
ಸರ್ವಪಾಪಕ್ಷಯೇ ಜಾತೇ ಶಿವೇ ಭವತಿ ಭಾವನಾ ॥ ೫೩ ॥
ಪಾಪೋಪಹತಬುದ್ಧೀನಾಂ ಶಿವೇ ವಾರ್ತಾಪಿ ದುರ್ಲಭಾ ।
ದುರ್ಲಭಂ ಭಾರತೇ ಜನ್ಮ ದುರ್ಲಭಂ ಶಿವಪೂಜನಂ ॥ ೫೪ ॥
ದುರ್ಲಭಂ ಜಾಹ್ನವೀ ಸ್ನಾನಂ ಶಿವೇ ಭಕ್ತಿಃ ಸುದುರ್ಲಭಂ ।
ದುರ್ಲಭಂ ಬ್ರಾಹ್ಮಣೇ ದಾನಂ ದುರ್ಲಭಂ ವಹ್ನಿಪೂಜನಂ ॥ ೫೫ ॥
ಅಲ್ಪಪುಣ್ಯೈಶ್ಚ ದುಷ್ಪ್ರಾಪಂ ಪುರುಷೋತ್ತಮಪೂಜನಂ ॥ ೫೬ ॥

---

ದುವುಗಳನ್ನೂ ಅಡಗಿಸಿ ಸದಾ ಶಿವನಲ್ಲಿ ಮನಸ್ಸು ಯಾವಾಗಲೂ ಲಯವಾಗಿರುವುದು ಅಂತರ್ಯೋಗವೆಂದು ಹೇಳಲ್ಪಡುತ್ತದೆ. ಇದು ಆಚರಿಸುವುದಕ್ಕೆ ಬಹು ಕಷ್ಟವಾಗಿರುವುದರಿಂದ ಸ್ವಯಂ ಶಿವನೇ ಬಹಿರ್ಯೋಗವನ್ನು ಹೇಳಿರುವನು.

೫೨. ಪಂಚಭೂತಗಳಿಂದಲೂ ಅರ್ಚನೆಮಾಡುವುದು ವಿಶಿಷ್ಟವಾದ ಫಲಗಳನ್ನು ಕೊಡುವುದು ಇದು ನಿಶ್ಚಯವು. ಕ್ಲೇಶ, ಕರ್ಮವಿಪಾಕ ಮೊದಲಾದ ಆಶಯಗಳಿಂದ ದೂರವಾಗಿರುವುದು.

೫೩. ಈಶಾನನನ್ನು ಆರಾಧಿಸಿ ಪ್ರಣವವನ್ನು ಜಪಿಸುವವನು ಮುಕ್ತಿಯನ್ನು ಪಡೆಯುತ್ತಾನೆ. ಸರ್ವಪಾಪಗಳೂ ಕ್ಷಯವಾಗಿ ಹೋಗಲಾಗಿ ಶಿವನಲ್ಲಿ ಭಕ್ತಿ ಭಾವನೆಯುಂಟಾಗುತ್ತದೆ.

೫೪. ಪಾಪದಿಂದ ಪೀಡಿತವಾಗಿರುವ ಬುದ್ಧಿಯುಳ್ಳವರಿಗೆ ಶಿವನ ವಾರ್ತೆಯೂ ದುರ್ಲಭವಾಗಿರುವುದು. ಭರತಭೂಮಿಯಲ್ಲಿ ಜನ್ಮ ದೊರೆಯುವುದು ದುರ್ಲಭವಾದುದು; ಶಿವಪೂಜೆಯು ಅದಕ್ಕಿಂತಲೂ ದುರ್ಲಭವಾದುದು.

೫೫. ಜಾಹ್ನವಿಯಲ್ಲಿ (ಗಂಗಾನದಿಯಲ್ಲಿ) ಸ್ನಾನವು ಅದಕ್ಕಿಂತಲೂ ದುರ್ಲಭವಾದುದು. ಶಿವನಲ್ಲಿ ಭಕ್ತಿಯುಂಟಾಗುವುದಂತೂ ಬಹಳ ದುರ್ಲಭವು. ಬ್ರಾಹ್ಮಣನಿಗೆ ದಾನವೆಸಗುವುದು ಮತ್ತೂ ದುರ್ಲಭವು. ಅಗ್ನಿಪೂಜೆಯು ಅತಿ ದುರ್ಲಭವೇ ಸರಿ.

೫೬. ಪುರುಷೋತ್ತಮನ ಪೂಜೆಯು ಅಲ್ಪಪುಣ್ಯವುಳ್ಳವರಿಂದ ಪಡೆಯಲರಿದಾಗಿರುವುದು.

**ಲಕ್ಷೇಣ ಧನುಷಾಂ ಯೋಗಸ್ತದರ್ಧೇನ ಹುತಾಶನಃ ।**
**ಪಾತ್ರಂ ಶತಸಹಸ್ರೇಣ ರೇವಾ ರುದ್ರಶ್ಚ ಷಷ್ಟಿಭಿಃ ॥ ೫೭ ॥**
**ಇತೀದಮುಕ್ತಮಖಿಲಂ ಮಯಾ ತವ ಮಹೀಪತೇ ।**
**ಯಥಾಯುರಭವದ್ದೀರ್ಘಂ ಸಮಾರಾಧ್ಯ ಮಹೇಶ್ವರಂ ॥ ೫೮ ॥**
**ನ ದುರ್ಲಭಂ ನ ದುಷ್ಪ್ರಾಪಂ ನ ಚಾಸಾಧ್ಯಂ ಮಹಾತ್ಮನಾಂ ।**
**ಶಿವಭಕ್ತಿಕೃತಾಂ ಪುಂಸಾಂ ತ್ರಿಲೋಕ್ಯಾಮಿತಿ ನಿಶ್ಚಿತಂ ॥ ೫೯ ॥**
**ನಂದೀಶ್ವರಸ್ಯ ತೇನೈವ ವಪುಷಾ ಶಿವಪೂಜನಾತ್ ।**
**ಸಿದ್ಧಿಮಾಲೋಕ್ಯ ಕೋ ರಾಜನ್ ಶಂಕರಂ ನ ನಮಸ್ಯತಿ ॥ ೬೦ ॥**
**ಶ್ವೇತಸ್ಯಚ ಮಹೀಪಸ್ಯ ಶ್ರೀಕಂಠಂ ಚ ನಮಸ್ಯತಃ ।**
**ಕಾಲೋಽಪಿ ಪ್ರಲಯಂ ಯಾತಃಕಸ್ತಮೀಶಂ ನ ಪೂಜಯೇತ್ ॥ ೬೧ ॥**
**ಯದಿಚ್ಛಯಾ ವಿಶ್ವಮಿದಂ ಜಾಯತೇ ವ್ಯವತಿಷ್ಠತೇ ।**
**ತಥಾ ಸಂಲೀಯತೇ ಚಾಂತೇ ಕಸ್ತಂ ನ ಶರಣಂ ವ್ರಜೇತ್ ॥ ೬೨ ॥**

---

೫೭. ಲಕ್ಷ ಧನುಸ್ಸುಗಳಿಂದ ಯೋಗವೂ, ಅದರ ಅರ್ಧದಿಂದ ಅಗ್ನಿಯೂ, ಪಾತ್ರವು ನೂರು ಸಾವಿರಗಳಿಂದಲೂ, ರೇವಾ ಮತ್ತು ರುದ್ರರು ಅರುವತ್ತು ಸಾವಿರದಿಂದಲೂ ಸೇವ್ಯರು.

೫೮. ಮಹೇಶ್ವರನನ್ನಾರಾಧಿಸಿದುದರಿಂದ ನನಗೆ ಹೇಗೆ ಈ ಬಗೆಯಾದ ದೀರ್ಘಾಯುಸ್ಸು ಉಂಟಾಯಿತೆಂಬ ಈ ಎಲ್ಲ ವೃತ್ತಾಂತವನ್ನೂ ನಾನು ಕುತೂಹಲಿಯಾಗಿ ಕೇಳಿದ ನಿನಗೆ ಹೇಳಿದ್ದೇನೆ.

೫೯. ಶಿವಭಕ್ತಿಮಾಡುವ ಮಹಾತ್ಮರಾದ ಪುರುಷರಿಗೆ ಮೂರುಲೋಕಗಳಲ್ಲಿಯೂ ದುರ್ಲಭವಾದುದಿಲ್ಲ; ಅಸಾಧ್ಯವೆಂಬುದೂ ಇಲ್ಲ. ಇದು ನಿಶ್ಚಯವು.

೬೦. ಎಲೈ ರಾಜನೇ! ಶಿವಪೂಜೆಯಿಂದ ನಂದೀಶ್ವರನಿಗೆ ಅದೇ ಶರೀರದಿಂದಲೇ ಸಿದ್ಧಿಯುಂಟಾದುದನ್ನು ನೋಡಿ, ಯಾವನುತಾನೆ ಶಂಕರನನ್ನು ನಮಸ್ಕರಿಸುವುದಿಲ್ಲ?

೬೧. ಶ್ರೀಕಂಠನನ್ನು ನಮಿಸುತ್ತಿದ್ದ ಶ್ವೇತ ಮಹಾರಾಜನಿಂದ ಕಾಲನು ಕೂಡ ಪ್ರಲಯಹೊಂದಿದನು. ಅಂಥ ಈಶ್ವರನನ್ನು ಯಾರುತಾನೆ ಪೂಜಿಸದಿರುವರು?

೬೨. ಯಾರ ಇಚ್ಛೆಯಿಂದ ಈ ಚರಾಚರಾತ್ಮಕವಾದ ವಿಶ್ವವು ಜನಿಸುವುದೋ, ಮತ್ತಾವ ಪ್ರಭುವಿನ ಸಂಕಲ್ಪದಿಂದ ಸ್ಥಿರವಾಗಿ ನೆಲಸಿರುವುದೋ ಮತ್ತು ಅಂತ್ಯಕಾಲದಲ್ಲಿ ಯಾವಾತನ ಇಚ್ಛೆಯಿಂದಲೇ ಲಯವಾಗಿ ಹೋಗುವುದೋ ಅಂಥ ಪರಶಿವನನ್ನು ಯಾರುತಾನೆ ಶರಣುಹೊಂದುವುದಿಲ್ಲ?

ಏತದ್ರಹಸ್ಯಮಿದಮೇವ ನೃಣಾಂ ಪ್ರಧಾನಂ
ಕರ್ತವ್ಯಮತ್ರ ಶಿವಪೂಜನಮೇವ ಭೂಪ ।
ಯಸ್ಮಾಂತರಾಯಪದವೀಮುಪಯಾಂತಿ ಲೋಕಾಃ
ಸದ್ಯೋ ನರಃ ಶಿವನತಃ ಶಿವಮೇತಿ ಸತ್ಯಂ ॥ ೬೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ಮಹೀಪ್ರಾದುರ್ಭಾವೇ ಲೋಮಶವೃತ್ತಾಂತೇ ಶಿವಪೂಜನ ಮಾಹಾತ್ಮ್ಯ ವರ್ಣನಂ" ನಾಮ ದ್ವಾದಶೋಽಧ್ಯಾಯಃ

---

೬೩. ಎಲೈ ಭೂಪನೇ! ಇದು ರಹಸ್ಯವಾದ ವಿಷಯ. ಶಿವಪೂಜೆಯೇ ಮನುಷ್ಯರಿಗೆ ಪ್ರಧಾನವಾದ ಕರ್ತವ್ಯ. ಸ್ವರ್ಗವೇ ಮೊದಲಾದ ಲೋಕಗಳು ಶಿವಪೂಜೆಗೆ ವಿಘ್ನಸ್ವರೂಪವಾಗಿರುವುವು. ಶಿವನಿಗೆ ನಮಸ್ಕರಿಸಿದ ಶಿವಕಿಂಕರನಾದ ನರನು ತಕ್ಷಣವೇ ಶಿವಪದವಿಯನ್ನು ಪಡೆಯುತ್ತಾನೆ; ಇದು ಸತ್ಯವು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಲೋಮಶ ವೃತ್ತಾಂತ – ಶಿವಪೂಜನ ಮಾಹಾತ್ಮ್ಯವರ್ಣನ"ವೆಂಬ
ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋದಶೋಽಧ್ಯಾಯಃ

## ಲೋಮಶ ವೃತ್ತಾಂತೇ — ಶಿವಪೂಜನ ವೃತ್ತಾಂತ ವರ್ಣನಂ

ನಾರದ ಉವಾಚ:—

ಇತಿ ತಸ್ಯ ಮುನೀಂದ್ರಸ್ಯ ಭೂಪತಿಃ ಶುಶ್ರುವಾನ್ ವಚಃ ।
ಪ್ರಾಹ ನಾಹಂ ಗಮಿಷ್ಯಾಮಿ ತ್ವಾಂ ವಿಹಾಯ ನರಂ ಕ್ವಚಿತ್ ॥ ೧ ॥
ಲಿಂಗಮಾರಾಧಯಿಷ್ಯೇಽದ್ಯ ಸರ್ವಸಿದ್ಧಿಪ್ರದಂ ನೃಣಾಂ ।
ತ್ವಯೈವಾನುಗೃಹೀತೋಽದ್ಯ ಯಾಂತು ಸರ್ವೇ ಯಥಾ ಗತಂ ॥ ೨ ॥
ತದ್ಭೂಪತಿ ವಚಃ ಶ್ರುತ್ವಾ ಬಕೋ ಗೃಧ್ರೋಽಥ ಕಚ್ಛಪಃ ।
ಉಲೂಕಶ್ಚ ತಥೈವೋಚುಃ ಪ್ರಣತಾ ಲೋಮಶಂ ಮುನಿಂ ॥ ೩ ॥
ಸ ಚ ಸರ್ವಸುಹೃದ್ವಿಪ್ರಸ್ತಥೇತ್ಯೇವಾಹ ತಾಂಸ್ತದಾ ।
ಪ್ರಬೋಧ್ಯಾನ್ ಪ್ರಣತಾನ್ ಸರ್ವಾನನುಜಗ್ರಾಹ ಶಿಷ್ಯವತ್ ॥ ೪ ॥
ಶಿವದೀಕ್ಷಾವಿಧಾನೇನ ಲಿಂಗಪೂಜಾಂ ಸಮಾದಿಶತ್ ।
ತೇಷಾಮನುಗ್ರಹಪರೋ ಮುನಿಃ ಪ್ರಣತವತ್ಸಲಃ ।
ತೀರ್ಥಾದಪ್ಯಧಿಕಂ ಸ್ಥಾನೇ ಸತಾಂ ಸಾಧುಸಮಾಗಮಃ ॥ ೫ ॥

---

## ಕನ್ನಡದ ಅನುವಾದ

### ಲೋಮಶ ವೃತ್ತಾಂತ — ಶಿವಪೂಜನ ವೃತ್ತಾಂತ ವರ್ಣನ

೧–೨. ನಾರದನು ಹೇಳುತ್ತಾನೆ:— ಆ ಮುನೀಂದ್ರನ ಈ ರೀತಿಯಾದ ನುಡಿಗಳನ್ನು ಆಲಿಸುವವನಾಗಿ ಆ ಇಂದ್ರದ್ಯುಮ್ನ ಮಹಾರಾಜನು ಹೀಗೆ ಮರು ನುಡಿದನು :—"ನಾನು ನಿಮ್ಮನ್ನಗಲಿದು ಬೇರೆ ಯಾವ ಮನುಷ್ಯನ ಬಳಿಗೂ ಎಲ್ಲಿಗೂ ಹೋಗುವುದಿಲ್ಲವು. ಈಗ ನಿಮ್ಮಿಂದ ಅನುಗ್ರಹಿಸಲ್ಪಟ್ಟವನಾಗಿ ನರರಿಗೆ ಸರ್ವಸಿದ್ಧಿಗಳನ್ನೂ ದಯಪಾಲಿಸುವ ಶಿವಲಿಂಗವನ್ನು ಆರಾಧಿಸುತ್ತೇನೆ. ಸರ್ವರೂ ಬಂದಂತೆಯೇ ಹೊರಟುಹೋಗಲಿ."

೩. ಆ ಮಹಾರಾಜನ ಮಾತನ್ನು ಕೇಳಿ ಬಕ, ಗೃಧ್ರ, ಆಮೆ, ಉಲೂಕ ಇವರೆಲ್ಲರೂ ಲೋಮಶಮುನಿಗೆ ವಂದನೆಮಾಡಿ ತಾವೂ ಹಾಗೆಯೇ ಹೇಳಿದರು.

೪. ಸರ್ವರಿಗೂ ಸ್ನೇಹಿತನೆನಿಸಿಕೊಂಡಿದ್ದ ಆ ಬ್ರಾಹ್ಮಣನು (ಲೋಮಶನು) ಅವರನ್ನು ಕುರಿತು 'ಹಾಗೆಯೇ ಆಗಲಿ' ಎಂದು ನುಡಿದನು. ಬೋಧನೆಗೆ ಯೋಗ್ಯರಾಗಿ ಪ್ರಣತರಾಗಿದ್ದ ಅವರೆಲ್ಲರನ್ನೂ ಶಿಷ್ಯರಂತೆ ಕಂಡು ಆತನು ಗ್ರಹಿಸಿದನು.

೫. ಪ್ರಣತವತ್ಸಲನಾದ ಆ ಮುನಿಯು ಅವರಿಗೆ ಅನುಗ್ರಹ ಮಾಡಬೇಕೆಂಬ ಬುದ್ಧಿಯುಳ್ಳವನಾಗಿ ಶಿವದೀಕ್ಷಾವಿಧಾನದಿಂದ ಲಿಂಗಪೂಜೆಯನ್ನು

ಪಚೇಲಿಮಫಲಃ ಸದ್ಯೋ ದುರಂತಕಲುಷಾಪಹಃ ।
ಅಪೂರ್ವಃ ಕೋಽಪಿ ಸದ್ಗೋಷ್ಠೀ ಸಹಸ್ರಕಿರಣೋದಯಃ ॥ ೬ ॥
ಯ ಏಕಾಂತತಯಾತ್ಯಂತಮಂತರ್ಗತತಮೋಪಹಃ ।
ಸಾಧುಗೋಷ್ಠೀ ಸಮುದ್ಭೂತ ಸುಖಾಮೃತರಸೋರ್ಮಯಃ ॥ ೭ ॥
ಸರ್ವೇ ವರಾಃ ಸಾಧುಕಾರಾಃ ಶರ್ಕರಾಮಧುಷಡ್ರಸಾಃ ।
ತತಸ್ತೇ ಸಾಧುಸಂಸರ್ಗಂ ಸಂಪ್ರಾಪ್ತಾಃ ಶಿವಶಾಸನಾತ್ ॥ ೮ ॥
ಆರೇಭಿರೇ ಕ್ರಿಯಾಯೋಗಂ ಮಾರ್ಕಂಡನೃಪಪೂರ್ವಕಾಃ ।
ತೇಷಾಂ ತಪಸ್ಯತಾಮೇವಂ ಸಮಾಜಗ್ಮೇ ಕದಾಚನ ॥ ೯ ॥
ಮುಖ್ಯಾಪುರುಷಯಾತಾ ಹಿ ತೀರ್ಥಯಾತ್ರಾನುಷಂಗತಃ ।
ಸದ್ಭಿಃ ಸಮಾಶ್ರಿತೋ ಭೂಪ ಭೂಮಿಭಾಗಸ್ತಥೋಚ್ಯತೇ ॥ ೧೦ ॥

---

ಉಪದೇಶಮಾಡಿದನು. ಸರಿಯಾದ ಸ್ಥಳದಲ್ಲಿ ಉಂಟಾಗುವ ಸಾಧುಸಮಾಗಮವು ತೀರ್ಥಕ್ಕಿಂತಲೂ ಬಹಳ ಮಿಗಿಲಾದುದಷ್ಟೆ.

೬. ಸತ್ಪುರುಷರ ಗೋಷ್ಠಿಯೆಂಬ ಸಹಸ್ರಕಿರಣನಾದ ಸೂರ್ಯನ ಉದಯವು ಬಹು ಅಪೂರ್ವವಾದುದು. ಅದು ತಕ್ಷಣವೇ ಪರಿಪಕ್ವವಾದ ಫಲವನ್ನು ಕೊಡುವಂಥದೂ ಕೊನೆಯಲ್ಲಿ ದುಷ್ಪರಿಣಾಮವನ್ನುಂಟುಮಾಡುವ ಪಾಪಗಳನ್ನು ಪರಿಹರಿಸುವುದೂ ಆಗಿರುವುದು.

೭. ಸಾಧುಗೋಷ್ಠಿಯಿಂದುಂಟಾದ ಸುಖವೆಂಬ ಅಮೃತರಸದ ತೆರೆಗಳು ರಹಸ್ಯವಾಗಿರುವುದರಿಂದ ಅತ್ಯಂತ ಹೆಚ್ಚಾಗಿ ಕೂಡಿರುವ ಒಳಗತ್ತಲೆಯನ್ನು (ಅಜ್ಞಾನವನ್ನು) ನಾಶಮಾಡತಕ್ಕುದಾಗಿರುವುವು.

೮. ಆ ರಸದೆರೆಗಳೆಲ್ಲವೂ ಶ್ರೇಷ್ಠವಾದುವುಗಳೇ! ಬಹು ರುಚಿಯಾಗಿರುವವೇ! ಸಕ್ಕರೆ, ಜೇನು ಮೊದಲಾದ ಷಡ್ರಸಗಳು ಸೇರಿದಂಥವೇ! ಬಳಿಕ ಅವರು ಶಿವನ ಶಾಸನದಿಂದ ಸಾಧು ಸಹವಾಸವನ್ನು ಪಡೆದರು.

೯. ಅಲ್ಲದೆ, ಮಾರ್ಕಂಡೇಯ ಮತ್ತು ದೊರೆಯೇ ಮೊದಲಾದ ಅವರೆಲ್ಲರೂ ಕ್ರಿಯಾಯೋಗವನ್ನು ಪ್ರಾರಂಭಮಾಡಿದರು. ಅವರು ಈ ರೀತಿ ತಪಸ್ಸು ಮಾಡುತ್ತಿರುವಾಗ ಒಂದಾನೊಂದು ಸಮಯದಲ್ಲಿ ತೀರ್ಥಯಾತ್ರೆ ಮಾಡುತ್ತಿರುವ ಸಂದರ್ಭದಲ್ಲಿ ಲೋಮಶನನ್ನು ನೋಡಬೇಕೆಂದು ಉತ್ಸುಕನಾಗಿ ನಾನು ಅಲ್ಲಿಗೆ ಹೋದೆನು.

೧೦. ತೀರ್ಥಯಾತ್ರೆಗೆ ಹೋಲಿಸಿದರೆ ಪುರುಷಯಾತ್ರೆಯೇ ಹೆಚ್ಚು ಮುಖ್ಯವಾದುದು. ಎಲೈ ರಾಜನೇ! ಸತ್ಪುರುಷರಿಂದ ಆಶ್ರಯಿಸಲ್ಪಟ್ಟಿರುವ ಭೂಮಿಭಾಗವು ಪುರುಷಯಾತ್ರೆಯೆನಿಸಿಕೊಳ್ಳುತ್ತದೆ.

ಕೃತಾರ್ಹಣಾತಿಥ್ಯವಿಧಿಂ ವಿಶ್ರಾಂತಂ ಮಾಂ ಚ ಫಾಲ್ಗುನ ।
ಪ್ರಣಮ್ಯ ತೇಽಥ ಪಪ್ರಚ್ಛುರ್ನಾಡೀಜಂಘಪುರಃಸರಾಃ ॥ ೧೧ ॥
ಶಾಪಭ್ರಷ್ಟಾ ವಯಂ ಬ್ರಹ್ಮಂಶ್ಚತ್ವಾರೋಽಪಿ ಸ್ವಕರ್ಮಣಾ ।
ತನ್ಮುಕ್ತಿಸಾಧನಾರ್ಥಾಯ ಸ್ಥಾನಂ ಕಿಂಚಿತ್ಸಮಾದಿಶ ॥ ೧೨ ॥
ಇಯಂ ಹಿ ನಿಷ್ಫಲಾ ಭೂಮಿಃ ಸಫಲಂ ಭಾರತಂ ಮುನೇ ॥ ೧೩ ॥
ತತ್ರಾಪಿ ಕ್ವಚಿದೇಕತ್ರ ಸರ್ವತೀರ್ಥಫಲಂ ವದ ।
ಇತಿ ಪೃಷ್ಟಸ್ತ್ವಹಂ ತೈಶ್ಚ ತಾನಬ್ರವಮಿದಂ ತದಾ ॥ ೧೪ ॥
ಸಂವರ್ತಂ ಪರಿಪೃಚ್ಛಧ್ವಂ ಸರ್ವೋ ವಕ್ಷ್ಯತಿ ತತ್ವತಃ ।
ಸರ್ವತೀರ್ಥಫಲಾವಾಪಿಕಾರಕಂ ಭೂಪ್ರದೇಶಕಂ ॥ ೧೫ ॥
ಕುತ್ರಾಸೌ ವಿದ್ಯತೇ ಯೋಗೀ ನಾಜ್ಞಾಸಿಷ್ಮ ವಯಂ ಚ ತಂ ।
ಸಂವರ್ತದರ್ಶನಾತ್ ಮುಕ್ತಿರಿತಿಚಾಸ್ಮದನುಗ್ರಹಃ ॥ ೧೬ ॥

---

೧೧. ಅಯ್ಯಾ ಫಾಲ್ಗುನಾ! ಈ ಕಾರಣದಿಂದ ಪೂಜೆ ಮತ್ತು ಆತಿಥ್ಯಗಳನ್ನು ಪಡೆದು ವಿಶ್ರಾಂತಿಹೊಂದಿದ ನನ್ನನ್ನು ವಂದಿಸಿ, ನಾಡೀಜಂಘನೇ ಮೊದಲಾದ ಅವರು ನನ್ನನ್ನು ಪ್ರಶ್ನೆಮಾಡಿದರು.

೧೨. ಅವರಿಂತೆಂದರು:—"ಅಯ್ಯಾ ಬ್ರಾಹ್ಮಣನೇ! ನಾವು ನಾಲ್ವರೂ ಕೂಡ ನಮ್ಮ ನಮ್ಮ ಕರ್ಮಕ್ಕನುಗುಣವಾಗಿ ಶಾಪಹೊಂದಿ ಭ್ರಷ್ಟರಾಗಿದ್ದೇವೆ. ಆ ಶಾಪದಿಂದ ಬಿಡುಗಡೆಯನ್ನು ಸಾಧಿಸಿಕೊಳ್ಳುವುದಕ್ಕಾಗಿ ಯಾವುದಾದರೊಂದು ಸ್ಥಾನವನ್ನು ತಿಳಿಸುವವರಾಗಬೇಕು.

೧೩. ಈ ಸ್ಥಳವು ನಿಷ್ಫಲವಾದುದು. ಎಲೈ ಮುನಿಯೇ! ಭಾರತವೇ ಸಫಲವಾದ ಪ್ರದೇಶವು.

೧೪. ಅಲ್ಲಿಯೂ ಕೂಡ, ಒಂದೇ ಕಾಡಿನಲ್ಲಿ ಸರ್ವ ತೀರ್ಥಗಳ ಫಲವನ್ನೂ ಕೊಡುವಂತಹ ಸ್ಥಳವು ಎಲ್ಲಿಯೋ ಒಂದು ಕಡೆ ಮಾತ್ರವಿರುತ್ತದೆ. ಅಂಥ ಸ್ಥಳವನ್ನು ನಮಗೆ ತಿಳಿಸು." ಇಂತೆಂದು ಅವರಿಂದ ಪ್ರಶ್ನಿಸಲ್ಪಟ್ಟ ನಾನು ಅವರನ್ನು ಕುರಿತು ಹೀಗೆ ಹೇಳಿದೆನು:—

೧೫. "ಅಯ್ಯಾ! ನೀವು ಈ ವಿಷಯದಲ್ಲಿ ಸಂವರ್ತನನ್ನು ಕೇಳಿರಿ. ಸರ್ವ ತೀರ್ಥಗಳ ಫಲವನ್ನು ಪಡೆಯಲು ಕಾರಣವಾಗುವಂತಹ ಆ ಪ್ರದೇಶವನ್ನು ಅವನು ನಿಶ್ಚಯವಾಗಿ ನಿಮಗೆ ತಿಳಿಸುತ್ತಾನೆ."

೧೬. ಅವರು ಇಂತೆಂದರು:— "ಎಲೈ ಮುನಿಯೇ! ಆ ಯೋಗಿಯು ಎಲ್ಲಿದ್ದಾನೆ? ನಾವು ಅವನನ್ನು ತಿಳಿದವರಲ್ಲ. ಸಂವರ್ತನ ದರ್ಶನದಿಂದ ನಮಗೆ ಮುಕ್ತಿಯು ದೊರಕುವುದೆಂದು ನಮಗೆ ತಮ್ಮ ಅನುಗ್ರಹವಾಯಿತಷ್ಟೆ.

ಯದಿ ಜಾನಾಸಿ ತಂ ಬ್ರೂಹಿ ಸುಹೃತ್ಸಂಗೋ ನ ನಿಷ್ಫಲಃ ।
ತತೋಽಹಮಬ್ರುವಂ ತಾಂಶ್ಚ ವಿಚಾರ್ಯೇದಂ ಪುನಃಪುನಃ ॥ ೧೭ ॥
ವಾರಣಸ್ಯಾಮಸಾವಾಸ್ತೇ ಸಂವರ್ತೋ ಗುಪ್ತಲಿಂಗಭೃತ್ ।
ಮಲದಿಗ್ಧೋ ವಿವಸನೋ ಭಿಕ್ಷಾಶೀ ಕೃತಪಾದನಾ ॥ ೧೮ ॥
ಕರಪಾತ್ರಕೃತಾಹಾರಃ ಸರ್ವಥಾ ನಿಷ್ಪರಿಗ್ರಹಃ ।
ಭಾವಯನ್ ಬ್ರಹ್ಮ ಪರಮಂ ಪ್ರಣವಾಭಿದಮೀಶ್ವರಂ ॥ ೧೯ ॥
ಭುಕ್ತ್ವಾ ನಿರ್ಯಾತಿ ಸಾಯಾಹ್ನೇ ವನಂ ನ ಜ್ಞಾಯತೇ ಜನೈಃ ।
ಯೋಗೀಶ್ವರೋಽಸೌ ತದ್ರೂಪಾಃ ಸಂತ್ಯನ್ಯೇ ಲಿಂಗಧಾರಣಃ ॥ ೨೦ ॥
ವಕ್ಷ್ಯಾಮಿ ಲಕ್ಷಣಂ ತಸ್ಯ ಯಥಾ ಜ್ಞಾಸ್ಯತ ತಂ ಮುನಿಂ ।
ಪ್ರತೋಲ್ಯಾಂ ರಾಜಮಾರ್ಗೇ ತು ನಿಶಿ ಭೂಮೌ ಶವಂ ಜನೈಃ ॥ ೨೧ ॥
ಅವಿಜ್ಞಾತಂ ಸ್ಥಾಪನೀಯಂ ಸ್ಥೇಯಂ ತದವಿದೂರತಃ ।
ಯಸ್ತಾಂ ಭೂಮಿಮುಪಾಗಮ್ಯ ಅಕಸ್ಮಾದ್ವ್ಯ ನಿವರ್ತತೇ ॥ ೨೨ ॥

---

೧೭. ನೀವು ಅವನನ್ನು ಬಲ್ಲವರಾದರೆ ಹೇಳಿರಿ. ಸುಹೃತ್ಸಹವಾಸವು ಎಂದಿಗೂ ನಿಷ್ಫಲವಾಗುವುದಿಲ್ಲ." ಅರ್ಜುನಾ! ಅವರಿಂತು ಪ್ರಶ್ನಿಸಲು ನಾನು ಮತ್ತೆ ಮತ್ತೆ ವಿಚಾರಮಾಡಿ ಅವರಿಗೆ ಹೀಗೆ ಹೇಳಿದೆನು :—

೧೮. "ಅಯ್ಯಾ! ಆ ಸಂವರ್ತನು ವಾರಾಣಸಿಯಲ್ಲಿದ್ದಾನೆ; ಗುಪ್ತ ವೇಷವನ್ನು ಧರಿಸಿರುತ್ತಾನೆ; ಮೈಗೆಲ್ಲ ಕೊಳೆ ಬಳಿದು ಬಟ್ಟೆಯಿಲ್ಲದೆ ದಿಗಂಬರ ನಾಗಿದ್ದಾನೆ; ಭಿಕ್ಷಾನ್ನವನ್ನು ತಿಂದು ಜೀವಿಸುತ್ತಾನೆ.

೧೯. ಕೈಯೆಂಬ ಪಾತ್ರೆಯಲ್ಲಿಯೇ ಆಹಾರವನ್ನು ಸೇವಿಸುತ್ತಾನೆ. ಸರ್ವ ಪ್ರಕಾರದಿಂದಲೂ ಪರಿಗ್ರಹ ತನ್ನದು ಎಂದು ತೆಗೆದುಕೊಂಡಿರುವ ವಸ್ತು, ಆಸ್ತಿ ಇವು ಒಂದೂ ಇಲ್ಲದವನಾಗಿದ್ದಾನೆ. ಪ್ರಣವದಿಂದ ಹೇಳಲ್ಪಟ್ಟ ಈಶ್ವರ ಸ್ವರೂಪಿಯಾದ ಪರಬ್ರಹ್ಮವನ್ನು ಭಾವಿಸುವವನಾಗಿದ್ದಾನೆ.

೨೦. ಆತನು ಊಟಮಾಡಿ ಸಂಜೆಯಹೊತ್ತು ವನಕ್ಕೆ ಹೊರಟುಹೋಗು ತ್ತಾನೆ. ಜನರಿಗೆ ಅವನು ಗೋಚರನಾಗುವುದೇ ಇಲ್ಲ. ಆತನು ಯೋಗೀಶ್ವರನು. ಆ ರೂಪವುಳ್ಳವರಾದ ಲಿಂಗಧಾರಿಗಳು ಬೇರೆಯವರೂ ಇದ್ದಾರೆ.

೨೧–೨೨. ಆ ಮುನಿಯನ್ನು ನೀವು ಹೇಗೆ ಕಂಡುಹಿಡಿಯಬಹುದೋ ಅಂಥ ಆತನ ಲಕ್ಷಣವನ್ನು ಹೇಳುತ್ತೇನೆ; ಕೇಳಿರಿ. ರಾಜಮಾರ್ಗದ ಚೌಕದಲ್ಲಿ ರಾತ್ರಿಯಹೊತ್ತು ಜನರು ಅರಿಯದಂತೆ ಹೆಣವನ್ನು ತಂದುಹಾಕಬೇಕು. ಅದಕ್ಕೆ ದೂರವಲ್ಲದ ಕಡೆಯಲ್ಲಿಯೇ ಇರಬೇಕು. ಯಾವನು ಆ ಸ್ಥಳಕ್ಕೆ ಬಂದು ಅಕಸ್ಮಾತ್ತಾಗಿ ಹಿಂದಿರುಗುತ್ತಾನೆಯೋ ಅವನೇ ಸಂವರ್ತನು. ಅವನು ದಾರಿಯಲ್ಲಿ ಅಡ್ಡಿಯಾಗಿ ಬಿದ್ದಿರುವ ಹೆಣವನ್ನು ಕಂಡು ಮುಂದೆ ಹೋಗುವುದಿಲ್ಲ.

ಸ ಸಂವರ್ತೋ ನ ಚಾಸ್ತ್ಯತ್ರ ಶಲ್ಯಮಸಂಶಯಂ ।
ಪ್ರಷ್ಟವ್ಯೋಽಭಿಮತಂ ಚಾಸಾವುಪಾಶ್ರಿತ್ಯ ವಿನೀತವತ್ ॥ ೨೩ ॥
ಯದಿ ಪೃಚ್ಛತಿ ಕೇನಾಹಮಾಖ್ಯಾತ ಇತಿ ಮಾಂ ತತಃ ।
ನಿವೇದ್ಯ ಚೈತದ್ವಕ್ತವ್ಯಂ ತ್ವಾಮಾಖ್ಯಾಯಾಗ್ನಿಮಾವಿಶತ್ ॥ ೨೪ ॥
ತಚ್ಛ್ರುತ್ವಾ ತೇ ತಥಾ ಚಕ್ರುಃ ಸರ್ವೇಽಪಿ ವಚನಂ ಮಮ ।
ಪ್ರಾಪ್ಯ ವಾರಾಣಸೀಂ ದೃಷ್ಟ್ವಾ ಸಂವರ್ತಂ ತೇ ತಥಾ ವ್ಯಧುಃ ॥ ೨೫ ॥
ಶಿವಂ ದೃಷ್ಟ್ವಾ ಚ ತೈರ್ನ್ಯಸ್ತಂ ಸಂವರ್ತೋ ನ್ಯವರ್ತತ ।
ಕ್ಷುತ್ಪರೀತೋಽಪಿ ತಂ ಜ್ಞಾತ್ವಾ ಯಯುಸ್ತಮನುಶೀಘ್ರಗಂ ॥ ೨೬ ॥
ತಿಷ್ಠ ಬ್ರಹ್ಮನ್ ಕ್ಷಣಮಿತಿ ಜಲ್ಪಂತೋ ರಾಜಮಾರ್ಗಗಂ ।
ಯಾತಿ ನಿರ್ಭರ್ತ್ಸಯತ್ಯೇಷ ನಿವರ್ತಧ್ವಮಿತಿ ಬ್ರುವನ್ ॥ ೨೭ ॥
ಸ ಮಯಾ ಮಾಮರೇ ಭೋಽದ್ಯ ನಾಗಂತವ್ಯಂ ನವೋ ಹಿತಂ ।
ಪಲಾಯನಮಸೌ ಕೃತ್ವಾ ಗತ್ವಾ ದೂರತರಂ ಸರಃ ।
ಕುಪಿತಃ ಪ್ರಾಹ ತಾನ್ ಸರ್ವಾನ್ ಕೇನಾಖ್ಯಾತೋಽಹಮಿತ್ಯುತ ॥ ೨೮ ॥

---

ಇದರಲ್ಲಿ ಸಂಶಯವಿಲ್ಲ. ಆತನನ್ನು ಬಳಿಸಾರಿ ವಿನೀತರಾಗಿ ಅಭಿಮತವನ್ನು ಪ್ರಶ್ನೆಮಾಡಬೇಕು.

೨೪. 'ನನ್ನನ್ನು ನಿಮಗೆ ಯಾರು ತಿಳಿಸಿದರೆಂದು' ಆತನು ನಿಮ್ಮನ್ನು ಕೇಳಿದರೆ, ಆಗ ನನ್ನ ಹೆಸರನ್ನು ಹೇಳಿ, 'ನಿನ್ನ ಗುರುತನ್ನು ತಿಳಿಸಿ ಆತನು ಅಗ್ನಿಪ್ರವೇಶಮಾಡಿದನು' ಎಂದು ಹೇಳಬೇಕು."

೨೫. ಈ ನನ್ನ ಮಾತನ್ನು ಕೇಳಿ ಅವರೆಲ್ಲರೂ ಹಾಗೆಯೇ ಮಾಡಿದರು. ವಾರಾಣಸಿಯನ್ನು ಹೋಗಿ ಸೇರಿ ಸಂವರ್ತನನ್ನು ಕಂಡು ಅವರು ಹಾಗೆಯೇ ಮಾಡಿದರು.

೨೬. ಅವರಿಂದ ಇಡಲ್ಪಟ್ಟ ಶವವನ್ನು ಕಂಡು, ಸಂವರ್ತನು ಹಸಿವಿನಿಂದ ಬಹಳ ಸಂಕಟಪಡುತ್ತಿದ್ದರೂ, ಹಿಂದಿರುಗಿ ಹೊರಟುಬಿಟ್ಟನು. ಅವನನ್ನು ಗುರುತಿಸಿ ಬಹು ವೇಗವಾಗಿ ಹೋಗುತ್ತಿದ್ದ ಆತನನ್ನು ಅವರು ಬೆಂಬತ್ತಿ ಹೋದರು.

೨೭. 'ಅಯ್ಯಾ ಬ್ರಾಹ್ಮಣನೇ ನಿಲ್ಲು, ಒಂದು ಕ್ಷಣ ನಿಲ್ಲು' ಎಂದು ಕೂಗುತ್ತಲೇ ರಾಜಮಾರ್ಗದಲ್ಲಿ ಹೋಗುತ್ತಿದ್ದ ಆತನನ್ನು ಅನುಸರಿಸಿ ನಡೆದರು. ಆತನು ಹೋಗುತ್ತಲೇ ಇದ್ದನು; 'ಹಿಂದಿರುಗಿ ಹೊರಟುಹೋಗಿ' ಎಂದು ಹೇಳುತ್ತ ಅವರನ್ನು ಗದರಿಸಿ ನುಡಿಯುತ್ತಲೇ ಹೋಗುತ್ತಿದ್ದನು.

೨೮–೨೯. ತರುವಾಯ ಅವರು ತನ್ನನ್ನು ಹಿಂಬಾಲಿಸುತ್ತಲೇ ಇರಲು ಆತನು 'ಅಯ್ಯಾ, ನನ್ನ ಹತ್ತಿರ ಬರಬೇಡಿ. ಇದು ನಿಮಗೆ ಹಿತವಲ್ಲ' ಎಂದು

ನಿವೇದಯತ ಶೀಘ್ರಂ ಮೇ ಯಥಾ ಭಸ್ಮ ಕರೋಮಿ ತಂ ।
ಶಾಪಾಗ್ನಿನಾಥ ವಾ ಯುಷ್ಮಾನ್ಯದಿ ಸತ್ಯಂ ನ ವಕ್ಷ್ಯಥ ॥ ೨೯ ॥
ಅಥ ಪ್ರಕಂಪಿತಾಃ ಪ್ರಾಹುರ್ನಾರದೇನೇತಿ ತಂ ಮುನಿಂ ।
ಸ ತಾನಾಹ ಪುನರ್ಯಾತಃ ಪಿಶುನಃ ಕ್ವ ನು ಸಂಪ್ರತಿ ॥ ೩೦ ॥
ಲೋಕಾನಾಂ ಯೇನ ಶಾಪಾಗ್ನೌ ಭಸ್ಮ ಶೇಷಂ ಕರೋಮಿ ತಂ ।
ಬ್ರಹ್ಮಬಂಧುಮಹಂ ಪ್ರಾಹುರ್ಭೀತಾಸ್ತೇ ತಂ ಪುನರ್ಮುನಿಂ ॥ ೩೧ ॥
ತ್ವಾಂ ನಿವೇದ್ಯ ಸ ಚಾಸ್ಮಾಕಂ ಪ್ರವಿಷ್ಟೋ ಹವ್ಯವಾಹನಂ ।
ತತ್ಕಾಲಮೇವ ವಿಪ್ರೇಂದ್ರ ನ ವಿದ್ಮಸ್ತತ್ರ ಕಾರಣಂ ॥ ೩೨ ॥

ಸಂವರ್ತ ಉವಾಚ :—

ಅಹಮಪ್ಯೇವಮೇವಾಸ್ಯ ಕರ್ತಾ ತೇನ ಸ್ವಯಂ ಕೃತಂ ।
ತದ್ಬ್ರೂತ ಕಾರ್ಯಂ ನೈವಾತ್ರ ಚಿರಂ ಸ್ಥಾಸ್ಯಾಮಿ ವಃ ಕೃತೇ ॥ ೩೩ ॥

---

ನುಡಿಯುತ್ತ ಓಡತೊಡಗಿದನು. ಓಡಿ ಓಡಿ ದೂರದಲ್ಲಿದ್ದ ಸರೋವರದ ಬಳಿ ಹೋಗಿ ಕುಪಿತನಾಗಿ 'ಏನಿರಯ್ಯಾ ನನ್ನನ್ನು ನಿಮಗೆ ತಿಳಿಸಿದವನಾರು? ಬೇಗ ಹೇಳಿರಿ. ಅವನನ್ನು ಶಾಪಾಗ್ನಿಯಿಂದ ಭಸ್ಮಮಾಡಿಬಿಡುತ್ತೇನೆ' ಎಂದು ಅವರೆಲ್ಲರನ್ನೂ ಹೆದರಿಸಿ ಪ್ರಶ್ನೆಮಾಡಿದನು. 'ಅಥವಾ ಸತ್ಯವನ್ನು ನುಡಿಯದಿದ್ದರೆ ನಿಮ್ಮನ್ನೇ ಸುಟ್ಟು ಬೂದಿ ಮಾಡಿಬಿಡುತ್ತೇನೆ.'

೩೦. ಆಗ ಅವರು ನಡುನಡುಗುತ್ತಾ 'ನಾರದನು ತಿಳಿಸಿದನು' ಎಂದು ಆ ಮುನಿಗೆ ಹೇಳಿದರು. ಅದನ್ನಾಲಿಸಿ ಹೊರಟವನಾದ ಆ ಸಂವರ್ತಮುನಿಯು ಅವರನ್ನು ಕುರಿತು ಮತ್ತಿಂತೆಂದನು :—'ಒಳ್ಳೆಯದು ಆ ಚಾಡಿಕೋರನು ಈಗ ಎಲ್ಲಿದ್ದಾನೆ?

೩೧. ಆ ಬ್ರಹ್ಮಬಂಧುವನ್ನು ನಾನು ಶಾಪಾಗ್ನಿಯಿಂದ ಭಸ್ಮಶೇಷನನ್ನಾಗಿ ಸುಡುತ್ತೇನೆ.' ಎಂಬೀ ಪ್ರಕಾರವಾಗಿ ನುಡಿದ ಸಂವರ್ತನ ಮಾತನ್ನಾಲಿಸಿ ಅವರು ಭೀತರಾಗಿ ಆ ಮುನಿಯನ್ನು ಕುರಿತು ಮತ್ತೆ ಈ ರೀತಿ ನುಡಿದರು.

೩೨. ಅವರು ಇಂತೆಂದರು : 'ಎಲೈ ವಿಪ್ರೇಂದ್ರನೇ! ನಿನ್ನ ವಿಚಾರವನ್ನು ನಮಗೆ ತಿಳಿಸಿ ಆತನು ಆ ಕೂಡಲೆಯೇ ಅಗ್ನಿಪ್ರವೇಶ ಮಾಡಿದನು. ಅದಕ್ಕೆ ಕಾರಣವೇನೆಂಬುದನ್ನು ನಾವರಿಯೆವು.'

೩೩. ಅದನ್ನಾಲಿಸಿ ಸಂವರ್ತನು :—'ನಾನು ಕೂಡ ಅವನಿಗೆ ಇದೇ ಶಿಕ್ಷೆಯನ್ನೇ ವಿಧಿಸುತ್ತಿದ್ದೆನು. ಆದರೆ ಅದನ್ನು ಅವನು ತಾನಾಗಿಯೇ ಮಾಡಿಕೊಂಡನು. ಹೋಗಲಿ! ಆದುದರಿಂದ ಈಗ ನೀವು ಬಂದ ಕಾರ್ಯವೇನೆಂಬುದನ್ನು ಜಾಗ್ರತೆಯಾಗಿ ಹೇಳಿರಿ. ನಿಮಗೋಸ್ಕರ ನಾನಿಲ್ಲಿ ಬಹಳ ಹೊತ್ತು ನಿಲ್ಲುವವನಲ್ಲ' ಎಂದನು.

ಅರ್ಜುನ ಉವಾಚ:—
**ಯದಿ ನಾರದ ದೇವರ್ಷೇ ಪ್ರವಿಷ್ಟೋಽಸಿ ಹುತಾಶನಂ ।**
**ಜೀವಿತಸ್ತತ್ಕಥಂ ಭೂಯ ಆಶ್ಚರ್ಯಮಿತಿ ಮೇ ವದ ॥ ೩೪ ॥**

ನಾರದ ಉವಾಚ:—
**ನ ಹುತಾಶಃ ಸಮುದ್ರೋ ವಾ ವಾಯುರ್ವಾ ವೃಕ್ಷಪರ್ವತಃ ।**
**ಆಯುಧಂ ವಾ ನ ಮೇ ಶಕ್ತಾ ದೇಹಪಾತಕರಂ ಭುವಿ ॥ ೩೫ ॥**
**ಪುನರೇತತ್ಕೃತಂ ಚಾಪಿ ಸಂವರ್ತೋ ಮನ್ಯತೇ ಯಥಾ ।**
**ಅಹಂ ಸನ್ಮಾನಿತಶ್ಚೇತಿ ವಹ್ನಿಂ ಪ್ರಾಪ್ಸ್ಯಾಮ್ಯಗಾಮಹಂ ॥ ೩೬ ॥**
**ಯಥಾ ಪುಷ್ಪಗೃಹೇ ಕಶ್ಚಿತ್ ಪ್ರವಿಶ್ಯತ್ಯಂಗ ಫಾಲ್ಗುನ ।**
**ತಥಾಹಮಗ್ನಿಂ ಸಂವಿಶ್ಯ ಯಾತವಾನುತ್ತರಂ ಶೃಣು ॥ ೩೭ ॥**
**ಸಂವರ್ತಸ್ತಾನ್ಮುನೀನ್ ಪ್ರಾಹ ಮಾರ್ಕಂಡೇಯ ಮುಖಾನಿತಿ ।**
**ವಿಶಲ್ಯಾಃ ಕ್ರಿಯ ತಾಂ ಪಂಥಾಃ ಕ್ಷುಧಿತೋಽಹಂ ಪುನಃ ಪುರೀಂ ।**
**ಭಿಕ್ಷಾರ್ಥಂ ಪರ್ಯಟಿಷ್ಯಾಮಿ ಪ್ರಶ್ನಂ ಪ್ರಬ್ರೂತ ಚೈವ ಮೇ ॥ ೩೮ ॥**
**ಶಾಪಭ್ರಷ್ಟಾ ವಯಂ ಮೋಕ್ಷಂ ಪ್ರಾಪ್ಸ್ಯಾಮಸ್ತ್ವದನುಗ್ರಹಾತ್ ।**
**ಪ್ರತೀಕಾರಂ ತದಾಖ್ಯಾಹಿ ಪ್ರಣತಾನಾಂ ಮಹಾಮುನೇ ॥ ೩೯ ॥**

---

೩೪. ಅರ್ಜುನನಿಂತೆಂದನು: "ದೇವರ್ಷಿಯಾದ ಎಲೈ ನಾರದನೇ! ನೀವು ಅಗ್ನಿಪ್ರವೇಶಮಾಡಿದ್ದರೆ ಅದು ಹೇಗೆ ಮತ್ತೆ ಬದುಕಿದ್ದೀರಿ? ಇದು ನನಗೆ ಆಶ್ಚರ್ಯವಾಗಿದೆ. ಇದನ್ನು ನನಗೆ ತಿಳಿಸಬೇಕು."

೩೫. ನಾರದನು ಹೇಳುತ್ತಾನೆ: "ಅಯ್ಯಾ ಭಾರತನೇ! ಅಗ್ನಿಯಾಗಲಿ, ಸಮುದ್ರವಾಗಲಿ, ವಾಯುವಾಗಲಿ, ವೃಕ್ಷ ಪರ್ವತಗಳೇ ಆಗಲಿ, ಆಯುಧವೇ ಆಗಲಿ ನನ್ನ ದೇಹವನ್ನು ಬೀಳಿಸಲು ಶಕ್ತಿಯುಳ್ಳುವಲ್ಲ.

೩೬–೩೯. ಸಂವರ್ತನು 'ನಾನು ಸನ್ಮಾನಿತನಾದೆನು' ಎಂದು ತಿಳಿದು ಕೊಳ್ಳಲೆಂಬ ಕಾರಣದಿಂದ ಹೀಗೆ ಮಾಡಿದೆನು; ಬೆಂಕಿಯನ್ನು ನಿರ್ಮಿಸಿ ಅದರಲ್ಲಿ ಪ್ರವೇಶಮಾಡಿದೆನು. ಅಣ್ಣಾ ಫಾಲ್ಗುನಾ! ಯಾವನಾದರೊಬ್ಬನು ಹೂವಿನ ಮನೆ ಯಲ್ಲಿ ಹೇಗೆ ಪ್ರವೇಶ ಮಾಡುತ್ತಾನೋ ಹಾಗೆ ನಾನು ಅಗ್ನಿಯನ್ನು ಪ್ರವೇಶಿಸಿ ಹೊರಬಂದೆನು. ಇನ್ನು ಸಂವರ್ತನ ಉತ್ತರವನ್ನು ಕೇಳುವವನಾಗು. ಸಂವರ್ತನು ಮಾರ್ಕಂಡೇಯನೇ ಮೊದಲಾದವರನ್ನು ಕುರಿತು ಮತ್ತಿತೆಂದನು:—'ದಾರಿ ಯಲ್ಲಿರುವ ಅಡ್ಡಿಯನ್ನುಪರಿಹರಿಸಿ ಸುಗಮಮಾಡಿರಿ. ನಾನು ಹಸಿದಿದ್ದೇನೆ. ಮತ್ತೆ ಪಟ್ಟಣದಲ್ಲಿ ಭಿಕ್ಷಕ್ಕಾಗಿ ಸುತ್ತುತ್ತೇನೆ. ನಿಮ್ಮ ಪ್ರಶ್ನೆಗಳನ್ನು ನನಗೆ ತಿಳಿಸಿರಿ.' ಅದಕ್ಕೆ ಅವರಿಂತೆಂದರು:—'ಎಲೈ ಮಹಾಮುನಿಯೇ! ಶಾಪಹೊಂದಿ ಭ್ರಷ್ಟ ರಾಗಿರುವ ನಾವು ನಿಮ್ಮ ಅನುಗ್ರಹದಿಂದ ಮೋಕ್ಷ ಪಡೆಯಬೇಕೆಂದಿರುವೆವು. ನಿನ್ನಲ್ಲಿ ಶರಣಾಗತರಾದ ನಮಗೆ ತಕ್ಕ ಪ್ರತೀಕಾರವನ್ನು ತಿಳಿಸು.

ಯತ್ರ ತೀರ್ಥೇ ಸರ್ವತೀರ್ಥಫಲಂ ಪ್ರಾಪ್ನೋತಿ ಮಾನವಃ ।
ತತ್ತೀರ್ಥಂ ಬ್ರೂಹಿ ಸಂವರ್ತ ತಿಷ್ಠಾಮೋ ಯತ್ರ ವೈ ವಯಂ ॥ ೪೦ ॥
ಸಂವರ್ತ ಉವಾಚ:—
ನಮಸ್ಕೃತ್ಯ ಕುಮಾರಾಯ ದುರ್ಗಾಭ್ಯಶ್ಚ ನರೋತ್ತಮಾಃ ।
ತೀರ್ಥಂ ಚ ಸಂಪ್ರವಕ್ಷ್ಯಾಮಿ ಮಹೀಸಾಗರಸಂಗಮಂ ॥ ೪೧ ॥
ಅಮುನಾ ರಾಜಸಿಂಹೇನ ಇಂದ್ರದ್ಯುಮ್ನೇನ ಧೀಮತಾ ।
ಯಜನಾದ್ವ್ಯಂಗುಲೋತ್ಸೇಧಾ ಕೃತೇಯಂ ವಸುಧಾ ಯದಾ ॥ ೪೨ ॥
ತದಾ ಸಂತಾಪ್ಯಮಾನಾಯ ಭುವಃ ಕಾಷ್ಠಸ್ಯ ವೈ ಯಥಾ ।
ಸುಸ್ರಾವ ಯೋ ಜಲೌಘಶ್ಚ ಸರ್ವದೇವ ನಮಸ್ಕೃತಃ ॥ ೪೩ ॥
ಮಹೀನಾಮ ನದೀ ಸಾ ಚ ಪೃಥಿವ್ಯಾಂ ಯಾನಿ ಕಾನಿಚತ್ ।
ತೀರ್ಥಾನಿ ತೇಷಾಂ ಸಲಿಲಸಂಭವಂ ತಜ್ಜಲಂ ವಿದುಃ ॥ ೪೪ ॥
ಮಹೀನಾಮ ಸಮುತ್ಪನ್ನಾ ದೇಶೇ ಮಾಲವಕಾಭಿಧೇ ।
ದಕ್ಷಿಣಂ ಸಾಗರಂ ಪ್ರಾಪ್ತಾ ಪುಣ್ಯೋಭಯತಟಾ ಶಿವಾ ॥ ೪೫ ॥

---

೪೦. ಯಾವ ತೀರ್ಥದಲ್ಲಿ ಮಾನವನು ಸರ್ವತೀರ್ಥಗಳ ಫಲವನ್ನು ಪಡೆಯುತ್ತಾನೆಯೋ, ಆ ತೀರ್ಥವು ಯಾವುದೆಂಬುದನ್ನು ನಮಗೆ ತಿಳಿಯಪಡಿಸು. ಅಲ್ಲಿ ನಾವು ನಿಲ್ಲುತ್ತೇವೆ.'

೪೧. ಸಂವರ್ತನು ಹೇಳುತ್ತಾನೆ:—"ಎಲೈ ನರೋತ್ತಮರೇ! ಕುಮಾರನಿಗೂ, ನವದುರ್ಗೆಯರಿಗೂ ನಮಸ್ಕಾರಮಾಡಿ ಮಹೀಸಾಗರಸಂಗಮವೆಂಬ ತೀರ್ಥದ ವಿಷಯವನ್ನು ನಿಮಗೀಗ ವಿವರವಾಗಿ ಹೇಳುತ್ತೇನೆ.

೪೨–೪೪. ಧೀಮಂತನಾಗಿ ರಾಜಸಿಂಹನೆನಿಸಿಕೊಂಡ ಈ ಇಂದ್ರದ್ಯುಮ್ನ ಮಹಾರಾಜನೆಸಗಿದ ಅನೇಕ ಯಜ್ಞಗಳ ಮೂಲಕ ಈ ಭೂಮಿಯು ಎರಡು ಅಂಗುಲ ಹೆಚ್ಚು ಎತ್ತರವಾಗಿ ಯಾವಾಗ ಮಾಡಲ್ಪಟ್ಟಿತೋ ಆಗ ಸಂತಾಪಗೊಂಡ ಭೂಮಿಯಿಂದ, ಉರಿಯುತ್ತಿರುವ ಕಟ್ಟಿಗೆಯಿಂದ ಹೇಗೋ ಹಾಗೆ ಸರ್ವದೇವತೆಗಳಿಂದಲೂ ನಮಸ್ಕರಿಸಲ್ಪಟ್ಟ ಜಲಪ್ರವಾಹವೊಂದು ಹೊರಹರಿಯಿತು. ಆ ಜಲಪ್ರವಾಹವೇ 'ಮಹೀ' ಎಂಬ ಹೆಸರುಳ್ಳ ನದಿಯು. ಪೃಥ್ವಿಯಲ್ಲಿ ಯಾವ ಯಾವ ತೀರ್ಥಗಳಿರುವುವೋ ಅವೆಲ್ಲವುಗಳ ನೀರಿನಿಂದಲೂ ಉಂಟಾಗಿರುವುದು ಆ ಮಹೀನದಿಯ ಜಲವೆಂದು ಹೇಳುತ್ತಾರೆ.

೪೫. ಹೀಗೆ 'ಮಹೀ' ಎಂಬ ಹೆಸರಿನ ನದಿಯು ಮಾಲವಕ ದೇಶದಲ್ಲಿ ಹುಟ್ಟಿ, ದಕ್ಷಿಣ ಸಮುದ್ರವನ್ನು ಸೇರಿತು. ಅದರ ಎರಡು ದಡಗಳೂ ಪುಣ್ಯಕರವಾಗಿರುವುವು, ಆ ನದಿಯು ಮಂಗಳವನ್ನುಂಟುಮಾಡತಕ್ಕುದು.

ಸರ್ವತೀರ್ಥಮಯೀ ಪೂರ್ವಂ ಮಹೀನಾಮ ಮಹಾನದೀ ।
ಕಿಂ ಪುನರ್ಯಃ ಸಮಾಯೋಗಸ್ತಸ್ಯಾಶ್ಚ ಸರಿತಾಂ ಪತೇಃ ॥ ೪೬ ॥
ವಾರಣಾಸೀ ಕುರುಕ್ಷೇತ್ರಂ ಗಂಗಾ ರೇವಾ ಸರಸ್ವತೀ ॥ ೪೭ ॥
ತಾಪೀ ಪಯೋಷ್ಣೀ ನಿರ್ವಿಂಧ್ಯಾ ಚಂದ್ರಭಾಗಾ ಇರಾವತೀ ।
ಕಾವೇರೀ ಸರಯೂಶ್ಚೈವ ಗಂಡಕೀ ನೈಮಿಷಂ ತಥಾ ॥ ೪೮ ॥
ಗಯಾ ಗೋದಾವರೀ ಚೈವ ಅರುಣಾ ವರುಣಾ ತಥಾ ।
ಏತಾಃ ಪುಣ್ಯಾಃ ಶತಶೋಽನ್ಯಾಃ ಯಾಃ ಕಶ್ಚಿತ್ಸರಿತೋ ಭುವಿ ॥ ೪೯ ॥
ಸಹಸ್ರವಿಂಶತಿಶ್ಚೈವ ಷಟ್ಶತಾನಿ ತಥೈವ ಚ ।
ತಾಸಾಂ ಸಾರಸಮುದ್ಭೂತಂ ಮಹೀತೋಯಂ ಪ್ರಕೀರ್ತಿತಂ ॥ ೫೦ ॥
ಪೃಥಿವ್ಯಾಂ ಸರ್ವತೀರ್ಥೇಷು ಸ್ನಾತ್ವಾ ಯತ್ಫಲಮಾಪ್ಯತೇ ।
ತನ್ಮಹೀಸಾಗರೇ ಪ್ರೋಕ್ತಂ ಕುಮಾರಸ್ಯ ವಚೋ ಯಥಾ ॥ ೫೧ ॥
ಏಕತ್ರ ಸರ್ವತೀರ್ಥಾನಾಂ ಯದಿ ಸಂಯೋಗ ಮಿಚ್ಛತಾ ।
ತದ್ಗಚ್ಛತ ಮಹಾಪುಣ್ಯಂ ಮಹೀಸಾಗರಸಂಗಮಂ ॥ ೫೨ ॥
ಅಹಂ ಚಾಪಿ ಚ ತತ್ರೈವ ಬಹೂನ್ ವರ್ಷಗಣಾನ್ ಪುರಾ ।
ಅವಸಂ ಜಾಗ್ರತಶ್ಚಾತ್ರ ನಾರದಸ್ಯ ಭಯಾತ್ತಥಾ ॥ ೫೩ ॥

---

೪೬-೫೦. ಮಹಿಯೆಂಬ ಮಹಾನದಿಯು ಮೊದಲೇ ಸರ್ವತೀರ್ಥಮಯವಾಗಿದ್ದಿತು. ಆ ನದಿಗೂ ಸರಿತ್ಪತಿಯಾದ ಸಮುದ್ರಕ್ಕೂ ಆಗುವ ಸಂಗಮದ ವಿಷಯವನ್ನು ಹೇಳಬೇಕಾದುದೇನಿದೆ? ವಾರಣಾಸಿ, ಕುರುಕ್ಷೇತ್ರ, ಗಂಗೆ, ರೇವಾ, ಸರಸ್ವತಿ, ತಾಪೀ, ಪಯೋಷ್ಣಿ, ನಿರ್ವಿಂಧ್ಯಾ, ಚಂದ್ರಭಾಗಾ, ಇರಾವತಿ, ಕಾವೇರಿ, ಶರಯೂ, ಗಂಡಕಿ, ನೈಮಿಷ, ಗಯೆ, ಗೋದಾವರಿ, ಅರುಣಾ, ವರುಣಾ— ಇವೆಲ್ಲವೂ ಪುಣ್ಯಪ್ರದವಾದುವು. ಇದೇ ರೀತಿ ಭೂಮಿಯಲ್ಲಿ ಇತರ ನೂರಾರು ನದಿಗಳು ಯಾವುವಿರುವುವೋ, ಇನ್ನೂ ಇತರ ಇಪ್ಪತ್ತುಸಾವಿರದ ಆರುನೂರು ಸಂಖ್ಯೆಯ ನದಿಗಳಾವುವಿರುವುವೋ, ಅವುಗಳ ಸಾರದಿಂದುಂಟಾಗಿರುವಂಥ ತೀರ್ಥವಾದ ಮಹೀನದಿಯೆಂದು ಇದು ಸುಪ್ರಸಿದ್ಧವಾಗಿರುವುದು.

೫೧. ಪೃಥ್ವಿಯಲ್ಲಿ ಸರ್ವತೀರ್ಥಗಳಲ್ಲಿಯೂ ಸ್ನಾನ ಮಾಡಿದರೆ ಯಾವ ಫಲವು ಪ್ರಾಪ್ತವಾಗುವುದೋ, ಆ ಫಲವು ಮಹೀಸಾಗರದಲ್ಲಿ ದೊರೆಯುವುದೆಂದು ಹೇಳಲ್ಪಟ್ಟಿದೆ. ಕುಮಾರಸ್ವಾಮಿಯ ವಚನವೇನೆಂದರೆ:—

೫೨. "ಸರ್ವತೀರ್ಥಗಳ ಸಮ್ಮೇಳನವನ್ನು ಒಂದೇ ಕಡೆ ಕಾಣಬಯಸುವಿರಾದರೆ ಮಹಾಪುಣ್ಯಕರವಾದ ಮಹೀಸಾಗರ ಸಂಗಮಕ್ಕೆ ಹೋಗಿರಿ."

೫೩. ನಾನು ಕೂಡ ಪೂರ್ವದಲ್ಲಿ ಅಲ್ಲಿಯೇ ಅನೇಕ ವರ್ಷ ಸಮೂಹಗಳ ಕಾಲ ವಾಸಮಾಡಿದೆನು. ಅನಂತರ ನಾರದನ ಭಯದಿಂದ ಇಲ್ಲಿಗೆ ಬಂದೆನು.

ಸ ಹಿ ತತ್ರ ಸಮೀಪಸ್ಥಃ ಪಿಶುನಶ್ಚ ವಿಶೇಷತಃ ।
ಮರುತಃ ಕುರುತೇ ಯತ್ನಂ ತಸ್ಮೈ ಬ್ರೂಯಾದಿದಂ ಭಯಮ್ ॥ ೫೪ ॥
ಅತ್ರ ದಿಗ್ವಾಸಸಾಂ ಮಧ್ಯೇ ಬಹೂನಾಂ ತತ್ಸಮಸ್ತ್ವಹಂ ।
ನಿವಸಾಮ್ಯತಿ ಪ್ರಚ್ಛನ್ನೋ ಮರುತ್ತಾದತಿಭೀತವತ್ ॥ ೫೫ ॥
ಪುನರತ್ರಾಪಿ ಮಾಂ ನೂನಂ ಕಥಯಿಷ್ಯತಿ ನಾರದಃ ।
ತಥಾ ವಿಧಾ ಹಿ ಚೇಷ್ಟಾಸ್ಯ ಪಿಶುನಸ್ಯ ಪ್ರದೃಶ್ಯತೇ ॥ ೫೬ ॥
ಭವದ್ಭಿಶ್ಚ ನ ಚಾಪ್ಯತ್ರ ವಕ್ತವ್ಯಂ ಕಸ್ಯಚಿತ್ಕ್ವಚಿತ್ ।
ಮರುತಃ ಕುರುತೇ ಯತ್ನಂ ಭೂಪಾಲೋ ಯಜ್ಞಸಿದ್ಧಯೇ ॥ ೫೭ ॥
ದೇವಾಚಾರ್ಯೇಣ ಸಂತ್ಯಕ್ತೋ ಭ್ರಾತಾ ಮೇ ಕಾರಣಾಂತರೇ ।
ಗುರುಪುತ್ರಂ ಚ ಮಾಂ ಜ್ಞಾತ್ವಾ ಯಜ್ಞಾರ್ತ್ವಿಜ್ಯಸ್ಯ ಕಾರಣಾತ್ ॥ ೫೮ ॥
ಅವಿದ್ಯಾಂತರ್ಗತೈರ್ಯಜ್ಞಕರ್ಮಭಿರ್ನ ಪ್ರಯೋಜನಂ ।
ಮಮ ಹಿಂಸಾತ್ಮಕೈರಸ್ತಿ ನಿಗಮೋಕ್ತೈರಚೇತನೈಃ ॥ ೫೯ ॥

---

೫೪. ಆತನೂ ಅಲ್ಲಿಯೇ ಅದರ ಸಮೀಪದಲ್ಲಿಯೇ ಇರುವನು; ಅಲ್ಲದೆ ಅವನು ಬಹಳ ಚಾಡಿಕೋರನು. ಮರುತ್ತನು ಅಲ್ಲಿಗೆ ಹೋಗಬೇಕೆಂದು ಯತ್ನಮಾಡುತ್ತಿರುವನು. ಅವನಿಗೆ ನಾರದನು ಹೇಳಿಬಿಟ್ಟಾನೆಂಬುದೇ ನನಗೆ ಭಯ.

೫೫. ಮರುತ್ತನಿಗೆ ಅತ್ಯಂತ ಭಯಪಡುತ್ತ ಇಲ್ಲಿ ದಿಗಂಬರರಾಗಿರುವ ಬಹು ಜನರ ಮಧ್ಯೆ ಸೇರಿ ಅವರ ಹಾಗೆಯೇ ಕಾಣಿಸಿಕೊಳ್ಳುತ್ತ ನಾನು ಅತಿ ಪ್ರಚ್ಛನ್ನನಾಗಿ ವಾಸಮಾಡುತ್ತಿದ್ದೇನೆ.

೫೬. ಇಲ್ಲಿ ಕೂಡ, ನಾರದನು ಮತ್ತೆ ನನ್ನನ್ನು ಅವರಿವರಿಗೆ ತಿಳಿಸಿ ಬಿಡುತ್ತಿದ್ದಾನೆ! ಪಿಶುನನಾದ ಅವನ ಚೇಷ್ಟೆಯೇ ಹೀಗೆಂದು ಕಾಣುತ್ತದೆ.

೫೭. ನೀವು ಕೂಡ ನಾನಿಲ್ಲಿರುವ ಸಂಗತಿಯನ್ನು ಯಾರಿಗೂ ಯಾವಾಗಲೂ ಹೇಳಲಾಗದು. ಮರುತ್ತ ಮಹಾರಾಜನು ಯಜ್ಞಸಿದ್ಧಿಗಾಗಿ ಪ್ರಯತ್ನ ಮಾಡುತ್ತಿರುವನು.

೫೮. ನನ್ನ ಸಹೋದರನಾದ ದೇವಾಚಾರ್ಯನು ಕಾರಣಾಂತರದಿಂದ ಅವನನ್ನು ಪರಿತ್ಯಜಿಸಲಾಗಿ, ನನ್ನನ್ನು ಗುರುಪುತ್ರನೆಂದರಿತು, ನಾನು ತನ್ನ ಯಜ್ಞದಲ್ಲಿ ಋತ್ವಿಜನಾಗಬೇಕೆಂಬ ಬಯಕೆಯಿಂದ ನನ್ನನ್ನು ಕಾಣಲು ಪ್ರಯತ್ನ ಪಡುತ್ತಿರುವನು.

೫೯. ಅವಿದ್ಯೆಯೊಳಗೆ ಸೇರಿದುವಾಗಿಯೂ, ಹಿಂಸಾತ್ಮಕವಾಗಿಯೂ, ನಿಗಮಗಳಿಂದ ಹೇಳಲ್ಪಟ್ಟುವಾಗಿ ಅಚೇತನವಾಗಿಯೂ ಇರುವ ಯಜ್ಞಕರ್ಮಗಳಿಂದ ನನಗೆ ಪ್ರಯೋಜನವಿಲ್ಲವು.

**ಸಮಿತ್ಪುಷ್ಪಕುಶಪ್ರಾಯೈಃ ಸಾಧನೈರ್ಯದ್ಯಚೇತನೈಃ ।**
**ಕ್ರಿಯತೇ ತತ್ತಥಾ ಭಾವಿ ಕಾರ್ಯಂ ಕಾರಣವಾನ್ ನೃಣಾಂ ॥ ೬೦ ॥**
**ತದ್ಯೂಯಂ ತತ್ರ ಗಚ್ಛಧ್ವಂ ಶೀಘ್ರಮೇವ ನೃಪಾನುಗಾಃ ।**
**ಅಸ್ತಿ ವಿಪ್ರ ಸ್ಸ್ವಯಂ ಬ್ರಹ್ಮಾ ಯಾಜ್ಞವಲ್ಕ್ಯಶ್ಚ ತತ್ರ ವೈ ॥ ೬೧ ॥**
**ಸ ಹಿ ಪೂರ್ವಂ ಮಿಥೇಃ ಪುರ್ಯಾಂ ವಸನ್ನಾಶ್ರಮಮುತ್ತಮಂ ।**
**ಆಗಚ್ಛಮಾನಂ ನಕುಲಂ ದೃಷ್ಟ್ವಾ ಗಾರ್ಗೀ ವಚೋಽಬ್ರವೀತ್ ॥ ೬೨ ॥**
**ಗಾರ್ಗೀ ರಕ್ಷ ಪಯೋ ಭದ್ರೇ ನಕುಲೋಽಯಮುಪೈತಿ ಚ ।**
**ಪಯಃ ಪಾತುಂ ಕೃತಿಮತಿಂ ನಕುಲಂ ತಂ ನಿರಾಕುರು ॥ ೬೩ ॥**
**ಇತ್ಯುಕ್ತೋ ನಕುಲಃ ಕ್ರುದ್ಧಃ ಸಹಿ ಕೃದ್ಧಃ ಪರಾಭವತ್ ।**
**ಜಮದಗ್ನೇಃ ಪೂರ್ವಜೈಶ್ಚ ಶಪ್ತಃ ಪ್ರೋವಾಚ ತಂ ಮುನಿಂ ॥ ೬೪ ॥**
**ಅಹೋ ವಾ ಧಿಗ್ಧಿಗಿತ್ಯೇವ ಭೂಯೋ ಧಿಗಿತಿ ಚೈವ ಹಿ ।**
**ನಿರ್ಲಜ್ಜತಾ ಮನುಷ್ಯಾಣಾಂ ದೃಶ್ಯತೇ ಪಾಪಕಾರಿಣಾಂ ॥ ೬೫ ॥**

---

೬೦. ಅಚೇತನಗಳಾದ ಸಮಿತ್ತು, ಪುಷ್ಪ ಮತ್ತು ದರ್ಭೆಗಳ ರೂಪವಾದ ಸಾಧನಗಳಿಂದ ಆ ಕರ್ಮವು ನಡೆಯುತ್ತದೆಯಾಗಿ ಅದು ನಿಷ್ಫಲವೇ ಆಗುವುದು. ಮನುಷ್ಯರ ಕಾರ್ಯವು ಕಾರಣವೆಂತೋ ಅಂತೆಯೇ ಆಗಿರುವುದು.

೬೧. ಆದುದರಿಂದ ನೃಪಾನುಯಾಯಿಗಳಾದ ನೀವು ಶೀಘ್ರವಾಗಿ ಅಲ್ಲಿಗೇ ಹೋಗಿರಿ. ಅಲ್ಲಿ "ಪ್ರತ್ಯಕ್ಷ ಬ್ರಹ್ಮನೇ ಇವನು" ಎನ್ನಬಹುದಾದ ಯಾಜ್ಞವಲ್ಕ್ಯನೆಂಬ ಬ್ರಾಹ್ಮಣನಿರುವನು.

೬೨. ಅವನು ಪೂರ್ವದಲ್ಲಿ ಮಿಥಿಯ ಪಟ್ಟಣದಲ್ಲಿ ಉತ್ತಮವಾದ ಆಶ್ರಮವನ್ನು ಕಲ್ಪಿಸಿಕೊಂಡು ಅಲ್ಲಿ ವಾಸಮಾಡುತ್ತಿದ್ದನು. ಆಗ ಒಮ್ಮೆ ಅಲ್ಲಿ ಬರುತ್ತಿರುವ ನಕುಲವೊಂದನ್ನು (ಮುಂಗುಸಿಯನ್ನು) ಕಂಡು ಗಾರ್ಗಿಯನ್ನು ಕುರಿತು ಹೀಗೆಂದನು :—

೬೩. "ಗಾರ್ಗೀ, ಭದ್ರೇ! ಹಾಲನ್ನು ನೋಡಿಕೊ. ಇದೋ ಈ ನಕುಲವು ಬರುತ್ತಿದೆ. ಹಾಲು ಕುಡಿಯಬೇಕೆಂದು ಮನಸ್ಸುಮಾಡಿಕೊಂಡಿರುವ ಈ ನಕುಲನನ್ನು ನಿವಾರಿಸು.

೬೪. ಆತನು ಹೀಗೆಂದು ನುಡಿಯಲು ಮುಂಗುಸಿಯು ಕೋಪಗೊಂಡಿತು. ಆ ನಕುಲನು ಪೂರ್ವದಲ್ಲಿ ಜಮದಗ್ನಿಯ ಪೂರ್ವಜರಿಂದ ಶಪ್ತನಾಗಿ ಆ ರೂಪವನ್ನು ತಾಳಿದ್ದಿತು. ಅದು ಮುನಿದು ಮಾನವಭಾಷೆಯಿಂದಲೇ ಆ ಮುನಿಯನ್ನು ಕುರಿತು ಇಂತೆಂದಿತು :—

೬೫. "ಆಹಾ! ಧಿಕ್ಕಾರ, ಧಿಕ್ಕಾರ! ಮತ್ತೂ ಧಿಕ್ಕಾರ! ಪಾಪಕರ್ಮಿಗಳಾದ ಮನುಷ್ಯರಿಗೆ ಎಷ್ಟೊಂದು ನಿರ್ಲಜ್ಜತೆ!

ಕಥಂ ತೇ ನಾಮ ಪಾಪಾನಿ ಪ್ರಕುರ್ವಂತಿ ನರಾಧಮಾಃ ।
ಮರಣಾಂತರಿತಾ ಯೇಷಾಂ ನರಕೇ ತೀವ್ರವೇದನಾ ॥ ೬೬ ॥
ನಿಮಿಷೋಽಪಿ ನ ಶಕ್ಯೇತ ಜೀವಿತೇ ಯಸ್ಯ ನಿಶ್ಚಿತಂ ।
ತನ್ಮಾತ್ರ ಪರಮಾಯುರ್ಯಃ ಪಾಪಂ ಕುರ್ಯಾತ್ಕಥಂ ಸ ಚ ॥ ೬೭ ॥
ತ್ವಂ ಮುನೇ ಮನ್ಯಸೇ ಚೇದಂ ಕುಲೀನೋಽಸ್ಮೀತಿ ಬುದ್ಧಿಮಾನ್ ।
ತತಃ ಕ್ಷಿಪಸಿ ಮಾಂ ಮೂಢ ನಕುಲೋಽಯಮಿತಿ ಸ್ಮಯನ್ ॥ ೬೮ ॥
ಕಿಮಧೀತಂ ಯಾಜ್ಞವಲ್ಕ್ಯ ಕಾ ಯೋಗೇಶ್ವರತಾ ತವ ।
ನಿರಪರಾಧಂ ಕ್ಷಿಪಸಿ ಧಿಗಧೀತಂ ಹಿ ತತ್ತ್ವವ ॥ ೬೯ ॥
ಕಸ್ಮಿನ್ ವೇದೇ ಸ್ಮೃತೌ ಕಸ್ಯಾಂ ಪ್ರೋಕ್ತಮೇತದ್ಬ್ರವೀಹಿ ಮೇ ।
ಪರುಷೈರಿತಿ ವಾಕ್ಯೈರ್ಮಾಂ ನಕುಲೇತಿ ಬ್ರವೀಷಿ ಯತ್ ॥ ೭೦ ॥
ಕಿಮಿದಂ ನೈವ ಜಾನಾಸಿ ಯಾವತ್ಯಃ ಪರುಷಾ ಗಿರಃ ।
ಪರಃ ಸಂಶ್ರಾವ್ಯತೇ ತಾವಚ್ಛಂಕವಃ ಶ್ರೋತ್ರತಃ ಪುರಾ ॥ ೭೧ ॥

---

೬೬. ಆ ನರಾಧಮರು ಹೇಗೆತಾನೆ ಪಾಪಕಾರ್ಯಗಳನ್ನು ಮಾಡದಿರುವರೋ ಕಾಣೆ. ಅವರಿಗೆ ಮರಣದ ತೆರೆಯಿಂದ ಮರೆಯಾಗಿ ನರಕದಲ್ಲಿ ತೀವ್ರ ವೇದನೆಯೇ ಕಾದಿರುವುದು.

೬೭. ಮನುಷ್ಯನ ಬಾಳಿನಲ್ಲಿ ಒಂದು ನಿಮಿಷಕಾಲವಷ್ಟನ್ನು ಕೂಡ ನಿಶ್ಚಿತವಾಗಿ ಹೇಳಲು ಶಕ್ಯವಾಗುವುದಿಲ್ಲ. ಆ ಒಂದು ನಿಮಿಷವು ಮಾತ್ರ ಪರಮಾಯುಸ್ಸುಳ್ಳವನಾದ ಅವನೂ ಕೂಡ ಹೇಗೆ ಪಾಪಮಾಡುತ್ತಾನೆಯೋ ಕಾಣೆ.

೬೮. ಅಯ್ಯಾ ಮುನಿಯೇ! ನಾನು ಕುಲೀನನೆಂಬುದನ್ನು ಬುದ್ಧಿಯುಳ್ಳವನಾದ ನೀನೂ ಬಲ್ಲೆ. ಹಾಗೆ ತಿಳಿದೂ 'ಇದು ನಕುಲ' ಎಂದು ಮುಗುಳುನಗೆ ನಗುತ್ತ, ಎಲಾ ಮೂಢಾ! ನನ್ನನ್ನು ನಿಂದಿಸುತ್ತಿದ್ದೀಯಲ್ಲವೆ!

೬೯. ಯಾಜ್ಞ್ಯವಲ್ಕ್ಯ! ನೀನು ಅಧ್ಯಯನಮಾಡಿದುದಕ್ಕೆ ಫಲವೇನು? ನಿನ್ನ ಯೋಗೇಶ್ವರತ್ವದ ಪರಿಯೇನು? ನಿರಪರಾಧಿಯಾದ ನನ್ನನ್ನು ನಿಂದಿಸುತ್ತಿರುವೆಯಲ್ಲ. ನಿನ್ನ ಅಧ್ಯಯನಕ್ಕೆ ಧಿಕ್ಕಾರ!

೭೦. ಕಠಿನವಾದ ವಾಕ್ಯಗಳಿಂದ ನನ್ನನ್ನು 'ನಕುಲ' ಎಂದು ಹೇಳುತ್ತಿರುವೆಯಲ್ಲ, ಯಾವ ವೇದದಲ್ಲಿ ಯಾವ ಶಾಸ್ತ್ರದಲ್ಲಿ ಇದನ್ನು ಹೇಳಿದೆ, ನನಗೆ ತಿಳಿಸು.

೭೧–೭೨. ಇದೇನು ನಿನಗೆ ಗೊತ್ತೇ ಇಲ್ಲವೋ? ಒಬ್ಬನು ತನ್ನ ಕಠಿನವಾದ ಮಾತುಗಳು ಎಷ್ಟೆಷ್ಟನ್ನು ಇತರರ ಕಿವಿಗೆ ಕೇಳಿಸುತ್ತಿರುವನೋ ಅವು ಅವನ ಕಿವಿಗಳಿಗೆ ಅಷ್ಟಷ್ಟು ಶಂಕುಗಳಾಗಿ ಪರಿಣಮಿಸುತ್ತವೆಯೆಂಬುದು

ಕಂಠೇ ಯಮಾನುಗಾಃ ಪಾದಂ ಕೃತ್ವಾ ತಸ್ಯ ಸುದುರ್ಮತೇಃ ।
ಅತೀವ ರುದತೋ ಲೋಹಶಂಕೂನ್ ಕ್ಷೇಪ್ಸ್ಯಂತಿ ಕರ್ಣಯೋಃ ॥ ೭೨ ॥
ಪಾವದೂಕಾಶ್ಚ ಧ್ವಜಿನೋ ಮುಷ್ಣಂತಿ ಕೃಪಣಾಂ ಜನಾನ್ ।
ಸ್ವಯಂ ಹಸ್ತಸಹಸ್ರೇಣ ಧರ್ಮಸ್ಯೈವಂ ಭವದ್ವಿಧಾಃ ॥ ೭೩ ॥
ವಜ್ರಸ್ಯ ದಿಗ್ಧಶಸ್ತ್ರಸ್ಯ ಕಾಲಕೂಟಸ್ಯ ಚಾಪ್ಯುತ ।
ಸಮೇನ ವಚಸಾ ತುಲ್ಯಂ ಮೃತ್ಯೋರಿತಿ ಮಮಾಭವತ್ ॥ ೭೪ ॥
ಕರ್ಣನಾಸಿಕನಾರಾಚಾನ್ನಿರ್ಹರಂತಿ ಶರೀರತಃ ।
ವಾಕ್ಛಲ್ಯಸ್ತು ನ ನಿರ್ಹರ್ತುಂ ಶಕ್ಯೋ ಹೃದಿ ಶಯೋ ಹಿ ಸಃ ॥ ೭೫ ॥
ಯಂತ್ರಪೀಡೈಃ ಸಮಾಕ್ರಮ್ಯ ಪರಮೇಷ ಹತೋ ನರಃ ।
ನ ತು ತಂ ಪರುಷೈರ್ವಾಕ್ಯೈರ್ಜಿಘಾಂಸೇತ ಕಥಂ ಚ ನ ॥ ೭೬ ॥
ತ್ವಯಾ ತ್ವಹಂ ಯಾಜ್ಞವಲ್ಕ್ಯ ನಿತ್ಯಂ ಪಂಡಿತಮಾನಿನಾ ।
ನಕುಲೋಸೀತಿ ತೀವ್ರೇಣ ವಚಸಾ ತಾಡಿತಃ ಕುತಃ ॥ ೭೭ ॥

---

ನಿನಗೆ ತಿಳಿಯದೆ? ಯಮದೂತರು ಮಹಾ ದುರ್ಮತಿಯಾದ ಅವನ ಕುತ್ತಿಗೆಯ ಮೇಲೆ ಕಾಲುಹಾಕಿ ತುಳಿದುಕೊಂಡು ಅತಿಯಾಗಿ ರೋದನಮಾಡುತ್ತಿರುವ ಅವನ ಕಿವಿಗಳಿಗೆ ಲೋಹದ ಮೊಳೆಗಳನ್ನು ಹೊಡೆಯುತ್ತಾರೆ.

೭೩. ನಿನ್ನಂಥ ವಾಕ್ಚತುರರು ಧಾರ್ಮಿಕ ವೇಷಧಾರಿಗಳಾಗಿ ಸಾವಿರಾರು ಕೈಗಳಿಂದ ಕೃಪಣರಾದ ಜನರ ಹಣವನ್ನು ಕದಿಯುತ್ತಾರೆ.

೭೪. ನಿನ್ನೀ ಮಾತಿನಿಂದ ನನಗೆ ವಜ್ರಾಯುಧಕ್ಕೂ, ಕಾಲಕೂಟವಿಷವನ್ನು ಸಾಣೆಹಿಡಿದಿರುವ ಶಸ್ತ್ರಕ್ಕೂ ಸಮಾನವಾದ ಯಾತನೆಯೂ ಆಯಿತೆಂದು ಅರಿತುಕೋ.

೭೫. ಕಿವಿ ಮೂಗುಗಳಲ್ಲಿ ತಗುಲಿದ ನಾರಾಚ(ಹರಿತವಾದ ಸಣ್ಣ ಅಲಗು) ಗಳನ್ನು ಶರೀರದಿಂದ ಹೊರಕ್ಕೆ ತೆಗೆಯುತ್ತಾರೆ. ವಾಕ್ಛಲ್ಯವನ್ನು (ಮಾತಿನ ರೂಪವಾದ ಮೊಳೆ)ಯನ್ನು ಮಾತ್ರ ಹೊರದೆಗೆಯಲು ಶಕ್ಯವಲ್ಲ. ಅದು ಹೃದಯಕ್ಕೆ ನಾಟಿರುವಂಥದು.

೭೬. ಯಂತ್ರಗಳಿಂದ ಚೆನ್ನಾಗಿ ಆಕ್ರಮಿಸಿಕೊಂಡು ಪೀಡಿಸಿ ಒಬ್ಬನನ್ನು ಕೊಲ್ಲುವುದು ಮೇಲು. ಏನೇ ಆಗಲಿ, ಅವನನ್ನು ಪರುಷವಾಕ್ಯಗಳಿಂದ ಕೊಲ್ಲಲಾಗದು.

೭೭. ಎಲೈ ಯಾಜ್ಞ್ಯವಲ್ಕ್ಯನೇ! ನಾನೇ ಪಂಡಿತನೆಂದು ಸದಾ ಭಾವಿಸಿಕೊಂಡಿರುವ ನಿನ್ನಿಂದ 'ನೀನು ನಕುಲ (ಕುಲಹೀನ)ನಾಗಿದ್ದೀಯೆ' ಎಂದು ತೀವ್ರ ವಚನದಿಂದ ನಾನು ಹೊಡೆಯಲ್ಪಟ್ಟವನಾಗಿದ್ದೇನೆ. ಅದೇಕೆ ನೀನು ನನ್ನನ್ನು ಹಾಗೆ ಹೊಡೆದೆ?"

ಸಂವರ್ತ ಉವಾಚ :—

ಇತಿ ಶ್ರುತ್ವಾ ವಚಸ್ತಸ್ಯ ಭೃಶಂ ವಿಸ್ಮಿತಮಾನಸಃ ।
ಯಾಜ್ಞವಲ್ಕ್ಯೋಽಬ್ರವೀದೇತತ್ಪ್ರಬದ್ಧಕರಸಂಪುಟಃ ॥ ೭೮ ॥
ನಮೋ ಧರ್ಮಾಯ ಮಹತೇ ನ ವಿದ್ಮೋ ಯಸ್ಯ ವೈ ಭಯಂ ।
ಪರಮಾಣುಮಪಿ ವ್ಯಕ್ತಂ ಕೋತ್ರ ವಿದ್ಯಾಮದಃ ಸತಾಂ ॥ ೭೯ ॥
ವಿರಂಚಿವಿಷ್ಣುಪ್ರಮುಖಾಃ ಸೋಮೇಂದ್ರಪ್ರಮುಖಾಸ್ತಥಾ ।
ಸರ್ವಜ್ಞಾಸ್ತೇಽಪಿ ಮುಹ್ಯಂತಿ ಗಣನಾಸ್ಮಾದೃಶಾಂ ಚ ಕಾ ॥ ೮೦ ॥
ಧರ್ಮಜ್ಞೋಽಸ್ಮೀತಿ ಯೋ ಮೋಹಾದಾತ್ಮಾನಂ ಪ್ರತಿಪದ್ಯತೇ ।
ಸ ವಾಯುಂ ಮುಷ್ಟಿನಾ ಬದ್ಧುಮೀಹತೇ ಕೃಪಣೋ ನರಃ ॥ ೮೧ ॥
ಕೇಚಿದಜ್ಞಾನತೋ ನಷ್ಟಾಃ ಕೇಚಿತ್ ಜ್ಞಾನಮದಾದಪಿ ।
ಜ್ಞಾನಂ ಪ್ರಾಪ್ಯಾಪಿ ನಷ್ಟಾಶ್ಚ ಕೇಚಿದಾಲಸ್ಯತೋಽಧಮಾಃ ॥ ೮೨ ॥
ವೇದಸ್ಮೃತೀತಿಹಾಸೇಷು ಪುರಾಣೇಷು ಪ್ರಕಲ್ಪಿತಂ ।
ಚತುಃಪಾದಂ ತಥಾ ಧರ್ಮಂ ನಾಚರತ್ಯಧಮಃ ಪಶುಃ ॥ ೮೩ ॥

---

೭೮. ಸಂವರ್ತನು ಹೇಳುತ್ತಾನೆ:—ಈ ರೀತಿ ನುಡಿದ ಆ ಮುಂಗುಸಿಯ ಮಾತನ್ನಾಲಿಸಿ ಮನಸ್ಸಿನಲ್ಲಿ ಬಹಳ ಆಶ್ಚರ್ಯಪಟ್ಟು, ಯಾಜ್ಞ್ಯವಲ್ಕ್ಯನು ಕೈಮುಗಿದುಕೊಂಡು ಈ ರೀತಿ ಮರುನುಡಿದನು :—

೭೯. "ಮಹತ್ತರವಾದ ಆ ಧರ್ಮಕ್ಕೆ ನಮಸ್ಕಾರ! ಅದರ ಉತ್ಪತ್ತಿಯನ್ನು ಪರಮಾಣುವಿನಷ್ಟು ಕೂಡ ವ್ಯಕ್ತವಾಗಿ ನಾವರಿಯಲಾರೆವು. ಈ ವಿಷಯದಲ್ಲಿ ಸತ್ಪುರುಷರಾದವರಿಗೆ ವಿದ್ಯಾಮದವೆಲ್ಲಿಯದು?

೮೦. ಬ್ರಹ್ಮ, ವಿಷ್ಣು ಮೊದಲಾದವರೂ, ಸೋಮ, ಇಂದ್ರ, ಮೊದಲಾದವರೂ ಸರ್ವಜ್ಞರು. ಅವರೂ ಮೋಹವನ್ನು ಹೊಂದಿಬಿಡುತ್ತಾರೆ. ಹಾಗಿರುವಲ್ಲಿ ನಮ್ಮಂಥವರ ಪಾಡೇನು?

೮೧. ಯಾವನು ಭ್ರಾಂತಿಯಿಂದ ತಾನು ಧರ್ಮಜ್ಞನೆಂದು ತಿಳಿದುಕೊಳ್ಳುತ್ತಾನೆಯೋ ಅಂಥ ಕೃಪಣ ಮನುಷ್ಯನು ಗಾಳಿಯನ್ನು ಮುಷ್ಟಿಯಲ್ಲಿ ಕಟ್ಟಿಡ ಬಯಸುವವನಾಗುತ್ತಾನೆ.

೮೨. ಕೆಲವರು ಅಜ್ಞಾನದಿಂದ ನಾಶಹೊಂದಿದರು. ಕೆಲವರು ಜ್ಞಾನಮದದಿಂದಲೂ ನಷ್ಟವಾದರು. ಕೆಲವರು ಅಧಮರು ಜ್ಞಾನವನ್ನು ಪಡೆದಿದ್ದರೂ ಆಲಸ್ಯದಿಂದ ನಾಶವನ್ನೈದಿದರು.

೮೩. ವೇದ, ಸ್ಮೃತಿ, ಇತಿಹಾಸ ಮತ್ತು ಪುರಾಣಗಳಲ್ಲಿ ಧರ್ಮವು ನಾಲ್ಕು ಪಾದಗಳುಳ್ಳದೆಂದು ಕಲ್ಪಿಸಲ್ಪಟ್ಟಿದೆ. ಅಧಮನಾದ ಪಶುವು ಅದನ್ನು ಆಚರಿಸುವುದಿಲ್ಲ.

ಸ ಪುರಾ ಶೋಚತೇ ವ್ಯಕ್ತಂ ಪ್ರಾಪ್ಯ ತಚ್ಛಾಂತಕಂ ಗೃಹಂ ।
ತಥಾ ಹಿ ಗೃಹ್ಯಕಾರೇಣ ಶ್ರುತೌ ಪ್ರೋಕ್ತಮಿದಂ ವಚಃ ॥ ೮೪ ॥
ನಕುಲಂ ಸಕುಲಂ ಬ್ರೂಯಾನ್ನಕಿಂಚಿನ್ಮರ್ಮಣಿ ಸ್ಪೃಶೇತ್ ।
ಪ್ರಪಠನ್ನಪಿ ಚೈವಾಹಮಿದಂ ಸರ್ವಂ ತಥಾ ಶುಕಃ ॥ ೮೫ ॥
ಆಲಸ್ಯೇನಾಪ್ಯನಾಚಾರಾದ್ವ್ಯಥಾ ಕಾರ್ಯೇಕಮಂಗ ತತ್ ॥ ೮೬ ॥
ಕೇವಲಂ ಪಾಠಮಾತ್ರೇಣ ಯಶ್ಚ ಸಂತುಷ್ಯತೇ ನರಃ ।
ತಥಾ ಪಂಡಿತಮಾನೀ ಚ ಕೋಽನ್ಯಸ್ತಸ್ಮಾತ್ಪಶುರ್ಮತಃ ॥ ೮೭ ॥

ನ ಚ್ಛಂದಾಂಸಿ ವೃಜಿನಾತ್ತಾರಯಂತಿ
ಮಾಯಾವಿನಂ ಮಾಯಯಾ ವರ್ತಮಾನಂ ।
ನೀಡಂ ಶಕುಂತಾ ಇವ ಜಾತಪಕ್ಷಾಃ
ಛಂದಾಂಸ್ಯೇನಂ ಪ್ರಜಹತ್ಯಂತಕಾಲೇ ॥ ೮೮ ॥

ಸ್ವರ್ಗಾಯ ಬದ್ಧಕಕ್ಷೋ ಯಃ ಪಾಠಮಾತ್ರೇಣ ಬ್ರಾಹ್ಮಣಃ ।
ಸ ಬಾಲೋ ಮಾತುರಂಕಸ್ಥೋ ಗ್ರಹೀತುಂ ಸೋಮಮಿಚ್ಛತಿ ॥ ೮೯ ॥

---

೮೪. ಅವನು ಮುಂದೆ ಯಮನ ಮನೆಯನ್ನು ಸೇರಿ ಶೋಕಪಡುವನೆಂಬುದು ಸ್ಪಷ್ಟವಾಗಿದೆ. ಅದು ಹಾಗೆಯೇ ಸರಿ. ಗೃಹ್ಯಸೂಕ್ತಕಾರನಿಂದ ಶ್ರುತಿಯಲ್ಲಿ ಈ ವಚನವು ಹೇಳಲ್ಪಟ್ಟಿದೆ.

೮೫. ನಕುಲನನ್ನು ಸಕುಲನೆಂದು ಹೇಳಬೇಕು. ಮರ್ಮಕ್ಕೆ ತಾಕುವಂತಹ ಕಾರ್ಯವನ್ನೆಂದಿಗೂ ಸ್ವಲ್ಪವೂ ಮಾಡಬಾರದು. ಇದೆಲ್ಲವನ್ನೂ ನಾನು ಪಠಿಸುತ್ತಿರುವವನಾದರೂ ಗಿಣಿಯಂತಾಗಿಬಿಟ್ಟೆನು.

೮೬. ಮಾನವನು ಆಲಸ್ಯದಿಂದಲೂ, ಅನಾಚಾರದಿಂದಲೂ ವ್ಯರ್ಥಕಾರ್ಯ ಮಾಡಿದವನಾಗುತ್ತಾನೆ. ಆಲಸ್ಯ, ಅನಾಚಾರ, ಎರಡೂ ಒಂದೇ.

೮೭. ಯಾವ ಮನುಷ್ಯನು ಕೇವಲ ಪಾಠಮಾತ್ರದಿಂದಲೇ ಸಂತುಷ್ಟನಾಗಿರುವನೋ, ಯಾವನು ತಾನೇ ಪಂಡಿತನೆಂದು ತಿಳಿದುಕೊಂಡಿರುವನೋ ಅವನಿಗಿಂತಲೂ ಹೆಚ್ಚಿನ ಪಶುವಾರು ?

೮೮. ಮಾಯೆಯಿಂದ ಸುಳಿಯಂತೆ ಸುತ್ತಿಸಲ್ಪಡುತ್ತಿರುವ ಮಾಯಾವಿಯನ್ನು (ಮೋಸಗಾರನನ್ನು) ವೇದಗಳು ಪಾಪ ಪರಿಹಾರಮಾಡಿ ದಾಟಿಸುವುದಿಲ್ಲ. ರೆಕ್ಕೆ ಬಂದ ಹಕ್ಕಿಗಳು ಗೂಡನ್ನು ಬಿಟ್ಟುಹೋಗುವಂತೆ ಕೊನೆಗಾಲದಲ್ಲಿ ವೇದಗಳು ಅವನನ್ನು ತ್ಯಜಿಸಿ ಹೋಗಿಬಿಡುತ್ತವೆ.

೮೯. ಯಾವ ಬ್ರಾಹ್ಮಣನು ಪಾಠಮಾತ್ರದಿಂದಲೇ ಸ್ವರ್ಗಕ್ಕೆ ಕೈಕಟ್ಟಿ ನಿಂತಿರುವನೋ ಅವನು ತಾಯ ತೊಡೆಯಮೇಲಿದ್ದುಕೊಂಡು ಚಂದ್ರನನ್ನು ಹಿಡಿಯಲೆಳಸುವ ಮಗುವಿನಂತೆಯೇ ಸರಿ.

ತದ್ಭವಾನ್ ಸರ್ವಥಾ ಮಹ್ಯಮುನಯಂ ಸೋಢುಮರ್ಹಸಿ ।
ಸರ್ವಕೋಽಪಿ ವದತ್ಯೇವಂ ತನ್ಮಯ್ಯೈವಮುದಾಹೃತಂ ॥ ೯೦ ॥
ವೃಥೇದಂ ಭಾಷಿತಂ ತುಭ್ಯಂ ಸರ್ವಲೋಕೇನ ಯತ್ಸಮಂ ।
ಆತ್ಮಾನಂ ಮನ್ಯಸೇ ನೈತದ್ವಕ್ತುಂ ಯೋಗ್ಯಂ ಮಹಾತ್ಮನಾಂ ॥ ೯೧ ॥
ವಾಜಿವಾರಣಲೋಹಾನಾಂ ಕಾಷ್ಠಪಾಷಾಣ ವಾಸಸಾಂ ।
ನಾರೀಪುರುಷತೋಯಾನಾಮಂತರಂ ಮಹದಂತರಂ ॥ ೯೨ ॥
ಅನ್ಯೇ ಚೇತ್ಪ್ರಾಕೃತಾ ಲೋಕಾ ಬಹು ಪಾಪಾನಿ ಕುರ್ವತೇ ।
ಪ್ರಧಾನಪುರುಷೇಣಾಪಿ ಕಾರ್ಯಂ ತತ್ಸ್ಪೃಷ್ಟತೋ ನು ಕಿಂ ॥ ೯೩ ॥
ಸರ್ವಾರ್ಥಂ ನಿರ್ಮಿತಂ ಶಾಸ್ತ್ರಂ ಮನೋ ಬುದ್ಧೀ ತಥೈವ ಚ ।
ದತ್ತೇ ವಿಧಾತ್ರಾ ಸರ್ವೇಷಾಂ ತಥಾಪಿ ಯದಿ ಪಾಪಿನಃ ॥ ೯೪ ॥
ತತೋ ವಿಧಾತುಃ ಕೋ ದೋಷಸ್ತ ಏವ ಖಲು ದುರ್ಭಗಾಃ ।
ಬ್ರಾಹ್ಮಣೇನ ವಿಶೇಷೇಣ ಕಿಂ ಭಾವ್ಯಂ ಲೋಕವದ್ಯತಃ ॥ ೯೫ ॥
ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।
ಸ ಯತ್ ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೯೬ ॥

---

೯೦–೯೧. ಆದುದರಿಂದ ನೀನು ನನ್ನ ಅವಿನಯವನ್ನು ಸರ್ವಪ್ರಕಾರದಿಂದಲೂ ಕ್ಷಮಿಸಬೇಕು. ಎಲ್ಲರೂ 'ನಕುಲ' ಎಂದೇ ಆಡುತ್ತಾರೆ. ಆದರಂತೆ ನಾನೂ ನುಡಿದೆನು.'' ನಕುಲನು ಹೇಳುತ್ತಾನೆ:— "ಅಯ್ಯಾ! ನಿನ್ನ ಮಾತು ವ್ಯರ್ಥವು. ನಿನ್ನನ್ನು ಸರ್ವಜನಕ್ಕೂ ಸಮನಾದವನೆಂದು ನೀನು ಭಾವಿಸಿರುವೆ. ಇದನ್ನಾಡುವುದು ಮಹಾತ್ಮರಿಗೆ ಯೋಗ್ಯವಲ್ಲವು.

೯೨. ಕುದುರೆ ಆನೆ ಲೋಹಗಳಿಗೂ, ಕಟ್ಟಿಗೆ ಕಲ್ಲು ಬಟ್ಟೆಗಳಿಗೂ, ನಾರೀ ಪುರುಷ ನೀರುಗಳಿಗೂ ಇರುವ ವ್ಯತ್ಯಾಸವು ಬಹು ದೊಡ್ಡದು.

೯೩. ಬೇರೆಯ ಸಾಮಾನ್ಯ ಜನಗಳು ಬಹಳ ಪಾಪಗಳನ್ನು ಮಾಡಿದರೆ ಪ್ರಧಾನ ಪುರುಷನು ಕೂಡ ಅವರನ್ನೇ ಅನುಸರಿಸಿ ಪಾಪ ಮಾಡಬೇಕೇನು?

೯೪–೯೬. ಶಾಸ್ತ್ರವು ಎಲ್ಲರಿಗಾಗಿಯೂ ನಿರ್ಮಿಸಲ್ಪಟ್ಟಿರುವುದು. ಹಾಗೆಯೇ ಮನಸ್ಸು ಮತ್ತು ಬುದ್ಧಿಗಳೂ ವಿಧಾತನಿಂದ ಸರ್ವರಿಗೂ ಕೊಡಲ್ಪಟ್ಟಿವೆ. ಹಾಗಿದ್ದರೂ ಪಾಪಿಗಳಾದರೆ ಅದರಿಂದ ವಿಧಾತನಿಗೆ ದೋಷವೇನು? ಅವರೇ ನಿರ್ಭಾಗ್ಯರು, ಅಷ್ಟೇ. ವಿಶೇಷವಾಗಿ ಬ್ರಾಹ್ಮಣನು ಸಾಧಾರಣ ಜನರಂತೆ ಆಗಿಬಿಡಬೇಕೆ? ಯಾವ ಯಾವುದನ್ನು ಶ್ರೇಷ್ಠನು ಆಚರಿಸುತ್ತಾನೆಯೋ ಅದದನ್ನೇ ಇತರ ಸಾಧಾರಣ ಜನರೂ ಆಚರಿಸುತ್ತಾರೆ. ಶ್ರೇಷ್ಠನಾದವನು ಯಾವುದನ್ನು ಪ್ರಮಾಣವೆಂದು ಅಂಗೀಕರಿಸುತ್ತಾನೆಯೋ ಲೋಕದ ಜನರು ಅದನ್ನೇ ಅನುಸರಿಸಿ ನಡೆಯುತ್ತಾರೆ.

ತಸ್ಮಾತ್ಸದಾ ಮಹದ್ಭಿಶ್ಚ ಆತ್ಮಾರ್ಥಂ ಚ ಪರಾರ್ಥತಃ ।
ಸತಾಂ ಧರ್ಮೋ ನ ಸಂತ್ಯಾಜ್ಯೋ ನ್ಯಾಯ್ಯಂ ತಚ್ಛಿಕ್ಷಣಂ ತವ ॥ ೯೭ ॥
ಯಸ್ಮಾತ್ ತ್ವಯಾ ಪೀಡಿತೋಽಹಂ ಘೋರೇಣ ವಚಸಾ ಮುನೇ ।
ತಸ್ಮಾಚ್ಛೀಘ್ರಂ ತ್ವಾಂ ಶಪ್ಸ್ಯಾಮಿ ಶಾಪಯೋಗ್ಯೋ ಹಿ ಮೇ ಮತಃ ॥೯೮॥
ನಕುಲೋಽಸೀತಿ ಮಾಮಾಹ ಭವಾಂಸ್ತಸ್ಮಾತ್ಕುಲಾಧಮಃ ।
ಶೀಘ್ರಮುತ್ಪತ್ಸ್ಯಸೇ ಮೋಹಾತ್ತ್ವಮೇವ ನಕುಲೋ ಮುನೇ ॥ ೯೯ ॥

ಸಂವರ್ತ ಉವಾಚ :—

ಇತಿ ವಾಚಂ ಸಮಾಕರ್ಣ್ಯ ಭಾವ್ಯರ್ಥಕೃತನಿಶ್ಚಯಃ ।
ಯಾಜ್ಞವಲ್ಕ್ಯೋ ಮರು ದೇಶೇ ವಿಪ್ರಸ್ಯಾಜಾಯತಾತ್ಮಜಃ ॥ ೧೦೦ ॥
ದುರಾಚಾರಸ್ಯ ಪಾಪಸ್ಯ ನಿರ್ಘೃಣಸ್ಯಾತಿವಾದಿನಃ ।
ದುಷ್ಕುಲೀನಸ್ಯ ಜಾತೋಽಸೌ ತದಾ ಜಾತಿಸ್ಮರಃ ಸುತಃ ॥ ೧೦೧ ॥
ಸೋಽಥ ಜ್ಞಾನಾತ್ ಸಮಾಲೋಕ್ಯ ಭರ್ತೃಯಜ್ಞ ಇತಿ ದ್ವಿಜಃ ।
ಗುಪ್ತಕ್ಷೇತ್ರಂ ಸಮಾಪನ್ನೋ ಮಹೀಸಾಗರಸಂಗಮಂ ॥ ೧೦೨ ॥

---

೯೭. ಆದುದರಿಂದ ದೊಡ್ಡವರು ತಮಗಾಗಿಯೂ ಪರರಿಗಾಗಿಯೂ ಸತ್ಪುರುಷರ ಧರ್ಮವನ್ನು ತ್ಯಜಿಸಬಾರದು. ಆ ಧರ್ಮಶಿಕ್ಷಣವು ನಿನಗೆ ನ್ಯಾಯವಾಗಿದೆ.

೯೮. ಎಲೈ ಮುನಿಯೇ! ಯಾವ ಕಾರಣಕ್ಕಾಗಿ ನಾನು ನಿನ್ನಿಂದ ಘೋರ ವಚನದಿಂದ ಪೀಡಿತನಾದೆನೋ ಆ ಕಾರಣದಿಂದ ನಿನ್ನನ್ನು ಬೇಗನೆಯೇ ಶಪಿಸಿ ಬಿಡುತ್ತೇನೆ. ನೀನು ಶಾಪಯೋಗ್ಯನಾಗಿದ್ದೀಯೆಂದು ನನ್ನ ಅಭಿಪ್ರಾಯವು.

೯೯. 'ನೀನು ನಕುಲನಾಗಿದ್ದೀಯೆ' ಎಂದು ನೀನು ನನ್ನನ್ನು ಕುರಿತು ಆಡಿದೆ. ಆದುದರಿಂದಲೈ ಮುನಿಯೇ! ಮೋಹದಿಂದ ನೀನು ಕುಲಾಧಮನಾಗಿ ಬೇಗನೆಯೇ ಹುಟ್ಟುತ್ತೀಯೆ. ಹೀಗೆ ನೀನೇ ನಕುಲನಾಗುವೆ."

೧೦೦. ಸಂವರ್ತನು ಹೇಳುತ್ತಾನೆ :—"ಈ ರೀತಿಯ ಮಾತುಗಳನ್ನು ಕೇಳಿ ಮುಂದೆ ಯಾವ ಕೆಲಸ ಮಾಡಬೇಕೆಂದು ನಿಶ್ಚಯವುಳ್ಳವನಾಗಿ, ಯಾಜ್ಞ್ಯವಲ್ಕ್ಯನು ಮರುದೇಶದಲ್ಲಿ ಒಬ್ಬ ವಿಪ್ರನಿಗೆ ಮಗನಾಗಿ ಹುಟ್ಟಿದನು.

೧೦೧. ದುರಾಚಾರಪರನೂ, ಪಾಪಾತ್ಮನೂ, ದಯಾಹೀನನೂ, ಅತಿ ವಾದಿಯೂ, ದುಷ್ಟಕುಲದಲ್ಲಿ ಸಂಭೂತನೂ ಆದವನಿಗೆ ಆ ಯಾಜ್ಞ್ಯವಲ್ಕ್ಯನು ಮಗನಾಗಿ ಪೂರ್ವಜನ್ಮ ಸ್ಮರಣೆಯುಳ್ಳವನಾದನು.

೧೦೨. ಭರ್ತೃಯಜ್ಞನೆಂಬ ಆ ದ್ವಿಜನು ಜ್ಞಾನದೃಷ್ಟಿಯಿಂದ ನೋಡಿ ಗುಪ್ತಕ್ಷೇತ್ರವಾದ ಮಹೀಸಾಗರಸಂಗಮವನ್ನು ಹೋಗಿ ಸೇರಿದನು.

ತತ್ರ ಪಾಶುಪತೋ ಭೂತ್ವಾ ಶಿವಾರಾಧನತತ್ಪರಃ ।
ಸ್ವಾಯಂಭುವಂ ಮಹಾಕಾಲಂ ಪೂಜಯನ್ ವರ್ತತೇಽಧುನಾ ॥೧೦೩॥
ಯೋ ಹಿ ನಿತ್ಯಂ ಮಹಾಕಾಲಂ ಶ್ರದ್ಧಯಾ ಪೂಜಯೇತ್ ಪುಮಾನ್ ।
ಸ ದೌಷ್ಕುಲೀನದೋಷೇಭ್ಯೋ ಮುಚ್ಯತೇಽಹಿರಿವ ತ್ವಚಃ ॥ ೧೦೪ ॥
ಯಥಾ ಯಥಾ ಶ್ರದ್ಧಯಾಸೌ ತಲ್ಲಿಂಗಂ ಪರಿಪಶ್ಯತಿ ।
ತಥಾ ತಥಾ ವಿಮುಚ್ಯೇತ ದೋಷೈರ್ಜನ್ಮಶತೋದ್ಭವೈಃ ॥ ೧೦೫ ॥
ಭರ್ತೃಯಜ್ಞಸ್ತು ತತ್ರೈವ ಲಿಂಗಸ್ಯಾರಾಧನಾತ್ ಕ್ರಮಾತ್ ।
ಬೀಜದೋಷಾದ್ವಿನಿರ್ಮುಕ್ತಸ್ತಲ್ಲಿಂಗಮಹಿಮಾತ್ವಸೌ ॥ ೧೦೬ ॥
ಬಭ್ರುಂ ಚ ನಕುಲಂ ಪ್ರಾಹ ವಿಮುಕ್ತೋ ದುಷ್ಟಜನ್ಮತಃ ।
ಯಸ್ಮಾತ್ತಸ್ಮಾದಿದಂ ತೀರ್ಥಂ ಖ್ಯಾತಂ ವೈ ಬಭ್ರುಪಾವನಂ ॥ ೧೦೭ ॥
ತಸ್ಮಾದ್ವ್ರಜಧ್ವಂ ತತ್ರೈವ ಮಹೀಸಾಗರಸಂಗಮಂ ।
ಪಂಚತೀರ್ಥಾನಿ ಸೇವಂತೋ ಮುಕ್ತಿಮಾಪ್ಸ್ಯಥ ನಿಶ್ಚಿತಂ ॥ ೧೦೮ ॥

---

೧೦೩. ಅಲ್ಲಿ, ಆತನು ಪಾಶುಪತನಾಗಿ ಈಗ ಶಿವಾರಾಧನತತ್ಪರನಾಗಿದ್ದಾನೆ. ಸ್ವಯಂಭುವಾಗಿರುವ ಮಹಾಕಾಲನನ್ನು ಪೂಜಿಸುತ್ತಾ ಅವನು ಅಲ್ಲಿಯೇ ನೆಲಸಿದ್ದಾನೆ.

೧೦೪. ಯಾವ ಮನುಷ್ಯನು, ನಿತ್ಯವೂ ಮಹಾಕಾಲನನ್ನು ಶ್ರದ್ಧೆಯಿಂದ ಪೂಜಿಸುತ್ತಾನೆಯೋ ಅವನು ಹಾವು ಪೊರೆಯಿಂದ ಬಿಡುಗಡೆ ಹೊಂದುವಂತೆ ದುಷ್ಕುಲೀನ ದೋಷಗಳಿಂದ ಬಿಡುಗಡೆ ಹೊಂದುತ್ತಾನೆ.

೧೦೫. ಶ್ರದ್ಧೆಯಿಂದ ಕೂಡಿ ಹೇಗೆ ಹೇಗೆ ಆ ಲಿಂಗವನ್ನು ನೋಡುತ್ತಿರುವನೋ ಹಾಗೆ ಹಾಗೆ ನೂರು ಜನ್ಮಗಳಿಂದುಂಟಾದ ದೋಷಗಳಿಂದಲೂ ಕೂಡ ಅವನು ಮುಕ್ತನಾಗುತ್ತಾನೆ.

೧೦೬. ಅಲ್ಲಿ ಭರ್ತೃಯಜ್ಞನಾದರೋ ಕ್ರಮವಾಗಿ ಲಿಂಗದ ಆರಾಧನೆ ಮಾಡುವುದರ ಮೂಲಕ ಬೀಜದೋಷದಿಂದ ಸಂಪೂರ್ಣವಾಗಿ ಮುಕ್ತನಾದನು. ಆ ಲಿಂಗದ ಮಹಿಮೆಯೇ ಅಂಥದು.

೧೦೭. ದುಷ್ಟ ಜನ್ಮದಿಂದ ಬಿಡುಗಡೆಹೊಂದಿದವನಾಗಿ ಬಭ್ರುವರ್ಣದ ಆ ನಕುಲನಿಗೆ ಆ ವಿಷಯವನ್ನು ತಿಳಿಸಿದನು. ಹಾಗೆ ಬಭ್ರುವಿಗೆ ತಿಳಿಸಿದುದರಿಂದ ಈ ತೀರ್ಥವು ಬಭ್ರುಪಾವನವೆಂದು ಪ್ರಸಿದ್ಧವಾಗಿದೆ.

೧೦೮. ಆದುದರಿಂದ ನೀವೆಲ್ಲರೂ ಆ ಮಹೀಸಾಗರ ಸಂಗಮಕ್ಕೇ ಹೋಗಿರಿ. ಅಲ್ಲಿನ ತೀರ್ಥಗಳನ್ನು ಸೇವಿಸುತ್ತ ನಿಶ್ಚಯವಾಗಿಯೂ ಮುಕ್ತಿಯನ್ನು ಪಡೆಯುತ್ತೀರಿ."

ಇತ್ಯೇವಮುಕ್ತ್ವಾ ಸಂವರ್ತೋ ಯಯಾವಭಿಮತಂ ದ್ವಿಜಃ ।
ಭರ್ತೃಯಜ್ಞಂ ಮುನಿಂ ಪ್ರಾಪ್ಯ ತೇ ಚ ತತ್ರ ಸ್ಥಿತಾ ಭವನ್ ॥ ೧೦೯ ॥
ತತಸ್ತಾನಾಹ ಸ ಜ್ಞಾತ್ವಾ ಗಣಾನ್ ಜ್ಞಾನೇನ ಶಾಂಭವಾನ್ ।
ಮಹದ್ಭೋ ವಿಮಲಂ ಪುಣ್ಯಂ ಗುಪ್ತಕ್ಷೇತ್ರೇ ಯದತ್ರವೈ ॥ ೧೧೦ ॥
ಭವಂತೋಽಭ್ಯಾಗತಾ ಯತ್ರ ಮಹೀಸಾಗರಸಂಗಮಃ
ಸ್ನಾನಂ ದಾನಂ ಜಪೋ ಹೋಮಃ ಪಿಂಡದಾನಂ ವಿಶೇಷತಃ ॥ ೧೧೧ ॥
ಅಕ್ಷಯ್ಯಂ ಜಾಯತೇ ಸರ್ವಂ ಮಹೀಸಾಗರಸಂಗಮೇ ।
ಕೃತಂ ತಥಾಽಕ್ಷಯಂ ಸರ್ವಂ ಸ್ನಾನದಾನಕ್ರಿಯಾದಿಕಂ ॥
ಯದಾತ್ರ ಸ್ಥಾನಕಂ ಚಕ್ರೇ ದೇವರ್ಷಿರ್ನಾರದಃ ಪುರಾ ।
ತದಾಗ್ರಹೈರ್ವರಾ ದತ್ತಾಃ ಶನಿನಾ ಚ ವರಸ್ತ್ವಸೌ ॥ ೧೧೩ ॥
ಶನೈಶ್ಚರೇಣ ಸಂಯುಕ್ತಾ ತ್ವಮಾವಾಸ್ಯಾ ಯದಾ ಭವೇತ್ ।
ಶ್ರಾದ್ಧಂ ತತ್ರ ಪ್ರಕುರ್ವೀತ ಸ್ನಾನದಾನಪುರಃಸರಂ ॥ ೧೧೪ ॥

---

೧೦೯. ಈ ರೀತಿಯಾಗಿ ನುಡಿದು ಸಂವರ್ತನು ತನ್ನಿಷ್ಟಪ್ರಕಾರವಾಗಿ ಹೊರಟುಹೋದನು. ಅವರು ಕೂಡ ಭರ್ತೃಯಜ್ಞ ಮುನಿಯನ್ನು ಕಂಡು ಅಲ್ಲಿ ನಿಂತವರಾದರು.

೧೧೦–೧೧೨. ಬಳಿಕ ಅವರು ಶಂಭುವಿನ ಗಣಗಳೆಂಬುದನ್ನು ಜ್ಞಾನದೃಷ್ಟಿಯಿಂದ ತಿಳಿದು ಆ ಭರ್ತೃಯಜ್ಞನು ಅವರನ್ನು ಕುರಿತು ಹೇಳಿದನು :—''ನಿಮ್ಮ ಪುಣ್ಯವು ಮಹತ್ತಾದುದು, ನಿರ್ಮಲವಾದುದು. ಅದರಿಂದಲೇ ಈ ಗುಪ್ತ ಕ್ಷೇತ್ರಕ್ಕೆ, ಮಹೀಸಾಗರಗಳಿಗೆ ಸಂಗಮವಾಗುವ ಈ ಪುಣ್ಯಸ್ಥಳಕ್ಕೆ ನೀವುಗಳು ದಯಮಾಡಿಸಿದಿರಿ. ಸ್ನಾನ, ದಾನ, ಜಪ, ಹೋಮ (ಪಿತೃಗಳಿಗೆ) ಪಿಂಡ ಪ್ರದಾನ— ಇವೆಲ್ಲವೂ ಮಹೀಸಾಗರಸಂಗಮದಲ್ಲಿ ಅಕ್ಷಯವಾಗುತ್ತವೆ. ಇವುಗಳಲ್ಲಿ ಪಿಂಡದಾನವಂತು ಬಹು ವಿಶೇಷವಾಗಿ ಅಕ್ಷಯವಾಗುತ್ತದೆ. ಸ್ನಾನ, ದಾನ, ಪಿತೃಕ್ರಿಯೆ ಮೊದಲಾದುವೆಲ್ಲವೂ ಅದೇ ರೀತಿ ಅಕ್ಷಯವಾಗಿ ಪರಿಣಮಿಸುತ್ತವೆ.

೧೧೩. ದೇವರ್ಷಿಯಾದ ನಾರದನು ಇಲ್ಲಿ ಸ್ಥಾನಕವನ್ನು— ಅಗ್ರಹಾರವನ್ನು—ನಿರ್ಮಿಸಿದಾಗ ಗ್ರಹದೇವತೆಗಳೆಲ್ಲರೂ ವರಗಳನ್ನು ಕೊಟ್ಟರು. ಶನಿಯು ಕೊಟ್ಟ ವರವಿದು :—

೧೧೪. ''ಯಾವಾಗ ಅಮಾವಾಸ್ಯೆಯು ಶನೈಶ್ಚರನಿಂದ ಕೂಡಿದುದಾಗುವುದೋ ಆಗ ಸ್ನಾನ, ದಾನಗಳನ್ನು ಮುಂದುಮಾಡಿಕೊಂಡು ಇಲ್ಲಿ ಶ್ರಾದ್ಧ ಮಾಡತಕ್ಕುದು.

ಯದಿಶ್ರಾವಣಮಾಸಸ್ಯ ಶನೈಶ್ಚರದಿನೇ ಶುಭಾ ।
ಕುಹೂರ್ಭವತಿ ತಸ್ಯಾಂ ತು ಸಂಕ್ರಾಂತಿಂ ಕುರುತೇ ರವಿಃ ॥ ೧೧೫ ॥
ತಸ್ಯಾಮೇವ ತಿಥೌ ಯೋಗೋ ವ್ಯತೀಪಾತೋ ಭವೇದ್ಯದಿ ।
ಪುಷ್ಕರಂ ನಾಮ ತತ್ ಪರ್ವ ಸೂರ್ಯಪರ್ವಶತಾಧಿಕಂ ॥ ೧೧೬ ॥
ಸರ್ವಯೋಗಸಮಾವಾಪಃ ಕಥಂಚಿದಪಿ ಲಭ್ಯತೇ ।
ತಸ್ಮಿನ್ ದಿನೇ ಶನಿಂ ಲೋಹಂ ಕಾಂಚನಂ ಭಾಸ್ಕರಂ ತಥಾ ॥ ೧೧೭ ॥
ಮಹೀಸಾಗರಸಂಸರ್ಗೇ ಪೂಜಯೇತ ಯಥಾ ವಿಧಿ ।
ಶನಿಮಂತ್ರೈಃ ಶನಿಂ ಧ್ಯಾತ್ವಾ ಸೂರ್ಯಮಂತ್ರೈರ್ದಿವಾಕರಂ ॥ ೧೧೮ ॥
ಅರ್ಘ್ಯಂ ದದ್ಯಾದ್ಭಾಸ್ಕರಸ್ಯ ಸರ್ವಪಾಪಪ್ರಶಾಂತಯೇ ।
ಪ್ರಯಾಗಾದಧಿಕಂ ಸ್ನಾನಂ ದಾನಂ ಕ್ಷೇತ್ರಾತ್ ಕುರೋರಪಿ ॥ ೧೧೯ ॥
ಪಿಂಡದಾನಂ ಗಯಾಕ್ಷೇತ್ರಾದಧಿಕಂ ಪಾಂಡುನಂದನ ।
ಇದಂ ಸಂಪ್ರಾಪ್ಯತೇ ಪರ್ವ ಮಹದ್ಭಿಃ ಪುಣ್ಯರಾಶಿಭಿಃ ॥ ೧೨೦ ॥
ಪಿತೄಣಾಮಕ್ಷಯಾ ತೃಪ್ತಿರ್ಜಾಯತೇ ದಿವಿ ನಿಶ್ಚಿತಂ ।
ಯಥಾ ಗಯಾಶಿರಃ ಪುಣ್ಯಂ ಪಿತೄಣಾಂ ತೃಪ್ತಿದಂ ಪರಂ ॥ ೧೨೧ ॥

---

೧೧೫–೧೧೬. ಶ್ರಾವಣಮಾಸದ ಶನೈಶ್ಚರ ದಿನದಲ್ಲಿ ಶುಭಕರವಾದ 'ಕುಹೂ'ಯೋಗವುಂಟಾದರೆ, ಆ ಕುಹೂಯೋಗದಲ್ಲಿಯೇ ಸೂರ್ಯನು ಸಂಕ್ರಾಂತಿಯನ್ನು ಹೊಂದಿದರೆ, ಅದೇ ತಿಥಿಯಲ್ಲಿಯೇ ವ್ಯತೀಪಾತಯೋಗವುಂಟಾಗುವುದಾದರೆ ಪುಷ್ಕರವೆಂಬ ಹೆಸರಿನ ಪರ್ವವುಂಟಾಗುವುದು. ಅದು ಸೂರ್ಯಪರ್ವಕ್ಕಿಂತಲೂ ನೂರರಷ್ಟು ಹೆಚ್ಚಾದುದು.

೧೧೭–೧೧೯. ಸರ್ವಯೋಗಗಳ ಸಮ್ಮೇಳನವೂ ದೊರೆಯುವುದು ಬಹು ಕಷ್ಟ. ಆ ದಿನದಲ್ಲಿ ಲೋಹದಲ್ಲಿ (ಕಬ್ಬಿಣದಲ್ಲಿ) ಮಾಡಿದ ಶನಿಯನ್ನೂ, ಚಿನ್ನದಲ್ಲಿ ಮಾಡಿದ ಸೂರ್ಯನನ್ನು ಮಹೀಸಾಗರಸಂಗಮದಲ್ಲಿ ವಿಧಿಪ್ರಕಾರವಾಗಿ ಪೂಜೆಮಾಡತಕ್ಕುದು. ಶನಿಮಂತ್ರಗಳಿಂದ ಶನಿಯನ್ನು ಧ್ಯಾನಿಸಿ, ಸೂರ್ಯ ಮಂತ್ರಗಳಿಂದ ಸೂರ್ಯನನ್ನು ಧ್ಯಾನಮಾಡಿ, ಸರ್ವಪಾಪಗಳೂ ಪೂರ್ಣವಾಗಿ ಪರಿಹಾರವಾಗುವುದಕ್ಕೋಸ್ಕರ ಭಾಸ್ಕರನಿಗೆ ಅರ್ಘ್ಯವನ್ನು ಕೊಡಬೇಕು. ಅಲ್ಲಿ ಮಾಡಿದ ಸ್ನಾನವು ಪ್ರಯಾಗಸ್ನಾನಕ್ಕಿಂತಲೂ ಹೆಚ್ಚಾದುದು; ದಾನವು ಕುರುಕ್ಷೇತ್ರದಲ್ಲಿಸಗಿದ ದಾನಕ್ಕಿಂತಲೂ ಮಿಗಿಲಾದುದು.

೧೨೦–೧೨೨. ಅಯ್ಯಾ ಪಾಂಡುನಂದನನೇ! ಪಿತೃಗಳಿಗೆ ಪಿಂಡಪ್ರದಾನವಾದರೋ ಗಯಾ ಕ್ಷೇತ್ರಕ್ಕಿಂತಲೂ ಅಧಿಕವಾದುದು. ಈ ಪರ್ವವು ಮಹತ್ತಾದ ಪುಣ್ಯರಾಶಿಗಳಿಂದಲೇ ದೊರೆಯುತ್ತದೆ. ಇದರಿಂದ ಸ್ವರ್ಗದಲ್ಲಿ ಪಿತೃಗಳಿಗೆ ನಿಶ್ಚಯವಾಗಿಯೂ ಅಕ್ಷಯವಾದ ತೃಪ್ತಿಯುಂಟಾಗುತ್ತದೆ. ಗಯಾಶಿರಸ್ಸು

ತಥಾ ಸಮಧಿಕಃ ಪುಣ್ಯೋ ಮಹೀಸಾಗರಸಂಗಮಃ ॥ ೧೨೨ ॥
ಅಗ್ನಿಶ್ಚ ರೇತೋ ಮೃಡಯಾ ಚ ದೇಹೇ
ರೇತೋಧಾ ವಿಷ್ಣುರಮೃತಸ್ಯ ನಾಭಿಃ ।
ಏವಂ ಬ್ರುವಞ್ಛ್ರದ್ಧಯಾ ಸತ್ಯವಾಕ್ಯಂ
ತತೋಽವಗಾಹೇತ ಮಹೀಸಮುದ್ರಂ ॥ ೧೨೩ ॥
ಮುಖಂ ಚ ಯಃ ಸರ್ವನದೀಷು ಪುಣ್ಯಃ
ಪಾಥೋಧಿರಂಬಾ ಪ್ರವರಾ ಮಹೀ ಚ ।
ಸಮಸ್ತ ತೀರ್ಥಾಕೃತಿರೇತಯೋಶ್ಚ
ದದಾಮಿ ಚಾರ್ಘ್ಯಂ ಪ್ರಣಮಾಮಿ ನೌಮಿ ॥ ೧೨೪ ॥
ತಾಮ್ರಾ ರಸ್ಯಾ ಪಯೋವಾಹಾ ಪಿತೃಪ್ರೀತಿಪ್ರದಾ ಶುಭಾ ।
ಸಸ್ಯಮಾಲಾ ಮಹಾಸಿಂಧುರ್ಧಾತುರ್ದಾತ್ರೀ ಪೃಥುಸ್ತುತಾ ।
ಇಂದ್ರದ್ಯುಮ್ನಸ್ಯ ಕನ್ಯಾ ಚ ಕ್ಷಿತಿಜನ್ಮಾ ಇರಾವತೀ ॥ ೧೨೫ ॥
ಮಹೀಪರ್ಣಾ ಮಹೀಶೃಂಗಾ ಗಂಗಾ ಪಶ್ಚಿಮವಾಹಿನೀ ।
ನದೀ ರಾಜನದೀ ಚೇತಿ ನಾಮಾಷ್ಟಾದಶಮಾಲಿಕಾಂ ॥ ೧೨೬ ॥
ಸ್ನಾನಕಾಲೇ ಚ ಸರ್ವತ್ರ ಶ್ರಾದ್ಧಕಾಲೇ ಪಠೇನ್ನರಃ ।
ಪೃಥುನೋಕ್ತಾನಿ ನಾಮಾನಿ ಯಜ್ಞಮೂರ್ತಿಪದಂ ವ್ರಜೇತ್ ॥ ೧೨೭ ॥

---

ಪಿತೃಗಳಿಗೆ ಹೇಗೆ ಪುಣ್ಯಕರವೋ, ಹೇಗೆ ಪರಮ ತೃಪ್ತಿಯನ್ನು ನೀಡುತ್ತದೆಯೋ ಹಾಗೆಯೇ ಮಹೀಸಾಗರಸಂಗಮವು ಅವರಿಗೆ ಆ ಗಯಾಶಿರಸ್ಸಿಗಿಂತಲೂ ಹೆಚ್ಚು ಪುಣ್ಯವಾಗಿರುವುದು.

೧೨೩. 'ಅಗ್ನಿಯೇ ರೇತಸ್ಸು, ದೇಹದಲ್ಲಿ (ಗರ್ಭಾಧಾನ ಮಂತ್ರಗಳ ಪ್ರಕಾರ) ರೇತಸ್ಸನ್ನಿಡುವವನು ಅಮೃತದ ನಾಭಿಯಾದ ವಿಷ್ಣು' — ಹೀಗೆ ಸತ್ಯ ವಾಕ್ಯವನ್ನು ಶ್ರದ್ಧೆಯಿಂದ ನುಡಿಯುತ್ತ ಮಹೀನದಿಯಸಂಗಮಪ್ರದೇಶದ ಸಮುದ್ರದಲ್ಲಿ ಮುಳುಗಿ ಸ್ನಾನಮಾಡತಕ್ಕದು.

೧೨೪. ಸರ್ವನದಿಗಳಿಗೂ ಪುಣ್ಯಕರವಾದ ಸಮುದ್ರವೇ ಮುಖ, ಸಮಸ್ತ ತೀರ್ಥಸ್ವರೂಪವಾದ ಮಹಿಯೇ ತಾಯಿ. ಈ ಇಬ್ಬರಿಗೂ (ಮಹೀಸಾಗರರಿಗೆ) ಅರ್ಘ್ಯವನ್ನು ಕೊಡುತ್ತೇನೆ; ಪ್ರಣಾಮ ಮಾಡುತ್ತೇನೆ; ನಮಿಸುತ್ತೇನೆ.

೧೨೫–೧೨೭. ತಾಮ್ರಾ, ರಮ್ಯಾ, ಪಯೋವಾಹಾ, ಪಿತೃಪ್ರೀತಿಪ್ರದಾ, ಶುಭಾ, ಸಸ್ಯಮಾಲಾ, ಮಹಾಸಿಂಧು, ಧಾತುರ್ದಾತ್ರೀ, ಪೃಥುಸ್ತುತಾ, ಇಂದ್ರದ್ಯುಮ್ನಕನ್ಯಾ, ಕ್ಷಿತಿಜನ್ಮಾ, ಇರಾವತೀ, ಮಹೀಪರ್ಣಾ, ಮಹೀಶೃಂಗಾ, ಗಂಗಾ, ಪಶ್ಚಿಮವಾಹಿನೀ, ನದೀ, ಮಹಾನದೀ— ಪೃಥುಮಹಾರಾಜನು ಹೇಳಿರುವ ಈ ಹದಿನೆಂಟು ನಾಮಗಳ ಮಾಲಿಕೆಯನ್ನು ಸ್ನಾನಕಾಲ

"ಮಹೀದೋಹೇ ಮಹಾನಂದಸಂದೋಹೇ ವಿಶ್ವಮೋಹಿನಿ ।
ಜಾತಾಸಿ ಸರಿತಾಂ ರಾಜ್ಞಿ ಪಾಪಂ ಹರ ಮಹೀದ್ರವೇ" (ಇತ್ಯರ್ಘ್ಯಮಂತ್ರಂ)॥
ಕಂಕಣಂ ರಜತಸ್ಯಾಪಿ ಯೋಽತ್ರ ನಿಕ್ಷಿಪತೇ ನರಃ ।
ಸ ಜಾಯತೇ ಮಹೀಪೃಷ್ಠೇ ಧನಧಾನ್ಯಯುತೇ ಕುಲೇ ॥ ೧೨೯ ॥
"ಮಹೀಂ ಚ ಸಾಗರಂ ಚೈವ ರೌಪ್ಯಕಂಕಣಪೂಜಯಾ ।
ಪೂಜಯಾಮಿ ಭವೇನ್ಮಾಮೇ ದ್ರವ್ಯನಾಶೋ ದರಿದ್ರತಾ" (ಕಂಕಣಕ್ಷೇಪಣಂ)
ಯತ್ಫಲಂ ಸರ್ವತೀರ್ಥೇಷು ಸರ್ವಯಜ್ಞೈಶ್ಚ ಯತ್ಫಲಂ ।
ತತ್ಫಲಂ ಸ್ನಾನದಾನೇನ ಮಹೀಸಾಗರಸಂಗಮೇ ॥ ೧೩೦ ॥
ವಿವಾದೇ ಚ ಸಮುತ್ಪನ್ನೇ ಅಪರಾಧೀ ಚ ಯೋ ಮತಃ ।
ಜಲಹಸ್ತಃ ಸದಾ ವಾಚ್ಯೋ ಮಹೀಸಾಗರಸಂಗಮೇ ॥ ೧೩೨ ॥
ಸಂಸ್ನಾಪ್ಯಾ ಘೋರಮಂತ್ರೇಣ ಸ್ಥಾಪ್ಯ ನಾಭಿಪ್ರಮಾಣಕೇ ।
ಜಲೇ ಕರಂ ಸಮುದ್ಧೃತ್ಯ ದಕ್ಷಿಣಂ ವಾಚಯೇದ್ದ್ರುತಂ ॥ ೧೩೩ ॥

---

ದಲ್ಲಿಯೂ ಶ್ರಾದ್ಧಕಾಲದಲ್ಲಿಯೂ ಎಡೆಗಳಲ್ಲಿಯೂ ಪಠಿಸಬೇಕು. ಹಲವು ಬಾರಿ ಪಠಿಸಿದುದಾದರೆ ಈ ನಾಮಗಳು ಯಜ್ಞಮೂರ್ತಿಯ ಪದವಿಯನ್ನು ಕೊಡುತ್ತವೆ.

೧೨೮–೧೨೯. "ಮಹೀದೋಹೇ, ಮಹಾನಂದಸಂದೋಹೇ (ಮಹತ್ತಾದ ಆನಂದಸಮೂಹವುಳ್ಳವಳು), ವಿಶ್ವಮೋಹಿನೀ! ನೀನು ನದಿಗಳಿಗೆಲ್ಲ ರಾಣಿಯಾಗಿ ಹುಟ್ಟಿದ್ದೀಯೆ. ಎಲೈ ಮಹೀದ್ರವೆಯೇ! ಪಾಪವನ್ನು ಪರಿಹರಿಸು"— ಇತೆಂದು ಅರ್ಘ್ಯಮಂತ್ರವು ॥ ಯಾವ ಮನುಷ್ಯನು ಬೆಳ್ಳಿಯ ಕಂಕಣವನ್ನು (ಬಳೆಯನ್ನು) ಇಲ್ಲಿ ಸಮರ್ಪಣ ಮಾಡುತ್ತಾನೆಯೋ ಅವನು ಭೂಮಿಯಮೇಲೆ ಧನಧಾನ್ಯಭರಿತವಾದವರ ಕುಲದಲ್ಲಿ ಹುಟ್ಟುತ್ತಾನೆ.

೧೩೦. 'ಮಹಿಯನ್ನೂ ಸಾಗರವನ್ನೂ ಬೆಳ್ಳಿಯ ಕಂಕಣದ ಪೂಜೆಯಿಂದ ಪೂಜಿಸುತ್ತೇನೆ. ನನಗೆ ದ್ರವ್ಯನಾಶವಾಗದಿರಲಿ, ದರಿದ್ರತೆಯುಂಟಾಗದಿರಲಿ.'

೧೩೧–೧೩೨. ಹೀಗೆಂದು ಕಂಕಣವನ್ನು ಅರ್ಪಣ ಮಾಡಬೇಕು. ಸರ್ವತೀರ್ಥಗಳಿಂದಲೂ ಯಾವ ಫಲವುಂಟಾಗುವುದೋ, ಸರ್ವಯಜ್ಞಗಳಿಂದಲೂ ಯಾವ ಫಲವು ದೊರೆಯುವುದೋ ಆ ಫಲವು ಮಹೀಸಾಗರಸಂಗಮದಲ್ಲಿ ಸ್ನಾನದಾನಗಳಿಂದ ಉಂಟಾಗುವುದು. ವಿವಾದವುಂಟಾದ ಸಂದರ್ಭದಲ್ಲಿ ಅಪರಾಧಿಯೆಂದು ಭಾವಿಸಲ್ಪಟ್ಟಿರುವವನಾವನೋ ಅವನನ್ನು ಮಹೀಸಾಗರಸಂಗಮದಲ್ಲಿ ಸದಾ ಕೈಯಲ್ಲಿ ನೀರು ಹಿಡಿದುಕೊಂಡೇ ಮಾತನಾಡಿಸಬೇಕು.

೧೩೩. ಅಘೋರ ಮಂತ್ರದಿಂದ ಸ್ನಾನಮಾಡಿಸಿ ಹೊಕ್ಕುಳಿಗೆ ಬರುವಷ್ಟು ಆಳದ ನೀರಿನಲ್ಲಿ ನಿಲ್ಲಿಸಿ ಬಲಗೈಯನ್ನು ಮೇಲಕ್ಕೆತ್ತಿ ಬೇಗ ಬೇಗ ಹೀಗೆ ಹೇಳಬೇಕು :—

ಯದಿ ಧರ್ಮೋऽತ್ರ ಸತ್ಯೋऽಸ್ತಿ ಸತ್ಯಶ್ಚೇತ್ಸಂಗಮಸ್ತ್ವಸೌ ।
ಸತ್ಯಾಶ್ಚೇತ್ ಕ್ರತುದ್ರಷ್ಟಾರಃ ಸತ್ಯಂ ಸ್ಯಾನ್ಮೇ ಶುಭಾಶುಭಂ ॥ ೧೩೪ ॥
ಏವಮುಕ್ತ್ವಾ ಕರಂ ಕ್ಷಿಪ್ಯ ದಕ್ಷಿಣಂ ಸಕಲಂ ತತಃ ।
ನಿಃಸೃತಃ ಪಾಪಕಾರೀ ಚೇಜ್ಜ್ವರೇಣಾಪೀಡ್ಯತೇ ಕ್ಷಣಾತ್ ॥ ೧೩೫ ॥
ಸಪ್ತಾಹಾದ್ದೃಶ್ಯತೇ ಚಾಪಿ ತಾವನ್ನಿರ್ದೋಷವಾನ್ಮತಃ ।
ಅತ್ರ ಸ್ನಾತ್ವಾ ಚ ಜಪ್ತ್ವಾ ಚ ತಪಸ್ತಪ್ತ್ವಾ ತಥೈವ ಚ ॥ ೧೩೬ ॥
ರುದ್ರಲೋಕಂ ಸುಬಹವೋ ಗತಾಃ ಪುಣ್ಯೇನ ಕರ್ಮಣಾ ।
ಸೋಮವಾರೇ ವಿಶೇಷೇಣ ಸ್ನಾತ್ವಾ ಯೋऽತ್ರ ಸುಭಕ್ತಿತಃ ॥ ೧೩೭ ॥
ಪಂಚತೀರ್ಥಾನಿ ಕುರುತೇ ಮುಚ್ಯತೇ ಪಂಚಪಾತಕೈಃ ।
ಇತ್ಯಾದ್ಯುಕ್ತಂ ಬಹುವಿಧಂ ತೀರ್ಥಮಹಾತ್ಮ್ಯಮುತ್ತಮಂ ॥ ೧೩೮ ॥
ಭರ್ತೃಯಜ್ಞಃ ಶಿವಸ್ಯೋಚೇ ತೇಷಾಮಾರಾಧನೇ ಕ್ರಮಂ ।
ಶಿವಾಗಮೋಕ್ತಮಾದಿಶ್ಯ ಪೂಜಾಯೋಗಂ ಯಥಾವಿಧಿ ॥ ೧೩೯ ॥
ಶಿವಭಕ್ತಿಸಮುದ್ರೈಕಪೂರಿತಃ ಪ್ರಾಹ ತಾನ್ಮುನಿಃ ।
ನ ಶಿವಾತ್ ಪರಮೋ ದೇವಃ ಸತ್ಯಮೇತಚ್ಛಿವವ್ರತಾಃ ॥ ೧೪೦ ॥

---

೧೩೪. "ಈ ವಿಚಾರದಲ್ಲಿ ಧರ್ಮವಿದ್ದರೆ, ಈ ಸಂಗಮವು ಸತ್ಯವಾಗಿದ್ದರೆ, ಕ್ರತುದ್ರಷ್ಟಾರರು ಸತ್ಯವಂತರಾಗಿದ್ದರೆ, ನನ್ನ ಶುಭಾಶುಭವೂ ಸತ್ಯವಾಗಲಿ."

೧೩೫. ಹೀಗೆ ನುಡಿದು ಬಳಿಕ ಬಲಗೈಯನ್ನು ಪೂರ್ತಿಯಾಗಿ ಕೆಳಗೆ ಬಿಟ್ಟು ನೀರಿನಿಂದ ಹೊರಕ್ಕೆ ಬರಬೇಕು. ಆತನು ಪಾಪಮಾಡಿದವನಾಗಿದ್ದಪಕ್ಷದಲ್ಲಿ ಕ್ಷಣಮಾತ್ರದಲ್ಲಿಯೇ ಜ್ವರದಿಂದ ಪೀಡಿತನಾಗುತ್ತಾನೆ.

೧೩೬—೧೪೦. ಏಳು ದಿನಗಳವರೆಗೂ ಅವನಿಗೆ ಯಾವ ಈತಿಭಾಧೆಗಳೂ ಆಗದಿದ್ದರೆ, ಅವನು ನಿರ್ದೋಷಿಯೆಂದು ಭಾವಿಸಲ್ಪಡುವನು. ಇಲ್ಲಿ ಸ್ನಾನ ಮಾಡಿ, ಜಪಮಾಡಿ ಹಾಗೆಯೇ ತಪಸ್ಸುಮಾಡಿ ಬಹಳ ಜನಗಳು ಆ ಪುಣ್ಯ ಕರ್ಮದಿಂದ ರುದ್ರಲೋಕಕ್ಕೆ ಹೋಗಿದ್ದಾರೆ. ಯಾವನು ಇಲ್ಲಿ ಬಹು ಭಕ್ತಿ ಯಿಂದ ವಿಶೇಷವಾಗಿ ಸೋಮವಾರದ ದಿನ ಸ್ನಾನಮಾಡಿ ಪಂಚತೀರ್ಥಗಳನ್ನು ಸೇವಿಸುವನೋ, ಅವನು ಪಂಚಪಾತಗಳಿಂದಲೂ ಮುಕ್ತನಾಗುತ್ತಾನೆ.— ಇಂತೀ ಮೊದಲಾಗಿ ಬಹು ವಿಧವಾಗಿ ಉತ್ತಮವಾದ ತೀರ್ಥ ಮಾಹಾತ್ಮ್ಯವು ಹೇಳಲ್ಪಟ್ಟಿದೆ. ಭರ್ತೃಯಜ್ಞನು ಅವರಿಗೆ ಶಿವನ ಆರಾಧನೆಯ ಕ್ರಮವನ್ನು ತಿಳಿಸಿದನು. ಶಿವಾಗಮಗಳಲ್ಲಿ ಹೇಳಲ್ಪಟ್ಟಿರುವ ಪೂಜಾಯೋಗವನ್ನು ಯಥಾ ವಿಧಿಯಾಗಿ ಉಪದೇಶಮಾಡಿದನು. ಶಿವಭಕ್ತಿಯೆಂಬ ಸಮುದ್ರವೊಂದರಿಂದಲೇ ತುಂಬಿದವನಾಗಿ ಆ ಮುನಿಯು ಹೀಗೆ ಹೇಳಿದನ :—ಶಿವನಿಗಿಂತಲೂ ಶ್ರೇಷ್ಠ ನಾದ ದೇವನಿಲ್ಲ. ಶಿವವ್ರತರೇ! ಇದು ಸತ್ಯವು.

**ಶಿವಂ ವಿಹಾಯ ಯೋ ಹ್ಯನ್ಯದಸತ್ ಕಿಂಚಿದುಪಾಸತೇ ।**
**ಕರಸ್ಥಂ ಸೋऽಮೃತಂ ತ್ಯಕ್ತ್ವಾ ಮೃಗತೃಷ್ಣಾಂ ಪ್ರಧಾವತಿ ॥ ೧೪೧ ॥**
**ಶಿವಶಕ್ತಿಮಯಂ ಹ್ಯೇತತ್ ಪ್ರತ್ಯಕ್ಷಂ ದೃಶ್ಯತೇ ಜಗತ್ ।**
**ಲಿಂಗಾಂಕಂ ಚ ಭಗಾಂಕಂ ಚ ನಾನ್ಯಾ ದೇವಾಂಕಿತಂ ಕ್ವಚಿತ್ ॥ ೧೪೨ ॥**
**ಯಶ್ಚ ತಂ ಪಿತರಂ ರುದ್ರಂ ತ್ಯಕ್ತ್ವಾ ಮಾತರಮಂಬಿಕಾಂ ।**
**ವರ್ತತೇऽಸೌ ಸ್ವಪಿತರಂ ತ್ಯಕ್ತ್ವೋದಪಿತೃಪಿಂಡಕಃ ।**
**ಯಸ್ಯ ರುದ್ರಸ್ಯ ಮಾಹಾತ್ಮ್ಯಂ ಶತರುದ್ರೀಯ ಮುತ್ತಮಂ ॥ ೧೪೩ ॥**
**ಶೃಣುಧ್ವಂ ಯದಿ ಪಾಪಾನಾಮಿಚ್ಛಧ್ವಂ ಕ್ಷಾಲನಂ ಪರಂ ।**
**ಬ್ರಹ್ಮಾ ಹಾಟಕಲಿಂಗಂ ಚ ಸಮಾರಾಧ್ಯ ಕಪರ್ದಿನಃ ।**
**ಜಗತ್ಪ್ರಧಾನ ಇತಿ ಚ ನಾಮ ಜಪ್ತ್ವಾ ವಿರಾಜತೇ ॥ ೧೪೪ ॥**
**ಕೃಷ್ಣಾಮೂಲೇ ಕೃಷ್ಣಲಿಂಗಂ ನಾಮಚಾರ್ಜಿತ ಮೇವಚ ॥ ೧೪೫ ॥**
**ಸನಕಾದ್ಯೈಶ್ಚ ತಲ್ಲಿಂಗಂ ಪೂಜ್ಯಾಜಯುರ್ಜಗದ್ಗತಿಂ ।**
**ದರ್ಭಾಂಕುರಮಯಂ ಸಪ್ತಮುನಯೋ ವಿಶ್ವಯೋನಿಕಂ ॥ ೧೪೬ ॥**

---

೧೪೧–೧೪೨. ಯಾವನು ಶಿವನನ್ನು ಬಿಟ್ಟು ಬೇರೆಯ ಅಸತ್ತಾದುದಾವು ದನ್ನಾದರೂ ಉಪಾಸಿಸುತ್ತಾನೋ ಅವನು ಕೈಯಲ್ಲಿರುವ ಅಮೃತವನ್ನು ತ್ಯಜಿಸಿ ಬಿಸಿಲುಗುದುರೆಯ ಬೆನ್ನುಹತ್ತಿ ಓಡುವವನಾಗುತ್ತಾನೆ. ಈ ಜಗತ್ತು ಶಿವಶಕ್ತಿ ಮಯವಾಗಿರುವುದು ಪ್ರತ್ಯಕ್ಷವಾಗಿ ಕಾಣುತ್ತಿದೆ. ಈ ಜಗತ್ತು ಲಿಂಗದ ಗುರುತುಳ್ಳುದೂ, ಭಗದ ಗುರುತುಳ್ಳುದೂ ಆಗಿರುವುದೇ ಹೊರತು ಎಲ್ಲಿಯಾದರೂ ಬೇರೆ ಯಾವ ಗುರುತಿನಿಂದಲೂ ಗುರುತಿಸಲ್ಪಟ್ಟಿಲ್ಲ.

೧೪೩–೧೪೪. ಯಾವನಾದರೆ ತಂದೆಯಾದ ರುದ್ರನನ್ನೂ, ತಾಯಿಯಾದ ಅಂಬಿಕೆಯನ್ನೂ ತ್ಯಜಿಸಿ ವರ್ತಿಸುತ್ತಾಯೋ ಅವನು ಸ್ವಂತ ಪಿತೃಗಳಿಗೇ ಜಲಾಂಜಲಿ ಮತ್ತು ಪಿಂಡದಾನಗಳನ್ನು ತ್ಯಜಿಸಿದವನಾಗುತ್ತಾನೆ; ರುದ್ರ ಮಾಹಾತ್ಮ್ಯವೇ ಶತರುದ್ರೀಯವು, ಉತ್ತಮವಾದ ಆ ಶತರುದ್ರೀಯವನ್ನು ಕೇಳಿರಿ. ನಿಮ್ಮ ಪಾಪಗಳೆಲ್ಲವೂ ತೊಳೆದುಹೋಗಬೇಕೆಂಬ ಬಯಕೆಯಿರುವ ಪಕ್ಷದಲ್ಲಿ ಈ ಶತರುದ್ರೀಯವನ್ನು ಕೇಳಿರಿ. ಬ್ರಹ್ಮನು ಕಪರ್ದಿಯ (ಶಿವನ) ಹಾಟಕಲಿಂಗವನ್ನು ಚೆನ್ನಾಗಿ ಆರಾಧಿಸಿ 'ಜಗತ್ಪ್ರಧಾನ' ಎಂಬ ಅವನ ನಾಮವನ್ನು ಜಪಿಸಿ ಪ್ರಕಾಶಿಸುತ್ತಿದ್ದಾನೆ.

೧೪೫–೧೪೬. ಕೃಷ್ಣಾಮೂಲದಲ್ಲಿ ಕೃಷ್ಣಲಿಂಗವೆಂಬ ಲಿಂಗವುಂಟು. ಸನಕಾದಿ ಸಪ್ತಮುನಿಗಳು ದರ್ಭಾಂಕುರಮಯವಾಗಿಯೂ ಪ್ರಪಂಚದ ಉತ್ಪತ್ತಿಸ್ಥಾನವಾಗಿಯೂ ಇರುವ ಆ ಲಿಂಗವನ್ನು ಪೂಜಿಸಿ, 'ಅರ್ಜಿತ'ವೆಂಬ ನಾಮವನ್ನು ಜಪಿಸಿ ಜಗದ್ಗತಿಯನ್ನು ಜಯಿಸಿದರು.

ನಾರದಸ್ತ್ವಂತರಿಕ್ಷೇ ಚ ಜಗದ್ಬೀಜಮಿದಂ ಗೃಣನ್ ।
ವಜ್ರಮಿಂದ್ರೋ ಲಿಂಗಮೇವಂ ವಿಶ್ವಾತ್ಮಾನಂ ಚ ನಾಮ ಚ ॥ ೧೪೭ ॥
ಸೂರ್ಯಸ್ತಾಮ್ರಂ ತಥಾಲಿಂಗಂ ನಾಮ ವಿಶ್ವಸೃಜಂ ಜಪನ್ ।
ಚಂದ್ರಶ್ಚ ಮೌಕ್ತಿಕಂ ಲಿಂಗಂ ಜಪನ್ ನಾಮ ಜಗತ್ಪತಿಂ ॥ ೧೪೮ ॥
ಇಂದ್ರನೀಲಮಯಂ ವಹ್ನಿರ್ನಾಮ ವಿಶ್ವೇಶ್ವರಂ ಜಪನ್ ।
ಪುಷ್ಪರಾಗಂ ಗುರುರ್ಲಿಂಗಂ ವಿಶ್ವಯೋನಿಂ ಜಪನ್ ಹರಂ ॥ ೧೪೯ ॥
ಪದ್ಮರಾಗಮಯಂ ಶುಕ್ರೋ ವಿಶ್ವಕರ್ಮೇತಿ ನಾಮ ಚ ।
ಹೇಮಲಿಂಗಂ ಚ ಧನದೋ ಜಪನ್ನಾಮ್ನಾ ತಥೇಶ್ವರಂ ॥ ೧೫೦ ॥
ರೌಪ್ಯಜಂ ವಿಶ್ವದೇವಾಶ್ಚ ನಾಮಾಪಿ ಜಪತಾಂ ಪತಿಂ ।
ವಾಯವೋ ರೀತಿಜಂ ಲಿಂಗಂ ಶಂಭುಮಿತ್ಯೇವ ನಾಮ ಚ ॥ ೧೫೧ ॥
ಕಾಶಜಂ ವಸವೋ ಲಿಂಗಂ ಸ್ವಯಂಭುಮಿತಿ ನಾಮ ಚ ।
ತ್ರಿಲೋಹಂ ಮಾತರೋ ಲಿಂಗಂ ನಾಮ ಭೂತೇಶಮೇವ ಚ ॥ ೧೫೨ ॥

---

೧೪೭. ನಾರದನಾದರೋ ಅಂತರಿಕ್ಷದಲ್ಲಿ 'ಜಗದ್ಬೀಜ'ರೂಪವಾದ ಈ ಲಿಂಗವನ್ನು ಆರಾಧಿಸಿದನು. ಇಂದ್ರನು ವಜ್ರಲಿಂಗವನ್ನು ಆರಾಧಿಸಿ 'ವಿಶ್ವಾತ್ಮಾ' ಎಂಬ ನಾಮವನ್ನು ಜಪಿಸಿದನು.

೧೪೮. ಸೂರ್ಯನು ತಾಮ್ರಲಿಂಗವನ್ನಾರಾಧಿಸಿ 'ವಿಶ್ವಸೃಟ್' ಎಂಬ ನಾಮವನ್ನು ಜಪಿಸುವನು. ಚಂದ್ರನು ಮೌಕ್ತಿಕ ಲಿಂಗವನ್ನು ಪೂಜಿಸಿ 'ಜಗತ್ಪತಿ' ಎಂಬ ನಾಮವನ್ನು ಜಪಿಸುವನು.

೧೪೯. ಅಗ್ನಿಯು ಇಂದ್ರನೀಲಮಯವಾದ ಲಿಂಗವನ್ನು ಪೂಜಿಸಿ 'ವಿಶ್ವೇಶ್ವರ' ಎಂಬ ನಾಮವನ್ನು ಜಪಿಸುವನು. 'ವಿಶ್ವಯೋನಿ' ಎಂಬ ಹರನ ನಾಮವನ್ನು ಜಪಿಸುತ್ತ ಗುರುವು ಪುಷ್ಪರಾಗ ಲಿಂಗವನ್ನು ಪೂಜಿಸುವನು.

೧೫೦. ಶುಕ್ರನು ಪದ್ಮರಾಗಮಯವಾದ ಲಿಂಗವನ್ನು ಪೂಜಿಸಿ 'ವಿಶ್ವಕರ್ಮ' ಎಂಬ ನಾಮವನ್ನು ಜಪಿಸುವನು. ಕುಬೇರನು ಹೇಮಲಿಂಗವನ್ನಾರಾಧಿಸಿ 'ಈಶ್ವರ' ಎಂಬ ಹೆಸರನ್ನು ಜಪಿಸುವನು.

೧೫೧–೧೫೨. ವಿಶ್ವೇದೇವತೆಗಳು ರೌಪ್ಯಲಿಂಗವನ್ನು ಪೂಜಿಸುತ್ತಾರೆ; 'ಜಪತಾಂಪತಿ' ಎಂದು ಇದರ ಹೆಸರು. ಸಪ್ತ ವಾಯುಗಳು 'ರೀತಿಜ'ವೆಂಬ ಲಿಂಗವನ್ನು ಪೂಜಿಸುವರು. 'ಶಂಭು' ಎಂದು ಇದರ ಹೆಸರು. ವಸುಗಳು 'ಕಾಶಜ' (ಕಾಶದಿಂದಾದ) ಲಿಂಗವನ್ನು ಪೂಜಿಸುವರು. 'ಸ್ವಯಂಭು' ಎಂದು ಇದರ ನಾಮ. ಮಾತೃದೇವತೆಗಳು ಭೂತೇಶವೆಂಬ ಹೆಸರಿನ 'ತ್ರಿಲೋಹ' ಲಿಂಗವನ್ನು ಪೂಜಿಸುತ್ತಾರೆ. ರಾಕ್ಷಸರು ಲೋಹದ 'ಭೂತಭವ್ಯಭವೋದ್ಭವ'ವೆಂಬ

ಲೌಹಂ ಚ ರಕ್ಷಸೋ ನಾಮ ಭೂತಭವ್ಯಭವೋದ್ಭವಂ ।
ಗುಹ್ಯಕಾಃ ಸೀಸಜಂ ಲಿಂಗಂ ನಾಮ ಯೋಗಂ ಜಪಂತಿ ಚ ॥ ೧೫೩ ॥
ಜೈಗೀಷವ್ಯೋ ಬ್ರಹ್ಮರಂಧ್ರಂ ನಾಮ ಯೋಗೇಶ್ವರಂ ಜಪನ್ ।
ನಿಮಿರ್ನಯನಯೋರ್ಲಿಂಗಂ ಜಪನ್ ಶರ್ವೇತಿ ನಾಮ ಚ ॥ ೧೫೪ ॥
ಧನ್ವಂತರಿರ್ಗೋಮಯಂ ಚ ಸರ್ವಲೋಕೇಶ್ವರೇಶ್ವರಂ ।
ಗಂಧರ್ವಾ ದಾರುಜಂ ಲಿಂಗಂ ಸರ್ವಶ್ರೇಷ್ಠೇತಿ ನಾಮಚ ॥ ೧೫೫ ॥
ವೈಡೂರ್ಯಂ ರಾಘವೋ ಲಿಂಗಂ ಜಗಜ್ಜ್ಯೇಷ್ಠೇತಿ ನಾಮ ಚ ।
ಬಾಣೋ ಮಾರಕತಂ ಲಿಂಗಂ ವಸಿಷ್ಠಮಿತಿ ನಾಮಚ ॥ ೧೫೬ ॥
ವರುಣಃ ಸ್ಫಾಟಿಕಂ ಲಿಂಗಂ ನಾಮ್ನಾಚ ಪರಮೇಶ್ವರಂ ।
ನಾಗಾ ವಿದ್ರುಮಲಿಂಗಂ ಚ ನಾಮ ಲೋಕತ್ರಯಂಕರಂ ॥ ೧೫೭ ॥
ಭಾರತೀ ತಾರಲಿಂಗಂ ಚ ನಾಮ ಲೋಕತ್ರಯಾಶ್ರಿತಂ ।
ಶನಿಶ್ಚ ಸಂಗಮಾವರ್ತೇ ಜಗನ್ನಾಥೇತಿ ನಾಮಚ ॥ ೧೫೮ ॥
ಶನಿದೇಶೇ ಮಧ್ಯರಾತ್ರೌ ಮಹೀಸಾಗರಸಂಗಮೇ ।
ಜಾತೀಜಂ ರಾವಣೋ ಲಿಂಗಂ ಜಪನ್ನಾಮ ಸುದುರ್ಜಯಂ ॥ ೧೫೯ ॥

---

ನಾಮದ ಲಿಂಗವನ್ನೂ, ಗುಹ್ಯಕರು 'ಯೋಗ'ವೆಂಬ ನಾಮದ ಸೀಸಕಲಿಂಗವನ್ನೂ ಆರಾಧಿಸುತ್ತಾರೆ.

೧೫೪. ಜೈಗೀಷವ್ಯನು 'ಬ್ರಹ್ಮರಂಧ್ರ'ವೆಂಬ ಲಿಂಗವನ್ನೂ, 'ಯೋಗೇಶ್ವರ'ವೆಂಬ ನಾಮವನ್ನೂ ಜಪಿಸುತ್ತ ಪೂಜಿಸುವನು. 'ಶರ್ವ'ನೆಂಬ ನಾಮವನ್ನು ಜಪಿಸುತ್ತ, ನಯನಗಳಲ್ಲಿರುವ ಲಿಂಗವನ್ನು ನಿಮಿಯು ಆರಾಧಿಸುವನು.

೧೫೫. ಧನ್ವಂತರಿಯು 'ಗೋಮಯ'ವೆಂಬ ಲಿಂಗವನ್ನೂ. 'ಸರ್ವಲೋಕೇಶ್ವರೇಶ್ವರ'ವೆಂಬ ನಾಮವನ್ನೂ, ಗಂಧರ್ವರು 'ದಾರುಜ' ಲಿಂಗವನ್ನು ಪೂಜಿಸಿ, 'ಸರ್ವಶ್ರೇಷ್ಠ'ವೆಂಬ ನಾಮವನ್ನೂ ಜಪಿಸುತ್ತಾರೆ.

೧೫೬–೧೬೦. ರಾಘವನು (ಶ್ರೀರಾಮನು) ವೈಡೂರ್ಯ ಲಿಂಗವನ್ನೂ, 'ಜಗಜ್ಜ್ಯೇಷ್ಠ'ವೆಂಬ ನಾಮವನ್ನೂ, ಬಾಣನು ಮರಕತದ ಲಿಂಗವನ್ನೂ, 'ವಸಿಷ್ಠ'ವೆಂಬ ನಾಮವನ್ನೂ, ವರುಣನು ಸ್ಫಟಿಕದ ಲಿಂಗವನ್ನೂ, 'ಪರಮೇಶ್ವರ'ವೆಂಬ ನಾಮವನ್ನೂ, ನಾಗರು 'ವಿದ್ರುಮ' ಲಿಂಗವನ್ನೂ, 'ಲೋಕತ್ರಯಂಕರ'ವೆಂಬ ನಾಮವನ್ನೂ, ಭಾರತಿಯು 'ತಾರಕ' ಲಿಂಗವನ್ನೂ, 'ಲೋಕತ್ರಯಾಶ್ರಿತ'ವೆಂಬ ನಾಮವನ್ನೂ, ಶನಿಯು 'ಸಂಗಮಾವರ್ತ' ಲಿಂಗವನ್ನೂ, 'ಜಗನ್ನಾಥ'ವೆಂಬ ನಾಮವನ್ನೂ, ರಾವಣನು ಶನಿದೇಶದಲ್ಲಿ, ಮಹೀಸಾಗರಸಂಗಮದಲ್ಲಿ, ಮಧ್ಯರಾತ್ರಿ ಕಾಲದಲ್ಲಿ 'ಜಾತೀಜ'ವೆಂಬ ಲಿಂಗವನ್ನೂ, 'ಸುದುರ್ಜಯ'ವೆಂಬ ನಾಮವನ್ನೂ, ಸಿದ್ಧರು 'ಮಾನಸ' ಲಿಂಗವನ್ನೂ, 'ಕಾಮಮೃತ್ಯುಜರಾತಿಗ'

ಸಿದ್ಧಾರ್ಥಶ್ಚ ಮಾನಸಂ ನಾಮ ಕಾಮಮೃತ್ಯುಜರಾತಿಗಂ ।
ಉಂಛಜಂ ಚ ಬಲಿರ್ಲಿಂಗಂ ಜ್ಞಾನಾತ್ಮೇತ್ಯಸ್ಯ ನಾಮ ಚ ॥ ೧೬೦ ॥
ಮರೀಚಿಪಾಃ ಪುಷ್ಪಜಂ ಚ ಜ್ಞಾನಗಮ್ಯೇತಿ ನಾಮ ಚ
ಶಕೃತಾಃ ಶಕೃತಂ ಲಿಂಗಂ ಜ್ಞಾನಜ್ಞೇಯೇತಿ ನಾಮ ಚ ॥ ೧೬೧ ॥
ಫೇನಪಾಃ ಫೇನಜಂ ಲಿಂಗಂ ನಾಮ ಚಾಪಿ ಸುದುರ್ವಿದಂ ।
ಕಪಿಲೋ ವಾಲುಕಾಲಿಂಗಂ ವರದಂ ಚ ಜಪನ್ ಹರಂ ॥ ೧೬೨ ॥
ಸಾರಸ್ವತೋ ವಾಚಿಲಿಂಗಂ ನಾಮವಾಗೀಶ್ವರೇತಿ ಚ ।
ಗಣಾ ಮೂರ್ತಿಮಯಂ ಲಿಂಗಂ ನಾಮ ರುದ್ರೇತಿ ಚಾಬ್ರುವನ್ ॥೧೬೩॥
ಜಾಂಬೂನದಮಯಂ ದೇವಾಃ ಶಿತಿಕಂಠೇತಿ ನಾಮ ಚ ।
ಶಂಖಲಿಂಗಂ ಬುಧೋ ನಾಮ ಕನಿಷ್ಠಮಿತಿ ಸಂಜಪನ್ ॥ ೧೬೪ ॥
ಅಶ್ವಿನೌ ಮೃಣ್ಮಯಂ ಲಿಂಗಂ ನಾಮ್ನಾ ಚೈವ ಸುವೇಧಸಂ ।
ವಿನಾಯಕಃ ಪಿಷ್ಟಲಿಂಗಂ ನಾಮ್ನಾ ಚಾಪಿ ಕಪರ್ದಿನಂ ॥ ೧೬೫ ॥
ನಾವನೀತಂ ಕುಜೋ ಲಿಂಗಂ ನಾಮ ಚಾಪಿ ಕರಾಲಕಂ
ತಾರ್ಕ್ಷ್ಯ ಓದನಲಿಂಗಂ ಚ ಹರ್ಯಕ್ಷೇತಿ ಹಿ ನಾಮ ಚ ॥ ೧೬೬ ॥

---

ವೆಂಬ ನಾಮವನ್ನೂ, ಬಲಿಯು 'ಉಂಛಜ'ವೆಂಬ ಲಿಂಗವನ್ನೂ, 'ಜ್ಞಾನಾತ್ಮ' ವೆಂಬ ನಾಮವನ್ನೂ ಕ್ರಮವಾಗಿ ಆರಾಧಿಸಿ ಪೂಜಿಸುವರು.

೧೬೧–೧೬೩. ಮರೀಚಿಪರು 'ಪುಷ್ಪಜ' (ಹೂವಿನ) ಲಿಂಗವನ್ನೂ, 'ಜ್ಞಾನಗಮ್ಯ'ವೆಂಬ ನಾಮವನ್ನೂ, ಶಕೃತರು 'ಶಕೃತ' ಲಿಂಗವನ್ನೂ, 'ಜ್ಞಾನ ಜ್ಞೇಯ'ವೆಂಬ ನಾಮವನ್ನೂ, ಫೇನಪರು (ನೊರೆ ಕುಡಿದು ಜೀವಿಸುವವರು) 'ಫೇನಜ' (ನೊರೆಯಿಂದಾದ) ಲಿಂಗವನ್ನೂ, 'ಸುದುರ್ವಿದ'ವೆಂಬ ನಾಮ ವನ್ನೂ, ಕಪಿಲನು ಮರಳು ಲಿಂಗವನ್ನೂ, 'ವರದ' ಎಂಬ ನಾಮವನ್ನೂ, ಸಾರಸ್ವತನು 'ವಾಕ್' ಲಿಂಗವನ್ನೂ(ಎಂದರೆ ಮಾತಿನ ರೂಪವಾದ ಲಿಂಗವನ್ನು), 'ವಾಗೀಶ್ವರ'ವೆಂಬ ನಾಮವನ್ನೂ, ಗಣಗಳು 'ಮೂರ್ತಿಮಯ' ಲಿಂಗವನ್ನೂ, 'ರುದ್ರ'ನೆಂಬ ನಾಮವನ್ನೂ ಆರಾಧಿಸುವರು ಮತ್ತು ಜಪಿಸುವರು.

೧೬೪. ದೇವತೆಗಳು 'ಜಾಂಬೂನದ' (ಚಿನ್ನದ) ಲಿಂಗವನ್ನೂ, 'ರುದ್ರ' ಎಂಬ ನಾಮವನ್ನೂ ಜಪಿಸುತ್ತ ಆರಾಧಿಸುವರು. ಬುಧನು 'ಕನಿಷ್ಠ'ವೆಂಬ ನಾಮವನ್ನು ಜಪಿಸುತ್ತ ಶಂಖಲಿಂಗವನ್ನು ಆರಾಧಿಸುವನು.

೧೬೫–೧೬೭. ಅಶ್ವಿನಿಗಳು ಮೃಣ್ಮಯ ಲಿಂಗವನ್ನೂ, 'ಸುವೇಧಸ' ವೆಂಬ ನಾಮವನ್ನೂ, ವಿನಾಯಕನು 'ಪಿಷ್ಟ' ಲಿಂಗ (ಹಿಟ್ಟಿನ ಲಿಂಗ)ವನ್ನೂ, 'ಕಪರ್ದಿ' ಯೆಂಬ ನಾಮವನ್ನೂ, ಕುಜನು 'ನವನೀತ' ಬೆಣ್ಣೆಯ ಲಿಂಗವನ್ನೂ, 'ಕರಾಲಕ'ವೆಂಬ ನಾಮವನ್ನೂ, ತಾರ್ಕ್ಷ್ಯನು (ಎಂದರೆ ಗರುಡನು) 'ಓದನ'

ಗೌಡಂ ಕಾಮಸ್ತಥಾ ಲಿಂಗಂ ರತಿದಂ ಚೇತಿ ನಾಮ ಚ ।
ಶಚೀ ಲವಣಲಿಂಗಂತು ಬಭ್ರುಕೇಶೇತಿ ನಾಮ ಚ ॥ ೧೬೭ ॥
ವಿಶ್ವಕರ್ಮಾ ಚ ಪ್ರಾಸಾದಲಿಂಗಂ ಯಾಮ್ಯೇತಿ ನಾಮ ಚ ।
ವಿಭೀಷಣಶ್ಚ ಪಾಂಸೂತ್ಥಂ ಸುಹೃತ್ತಮೇತಿ ನಾಮ ಚ ।
ವಂಶಾಂಕುರೋತ್ಥಂ ಸಗರೋ ನಾಮ ಸಂಗತಮೇವಚ ॥ ೧೬೮ ॥
ರಾಹುಶ್ಚ ರಾಮಠಂ ಲಿಂಗಂ ನಾಮ ಗಮ್ಯೇತಿ ಕೀರ್ತಯನ್ ।
ಲೇಪ್ಯಲಿಂಗಂ ತಥಾ ಲಕ್ಷ್ಮೀರ್ಹರಿನೇತ್ರೇತಿ ನಾಮ ಚ ॥ ೧೬೯ ॥
ಯೋಗಿನಃ ಸರ್ವಭೂತಸ್ಥಂ ಸ್ಥಾಣುರಿತ್ಯೇವನಾಮ ಚ ।
ನಾನಾವಿಧಂ ಮನುಷ್ಯಾಶ್ಚ ಪುರುಷಂ ನಾಮ ನಾಮ ಚ ॥ ೧೭೦ ॥
ತೇಜೋಮಯಂ ಚ ಋಕ್ಷಾಣಿ ಭಗಂ ನಾಮ ಚ ಭಾಸ್ವರಂ ।
ಕಿನ್ನರಾ ಧಾತುಲಿಂಗಂ ಚ ಸುದೀಪ್ತಮಿತಿ ನಾಮ ಚ ॥ ೧೭೧ ॥
ದೇವದೇವೇತಿ ನಾಮಾಸ್ಥಿ ಲಿಂಗಂ ಚ ಬ್ರಹ್ಮರಾಕ್ಷಸಾಃ ।
ದಂತಜಂ ವಾರಣಾ ಲಿಂಗಂ ನಾಮ ರಂಹಸಮೇವ ಚ ॥ ೧೭೨ ॥

---

(ಅನ್ನರೂಪವಾದ) ಲಿಂಗವನ್ನೂ, 'ಹರ್ಯಕ್ಷ'ವೆಂಬ ನಾಮವನ್ನೂ, ಕಾಮನು ಗುಡ(ಬೆಲ್ಲದ) ಲಿಂಗವನ್ನೂ, 'ರತಿದ'ವೆಂಬ ನಾಮವನ್ನೂ, ಶಚಿಯು 'ಲವಣ' ಲಿಂಗವನ್ನೂ, 'ಬಭ್ರುಕೇಶ'ವೆಂಬ ನಾಮವನ್ನೂ ಜಪಿಸಿ ಪೂಜಿಸುತ್ತಾರೆ.

೧೬೮–೧೭೦. ವಿಶ್ವಕರ್ಮನು ಪ್ರಸಾದ ಲಿಂಗವನ್ನೂ, 'ಯಾಮ್ಯ'ವೆಂಬ ನಾಮವನ್ನೂ, ವಿಭೀಷಣನು ಪಾಂಸುವಿನ (ಧೂಳಿನ) ಲಿಂಗವನ್ನೂ, 'ಸುಕೃತ್ತಮ'ವೆಂಬ ನಾಮವನ್ನೂ, ಸಗರನು ವಂಶಾಂಕುರದಿಂದ (ಬಿದಿರ ಮೊಳಕೆಯಿಂದ) ಉಂಟಾದ ಲಿಂಗವನ್ನೂ, 'ಸಂಗತ'ವೆಂಬ ಹೆಸರನ್ನೂ, ರಾಹುವು 'ರಾಮಠ' ಲಿಂಗವನ್ನೂ, 'ಗಮ್ಯ'ವೆಂಬ ನಾಮವನ್ನೂ, ಲಕ್ಷ್ಮಿಯು 'ಲೇಪ್ಯ' ಲಿಂಗವನ್ನೂ, 'ಹರಿನೇತ್ರ'ವೆಂಬ ನಾಮವನ್ನೂ, ಯೋಗಿಗಳು ಸರ್ವಭೂತಗಳಲ್ಲಿಯೂ ಇರುವ 'ಸರ್ವಭೂತಸ್ಥ' ಲಿಂಗವನ್ನೂ, 'ಸ್ಥಾಣು'ವೆಂಬ ನಾಮವನ್ನೂ, ಮನುಷ್ಯರು ನಾನಾ ವಿಧ ಲಿಂಗಗಳನ್ನೂ, 'ಪುರುಷ'ವೆಂಬ ನಾಮವನ್ನೂ ಜಪಿಸಿ ಪೂಜಿಸುತ್ತಾರೆ.

೧೭೧. ನಕ್ಷತ್ರಗಳು ಹೊಳೆಹೊಳೆಯುತ್ತಿರುವ 'ತೇಜೋಮಯ' ಲಿಂಗವನ್ನೂ, 'ಭಗ'ವೆಂಬ ನಾಮವನ್ನೂ, ಕಿನ್ನರರು 'ಧಾತು' ಲಿಂಗವನ್ನೂ, 'ಸುದೀಪ್ತ'ವೆಂಬ ನಾಮವನ್ನೂ ಜಪಿಸಿ ಪೂಜಿಸುತ್ತಾರೆ.

೧೭೨–೧೭೬. 'ದೇವದೇವ' ಎಂಬ ನಾಮ ಮತ್ತು 'ಅಸ್ಥಿ' ಲಿಂಗವನ್ನು ಬ್ರಹ್ಮರಾಕ್ಷಸರೂ, ಆನೆಗಳು ದಂತಜ (ದಂತದಿಂದ ಹುಟ್ಟಿದ್ದು) ಲಿಂಗವನ್ನೂ, 'ರಂಹಸ'ವೆಂಬ ನಾಮವನ್ನೂ, ಸಾಧ್ಯರು 'ಸಪ್ತಲೋಕಮಯ' ಲಿಂಗವನ್ನೂ

ಸಪ್ತಲೋಕಮಯಂ ಸಾಧ್ಯಾ ಬಹುರೂಪೇತಿ ನಾಮ ಚ ।
ದೂರ್ವಾಂಕುರಮಯಂ ಲಿಂಗಮೃತವಃ ಸರ್ವನಾಮ ಚ ॥ ೧೭೩ ॥
ಕೌಂಕುಮ ಮಪ್ಸರೋ ಲಿಂಗಂ ನಾಮ ಶಂಭೋಃಪ್ರಿಯೇತಿ ಚ ।
ಸಿಂದೂರಜಂ ಚೋರ್ವಶೀ ಚ ನಾಮ ಚ ಪ್ರಿಯವಾಸನಂ ॥ ೧೭೪ ॥
ಬ್ರಹ್ಮಚಾರೀ ಗುರರ್ಲಿಂಗಂ ನಾಮ ಚೋಷ್ಣೀಷಿಣಂ ವಿದುಃ ।
ಅಲಕ್ತಕಂ ಚ ಯೋಗಿನ್ಯೋ ನಾಮ ಚಾಸ್ಯ ಸುಬಭ್ರುಕಂ ॥ ೧೭೫ ॥
ಶ್ರೀಖಂಡಂ ಸಿದ್ಧಯೋಗಿನ್ಯಃ ಸಹಸ್ರಾಕ್ಷೇತಿ ನಾಮ ಚ ।
ಡಾಕಿನ್ಯೋ ಮಾಂಸಲಿಂಗಂ ಚ ನಾಮ ಚಾಸ್ಯ ಚ ಮೀಢುಷಂ ॥ ೧೭೬ ॥
ಅಪ್ಯನ್ನಜಂ ಚ ಮನವೋ ಗಿರಿಶೇತಿ ಚ ನಾಮ ಚ ।
ಅಗಸ್ತ್ಯೋ ವ್ರೀಹಿಜಂ ವಾಪಿ ಸುಶಾಂತಮಿತಿ ನಾಮ ಚ ॥ ೧೭೭ ॥
ಯವಜಂ ದೇವಲೋ ಲಿಂಗಂ ಪತಿಮಿತ್ಯೇವ ನಾಮ ಚ ।
ವಲ್ಮೀಕಜಂ ಚ ವಾಲ್ಮೀಕಿಶ್ಚಿರವಾಸೀತಿ ನಾಮ ಚ ॥ ೧೭೮ ॥
ಪ್ರತರ್ದನೋ ಬಾಣಲಿಂಗಂ ಹಿರಣ್ಯಭುಜನಾಮ ಚ ।
ರಾಜಿಕಂ ಚ ತಥಾ ದೈತ್ಯಾ ನಾಮ ಉಗ್ರೇತಿ ಕೀರ್ತಿತಂ ॥ ೧೭೯ ॥

---

'ಬಹುರೂಪ'ವೆಂಬ ನಾಮವನ್ನೂ, ಋತುಗಳು 'ದೂರ್ವಾಂಕುರಮಯ' (ಗರಿಕೆಯ ಚಿಗುರಿನ) ಲಿಂಗವನ್ನೂ, 'ಸರ್ವ'ವೆಂಬ ನಾಮವನ್ನೂ ಜಪಿಸಿ ಪೂಜಿಸುತ್ತಾರೆ. ಅಪ್ಸರೆಯರು 'ಕೌಂಕುಮ' (ಎಂದರೆ ಕುಂಕುಮ) ಲಿಂಗವನ್ನೂ, 'ಶಂಭುಪ್ರಿಯ'ವೆಂಬ ನಾಮವನ್ನೂ, ಊರ್ವಶಿಯು 'ಸಿಂದೂರದ' ಲಿಂಗವನ್ನೂ, 'ಪ್ರಿಯವಾಸನ'ವೆಂಬ ನಾಮವನ್ನೂ, ಬ್ರಹ್ಮಚಾರಿಯು 'ಗುರು' ಲಿಂಗವನ್ನೂ, 'ಉಷ್ಣೀಷಿ' ಎಂಬ ನಾಮವನ್ನೂ, ಯೋಗಿನಿಯರು 'ಅಲಕ್ತಕ' ಲಿಂಗವನ್ನೂ, 'ಸುಬಭ್ರುಕ'ವೆಂಬ ನಾಮವನ್ನೂ, ಸಿದ್ಧಯೋಗಿನಿಯರು 'ಶ್ರೀಖಂಡ' ಲಿಂಗವನ್ನೂ, 'ಸಹಸ್ರಾಕ್ಷ'ವೆಂಬ ನಾಮವನ್ನೂ, ಡಾಕಿನಿಯರು 'ಮಾಂಸ' ಲಿಂಗವನ್ನೂ, 'ಮೀಢೂಷ'ವೆಂಬ ಹೆಸರನ್ನೂ ಜಪಿಸಿ ಪೂಜಿಸುವರು.

೧೭೭–೧೭೯. ಮನುಗಳು 'ಅನ್ನಜ' (ಅನ್ನದಿಂದಾದ) ಲಿಂಗವನ್ನೂ, 'ಗಿರಿಶ'ವೆಂಬ ನಾಮವನ್ನೂ, ಅಗಸ್ತ್ಯನು 'ವ್ರೀಹಿಜ' (ಬತ್ತದಿಂದಾದ) ಲಿಂಗವನ್ನೂ, 'ಸುಶಾಂತ'ವೆಂಬ ನಾಮವನ್ನೂ, ದೇವಲನು 'ಯವಜ' (ಯವದಿಂದಾದ) ಲಿಂಗವನ್ನೂ, 'ಪತಿ' ಎಂಬ ನಾಮವನ್ನೂ, ವಾಲ್ಮೀಕಿಯು 'ವಲ್ಮೀಕಜ' (ಹುತ್ತದಲ್ಲಿ ಹುಟ್ಟಿದ) ಲಿಂಗವನ್ನೂ, 'ಚಿರವಾಸಿ' ಎಂಬ ನಾಮವನ್ನೂ, ಪ್ರತರ್ದನನು 'ಬಾಣ' ಲಿಂಗವನ್ನೂ, 'ಹಿರಣ್ಯಭುಜ'ವೆಂಬ ನಾಮವನ್ನೂ, ದೈತ್ಯರು 'ರಾಜಿಕ'ವೆಂಬ ಲಿಂಗವನ್ನೂ, 'ಉಗ್ರ'ವೆಂಬ ನಾಮವನ್ನೂ ಆರಾಧಿಸುವರು ಮತ್ತು ಜಪಿಸುವರು.

ನಿಷ್ಪಾವಜಂ ದಾನವಾಶ್ಚ ಲಿಂಗನಾಮ ಚ ದಿಕ್ಪತಿಂ ।
ಮೇಘಾ ನೀರಮಯಂ ಲಿಂಗಂ ಪರ್ಜನ್ಯಪತಿನಾಮಚ ॥ ೧೮೦ ॥
ರಾಜಮಾಷಮಯಂ ಯಕ್ಷಾ ನಾಮ ಭೂತಪತಿಂ ಸ್ಮೃತಂ ।
ತಿಲಾನ್ನಜಂ ಚ ಪಿತರೋ ನಾಮ ವೃಷಪತಿಸ್ತಥಾ ॥ ೧೮೧ ॥
ಗೌತಮೋ ಗೋರಜಮಯಂ ನಾಮ ಗೋಪತಿರೇವಚ ।
ವಾನಪ್ರಸ್ಥಾಃ ಫಲಮಯಂ ನಾಮ ವೃಕ್ಷಾವೃತೇತಿ ಚ ॥ ೧೮೨ ॥
ಸ್ಕಂದಃ ಪಾಷಾಣಲಿಂಗಂ ಚ ನಾಮ ಸೇನಾನ್ಯ ಏವ ಚ ।
ನಾಗಶ್ಚಾಶ್ವತರೋ ಧಾನ್ಯಂ ಮಧ್ಯಮೇತ್ಯಸ್ಯ ನಾಮ ಚ ॥ ೧೮೩ ॥
ಪುರೋಡಾಶಮಯಂ ಯಜ್ವಾ ಸ್ರುವಹಸ್ತೇತಿ ನಾಮ ಚ ।
ಯಮಃ ಕಾಲಾಯಸಮಯಂ ನಾಮ ಪ್ರಾಹ ಚ ಧನ್ವಿನಂ ॥ ೧೮೪ ॥
ಯವಾಂಕುರಂ ಜಾಮದಗ್ನ್ಯೋ ಭರ್ಗದೈತ್ಯೇತಿ ನಾಮ ಚ ।
ಪುರೂರವಾಶ್ಚಾನ್ನಮಯಂ ಬಹುರೂಪೇತಿ ನಾಮ ಚ ॥ ೧೮೫ ॥

---

೧೮೦. ದಾನವರು 'ನಿಷ್ಪಾವಜ' ಲಿಂಗವನ್ನಾರಾಧಿಸುವರು, 'ದಿಕ್ಪತಿ' ಎಂದು ಆ ಲಿಂಗದ ಹೆಸರು. ಮೇಘಗಳು 'ನೀರಮಯ' ಲಿಂಗವನ್ನು ಪೂಜಿಸುವುವು. 'ಪರ್ಜನ್ಯಪತಿ' ಎಂಬ ನಾಮವನ್ನು ಜಪಿಸುವುವು.

೧೮೧. ಯಕ್ಷರು 'ರಾಜಮಾಷಮಯ' (ಉದ್ದಿನಿಂದ ಮಾಡಿದ) ಲಿಂಗವನ್ನು ಪೂಜಿಸುವರು. ಅದರ ಹೆಸರು 'ಭೂತಪತಿ' ಎಂದು ಹೇಳಲ್ಪಟ್ಟಿದೆ. ಪಿತೃಗಳು 'ತಿಲಾನ್ನಜ' (ಎಳ್ಳನ್ನದಿಂದಾದ) ಲಿಂಗವನ್ನಾರಾಧಿಸುವರು. 'ವೃಷಪತಿ' ಎಂದು ಅದರ ಹೆಸರು.

೧೮೨. ಗೌತಮನು 'ಗೋರಜಮಯ' ಲಿಂಗವನ್ನಾರಾಧಿಸುವನು. ಅದರ ನಾಮವು 'ಗೋಪತಿ'. ವಾನಪ್ರಸ್ಥರು 'ಫಲಮಯ' ಲಿಂಗವನ್ನು ಪೂಜಿಸುವರು. ಅದರ ಹೆಸರು 'ವೃಕ್ಷಾವೃತ'ವೆಂದು.

೧೮೩. ಸ್ಕಂದನು 'ಪಾಷಾಣ' ಲಿಂಗವನ್ನಾರಾಧಿಸುವನು. 'ಸೇನಾನ್ಯ' ಎಂಬುದೇ ಅದರ ಹೆಸರು. ಅಶ್ವತರನೆಂಬ ನಾಗನು 'ಧಾನ್ಯ' ಲಿಂಗವನ್ನು ಆರಾಧಿಸುವನು. ಅದರ ನಾಮವು 'ಮಧ್ಯಮ'ವೆಂದು.

೧೮೪–೧೮೫. ಯಜ್ಞದೀಕ್ಷಿತನು 'ಪುರೋಡಾಶಮಯ'ವಾದ ಲಿಂಗವನ್ನು ಪೂಜಿಸುವನು. 'ಸ್ರುವಹಸ್ತ' ಎಂಬುದು ಆ ಲಿಂಗದ ಹೆಸರು. ಯಮನು ಕಾಲಾಯಸ (ಕರಿಯ ಕಬ್ಬಿಣ)ಮಯವಾದ ಲಿಂಗವನ್ನು ಪೂಜಿಸುವನು. ಅದರ ಹೆಸರು 'ಧನ್ವಿ' ಎಂದು. ಜಮದಗ್ನಿಪುತ್ರನಾದ ಪರಶುರಾಮನು 'ಯವಾಂಕುರ' ಲಿಂಗವನ್ನೂ, 'ಭರ್ಗದೈತ್ಯ'ವೆಂಬ ನಾಮವನ್ನೂ, ಪುರೂರವನು 'ಅನ್ನಮಯ' ಲಿಂಗವನ್ನೂ, 'ಬಹುರೂಪ'ವೆಂಬ ನಾಮವನ್ನೂ ಜಪಿಸಿ ಪೂಜಿಸುತ್ತಾರೆ.

ಮಾಂಧಾತಾ ಶರ್ಕರಾಲಿಂಗಂ ನಾಮ ಬಾಹುಯುಗೇತಿ ಚ ।
ಗಾವಃ ಪಯೋಮಯಂ ಲಿಂಗಂ ನಾಮ ನೇತ್ರಸಹಸ್ರಕಂ ॥ ೧೮೬ ॥
ಸಾಧ್ಯಾ ಭರ್ತೃಮಯಂ ಲಿಂಗಂ ನಾಮ ವಿಶ್ವಪತಿಃ ಸ್ಮೃತಂ ।
ನಾರಾಯಣೋ ನರೋ ಮೌಂಜಂ ಸಹಸ್ರಶಿರ ನಾಮ ಚ ॥ ೧೮೭ ॥
ತಾರ್ಕ್ಷ್ಯಂ ಪೃಥುಸ್ತಥಾ ಲಿಂಗಂ ಸಹಸ್ರ ಚರಣಾಭಿದಂ ।
ಪಕ್ಷಿಣೋ ವ್ಯೋಮಲಿಂಗಂ ಚ ನಾಮ ಸರ್ವಾತ್ಮಕೇತಿ ಚ ॥ ೧೮೮ ॥
ಪೃಥಿವೀ ಮೇರುಲಿಂಗಂ ಚ ದ್ವಿತನುಶ್ಚಾಸ್ಯ ನಾಮ ಚ ।
ಭಸ್ಮಲಿಂಗಂ ಪಶುಪತಿರ್ನಾಮಚಾಸ್ಯ ಮಹೇಶ್ವರಃ ॥ ೧೮೯ ॥
ಋಷಯೋ ಜ್ಞಾನಲಿಂಗಂ ಚ ಚಿರಸ್ಥಾನೇತಿ ನಾಮ ಚ ।
ಬ್ರಾಹ್ಮಣಾ ಬ್ರಹ್ಮಲಿಂಗಂ ಚ ನಾಮ ಜ್ಯೇಷ್ಠೇತಿ ತಂ ವಿದುಃ ॥ ೧೯೦ ॥
ಗೋರೋಚನಮಯಂ ಶೇಷೋ ನಾಮ ಪಶುಪತಿಃ ಸ್ಮೃತಂ ।
ವಾಸುಕಿರ್ವಿಷಲಿಂಗಂ ಚ ನಾಮ ವೈ ಶಂಕರೇತಿ ಚ ॥ ೧೯೧ ॥

---

೧೮೬–೧೮೭. ಮಾಂಧಾತನು 'ಶರ್ಕರಾ' (ಸಕ್ಕರೆಯ) ಲಿಂಗವನ್ನೂ, 'ಬಾಹುಯುಗ'ವೆಂಬ ನಾಮವನ್ನೂ, ಗೋವುಗಳು 'ಪಯೋಮಯ' (ಹಾಲಿನರೂಪದ) ಲಿಂಗವನ್ನೂ, 'ನೇತ್ರಸಹಸ್ರಕ'ವೆಂಬ ನಾಮವನ್ನೂ, ಸಾಧ್ಯರು 'ಭರ್ತೃಮಯ' ಲಿಂಗವನ್ನೂ, 'ವಿಶ್ವಪತಿ' ಎಂಬ ನಾಮವನ್ನೂ, ನರನಾರಾಯಣರು 'ಮೌಂಜ' ಲಿಂಗವನ್ನೂ, 'ಸಹಸ್ರಶಿರ'ವೆಂಬ ನಾಮವನ್ನೂ ಜಪಿಸಿ ಪೂಜಿಸುವರು.

೧೮೮. ಪೃಥುವು 'ತಾರ್ಕ್ಷ್ಯ'ವೆಂಬ ಲಿಂಗವನ್ನೂ, 'ಸಹಸ್ರಚರಣ'ವೆಂಬ ನಾಮವನ್ನೂ, ಪಕ್ಷಿಗಳು 'ವ್ಯೋಮ' (ಆಕಾಶ) ಲಿಂಗವನ್ನೂ, 'ಸರ್ವಾತ್ಮಕ' ವೆಂಬ ನಾಮವನ್ನೂ ಜಪಿಸಿ ಪೂಜಿಸುತ್ತಾರೆ.

೧೮೯. ಪೃಥಿವಿಯು 'ಮೇರು' ಲಿಂಗವನ್ನೂ, 'ದ್ವಿತನು'ವೆಂಬ ನಾಮವನ್ನೂ, ಪಶುಪತಿಯು 'ಭಸ್ಮ' ಲಿಂಗವನ್ನೂ, 'ಮಹೇಶ್ವರ'ವೆಂಬ ನಾಮವನ್ನೂ ಆರಾಧಿಸುವರು ಮತ್ತು ಪೂಜಿಸುವರು.

೧೯೦. ಋಷಿಗಳು 'ಜ್ಞಾನ' ಲಿಂಗವನ್ನಾರಾಧಿಸುವರು. 'ಚಿರಸ್ಥಾನ' ವೆಂಬ ನಾಮವನ್ನು ಜಪಿಸುವರು. ಬ್ರಾಹ್ಮಣರು 'ಬ್ರಹ್ಮ' ಲಿಂಗವನ್ನು ಪೂಜಿಸುವರು. ಆ ಲಿಂಗದ ಹೆಸರು 'ಜ್ಯೇಷ್ಠ' ಎಂದು ತಿಳಿಯುವರು.

೧೯೧. ಶೇಷನು ಗೋರೋಚನಮಯವಾದ ಲಿಂಗವನ್ನು ಆರಾಧಿಸುವನು. ಅದರ ಹೆಸರು 'ಪಶುಪತಿ' ಎಂದು ಕರೆಯಲ್ಪಟ್ಟಿದೆ. ವಾಸುಕಿಯು 'ವಿಷಲಿಂಗ' ವನ್ನು ಪೂಜಿಸುವನು. 'ಶಂಕರ' ಎಂದು ಅದರ ಹೆಸರು.

ತಕ್ಷಕಃ ಕಾಲಕೂಟಾಖ್ಯಂ ಬಹುರೂಪೇತಿ ನಾಮ ಚ ।
ಹಾಲಾಹಲಂ ಚ ಕರ್ಕೋಟೇ ಏಕಾಕ್ಷ ಇತಿ ನಾಮ ಚ ॥ ೧೯೨ ॥
ಶೃಂಗೀ ವಿಷಮಯಂ ಪದ್ಮೋ ನಾಮ ಧೂರ್ಜಟಿರೇವಚ ।
ಪುತ್ರಃ ಪಿತೃಮಯಂ ಲಿಂಗಂ ವಿಶ್ವರೂಪೇತಿ ನಾಮ ಚ ॥ ೧೯೩ ॥
ಪಾರದಂ ಚ ಶಿವಾ ದೇವೀ ನಾಮ ತ್ರ್ಯಂಬಕ ಏವ ಚ ।
ಮತ್ಸ್ಯಾದ್ಯಾಃ ಶಾಸ್ತ್ರಲಿಂಗಂ ಚ ನಾಮ ಚಾಪಿ ವೃಷಾಕಪಿಃ ॥ ೧೯೪ ॥
ಏವಂ ಕಿಂ ಬಹುನೋಕ್ತೇನ ಯದ್ಯತ್ ಸತ್ತ್ವಂ ವಿಭೂತಿಮತ್ ।
ಜಗತ್ಯಾಮಸ್ತಿ ತಜ್ಜಾತಂ ಶಿವಾರಾಧನಯೋಗತಃ ॥ ೧೯೫ ॥
ಭಸ್ಮನೋ ಯದಿ ವೃಕ್ಷತ್ವಂ ಜಾಯತೇ ನೀರಸೇಚನಾತ್ ।
ಶಿವಭಕ್ತಿವಿಹೀನಸ್ಯ ತತೋಽಸ್ಯ ಫಲಮುಚ್ಯತೇ ॥ ೧೯೬ ॥
ಧರ್ಮಾರ್ಥಕಾಮಮೋಕ್ಷಾಣಾಂ ಯದಿಹಾಪ್ತೌ ಭವೇನ್ಮತಿಃ ।
ತತೋ ಹರಃ ಸಮಾರಾಧ್ಯಸ್ತ್ರಿಜಗತ್ಯಾಃ ಪ್ರದೋ ಮತಃ ॥ ೧೯೭ ॥

---

೧೯೨. ತಕ್ಷಕನು ಕಾಲಕೂಟವೆಂಬ ಲಿಂಗವನ್ನಾರಾಧಿಸುವನು. ಅದಕ್ಕೆ 'ಬಹುರೂಪ'ವೆಂಬ ನಾಮವುಂಟು. ಕರ್ಕೋಟನು 'ಹಾಲಾಹಲ' ಲಿಂಗವನ್ನು ಆರಾಧಿಸಿ, 'ಏಕಾಕ್ಷ'ವೆಂಬ ಅದರ ನಾಮವನ್ನು ಜಪಿಸುವನು.

೧೯೩. ಶೃಂಗಿಯೂ, ಪದ್ಮನೂ 'ವಿಷಮಯ' ಲಿಂಗವನ್ನು ಪೂಜಿಸುವರು. ಅದರ ನಾಮವು 'ಧೂರ್ಜಟಿ' ಎಂದು. ಪುತ್ರನು 'ಪಿತೃಮಯ' ಲಿಂಗವನ್ನು ಆರಾಧಿಸಿ, 'ವಿಶ್ವರೂಪ'ವೆಂಬ ನಾಮವನ್ನು ಜಪಿಸುವನು.

೧೯೪. ದೇವಿಯಾದ ಶಿವೆಯು (ಪಾರ್ವತಿಯು) 'ಪಾರದ' (ಪಾದರಸದ) ಲಿಂಗವನ್ನು ಆರಾಧಿಸುವಳು. 'ತ್ರ್ಯಂಬಕ'ವೆಂಬ ನಾಮವನ್ನು ಜಪಿಸುವಳು. ಮತ್ಸ್ಯಾದಿಗಳು 'ಶಾಸ್ತ್ರ' ಲಿಂಗವನ್ನಾರಾಧಿಸುವರು. ಆ ಲಿಂಗಕ್ಕೆ 'ವೃಷಾಕಪಿ' ಎಂದು ಹೆಸರು.

೧೯೫. ಹೆಚ್ಚು ಹೇಳಿದುದರಿಂದೇನು ಪ್ರಯೋಜನ? ಇದೇ ರೀತಿ ಜಗತ್ತಿನಲ್ಲಿ ಮಹಿಮಾಯುಕ್ತವಾದ ಯಾವ ಯಾವ ಸತ್ತ್ವವಿದೆಯೋ ಅದೆಲ್ಲವೂ ಶಿವಾರಾಧನೆಯ ಸಂಬಂಧದಿಂದಲೇ ಉಂಟಾಗಿರುವುದು.

೧೯೬. ನೀರನ್ನು ಸೇವಿಸುವುದರಿಂದ ಭಸ್ಮದಲ್ಲಿ ವೃಕ್ಷವು ಮೊಳೆಯುವುದಾದರೆ ಶಿವಭಕ್ತಿಯಿಲ್ಲದವನಿಗೂ ಶಿವಲಿಂಗಾರಾಧನೆಯಿಂದ ಫಲವುಂಟೆಂದು ಹೇಳಬಹುದು.

೧೯೭. ಧರ್ಮ, ಅರ್ಥ, ಕಾಮ, ಮೋಕ್ಷ— ಇವುಗಳನ್ನು ಪಡೆಯುವುದರಲ್ಲಿ ಬುದ್ಧಿಯಿರುವ ಪಕ್ಷದಲ್ಲಿ ಹರನನ್ನೇ ಆರಾಧಿಸಬೇಕು ; ಆತನೇ ಮೂರು ಲೋಕಗಳಲ್ಲಿಯೂ ಮಹಾದಾತೃವೆಂದು ತಿಳಿಯಲಾಗಿರುವನು.

ಯ ಇದಂ ಶತರುದ್ರೀಯಂ ಪ್ರಾತಃ ಪ್ರಾತಃ ಪಠಿಷ್ಯತಿ ।
ತಸ್ಯ ಪ್ರೀತಃ ಶಿವೋ ದೇವಃ ಪ್ರದಾಸ್ಯತ್ಯಖಿಲಾನ್ ವರಾನ್ ॥ ೧೯೮ ॥
ನಾತಃಪರಂ ಪುಣ್ಯತಮಂ ಕಿಂಚಿದಸ್ತಿ ಮಹಾಫಲಂ ।
ಸರ್ವವೇದರಹಸ್ಯಂ ಚ ಸೂರ್ಯೇಣೋಕ್ತಮಿದಂ ಮಮ ॥ ೧೯೯ ॥
ವಾಚಾ ಚ ಯತ್ಕೃತಂ ಪಾಪಂ ಮನಸಾವಾಪ್ಯುಪಾರ್ಜಿತಂ ।
ಪಾಪಂ ತನ್ನಾಶಮಾಯಾತಿ ಕೀರ್ತಿತೇ ಶತರುದ್ರಿಯೇ ॥ ೨೦೦ ॥
ರೋಗಾರ್ತೋ ಮುಚ್ಯತೇ ರೋಗಾದ್ಬದ್ಧೋ ಮುಚ್ಯೇತ ಬಂಧನಾತ್ ।
ಭಯಾನ್ಮುಚ್ಯೇತ ಭೀತಶ್ಚ ಜಪೇದ್ಯಃ ಶತರುದ್ರಿಯಂ ॥ ೨೦೧ ॥
ನಾಮ್ನಾಂ ಶತೇನ ಯಃ ಕುಂಭೈಃ ಪುಷ್ಪೈಸ್ತಾವದ್ಭಿರೀಶ್ವರಂ ।
ಪ್ರಣಾಮಾನಾಂ ಶತೇನಾಪಿ ಮುಚ್ಯತೇ ಸರ್ವಪಾತಕೈಃ ॥ ೨೦೨ ॥
ಲಿಂಗಾನಾಂ ಶತಮೇತಚ್ಚ ಶತಮಾರಾಧಕಾಸ್ತಥಾ ।
ನಾಮಾನಿ ಚ ಶತಂ ಸರ್ವದೋಷಸಂನಾಶಕಂ ಸ್ಮೃತಂ ॥ ೨೦೩ ॥

---

೧೯೮. ಯಾವನು ಈ ಶತರುದ್ರೀಯವನ್ನು ಪ್ರತಿದಿನವೂ ಪಠಿಸುವನೋ ಅವನಿಗೆ ದೇವದೇವನಾದ ಶಿವನು ಪ್ರೀತನಾಗಿ ಸಮಸ್ತ ವರಗಳನ್ನೂ ನೀಡುತ್ತಾನೆ.

೧೯೯. ಪುಣ್ಯತಮವೂ, ಮಹಾಫಲವನ್ನು ಕೊಡುವುದೂ ಆದ ಇದನ್ನು ಬಿಟ್ಟರೆ ಬೇರೆ ಯಾವುದೂ ಇಲ್ಲ. ಸರ್ವವೇದರಹಸ್ಯವೂ ಇದರಲ್ಲಿ ಅಡಗಿದೆ. ಇದು ನನಗೆ ಸೂರ್ಯನಿಂದ ಹೇಳಲ್ಪಟ್ಟಿತು.

೨೦೦. ಈ ಶತರುದ್ರೀಯವನ್ನು ಪಠಿಸಿದರೆ, ಮಾತಿನಿಂದ ಮಾಡಿದ ಯಾವ ಪಾಪವಿರುವುದೋ, ಅಥವಾ ಮನಸ್ಸಿನಿಂದ ಸಂಪಾದಿಸಿದ ಪಾಪವು ಯಾವುದುಂಟೋ ಅದೆಲ್ಲವೂ ನಾಶವನ್ನೈದುತ್ತದೆ.

೨೦೧. ರೋಗಾರ್ತನಾದವನು ಶತರುದ್ರೀಯವನ್ನು ಜಪಿಸಿದುದಾದರೆ ರೋಗದಿಂದ ಬಿಡುಗಡೆಹೊಂದುತ್ತಾನೆ; ಬಂಧಿತನಾದವನು ಬಂಧನದಿಂದ ಬಿಡಲ್ಪಡುತ್ತಾನೆ; ಭೀತಿಗೊಂಡಿರುವವನು ಆ ಭಯದಿಂದ ಬಿಡಿಸಲ್ಪಡುತ್ತಾನೆ.

೨೦೨. ಯಾವನು ಈ ನೂರು ನಾಮಗಳನ್ನು ಹೇಳಿಕೊಂಡು ನೂರು ಕುಂಭಗಳಿಂದಲೂ, ನೂರು ಪುಷ್ಪಗಳಿಂದಲೂ, ನೂರು ಪ್ರಣಾಮಗಳಿಂದಲೂ ಈಶ್ವರನನ್ನು ಆರಾಧಿಸುತ್ತಾನೆಯೋ ಅವನು ಸರ್ವಪಾತಕಗಳಿಂದಲೂ ವಿಮೋಚನೆ ಹೊಂದುತ್ತಾನೆ.

೨೦೩. ಈ ನೂರು ಲಿಂಗಗಳು, ಈ ನೂರ್ವರು ಆರಾಧಕರು, ಈ ನೂರು ನಾಮಗಳು—ಇವು ಸರ್ವದೋಷಗಳನ್ನೂ ಸಂಪೂರ್ಣವಾಗಿ ನಾಶಮಾಡುವಂಥವೆಂದು ಭಾವಿಸಲ್ಪಟ್ಟಿವೆ.

ವಿಶೇಷಾದೇಷು ಲಿಂಗೇಷು ಯಃ ಪಠಿಷ್ಯತಿ ಪಂಚಸು ।
ಪಂಚಭಿರ್ವಿಷಯೋದ್ಭೂತೈಃ ಸ ದೋಷೈಃ ಪರಿಮುಚ್ಯತೇ ॥ ೨೦೪ ॥

ನಾರದ ಉವಾಚ :—

ನಿಶಮ್ಯೈವಂ ಪ್ರಾರ್ಥ್ಯತೇಽಪಿ ಗುಪ್ತಕ್ಷೇತ್ರೇ ಮುದಾನ್ವಿತಾಃ ।
ಪಂಚಲಿಂಗಾನ್ಯರ್ಚಯಂತಃ ಶಿವಧ್ಯಾನಪರಾಭವನ್ ॥ ೨೦೫ ॥
ತತೋ ಬಹು ತಿಥೇ ಕಾಲೇ ಪ್ರತ್ಯಕ್ಷೀಭೂಯ ಶಂಕರಃ ।
ಪ್ರಾಹ ತಾನ್ ಮುದಿತೋ ದೇವಸ್ತೇಷಾಂ ಭಕ್ತಿವಿಶೇಷತಃ ॥ ೨೦೬ ॥

ಶಿವ ಉವಾಚ :—

ಬಕೋಲೂಕ ಗೃಧ್ರಕೂರ್ಮಾ ಇಂದ್ರದ್ಯುಮ್ನ ಚ ಪಾರ್ಥಿವ ।
ಸಾರೂಪ್ಯಂ ಮುಕ್ತಿಮಾಪನ್ನಾ ಮಲ್ಲೋಕೇ ನಿವಸಿಷ್ಯಥ ॥ ೨೦೭ ॥
ಲೋಮಶಶ್ಚಾಪಿ ಮಾರ್ಕಂಡೋ ಜೀವನ್ಮುಕ್ತೌ ಭವಿಷ್ಯತಃ ।
ಇತ್ಯುಕ್ತೇ ದೇವದೇವೇನ ಲಿಂಗಂ ಸ್ಥಾಪಿತವಾನ್ ನೃಪಃ ॥ ೨೦೮ ॥
ಇಂದ್ರದ್ಯುಮ್ನೇಶ್ವರಂ ನಾಮ ಮಹಾಕಾಲಾಖ್ಯಮಿತ್ಯುತ ।
ಜ್ಞಾತ್ವಾ ತೀರ್ಥಗುಣಾನ್ ರಾಜಾ ಕೀರ್ತಿಮಿಚ್ಛಂಶ್ಚಿರಂತನೀಂ ॥ ೨೦೯ ॥

---

೨೦೪. ವಿಶೇಷವಾಗಿ ಈ ಐದು ಲಿಂಗಗಳ ಸನ್ನಿಧಿಯಲ್ಲಿ ಯಾವನು ಈ ಶತರುದ್ರೀಯವನ್ನು ಪಠನಮಾಡುವನೋ ಅವನು ಐದು ವಿಷಯಗಳಿಂದಲೂ ಉದ್ಭವಿಸಿರುವ ದೋಷಗಳಿಂದಲೂ ವಿಮೋಚನೆ ಹೊಂದುತ್ತಾನೆ."

೨೦೫–೨೦೬. ನಾರದನು ಹೇಳುತ್ತಾನೆ:— ಈ ರೀತಿ ನುಡಿದ ಸಂವರ್ತನ ಮಾತುಗಳನ್ನು ಕೇಳಿ ಅವರು ಕೂಡ ಪ್ರಾರ್ಥನೆ ಮಾಡಿಕೊಂಡು ಆ ಗುಪ್ತಕ್ಷೇತ್ರದಲ್ಲಿದ್ದ ಪಂಚಲಿಂಗಗಳನ್ನು ಸಂತೋಷದಿಂದ ಅರ್ಚಿಸುತ್ತಾ ಶಿವಧ್ಯಾನಪರರಾದರು. ಬಳಿಕ ಬಹುಕಾಲವು ಕಳೆಯಲಾಗಿ, ಅವರ ಭಕ್ತಿವಿಶೇಷದಿಂದ ಸಂತುಷ್ಟನೂ, ದೇವದೇವನೂ ಆದ ಶಂಕರನು ಪ್ರತ್ಯಕ್ಷನಾಗಿ ಅವರನ್ನು ಕುರಿತು ಈ ರೀತಿ ನುಡಿದನು.

೨೦೭–೨೦೯. ಶಿವನಿಂತೆಂದನು :—"ಎಲೈ ಬಕ, ಉಲೂಕ, ಗೃಧ್ರ, ಕೂರ್ಮರೇ! ಇಂದ್ರದ್ಯುಮ್ನ ಮಹಾರಾಜನೇ! ನೀವು ಸಾರೂಪ್ಯ ಮುಕ್ತಿಯನ್ನು ಪಡೆದವರಾಗಿ ನನ್ನ ಲೋಕದಲ್ಲಿ ನಿವಾಸ ಮಾಡಿರಿ. ಲೋಮಶನೂ, ಮಾರ್ಕಂಡೇಯನೂ, ಜೀವನ್ಮುಕ್ತರಾಗುತ್ತಾರೆ." ಆ ದೇವದೇವನು ಇಂತೆಂದು ನುಡಿಯಲಾಗಿ, ಇಂದ್ರದ್ಯುಮ್ನ ಮಹಾರಾಜನು 'ಇಂದ್ರದ್ಯುಮ್ನೇಶ್ವರ'ವೆಂಬ ಲಿಂಗವೊಂದನ್ನು ಸ್ಥಾಪಿಸಿದನು. ಆ ಲಿಂಗಕ್ಕೆ 'ಮಹಾಕಾಲ'ನೆಂಬ ಹೆಸರೂ ಪ್ರಸಿದ್ಧವಾಗಿರುವುದು. ತೀರ್ಥ ಗುಣಗಳನ್ನು ನೆನೆದು ಆ ರಾಜನು ಶಾಶ್ವತವಾದ ಕೀರ್ತಿಯನ್ನು ಬಯಸುವವನಾಗಿ ಅಲ್ಲಿ ಲಿಂಗವನ್ನು ಸ್ಥಾಪನೆಮಾಡಿದನು.

ತ್ರಿರಮ್ಯಮತುಲಂ ಲಿಂಗಂ ಸಂಸ್ಥಾಪ್ಯೇದಮುವಾಚ ಹ ।
ಯಾವಚ್ಚಂದ್ರಶ್ಚ ಸೂರ್ಯಶ್ಚ ಯಾವತ್ತಿಷ್ಠತಿ ಮೇದಿನೀ ॥ ೨೧೦ ॥
ಇಂದ್ರದ್ಯುಮ್ನೇಶ್ವರಂ ಲಿಂಗಂ ನಂದತಾಚ್ಛಾಶ್ವತೀಃ ಸಮಾಃ ।
ತತಸ್ತಥೇತಿ ಭಗವಾಞ್ಛಿವಃ ಪ್ರೋಚ್ಯಾಬ್ರವೀತ್ಪುನಃ ॥ ೨೧೧ ॥
ಅತ್ರ ಯೋ ನಿಯತಂ ಲಿಂಗಮೈಂದ್ರದ್ಯುಮ್ನಂ ಪ್ರಪೂಜಯೇತ್ ।
ಸ ಗಣೋ ಜಾಯತೇ ನೂನಂ ಮಮ ಲೋಕೇ ನಿವತ್ಸ್ಯತಿ ॥ ೨೧೨ ॥
ಇತ್ಯುಕ್ತ್ವಾ ಸಹ ತೈಶ್ಚೈವ ಪಂಚಭಿಃ ಶಶಿಶೇಖರಃ ।
ರುದ್ರಲೋಕಮಗಾದ್ದೇವಸ್ತೇಽಪಿ ಜಾತಾ ಗಣಾಃ ಪುನಃ ॥ ೨೧೩ ॥
ಏವಂ ಪ್ರಭಾವೋ ರಾಜಾಭೂದಿಂದ್ರದ್ಯುಮ್ನೋ ಮಹೀಪತಿಃ ।
ಯಜತಾ ಯೇನ ವೀರೇಣ ನಿರ್ಮಿತೇಯಂ ಮಹೀನದೀ ॥ ೨೧೪ ॥
ಏವಂ ವಿಧಃ ಸ ಪುಣ್ಯೋಽಯಂ ಮಹೀಸಾಗರಸಂಗಮಃ ।
ಅಭೂತ್ತತೋಽಪಿ ಸಂಕ್ಷೇಪಾತ್ತವ ಪಾರ್ಥ ಪ್ರಕೀರ್ತಿತಃ ॥ ೨೧೫ ॥

---

೨೧೦–೨೧೧. ತ್ರಿರಮ್ಯವಾಗಿ ಎಣೆಯಿಲ್ಲದುದಾದ ಆ ಲಿಂಗವನ್ನು ಸ್ಥಾಪಿಸಿ ಆತನು ಹೀಗೆ ಹೇಳಿದನು :— "ಚಂದ್ರನು ಎಲ್ಲಿಯವರೆಗೆ ಇರುವನೋ, ಸೂರ್ಯನು ಎಲ್ಲಿಯವರೆಗೆ ನೆಲಸಿರುವನೋ, ಭೂಮಿಯು ಎಲ್ಲಿಯವರೆಗೆ ನಿಂತಿರುವುದೋ ಅಲ್ಲಿಯವರೆಗೂ . ಈ ಇಂದ್ರದ್ಯುಮ್ನೇಶ್ವರಲಿಂಗವು ಅನೇಕ ವರ್ಷಗಳ ಕಾಲ ಆನಂದಗೊಂಡಿರಲಿ." ಹೀಗೆಂದು ಇಂದ್ರದ್ಯುಮ್ನಮಹಾರಾಜನು ಕೇಳಿಕೊಳ್ಳಲಾಗಿ, ಶಿವನು "ಹಾಗೆಯೇ ಆಗಲಿ" ಎಂದು ನುಡಿದು ಮತ್ತು ಹೇಳತೊಡಗಿದನು :—

೨೧೨. "ಇಲ್ಲಿ ಯಾವನು ತಪ್ಪದೆ ಕ್ರಮವರಿತು ಇಂದ್ರದ್ಯುಮ್ನೇಶ್ವರ ಲಿಂಗವನ್ನು ಪೂಜಿಸುವನೋ ಅವನು ಶಿವನ ಗಣವಾಗಿ ಜನಿಸುವನು. ಇದು ನಿಶ್ಚಯವು. ಅವನು ನನ್ನ ಲೋಕದಲ್ಲಿಯೇ ವಾಸಮಾಡುವನು.

೨೧೩. ಇಂತೆಂದು ನುಡಿದು, ಆ ಐವರಿಂದಲೂ ಒಡಗೂಡಿದವನಾಗಿ ಆ ಶಶಿಶೇಖರನು ರುದ್ರಲೋಕಕ್ಕೆ ಪ್ರಯಾಣ ಮಾಡಿದನು. ಅವರು ಕೂಡ ಮತ್ತೆ ಶಿವಗಣಗಳಾದರು.

೨೧೪. ಇಂದ್ರದ್ಯುಮ್ನ ಮಹಾರಾಜನು ಇಂಥ ಪ್ರಭಾವವಂತನಾದ ರಾಜನಾಗಿದ್ದನು. ಯಜ್ಞಮಾಡುವವನಾದ ಆ ವೀರನಿಂದ ಈ ಮಹೀನದಿಯು ನಿರ್ಮಿತವಾಯಿತು.

೨೧೫. ಈ ಮಹೀಸಾಗರ ಸಂಗಮವು ಈ ಬಗೆಯಾಗಿ ಪುಣ್ಯಕರವಾಯಿತು. ಎಲೈ ಪಾರ್ಥನೇ! ಅದನ್ನು ನಿನಗೆ ಸಂಕ್ಷೇಪವಾಗಿ ತಿಳಿಸಿದ್ದೇನೆ.

ಸ್ನಾತ್ವಾತ್ರ ಸಂಗಮೇ ಯಶ್ಚ ಇಂದ್ರದ್ಯುಮ್ನೇಶ್ವರಂ ನರಃ ।
ಪೂಜಯೇತ್ತಸ್ಯ ವಾಸಃ ಸ್ಯಾದ್ಯತ್ರೇಶಃ ಪಾರ್ವತೀಪತಿಃ ॥ ೨೧೬ ॥
ಸರ್ವಬಂಧಹರಂ ಲಿಂಗಂ ಗಾಣಾಪತ್ಯಪ್ರದಂ ತ್ವಿದಂ ।
ಯತೋ ಬಂಧಾನ್ವಿಹಾಯೈವ ಸ್ಥಾಪಿತಂ ತೇನ ಫಾಲ್ಗುನ ॥ ೨೧೭ ॥

ಇತೀದಮುಕ್ತಂ ತವ ಪುಣ್ಯಕಾರೀ
ಮಾಹಾತ್ಮ್ಯಮಸ್ಯೋತ್ತಮಸಂಗಮಸ್ಯ ।
ಮಾಹಾತ್ಮ್ಯಮತ್ಯದ್ಭುತಪುಣ್ಯಮಿಂದ್ರ
ದ್ಯುಮ್ನೇಶ್ವರಸ್ಯಾಪಿ ಪ್ರ ಪುಣ್ಯಕಾರೀ ॥ ೨೧೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ಮಹೀಸಾಗರ ಸಂಗಮ ಮಹಾತ್ಮ್ಯ—ಶತರುದ್ರಿಯ ಲಿಂಗ ಮಹಾತ್ಮ್ಯೇಂದ್ರದ್ಯುಮ್ನೇಶ್ವರ ಲಿಂಗ ಮಹಾತ್ಮ್ಯ ವರ್ಣನಂ" ನಾಮ ತ್ರಯೋದಶೋಽಧ್ಯಾಯಃ

---

೨೧೬. ಈ ಸಂಗಮದಲ್ಲಿ ಸ್ನಾನಮಾಡಿ ಯಾವ ಮನುಷ್ಯನು ಇಂದ್ರದ್ಯುಮ್ನೇಶ್ವರನನ್ನು ಪೂಜಿಸುವನೋ, ಅವನಿಗೆ ಪಾರ್ವತೀಪತಿಯಾದ ಪರಮೇಶ್ವರನು ಎಲ್ಲಿರುವನೋ ಅಲ್ಲಿ ವಾಸವುಂಟಾಗುವುದು.

೨೧೭. ಎಲೈ ಫಾಲ್ಗುನನೇ! ಆ ಇಂದ್ರದ್ಯುಮ್ನ ಮಹಾರಾಜನ ಬಂಧನಗಳೆಲ್ಲ ಕಳೆದೊಗೆದಮೇಲೆಯೇ ಇದನ್ನು ಸ್ಥಾಪಿಸಿದನಾದುದರಿಂದ ಈ ಲಿಂಗವು ಸರ್ವ ಬಂಧನಗಳನ್ನೂ ಪರಿಹರಿಸುವಂಥದಾಯಿತು; ಗಣೇಶ್ವರ ಪದವಿಯನ್ನು ಕೊಡುವಂಥದೂ ಆಗಿರುವುದು.

೨೧೮. ಈ ರೀತಿಯಾಗಿ ಉತ್ತಮವಾದ ಈ ಸಂಗಮದ ಪುಣ್ಯಕರವಾದ ಮಾಹಾತ್ಮ್ಯವನ್ನು ನಿನಗೆ ಹೇಳಿದ್ದೇನೆ. ಇಂದ್ರದ್ಯುಮ್ನೇಶ್ವರನ ಅತ್ಯದ್ಭುತವಾದ ಮಾಹಾತ್ಮ್ಯವನ್ನೂ ಕೂಡ ನಿನಗೆ ತಿಳಿಸಿದ್ದೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ಮಹೀಸಾಗರಸಂಗಮ ಮಾಹಾತ್ಮ್ಯ – ಶತರುದ್ರೀಯ ಲಿಂಗಮಾಹಾತ್ಮ್ಯ ಮತ್ತು ಇಂದ್ರದ್ಯುಮ್ನೇಶ್ವರ ಲಿಂಗಮಾಹಾತ್ಮ್ಯಗಳ ವರ್ಣನೆ"ಯೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ದಶೋಽಧ್ಯಾಯಃ

### ಕುಮಾರೇಶ್ವರ ಮಾಹಾತ್ಮ್ಯೇ, ವಜ್ರಾಂಗೇತಿಹಾಸ ವರ್ಣನಂ

ಅರ್ಜುನ ಉವಾಚ :—

ಕುಮಾರನಾಥಮಾಹಾತ್ಮ್ಯಂ ಯತ್ತ್ವಯೋಕ್ತಂ ಕಥಾಂತರೇ ।
ತದಹಂ ಶ್ರೋತುಮಿಚ್ಛಾಮಿ ವಿಸ್ತರೇಣ ಮಹಾಮುನೇ ॥ ೧ ॥

ನಾರದ ಉವಾಚ :—

ತಾರಕಂ ವಿನಿಹತ್ಯೈವ ವಜ್ರಾಂಗತನಯಂ ಪ್ರಭುಃ ।
ಗುಹಃ ಸಂಸ್ಥಾಪಯಾಮಾಸ ಲಿಂಗಮೇತಚ್ಚ ಫಾಲ್ಗುನ ॥ ೨ ॥
ದರ್ಶನಾಚ್ಛ್ರವಣಾದ್ಧ್ಯಾನಾತ್ಪೂಜಯಾ ಶ್ರುತಿವಂದನೈಃ ।
ಸರ್ವಪಾಪಾಪಹಃ ಪಾರ್ಥ ಕುಮಾರೇಶೋ ನ ಸಂಶಯಃ ॥ ೩ ॥

ಅರ್ಜುನ ಉವಾಚ :—

ಅತ್ಯಾಶ್ಚರ್ಯಮಯೀ ರಮ್ಯಾ ಕಥೇಯಂ ಪಾಪನಾಶಿನೀ ।
ವಿಸ್ತರೇಣ ಚ ಮೇ ಬ್ರೂಹಿ ಯಾಥಾತಥ್ಯೇನ ನಾರದ ॥ ೪ ॥

---

### ಕನ್ನಡದ ಅನುವಾದ

#### ಕುಮಾರೇಶ್ವರ ಮಾಹಾತ್ಮ್ಯ — ವಜ್ರಾಂಗೇತಿಹಾಸ ವರ್ಣನ

೧. ಅರ್ಜುನನಿಂತೆಂದನು :—" ಎಲೈ ನಾರದ ಮಹಾಮುನಿಯೇ ! ಬೇರೆ ಕಥೆಯನ್ನು ವಿವರಿಸುವ ಸಂದರ್ಭದಲ್ಲಿ ಕುಮಾರನಾಥನ ಮಾಹಾತ್ಮ್ಯೆಯನ್ನು ನೀವು ಹೇಳಿರುವಿರಷ್ಟೆ. ಅದನ್ನು ವಿಸ್ತಾರವಾಗಿ ಕೇಳಲು ನಾನು ಇಚ್ಛಿಸುತ್ತೇನೆ."

೨. ನಾರದನಿಂತೆಂದನು :—" ಅಯ್ಯಾ ಅರ್ಜುನನೇ ! ವಜ್ರಾಂಗತನಯನಾದ ತಾರಕನನ್ನು ಕೊಂದ ಪ್ರಭುವಾದ ಶ್ರೀ ಗುಹಸ್ವಾಮಿಯು ಈ ಲಿಂಗವನ್ನು ಸ್ಥಾಪನೆಮಾಡಿದನು.

೩. ಕುಮಾರೇಶನು ತನ್ನನ್ನು ದರ್ಶನ ಮಾಡುವುದರಿಂದಲೂ, ತನ್ನ ನಾಮಚಾರಿತ್ರಗಳನ್ನು ಕೇಳುವುದರಿಂದಲೂ, ತನ್ನನ್ನು ಧ್ಯಾನಿಸುವುದರಿಂದಲೂ, ಪೂಜಿಸುವುದರಿಂದಲೂ, ವಂದನೆಯಿಂದಲೂ ಭಕ್ತರ ಸರ್ವ ಪಾಪಗಳನ್ನೂ ಪರಿಹರಿಸುತ್ತಾನೆ. ಇದರಲ್ಲಿ ಸಂಶಯವಿಲ್ಲವು."

೪. ಅರ್ಜುನನಿಂತು ನುಡಿದನು :—" ಎಲೈ ಮುನಿಯೇ ! ಈ ಕಥೆಯು ಅತ್ಯಾಶ್ಚರ್ಯಕರವಾದುದು ; ರಮ್ಯವಾದುದು ; ಪಾಪನಾಶಕರವಾದುದು. ಎಲೈ ನಾರದ ಮಹರ್ಷಿಯೇ ! ಈ ಕಥೆಯನ್ನು ನಡೆದುದು ನಡೆದಂತೆಯೇ ವಿಸ್ತಾರವಾಗಿ ನನಗೆ ತಿಳಿಸಿರಿ."

ವಜ್ರಾಂಗಃ ಕೋಽಪ್ಯಸೌ ದೈತ್ಯಃ ಕಿಂ ಪ್ರಭಾವಶ್ಚ ತಾರಕಃ ।
ಕಥಂ ಸ ನಿಹತಶ್ಚೈವ ಜಾತಶ್ಚೈವ ಕಥಂ ಗುಹಃ ॥ ೫ ॥
ಕಥಂ ಸಂಸ್ಥಾಪಿತಂ ಲಿಂಗಂ ಕುಮಾರೇಶ್ವರ ಸಂಜ್ಞಿತಂ ।
ಕಿಂ ಫಲಂ ಚಾಸ್ಯ ಲಿಂಗಸ್ಯ ಬ್ರೂಹಿ ತದ್ವಿಸ್ತರಾನ್ಮಮ ॥ ೬ ॥

ನಾರದ ಉವಾಚ :—

ಪ್ರಣಿಪತ್ಯ ಕುಮಾರಸ್ಯ ಸೇನಾನ್ಯೇ ಚೇಶ್ವರಾಯ ಚ ।
ಶೃಣು ಚೈಕಮನಾಃ ಪಾರ್ಥ ಕುಮಾರಚರಿತಂ ಮಹತ್ ॥ ೭ ॥
ಮಾನಸೋ ಬ್ರಹ್ಮಣಃ ಪುತ್ರೋ ದಕ್ಷೋ ನಾಮ ಪ್ರಜಾಪತಿಃ ।
ಷಷ್ಟಿಂ ಸೋಽಜನಯತ್ಕನ್ಯಾ ವೀರಿಣ್ಯಾಂ ನಾಮ ಫಾಲ್ಗುನ ॥ ೮ ॥
ದದೌ ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ।
ಸಪ್ತವಿಂಶತಿಂ ಸೋಮಾಯ ಚತಸ್ರೋಽರಿಷ್ಟನೇಮಿನೇ ॥ ೯ ॥
ಭೂತಾಂಗಿರಃ ಕೃಶಾಶ್ವೇಭ್ಯೋ ದ್ವೇ ದ್ವೇ ಚೈವ ದದೌ ಪ್ರಭುಃ ।
ನಾಮಧೇಯಾನ್ಯಮೂಷಾಂ ಚ ಸಪತ್ನೀನಾಂ ಚ ಮೇ ಶೃಣು ॥ ೧೦ ॥
ಯಾಸಾಂ ಪ್ರಸೂತಿಪ್ರಭವಾ ಲೋಕಾ ಆಪೂರಿತಾಸ್ತ್ರಯಃ ।
ಭಾನುರ್ಲಂಬಾ ಕಕುದ್ಭೂಮಿರ್ವಿಶ್ವಾ ಸಾಧ್ಯಾ ಮರುತ್ವತೀ ॥ ೧೧ ॥

---

೫. ವಜ್ರಾಂಗನೆಂಬ ಈ ದೈತ್ಯನು ಯಾರು? ತಾರಕನ ಪ್ರಭಾವವೇನು? ಅವನು ಹೇಗೆ ಕೊಲ್ಲಲ್ಪಟ್ಟನು? ಗುಹನು ಹುಟ್ಟಿದುದೆಂತು?

೬. ಕುಮಾರೇಶ್ವರ ಲಿಂಗವು ಹೇಗೆ ಸ್ಥಾಪಿಸಲ್ಪಟ್ಟಿತು? ಈ ಲಿಂಗದ ಆರಾಧನೆಯಿಂದುಂಟಾಗುವ ಫಲವೇನು? ಅದನ್ನು ವಿಸ್ತಾರವಾಗಿ ನನಗೆ ತಿಳಿಸಿರಿ.''

೭. ನಾರದನಿಂತೆಂದನು :— "ಅಯ್ಯಾ ಪಾರ್ಥ! ಸೇನಾಪತಿಯಾದ ಕುಮಾರನಿಗೂ, ಈಶ್ವರನಿಗೂ ಪ್ರಣಾಮಮಾಡಿ ಮಹತ್ತಾದ ಕುಮಾರಚರಿತ್ರೆಯನ್ನು ಒಂದೇ ಮನಸ್ಸಿನಿಂದ ಕೇಳುವವನಾಗು.

೮. ಎಲೈ ಫಾಲ್ಗುನನೇ! ದಕ್ಷಪ್ರಜಾಪತಿಯು ಬ್ರಹ್ಮನ ಮಾನಸಪುತ್ರನು. ಅವನು ವೀರಿಣಿಯೆಂಬವಳಲ್ಲಿ ಅರುವತ್ತುಮಂದಿ ಕನ್ಯೆಯರನ್ನು ಪಡೆದನು.

೯. ಅವನು ಅವರಲ್ಲಿ ಹತ್ತು ಮಂದಿಯನ್ನು ಧರ್ಮರಾಜನಿಗೆ ಕೊಟ್ಟನು. ಕಶ್ಯಪನಿಗೆ ಹದಿಮೂರನ್ನು ಕೊಟ್ಟನು. ಇಪ್ಪತ್ತೇಳು ಮಂದಿ ಕನ್ಯೆಯರನ್ನು ಸೋಮ (ಚಂದ್ರ)ನಿಗೆ ಕೊಟ್ಟನು. ಅರಿಷ್ಟನೇಮಿಗೆ ನಾಲ್ವರನ್ನು ಕೊಟ್ಟನು.

೧೦–೧೨. ಭೂತ, ಅಂಗಿರಸ ಮತ್ತು ಕೃಶಾಶ್ವ ಈ ಮೂವರಿಗೂ ಇಬ್ಬಿಬ್ಬರಂತೆ ಕನ್ಯೆಯರನ್ನು ಕೊಟ್ಟನು. ಇವರುಗಳ ಮತ್ತು ಆ ದಕ್ಷನ ಪತ್ನಿಯರ ಹೆಸರುಗಳನ್ನು ವಿವರಿಸುವೆನು ಕೇಳು. ಇವರ ಸಂತಾನದಿಂದ ಜನಿಸಿದವರಿಂದಲೇ ಮೂರು ಲೋಕಗಳೂ ತುಂಬಿಹೋಗಿವೆ. ಭಾನು, ಲಂಬಾ, ಕಕುತ್, ಭೂಮಿ, ವಿಶ್ವಾ,

ವಸುರ್ಮುಹೂರ್ತಾ ಸಂಕಲ್ಪಾ ಧರ್ಮಪತ್ನ್ಯಃ ಸುತಾಞ್ಛೃಣು ।
ಭಾನೋಸ್ತು ದೇವ ಋಷಭ ಇಂದ್ರಸೇನಃ ಸುತೋಽಭವತ್ ॥ ೧೨ ॥
ವಿದ್ಯೋತ ಆಸೀಲ್ಲಂಬಾಯಾಂ ತತಶ್ಚ ಸ್ತನಯಿತ್ನವಃ ।
ಕಕುದಃ ಶಕಟಃ ಪುತ್ರಃ ಕೀಕಟಸ್ತನಯೋ ಯತಃ ॥ ೧೩ ॥
ಭುವೋ ದುರ್ಗಸ್ತಥಾ ಸ್ವರ್ಗೋ ನಂದಶ್ಚೈವ ತತೋಽಭವತ್ ।
ವಿಶ್ವೇದೇವಾಶ್ಚ ವಿಶ್ವಾಯಾ ಅಪ್ರಜಾಂಸ್ತಾನ್ ಪ್ರಚಕ್ಷತೇ ॥ ೧೪ ॥
ಸಾಧ್ಯಾ ದ್ವಾದಶ ಸಾಧ್ಯಾಯಾ ಅರ್ಥಸಿದ್ಧಿಸ್ತು ತತ್ಸುತಃ ।
ಮರುತ್ವಾನ್ ಸುಜಯಂತಶ್ಚ ಮರುತ್ವತ್ಯಾ ಬಭೂವತುಃ ॥ ೧೫ ॥
ನರ ನಾರಾಯಣೌ ಪ್ರಾಹುರ್ಯಾತೌ ಜ್ಞಾನವಿದೋ ಜನಾಃ ।
ವಸೋಶ್ಚ ವಸವಶ್ಚಾಷ್ಟೌ ಮುಹೂರ್ತಾಯಾಂ ಮುಹೂರ್ತಕಾಃ ॥ ೧೬ ॥
ಯೇ ವೈ ಫಲಂ ಪ್ರಯಚ್ಛಂತಿ ಭೂತಾನಾಂ ಸ್ವಂ ಸ್ವಕಾಲಜಂ ।
ಸಂಕಲ್ಪಾಯಾಶ್ಚ ಸಂಕಲ್ಪಃ ಕಾಮಃ ಸಂಕಲ್ಪಜಃ ಸುತಃ ॥ ೧೭ ॥

---

ಸಾಧ್ಯಾ, ಮರುತ್ವತೀ, ವಸು, ಮುಹೂರ್ತಾ, ಸಂಕಲ್ಪಾ—ಈ ಹತ್ತುಮಂದಿಯೂ ಧರ್ಮರಾಜನ ಪತ್ನಿಯರು. ಅವರ ಮಕ್ಕಳನ್ನು ಹೇಳುವೆನು ಕೇಳು. ಭಾನುವಿಗೆ ದೇವಶ್ರೇಷ್ಠನಾದ ಇಂದ್ರಸೇನನು ಮಗನಾದನು.

೧೩. ಲಂಬೆಯಲ್ಲಿ ವಿದ್ಯೋತನೆಂಬವನು ಹುಟ್ಟಿದನು. ಅವನಿಂದ ಮೇಘಗಳು ಜನಿಸಿದವು. ಕಕುದಳಿಗೆ ಶಕಟನೆಂಬ ಪುತ್ರನುದಿಸಿದನು. ಕೀಕಟನು ಆ ಶಕಟನ ಮಗನು.

೧೪. ಭೂಮಿಗೆ ದುರ್ಗ, ಸ್ವರ್ಗ, ನಂದ ಎಂಬೀ ಮಕ್ಕಳುದಿಸಿದರು. ವಿಶ್ವೆಯ ಮಕ್ಕಳು ವಿಶ್ವೇದೇವತೆಗಳು. ಅವರು ಮಕ್ಕಳಿಲ್ಲದವರೆಂದು ಹೇಳಲ್ಪಡುತ್ತಾರೆ.

೧೫. ಸಾಧ್ಯೆಗೆ ಹನ್ನೆರಡು ಮಂದಿ ಸಾಧ್ಯರು ಜನಿಸಿದರು. ಅರ್ಥಸಿದ್ಧಿಯು ಆ ಸಾಧ್ಯರಿಗೆ ಮಗನು. ಮರುತ್ವತಿಗೆ ಮರುತ್ವಾನ್ ಮತ್ತು ಸುಜಯಂತ ಎಂಬಿಬ್ಬರು ಪುತ್ರರುದಿಸಿದರು.

೧೬. ಜ್ಞಾನವನ್ನು ಬಲ್ಲವರಾದ ಜನಗಳು ಆ ಇಬ್ಬರನ್ನೂ ನರನಾರಾಯಣರೆಂದು ಹೇಳುತ್ತಾರೆ. ವಸುವಿಗೆ ಅಷ್ಟವಸುಗಳು ಮಕ್ಕಳಾಗಿ ಉದಿಸಿದರು. ಮುಹೂರ್ತೆಗೆ ಮುಹೂರ್ತಗಳೇ ಮಕ್ಕಳು.

೧೭. ಭೂತಗಳಿಗೆ ತಮ್ಮ ತಮ್ಮ ಕಾಲದಲ್ಲಿ ಉಂಟಾಗುವ ಫಲಗಳನ್ನು ನೀಡುವವರು ಈ ಮುಹೂರ್ತಗಳೇ. ಸಂಕಲ್ಪೆಯಲ್ಲಿ ಸಂಕಲ್ಪನೆಂಬವನು ಹುಟ್ಟಿದನು. ಸಂಕಲ್ಪನಿಂದ ಹುಟ್ಟಿದ ಮಗನೇ ಕಾಮನು.

ಸುರೂಪಾಽಸೂತ ತನಯಾನ್ ರುದ್ರಾನೇಕಾದಶೈವ ತು ।
ಕಪಾಲೀ ಪಿಂಗಲೋ ಭೀಮೋ ವಿರೂಪಾಕ್ಷೋ ವಿಲೋಹಿತಃ ॥ ೧೮ ॥
ಅಜಕಃ ಶಾಸನಃ ಶಾಸ್ತಾ ಶಂಭುಶ್ಚೇಶೋ ಭವಸ್ತಥಾ ।
ರುದ್ರಸ್ಯ ಪಾರ್ಷದಾಶ್ಚಾನ್ಯೇ ವಿರೂಪಾಯಾಃ ಸುತಸ್ಮೃತಾಃ ॥ ೧೯ ॥
ಪ್ರಜಾಪತೇರಂಗಿರಸಃ ಸ್ವಧಾ ಪತ್ನೀ ಪಿತೄನಥ ।
ಜಜ್ಞೇ ಸತೀ ತಥಾ ಪುತ್ರಮಥರ್ವಾಂಗಿರಸಂ ಪ್ರಭುಂ ॥ ೨೦ ॥
ಕೃಶಾಶ್ವಸ್ಯ ಚ ದ್ವೇ ಭಾರ್ಯೇ ಅರ್ಚಿಶ್ಚ ಧಿಷಣಾ ತಥಾ ।
ಅಸ್ತ್ರಗ್ರಾಮೋ ಯಯೋಃ ಪುತ್ರಃ ಸಸಂಹಾರಃ ಪ್ರಕೀರ್ತಿತಃ ॥ ೨೧ ॥
ಪತಂಗೀ ಯಾಮಿನೀ ತಾಮ್ರಾ ತಿಮಿಶ್ಚಾರಿಷ್ಟನೇಮಿನಃ ।
ಪತಂಗ್ಯಸೂತ ಪತಗಾನ್ ಯಾಮಿನೀ ಶಲಭಾನಥ ॥ ೨೨ ॥
ತಾಮ್ರಾಯಾಃ ಶ್ಯೇನಗೃಧ್ರಾದ್ಯಾಸ್ತಿಮೇರ್ಯಾದೋಗಣಾಸ್ತಥಾ ।
ಅಥ ಕಶ್ಯಪಪತ್ನೀನಾಂ ಯತ್ಪ್ರಸೂತಮಿದಂ ಜಗತ್ ॥ ೨೩ ॥
ಶೃಣು ನಾಮಾನಿ ಲೋಕಾನಾಂ ಮಾತೄಣಾಂ ಶಂಕರಾಣಿ ಚ ।
ಅದಿತಿರ್ದಿತಿರ್ದನುಃ ಸಿಂಹೀ ದನಾಯೂ ಸುರಭಿಸ್ತಥಾ ॥ ೨೪ ॥

---

೧೮–೨೦. ಸುರೂಪೆಯು ಹನ್ನೊಂದು ಮಂದಿ ರುದ್ರರನ್ನು ಹಡೆದಳು :— ಕಪಾಲಿ, ಪಿಂಗಲ, ಭೀಮ, ವಿರೂಪಾಕ್ಷ, ವಿಲೋಹಿತ, ಅಜಕ, ಶಾಸಕ, ಶಾಸ್ತ್ರ, ಶಂಭು, ಈಶ, ಭವ. ರುದ್ರನ ಪಾರ್ಷದರಾದ ಇತರರು ವಿರೂಪೆಯ ಮಕ್ಕಳೆಂದು ಹೇಳಲ್ಪಡುತ್ತಾರೆ. ಅಂಗಿರಸ ಪ್ರಜಾಪತಿಗೆ ಸ್ವಧಾ ಎಂಬವಳು ಪತ್ನಿಯು. ಅವಳು ಪಿತೃದೇವತೆಗಳನ್ನು ಹಡೆದಳು. ಹಾಗೆಯೇ, ಸತೀ ಎಂಬವಳು ಪ್ರಭುವಾದ ಅಥರ್ವಾಂಗಿರಸನನ್ನು ಹಡೆದಳು.

೨೧. ಕೃಶಾಶ್ವನಿಗೆ ಇಬ್ಬರು ಭಾರ್ಯೆಯರು; ಅರ್ಚಿ ಮತ್ತು ಧಿಷಣಾ ಎಂದು ಇವರ ಹೆಸರು. ಸಂಹಾರದಿಂದೊಡಗೂಡಿದ ಅಸ್ತ್ರಗ್ರಾಮವೇ ಅವರ ಮಗನು.

೨೨. ಪತಂಗೀ, ಯಾಮಿನೀ, ತಾಮ್ರಾ, ತಿಮಿ — ಈ ನಾಲ್ವರು ಅರಿಷ್ಟನೇಮಿಯ ಮಕ್ಕಳು. ಪತಂಗಿಯು ಪತಂಗಗಳನ್ನು ಹೆತ್ತಳು. ಯಾಮಿನಿಯು ಶಲಭಗಳಿಗೆ ಜನ್ಮವಿತ್ತಳು.

೨೩. ತಾಮ್ರೆಯಲ್ಲಿ ಶ್ಯೇನ ಗೃಧ್ರಾದಿಗಳು ಜನಿಸಿದವು. ತಿಮಿಗೆ ಯಾದೋಗಣಗಳು ಮಕ್ಕಳಾದವು. ಇನ್ನು ಕಶ್ಯಪಪತ್ನಿಯರ ಹೆಸರುಗಳನ್ನು ಹೇಳುವೆನು ಕೇಳು. ಈ ಲೋಕವೆಲ್ಲ ಈ ಕಶ್ಯಪಪತ್ನಿಯರ ಸಂತಾನವೇ.

೨೪–೨೫. ಲೋಕಮಾತೃಗಳಿವರು ; ಇವರ ನಾಮಗಳು ಮಂಗಳಕರಗಳು. ಇವನ್ನು ಕೇಳು :— ಅದಿತಿ, ದಿತಿ, ದನು, ಸಿಂಹೀ, ದನ, ಆಯು, ಸುರಭಿ,

8

ಅರಿಷ್ಟಾ ವಿನತಾ ಗ್ರಾವಾ ದಯಾ ಕ್ರೋಧವಶಾ ಇರಾ ।
ಕದ್ರುರ್ಮುನಿಶ್ಚ ತೇ ಚೋಭೇ ಮಾತರಸ್ತಾಃ ಪ್ರಕೀರ್ತಿತಾಃ ॥ ೨೫ ॥
ಆದಿತ್ಯಾಶ್ಚಾದಿತೇಃ ಪುತ್ರಾ ದಿತೇರ್ದೈತ್ಯಾಃ ಪ್ರಕೀರ್ತಿತಾಃ ।
ದನೋಶ್ಚ ದಾನವಾಃ ಪ್ರೋಕ್ತಾ ರಾಹುಃ ಸಿಂಹೀಸುತೋ ಗ್ರಹಃ ॥೨೬॥
ದನಾಯುಷಸ್ತಥಾ ಜಾತೋ ದನಾಯುಶ್ಚ ಗಣೋ ಬಲೀ ।
ಗಾವಶ್ಚ ಸುರಭೇರ್ಜಾತಾರಿಷ್ಟಾ ಪುತ್ರಾ ಯುಗಂಧರಾಃ ॥ ೨೭ ॥
ವಿನತಾಽಸೂತ ಅರುಣಂ ಗರುಡಂ ಚ ಮಹಾಬಲಂ ।
ಗ್ರಾವಾಯಾಃ ಶ್ವಾಪದಾಃ ಪುತ್ರಾ ಗಣಃ ಕ್ರೋಧವಶಸ್ತಥಾ ॥ ೨೮ ॥
ಜಾತಃ ಕ್ರೋಧವಶಾಯಾಶ್ಚ ಇರಾಯಾ ಭೂರುಹಾಃ ಸ್ಮೃತಾಃ ।
ಕದ್ರೂಸುತಾಃ ಸ್ಮೃತಾ ನಾಗಾ ಮುನೇರಪ್ಸರಸಾಂ ಗಣಾಃ ॥ ೨೯ ॥
ತತ್ರ ದ್ವೌ ತನಯೌ ಯೌ ಚ ದಿತೇಸ್ತೌ ವಿಷ್ಣುನಾ ಹತೌ ।
ಹಿರಣ್ಯಕಶಿಪುರ್ವೀರೋ ಹಿರಣ್ಯಾಕ್ಷಸ್ತಥೋಽಪರಃ ॥ ೩೦ ॥
ತತೋ ನಿಹತಪುತ್ರಾ ಸಾ ದಿತಿರಾರಾಧ್ಯ ಕಶ್ಯಪಂ ।
ಅಯಾಚತ ವರಂ ದೇವೀ ಪುತ್ರಮನ್ಯಂ ಮಹಾಬಲಂ ॥ ೩೧ ॥

---

ಅರಿಷ್ಟಾ, ವಿನತಾ, ಗ್ರಾವಾ, ದಯಾ, ಕ್ರೋಧವಶಾ, ಇರಾ, ಕದ್ರು ಮತ್ತು ಮುನಿ— ಇವರು ಮಾತೃದೇವತೆಗಳೆಂದು ಕೀರ್ತಿಸಲ್ಪಡುತ್ತಾರೆ.

೨೬. ಆದಿತ್ಯರು ಅದಿತಿಯ ಮಕ್ಕಳು. ದಿತಿಯ ಮಕ್ಕಳು ದೈತ್ಯರೆಂದು ಪ್ರಸಿದ್ಧರಾಗಿದ್ದಾರೆ. ದನುವಿನ ಮಕ್ಕಳು ದಾನವರೆನಿಸುತ್ತಾರೆ. ರಾಹು ಗ್ರಹವು ಸಿಂಹಿಯ ಮಗನು.

೨೭–೨೯. ದನಾಯುವಿಗೆ ಬಲಿಷ್ಠನಾದ ದನಾಯುವೆಂಬ ಗಣಪುರುಷನು ಹುಟ್ಟಿದನು. ಗೋವುಗಳು ಸುರಭಿಯಲ್ಲಿ ಹುಟ್ಟಿದವು. ಅರಿಷ್ಟೆಯ ಪುತ್ರರೇ ಯುಗಂಧರರು. ವಿನತೆಯು ಅರುಣನನ್ನೂ, ಮಹಾಬಲಶಾಲಿಯಾದ ಗರುಡನನ್ನೂ ಹಡೆದಳು. ಗ್ರಾವೆಗೆ ಶ್ವಾಪದಗಳು ಹುಲಿ, ಸಿಂಹ ಮುಂತಾದ ಕ್ರೂರಮೃಗಗಳು ಪುತ್ರರು. ಕ್ರೋಧವಶವೆಂಬ ಗಣವು ಕ್ರೋಧವಶೆಯಲ್ಲಿ ಹುಟ್ಟಿತು. ಇರೆಯಲ್ಲಿ ಭೂರುಹಗಳು (ಮರಗಳು) ಹುಟ್ಟಿದವು. ಕದ್ರುವಿನ ಮಕ್ಕಳು ನಾಗರು. ಮುನಿಯ ಮಕ್ಕಳು ಅಪ್ಸರೋಗಣಗಳು.

೩೦. ಇವರಲ್ಲಿ ದಿತಿಯ ಮಕ್ಕಳಿಬ್ಬರೂ ವಿಷ್ಣುವಿನಿಂದ ಹತರಾದರು. ಇವರೇ ವೀರರಾದ ಹಿರಣ್ಯಕಶಿಪು ಹಿರಣ್ಯಾಕ್ಷರು.

೩೧–೩೩. ಬಳಿಕ ಮಕ್ಕಳನ್ನು ಕಳೆದುಕೊಂಡ ಆ ದಿತಿದೇವಿಯು ಕಶ್ಯಪನನ್ನು ಆರಾಧಿಸಿ ಮಹಾಬಲಶಾಲಿಯೂ, ಯುದ್ಧದಲ್ಲಿ ಶಕ್ರ (ಇಂದ್ರ)ನನ್ನು ಕೊಲ್ಲುವಂಥವನೂ ಆದ ಮತ್ತೊಬ್ಬ ಮಗನನ್ನು ಕೊಡಬೇಕೆಂದು ವರವನ್ನು

ಸಮರೇ ಶಕ್ರಹಂತಾರಂ ಸ ತಸ್ಯಾ ಅದದಾತ್ ಪ್ರಭುಃ ।
ನಿಯಮೋ ಚಾಪಿ ವರ್ತಸ್ವ ವರ್ಷಾಣಾಂ ಚ ಸಹಸ್ರಕಂ ॥ ೩೨ ॥
ಇತ್ಯುಕ್ತ್ವಾ ಸಾ ತಥಾ ಚಕ್ರೇ ಪುಷ್ಕರಸ್ಥಾ ಸಮಾಹಿತಾ ।
ವರ್ತಂತ್ಯಾ ನಿಯಮೋ ತಸ್ಯಾಃ ಸಹಸ್ರಾಕ್ಷಃ ಸಮಾಹಿತಃ ॥ ೩೩ ॥
ಉಪಾಸಾಮಾಚರದ್ಭಕ್ತ್ಯಾ ಸಾ ಚೈನಮನ್ವಮನ್ಯತ ।
ದಶವತ್ಸರಶೇಷಸ್ಯ ಸಹಸ್ರಸ್ಯ ತದಾ ದಿತಿಃ ॥ ೩೪ ॥
ಉವಾಚ ಶಕ್ರಂ ಸುಪ್ರೀತಾ ಭಕ್ತ್ಯಾ ಶಕ್ರಸ್ಯ ತೋಷಿತಾ ।

ದಿತಿರುವಾಚ :—

ಅತ್ತ್ರೋತ್ತೀರ್ಣವ್ರತಪ್ರಾಯಾಂ ವಿದ್ಧಿ ಮಾಂ ದೇವಸತ್ತಮ ॥ ೩೫ ॥
ಭವಿಷ್ಯತಿ ತವ ಭ್ರಾತಾ ತೇನ ಸಾರ್ಧಮಿಮಾಂ ಶ್ರಿಯಂ ।
ಭೋಕ್ಷ್ಯಸೇ ತ್ವಂ ಯಥಾನ್ಯಾಯಂ ತ್ರೈಲೋಕ್ಯಹತಕಂಟಕಂ ॥ ೩೬ ॥
ಇತ್ಯುಕ್ತ್ವಾ ನಿದ್ರಯಾವಿಷ್ಟಾ ಚರಣಾಕ್ರಾಂತಮೂರ್ಧಜಾ ।
ದಿವಾ ಸುಪ್ತಾ ದಿತಿರ್ದೇವೀ ಭಾವ್ಯರ್ಥಬಲನೋದಿತಾ ॥ ೩೭ ॥

---

ಬೇಡಿದಳು. ಆ ಪ್ರಭುವು ಅವಳಿಗೆ ಆ ವರವನ್ನೂ ಕೊಟ್ಟನು. "ಒಂದು ಸಹಸ್ರ ವರ್ಷಗಳವರೆಗೂ ನಿಯಮದಿಂದಿರು" ಎಂದು ಅವಳಿಗೆ ತಿಳಿಸಿದನು. ಆಕೆಯು ಹಾಗೆಯೇ ಆ ವ್ರತವನ್ನು ಮಾಡಿದಳು. ಪುಷ್ಕರಕ್ಷೇತ್ರದಲ್ಲಿ ನೆಲಸಿ ಆಕೆಯು ಮನಸ್ಸಮಾಧಾನದಿಂದಿದ್ದಳು. ನಿಯಮದಿಂದಿದ್ದ ಆಕೆಯಲ್ಲಿ ಸಹಸ್ರಾಕ್ಷನಾದ ಇಂದ್ರನು ಮನಸ್ಸಿಟ್ಟು ಭಕ್ತಿಯಿಂದ ಶುಶ್ರೂಷೆ ಮಾಡುತ್ತಿದ್ದನು. ಆಕೆಯೂ ಸಹ ಅವನ ಶುಶ್ರೂಷೆಯನ್ನು ಒಪ್ಪಿದಳು. ಒಂದು ಸಾವಿರ ವರ್ಷಗಳು ತುಂಬಲು ಹತ್ತು ವರ್ಷಗಳು ಉಳಿದಿರಲಾಗಿ ದಿತಿಯು, ಇಂದ್ರನು ತನ್ನಲ್ಲಿ ತೋರಿಸುತ್ತಿದ್ದ ಭಕ್ತಿಯಿಂದ ಪರಮಪ್ರೀತಳಾಗಿ ಆತನನ್ನು ಕುರಿತು ಹೀಗೆ ಹೇಳಿದಳು. ದಿತಿಯಿಂತೆಂದಳು :—"ಎಲೈ ದೇವಶ್ರೇಷ್ಠನೇ! ಇನ್ನೇನು ನನ್ನ ವ್ರತವು ಮುಗಿಯುತ್ತ ಬಂದಿತು. ವ್ರತವನ್ನು ವಿಧಿಪ್ರಕಾರ ಮುಗಿಸಿರುವೆನೆಂದೇ ಹೇಳಬಹುದು.

೩೬. ನಿನಗೆ ಒಬ್ಬ ತಮ್ಮನು ಹುಟ್ಟುತ್ತಾನೆ. ಅವನೊಡಗೂಡಿ ನೀನು ಈ ಸಂಪತ್ತನ್ನೆಲ್ಲ ನ್ಯಾಯಕ್ಕನುಸಾರವಾಗಿ ಅನುಭವಿಸು. ಅವನೊಡಗೂಡಿದ ನಿನಗೆ ಮೂರು ಲೋಕದಲ್ಲಿಯೂ ಯಾವುದೊಂದು ಕಂಟಕವೂ ಉಳಿದಿರುವುದಿಲ್ಲ."

೩೭. ಹೀಗೆಂದು ನುಡಿದು, ಆ ದಿತಿದೇವಿಯು ಭವಿಷ್ಯದರ್ಥದಿಂದ ಪ್ರೇರಿಸಲ್ಪಟ್ಟು ನಿದ್ರೆಗೆ ವಶಳಾಗಿ, ತಲೆಗೂದಲು ಕಾಲಮೇಲೆ ಬೀಳುತ್ತಿರಲು ಹಗಲುಹೊತ್ತೇ ಮಲಗಿಬಿಟ್ಟಳು.

ತತ್ತು ರಂಧ್ರಮವೇಕ್ಷ್ಯೈವ ಯೋಗಮೂರ್ತಿಸ್ತದಾವಿಶತ್ ।
ಜಠರಸ್ಥಂ ದಿತೇರ್ಗರ್ಭಂ ಚಕ್ರೇ ವಜ್ರೇಣ ಸಪ್ತಧಾ ॥ ೩೮ ॥
ಏಕೈಕಂ ಚ ಪುನಃ ಖಂಡಂ ಚಕಾರ ಮಘವಾ ತತಃ ।
ಸಪ್ತಧಾ ಸಪ್ತಧಾ ಕೋಪಾದುದ್ಬುಧ್ಯ ಚ ತತೋ ದಿತಿಃ ॥ ೩೯ ॥
ನ ಹಂತವ್ಯೋ ನ ಹಂತವ್ಯ ಇತಿ ಸಾ ಶಕ್ರಮಬ್ರವೀತ್ ।
ವಜ್ರೇಣ ಕೃತ್ತಮಾನಾನಾಂ ಬುದ್ಧ್ವಾ ಸಾ ರೋದನೇನ ಚ ॥ ೪೦ ॥
ತತಃ ಶಕ್ರಶ್ಚ ಮಾ ರೋದೀರಿತಿ ತಾಂಸ್ತಾನ್ಯಥಾಽವದತ್ ।
ನಿರ್ಗತ್ಯ ಜಠರಾತ್ತಸ್ಯಾಸ್ತತಃ ಪ್ರಾಂಜಲಿರಗ್ರತಃ ॥ ೪೧ ॥
ಉವಾಚ ವಾಕ್ಯಂ ಚಾತ್ರಸ್ತೋ ಮಾತರಂ ರೋಷಪೂರಿತಾಂ ।
ದಿವಾಸ್ವಾಪಂ ಕೃಥಾ ಮಾತಃ ಪಾದಾಕ್ರಾಂತ ಶಿರೋರುಹಾ ॥ ೪೨ ॥
ಸುಪ್ತಾಥ ಸುಚಿರಂ ವಾತೇ ಭಿನ್ನೋ ಗರ್ಭೋ ಮಯಾ ತವ ।
ಕೃತಾ ಏಕೋನಪಂಚಾಶದ್ಭಾಗಾ ವಜ್ರೇಣ ತೇ ಸುತಾಃ ॥ ೪೩ ॥
ಸತ್ಯಂ ಭವತು ತೇ ವಾಕ್ಯಂ ಸಾರ್ಧಂ ಭೋಕ್ಷ್ಯಾಮಿ ತೈಃ ಶ್ರಿಯಂ ।
ದಾಸ್ಯಾಮಿ ತೇಷಾಂ ಸ್ಥಾನಾನಿ ದಿವಿ ಯಾವದಹಂ ದಿತೇ ॥ ೪೪ ॥

---

೩೮. ಅವಕಾಶವನ್ನೇ ಹುಡುಕುತ್ತಿದ್ದ ಆ ಇಂದ್ರನು ಆ ಸಂದರ್ಭವನ್ನು ಕಂಡಕೂಡಲೇ ಯೋಗಮೂರ್ತಿಯಾಗಿ ದಿತಿಯ ಹೊಟ್ಟೆಯೊಳಗೆ ಪ್ರವೇಶಿಸಿ ಆಕೆಯ ಗರ್ಭವನ್ನು ವಜ್ರಾಯುಧದಿಂದ ಏಳು ತುಂಡಾಗಿ ಕತ್ತರಿಸಿದನು.

೩೯. ಬಳಿಕಲವನು ಕೋಪದಿಂದ ಆ ಒಂದೊಂದು ತುಂಡನ್ನೂ ಮತ್ತೆ ಏಳೇಳು ತುಂಡುಗಳಾಗಿ ಖಂಡಿಸಿದನು. ಆಮೇಲೆ ದಿತಿಯು ವಜ್ರಾಯುಧದಿಂದ ಕತ್ತರಿಸಲ್ಪಡುತ್ತಿದ್ದ ಆ ಗರ್ಭಖಂಡಗಳ ರೋದನದಿಂದ ಎಚ್ಚತ್ತಳು.

೪೦–೪೪. ಎಚ್ಚತ್ತು "ಕೊಲ್ಲಬೇಡ ಕೊಲ್ಲಬೇಡ" ಎಂದು ಶಕ್ರನನ್ನು ಕುರಿತು ನುಡಿದಳು. ಬಳಿಕ ಶಕ್ರನೂ ಕೂಡ ಗರ್ಭಖಂಡಗಳಲ್ಲಿ ಒಂದೊಂದಕ್ಕೂ (ಮಾರೋದೀಃ) ಅಳಬೇಡ ಎಂದು ಹೇಳಿದನು. ಆಮೇಲೆ ಆಕೆಯ ಜಠರದಿಂದ ಹೊರಬಂದು ಕೈಮುಗಿದುಕೊಂಡು ಎದುರಿಗೆ ನಿಂತುಕೊಂಡು ಸ್ವಲ್ಪವೂ ಹೆದರದೆ ರೋಷಪೂರಿತಳಾದ ಆ ತಾಯಿಗೆ ಇಂತೆಂದನು :—"ಅಮ್ಮಾ, ತಲೆಗೂದಲು ಕಾಲಿಗೆ ಸೋಕುತ್ತಿರುವಹಾಗೆ ನೀನು ಹಗಲುನಿದ್ದೆ ಮಾಡಿದೆ. ಹಾಗೆಯೇ ಗಾಳಿಯಲ್ಲಿ ಬಹಳಹೊತ್ತು ನೀನು ನಿದ್ದೆಮಾಡುತ್ತಿದ್ದೆ. ನಿನ್ನ ಗರ್ಭವು ನನ್ನಿಂದಲೇ ನಲವತ್ತೊಂಬತ್ತು ಭಾಗಗಳಾಗಿ ಭೇದಿಸಲ್ಪಟ್ಟಿತು. ನಿನ್ನ ಆ ನಲವತ್ತೊಂಬತ್ತು ಮಂದಿ ಮಕ್ಕಳನ್ನೂ ವಜ್ರಾಯುಧದಿಂದ ಭಾಗಿಸಿದೆನು. ನಿನ್ನ ಮಾತು ಸತ್ಯವಾಗಲಿ; ಅವರೊಡಗೂಡಿ ನಾನು ಸಂಪತ್ತನ್ನು ಅನುಭವಿಸುತ್ತೇನೆ. ಅಮ್ಮಾ ದಿತೀದೇವಿ! ನಾನಿರುವವರೆಗೂ ಅವರಿಗೆ ಸ್ವರ್ಗದಲ್ಲಿ ಸ್ಥಾನಗಳನ್ನು ಕೊಡುತ್ತೇನೆ.

ಮಾರೋದೀರಿತಿ ಮೇ ಪ್ರೋಕ್ತಾಃ ಖ್ಯಾತಾಶ್ಚ ಮರುತಸ್ತ್ವಿತಿ ।
ಇತ್ಯುಕ್ತಾ ಸಾ ಚ ಸವ್ರೀಡಾ ದಿತಿರ್ಜಾತಾ ನಿರುತ್ತರಾ ॥ ೪೫ ॥
ಸಾರ್ಧಂ ತೈರ್ಗತವಾನಿಂದ್ರೋ ದಿಗಂತೇ ವಾಯವಃ ಸ್ಮೃತಾಃ ।
ತತಃ ಪುನಶ್ಚ ಭರ್ತಾರಂ ದಿತಿಃ ಪ್ರೋವಾಚ ದುಃಖಿತಾ ॥ ೪೬ ॥
ಪುತ್ರಂ ಮೇ ಭಗವನ್ ದೇಹಿ ಶಕ್ರಹಂತಾರಮೂರ್ಜಿತಂ ।
ಯೋ ನಾಸ್ತ್ರಶಸ್ತ್ರೈರ್ವಧ್ಯತ್ವಂ ಗಚ್ಛೇತ್ತ್ರಿದಿವವಾಸಿನಾಂ ॥ ೪೭ ॥
ನ ದದಾಸ್ಯುತ್ತರಂ ವಿದ್ಧಿ ಮೃತಾಮೇವ ಪ್ರಜಾಪತೇ ।
ಇತ್ಯುಕ್ತಃ ಸ ತದೋವಾಚ ತಾಂ ಪತ್ನೀಮತಿದುಃಖಿತಾಂ ॥ ೪೮ ॥
ದಶವರ್ಷಸಹಸ್ರಾಣಿ ತಪೋನಿಷ್ಠಾ ತು ತಪ್ಸ್ಯಸೇ ।
ವಜ್ರಸಾರಮಯೈರಂಗೈರಚ್ಛೇದ್ಯೈರಾಯಸೈರ್ದೃಢೈಃ ॥ ೪೯ ॥
ವಜ್ರಾಂಗೋ ನಾಮ ಪುತ್ರಸ್ತೇ ಭವಿತಾ ಧರ್ಮವತ್ಸಲಃ ।
ಸಾ ತು ಲಬ್ಧವರಾ ದೇವೀ ಜಗಾಮ ತಪಸೇ ವನಂ ॥ ೫೦ ॥

---

೪೫. ಅವರಿಗೆ ನಾನು 'ಮಾರೋದೀಃ' (ಅಳಬೇಡಿ) ಎಂದು ಹೇಳಿದೆನು. ಆದುದರಿಂದ ಅವರು ಮರುತರೆಂದು ಪ್ರಸಿದ್ಧರಾಗುವರು." ಇಂದ್ರನು ಹೀಗೆ ಹೇಳಲು ದಿತಿಯು ನಾಚಿ ನಿರುತ್ತರಳಾದಳು.

೪೬. ತರುವಾಯ ಇಂದ್ರನು ಅವರನ್ನು ಜೊತೆಗೊಂಡು ತನ್ನ ಲೋಕಕ್ಕೆ ಹೊರಟುಹೋದನು. ಅವರು ವಾಯುಗಳೆಂದು ಹೆಸರುಹೊಂದಿದರು. ಬಳಿಕ ದಿತಿಯು ದುಃಖಿತಳಾಗಿ ಮತ್ತೆ ಗಂಡನ ಬಳಿ ಹೋಗಿ ಇಂತೆಂದಳು:—

೪೭. "ಭಗವನ್! ಶಕ್ರನನ್ನು ಕೊಲ್ಲುವಂಥ ಊರ್ಜಿತನಾದ ಒಬ್ಬ ಮಗನನ್ನು ನನಗೆ ನೀಡು; ಸ್ವರ್ಗವಾಸಿಗಳ ಅಸ್ತ್ರಶಸ್ತ್ರಗಳಿಂದ ಅವನಿಗೆ ವಧ್ಯತ್ವ ವುಂಟಾಗದಿರಲಿ.

೪೮. ಎಲೈ ಪ್ರಜಾಪತಿಯೇ! ಅಂಥ ಮಗನನ್ನು ಕೊಡುವುದಿಲ್ಲವಾದರೆ ನನ್ನನ್ನು ಸತ್ತವಳೆಂದೇ ಭಾವಿಸು." ಹೀಗೆ ಪ್ರಾರ್ಥಿಸಲ್ಪಟ್ಟ ಆತನು ಅತಿ ದುಃಖಿತಳಾದ ಆ ಪತ್ನಿಯನ್ನು ಕುರಿತು ಹೀಗೆಂದನು:—

೪೯–೫೦. "ಹತ್ತುಸಾವಿರ ವರ್ಷಗಳಕಾಲ ತಪಸ್ಸಿನಲ್ಲಿ ನಿಂತು ಕಷ್ಟತರವಾದ ತಪಸ್ಸನ್ನು ಮಾಡಿದ ಪಕ್ಷದಲ್ಲಿ, ವಜ್ರಸಾರಮಯವಾದ ಅಂಗಗಳಿಂದ ಕೂಡಿ ಅಚ್ಛೇದ್ಯವಾಗಿಯೂ ಇರುವ ದೃಢವಾದ ಉಕ್ಕಿನ ಅಂಗಿಗಳಿಂದ ಕೂಡಿದ 'ವಜ್ರಾಂಗ'ನೆಂಬ ಧರ್ಮವತ್ಸಲನಾದ ಮಗನು ನಿನಗೆ ಉಂಟಾಗುವನು" ಎಂದು ಅನುಗ್ರಹಿಸಿದನು. ಆ ದೇವಿಯು ಈ ವರವನ್ನು ಪಡೆದವಳಾಗಿ ತಪಸ್ಸಿಗಾಗಿ ವನಕ್ಕೆ ಹೊರಟುಹೋದಳು.

ದಶವರ್ಷಸಹಸ್ರಾಣಿ ತಪೋ ಘೋರಂ ಸಮಾಚರತ್ ।
ತಪಸೋಽಂತೇ ಭಗವತೀ ಜನಯಾಮಾಸ ದುರ್ಜಯಂ ॥ ೩೧ ॥
ಪುತ್ರಮಪ್ರತಿಕರ್ಮಾಣಮಜೇಯಂ ವಜ್ರದುಶ್ಛಿದಂ ।
ಸ ಜಾತ ಮಾತ್ರ ಏವಾಭೂತ್ ಸರ್ವಶಾಸ್ತ್ರಾರ್ಥಪಾರಗಃ ॥ ೩೨ ॥
ಉವಾಚ ಮಾತರಂ ಭಕ್ತ್ಯಾ ಮಾತಃ ಕಿಂ ಕರವಾಣ್ಯಹಂ ।
ತಮುವಾಚ ತತೋ ಹೃಷ್ಟಾ ದಿತಿರ್ದೈತ್ಯಾಧಿಪಂ ಸುತಂ ॥ ೩೩ ॥
ಬಹವೋ ಮೇ ಹತಾಃ ಪುತ್ರಾಃ ಸಹಸ್ರಾಕ್ಷೇಣ ಪುತ್ರಕ ।
ತೇಷಾಮಪಚಿತಿಂ ಕರ್ತುಮಿಚ್ಛೇ ಶಕ್ರವಧಾದಹಂ ॥ ೩೪ ॥
ಬಾಢಮಿತ್ಯೇವ ಸ ಪ್ರೋಚ್ಯ ಜಗಾಮ ತ್ರಿದಿವಂ ಬಲೀ
ಸಸೈನ್ಯಂ ಸಮರೇ ಶಕ್ರಂ ಸ ಚ ಬಾಹ್ವಾಯುಧೋಽಜಯತ್ ॥ ೩೫ ॥
ಪಾದೇನಾಕೃಷ್ಯ ದೇವೇಂದ್ರಂ ಸಿಂಹಃ ಕ್ಷುದ್ರಮೃಗಂ ಯಥಾ ।
ಮಾತುರಂತಿಕಮಾಗಚ್ಛದ್ಯಾಚಮಾನಂ ಭಯಾತುರಂ ॥ ೩೬ ॥

---

೩೧-೩೨. ತರುವಾಯ ಆಕೆಯು ಹತ್ತುಸಾವಿರ ವರ್ಷಗಳವರೆಗೆ ಘೋರ ತಪಸ್ಸನ್ನು ಮಾಡಿದಳು. ಆ ತಪಸ್ಸು ಕೊನೆಗೊಂಡಮೇಲೆ ಆ ಭಗವತಿಯು ದುರ್ಜಯನೂ, ಪ್ರತಿಕೂಲ ಕರ್ಮಕ್ಕೆ ಅಸದಳನೂ, ಅಜೇಯನೂ, ವಜ್ರದಿಂದ ಭೇದಿಸಲಾಗದವನೂ ಆದ ಓರ್ವ ಮಗನನ್ನು ಹಡೆದಳು. ಆ ಪುತ್ರನು ಹುಟ್ಟಿದ ಕೂಡಲೆ ಸರ್ವ ಶಾಸ್ತ್ರಾರ್ಥಗಳಲ್ಲಿಯೂ ಪಾರಂಗತನಾದನು.

೩೩. ಬಳಿಕ ಅವನು ತಾಯಿಯನ್ನು ಕುರಿತು, "ಅಮ್ಮಾ ನಾನು ನಿನಗೆ ಯಾವ ಉಪಕಾರವನ್ನೆಸಗಲಿ" ಎಂದು ಭಕ್ತಿಯಿಂದ ಬೆಸಗೊಂಡನು. ಆಗಲಾ ದಿತೀದೇವಿಯು ಹರ್ಷಪರವಶಳಾಗಿ ದೈತ್ಯಾಧಿಪನಾದ ವಜ್ರಾಂಗನೆಂದು ವಿಖ್ಯಾತ ನಾದ ಆ ಮಗನಿಗೆ ಇಂತೆಂದಳು:—

೩೪. "ಮಗುವೇ! ಸಹಸ್ರಾಕ್ಷನಾದ ಇಂದ್ರನಿಂದ ನನ್ನ ಬಹುಮಂದಿ ಪುತ್ರರು ಕೊಲ್ಲಲ್ಪಟ್ಟರು. ಈಗ ಆ ಶಕ್ರನ ವಧೆಯಿಂದ ಆ ಸತ್ತ ಮಕ್ಕಳ ಅಳಲಿನುರಿಗೆ ಪರಿಹಾರಮಾಡಿಕೊಳ್ಳಬೇಕೆಂದು ಇಚ್ಛಿಸುತ್ತೇನೆ."

೩೫. ಇಂತು ನುಡಿದ ಆಕೆಯ ಮಾತನ್ನು ಕೇಳಿ 'ಹಾಗೆಯೇ ಆಗಲಿ' ಎಂದು ಹೇಳಿ, ಬಲವಂತನಾದ ಅವನು ಸೈನ್ಯಸಮೇತನಾಗಿ ಸ್ವರ್ಗಕ್ಕೆ ನಡೆದು ಯುದ್ಧದಲ್ಲಿ ಶಕ್ರನನ್ನು ಕೇವಲ ಬಾಹ್ವಾಯುಧಗಳಿಂದಲೇ ಜಯಿಸಿದನು.

೩೬. ಹೀಗೆ ಜಯಿಸಿದ ತರುವಾಯ, ಭಯಾತುರನಾಗಿ ಅಡಿಗಡಿಗೂ ತನ್ನನ್ನು ಬಿಡಗಡೆಮಾಡಬೇಕೆಂದು ಅಂಗಲಾಚಿ ಪ್ರಾರ್ಥಿಸುತ್ತಿದ್ದ ಆ ದೇವೇಂದ್ರನನ್ನು ಕಾಲು ಹಿಡಿದೆಳೆದುಕೊಂಡು ಸಿಂಹವು ಕ್ಷುದ್ರಮೃಗವನ್ನೆಳೆದುತರುವಂತೆ ತಾಯಿಯಾದ ಆ ದಿತೀದೇವಿಯ ಬಳಿಗೆ ತಂದೊಯ್ದನು.

ಏತಸ್ಮಿನ್ನಂತರೇ ಬ್ರಹ್ಮಾ ಕಶ್ಯಪಶ್ಚ ಮಹಾತಪಾಃ ।
ಆಗತೌ ತತ್ರ ಸಂತ್ರಸ್ತಾವಥೋ ಬ್ರಹ್ಮಾ ಜಗಾದ ತಂ ॥ ೫೭ ॥
ಮುಂಚಾಮುಂ ಪುತ್ರ ಯಾಚಂತಂ ಕಿಮನೇನ ಪ್ರಯೋಜನಂ ।
ಅವಮಾನೋ ವಧಃ ಪ್ರೋಕ್ತೋ ವೀರ ಸಂಭಾವಿತಸ್ಯ ಚ ॥ ೫೮ ॥
ಅಸ್ಮದ್ವಾಕ್ಯೇನ ಯೋ ಮುಕ್ತೋ ಜೀವನ್ನಪಿ ಮೃತೋ ಹಿ ಸಃ ।
ಶತ್ರುಂ ಯೇ ಘ್ನಂತಿ ಸಮರೇ ನ ತೇ ವೀರಾಃ ಪ್ರಕೀರ್ತಿತಾಃ ॥ ೫೯ ॥
ಕೃತ್ವಾ ಮಾನಪರಿಗ್ಲಾನಿಂ ಯೇ ಮುಂಚಂತಿ ವರಾ ಹಿ ತೇ ।
ಯಥಾ ಮಾನ್ಯತಮಂ ಮತ್ವಾ ತ್ವಯಾ ಮಾತುರ್ವಚಃ ಕೃತಂ ॥ ೬೦ ॥
ತಥಾ ಪಿತುರ್ವಚಃ ಕಾರ್ಯಂ ಮುಂಚಾಮುಂ ಪುತ್ರ ವಾಸವಂ ।
ಏತಚ್ಛ್ರುತ್ವಾ ತು ವಜ್ರಾಂಗಃ ಪ್ರಣತೋ ವಾಕ್ಯಮಬ್ರವೀತ್ ॥ ೬೧ ॥
ನ ಮೇ ಕೃತ್ಯಮನೇನಾಸ್ತಿ ಮಾತುರಾಜ್ಞಾ ಕೃತಾ ಮಯಾ ।
ತ್ವಂ ಸುರಾಸುರನಾಥೋ ವೈ ಮಮ ಚ ಪ್ರಪಿತಾಮಹಃ ॥ ೬೨ ॥

---

೫೭. ಅಷ್ಟರಲ್ಲಿ ಬ್ರಹ್ಮನೂ, ಮಹಾತಪಸ್ವಿಯಾದ ಕಶ್ಯಪನೂ ಭಯಗೊಂಡವರಾಗಿ ಅಲ್ಲಿಗೈತಂದರು. ಅನಂತರದಲ್ಲಿ ಬ್ರಹ್ಮನು ಆ ವಜ್ರಾಂಗನನ್ನು ಕುರಿತು ಇಂತೆಂದನು :—

೫೮. "ಮಗನೇ! ಅಂಗಲಾಚಿ ಬೇಡಿಕೊಳ್ಳುತ್ತಿರುವ ಈ ಮಹೇಂದ್ರನನ್ನು ಪ್ರಾಣದೊಡನೆ ಬಿಟ್ಟುಬಿಡು. ಇವನಿಂದೇನು ಪ್ರಯೋಜನವಾಗಬೇಕು? ಎಲೈ ವೀರನೇ! ಸಂಭಾವಿತನಾದವನಿಗೆ ಅವಮಾನವೇ ವಧೆಯೆಂದು ತಿಳಿದವರು ಹೇಳುತ್ತಾರೆ.

೫೯. ನಮ್ಮ ಮಾತಿನಪ್ರಕಾರ ಯಾವನು ಬಿಡುಗಡೆಹೊಂದಿರುವನೋ ಆ ಇವನು ಬದುಕಿದ್ದರೂ ಸತ್ತಂತೆಯೇ! ಶತ್ರುವನ್ನು ಯಾರು ಯುದ್ಧದಲ್ಲಿ ಕೊಲ್ಲುವರೋ ಅವರು ವೀರರೆಂದು ಹೇಳಲ್ಪಡುವುದಿಲ್ಲ.

೬೦-೬೧. ಶತ್ರುಗಳಿಗೆ ಮಾನಭಂಗಮಾಡಿ ಬಿಟ್ಟುಬಿಡುವವರೇ ಉತ್ತಮರು. ಇದು ಮಾನ್ಯತಮವೆಂದು ಭಾವಿಸಿ ನೀನು ತಾಯಿಯ ಮಾತನ್ನು ಹೇಗೆ ನೆರವೇರಿಸಿದೆಯೋ ಹಾಗೆಯೇ ತಂದೆಯಾದ ನನ್ನ ಮಾತನ್ನೂ ನೆರವೇರಿಸುವುದು ನಿನಗೆ ಕರ್ತವ್ಯ. ಮಗನೇ! ಆದುದರಿಂದ ಈ ವಾಸವನನ್ನು ಈಗ ಬಿಟ್ಟುಬಿಡು." ಈ ಮಾತುಗಳನ್ನು ಕೇಳಿ ವಜ್ರಾಂಗನು ಆತನಿಗೆ ಪ್ರಣಾಮಮಾಡಿ ಇಂತೆಂದು ನುಡಿದನು :—

೬೨. "ನನಗೆ ಇವನಿಂದ ಏನೂ ಕೆಲಸವಿಲ್ಲವು. ನಾನು ತಾಯಿಯ ಅಪ್ಪಣೆಯನ್ನು ಮಾತ್ರ ನೆರವೇರಿಸಿದೆನು. ನೀನು ಸುರಾಸುರರಿಗೆಲ್ಲ ನಾಥನು. ನನಗೋ ಪ್ರಪಿತಾಮಹನು.

ಕರಿಷ್ಯೇ ತ್ವದ್ವಚೋ ದೇವ ಏಷ ಮುಕ್ತಃ ಶತಕ್ರತುಃ ।
ನ ಚ ಕಾಂಕ್ಷೇ ಶಕ್ರಭುಕ್ತಾಮಿಮಾಂ ತ್ರೈಲೋಕ್ಯರಾಜತಾಂ ॥ ೬೩ ॥
ಪರಭುಕ್ತಾ ಯಥಾ ನಾರೀ ಪರಭುಕ್ತಾಮಿವ ಸ್ರಜಂ ।
ಯಚ್ಚ ತ್ರಿಭುವನೇಷ್ವಸ್ತಿ ಸಾರಂ ತನ್ಮಮ ಕಥ್ಯತಾಂ ॥ ೬೪ ॥

ಬ್ರಹ್ಮೋವಾಚ :—

ತಪಸೋ ನ ಪರಂ ಕಿಂಚಿತ್ತಪೋ ಹಿ ಮಹತಾಂ ಧನಂ ।
ತಪಸಾ ಪ್ರಾಪ್ಯತೇ ಸರ್ವಂ ತಪೋಯೋಗ್ಯೋಽಸಿ ಪುತ್ರಕ ॥ ೬೫ ॥

ವಜ್ರಾಂಗ ಉವಾಚ :—

ತಪಸೇ ಮೇ ರತಿರ್ದೇವ ನ ವಿಘ್ನಂ ತತ್ರ ಮೇ ಭವೇತ್ ।
ತ್ವತ್ಪ್ರಸಾದೇನ ಭಗವನ್ನಿತ್ಯುಕ್ತ್ವಾ ವಿರರಾಮ ಸಃ ॥ ೬೬ ॥

ಬ್ರಹ್ಮೋವಾಚ :—

ಕ್ರೂರಭಾವಂ ಪರಿತ್ಯಜ್ಯ ಯದೀಚ್ಛಸಿ ತಪಃ ಸುತ ।
ಅನಯಾ ಚಿತ್ತಶುಧ್ಯಾ ತತ್ತ್ವಯಾಪ್ತಂ ಜನ್ಮನಃ ಫಲಂ ॥ ೬೭ ॥

---

೬೩. ಎಲೈ ದೇವನೇ! ನಿನ್ನ ಮಾತನ್ನು ನಡೆಸುತ್ತೇನೆ. ಈ ಶತಕ್ರತುವು ಬಿಡುಗಡೆ ಹೊಂದಿರುವನು. ಈ ಶಕ್ರನು ಅನುಭವಿಸಿರುವ ಈ ತ್ರೈಲೋಕ್ಯದ ರಾಜತ್ವವನ್ನೂ ನಾನು ಬಯಸುವುದಿಲ್ಲವು.

೬೪. ಇನ್ನೊಬ್ಬನು ಅನುಭವಿಸಿದ ಹೆಂಗಸು ಹೇಗೋ, ಬೇರೊಬ್ಬನು ಧರಿಸಿದ ಮಾಲೆಯು ಹೇಗೋ, ಹಾಗೆಯೇ ಪರರು ಭೋಗಿಸಿರುವ ರಾಜ್ಯವು. ಅದನ್ನು ನಾನು ಒಲ್ಲೆ! ಮೂರು ಲೋಕಗಳಲ್ಲಿಯೂ ಸಾರವಾದುದು ಯಾವುದೋ ಅದನ್ನು ನನಗೆ ತಿಳಿಸಬೇಕು.''

೬೫. ಈ ಮಾತನ್ನು ಕೇಳಿ ಬ್ರಹ್ಮನಿಂತೆಂದನು :—'' ಮಗನೇ! ತಪಸ್ಸಿಗಿಂತಲೂ ಹೆಚ್ಚಾದುದು ಮತ್ತೊಂದಿಲ್ಲ. ತಪಸ್ಸೇ ಮಹಾತ್ಮರಿಗೆ ಧನವು. ತಪಸ್ಸಿನಿಂದ ಸರ್ವವೂ ಕೈಸೇರುತ್ತದೆ. ನೀನು ತಪಸ್ಸಿಗೆ ಯೋಗ್ಯನೂ ಆಗಿದ್ದೀಯೆ.''

೬೬. ವಜ್ರಾಂಗನಿಂತೆಂದನು :—'' ಎಲೈ ದೇವನೇ! ನನಗೆ ತಪಸ್ಸಿನಲ್ಲಿ ತುಂಬ ಅಪೇಕ್ಷೆಯುಂಟು. ಭಗವಂತಾ! ನಿನ್ನ ಅನುಗ್ರಹದಿಂದ ತಪಸ್ಸಿನಲ್ಲಿ ನನಗೆ ಯಾವ ವಿಘ್ನವೂ ಉಂಟಾಗದಿರಲಿ'' ಎಂದು ನುಡಿದು ಸುಮ್ಮನಾದನು.

೬೭. ಅದಕ್ಕೆ ಬ್ರಹ್ಮನು :—'' ಮಗನೇ! ನೀನು ಕ್ರೂರಭಾವವನ್ನು ಪರಿತ್ಯಾಗಮಾಡಿ, ಈ ರೀತಿಯ ಚಿತ್ತಶುದ್ಧಿಯಿಂದ ತಪಸ್ಸು ಮಾಡಬೇಕೆಂದು ಬಯಸುವೆಯಾದರೆ, ನೀನು ಜನ್ಮವೆತ್ತಿದ್ದರ ಫಲವನ್ನು ಪಡೆದಂತಾಗುತ್ತದೆ'' ಎಂದನು.

ಇತ್ಯುಕ್ತ್ವಾ ಪದ್ಮಜಃ ಕನ್ಯಾಂ ಸಸರ್ಜಾಯತಲೋಚನಾಂ ।
ತಾಮಸ್ಮೈ ಪ್ರದದೌ ದೇವಃ ಪತ್ನ್ಯರ್ಥಂ ಪದ್ಮಸಂಭವಃ ॥ ೭೮ ॥
ವರಾಂಗೀತಿ ಚ ನಾಮಾಸ್ಯಾಃ ಕೃತವಾಂಶ್ಚ ಪಿತಾಮಹಃ ।
ಜಗಾಮ ಚ ತತೋ ಬ್ರಹ್ಮಾ ಕಶ್ಯಪೇನ ಸಮಂ ದಿವಂ ॥ ೭೯ ॥
ವಜ್ರಾಂಗೋಽಪಿ ತಯಾ ಸಾರ್ಧಂ ಜಗಾಮ ತಪಸೇ ವನಂ ।
ಊರ್ಧ್ವಬಾಹುಃ ಸ ದೈತ್ಯೇಂದ್ರೋಽತಿಷ್ಠದಬ್ದಸಹಸ್ರಕಂ ॥ ೮೦ ॥
ಕಾಲಂ ಕಮಲಪತ್ರಾಕ್ಷಃ ಶುದ್ಧಬುದ್ಧಿರ್ಮಹಾತಪಾಃ ।
ತಾವಾನಧೋಮುಖಃ ಕಾಲಂ ತಾವತ್ಪಂಚಾಗ್ನಿಸಾಧಕಃ ॥ ೮೧ ॥
ನಿರಾಹಾರೋ ಘೋರತಪಾಸ್ತಪೋರಾಶಿರಜಾಯತ ।
ತತಃ ಸೋಽಂತರ್ಜಲೇ ಚಕ್ರೇ ಕಾಲಂ ವರ್ಷಸಹಸ್ರಕಂ ॥ ೮೨ ॥
ಜಲಾಂತರಪ್ರವಿಷ್ಟಸ್ಯ ತಸ್ಯ ಪತ್ನೀ ಮಹಾವ್ರತಾ ।
ತಸ್ಯೈವ ತೀರೇ ಸರಸಸ್ತತ್ಪರಾ ಮೌನಮಾಶ್ರಿತಾ ॥ ೮೩ ॥

---

೭೮. ಹೀಗೆಂದು ನುಡಿದು, ಆ ಪದ್ಮಜನು ಆಯತಲೋಚನೆಯಾದ ಕನ್ಯೆಯೊಬ್ಬಳನ್ನು ಸೃಷ್ಟಿಸಿದನು; ಅವಳನ್ನು ಆ ದೇವನು ಅವನಿಗೆ ಪತ್ನಿಯಾಗಿ ಕೊಟ್ಟನು.

೭೯. ಪಿತಾಮಹನು ಅವಳಿಗೆ 'ವರಾಂಗೀ' ಎಂದು ಹೆಸರು ಕೊಟ್ಟನು. ಆ ವರಾಂಗಿಯನ್ನು ವಜ್ರಾಂಗನಿಗೆ ಕೊಟ್ಟು ಬಳಿಕ ಬ್ರಹ್ಮನು ಕಶ್ಯಪನೊಡಗೂಡಿ ಸ್ವರ್ಗಕ್ಕೆ ಪ್ರಯಾಣಮಾಡಿದನು.

೮೦. ವಜ್ರಾಂಗನು ಕೂಡ ಆಕೆಯೊಡನೆ ತಪಸ್ಸಿಗಾಗಿ ವನಕ್ಕೆ ಹೋದನು. ಆ ದೈತ್ರೇಂದ್ರನು ತೋಳುಗಳನ್ನು ಮೇಲಕ್ಕೆತ್ತಿಕೊಂಡು ನಿಂತು ಒಂದು ಸಾವಿರ ವರ್ಷಗಳವರೆಗೆ ತಪಸ್ಸುಮಾಡಿದನು.

೮೧. ಕಮಲದ ದಳದಂತೆ ಕಣ್ಣುಳ್ಳವನಾದ ಆತನು ಶುದ್ಧಬುದ್ಧಿಯುಳ್ಳವನೂ, ಮಹಾತಪಸ್ವಿಯೂ ಆಗಿ ಅಷ್ಟುಕಾಲ— ಸಹಸ್ರ ವರ್ಷಗಳವರೆಗೆ— ಅಧೋಮುಖನಾಗಿ ನಿಂತನು; ಅಷ್ಟೇ ಕಾಲವೂ ಪಂಚಾಗ್ನಿಮಧ್ಯದಲ್ಲಿ ನಿಂತು ಸಾಧನೆಮಾಡಿದನು.

೮೨. ನಿರಾಹಾರಿಯಾಗಿ ಘೋರತಪಸ್ಸನ್ನು ಮಾಡುತ್ತಾ ತಪೋರಾಶಿಯೇ ಆದನು. ಬಳಿಕ ಅವನು ನೀರನ್ನು ಪ್ರವೇಶಮಾಡಿ ಒಂದು ಸಹಸ್ರವರ್ಷಗಳ ಕಾಲ ಅಲ್ಲಿಯೇ ತಪಸ್ಸುಮಾಡಿದನು.

೮೩. ನೀರಿನೊಳಹೊಕ್ಕ ಆತನ ಪತ್ನಿಯು ಮಹಾವ್ರತವನ್ನು ಧರಿಸಿದವಳಾಗಿ ಪತಿಯಲ್ಲಿಯೇ ಮನಸ್ಸಿಟ್ಟು ಆ ಸರೋವರದ ತೀರದಲ್ಲಿಯೇ ಮೌನವನ್ನು ತಾಳಿದ್ದಳು.

ನಿರಾಹಾರಂ ಪತಿಂ ಮತ್ವಾ ತಪಸ್ತೇಪೇ ಪತಿವ್ರತಾ ।
ತಸ್ಯಾಸ್ತಪಸಿ ವರ್ತಂತ್ಯಾ ಇಂದ್ರಶ್ಚಕ್ರೇ ವಿಭೀಷಿಕಾಂ ॥ ೭೪ ॥
ಭೂತ್ವಾ ತು ಮರ್ಕಟಾಕಾರಸ್ತಸ್ಯಾ ಅಭ್ಯಾಶಮಾಗತಃ ।
ಅಪವಿಧ್ಯ ದೃಶಂ ತಸ್ಯಾ ಮೂತ್ರವಿಷ್ಟೇ ಚಕಾರ ಸಃ ॥ ೭೫ ॥
ತಥಾ ವಿಲೋಲವಸನಾಂ ವಿಲೋಲವದನಾಂ ತಥಾ ।
ವಿಲೋಲಕೇಶಾಂ ತಾಂ ಚಕ್ರೇ ವಿಧಿತ್ಸುಸ್ತಪಸಃ ಕ್ಷತಾ ॥ ೭೬ ॥
ತತಶ್ಚ ಮೇಷರೂಪೇಣ ಕ್ಲೇಶಂ ತಸ್ಯಾಶ್ಚಕಾರ ಸಃ ।
ತತೋ ಭುಜಂಗರೂಪೇಣ ಬಧ್ವಾ ಚರಣಯೋರ್ದ್ವಯೋಃ ॥ ೭೭ ॥
ಅಪಾಕರ್ಷತ ದೂರಂ ಸ ತಸ್ಮಾದ್ದೇವಭೃತಸ್ತಥಾ ।
ತಪೋಬಲಾಚ್ಚ ಸಾ ತಸ್ಯ ನ ವಧ್ಯತ್ವಂ ಜಗಾಮ ಹ ॥ ೭೮ ॥
ಕ್ಷಮಯಾ ಚ ಮಹಾಭಾಗಾ ಕ್ರೋಧಮಣ್ವಪಿ ನಾಕರೋತ್ ।
ತತೋ ಗೋಮಾಯುರೂಪೇಣ ತಮದೂಷಯದಾಶ್ರಮಂ ॥ ೭೯ ॥

---

೭೪. ತನ್ನ ಪತಿಯು ನಿರಾಹಾರಿಯಾಗಿರುವನೆಂಬುದನ್ನು ನೆನೆಯುತ್ತ ಆ ಪತಿವ್ರತೆಯು ಈ ರೀತಿ ತಪಸ್ಸು ಮಾಡುತ್ತಿದ್ದಳು. ತಪಸ್ಸಿನಲ್ಲಿ ಆಸಕ್ತಳಾಗಿದ್ದ ಆಕೆಗೆ ಇಂದ್ರನು ಭಯವುಂಟುಮಾಡುತ್ತಿದ್ದನು.

೭೫. ಅವನು ಕಪಿಯ ಆಕಾರವನ್ನು ತಾಳಿ ಅವಳಿಗೆ ಕಾಣದಂತೆಯೇ ಅವಳ ಹತ್ತಿರ ಬಂದು ಮಲಮೂತ್ರ ವಿಸರ್ಜನೆ ಮಾಡಿದನು.

೭೬. ಅವಳ ಬಟ್ಟೆಯು ಜೋತಾಡುವಂತೆ ಮಾಡಿದನು; ಕೂದಲು ಇಳಿಬಿದ್ದು ಜೋಲಾಡುವಂತೆ ಮಾಡಿದನು; ಅವಳ ಮುಖವೂ ಜೋಲುಬೀಳುವಂತೆ ಮಾಡಿದನು. ಅವಳ ತಪಸ್ಸಿಗೆ ಹಾನಿಮಾಡಬೇಕೆಂದುದ್ದೇಶಿಸಿ ಹೀಗೆಲ್ಲ ಅವನು ಚೇಷ್ಟೆಯನ್ನು ಮಾಡಿದನು.

೭೭-೭೮. ಆಮೇಲೆ ಅವನು ಟಗರಿನ ರೂಪವನ್ನು ತಾಳಿ ಬಂದು ಅವಳಿಗೆ ಬಹಳವಾಗಿ ಕ್ಲೇಶವನ್ನುಂಟುಮಾಡಿದನು. ಬಳಿಕ ಹಾವಿನ ಆಕಾರವನ್ನು ತಾಳಿ ಸರಿದುಬಂದು ಅವಳ ಎರಡು ಕಾಲುಗಳಿಗೂ ಸುತ್ತಿಕೊಂಡು ಬಲವಾಗಿ ಬಿಗಿದು ಆ ದೇವಸಾನ್ನಿಧ್ಯದಿಂದ ದೂರಕ್ಕೆ ಅವಳನ್ನು ದರದರನೆ ಎಳೆದುಕೊಂಡುಹೋದನು. ಇಷ್ಟಾದರೂ ಅವಳ ತಪಸ್ಸಿನ ಬಲದಿಂದ ಅವಳನ್ನು ಕುಗ್ಗಿಸಲು ಅವನಿಗೆ ಸ್ವಲ್ಪಮಾತ್ರವೂ ಸಾಧ್ಯವಾಗಲಿಲ್ಲವು.

೭೯. ಮಹಾಮಹಿಮಳಾದ ಆಕೆಯು ಮೌನವ್ರತದ ನಿಮಿತ್ತವಾಗಿ ಕ್ಷಮೆಯನ್ನು ಆಶ್ರಯಿಸಿದವಳಾಗಿ ಅಣುಮಾತ್ರವೂ ಕ್ರೋಧವನ್ನು ತೋರಿಸಲಿಲ್ಲವು. ಆ ಬಳಿಕ ಇಂದ್ರನು ಇಷ್ಟಾದರೂ ಸುಮ್ಮನಾಗದೆ ಗುಳ್ಳೆನರಿಯಾಗಿ ಬಂದು ಆ ಆಶ್ರಮವನ್ನು ಅಪವಿತ್ರಗೊಳಿಸಿದನು.

ಅಗ್ನಿರೂಪೇಣ ತಸ್ಯಾಶ್ಚ ಸ ದದಾಹ ಮಹಾಶ್ರಮಂ ।
ಚಕರ್ಷ ವಾಯುರೂಪೇಣ ಮಹೋಗ್ರೇಣ ಚ ತಾಂ ಶುಭಾಂ ।
ಏವಂ ಸಿಂಹವೃಕಾದ್ಯಾಭಿರ್ಭೀಷಿಕಾಭಿಃ ಪುನಃ ಪುನಃ ॥ ೮೦ ॥
ವಿರರಾಮ ಯದಾ ನೈವ ವಜ್ರಾಂಗಮಹಿಷೀ ತದಾ ।
ಶೈಲಸ್ಯ ದುಷ್ಟತಾಂ ಮತ್ವಾ ಶಾಪಂ ದಾತುಂ ವ್ಯವಸ್ಯತ ॥ ೮೧ ॥
ತಾಂ ಶಾಪಾಭಿಮುಖೀಂ ದೃಷ್ಟ್ವಾ ಶೈಲಃ ಪುರುಷವಿಗ್ರಹಃ ।
ಉವಾಚ ತಾಂ ವರಾರೋಹಾಂ ತ್ವರಯಾಥ ಸುಲೋಚನಾಂ ॥ ೮೨ ॥

ಶೈಲ ಉವಾಚ :—

ನಾಹಂ ಮಹಾವ್ರತೇ ದುಷ್ಟಃ ಸೇವ್ಯೋಽಹಂ ಸರ್ವದೇಹಿನಾಂ ।
ಅತಿಖೇದಂ ಕರೋತ್ಯೇಷ ತತಃ ಕ್ರುದ್ಧಸ್ತು ವೃತ್ರಹಾ ॥ ೮೩ ॥
ಏತಸ್ಮಿನ್ನಂತರೇ ಜಾತಃ ಕಾಲೋ ವರ್ಷ ಸಹಸ್ರಕಃ ।
ತಸ್ಮಿನ್ ಯಾತೇ ಸ ಭಗವಾನ್ ಕಾಲೇ ಕಮಲಸಂಭವಃ ॥ ೮೪ ॥
ತುಷ್ಟಃ ಪ್ರೋವಾಚ ವಜ್ರಾಂಗಂ ತಮಾಗಮ್ಯ ಜಲಾಶಯೇ ॥ ೮೫ ॥

ಬ್ರಹ್ಮೋವಾಚ :—

ದದಾಮಿ ಸರ್ವಕಾಮಾಂಸ್ತೇ ಉತ್ತಿಷ್ಠ ದಿತಿನಂದನ ।
ಏವಮುಕ್ತಸ್ತತೋತ್ಥಾಯ ದೈತ್ಯೇಂದ್ರಸ್ತಪಸಾಂ ನಿಧಿಃ ।
ಉವಾಚ ಪ್ರಾಂಜಲಿರ್ವಾಕ್ಯಂ ಸರ್ವಲೋಕಪಿತಾಮಹಂ ॥ ೮೬ ॥

---

೮೦. ಅಗ್ನಿರೂಪದಿಂದ ಆಕೆಯ ಆ ಮಹಾಶ್ರಮವನ್ನು ಸುಟ್ಟುಬಿಟ್ಟನು. ಉಗ್ರವಾದ ವಾಯುವಾಗಿ ಬಂದು ಶುಭಕರಳಾದ ಆಕೆಯನ್ನು ಹಾರಿಸಿಕೊಂಡು ಹೋದನು. ಹೀಗೆಯೇ ಸಿಂಹ, ತೋಳ ಮುಂತಾದ ರೂಪದಿಂದ ಬಂದು ಬಗೆ ಬಗೆಯ ಬೆದರಿಕೆಗಳಿಂದ ಮತ್ತೆಮತ್ತೆ ಆಕೆಯನ್ನು ತೊಂದರೆಪಡಿಸುತ್ತಿದ್ದನು.

೮೧. ಈ ರೀತಿಯಾಗಿ ಕಾಟಕೊಡುವುದನ್ನು ಸ್ವಲ್ಪವೂ ನಿಲ್ಲಿಸದೆಹೋಗಲು ವಜ್ರಾಂಗನ ರಾಣಿಯು, ಅವೆಲ್ಲ ಆ ಪರ್ವತದ ದುಷ್ಟತನವೆಂದು ಭಾವಿಸಿ ಶಾಪಕೊಡಲು ಪ್ರಯತ್ನಮಾಡಿದಳು.

೮೨. ಆಕೆಯು ಆ ರೀತಿ ಶಾಪಕೊಡಲು ಸಿದ್ಧಳಾಗಿರುವುದನ್ನು ಕಂಡು ಪರ್ವತನು ಬಹು ತ್ವರೆಯಿಂದ ಪುರುಷಾಕಾರವನ್ನು ತಾಳಿ ಅವಳ ಬಳಿಸಾರಿ ಸುಲೋಚನೆಯೂ ಸುಂದರಿಯೂ ಆದ ಆಕೆಯನ್ನು ಕುರಿತು ಇಂತೆಂದನು :—

೮೩. "ಎಲೌ ಮಹಾವ್ರತೆಯೇ! ನಾನು ದುಷ್ಟನಲ್ಲ. ಸಮಸ್ತ ದೇಹಿಗಳಿಗೂ ನಾನು ಸೇವ್ಯನಾದವನು. ವೃತ್ರಹಂತಕನಾದ ಇಂದ್ರನು ಕ್ರುದ್ಧನಾಗಿ ನಿನಗೆ ಅತಿಯಾದ ಖೇದವುಂಟುಮಾಡುತ್ತಿದ್ದಾನೆ" ಎಂದು ನುಡಿದನು.

೮೪–೮೬. ಅಷ್ಟರಲ್ಲಿಯೇ ಒಂದುಸಾವಿರ ವರ್ಷಗಳ ಕಾಲವು ಕಳೆಯಿತು. ಅಷ್ಟುಕಾಲ ಕಳೆಯಲಾಗಿ ಭಗವಂತನಾದ ಕಮಲಸಂಭವನು ಸಂತುಷ್ಟನಾಗಿ

ವಜ್ರಾಂಗ ಉವಾಚ :—

ಆಸುರೋ ಮೇಽಸ್ತು ಮಾ ಭಾವಃ ಶಕ್ರರಾಜ್ಯೇ ಚ ಮಾ ರತಿಃ ।
ತಪೋಧರ್ಮರತಿಶ್ಚಾಸ್ತು ವೃಣೋಮ್ಯೇತತ್ ಪಿತಾಮಹ ॥ ೮೭ ॥
ಏವಮಸ್ತ್ವಿತಿ ತಂ ಬ್ರಹ್ಮಾ ಪ್ರಾಹ ವಿಸ್ಮಿತಮಾನಸಃ ।
ಉಪೇಕ್ಷತೇ ಚ ಶಕ್ರಂ ಸ ಭಾವ್ಯರ್ಥಂ ಕೋಽತಿವರ್ತತೇ ॥ ೮೮ ॥
ಋಷಯೋ ಮನುಜಾ ದೇವಾಃ ಶಿವಬ್ರಹ್ಮಮುಖಾ ಅಪಿ ।
ಭಾವ್ಯರ್ಥಂ ನಾತಿವರ್ತಂತೇ ವೇಲಾಮಿವ ಮಹೋದಧಿಃ ॥ ೮೯ ॥
ಇತಿ ಚಿಂತ್ಯ ವಿರಿಂಚೋಽಪಿ ತತ್ರೈವಾಂತರಧೀಯತ ।
ವಜ್ರಾಂಗೋಽಪಿ ಸಮಾಪ್ತೇ ತು ತಪಸಿ ಸ್ಥಿರಸಂಯಮಃ ॥ ೯೦ ॥
ಆಹಾರಮಿಚ್ಛನ್ ಸ್ವಾಂ ಭಾರ್ಯಾಂ ನದದರ್ಶಾಶ್ರಮೇ ಸ್ವಕೇ ।
ಭಾರ್ಯಾಹೀನೋಽಫಲಶ್ಚೇತಿ ಸ ಸಂಚಿಂತ್ಯ ಇತಸ್ತತಃ ॥ ೯೧ ॥

---

ಆ ಜಲಾಶಯದ ಬಳಿ ಬಂದು ಒಳಗಿದ್ದ ವಜ್ರಾಂಗನನ್ನು ಕುರಿತು ಇಂತೆಂದನು:— ಬ್ರಹ್ಮನೆಂದನು :—"ನಿನಗೆ ಸಮಸ್ತ ಇಷ್ಟಾರ್ಥಗಳನ್ನೂ ಕೊಡುತ್ತೇನೆ. ಎಲೈ ದಿತಿನಂದನನೇ! ಎದ್ದೇಳು" ಹೀಗೆ ಬ್ರಹ್ಮನಿಂದ ಹೇಳಲ್ಪಟ್ಟವನಾಗಿ ತಪೋನಿಧಿಯಾದ ಆ ದೈತ್ಯೇಂದ್ರನು ಎದ್ದುಬಂದು ಕೈಮುಗಿದುಕೊಂಡು ಸರ್ವಲೋಕ ಪಿತಾಮಹನಾದ ಆ ಬ್ರಹ್ಮನಿಗೆ ಈ ರೀತಿಯಾಗಿ ವಿಜ್ಞಾಪನೆ ಮಾಡಿಕೊಂಡನು.

೮೭. ವಜ್ರಾಂಗನಿಂತೆಂದನು :—"ದೇವಾ! ನನಗೆ ಆಸುರಭಾವವುಂಟಾಗದಿರಲಿ. ಶಕ್ರನ ರಾಜ್ಯದಲ್ಲಿ ಆಸೆ ಹುಟ್ಟದಿರಲಿ. ತಪಸ್ಸೂ, ಧರ್ಮಶಕ್ತಿಯೂ ನನಗೆ ಉಂಟಾಗಲಿ. ಎಲೈ ಪಿತಾಮಹನೇ! ಈ ವರವನ್ನು ನಾನು ಬೇಡಿಕೊಳ್ಳುತ್ತೇನೆ."

೮೮. ಇದನ್ನು ಕೇಳಿ ಬ್ರಹ್ಮನು ಮನಸ್ಸಿನಲ್ಲಿ ವಿಸ್ಮಯಪಟ್ಟು, 'ಹಾಗೆಯೇ ಆಗಲಿ' ಎಂದು ನುಡಿದನು. ಅವನು (ವಜ್ರಾಂಗನು) ಶಕ್ರನನ್ನು ಉಪೇಕ್ಷಿಸಿದನು. ಮುಂದಾಗಬೇಕಾದುದನ್ನು ಯಾರು ತಾನೇ ಮೀರುತ್ತಾರೆ?

೮೯. ಋಷಿಗಳು, ಮನುಷ್ಯರು, ದೇವತೆಗಳು, ಶಿವಬ್ರಹ್ಮರೇ ಮೊದಲಾದವರು ಕೂಡ, ಮಹಾಸಾಗರವು ದಡವನ್ನು ಮೀರದಿರುವಂತೆ, ಭಾವ್ಯರ್ಥವನ್ನು ಮೀರಿ ನಡೆಯಲಾರರು."

೯೦–೯೨. ಹೀಗೆಂದು ಚಿಂತಿಸಿ ಬ್ರಹ್ಮನು ಅಲ್ಲಿಯೇ ಅದೃಶ್ಯನಾದನು. ಸ್ಥಿರಸಂಯದಿಂದ ಆ ವಜ್ರಾಂಗನು ಕೂಡ ತನ್ನ ತಪಸ್ಸು ಪೂರ್ಣವಾಗಲಾಗಿ ಆಹಾರವನ್ನು ಇಚ್ಛಿಸಿದನು. ತನ್ನ ಹೆಂಡತಿಯನ್ನು ತನ್ನ ಆಶ್ರಮದಲ್ಲಿ ಕಾಣಲಿಲ್ಲವು. 'ಭಾರ್ಯಾವಿಹೀನನ ಬಾಳು ನಿಷ್ಫಲ'ವೆಂದು ಯೋಚಿಸುತ್ತ ಅವನು ಅಲ್ಲಿ ಇಲ್ಲಿ ನೋಡುತ್ತ ಸುತ್ತತೊಡಗಿದನು. ನಿತ್ಯಕರ್ಮವನ್ನಾಚರಿಸಲು

ವಿಲೋಕಯನ್ ಸ್ವಕಾಂ ಭಾರ್ಯಾಂ ವಿಧಿತ್ಸುಃ ಕರ್ಮ ನೈತ್ಯಕಂ ।
ವಿಲೋಕಯನ್ ದದರ್ಶಾಥ ಇಹಾಮುತ್ರಸಹಾಯಿನೀಂ ॥ ೯೨ ॥
ರುದಂತೀಂ ಸ್ವಾಂ ಪ್ರಿಯಾಂ ದೀನಾಂ ತರುಪ್ರಚ್ಛಾದಿತಾನನಾಂ ।
ತಾಂ ವಿಲೋಕ್ಯ ತತೋ ದೈತ್ಯಃ ಪ್ರೋವಾಚ ಪರಿಸಾಂತ್ವಯನ್ ॥ ೯೩ ॥

ವಜ್ರಾಂಗ ಉವಾಚ :—

ಕೇನ ತೇಽಪಕೃತಂ ಭೀರು ವರ್ತಂತ್ಯಾಸ್ತಪಸಿ ಸ್ವಕೇ ।
ಕಥಂ ರೋದಿಷಿ ವಾ ಬಾಲೇ ಮಯಿ ಜೀವತಿ ಭರ್ತರಿ ।
ಕಂ ವಾ ಕಾಮಂ ಪ್ರಯಚ್ಛಾಮಿ ಶೀಘ್ರಂ ಪ್ರಬ್ರೂಹಿ ಭಾಮಿನಿ ॥ ೯೪ ॥

ಗೃಹೇಶ್ವರೀಂ ಸದ್ಗುಣಭೂಷಿತಾಂ ಶುಭಾಂ
ಪಂಗ್ವಂಧಯೋಗೇನ ಪತಿಂ ಸಮೇತಾಂ ।
ನ ಲಾಲಯೇತ್ಪೂರಯೇನ್ನೈವ ಕಾಮಂ
ಸ ಕಿಂ ಪುಮಾನ್ ನಪುಮಾನ್ಮೇ ಮತೋಽಸ್ತಿ ॥ ೯೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ಕುಮಾರೇಶ್ವರ ಮಹಾತ್ಮ್ಯೇ ವಜ್ರಾಂಗೇತಿಹಾಸ ವರ್ಣನಂ" ನಾಮ ಚತುರ್ದಶೋಽಧ್ಯಾಯಃ

---

ಅಪೇಕ್ಷಿಸಿ ಹೆಂಡತಿಯನ್ನು ಹುಡುಕತೊಡಗಿದನು. ಹಾಗೆ ನೋಡುತ್ತಿದ್ದಾಗ ಇಹಪರ ಸಹಾಯಕಳಾದ ತನ್ನ ಭಾರ್ಯೆಯನ್ನು ಕಂಡನು.

೯೩. ಆಗಲವನು, ತನ್ನ ಪ್ರಿಯೆಯು ಮುಖವನ್ನು ಮುಚ್ಚಿಕೊಂಡು ದೀನಳಾಗಿ ರೋದಿಸುತ್ತಿದ್ದುದನ್ನು ಕಂಡನು. ಬಳಿಕಲಾ ದೈತ್ಯನು ಅವಳನ್ನು ಸಮಾಧಾನಪಡಿಸುತ್ತ ಹೀಗೆ ನುಡಿದನು :—

೯೪. ವಜ್ರಾಂಗನಿಂತೆಂದನು :—"ಎಲೈ ಭೀರುವೇ! ಸ್ವಂತ ತಪಸ್ಸಿನಲ್ಲಿ ನಿರತಳಾಗಿದ್ದ ನಿನಗೆ ಯಾರಿಂದ ಅಪಕಾರವಾಯಿತು? ನಿನ್ನ ಗಂಡನಾದ ನಾನಿನ್ನೂ ಬದುಕಿರುವಾಗಲೇ ಅದೇಕೆ ಹೀಗೆ ಅಳುತ್ತಿರುವೆ? ಎಲೆ ಭಾಮಿನಿ! ನಿನಗೆ ಯಾವ ಇಷ್ಟಾರ್ಥವನ್ನು ಸಲ್ಲಿಸಲಿ, ಹೇಳು.

೯೫. ಸದ್ಗುಣಭೂಷಿತಳೂ, ಭೃಶಪೀಡಿತಳೂ ಆಗಿ ಪತಿಯನ್ನು ಬಳಿಸಾರಿದ ಗೃಹೇಶ್ವರಿಯನ್ನು ಯಾವನು ಕುಂಟನಂತೆಯೂ ಕುರುಡನಂತೆಯೂ ಸರಿಯಾಗಿ ಲಾಲಿಸಿ ಆದರಿಸುವುದಿಲ್ಲವೋ, ಅವಳ ಇಷ್ಟಾರ್ಥವನ್ನು ಸಲ್ಲಿಸುವುದಿಲ್ಲವೋ ಅವನು ಪುರುಷನೆ? ಅಂಥವನು ಪುರುಷನಲ್ಲವೆಂದೇ ನನ್ನ ಭಾವನೆ."

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ಕುಮಾರೇಶ್ವರ ಮಾಹಾತ್ಮ್ಯದಲ್ಲಿ ವಜ್ರಾಂಗೇತಿಹಾಸ ವರ್ಣನ"ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚದಶೋಽಧ್ಯಾಯಃ

## ತಾರಕೋತ್ಪತ್ತಿವರ್ಣನಂ

ವರಾಂಗ್ಯುವಾಚ—

ನಾಶಿತಾಸ್ಮ್ಯಪವಿದ್ಧಾಸ್ಮಿ ತ್ರಾಸಿತಾ ಪೀಡಿತಾಸ್ಮಿ ಚ ।
ರೌದ್ರೇಣ ದೇವನಾಥೇನ ನಷ್ಟನಾಥೇಽವ ಭೂರಿಶಃ ॥ ೧ ॥
ದುಃಖಪಾರಮಪಶ್ಯಂತೀ ಪ್ರಾಣಾಂಸ್ತ್ಯಕ್ತುಂ ವ್ಯವಸ್ಥಿತಾ ।
ಪುತ್ರಂ ಮೇ ಘೋರದುಃಖಸ್ಯ ತಾರಕಂ ದೇಹಿ ಚೇತ್ ಕೃಪಾ ॥ ೨ ॥
ಏವಮುಕ್ತಸ್ತು ದೈತ್ಯೇಂದ್ರೋ ದುಃಖಿತೋಽಚಿಂತಯದ್ಧೃದಿ ।
ಆಸುರೇಷ್ವಪಿ ಭಾವೇಷು ಸ್ಪೃಹಾ ಯದ್ಯಪಿ ನಾಸ್ತಿ ಮೇ ॥ ೩ ॥
ತಥಾಪಿ ಮನ್ಯೇ ಶಾಸ್ತ್ರೇಭ್ಯಸ್ತ್ವನುಕಂಪ್ಯಾ ಪ್ರಿಯೇತಿ ಯತ್ ।
ಸರ್ವಾಶ್ರಮಾನುಪಾದಾಯ ಸ್ವಾಶ್ರಮೇಣ ಕಲತ್ರವಾನ್ ॥ ೪ ॥
ವ್ಯಸನಾರ್ಣವಮತ್ಯೇತಿ ಜಲಯಾನೈರಿವಾರ್ಣವಂ ।
ಯಾಮಾಶ್ರಿತ್ಯೇಂದ್ರಿಯಾರಾತೀನ್ ದುರ್ಜಯಾನಿತರಾಶ್ರಯೈಃ ॥ ೫ ॥

---

## ಕನ್ನಡದ ಅನುವಾದ

### ತಾರಕೋತ್ಪತ್ತಿವರ್ಣನ

೧. ವರಾಂಗಿಯಿಂತೆಂದಳು :—"ರೌದ್ರಕರ್ಮವನ್ನು ಮಾಡುವವನಾದ ದೇವೇಂದ್ರನಿಂದ ನಾನು ಒಡೆಯನಳಿದ ಹೆಂಗಸಿನಂತೆ ಬಹುವಾಗಿ ನಾಶಗೊಳಿಸಲ್ಪಟ್ಟೆ; ಕೊರೆಯಲ್ಪಟ್ಟವಳಾದೆ; ಹೆದರಿಸಲ್ಪಟ್ಟೆನಲ್ಲದೆ ಪೀಡಿತಳಾದೆ.

೨. ದುಃಖದ ಕೊನೆಯನ್ನು ಕಾಣದವಳಾಗಿ ಪ್ರಾಣತ್ಯಾಗ ಮಾಡುವುದಕ್ಕೆ ನಿಶ್ಚಯಮಾಡಿದ್ದೇನೆ. ನಿನಗೆ ನನ್ನಮೇಲೆ ಕೃಪೆಯಿರುವುದಾದರೆ ಈ ಘೋರ ದುಃಖತಾರಕನಾದ (ದುಃಖವನ್ನು ದಾಟಿಸುವ) ಒಬ್ಬ ಮಗನನ್ನು ಕೊಡು."

೩. ಹೀಗೆ ಹೇಳಲ್ಪಟ್ಟ ಆ ದೈತ್ಯೇಂದ್ರನು ದುಃಖಿತನಾಗಿ ಮನಸ್ಸಿನಲ್ಲಿಯೇ ಹೀಗೆ ಯೋಚಿಸಿದನು :—"ಆಸುರಭಾವಗಳಲ್ಲಿ ನನಗೆ ಸ್ವಲ್ಪವಾದರೂ ಅಭಿಲಾಷೆಯಿರುವುದಿಲ್ಲ.

೪–೬. ಹಾಗಾದರೂ, 'ಪ್ರಿಯೆಯು ಅನುಕಂಪಾರ್ಹಳು' ಎಂಬುದನ್ನು ಶಾಸ್ತ್ರಗಳಿಂದ ತಿಳಿದುಕೊಂಡಿದ್ದೇನೆ. ಕಲತ್ರವಂತನಾದವನು ತನ್ನ ಆಶ್ರಮದಿಂದ ಸರ್ವ ಆಶ್ರಮಗಳನ್ನೂ ಸಂಗಡ ಕರೆದುಕೊಂಡು, ಜಲಯಾನಗಳಿಂದ ಸಮುದ್ರವನ್ನು ಹೇಗೋ ಹಾಗೆ, ವ್ಯಸನ ಸಮುದ್ರವನ್ನು ದಾಟುತ್ತಾನೆ. ಆ ಪತ್ನಿಯನ್ನಾಶ್ರಯಿಸಿ, ಇತರ ಆಶ್ರಯಗಳಿಂದ ಜಯಿಸಲು ಬಹು ಕಷ್ಟವಾಗಿರುವ

ಗೇಹಿನೋ ಹೇಲಯಾ ಜಗ್ಮುರ್ದಸ್ಯೂನ್ ದುರ್ಗಪತಿರ್ಯಥಾ ।
ನ ಕೋಽಪಿ ಪ್ರಭವಸ್ತಾಂ ಚಾಪ್ಯನುಕರ್ತುಂ ಗೃಹೇಶ್ವರೀಂ ॥ ೭ ॥
ಅಥಾಯುಷಾ ವಾ ಕಾರ್ತ್ಸ್ನ್ಯೇನ ಧರ್ಮೇ ದಿತ್ಸುರ್ಯಥೈವ ಚ ।
ಯಸ್ಯಾಂ ಭವತಿ ಚಾತ್ಮೈವ ತತೋ ಜಾಯಾ ನಿಗದ್ಯತೇ ॥ ೭ ॥
ಭರ್ತವ್ಯಾ ಏವ ಯಸ್ಮಾಚ್ಚ ತಸ್ಮಾದ್ಭಾರ್ಯೇತಿ ಸಾ ಸ್ಮೃತಾ ।
ಸಾ ಏವ ಗೃಹಮುಕ್ತಂ ಚ ಗೃಹಿಣೀ ಸಾ ತತಃ ಸ್ಮೃತಾ ॥ ೮ ॥
ಸಂಸಾರ ಕಲ್ಮಷಾತ್ತ್ರಾತ್ರೀ ಕಲತ್ರಮಿತಿ ಸಾ ತತಃ ।
ಏವಂ ವಿಧಾಂ ಪ್ರಿಯಾಂ ಕೋ ವೈ ನಾನುಕಂಪಿತುಮರ್ಹತಿ ॥ ೯ ॥
ತ್ರೀಣಿ ಜ್ಯೋತೀಂಷಿ ಪುರುಷ ಇತಿ ವೈ ದೇವಲೋಽಬ್ರವೀತ್ ।
ಭಾರ್ಯಾ ಕರ್ಮ ಚ ವಿದ್ಯಾ ಚ ಸಂಸಾಧ್ಯಂ ಯತ್ನತಸ್ತ್ರಯಂ ॥ ೧೦ ॥
ತದೇನಾಂ ಪೀಡಿತಾಂ ಚೇದ್ಯಃ ಪತಿರ್ಭೂತ್ವಾ ನ ಪಾಲಯೇ ।
ತತೋ ಯಾಸ್ಯೇ ಶಾಸ್ತ್ರವಾದಾನ್ನರಕಾಂತಂ ನ ಸಂಶಯಃ ॥ ೧೧ ॥

---

ಇಂದ್ರಿಯಗಳೆಂಬ ಶತ್ರುಗಳನ್ನು ಗೃಹಸ್ಥಾಶ್ರಮಿಗಳು ದುರ್ಗಾಧಿಪತಿಯು ದಸ್ಯು (ಶತ್ರು)ಗಳನ್ನು ಜಯಿಸುವಂತೆ ಬಹು ಸುಲಭವಾಗಿ ಆಟವಾಡಿದಂತೆಯೇ ಜಯಿಸುತ್ತಾರೆ. ಗೃಹೇಶ್ವರಿಯಾದ ಆಕೆಯನ್ನು ಅನುಕರಿಸುವುದಕ್ಕೆ ಯಾರೂ ಶಕ್ತರಲ್ಲ.

೭. ಧರ್ಮಕ್ಕಾಗಿ ದಾನಮಾಡುವ ಆಯುಸ್ಸು ಹೇಗೆ ಅನುಪಮವಾದುದೋ ಹಾಗೆ ಗೃಹೇಶ್ವರಿಯೂ ಸಹ. ಆಕೆಯನ್ನನುಕರಿಸುವುದು ಯಾರಿಗೂ ಅಸಾಧ್ಯವೇ ಸರಿ. ಪತ್ನಿಯಲ್ಲಿ ತಾನೆ ಹುಟ್ಟಿ ಬರುವನಾದುದರಿಂದ ಅವಳಿಗೆ 'ಜಾಯಾ' ಎಂದು ಹೆಸರು.

೮. ಅವಳು ಭರಿಸಲ್ಪಡತಕ್ಕವಳೇ (ಪೋಷಿಸಲ್ಪಡತಕ್ಕವಳೇ) ಆದುದರಿಂದ ಭಾರ್ಯೆಯೆನ್ನಿಸಿಕೊಳ್ಳುತ್ತಾಳೆ. ಅವಳೇ 'ಗೃಹ'ವೆಂದು ಹೇಳಲ್ಪಟ್ಟಿರುವಳು. ಆದುದರಿಂದ ಅವಳಿಗೆ ಗೃಹಿಣಿಯೆಂದು ಹೆಸರು.

೯. ಸಂಸಾರದ ಕಲ್ಮಷಗಳಲ್ಲಿ ಮುಳುಗದಂತೆ ದಾಟಿಸುವವಳಾದುದರಿಂದ ಅವಳು 'ಕಲತ್ರ'ವೆನ್ನಿಸುವಳು. ಈ ರೀತಿಯಾಗಿರುವ ಪ್ರಿಯೆಯನ್ನು ಯಾವನು ತಾನೆ ಅನುಕಂಪಿಸದಿರಬಹುದು ?

೧೦. 'ಮೂರು ಜ್ಯೋತಿಗಳನ್ನು ಪುರುಷನು ಕಾಪಾಡಿಕೊಳ್ಳಬೇಕು' ಎಂದು ದೇವಲನು ಹೇಳಿದನು. ಭಾರ್ಯೆ, ಕರ್ಮ ಮತ್ತು ವಿದ್ಯೆ— ಇವೇ ಆ ಮೂರು ಜ್ಯೋತಿಗಳು. ಈ ಮೂರನ್ನೂ ಪ್ರಯತ್ನಪಟ್ಟು ಸಾಧಿಸಬೇಕು.

೧೧. ಆದುದರಿಂದ ಶತ್ರುಪೀಡಿತಳಾದ ಇವಳನ್ನು ನಾನು ಪತಿಯಾಗಿಯೂ ಪಾಲಿಸದಿದ್ದಲ್ಲಿ ಆ ಕಾರ್ಯದ ಫಲವಾಗಿ ಶಾಸ್ತ್ರವಚನಾನುಸಾರವಾಗಿ ನರಕವನ್ನು ಪಡೆಯುತ್ತೇನೆ; ಇದರಲ್ಲಿ ಸಂಶಯವಿಲ್ಲವು.

ಅಹಮಪ್ಯೇನಮಿಂದ್ರಂ ವೈ ಶಕ್ತೋ ಜೇತುಂ ಯಥಾಽನ್ಯಥಾ ।
ಪುನಃ ಕಾಮಂ ಕರಿಷ್ಯೇಽಸ್ಯಾ ದಾಸ್ಯೇ ಪುತ್ರಂ ಮಹಾಬಲಂ ॥ ೧೨ ॥
ಇತಿ ಸಂಚಿಂತ್ಯ ವಜ್ರಾಂಗಃ ಕೋಪವ್ಯಾಕುಲಲೋಚನಃ ।
ಪ್ರತಿಕರ್ತುಂ ಮಹೇಂದ್ರಾಯ ತಪೋ ಭೂಯೋ ವ್ಯವಸ್ಯತ ॥ ೧೩ ॥
ಜ್ಞಾತ್ವಾ ತು ತಸ್ಯ ಸಂಕಲ್ಪಂ ಬ್ರಹ್ಮಾ ಕ್ರೂರತರಂ ಪುನಃ ।
ಆಜಗಾಮ ತ್ವರಾಯುಕ್ತೋ ಯತ್ರಾಸೌ ದಿತಿನಂದನಃ ॥ ೧೪ ॥
ಉವಾಚೈನಂ ಸ ಭಗವಾನ್ ಪ್ರಭುರ್ಮಧುರಯಾ ಗಿರಾ ॥ ೧೫ ॥

ಬ್ರಹ್ಮೋವಾಚ :—

ಕಿಮರ್ಥಂ ಭೂಯ ಏವ ತ್ವಂ ನಿಯಮಂ ಕ್ರೂರಮಿಚ್ಛಸಿ ।
ಆಹಾರಾಭಿಮುಖೋ ದೈತ್ಯ ತನ್ಮೇ ಬ್ರೂಹಿ ಮಹಾವ್ರತ ॥ ೧೬ ॥
ಯಾವದಬ್ದಸಹಸ್ರೇಣ ನಿರಾಹಾರೇಣ ವೈ ಫಲಂ ।
ತ್ಯಜತಾ ಪ್ರಾಪ್ತಮಾಹಾರಂ ಲಬ್ಧಂ ತೇ ಕ್ಷಣಮಾತ್ರತಃ ॥ ೧೭ ॥

---

೧೨. ನಾನು ಕೂಡ ಈ ಇಂದ್ರನನ್ನು ಜಯಿಸುವುದಕ್ಕೆ ಶಕ್ತನಾಗಿದ್ದೇನೆ. ಆದರೂ ಇವಳ ಇಷ್ಟಾರ್ಥವನ್ನು ನಡೆಸಿಕೊಡುತ್ತೇನೆ; ಬಹುಬಲನಾದ ಪುತ್ರನನ್ನು ಇವಳಿಗೆ ಕೊಡುತ್ತೇನೆ.''

೧೩. ಹೀಗೆ ಚಿಂತಿಸಿ ಆ ವಜ್ರಾಂಗನು ಕೋಪದಿಂದ ವ್ಯಾಕುಲಹೊಂದಿದ ಕಣ್ಣುಗಳುಳ್ಳವನಾಗಿ ಮಹೇಂದ್ರನಿಗೆ ಪ್ರತೀಕಾರಮಾಡುವುದಕ್ಕೋಸ್ಕರ ಮತ್ತೆ ತಪಸ್ಸಿಗೆ ತೊಡಗಿದನು.

೧೪. ಕ್ರೂರತರವಾದ ಅವನ ಸಂಕಲ್ಪವನ್ನು ತಿಳಿದು ಬ್ರಹ್ಮನು ತ್ವರೆಯಿಂದ ಕೂಡಿದವನಾಗಿ, ಆ ದಿತಿನಂದನನು ಎಲ್ಲಿದ್ದನೋ ಅಲ್ಲಿಗೆ ಮತ್ತೆ ಬಂದನು.

೧೫. ಭಗವಂತನಾದ ಆ ಪ್ರಭುವು ಮಧುರವಾದ ಮಾತಿನಿಂದ ಅವನನ್ನು ಕುರಿತು ಹೀಗೆ ಹೇಳಿದನು :—

೧೬. ಬ್ರಹ್ಮನಿಂತೆಂದನು :— "ಎಲೈ ದೈತ್ಯನೇ! ಆಹಾರಾಭಿಮುಖನಾಗಿದ್ದ ನೀನು ಮತ್ತೂಕೂಡ ಕ್ರೂರವಾದ ಈ ನಿಯಮವನ್ನು ಯಾವ ಪ್ರಯೋಜನಕ್ಕಾಗಿ ಅಪೇಕ್ಷಿಸುತ್ತಿದ್ದೀಯೆ? ಮಹಾವ್ರತವನ್ನು ತಾಳಿರುವ ನೀನು ಅದನ್ನು ನನಗೆ ತಿಳಿಸು.

೧೭. ಒಂದು ಸಾವಿರ ವರ್ಷದವರೆಗೆ ನಿರಾಹಾರವ್ರತವನ್ನು ನಡೆಸಿದುದರಿಂದ ಯಾವ ಫಲವುಂಟಾಗುವುದೋ, ಸಿದ್ಧವಾಗಿ ದೊರೆತ ಆಹಾರವನ್ನು ತ್ಯಜಿಸಿದ ನೀನು ಕ್ಷಣಮಾತ್ರದಲ್ಲಿಯೇ ಆ ಫಲವನ್ನು ಪಡೆದಿರುತ್ತೀಯೆ.

ಗೋಪ್ಯಾ ಹ್ಯಪ್ರಾಪ್ತಕಾಮಾನಾಂ ನ ತಥಾ ಚ ಗುರು ಸ್ಮೃತಃ ।
ಯಥಾ ಪ್ರಾಪ್ತಂ ಪರಿತ್ಯಾಜ್ಯಕಾಮಂ ಕಮಲಲೋಚನ ।
ಶ್ರುತ್ವೈತದ್ಬ್ರಹ್ಮಣೋ ವಾಕ್ಯಂ ದೈತ್ಯಃ ಪ್ರಾಂಜಲಿರಬ್ರವೀತ್ ॥ ೧೮ ॥

ದೈತ್ಯ ಉವಾಚ :—

ಪತ್ನ್ಯರ್ಥೇಽಹಂ ಕರಿಷ್ಯಾಮಿ ತಪೋ ಘೋರಂ ಪಿತಾಮಹ ।
ಪುತ್ರಾರ್ಥಮುದ್ಯತಶ್ಚಾಹಂ ಯಃ ಸ್ಯಾದ್ಗೀರ್ವಾಣದರ್ಪಹಾ ॥ ೧೯ ॥
ಏತಚ್ಛ್ರುತ್ವಾ ವಚೋ ದೇವಃ ಪದ್ಮಗರ್ಭೋದ್ಭವಸ್ತದಾ ।
ಉವಾಚ ದೈತ್ಯರಾಜಾನಂ ಪ್ರಸನ್ನಶ್ಚತುರಾನನಃ ॥ ೨೦ ॥

ಬ್ರಹ್ಮೋವಾಚ :—

ಅಲಂ ತೇ ತಪಸಾ ವತ್ಸ ಮಾ ಕ್ಲೇಶೇ ವಿಸ್ತರೇ ವಿಶ ।
ಪುತ್ರಸ್ತೇ ತಾರಕೋ ನಾಮ ಭವಿಷ್ಯತಿ ಮಹಾಬಲಃ ॥ ೨೧ ॥
ದೇವಸೀಮಂತಿನೀಕಾಮ್ಯ ಧಮ್ಮಿಲ್ಲಕವಿಮೋಕ್ಷಣಃ ।
ಇತ್ಯುಕ್ತೋ ದೈತ್ಯರಾಜಸ್ತು ಪ್ರಣಮ್ಯ ಪ್ರಪಿತಾಮಹಂ ॥ ೨೨ ॥

---

೧೮. ಎಲೈ ಕಮಲಲೋಚನನೇ! ಕೈಗೆ ಬಂದಿರುವ ಇಷ್ಟವಸ್ತುವನ್ನು ಬಿಟ್ಟುಬಿಡುವ ತ್ಯಾಗವು ಎಷ್ಟು ದೊಡ್ಡದೋ, ಕೈಗೆ ಬರದಿರುವ ಕಾಮಗಳ ಪರಿತ್ಯಾಗವು ಅಷ್ಟು ದೊಡ್ಡದಲ್ಲ.'' ಹೀಗೆ ನುಡಿದ ಬ್ರಹ್ಮನ ಮಾತುಗಳನ್ನು ಕೇಳಿ ದೈತ್ಯನು ಕೈಮುಗಿದುಕೊಂಡು ಈ ರೀತಿ ನುಡಿದನು :—

೧೯. ದೈತ್ಯನಿಂತೆಂದನು :—"ಪಿತಾಮಹಾ! ಪತ್ನಿಗೋಸ್ಕರವಾಗಿ ನಾನು ಘೋರವಾದ ತಪಸ್ಸನ್ನು ಮಾಡುತ್ತಿದ್ದೇನೆ. ಯಾವನು ಗೀರ್ವಾಣರ ದರ್ಪವನ್ನು ಧ್ವಂಸಮಾಡುವನೋ ಅಂತಹ ಪುತ್ರನನ್ನು ಪಡೆಯಬೇಕೆಂದು ಯತ್ನಗೊಂಡವನಾಗಿದ್ದೇನೆ.''

೨೦. ಈ ಮಾತನ್ನು ಕೇಳಿ ಪದ್ಮಗರ್ಭದಲ್ಲಿ ಉದ್ಭವಿಸಿದ ಚತುರಾನನನಾದ ಆ ದೇವನು ಪ್ರಸನ್ನನಾಗಿ ದೈತ್ಯರಾಜನನ್ನು ಕುರಿತು ಇಂತು ನುಡಿದನು :—

೨೧. ಬ್ರಹ್ಮನಿಂತೆಂದನು :—"ವತ್ಸ! ನಿನ್ನ ತಪಸ್ಸು ಸಾಕು. ವಿಸ್ತಾರವಾದ ಕ್ಲೇಶದಲ್ಲಿ ಪ್ರವೇಶಿಸಬೇಡ. ನಿನಗೆ ಮಹಾಬಲನಾದ ತಾರಕನೆಂಬ ಮಗನುಂಟಾಗುತ್ತಾನೆ.

೨೨—೨೩. ಅವನು ದೇವಸೀಮಂತಿನಿಯರು ಬಯಸಿ ಬಯಸಿ ಮುಡಿಯುವ ಹೂವನ್ನು ಬಿಚ್ಚುವವನಾಗುತ್ತಾನೆ.'' ಹೀಗೆಂದು ಬ್ರಹ್ಮದೇವನು ನುಡಿದುದನ್ನು ಕೇಳಿ ಆ ದೈತ್ಯರಾಜನು ಪ್ರಪಿತಾಮಹನಾದ ಆತನಿಗೆ ಪ್ರಣಾಮಮಾಡಿ ಕಳುಹಿಸಿಕೊಟ್ಟು, ಸಂತೋಷದಿಂದ ತನ್ನ ರಾಣಿಯ ಬಳಿ ಹೋಗಿ ಆಕೆಯನ್ನು ಆನಂದ

ವಿಸೃಜ್ಯ ಗತ್ವಾ ಮಹಿಷೀಂ ನಂದಯಾಮಾಸ ತಾಂ ಮುದಾ ।
ತೌ ದಂಪತೀ ಕೃತಾರ್ಥೌ ಚ ಜಗ್ಮತುಶ್ಚಾಶ್ರಮಂ ತದಾ ॥ ೨೩ ॥
ಆಹಿತಂ ಚ ತತೋ ಗರ್ಭಂ ವರಾಂಗೀ ವರವರ್ಣಿನೀ ।
ಪೂರ್ಣಂ ವರ್ಷಸಹಸ್ರಂ ತು ದಧಾರೋದರ ಏವ ಹಿ ॥ ೨೪ ॥
ತತೋ ವರ್ಷಸಹಸ್ರಾಂತೇ ವರಾಂಗೀ ಸಮಸೂಯತ ।
ಜಾಯಮಾನೇ ತು ದೈತ್ಯೇಂದ್ರೇ ತಸ್ಮಿಲ್ಲೋಕಭಯಂಕರೇ ॥ ೨೫ ॥
ಚಚಾಲ ಸಕಲಾ ಪೃಥ್ವೀ ಪ್ರೋದ್ಧೂತಾಶ್ಚ ಮಹಾರ್ಣವಾಃ ।
ಚೇಲುರ್ಧರಾಧರಾಶ್ಚಾಪಿ ವವುರ್ವಾತಾ ವಿಭೀಷಣಾಃ ॥ ೨೬ ॥
ಜೇಪುರ್ಜಪ್ಯಂ ಮುನಿವರಾ ವ್ಯಾಧವಿದ್ಧಾ ಮೃಗಾ ಇವ ।
ಜಹುಃ ಕಾಂತಿಂ ಚ ಸೂರ್ಯಾದ್ಯಾ ನೀಹಾರಾಶ್ಛಾದಯನ್ ದಿಶಃ ॥ ೨೭ ॥
ಜಾತೇ ಮಹಾಸುರೇ ತಸ್ಮಿನ್ ಸರ್ವ ಏವ ಮಹಾಸುರಾಃ ।
ಆಜಗ್ಮುರ್ಹರ್ಷಿತಾಸ್ತತ್ರ ತಥಾ ಚಾಸುರಯೋಷಿತಃ ॥ ೨೮ ॥
ಜಗುರ್ಹರ್ಷಸಮಾವಿಷ್ಟಾ ನನೃತುಶ್ಚಾಸುರಾಂಗನಾಃ ।
ತತೋ ಮಹೋತ್ಸವೇ ಜಾತೇ ದಾನವಾನಾಂ ಪೃಥಾ ಸುತ ॥ ೨೯ ॥

---

ಗೊಳಿಸಿದನು. ಆ ದಂಪತಿಗಳು ಕೃತಾರ್ಥರಾಗಿ ಆಗ ತಮ್ಮ ಆಶ್ರಮವನ್ನು ಹೋಗಿ ಸೇರಿದರು.

೨೪. ಆಮೇಲೆ ಆಕೆಯಲ್ಲಿ ಗರ್ಭವು ನೆಲಸಿತು. ವರವರ್ಣಿನಿಯಾದ ಆ ವರಾಂಗಿಯು ಒಂದು ಸಾವಿರ ವರ್ಷಗಳು ಪೂರ್ತಿಯಾಗಿ ಆ ಗರ್ಭವನ್ನು ಉದರದಲ್ಲಿಯೇ ಧರಿಸಿದ್ದಳು.

೨೫-೨೬. ಬಳಿಕ ಸಾವಿರ ವರ್ಷಗಳು ಕಳೆದಮೇಲೆ ವರಾಂಗಿಯು ತಾರಕನನ್ನು ಹೆತ್ತಳು. ಲೋಕಭಯಂಕರನಾದ ಆ ದೈತ್ಯೇಂದ್ರನು ಹುಟ್ಟುತ್ತಿರುವಾಗಲೇ ಪೃಥ್ವಿಯೆಲ್ಲ ಚಲಿಸಿತು; ಮಹಾರ್ಣವಗಳೆಲ್ಲ ಉಕ್ಕೇರಿದವು. ಪರ್ವತಗಳೂ ಕೂಡ ಅದುರಿಹೋದುವು. ಭಯಂಕರವಾದ ಗಾಳಿಗಳು ಬೀಸಿದವು.

೨೭. ಮುನಿವರರೆಲ್ಲ ವ್ಯಾಧರಿಂದ ಹೊಡೆಯಲ್ಪಟ್ಟ ಮೃಗಗಳ ಹಾಗೆ ಕ್ಲೇಶಗೊಂಡು ಮಂತ್ರಗಳನ್ನು ಜಪಿಸತೊಡಗಿದರು. ಸೂರ್ಯಾದಿಗಳು ಕಾಂತಿಗುಂದಿದರು. ಮಂಜುಗಳು ದಿಕ್ಕುಗಳನ್ನೆಲ್ಲ ಮುಚ್ಚಿಬಿಟ್ಟುವು.

೨೮. ಆ ಮಹಾಸುರನು ಜನಿಸಲಾಗಿ ಸಮಸ್ತ ಮಹಾಸುರರೂ ಹರ್ಷಿತರಾಗಿ ಅಲ್ಲಿಗೆ ಬಂದರು. ಹಾಗೆಯೇ ಅಸುರಸ್ತ್ರೀಯರೂ ಅಲ್ಲಿಗೆ ಆಗಮಿಸಿದರು.

೨೯-೩೧. ಆ ಅಸುರಾಂಗನೆಯರು ಹರ್ಷಗೂಡಿದವರಾಗಿ ಹಾಡಿದರು; ನರ್ತನ ಮಾಡಿದರು; ದಾನವರಿಗೆಲ್ಲ ಮಹೋತ್ಸವವಾಯಿತು. ಎಲೈ ಪೃಥಾಸುತನೇ! ಆಗ ಮಹೇಂದ್ರನೇ ಮೊದಲಾದ ದೇವತೆಗಳೆಲ್ಲರೂ ವಿಷಣ್ಣಮನಸ್ಕ

ವಿಷಣ್ಣಮನಸೋ ದೇವಾಃ ಸಮಹೇಂದ್ರಾಸ್ತದಾಭವನ್ ।
ಜಾತಮಾತ್ರಸ್ತು ದೈತ್ಯೇಂದ್ರಸ್ತಾರಕಶ್ಚಂಡವಿಕ್ರಮಃ ॥ ೩೦ ॥
ಅಭಿಷಿಕ್ತೋಽಸುರೋ ದೈತ್ಯೈಃ ಕುರಂಗಮಹಿಷಾದಿಭಿಃ ।
ಸರ್ವಾಸುರಮಹಾರಾಜ್ಯೇ ಯುತಃ ಸರ್ವೈರ್ಮಹಾಸುರೈಃ ॥ ೩೧ ॥
ಸ ತು ಪ್ರಾಪ್ತಮಹಾರಾಜ್ಯಸ್ತಾರಕಃ ಪಾಂಡುಸತ್ತಮ ।
ಉವಾಚ ದಾನವಶ್ರೇಷ್ಠಾನ್ಯುಕ್ತಿಯುಕ್ತಮಿದಂ ವಚಃ ॥ ೩೨ ॥
ಶೃಣುಧ್ವಮಸುರಾಃ ಸರ್ವೇ ವಾಕ್ಯಂ ಮಮ ಮಹಾಬಲಾಃ ।
ಶ್ರುತ್ವಾ ವಃ ಸ್ಥೇಯಸೀ ಬುದ್ಧಿಃ ಕ್ರಿಯತಾಂ ವಚನೇ ಮಮ ॥ ೩೩ ॥
ಅಸ್ಮಾಕಂ ಜಾತಿಧರ್ಮೇಣ ವಿರೂಢಂ ವೈರಮಕ್ಷಯಂ ।
ಕರಿಷ್ಯಾಮ್ಯಹಂ ತದ್ವೈವಂ ತೇಷಾಂ ಚ ವಿಜಯಾಯಚ । ॥ ೩೪ ॥
ಕಿಂ ತು ತತ್ತಪಸಾ ಸಾಧ್ಯಂ ಮನ್ಯೇಽಹಂ ಸುರಸಂಗಮಂ ।
ತಸ್ಮಾದಾದೌ ಕರಿಷ್ಯಾಮಿ ತಪೋ ಘೋರಂ ದನೋಃ ಸುತಾಃ ॥ ೩೫ ॥
ತತಃ ಸುರಾನ್ ವಿಜೇಷ್ಯಾಮೋ ಭೋಕ್ಷ್ಯಾಮೋಽಥ ಜಗತ್ತ್ರಯಂ ।
ಯುಕ್ತೋಪಾಯೋ ಹಿ ಪುರುಷಃ ಸ್ಥಿರಶ್ರೀರೇವ ಜಾಯತೇ ॥ ೩೬ ॥

---

ರಾದರು. ಚಂಡವಿಕ್ರಮನಾದ ಆ ತಾರಕ ದೈತ್ಯೇಂದ್ರನು ಹುಟ್ಟಿದ ಕೂಡಲೆ ಕುರಂಗ, ಮಹಿಷ ಮೊದಲಾದ ಸಮಸ್ತ ಮಹಾಸುರರಿಂದಲೂ ಸರ್ವಾಸುರ ಮಹಾರಾಜ್ಯದಲ್ಲಿ ಅಭಿಷಿಕ್ತನಾದನು.

೩೨. ಎಲೈ ಪಾಂಡವಶ್ರೇಷ್ಠನೇ! ಆ ತಾರಕನು ಮಹಾರಾಜ್ಯವನ್ನು ಪಡೆದವನಾಗಿ ದಾನವ ಶ್ರೇಷ್ಠರನ್ನು ಕುರಿತು ಯುಕ್ತಿ ಯುಕ್ತವಾದ ಈ ವಚನ ವನ್ನು ಹೇಳಿದನು.

೩೩. "ಮಹಾಬಲರಾದ ಎಲ್ಲ ಅಸುರರೂ ನನ್ನ ಮಾತುಗಳನ್ನು ಕೇಳಿರಿ. ಕೇಳಿ ನನ್ನ ಮಾತಿನಲ್ಲಿ ಸ್ಥಿರವಾದ ಬುದ್ಧಿಯನ್ನಿಡಿರಿ.

೩೪. ನಮಗೆ ನಮ್ಮ ಜಾತಿಧರ್ಮದಿಂದ ಅಕ್ಷಯವಾದ ವೈರವೃದ್ಧಿ ಯಾಗಿದೆ. ಆ ವೈರವನ್ನು ಆ ದೇವತೆಗಳ ವಿಜಯಕ್ಕಾಗಿ ನಾನು ಉಪಯೋಗಿಸು ತ್ತೇನೆ.

೩೫. ಆದರೆ, ದೇವತೆಗಳನ್ನು ಕೂಡಿ ಕಾಡುವುದು ತಪಸ್ಸಿನಿಂದ ಸಾಧ್ಯ ವೆಂದು ಭಾವಿಸುತ್ತೇನೆ. ಆದುದರಿಂದ, ಎಲೈ ದನುಸುತರೇ! ನಾನು ಮೊದಲು ಘೋರವಾದ ತಪಸ್ಸನ್ನು ಮಾಡುತ್ತೇನೆ.

೩೬. ಬಳಿಕ ಈ ಸುರರನ್ನು ಜಯಿಸೋಣ; ಆ ತರುವಾಯ ಮೂರು ಲೋಕಗಳನ್ನೂ ಅನುಭವಿಸೋಣ. ಪುರುಷನಾದವನು ಯುಕ್ತವಾದ ಉಪಾಯ ಗಳನ್ನನುಸರಿಸುವವನಾದರೆ ಸ್ಥಿರವಾದ ಸಂಪತ್ತುಳ್ಳವನೇ ಆಗುತ್ತಾನೆ.

ಅಯುಕ್ತಶ್ಚ ಪಲಃ ಪ್ರಾಪ್ತಾಮಪಿ ರಕ್ಷಿತುಮಕ್ಷಮಃ ।
ತಚ್ಛ್ರುತ್ವಾ ದಾನವಾಃ ಸರ್ವೇ ವಾಕ್ಯಂ ತಸ್ಯಾಸುರಸ್ಯ ತು ॥ ೩೭ ॥
ಸಾಧು ಸಾಧ್ವಿತ್ಯಥೋಚುಸ್ತೇ ವಚನಂ ತಸ್ಯ ವಿಸ್ಮಿತಾಃ ।
ಸೋಽಗಚ್ಛತ್ಪಾರಿಯಾತ್ರಸ್ಯ ಗಿರೇಃ ಕಂದರಮುತ್ತಮಂ ॥ ೩೮ ॥
ಸರ್ವರ್ತು ಕುಸುಮಾಕೀರ್ಣನಾನೌಷಧಿವಿದೀಪಿತಂ ।
ನಾನಾ ಧಾತು ರಸಸ್ರಾವೀ ಚಿತ್ರನಾನಾಗೃಹಾಶ್ರಯಂ ॥ ೩೯ ॥
ಅನೇಕಾಕಾರಬಹುಲಂ ಪೃಥುಪಕ್ಷಿಕುಲಾಕುಲಂ ।
ನಾನಾ ಪ್ರಸ್ರವಣೋಪೇತಂ ನಾನಾವಿಧ ಜಲಾಶಯಂ ॥ ೪೦ ॥
ಪ್ರಾಪ್ಯ ತತ್ಕಂದರಂ ದೈತ್ಯಶ್ಚಕಾರ ವಿಪುಲಂ ತಪಃ ।
ವಹನ್ ಪಾಶುಪತೀಂ ದೀಕ್ಷಾಂ ಪಂಚಮಂತ್ರಾನ್ ಜಜಾಪ ಸಃ ॥ ೪೧ ॥
ನಿರಾಹಾರಃ ಪಂಚತಪಾ ವರ್ಷಾಯುತಮಭೂತ್ ಕಿಲ ।
ತತಃ ಸ್ವದೇಹಾದುತ್ಕೃತ್ಯ ಕರ್ಷಂ ಕರ್ಷಂ ದಿನೇ ದಿನೇ ॥ ೪೨ ॥
ಮಾಂಸಸ್ಯಾಗ್ನೌ ಜಹಾವ್ಯೈವ ತತೋ ನಿರ್ಮಾಂಸತಾಂ ಗತಃ ।
ತತೋ ನಿರ್ಮಾಂಸದೇಹಃ ಸ ತಪೋರಾಶಿರಜಾಯತ ॥ ೪೩ ॥

---

೩೭–೩೮. ತಕ್ಕ ಉಪಾಯಗಳನ್ನನುಸರಿಸದವನೂ, ಚಪಲನೂ ಆದ ಮಾನವನು ಕೈಗೆ ದೊರಕಿದ ಸಂಪತ್ತನ್ನೂ ರಕ್ಷಿಸಲು ಸಮರ್ಥನಾಗುವುದಿಲ್ಲ.” ಆ ಅಸುರನ ಮಾತನ್ನು ಕೇಳಿ ದಾನವರೆಲ್ಲರೂ ವಿಸ್ಮಿತರಾಗಿ, ‘ಸಾಧು! ಸಾಧು!’ ಎಂದು ಮೆಚ್ಚಿ ನುಡಿದರು. ಬಳಿಕ ತಾರಕಾಸುರನು ಪಾರಿಯಾತ್ರಗಿರಿಯ ಉತ್ತಮವಾದ ಕಣಿವೆಗೆ ಹೋಗಿ ಸೇರಿದನು.

೩೯. ಆ ಕಣಿವೆಯಾದರೋ ಸರ್ವ ಋತುಗಳ ವಿವಿಧ ಕುಸುಮಗಳಿಂದ ತುಂಬಿರುವ ನಾನಾ ಬಗೆಯ ಔಷಧಿಗಳಿಂದ ಬೆಳಗುತ್ತಿದ್ದಿತು. ಬಗೆ ಬಗೆಯ ಧಾತುರಸಗಳನ್ನು ಸ್ರವಿಸುತ್ತಿರುವ ಚಿತ್ರವಿಚಿತ್ರವಾದ ಚಿತ್ರಗೃಹಗಳಿಗೆ ಆಶ್ರಯ ವಾಗಿದ್ದಿತು.

೪೦. ಅನೇಕ ಆಕಾರಗಳುಳ್ಳ ಬಗೆ ಬಗೆಯ ಪಕ್ಷಿಸಮೂಹಗಳ ಕಲಕಲ ನಾದದಿಂದ ಪೂರ್ಣವಾಗಿದ್ದಿತು; ಬಗೆ ಬಗೆಯ ಚಿಲುಮೆಗಳಿಂದಲೂ, ಬಗೆ ಬಗೆಯ ಜಲಾಶಯಗಳಿಂದಲೂ ಕೂಡಿದ್ದಿತು.

೪೧. ಆ ಕಂದರವನ್ನು ಸೇರಿದ ಆ ತಾರಕ ದೈತ್ಯನು ಬಹಳವಾದ ತಪಸ್ಸನ್ನು ಮಾಡಿದನು. ಪಾಶುಪತದೀಕ್ಷೆಯನ್ನು ಧರಿಸಿ, ಅವನು ಪಂಚ ಮಂತ್ರಗಳನ್ನು ಜಪಿಸುತ್ತಿದ್ದನು.

೪೨–೪೩. ನಿರಾಹಾರನಾಗಿ ಹತ್ತುಸಾವಿರ ವರ್ಷಗಳವರೆಗೆ ಪಂಚತಪಸ್ಸು ಗಳನ್ನು ಮಾಡುತ್ತಲಿದ್ದನು. ಬಳಿಕಲವನು ದಿನದಿನವೂ ತನ್ನ ದೇಹದಿಂದ

ಜಜ್ವಲುಃ ಸರ್ವಭೂತಾನಿ ತೇಜಸಾ ತಸ್ಯ ಸರ್ವತಃ ।
ಉದ್ವಿಗ್ನಾಶ್ಚ ಸುರಾಃ ಸರ್ವೇ ತಪಸಾ ತಸ್ಯ ಭೀಷಿತಾಃ ॥ ೪೪ ॥
ಏತಸ್ಮಿನ್ನಂತರೇ ಬ್ರಹ್ಮಾ ಪರಮಂ ತೋಷಮಾಗತಃ ।
ತಾರಕಸ್ಯ ವರಂ ದಾತುಂ ಜಗಾಮ ಶಿಖರಂ ಗಿರೇಃ ॥ ೪೫ ॥
ಪ್ರಾಪ್ಯ ತಂ ಶೈಲರಾಜಾನಂ ಹಂಸಸ್ಯಂದನಮಾಸ್ಥಿತಃ ।
ಉವಾಚ ತಾರಕಂ ದೇವೋ ಗಿರಾ ಮಧುರಯಾ ತದಾ ॥ ೪೬ ॥

ಬ್ರಹ್ಮೋವಾಚ :—

ಉತ್ತಿಷ್ಠ ಪುತ್ರ ತಪಸೋ ನಾಸ್ತ್ಯಸಾಧ್ಯಂ ತವಾಧುನಾ ।
ವರಂ ವೃಣೀಷ್ವಾಭಿಮತಂ ಯತ್ ತೇ ಮನಸಿ ವರ್ತತೇ ॥ ೪೭ ॥
ಇತ್ಯುಕ್ತಸ್ತಾರಕೋ ದೈತ್ಯಃ ಪ್ರಾಂಜಲಿಃ ಪ್ರಾಹ ತಂ ವಿಭುಂ ॥ ೪೮ ॥

ತಾರಕ ಉವಾಚ :—

ವಯಂ ಪ್ರಭೋ ಜಾತಿಧರ್ಮಾಃ ಕೃತವೈರಾಃ ಸಹಾಮರೈಃ ।
ತೈಶ್ಚ ನಿಶ್ಶೇಷಿತಾ ದೈತ್ಯಾಃ ಕೃತಾಃ ಕ್ರೂರೈರ್ನೃಶಂಸವತ್ ॥ ೪೯ ॥

---

ಮಾಂಸವನ್ನು ಎಳೆದೆಳೆದು ಕತ್ತರಿಸಿ ಅಗ್ನಿಯಲ್ಲಿ ಹೋಮ ಮಾಡತೊಡಗಿದನು. ಈ ರೀತಿ ಹೋಮ ಮಾಡಿ ಮಾಡಿ, ಮೈಯಲ್ಲಿ ಮಾಂಸವೇ ಇಲ್ಲವಾಯಿತು. ಆಮೇಲೆ ನಿರ್ಮಾಂಸದೇಹವುಳ್ಳ ಆತನು ತಪೋರಾಶಿಯಾಗಿ ಪರಿಣಮಿಸಿದನು.

೪೪–೪೫. ಆತನ ತೇಜಸ್ಸಿನಿಂದ ಎಲ್ಲ ಕಡೆಯಲ್ಲಿಯೂ ಸರ್ವಭೂತಗಳೂ ಸುಡತೊಡಗಿದವು. ಸುರರೆಲ್ಲ ಆತನ ತಪಸ್ಸಿನಿಂದ ಭೀತಿಗೊಂಡವರಾಗಿ ಬಹಳವಾಗಿ ಕಳವಳಗೊಂಡರು. ಈ ಮಧ್ಯೆ ಬ್ರಹ್ಮನು ಪರಮ ಸಂತೋಷಹೊಂದಿದವನಾಗಿ ತಾರಕನಿಗೆ ವರವನ್ನು ಕೊಡುವುದಕ್ಕೋಸ್ಕರ ಗಿರಿಯ ಶಿಖರಕ್ಕೆ ಹೋದನು.

೪೬. ಶೈಲರಾಜನೆನಿಸಿದ ಆ ಪಾರಿಯಾತ್ರ ಪರ್ವತವನ್ನು ಸೇರಿ, ಹಂಸ ರಥದಲ್ಲಿ ನೆಲಸಿದವನಾಗಿ ಬ್ರಹ್ಮದೇವನು ತಾರಕನನ್ನು ಕುರಿತು ಮಧುರವಾಕ್ಯಗಳಿಂದ ಈ ರೀತಿ ಹೇಳಿದನು:—

೪೭. ಬ್ರಹ್ಮನಿಂತೆಂದನು :—"ಏಳು, ಮಗನೇ! ಏಳು. ಈಗ ನಿನ್ನ ತಪಸ್ಸಿಗೆ ಅಸಾಧ್ಯವಾದುದು ಯಾವುದೂ ಇರುವುದಿಲ್ಲ. ನಿನಗೆ ಅಭಿಮತವಾದ ವರವನ್ನು ಬೇಡು. ನಿನ್ನ ಮನಸ್ಸಿನಲ್ಲಿ ಏನಿರುವುದೋ ಆ ವರವನ್ನು ಬೇಡು."

೪೮. ಈ ರೀತಿ ತನ್ನನ್ನು ಕುರಿತು ಬ್ರಹ್ಮದೇವನು ನುಡಿದ ನುಡಿಗಳನ್ನಾಲಿಸಿ ಆ ತಾರಕ ದೈತ್ಯನು ಕೈಮುಗಿದುಕೊಂಡು ವಿಭುವಾದ ಆ ಬ್ರಹ್ಮದೇವನನ್ನು ಕುರಿತು ಹೀಗೆ ವಿಜ್ಞಾಪಿಸಿಕೊಂಡನು :—

೪೯. ತಾರಕನಿಂತೆಂದನು :—"ಪ್ರಭುವೇ! ಹುಟ್ಟಿನಿಂದಲೇ ದೈತ್ಯರಾದ ನಮಗೆ ಕೆಲವು ಸ್ವಾಭಾವಿಕವಾದ ಧರ್ಮಗಳನ್ನು ಕೊಟ್ಟಿರುವೆ. ಆ ಜಾತಿಧರ್ಮ

ತೇಷಾಮಹಂ ಸಮುದ್ಧರ್ತಾ ಭವೇಯಮಿತಿ ಮೇ ಮತಿಃ ।
ಅವಧ್ಯಃ ಸರ್ವಭೂತಾನಾಮಸ್ತ್ರಾಣಾಂ ಚ ಮಹೌಜಸಾಂ ॥ ೫೦ ॥
ಸ್ಯಾಮಹಂ ಚಾಮರೈಶ್ಚೈಷ ವರೋ ಮಮಹೃದಿ ಸ್ಥಿತಃ ।
ಏತನ್ಮೇ ದೇಹಿ ದೇವೇಶ ನಾನ್ಯಂ ವೈ ರೋಚತೇ ವರಂ ॥ ೫೧ ॥
ತಮುವಾಚ ತತೋ ದೈತ್ಯಂ ವಿರಿಂಚೋಽಮರನಾಯಕಃ ।
ನ ಯುಜ್ಯತೇ ವಿನಾ ಮೃತ್ಯುಂ ದೇಹಿನೋ ದೇಹಧಾರಣಂ ।
ಜಾತಸ್ಯ ಹಿ ಧ್ರುವೋ ಮೃತ್ಯುಃ ಸತ್ಯಮೇತಚ್ಛ್ರುತೀರಿತಂ ॥ ೫೨ ॥
ಇತಿ ಸಂಚಿಂತ್ಯ ವರಯ ವರಂ ಯಸ್ಮಾನ್ನ ಶಂಕಸೇ ।
ತತಃ ಸಂಚಿತ್ಯ ದೈತ್ಯೇಂದ್ರಃ ಶಿಶುತಃ ಸಪ್ತವಾಸರಾತ್ ॥ ೫೩ ॥

ತಾರಕ ಉವಾಚ :—

ವಾಸರಾಣಾಂ ಚ ಸಪ್ತಾನಾಂ ವರ್ಜಯಿತ್ವಾ ತು ಬಾಲಕಂ ।
ದೇವಾನಾಮಪ್ಯವಧ್ಯೋಽಹಂ ಭೂಯಾಸಂ ತೇನ ಯಾಚಿತಃ ॥ ೫೪ ॥

---

ದಿಂದ. ನಾವು ದೇವತೆಗಳೊಡನೆ ಬದ್ಧವೈರವುಳ್ಳವರಾಗಿದ್ದೇವೆ. ಕಠಿನಾತ್ಮಕರಾದ ಆ ಸುರರು ಧರ್ಮವಿದ್ರೋಹಿಗಳ ಹಾಗೆ, ದೈತ್ಯರನ್ನೆಲ್ಲ ಒಬ್ಬರನ್ನೂ ಬಿಡದೆ ನಿಃಶೇಷಗೊಳಿಸಿದರು.

೫೦–೫೧. ಕಳೆದುಳಿದ ಆ ದೈತ್ಯರಿಗೆ ನಾನು ಉದ್ಧಾರಕನಾಗಬೇಕೆಂಬುದೇ ನನ್ನ ಬಯಕೆ. ಸರ್ವಭೂತಗಳಿಗೂ, ಮಹಾ ಓಜಸ್ಸುಳ್ಳ ಸಮಸ್ತ ಅಸ್ತ್ರಗಳಿಗೂ, ನಾನು ಅವಧ್ಯನಾಗಬೇಕು; ಇಷ್ಟೆಯಲ್ಲದೆ ಅಮರರಿಂದಲೂ ನಾನು ಅವಧ್ಯನಾಗಬೇಕು. ಈ ವರವೇ ನನ್ನ ಮನಸ್ಸಿನಲ್ಲಿರುವುದು. ಎಲೈ ದೇವೇಶನೇ! ನನಗೆ ಈ ವರವನ್ನೇ ನೀಡು. ಬೇರೆ ಯಾವ ವರವೂ ನನಗೆ ರುಚಿಸುವುದಿಲ್ಲವು.''

೫೨. ಬಳಿಕ ಅಮರನಾಯಕನಾದ ಆ ಬ್ರಹ್ಮದೇವನು ಆ ದೈತ್ಯನನ್ನು ಕುರಿತು ಹೀಗೆಂದನು:—'' ಅಯ್ಯಾ ತಾರಕನೇ! ದೇಹಿಯಾದವನಿಗೆ ಮೃತ್ಯುವಿಲ್ಲದೆ ದೇಹವನ್ನು ಧರಿಸಿಯೇ ಇರುವುದು ಎಂದಿಗೂ ಹೊಂದುವುದಿಲ್ಲ. ಹುಟ್ಟಿದವನಿಗೆ ಸಾವು ಹೇಗೂ ಸ್ಥಿರವೇ! ಇದು ಸತ್ಯ, ಶ್ರುತಿಗಳಲ್ಲಿಯೂ ಹೇಳಿರುವುದು.

೫೩. ಈ ಸಂಗತಿಯನ್ನು ನೆನಪಿನಲ್ಲಿಟ್ಟುಕೊಂಡು, ಯಾವುದರಲ್ಲಿ ನಿನಗೆ ಶಂಕೆ ತೋರುವುದಿಲ್ಲವೋ ಅಂಥ ವರವನ್ನು ಬೇಡು.'' ಬ್ರಹ್ಮನ ಈ ಮಾತನ್ನು ಕೇಳಿ ಆ ದೈತ್ಯೇಂದ್ರನು ತನ್ನ ಮನಸ್ಸಿನಲ್ಲಿ 'ಏಳು ದಿನದ ಶಿಶುವಿನಿಂದ ಮರಣವಾಗಲಿ ಎಂದು ಕೇಳಿಕೊಳ್ಳೋಣ'ವೆಂದು ಚಿಂತಿಸಿದನು.

೫೪. ತಾರಕನಿಂತೆಂದನು:—'' ಏಳು ದಿನಗಳ ಮಗುವು ಹೊರತಾಗಿ ಯಾವ ದೇವತೆಗಳಿಗೂ ಕೂಡ ನಾನು ಅವಧ್ಯನಾಗುವಂತೆ ಅನುಗ್ರಹಿಸಬೇಕು'' ಎಂದು ಕೇಳಿಕೊಂಡನು.

ವಮೋ ಮಹಾಸುರೋ ಮೃತ್ಯುಂ ಬ್ರಹ್ಮಾಣಂ ಮಾನಮೋಹಿತಃ ।
ಬ್ರಹ್ಮಾ ಪ್ರೋಚೇ ತತಸ್ತಂ ಚ ತಥೇತಿ ಹರವಾಕ್ಯತಃ ॥ ೫೫ ॥
ಜಗಾಮ ತ್ರಿದಿವಂ ದೇವೋ ದೈತ್ಯೋಽಪಿ ಸ್ವಕಮಾಲಯಂ ।
ಉತ್ತೀರ್ಣಂ ತಪಸಸ್ತಂ ಚ ದೈತ್ಯಂ ದೈತ್ಯೇಶ್ವರಾಸ್ತದಾ ॥ ೫೬ ॥
ಪರಿವವ್ರುಃ ಫಲಾಕೀರ್ಣಂ ವೃಕ್ಷಂ ಶಕುನಯೋ ಯಥಾ ।
ತಸ್ಮಿನ್ ಮಹತಿ ರಾಜ್ಯಸ್ಥೇ ತಾರಕೇ ದಿತಿನಂದನೇ ॥ ೫೭ ॥
ಬ್ರಹ್ಮಣಾಭಿಹಿತಸ್ಥಾನೇ ಮಹಾರ್ಣವ ತಪೋತ್ತರೇ ।
ತರವೋ ಜಜ್ಞಿರೇ ಪಾರ್ಥ ತತ್ರ ಸರ್ವರ್ತವಃ ಶುಭಾಃ ॥ ೫೮ ॥
ಕಾಂತಿರ್ದ್ಯುತಿ ಧೃತಿರ್ಮೇಧಾ ಶ್ರೀರಖಂಡಾ ಚ ದಾನವಂ ।
ಪರಿವವ್ರುರ್ಗುಣಾಕೀರ್ಣಂ ನಿಶ್ಛಿದ್ರಾಃ ಸರ್ವ ಏವಹಿ ॥ ೫೯ ॥
ಕಾಲಾಗರುವಿಲಿಪ್ತಾಂಗಂ ಮಹಾಮುಕುಟಮಂಡಿತಂ ।
ರುಚಿರಾಂಗದಸಂನದ್ಧಂ ಮಹಾಸಿಂಹಾಸನೇ ಸ್ಥಿತಂ . ॥ ೬೦ ॥
ನೃತ್ಯಂತ್ಯಪ್ಸರಸಃ ಶ್ರೇಷ್ಠಾ ಗಂಧರ್ವಾ ಗಾಯಯಂತಿ ಚ ।
ಚಂದ್ರಾರ್ಕೌ ದೀಪಮಾರ್ಗೇಷು ವ್ಯಜನೇಷು ಚ ಮಾರುತಃ ।
ಗ್ರಹಾ ಅಗ್ರೇಸರಾಸ್ತಸ್ಯ ಜೀವಾದೇಶಪ್ರಭಾಷಿಣಃ ॥ ೬೧ ॥

---

೫೫–೫೯. ಮಾನ(ಅಹಂಕಾರ)ದಿಂದ ಮೋಹಿತನಾಗಿ ಆ ಮಹಾಸುರನು ಬ್ರಹ್ಮನನ್ನು ಈ ರೀತಿ ನನಗೆ ಮೃತ್ಯುವನ್ನು ಕೊಡೆಂದು ಬೇಡಿಕೊಂಡನು. ಬ್ರಹ್ಮನು ಹರನ ವಾಕ್ಯಾನುಸಾರವಾಗಿ 'ಹಾಗೆಯೇ ಆಗಲೆಂದು' ಆ ತಾರಕನನ್ನು ಕುರಿತು ನುಡಿದು ಸ್ವರ್ಗಕ್ಕೆ ಹೊರಟುಹೋದನು. ದೈತ್ಯನೂ ಸಹ ತನ್ನ ಮನೆಗೆ ಬಂದನು. ಹೀಗೆ ತಪಸ್ಸು ಮಾಡಿ ಉತ್ತೀರ್ಣನಾಗಿ ಬಂದ ಆ ದೈತ್ಯನನ್ನು ದೈತ್ಯೇಶ್ವರರೆಲ್ಲರೂ ಫಲಭರಿತವಾದ ಮರವನ್ನು ಹಕ್ಕಿಗಳು ಮುತ್ತುವಂತೆ ಸುತ್ತುವರಿದರು. ಅಯ್ಯಾ ಪಾರ್ಥನೇ! ಹೀಗೆ ದಿತಿನಂದನನಾದ ಆ ತಾರಕನು ಮಹತ್ತ್ವವನ್ನು ಪಡೆದು ರಾಜ್ಯದಲ್ಲಿ ನೆಲಸಿರಲಾಗಿ ಬ್ರಹ್ಮನಿಂದ ಹೇಳಲ್ಪಟ್ಟ ಸ್ಥಾನದಲ್ಲಿ, ಮಹಾರ್ಣವದ ದಡದಲ್ಲಿ, ಉತ್ತರದ ದಿಶೆಯಲ್ಲಿ, ಸರ್ವ ಋತುಗಳಿಗೂ ತಕ್ಕುವಾದ ಶುಭಕರಗಳಾದ ಮರಗಳು ಹುಟ್ಟಿದವು. ಕಾಂತಿ, ದ್ಯುತಿ, ಧೃತಿ, ಮೇಧಾ, ಅಖಂಡಶ್ರೀ — ಇವಿಷ್ಟೂ ಗುಣಗಳು ಆ ದಾನವನನ್ನು ಸುತ್ತುವರಿದವು. ಈ ಸಮಸ್ತ ಶುಭಸಂಪದಗಳು ಸ್ವಲ್ಪವೂ ಒಡಕಿಲ್ಲದಂತೆ ಚೆನ್ನಾಗಿ ಅವನನ್ನು ಹೊಂದಿಕೊಂಡಿದ್ದುವು.

೬೦–೬೧. ಕಪ್ಪು ಅಗುರನ್ನು ಅಂಗಗಳಿಗೆ ಲೇಪಿಸಿಕೊಂಡು ಮಹಾ ಮಕುಟಮಂಡಿತನಾಗಿ ಮನೋಹರವಾದ ಅಂಗದವೇ ಮೊದಲಾದ ಆಭರಣಗಳನ್ನು ಧರಿಸಿ ಸಿಂಹಾಸನದಮೇಲೆ ಆ ತಾರಕನು ಕುಳಿತನು. ಆಗ ಅವನೆದುರಿಗೆ

ಏವಂ ಸ್ವಕಾದ್ಬಾಹು ಬಲಾತ್ ಸ ದೈತ್ಯಃ ।
ಸಂಪ್ರಾಪ್ಯ ರಾಜ್ಯಂ ಪರಿಮೋದಮಾನಃ ।
ಕದಾಚಿದಾಭಾಷ್ಯ ಜಗಾದ ಮಂತ್ರಿಣಃ ।
ಪ್ರೋದ್ವೃತ್ತ ಸರ್ವಾಂಗಬಲೇನ ದರ್ಪಿತಃ ॥ ೬೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಕುಮಾರೇಶ ಮಾಹಾತ್ಮ್ಯೇ ತಾರಕಾಸುರೋತ್ಪತ್ತಿ ವರ್ಣನಂ" ನಾಮ
ಪಂಚದಶೋಽಧ್ಯಾಯಃ

---

ಅಪ್ಸರ ಸ್ತ್ರೀಯರಲ್ಲಿ ಶ್ರೇಷ್ಠರಾದವರು ನರ್ತಿಸಿದರು, ಗಂಧರ್ವರು ಗಾನಮಾಡಿದರು, ಚಂದ್ರ ಸೂರ್ಯರು ದೀಪಮಾರ್ಗಗಳಲ್ಲಿ ನಿಂತರು, ಬೀಸಣಿಗೆಗಳ ಸ್ಥಾನದಲ್ಲಿ ವಾಯುವು ನಿಂತನು, ಗ್ರಹಗಳು ಅವನ ಆಯುಷ್ಯದ ಫಲಾಫಲಗಳನ್ನು ಹೇಳುವುದರಲ್ಲಿ ತಾವೇ ನಾಮುಂದು ತಾಮುಂದೆಂದು ಸ್ಪರ್ಧಿಸಿ ಮುಂದುವರಿಯುತ್ತಿದ್ದುವು.

೬೨. ಈ ರೀತಿ ತನ್ನ ಬಾಹುಬಲದಿಂದಲೇ ರಾಜ್ಯವನ್ನು ಪಡೆದ ಆ ದೈತ್ಯನು ಅಮಿತಾನಂದವನ್ನನುಭವಿಸುತ್ತಿದ್ದು, ಒಂದಾನೊಂದು ಸಮಯದಲ್ಲಿ ತನ್ನ ಸರ್ವಾಂಗಬಲದಿಂದಲೂ ಹೆಮ್ಮೆಗೊಂಡವನಾಗಿ ಮಂತ್ರಿಗಳನ್ನು ಕರೆಯಿಸಿ ಈ ರೀತಿ ನುಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಕುಮಾರೇಶ ಮಾಹಾತ್ಮ್ಯದಲ್ಲಿ ತಾರಕೋತ್ಪತ್ತಿ ವರ್ಣನೆ"ಯೆಂಬ
ಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷೋಡಶೋಽಧ್ಯಾಯಃ

### ತಾರಕಾಸುರ ದೇವೇಂದ್ರ ಯುದ್ಧೋಪಕ್ರಮ ವರ್ಣನಂ

ತಾರಕ ಉವಾಚ :—

**ರಾಜ್ಯೇನ ಬುದ್ಬುದಾಭೇನ ಸ್ತ್ರೀಭಿರಕ್ಷೈಶ್ಚ ಪಾನಕೈಃ ।**
**ಮೋಹಿತೋ ಜನ್ಮಲಬ್ಧ್ವಾತ್ರ ತ್ಯಜತೇ ಪೌರುಷಂ ನರಃ ॥ ೧ ॥**
**ಜನ್ಮ ತಸ್ಯ ವೃಥಾ ಸರ್ವಮಾಕಲ್ಪಾಂತಂ ನ ಸಂಶಯಃ ॥ ೨ ॥**

**ಮಾತಾಪಿತೃಭ್ಯಾಂ ನ ಕರೋತಿ ಕಾಮಾನ್**
**ಬಂಧೂನಶೋಕಾನ್ ನ ಕರೋತಿ ಯೋವಾ ।**
**ಕೀರ್ತಿಂ ಹಿ ವಾ ನಾರ್ಜಯತೇ ನ ಮಾನಂ**
**ನರಃ ಸ ಜಾತೋಽಪಿ ಮೃತೋಽತ್ರ ಲೋಕೇ ॥ ೩ ॥**
**ತಸ್ಮಾಜ್ಜಯಾಯಾಮರ ಪುಂಗವಾನಾಂ**
**ತ್ರೈಲೋಕ್ಯ ಲಕ್ಷ್ಮೀಹರಣಾಯ ಶೀಘ್ರಂ ।**
**ಸಂಯೋಜ್ಯತಾಂ ಮೇ ರಥಮಷ್ಟ ಚಕ್ರಂ**
**ಬಲಂ ಚ ಮೇ ದುರ್ಜಯ ದೈತ್ಯ ಚಕ್ರಂ ॥ ೪ ॥**

---

## ಕನ್ನಡದ ಅನುವಾದ

### ತಾರಕಾಸುರ ದೇವೇಂದ್ರ ಯುದ್ಧೋಪಕ್ರಮ ವರ್ಣನ

೧. ತಾರಕನಿಂತೆಂದನು:—“ನೀರುಗುಳ್ಳೆಯಂತಿರುವ ಈ ರಾಜ್ಯದಿಂದಲೂ, ಸ್ತ್ರೀಯರಿಂದಲೂ, ಪಗಡೆಯಾಟಗಳಿಂದಲೂ, ಪಾನಕಗಳಿಂದಲೂ ಮನುಷ್ಯನು ಮೋಹಿತನಾಗಿ ಈ ಭೂಲೋಕದಲ್ಲಿ ಜನ್ಮವನ್ನು ಪಡೆದೂ ಪೌರುಷವನ್ನು ಕಳೆದು ಕೊಳ್ಳುತ್ತಾನೆ.

೨. ಅಂಥವನ ಜನ್ಮವು ವ್ಯರ್ಥವೇ ಸರಿ; ಕಲ್ಪಕಾಲದವರೆಗೆ ಬಾಳಿದರೂ ಆ ಜನ್ಮವು ವ್ಯರ್ಥವೇ! ಇದರಲ್ಲಿ ಸಂಶಯವಿಲ್ಲವು.

೩. ಯಾವ ಮನುಷ್ಯನು ತಾಯಿ ತಂದೆಗಳ ಇಷ್ಟವನ್ನು ನಡೆಸುವುದಿಲ್ಲವೋ, ಯಾವನು ಬಂಧುಗಳನ್ನು ಶೋಕರಹಿತರನ್ನಾಗಿ ಮಾಡುವುದಿಲ್ಲವೋ, ಯಾವನು ಕೀರ್ತಿಯನ್ನೂ, ಮಾನವನ್ನೂ ಸಂಪಾದಿಸುವುದಿಲ್ಲವೋ ಅಂತಹವನು ಹುಟ್ಟಿ, ಈ ಲೋಕದಲ್ಲಿ ಬದುಕಿದ್ದರೂ ಸತ್ತಹಾಗೆಯೇ ಸರಿ.

೪. ಆದುದರಿಂದೆಲ್ಲೈ ದೈತ್ಯರೇ! ಅಮರಶ್ರೇಷ್ಠರನ್ನು ಜಯಿಸುವುದ ಕ್ಕಾಗಿಯೂ, ಮೂರುಲೋಕದ ಸಂಪತ್ತನ್ನೂ ಹರಣಮಾಡಿಕೊಂಡು ಬರುವುದ ಕ್ಕಾಗಿಯೂ, ಎಂಟು ಚಕ್ರಗಳಿಂದ ಕೂಡಿದ ನನ್ನ ರಥವನ್ನು ಶೀಘ್ರವಾಗಿ

ಧ್ವಜಂ ಚ ಮೇ ಕಾಂಚನ ಪಟ್ಟಬಂಧಂ
ಛತ್ರಂ ಚ ಮೇ ಮೌಕ್ತಿಕ ಜಾಲಬದ್ಧಂ ।
ಅದ್ಯಾಹಮಾಸಾಂ ಸುರಕಾಮಿನೀನಾಂ
ಧಮ್ಮಿಲ್ಲಕಾಂಶ್ಚಾಗ್ರಥಿತಾನ್ ಕರಿಷ್ಯೇ ॥ ೫ ॥
ಯಥಾಪುರಾ ಮರ್ಕಟಿಕೋ ಜನನ್ಯಾ ।
ಸ್ತಸ್ಯಾಶ್ಚ ಸತ್ಯೇನ ತು ತಾರಕಃ ಸ್ಯಾತ್ ॥ ೬ ॥

ನಾರದ ಉವಾಚ :—

ತಾರಕಸ್ಯ ವಚಃ ಶ್ರುತ್ವಾ ಗ್ರಸನೋ ನಾಮ ದಾನವಃ ।
ಸೇನಾನೀರ್ದೈತ್ಯರಾಜಸ್ಯ ತಥಾ ಚಕ್ರೇಽವಿಲಂಬಿತಂ ॥ ೭ ॥
ಆಹತ್ಯ ಭೇರೀಂ ಗಂಭೀರಾಂ ದೈತ್ಯಾನಾಹೂಯ ಸ ತ್ವರಃ ।
ಸಜ್ಜಂ ಚಕ್ರೇ ರಥಂ ದೈತ್ಯೋ ದೈತ್ಯರಾಜಸ್ಯ ಧೀಮತಃ ॥ ೮ ॥
ಗರುಡಾನಾಂ ಸಹಸ್ರೇಣ ಗರುಡೋಪಮಿತತ್ವಿಷಾ ।
ತೇ ಹಿ ಪುತ್ರಾಃ ಸುಪರ್ಣಸ್ಯ ಸಂಸ್ಥಿತಾ ಮೇರುಕಂದರೇ ॥ ೯ ॥

---

ಸಿದ್ಧಗೊಳಿಸಿರಿ; ಜಯಿಸಲಸದಳವಾದ ದೈತ್ಯಸಮೂಹದಿಂದ ಕೂಡಿದ ನನ್ನ ಸೈನ್ಯವನ್ನೂ ಸಿದ್ಧಗೊಳಿಸಿರಿ.

೫. ಚಿನ್ನದ ತಗಡು ಹೊಡೆದಿರುವ ನನ್ನ ಧ್ವಜವನ್ನೂ, ಮುತ್ತಿನ ಬಲೆಯನ್ನು ಜೋಡಿಸಿರುವ ನನ್ನ ಛತ್ರಿಯನ್ನೂ ಸಿದ್ಧಮಾಡಿರಿ. ಈಗ ನಾನು ಈ ಸುರಕಾಮಿನಿಯರ ತುರುಬುಗಳ ಗಂಟನ್ನು ಬಿಚ್ಚಿಸಿ, ತುರುಬು ಕಟ್ಟಿಯೇ ಇರಲಿಲ್ಲವೋ ಎಂಬಂತೆ ಮಾಡಿಬಿಡುತ್ತೇನೆ.

೬. ಪೂರ್ವದಲ್ಲಿ ಮರ್ಕಟವು ನಮ್ಮ ತಾಯಿಯ ತುರುಬನ್ನು ಹೇಗೆ ಬಿಚ್ಚಿತೋ ಹಾಗೆ ನಾನು ಈ ದೇವಸ್ತ್ರೀಯರ ತುರುಬನ್ನು ಬಿಚ್ಚಿಸುತ್ತೇನೆ. ಆಕೆಯ ಸತ್ಯದಿಂದಲೇ ಈ ನಾನು ತಾರಕನೆನಿಸುತ್ತೇನೆ.''

೭. ನಾರದನಿಂತೆಂದನು :—ತಾರಕನ ಈ ಮಾತನ್ನು ಕೇಳಿ ದೈತ್ಯರಾಜನ ಸೇನಾಪತಿಯಾದ ಗ್ರಸನನೆಂಬ ದಾನವನು ಸ್ವಲ್ಪವೂ ತಡಮಾಡದಂತೆ ಆತನ ಅಪ್ಪಣೆಯಂತೆ ಎಲ್ಲವನ್ನೂ ಅಣಿಮಾಡಿದನು.

೮. ಗಂಭೀರವೆಂಬ ಭೇರಿಯನ್ನು ಹೊಡೆದು ದೈತ್ಯರನ್ನೆಲ್ಲ ಆಹ್ವಾನಮಾಡಿ ಧೀಮಂತನಾದ ದೈತ್ಯರಾಜನ ರಥವನ್ನು ಆ ದೈತ್ಯನು ಬಹು ತ್ವರೆಯಿಂದ ಸಜ್ಜುಗೊಳಿಸಿದನು.

೯. ಆ ಗ್ರಸನನು ಗರುಡನಿಗೆ ಸಮಾನವಾದ ಕಾಂತಿಯುಳ್ಳ ಒಂದು ಸಹಸ್ರಸಂಖ್ಯೆಯ ಗರುಡಪಕ್ಷಿಗಳನ್ನು ಆ ರಥಕ್ಕೆ ಹೂಡಿದನು. ಅವು ಸುಪರ್ಣನ ಮಕ್ಕಳು. ಮೇರು ಗುಹೆಯಲ್ಲಿ ನೆಲಸಿರುವುವು.

ವಿಜಿತ್ಯ ದೈತ್ಯರಾಜೇನ ವಾಹನತ್ವೇ ಪ್ರಕಲ್ಪಿತಾಃ ।
ಅಷ್ಟಾಷ್ಟಚಕ್ರಃ ಸರಥಶ್ಚತುರ್ಯೋಜನ ವಿಸ್ತೃತಃ ॥ ೧೦ ॥
ನಾನಾಕ್ರೀಡಾಗೃಹಯುತೋ ಗೀತವಾದ್ಯ ಮನೋಹರಃ ।
ಗಂಧರ್ವನಗರಾಕಾರಃ ಸಂಯುಕ್ತಃ ಪ್ರತ್ಯದೃಶ್ಯತ ॥ ೧೧ ॥
ಆಜಗ್ಮುಸ್ತತ್ರ ದೈತ್ಯಾಶ್ಚ ದಶ ಚಂಡಪರಾಕ್ರಮಾಃ ।
ಕೋಟಿಕೋಟಿ ಪರೀವಾರಾ ಅನ್ಯೇ ಚ ಬಹವೋ ರಣೇ ॥ ೧೨ ॥
ತೇಷಾಮಗ್ರೇಸರೋ ಜಂಭಃ ಕುಜಂಭೋಽನಂತರಸ್ತಥಾ ।
ಮಹಿಷಃ ಕುಂಜರೋ ಮೇಷಃ ಕಾಲನೇಮಿರ್ನಿಮಿಸ್ತಥಾ ॥ ೧೩ ॥
ಮಥನೋ ಜಂಬಕಃ ಶುಂಭೋ ದೈತ್ಯೇಂದ್ರಾ ದಶನಾಯಕಾಃ ।
ದೈತ್ಯೇಂದ್ರಾ ಗಿರಿವರ್ಷ್ಮಾಣಃ ಸಂತಿ ಚಂಡಪರಾಕ್ರಮಾಃ ॥ ೧೪ ॥
ನಾನಾವಿಧ ಪ್ರಹರಣಾ ನಾನಾಶಸ್ತ್ರಾಸ್ತ್ರ ಪಾರಗಾಃ ।
ತಾರಕಸ್ಯಾಭವತ್ ಕೇತುರ್ಬಹುರೂಪೋ ಮಹಾಭಯಃ ॥ ೧೫ ॥

---

೧೦. ದೈತ್ಯರಾಜನಾದ ತಾರಕನು ಆ ಗರುಡ ಪುತ್ರರನ್ನು ಜಯಿಸಿ ತನಗೆ ವಾಹನಗಳಾಗಿ ಮಾಡಿಕೊಂಡಿದ್ದನು. ಎಂಟೆಂಟು (೬೪) ಚಕ್ರಗಳುಳ್ಳ ಆ ರಥವು ನಾಲ್ಕುಯೋಜನ ವಿಸ್ತಾರವುಳ್ಳುದು.

೧೧. ನಾನಾ ಬಗೆಯ ಕ್ರೀಡಾ ಗೃಹಗಳಿಂದ ಕೂಡಿದುದು; ಗೀತವಾದ್ಯಗಳಿಂದ ಮನೋಹರವಾದುದು; ಗಂಧರ್ವ ನಗರದಂತೆ ಆಕಾರವುಳ್ಳುದು. ಹೀಗೆ ಗರುಡರನ್ನು ಹೂಡಿ ಸಿದ್ಧಗೊಳಿಸಿದ ಆ ರಥವು ಬಹು ಮನೋಹರವಾಗಿ ಶೋಭಿಸುತ್ತಿದ್ದಿತು.

೧೨. ಆಗ ಚಂಡಪರಾಕ್ರಮಿಗಳಾದ ಹತ್ತುಮಂದಿ ದೈತ್ಯರು ರಣರಂಗಕ್ಕೆ ಹೊರಟರು. ಅವರಲ್ಲಿ ಒಬ್ಬೊಬ್ಬರಿಗೂ ಒಂದು ಕೋಟಿ ಕೋಟಿ ಪರಿವಾರವುಂಟು. ಈ ಹತ್ತು ಮಂದಿಯಲ್ಲದೆ ಇನ್ನೂ ಬಹು ದೈತ್ಯರು ಯುದ್ಧಕ್ಕೆ ಹೊರಟರು.

೧೩–೧೪. ಅವರಿಗೆಲ್ಲ ಅಗ್ರೇಸರನಾದವನು ಜಂಭ, ಅವನಾದಮೇಲೆ ಕುಜಂಭ, ಆ ಬಳಿಕ ಮಹಿಷ, ಕುಂಜರ, ಮೇಷ, ಕಾಲನೇಮಿ, ನಿಮಿ, ಮಥನ, ಜಂಭಕ, ಶುಂಭ—ಈ ಹತ್ತುಮಂದಿ ದೈತ್ಯೇಂದ್ರರೇ ಆ ತಾರಕಾಸುರನ ಸೇನೆಯಲ್ಲಿ ದಶನಾಯಕರು. ಈ ದೈತ್ಯೇಂದ್ರರೆಲ್ಲರೂ ಗಿರಿಯಂತೆ ಬಹಳ ಉನ್ನತರಾದವರು; ಚಂಡಪರಾಕ್ರಮಿಗಳು.

೧೫. ಈ ಮಹಾಸುರರೆಲ್ಲರೂ ನಾನಾ ವಿಧವಾದ ಆಯುಧಗಳನ್ನುಳ್ಳವರಾಗಿ ನಾನಾ ಶಸ್ತ್ರಾಸ್ತ್ರಗಳಲ್ಲಿ ಪಾರಂಗತರಾದವರು. ತಾರಕನ ಬಾವುಟವಾದರೋ ಬಹು ರೂಪವುಳ್ಳುದು; ಮಹಾ ಭಯಂಕರವಾದುದೂ ಆಗಿ ಶತ್ರುಭಯಂಕರವಾಗಿ ವಿರಾಜಿಸುತ್ತಿದ್ದಿತು.

ಕ್ವಚಿಚ್ಚ ರಾಕ್ಷಸೋ ಘೋರಃ ಪಿಶಾಚಧ್ವಾಂಕ್ಷ ಗೃಧ್ರಕಃ ।
ಏವಂ ಬಹುವಿಧಾಕಾರಃ ಸ ಕೇತುಃ ಪ್ರತ್ಯದೃಶ್ಯತ ॥ ೧೬ ॥
ಕೇತುನಾ ಮಕರೇಣಾಪಿ ಸೇನಾನೀರ್ಗ್ರಸನೋ ಬಭೌ ।
ಪೈಶಾಚಂ ಯತ್ರ ವದನಂ ಜಂಭಸ್ಯಾಸೀದಯಸ್ಮಯಂ ॥ ೧೭ ॥
ಖರೋ ವಿಧುತ ಲಾಂಗೂಲಃ ಕುಜಂಭಸ್ಯಾಭವಧ್ವಜೇ
ಮಹಿಷಸ್ಯ ಚ ಗೋಮಾಯುಃ ಕಾಂತೋ ಹೈಮಸ್ತಥಾ ಬಭೌ ॥ ೧೮ ॥
ಗೃಧ್ರೋ ವೈ ಕುಂಜರಸ್ಯಾಸೀನ್ಮೇಷಸ್ಯಾಭೂಚ್ಚ ರಾಕ್ಷಸಃ ।
ಕಾಲನೇಮೇರ್ಮಹಾಕಾಲೋ ನಿಮೇರಾಸೀನ್ಮಹಾತಿಮಿಃ ॥ ೧೯ ॥
ರಾಕ್ಷಸೀ ಮಥನಸ್ಯಾಪೀ ಧ್ವಾಂಕ್ಷೋಽಭೂಜ್ಜಂಭಕಸ್ಯ ಚ ।
ಮಹಾವೃಕಶ್ಚ ಶುಂಭಸ್ಯ ಧ್ವಜಾ ಏವಂ ವಿಧಾ ಬಭುಃ ॥ ೨೦ ॥
ಅನೇಕಾಕಾರ ವಿನ್ಯಾಸಾದನ್ಯೇಷಾಂ ಚ ಧ್ವಜಾಽಭವನ್ ।
ಶತೇನ ಶೀಘ್ರವೇಗಾನಾಂ ವ್ಯಾಘ್ರಾಣಾಂ ಹೇಮಮಾಲಿನಾಂ ॥ ೨೧ ॥
ಗ್ರಸನಸ್ಯ ರಥೋಯುಕ್ತೋ ಮಹಾಮೇಘರವೋ ಬಭೌ ।
ಶತೇನ ಚಾಪಿ ಸಿಂಹಾನಾಂ ರಥೋ ಜಂಭಸ್ಯ ಯೋಜಿತಃ ॥ ೨೨ ॥

---

೧೬. ಕೆಲವು ಕಡೆ ಘೋರ ರಾಕ್ಷಸನಂತಿರುವುದು; ಪಿಶಾಚ, ಕಾಗೆ, ಗೃಧ್ರ — ಈ ರೂಪಗಳುಳ್ಳುದು. ಹೀಗೆ ಬಹುವಿಧ ಆಕಾರಗಳುಳ್ಳುದಾಗಿ ಆ ಧ್ವಜವು ಕಾಣಬಂದಿತು.

೧೭. ಸೇನಾಪತಿಯಾದ ಗ್ರಸನನು ಮಕರಧ್ವಜದಿಂದ ಶೋಭಿಸುತ್ತಿದ್ದನು. ಪಿಶಾಚಿಯ ಮುಖದಿಂದ ಕೂಡಿ ಕಬ್ಬಿಣದಿಂದ ಮಾಡಿದ್ದ ಧ್ವಜವು ಜಂಭನದು.

೧೮. ಕುಜಂಭನ ಧ್ವಜದಲ್ಲಿ ಬಾಲಬೀಸುತ್ತಿರುವ ಕತ್ತೆಯು ಕಾಣಬರುತ್ತಿದ್ದಿತು. ಮಹಿಷನ ಬಾವುಟದಲ್ಲಿ ಮನೋಹರವಾದ ಚಿನ್ನದ ಗುಳ್ಳೆನರಿಯು ಪ್ರಕಾಶಿಸುತ್ತಿದ್ದಿತು.

೧೯. ಕುಂಜರನದು ಗೃಧ್ರಧ್ವಜ. ಮೇಷನದು ರಾಕ್ಷಸಧ್ವಜ. ಕಾಲನೇಮಿಯ ಧ್ವಜದಲ್ಲಿ ಮಹಾಕಾಲನೂ (ಯಮನೂ), ನಿಮಿಯ ಧ್ವಜದಲ್ಲಿ ಮಹಾತಿಮಿಯೂ ಇದ್ದುವು.

೨೦. ಮಥನನ ಧ್ವಜದಲ್ಲಿ ರಾಕ್ಷಸಿಯೂ, ಜಂಭಕನ ಧ್ವಜದಲ್ಲಿ ಕಾಗೆಯೂ, ಶುಂಭನ ಧ್ವಜದಲ್ಲಿ ಮಹಾ ವೃಕವೂ ಕಾಣಬರುತ್ತಿದುವು. ಈ ವಿಧವಾದ ದಶನಾಯಕರ ಧ್ವಜಗಳು ಬಹಳವಾಗಿ ಶೋಭಿಸುತ್ತಿದ್ದವು.

೨೧—೨೨. ಅನೇಕ ಆಕಾರಗಳೂ ಅನೇಕ ಬಗೆಯ ವಿನ್ಯಾಸಗಳೂ ಉಳ್ಳುವಾಗಿ ಇತರರ ಧ್ವಜಗಳೂ ಕಂಗೊಳಿಸುತ್ತಿದ್ದುವು. ಚಿನ್ನದ ಮಾಲೆಗಳನ್ನಲಂಕರಿಸಿದ ಶೀಘ್ರವೇಗಶಾಲಿಗಳಾದ ನೂರು ಹುಲಿಗಳನ್ನು ಹೂಡಿದ ಗ್ರಸನನ ರಥವು

ಕುಜಂಭಸ್ಯ ರಥೋ ಯುಕ್ತಃ ಪಿಶಾಚ ವದನೈಃ ಖರೈಃ ।
ತಾವದ್ಭಿರ್ಮಹಿಷಸ್ಯೋಷ್ಟ್ರೈರ್ಗಜಸ್ಯ ಚ ಹಯೈರ್ಯುತಃ ॥ ೨೩ ॥
ಮೇಷಸ್ಯ ದ್ವೀಪಿಭಿರ್ಭೀಮೈಃ ಕುಂಜರೈಃ ಕಾಲನೇಮಿನಃ ।
ಪರ್ವತಂ ವೈ ಸಮಾರೂಢೋ ನಿಶ್ಚಿತ್ಯ ವಿಧೃತಂ ಗಜೈಃ ॥ ೨೪ ॥
ಚತುರ್ದಂಷ್ಟ್ರೈರ್ಗಂಧವದ್ಭಿಃ ಕ್ಷತುರ್ಭಿರ್ಮೇಘ ಸನ್ನಿಭೈಃ ।
ಶತಹಸ್ತಾಯತೇ ಕೃಷ್ಣೇ ತುರಂಗೇ ಹೇಮ ಭೂಷಣೇ ॥ ೨೫ ॥
ಸಿತಚಾಮರಜಾಲೇನ ಶೋಭಿತೇ ಪುಷ್ಪದಾಮಿನಿ ।
ಮಥನೋ ನಾಮ ದೈತ್ಯೇಂದ್ರಃ ಪಾಶಹಸ್ತೋ ವ್ಯರಾಜತ ॥ ೨೬ ॥
ಕಿಂಕಿಣೀಮಾಲಿನಂ ಚೋಷ್ಟ್ರಮಾರೂಢೋಽಭೂಚ್ಚ ಜಂಭಕಃ ।
ಕಾಲಮುಂಚಂ ಮಹಾಮೇಘಮಾರೂಢಃ ಶುಂಭದಾನವಃ ॥ ೨೭ ॥
ಅನ್ಯೇಚ ದಾನವಾ ವೀರಾ ನಾನಾವಾಹನಹೇತಯಃ ।
ಪ್ರಚಂಡಚಿತ್ರವರ್ಮಾಣಃ ಕುಂಡಲೋಷ್ಣೀಷಭೂಷಿತಾಃ ॥ ೨೮ ॥

---

ಮಹಾಮೇಘದ ಧ್ವನಿಯುಳ್ಳುದಾಗಿ ಶೋಭಿಸುತ್ತಿದ್ದಿತು. ಜಂಭನ ರಥಕ್ಕೆ ನೂರು ಸಿಂಹಗಳನ್ನು ಹೂಡಲಾಗಿದ್ದಿತು.

೨೩. ಕುಜಂಭನ ರಥಕ್ಕೆ ಪಿಶಾಚಿ ಮುಖವುಳ್ಳ ಅಷ್ಟೇ ಕತ್ತೆಗಳನ್ನು ಹೂಡಿದ್ದಿತು. ಮಹಿಷನ ರಥಕ್ಕೆ ಅಷ್ಟೇ ಒಂಟೆಗಳನ್ನು ಹೂಡಿದ್ದಿತು. ಕುಂಜರನ ರಥಕ್ಕೆ ಕುದುರೆಗಳನ್ನು ಹೂಡಲಾಗಿದ್ದಿತು.

೨೪–೨೬. ಮೇಷನ ರಥಕ್ಕೆ ಭಯಂಕರವಾದ ಹುಲಿಗಳನ್ನು ಹೂಡಲಾಗಿದ್ದಿತು. ಕಾಲನೇಮಿಯ ರಥಕ್ಕೆ ಆನೆಗಳನ್ನು ಕಟ್ಟಿದ್ದಿತು. ನಾಲ್ಕು ದಂತಗಳುಳ್ಳವೂ ಮದಿಸಿದುವೂ ಮೇಘ ಸಮಾನವೂ ಆದ ನಾಲ್ಕು ಆನೆಗಳಿಂದ ಬಿಗಿಯಲ್ಪಟ್ಟ ಪರ್ವತವನ್ನು ಹೋಲಿ, ನೂರು ಹಸ್ತದಷ್ಟು ವಿಸ್ತಾರವಾಗಿ, ಕೃಷ್ಣವರ್ಣವುಳ್ಳುದಾಗಿಯೂ, ಶೀಘ್ರಗಾಮಿಯೂ, ಚಿನ್ನದ ಅಲಂಕಾರಗಳುಳ್ಳದ್ದಾಗಿಯೂ, ಬಿಳಿಯ ಚಾಮರಗಳಿಂದ ಶೋಭಿತವಾಗಿಯೂ ಇರುವ ಪುಷ್ಪದಾಮವೆಂಬ ರಥದಲ್ಲಿ, ಮಥನನೆಂಬ ದೈತ್ಯೇಂದ್ರನು ಪಾಶಹಸ್ತನಾಗಿ ವಿರಾಜಿಸುತ್ತಿದ್ದನು.

೨೭. ಜಂಭಕನು ಕಿರುಗೆಜ್ಜೆಗಳ ಮಾಲೆಯನ್ನಲಂಕರಿಸಿದ ಒಂಟೆಯನ್ನೇರಿದ್ದನು. ಶುಂಭದಾನವನು ಕಾಲಮುಂಚವೆಂಬ ಮಹಾ ಮೇಘವನ್ನು ಆರೋಹಿಸಿದ್ದನು.

೨೮–೩೦. ಇತರ ದಾನವವೀರರೂ ಸಹ ನಾನಾ ರೀತಿಯ ವಾಹನಗಳನ್ನೇರಿ, ಆಯುಧಗಳನ್ನೂ ಧರಿಸಿದವರಾಗಿ, ಪ್ರಚಂಡವಾಗಿಯೂ, ವಿಚಿತ್ರವಾಗಿಯೂ ಇರುವ ಕವಚಗಳನ್ನು ತೊಟ್ಟು, ಕುಂಡಲಗಳಿಂದಲೂ, ಉಷ್ಣೀಷಗಳಿಂದಲೂ

ನಾನಾವಿಧೋತ್ತರಾಸಂಗಾ ನಾನಾಮಾಲ್ಯವಿಭೂಷಣಾಃ ।
ನಾನಾಸುಗಂಧಗಂಧಾಢ್ಯಾ ನಾನಾಬಂದಿಶತಸ್ತುತಾಃ ॥ ೨೯ ॥
ನಾನಾವಾದ್ಯಪರಿಸ್ಯಂದಸಾಗ್ರೇಸರಮಹಾರಥಾಃ ।
ನಾನಾಶೌರ್ಯಕಥಾಸಕ್ತಾಸ್ತಸ್ಮಿನ್ ಸೈನ್ಯೇ ಮಹಾರಥಾಃ ॥ ೩೦ ॥
ತದ್ಬಲಂ ದೈತ್ಯಸಿಂಹಸ್ಯ ಭೀಮರೂಪಂ ವ್ಯದೃಶ್ಯತ ।
ಭೂಮಿರೇಣುಸಮಾಲಿಂಗತುರಂಗರಥಪತ್ತಿಕಂ ॥ ೩೧ ॥
ಸ ಚ ದೈತ್ಯೇಶ್ವರಃ ಕ್ರುದ್ಧಃ ಸಮಾರೂಢೋ ಮಹಾರಥಂ ।
ದಶಭಿಃ ಶುಶುಭೇ ದೈತ್ಯೈರ್ದಶಬಾಹುರಿವೇಶ್ವರಃ ।
ಜಗದ್ಧಂತುಂ ಪ್ರವೃತ್ತೋ ವಾ ಪ್ರತಸ್ಥೇಽಸೌ ಸುರಾನ್ ಪ್ರತಿ ॥ ೩೨ ॥
ಏತಸ್ಮಿನ್ನಂತರೇ ವಾಯುರ್ದೇವದೂತಃ ಸುರಾಲಯಂ ।
ದೃಷ್ಟ್ವಾ ತದ್ದಾನವಬಲಂ ಜಗಾಮೇಂದ್ರಸ್ಯ ಶಂಸಿತುಂ ॥ ೩೩ ॥
ಸ ಗತ್ವಾ ತು ಸಭಾಂ ದಿವ್ಯಾಂ ಮಹೇಂದ್ರಸ್ಯ ಮಹಾತ್ಮನಃ ।
ಶಶಂಸ ಮಧ್ಯೇ ದೇವಾನಾಮಿದಂ ಕಾರ್ಯಮುಪಸ್ಥಿತಂ ॥ ೩೪ ॥

---

ಭೂಷಿತರಾಗಿ ನಾನಾ ವಿಧವಾದ ಮೇಲಾದ ಸಲಕರಣೆಗಳನ್ನು ಹೊಂದಿದವರಾಗಿ, ನಾನಾ ಬಗೆಯ ಹೂವುಗಳಿಂದ ಅಲಂಕೃತರಾಗಿ, ನಾನಾ ಬಗೆಯ ಸುಗಂಧಗಳನ್ನು ಲೇಪಿಸಿಕೊಂಡು, ನಾನಾ ರೀತಿಯ ನೂರಾರು ವಂದಿಗಳಿಂದ ಸ್ತುತಿಸಲ್ಪಡುತ್ತ ನಾನಾ ವಾದ್ಯಗಳು ಬಾಜಿಸಲ್ಪಡುತ್ತಿರಲು, ಬಗೆ ಬಗೆಯ ಶೌರ್ಯ ಕಥೆಗಳಲ್ಲಿ ಆಸಕ್ತರಾಗಿ ಮಹಾ ರಥಗಳನ್ನು ಮುಂದುಬಿಟ್ಟುಕೊಂಡು, ನಡೆಯುತ್ತಿದ್ದರು. ಹೀಗೆ ಆ ಸೈನ್ಯದಲ್ಲಿ ಮಹಾರಥರು ಪ್ರಕಾಶಿಸುತ್ತಿದ್ದರು.

೩೧. ದೈತ್ಯಸಿಂಹನಾದ ತಾರಕಾಸುರನ ಆ ಸೇನೆಯು, ಭೂಮಿಯ ಧೂಳಿನ ಕಣಗಳನ್ನು ಆಲಿಂಗಿಸುವ ಕುದುರೆ, ತೇರು, ಕಾಲಾಳುಗಳಿಂದ ಕೂಡಿದುದಾಗಿ ಬಹು ಭಯಂಕರವಾಗಿ ಕಾಣುತ್ತಿದ್ದಿತು.

೩೨. ಕ್ರುದ್ಧನಾಗಿ ಮಹಾ ರಥವನ್ನೇರಿದ ಆ ದೈತ್ಯೇಶ್ವರನು ತನ್ನ ಹತ್ತು ಮಂದಿ ನಾಯಕರೊಡಗೂಡಿ, ಜಗತ್ತನ್ನು ಧ್ವಂಸಮಾಡಲು ಹೊರಟಿರುವ ದಶಬಾಹುವಾದ ಈಶ್ವರನೋ ಎಂಬಂತೆ ಪ್ರಕಾಶಿಸುತ್ತ ಸುರರಮೇಲೆ ದಂಡೆತ್ತಿ ಹೊರಟನು.

೩೩–೩೪. ಈ ನಡುವೆ ದೇವದೂತನಾದ ವಾಯುವು ಆ ದಾನವ ಬಲವನ್ನು ಕಂಡು, ಇಂದ್ರನಿಗೆ ತಿಳಿಸುವುದಕ್ಕಾಗಿ ದೇವತೆಗಳ ವಾಸಸ್ಥಾನವಾದ ಸ್ವರ್ಗಕ್ಕೆ ಹೋದನು. ಅವನು ಮಹಾತ್ಮನಾದ ಮಹೇಂದ್ರನ ದಿವ್ಯವಾದ ಸಭೆಯನ್ನು ಸೇರಿ ದೇವತೆಗಳ ಮಧ್ಯದಲ್ಲಿ ಒದಗಿಬಂದಿರುವ ಸಂಗ್ರಾಮ ಕಾರ್ಯವನ್ನು ವಿವರಿಸಿದನು.

ತಚ್ಛ್ರುತ್ವಾ ದೇವರಾಜಃ ಸ ನಿಮೀಲಿತವಿಲೋಚನಃ ।
ಬೃಹಸ್ಪತಿಮುವಾಚೇದಂ ವಾಕ್ಯಂ ಕಾಲೇ ಮಹಾಮತಿಃ ॥ ೩೫ ॥

ಇಂದ್ರ ಉವಾಚ :—

ಸಂಪ್ರಾಪ್ತೋಽತಿವಿಮರ್ದೋಽಯಂ ದೇವಾನಾಂ ದಾನವೈಃ ಸಹ ।
ಕಾರ್ಯಂ ಕಿಮತ್ರ ತದ್ಬ್ರೂಹಿ ನೀತ್ಯುಪಾಯೋಪಬೃಂಹಿತಂ ॥ ೩೬ ॥
ಏತಚ್ಛ್ರುತ್ವಾ ಚ ವಚನಂ ಮಹೇಂದ್ರಸ್ಯ ಗಿರಾಂ ಪತಿಃ ।
ಪ್ರತ್ಯುವಾಚ ಮಹಾಭಾಗೋ ಬೃಹಸ್ಪತಿರುದಾರಧೀಃ ॥ ೩೭ ॥

ಬೃಹಸ್ಪತಿರುವಾಚ :—

ಸಾಮಪೂರ್ವಂ ಸ್ಮೃತಾ ನೀತಿಶ್ಚತುರಂಗಾಮನೀಕಿನೀಂ ।
ಜಿಗೀಷತಾಂ ಸುರಶ್ರೇಷ್ಠ ಸ್ಥಿತಿರೇಷಾ ಸನಾತನೀಂ ॥ ೩೮ ॥
ಸಾಮ ದಾನಂ ಚ ಭೇದಶ್ಚ ಚತುರ್ಥೋ ದಂಡ ಏವ ಚ ।
ನೀತೌ ಕ್ರಮಾತ್ ಪ್ರಯೋಜ್ಯಾಶ್ಚ ದೇಶಕಾಲವಿಶೇಷತಃ ॥ ೩೯ ॥

---

೩೫. ಆ ಮಾತನ್ನು ಕೇಳಿ ಮಹಾಮತಿಯಾದ ಆ ದೇವರಾಜನು ಕಣ್ಣುಗಳನ್ನು ಮುಚ್ಚಿಕೊಂಡವನಾಗಿ ಸ್ವಲ್ಪಕಾಲ ಯೋಚಿಸುತ್ತಿದ್ದು, ಆ ತರುವಾಯ ಬೃಹಸ್ಪತಿಯನ್ನು ಕುರಿತು ಸಮರಸಮಯವು ಸನ್ನಿಹಿತವಾಗಿದ್ದ ಆ ಕಾಲದಲ್ಲಿ ಈ ಮಾತನ್ನು ಆಡಿದನು :—

೩೬. ಇಂದ್ರನಿಂತೆಂದನು :—"ಎಲೈ ಗುರುವೇ ! ದೇವತೆಗಳಿಗೆ ದಾನವರೊಡನೆ ಬಲವಾದ ಯುದ್ಧವು ಈಗ ಒದಗಿಬಂದಿದೆ. ಈ ವಿಷಯದಲ್ಲಿ ಮಾಡಬೇಕಾದ ಕಾರ್ಯವೇನು ? ರಾಜನೀತಿಗನುಸಾರವಾದ ಉಪಾಯಗಳಿಂದ ಕೂಡಿದುದಾದ ಆ ಕಾರ್ಯವನ್ನು ತಾವೇ ತಿಳಿಸಬೇಕು."

೩೭. ಮಹೇಂದ್ರನ ಈ ವಚನವನ್ನು ಕೇಳಿ, ಮಹಾಭಾಗನೂ ಉದಾರವಾದ (ಬಹುಶ್ರೇಷ್ಠವಾದ) ಬುದ್ಧಿಯುಳ್ಳವನೂ ಆದ ಬೃಹಸ್ಪತಿಯು ಮರುನುಡಿದನು :—

೩೮. ಬೃಹಸ್ಪತಿಯಿಂತೆಂದನು :—"ಎಲೈ ಸುರಶ್ರೇಷ್ಠನೇ ! ಈ ರೀತಿ ಪರಸ್ಪರ ಶತ್ರುತ್ವವು ಬೆಳೆದು ಕಾಳಗವೇ ನಡೆಯಬೇಕಾದ ಸಂದರ್ಭವೊದಗಿದಾಗ ಸಾಮವನ್ನು ಮೊದಲು ಪ್ರಯೋಗಮಾಡಬೇಕೆಂಬುದು ರಾಜರು ಅನುಸರಿಸಬೇಕಾದ ನೀತಿ. ಚತುರಂಗ ಸೈನ್ಯವನ್ನು ಜಯಿಸಲು ಇಚ್ಛಿಯುಳ್ಳವರಿಗೆ ಅನುಸರಣಯೋಗ್ಯವಾದುದು ಇದು. ಇದೇ ಸನಾತನವಾದ ಸ್ಥಿತಿ.

೩೯. ನೀತಿಯಲ್ಲಿ ಸಾಮ, ದಾನ, ಭೇದ, ನಾಲ್ಕನೆಯದು ದಂಡ— ಇವನ್ನು ದೇಶಕಾಲಗಳ ವಿಶೇಷ ಸ್ಥಿತಿಯನ್ನು ನೋಡಿಕೊಂಡು ಕ್ರಮವಾಗಿ ಪ್ರಯೋಗಿಸಬೇಕು.

ತತ್ರ ಸಾಮ ಪ್ರಯೋಕ್ತವ್ಯಮಾರ್ಯೇಷು ಗುಣವತ್ಸು ಚ ।
ದಾನಂ ಲುಬ್ಧೇಷು ಭೇದಶ್ಚ ಶಂಕಿತೇಷ್ವಿತಿ ನಿಶ್ಚಯಃ ॥ ೪೦ ॥
ದಂಡಶ್ಚಾಪಿ ಪ್ರಯೋಕ್ತವ್ಯೋ ನಿತ್ಯಕಾಲಂ ದುರಾತ್ಮಸು ।
ಸಾಮ ದೈತ್ಯೇಷು ನೈವಾಸ್ತಿ ನಿರ್ಗುಣತ್ವಾದ್ದುರಾತ್ಮಸು ॥ ೪೧ ॥
ಶ್ರಿಯಾ ತೇಷಾಂ ಚ ಕಿಂ ಕಾರ್ಯಂ ಸಮೃದ್ಧಾನಾಂ ತಥಾಪಿ ಯತ್ ।
ಜಾತಿಧರ್ಮೇಣ ಚಾಭೇದ್ಯಾ ವಿಧಾತುರಪಿ ತೇ ಮತಾಃ ॥ ೪೨ ॥
ಏಕೋ ಹ್ಯುಪಾಯೋ ದಂಡೋಽತ್ರ ಭವತಾಂ ಯದಿ ರೋಚತೇ ।
ದುರ್ಜನಃ ಸುಜನತ್ವಾಯ ಕಲ್ಪತೇ ನ ಕದಾಚನ ॥ ೪೩ ॥
ಲಾಲಿತಃ ಪಾಲಿತೋ ವಾಪಿ ಸ್ವಸ್ವಭಾವಂ ನೈವಮುಂಚತಿ ।
ಏವಂ ಮೇ ಮನ್ಯತೇ ಬುದ್ಧಿರ್ಭವಂತೋ ಯದ್ವ್ಯವಸ್ಯತಾಂ ॥ ೪೪ ॥
ಏವಮುಕ್ತಃ ಸಹಸ್ರಾಕ್ಷ ಏವಮೇವೇತ್ಯುವಾಚ ಹ ।
ಕರ್ತವ್ಯತಾಂ ಚ ಸಂಚಿಂತ್ಯ ಪ್ರೋವಾಚಾಮರ ಸಂಸದಿ ॥ ೪೫ ॥

---

೪೦—೪೧. ಅವುಗಳಲ್ಲಿ, ಸಾಮವನ್ನು ಆರ್ಯರಲ್ಲೂ ಗುಣವಂತರಲ್ಲೂ ಪ್ರಯೋಗಿಸಬೇಕು. ಲುಬ್ಧರಾದವರಲ್ಲಿ ದಾನವನ್ನು ಪ್ರಯೋಗಿಸಬೇಕು. ಪರಸ್ಪರವಾಗಿ ಸಂದೇಹಪಡುತ್ತಿರುವವರಲ್ಲಿ ಭೇದವನ್ನು ಪ್ರಯೋಗಿಸಬೇಕು. ಹೀಗೆಂಬುದು (ನೀತಿ) ನಿಶ್ಚಯವು. ದುರಾತ್ಮರಾದವರಲ್ಲಿ ಸದಾ ಕಾಲವೂ ದಂಡವನ್ನು ಪ್ರಯೋಗಿಸತಕ್ಕುದು. ದುರಾತ್ಮರಾದ ದೈತ್ಯರಲ್ಲಿ, ಅವರು ನಿರ್ಗುಣರಾಗಿರುವುದರಿಂದ ಸಾಮವೆಂಬುದು ಇಲ್ಲವೇ ಇಲ್ಲ.

೪೨. ಅವರು ಸ್ವತಃ ಸಮೃದ್ಧಿಯುಳ್ಳವರು. ಆದುದರಿಂದ ಅವರಿಗೆ ಸಂಪತ್ತಿನಿಂದೇನು ಪ್ರಯೋಜನ? ಜಾತಿಧರ್ಮದಿಂದ ಅವರು ಬ್ರಹ್ಮನಿಗೂ ಅಭೇದ್ಯರಾಗಿರುವರೆಂದು ಭಾವಿಸಲ್ಪಟ್ಟಿದ್ದಾರೆ.

೪೩. ಅವರ ವಿಷಯದಲ್ಲಿ ಇರುವುದು ಒಂದೇ ಉಪಾಯ; ಅದು ದಂಡ. ನಿಮಗೆ ರುಚಿಸಿದರೆ ಅನುಸರಿಸಬಹುದು. ದುರ್ಜನನಾದವನನ್ನು ಎಂದಿಗೂ ಸುಜನನನ್ನಾಗಿ ಮಾಡಲು ಸಾಧ್ಯವಿಲ್ಲ.

೪೪. ಎಷ್ಟು ಲಾಲನೆಮಾಡಿದರೂ ಎಷ್ಟುಮಟ್ಟಿಗೆ ಪಾಲನೆಮಾಡಿದರೂ ತಮ್ಮತಮ್ಮ ಸ್ವಭಾವವನ್ನು ಅವರು ಬಿಡುವುದೇ ಇಲ್ಲವು. ಈ ರೀತಿಯಾಗಿ ನನ್ನ ಬುದ್ಧಿಗೆ ಹೊಳೆಯುತ್ತದೆ. ಯಾವುದು ಸೂಕ್ತವೋ ಅದನ್ನು ನೀವೇ ವ್ಯವಸ್ಥೆಮಾಡಬೇಕು.''

೪೫. ಬೃಹಸ್ಪತಿಯು ಹೀಗೆ ಹೇಳಲು ಸಹಸ್ರಾಕ್ಷನು, ''ಇದು ಹೀಗೆಯೇ ಸರಿ'' ಎಂದನು. ಆಗ ಕರ್ತವ್ಯವಾವುದೆಂಬುದನ್ನು ಚೆನ್ನಾಗಿ ಆಲೋಚಿಸಿ ದೇವತೆಗಳ ಸಭೆಯಲ್ಲಿ ಹೀಗೆ ನುಡಿದನು :—

ಬಹುಮಾನೇನ ಮೇ ವಾಚಂ ಶೃಣುಧ್ವಂ ನಾಕವಾಸಿನಃ ॥ ೪೬ ॥
ಭವಂತೋ ಯಜ್ಞಭೋಕ್ತಾರಃ ಸತಾಮಿಷ್ಟಾಶ್ಚ ಸಾತ್ತ್ವಿಕಾಃ ।
ಸ್ವೇ ಸ್ವೇ ಪದೇ ಸ್ಥಿತಾ ನಿತ್ಯಂ ಜಗತಃ ಪಾಲನೇ ರತಾಃ ॥ ೪೭ ॥
ಭವತಾಂ ಚ ನಿಮಿತ್ತೇನ ಬಾಧಂತೇ ದಾನವೇಶ್ವರಾಃ ।
ತೇಷಾಂ ಸಾಮಾದಿ ನೈವಾಸ್ತಿ ದಂಡ ಏವ ವಿಧೀಯತಾಂ ॥ ೪೮ ॥
ಕ್ರಿಯತಾಂ ಸಮರೇ ಬುದ್ಧಿಃ ಸೈನ್ಯಂ ಸಂಯೋಜ್ಯತಾಮಿತಿ ।
ಆವಾಹ್ಯಂತಾಂ ಚ ಶಸ್ತ್ರಾಣಿ ಪೂಜ್ಯಂತಾಂ ಶಸ್ತ್ರದೇವತಾಃ ॥ ೪೯ ॥
ಇತ್ಯುಕ್ತಾಃ ಸಮನಹ್ಯಂತ ದೇವಾನಾಂ ಯೇ ಪ್ರಧಾನತಃ ।
ವಾಜಿನಾಮಯುತೇನಾಜೌ ಹೇಮಪಟ್ಟಪರಿಷ್ಕೃತಾಃ ॥ ೫೦ ॥
ವಾಹನಾನಿ ವಿಮಾನಾನಿ ಯೋಜಯಂತು ಮಮಾಮರಾಃ ।
ಯಮಂ ಸೇನಾಪತಿಂ ಕೃತ್ವಾ ಶೀಘ್ರಂ ನಿರ್ಯಾತ ದೇವತಾಃ ॥ ೫೦ ॥
ನಾನಾಶ್ಚರ್ಯಗುಣೋಪೇತೋ ದುರ್ಜಯೋ ದೇವದಾನವೈಃ ।
ರಥೋ ಮಾತಲಿನಾಯುಕ್ತೋ ಮಹೇಂದ್ರಸ್ಯಾಪ್ಯದೃಶ್ಯತ ॥ ೫೨ ॥

---

೪೬. "ಎಲೈ ಸ್ವರ್ಗವಾಸಿಗಳೇ! ನನ್ನ ಮಾತನ್ನು ಬಹುಮಾನಪೂರ್ವಕವಾಗಿ ಕೇಳಿರಿ.

೪೭. ನೀವು ಯಜ್ಞಭಾಗವನ್ನು ಭೋಜನಮಾಡುವವರು; ಸತ್ಪುರುಷರಿಗೆ ಇಷ್ಟರಾದವರು; ಸಾತ್ತ್ವಿಕರು. ನಿಮ್ಮ ನಿಮ್ಮ ಪದವಿಗಳಲ್ಲಿ ನಿಂತು ಯಾವಾಗಲೂ ಲೋಕಪರಿಪಾಲನೆಯಲ್ಲಿ ನಿರತರಾಗಿರುವವರು.

೪೮. ನಿಮ್ಮ ಸಲುವಾಗಿಯೇ ದಾನವೇಶ್ವರರು ಎಲ್ಲರನ್ನೂ ಬಾಧೆಪಡಿಸುತ್ತಿದ್ದಾರೆ. ಅವರಿಗೆ ಸಾಮ ಮೊದಲಾದುವೊಂದೂ ಪ್ರಯೋಜನಕ್ಕೆ ಬರುವುದೇ ಇಲ್ಲ. ದಂಡವೊಂದನ್ನೇ ವಿಧಿಸಬೇಕಾಗಿರುವುದು.

೪೯. ಯುದ್ಧದಲ್ಲಿ ಬುದ್ಧಿಯನ್ನು ನೆಲೆಗೊಳಿಸಿರಿ. ಸೈನ್ಯವನ್ನು ಒಟ್ಟುಗೂಡಿಸಿರಿ. ಶಸ್ತ್ರಗಳನ್ನು ಆವಾಹನೆ ಮಾಡಿರಿ. ಶಸ್ತ್ರದೇವತೆಗಳನ್ನು ಪೂಜಿಸಿರಿ."

೫೦. ಇಂದ್ರನಿಂದ ಈ ರೀತಿ ಹೇಳಲ್ಪಟ್ಟವರಾಗಿ, ದೇವತೆಗಳಲ್ಲಿ ಚಿನ್ನದ ಪಟ್ಟೆಯಿಂದ ಪರಿಷ್ಕೃತರಾಗಿ ಪ್ರಧಾನರೆನಿಸಿದವರೆಲ್ಲರೂ ಯುದ್ಧಕ್ಕಾಗಿ ಹತ್ತು ಸಾವಿರ ಕುದುರೆಗಳನ್ನು ಕೂಡಿಸಿದರು.

೫೧-೫೨. "ವಾಹನಗಳನ್ನೂ, ವಿಮಾನಗಳನ್ನೂ ನನಗೆ ಅಮರರು ಸಿದ್ಧಗೊಳಿಸಲಿ. ಯಮನನ್ನು ಸೇನಾಪತಿಯನ್ನಾಗಿ ಮಾಡಿಕೊಂಡು ದೇವತೆಗಳು ಬೇಗ ಹೊರಹೊರಡಲಿ" ಎಂದು ಇಂದ್ರನೆನ್ನಲು, ನಾನಾ ಬಗೆಯ ಆಶ್ಚರ್ಯಗುಣಗಳಿಂದ ಕುಡಿದುದೂ, ದೇವದಾನವರಿಂದ ಜಯಿಸಲಶಕ್ಯವಾದುದೂ, ಮಾತಲಿಯೊಡಗೂಡಿದುದೂ ಆದ ಮಹೇಂದ್ರನ ಆ ಮಹಾರಥವು ಶೋಭಿಸಿತು.

ಯಮೋ ಮಹಿಷಮಾಸ್ಥಾಯ ಸೇನಾಗ್ರೇ ಸಮವರ್ತತ ।
ಚಂಡಕಿಂಕಿಣಿವೃಂದೇನ ಸರ್ವತಃ ಪರಿವಾರಿತಃ ॥ ೫೩ ॥
ಕಲ್ಪಕಾಲೋಜ್ಜ್ವಲಜ್ವಾಲಾಪೂರಿತಾಂಬರಗೋಚರಃ ।
ಹುತಾಶ ಉರಣಾರೂಢಃ ಶಕ್ತಿಹಸ್ತೋ ವ್ಯವಸ್ಥಿತಃ ॥ ೫೪ ॥
ಪವನೋಽಂಕುಶಪಾಣಿಸ್ತು ವಿಸ್ತಾರಿತಮಹಾಜವಃ ।
ಮಹಾಋಕ್ಷಂ ಸಮಾರೂಢಃ ಸೇನಾಗ್ರೇ ಸಮದೃಶ್ಯತ ॥ ೫೫ ॥
ಭುಜಗೇಂದ್ರಂ ಸಮಾರೂಢೋ ಜಲೇಶೋ ಭಗವಾನ್ ಸ್ವಯಂ ।
ಮಹಾಪಾಶಧರೋ ವೀರಃ ಸೇನಾಯಾಂ ಸಮವರ್ತತ ॥ ೫೬ ॥
ನರಯುಕ್ತೇ ರಥೇ ದಿವ್ಯೇ ಧನಾಧ್ಯಕ್ಷೋ ವ್ಯಚೀಚರತ್ ।
ಮಹಾಸಿಂಹರವೋ ಯುದ್ಧೇ ಗದಾಹಸ್ತೋ ವ್ಯವಸ್ಥಿತಃ ॥ ೫೭ ॥
ರಾಕ್ಷಸೇಶೋಽಥ ನಿಋೃತೀ ರಥೇ ರಕ್ಷೋ ಮುಖೈರ್ಹಯೈಃ ।
ಧನ್ವೀ ರಕ್ಷೋ ಗಣಯುತೋ ಮಹಾರಾವೋ ವ್ಯದೃಶ್ಯತ ॥ ೫೮ ॥
ಚಂದ್ರಾದಿತ್ಯಾವಶ್ವಿನೌ ಚ ವಸವಃ ಸಾಧ್ಯದೇವತಾಃ ।
ವಿಶ್ವೇದೇವಾಶ್ಚ ರುದ್ರಾಶ್ಚ ಸನ್ನದ್ಧಾಸ್ತುಸ್ಥುರಾಹವೇ ॥ ೫೯ ॥

---

೫೩. ಯಮನು ಮಹಿಷನನ್ನೇರಿ ಸೇನೆಯ ಮುಂಭಾಗಲ್ಲಿ ನಿಂತನು. ಅವನು ಪ್ರಚಂಡವಾದ ಕಿಂಕಿಣಿಗಳ ಸಮೂಹದಿಂದ ಎಲ್ಲ ಕಡೆಯೂ ಸುತ್ತುವರಿಯಲ್ಪಟ್ಟವನಾಗಿದ್ದನು.

೫೪. ಕಲ್ಪಕಾಲದಲ್ಲಿ ಹೊರಡುವ ಉಜ್ಜ್ವಲವಾದ ಜ್ವಾಲೆಯಿಂದ ತುಂಬಿದ ಅಗ್ನಿಯು ಟಗರಿನ ಮೇಲೇರಿ ಶಕ್ತಿಯನ್ನು ಧರಿಸಿ ವ್ಯವಸ್ಥೆಗೊಂಡು ನಿಂತನು.

೫೫–೫೯. ವಾಯುವು ಅಂಕುಶವನ್ನು ಕೈಯಲ್ಲಾಂತು, ತನ್ನ ಮಹಾ ವೇಗವನ್ನು ಅತ್ಯಧಿಕಮಾಡಿಕೊಂಡವನಾಗಿ, ಬಹು ದೊಡ್ಡ ಕರಡಿಯನ್ನೇರಿ ಸೇನಾಗ್ರಭಾಗದಲ್ಲಿ ಕಾಣಿಸಿಕೊಂಡನು. ವೀರನಾದ ಭಗವಾನ್ ಜಲಾಧಿಪತಿಯು (ವರುಣನು) ಸರ್ಪರಾಜನನ್ನು ಆರೋಹಣಮಾಡಿ, ಮಹಾಪಾಶವನ್ನು ಧರಿಸಿ ಸೇನೆಯಲ್ಲಿ ಕಾಣಿಸಿಕೊಂಡನು. ನರರನ್ನು ಹೂಡಿದ ದಿವ್ಯ ರಥದಲ್ಲಿ ಧನಾಧ್ಯಕ್ಷನು (ಕುಬೇರನು) ಶೋಭಿಸುತ್ತ ಮಹಾ ಸಿಂಹದಂತೆ ಧ್ವನಿಯುಳ್ಳವನಾಗಿ ಗದೆಯನ್ನು ಕೈಯಲ್ಲಿ ಹಿಡಿದು ಯುದ್ಧದಲ್ಲಿ ಸಿದ್ಧನಾಗಿ ನಿಂತನು. ರಾಕ್ಷಸೇಶ್ವರನಾದ ನಿಋೃತಿಯು ರಾಕ್ಷಸ ಮುಖಗಳುಳ್ಳ ಕುದುರೆಗಳಿಂದ ಕೂಡಿದ ರಥದಲ್ಲಿ ಕುಳಿತು, ಧನುರ್ಧಾರಿಯಾಗಿ, ರಕ್ಷೋಗಣಗಳಿಂದ ಒಡಗೂಡಿದವನಾಗಿ ಮಹಾ ಧ್ವನಿಯುಳ್ಳವನಾಗಿ ವಿರಾಜಿಸುತ್ತಿದ್ದನು. ಚಂದ್ರ, ಸೂರ್ಯರು, ಅಶ್ವಿನೀ ದೇವತೆಗಳು, ವಸುಗಳು, ಸಾಧ್ಯದೇವತೆಗಳು, ವಿಶ್ವೇದೇವರು, ರುದ್ರರು — ಈ ಎಲ್ಲರೂ ಯುದ್ಧಕ್ಕೆ ಸನ್ನದ್ಧರಾಗಿ ನಿಂತರು.

ಹೇಮಪೀತೋತ್ತರಾಸಂಗಾಶ್ಚಿತ್ರವರ್ಮಾಯುಧಧ್ವಜಾಃ ।
ಗಂಧರ್ವಾಃ ಪ್ರತ್ಯದೃಶ್ಯಂತ ಕೃತ್ವಾವಿಶ್ವಾವಸುಂ ಮುಖೇ ॥ ೬೦ ॥
ತಥಾ ರಕ್ತೋತ್ತರಾಸಂಗಾ ನಿರ್ಮಲಾಯೋವಿಭೂಷಣಾಃ ।
ಗೃಧ್ರಧ್ವಜಾ ಅದೃಶ್ಯಂತ ರಾಕ್ಷಸಾ ರಕ್ತಮೂರ್ಧಜಾಃ ॥ ೬೧ ॥
ತಥಾ ಭೀಮಾಶನಿಕರಾಃ ಕೃಷ್ಣವಸ್ತ್ರಾ ಮಹಾರಥಾಃ ।
ಯಕ್ಷಾಸ್ತತ್ರ ವ್ಯದೃಶ್ಯಂತ ಮಣಿಭದ್ರಾದಿ ಕೋಟಿಶಃ ॥ ೬೨ ॥
ತಾಮ್ರೋಲೂಕಧ್ವಜಾ ರೌದ್ರಾ ದ್ವೀಪಿಚರ್ಮಾಂಬರಾಸ್ತಥಾ ।
ಪಿಶಾಚಾಸ್ತತ್ರ ರಾಜಂತೇ ಮಹಾವೇಗ ಪುರಃಸರಾಃ ॥ ೬೩ ॥
ತಥೈವ ಶ್ವೇತವಸನಾಃ ಸಿತಪಟ್ಟಪತಾಕಿನಃ ।
ಮತ್ತೇಭವಾಹನಪ್ರಾಯಾಃ ಕಿಂನರಾಸ್ತಸ್ಥುರಾಹವೇ ॥ ೬೪ ॥
ಮುಕ್ತಾಜಾಲಪರಿಷ್ಕಾರೋ ಹಂಸೋ ಹಾರಸಮಪ್ರಭಃ ।
ಕೇತುರ್ಜಲಧಿನಾಥಸ್ಯ ಸೌಮ್ಯರೂಪೋ ವ್ಯರಾಜತ ॥ ೬೫ ॥

---

೬೦. ಚಿನ್ನದ ಪೀತ ಮತ್ತು ಉತ್ತರೀಯಗಳುಳ್ಳವರಾಗಿ, ಚಿತ್ರತರವಾದ ಕವಚ, ಆಯುಧ ಮತ್ತು ಧ್ವಜಗಳನ್ನು ಧರಿಸಿ, ವಿಶ್ವಾವಸುವನ್ನು ಮುಂದು ಮಾಡಿಕೊಂಡು ಗಂಧರ್ವರು ಕಂಗೊಳಿಸಿದರು.

೬೧. ಅಂತೆಯೇ ಕೆಂಪು ಮೇಲ್ಬಟ್ಟೆಗಳನ್ನುಟ್ಟು ನಿರ್ಮಲವಾದ ಕಬ್ಬಿಣದ ಭೂಷಣಗಳನ್ನು ಧರಿಸಿ, ಕೆಂಪುಕೂದಲಿನ ರಾಕ್ಷಸರು ಗೃಧ್ರಧ್ವಜವನ್ನೆತ್ತಿ ಹಿಡಿದವರಾಗಿ ಕಾಣಿಸಿಕೊಂಡರು.

೬೨. ಮಣಿಭದ್ರಾದಿ ಯಕ್ಷರು ಮಹಾರಥಗಳನ್ನೇರಿ, ಕಪ್ಪು ಬಟ್ಟೆಗಳನ್ನುಟ್ಟು, ಭಯಂಕರವಾದ ವಜ್ರಾಯುಧಗಳನ್ನು ಕೈಯಲ್ಲಿ ಹಿಡಿದು ಕೋಟಿ ಕೋಟಿ ಸಂಖ್ಯೆಯಲ್ಲಿ ಕಾಣಿಸಿಕೊಂಡರು.

೬೩. ತಾಮ್ರವರ್ಣದ ಗೂಬೆಯ ಧ್ವಜವನ್ನು ಹಿಡಿದು, ಹುಲಿಯ ತೊಗಲನ್ನುಟ್ಟು, ರೌದ್ರರಾಗಿಯೂ ಮಹಾ ವೇಗಶಾಲಿಗಳಾಗಿಯೂ ಮುನ್ನುಗ್ಗುತ್ತಿರುವ ಪಿಶಾಚರು ಅಲ್ಲಿ ರಂಜಿಸುತ್ತಿದ್ದರು.

೬೪. ಹಾಗೆಯೇ, ಬಿಳಿಯ ಬಟ್ಟೆಗಳನ್ನುಟ್ಟು ಬಿಳಿಯ ರೇಷ್ಮೆಯ ಪತಾಕೆಗಳನ್ನು ಹಿಡಿದು ಮದಿಸಿದ ಆನೆಗಳನ್ನೇರಿ ಕಿನ್ನರರು ಯುದ್ಧಭೂಮಿಯಲ್ಲಿ ಸನ್ನದ್ಧರಾಗಿ ನಿಂತರು.

೬೫. ಮುತ್ತಿನ ಮಾಲೆಗಳಿಂದ ಪರಿಷ್ಕಾರವಾದುದೂ, ಹಾರದಂತೆ ಹೊಳೆಯುತ್ತಿರುವುದೂ, ಸೌಮ್ಯರೂಪವೂ ಆದ ಸಮುದ್ರಾಧಿಪತಿಯಾದ ವರುಣನ ಹಂಸಧ್ವಜವು ವಿರಾಜಿಸುತ್ತಿದ್ದಿತು.

ಪಂಚರಾಗ ಮಹಾರತ್ನ ವಿಟಂಕೋ ಧನದಸ್ಯ ಚ ।
ಧ್ವಜಃ ಸಮುತ್ಥಿತೋ ಭಾತಿ ಯಾತುಕಾಮ ಇವಾಂಬರಂ ॥ ೬೬ ॥
ಕಾರ್ಷ್ಣಲೋಹಮಯೋಧ್ವಾಂಕ್ಷೋ ಯಮಸ್ಯಾಭೂನ್ಮಹಾ ಧ್ವಜಃ ।
ರಾಕ್ಷಸೇಶಸ್ಯ ವದನಂ ಪ್ರೇತಸ್ಯ ಧ್ವಜ ಆಬಭೌ ॥ ೬೭ ॥
ಹೇಮಸಿಂಹಧ್ವಜೌ ದೇವೌ ಚಂದ್ರಾರ್ಕಾವಮಿತದ್ಯುತೀ ।
ಕುಂಭೇನ ಚಿತ್ರವರ್ಣೇನ ಕೇತುರಾಶ್ವಿನಯೋರಭೂತ್ ॥ ೬೮ ॥
ಮಾತಂಗೋ ಹೇಮರಚಿತಶ್ಚಿತ್ರರತ್ನಪರಿಷ್ಕೃತಃ ।
ಧ್ವಜಃ ಶತಕ್ರತೋರಾಸೀತ್ ಸಿತಚಾಮರಸಂಸ್ಥಿತಃ ॥ ೬೯ ॥
ಅನ್ಯೇಷಾಂ ಚ ಧ್ವಜಾಸ್ತತ್ರ ನಾನಾರೂಪಾ ಬಭೂರಣೇ ।
ಸ ನಾಗಯಕ್ಷಗಂಧರ್ವಮಹೋರಗನಿಶಾಚರಾ ॥ ೭೦ ॥
ಸೇನಾ ಸಾ ದೇವರಾಜಸ್ಯ ದುರ್ಜಯಾ ಪ್ರತ್ಯದೃಶ್ಯತ ।
ಕೋಟಿಯಸ್ತಾಸ್ತ್ರಯಸ್ತ್ರಿಂಶನ್ನಾನಾದೇವ ನಿಕಾಯಿನಾಂ ॥ ೭೧ ॥

---

೬೬. ಕುಬೇರನ ಧ್ವಜವು ಪಂಚರಂಗಿನ ಮಹಾರತ್ನಗಳ ಹಿಡಿಕಟ್ಟುಳ್ಳು ದಾಗಿ ಮೇಲೆತ್ತಿ ಹಿಡಿಯಲ್ಪಟ್ಟು ಆಕಾಶಕ್ಕೆ ಹೋಗಬಯಸುತ್ತಿರುವುದೋ ಎಂಬಂತೆ ಕಾಣುತ್ತಿದ್ದಿತು.

೬೭. ಕಪ್ಪು ಕಬ್ಬಿಣದಿಂದ ಮಾಡಿದ ಕಾಗೆಯು ಯಮನ ಮಹಾಧ್ವಜದಲ್ಲಿ ಶೋಭಿಸುತ್ತಿದ್ದಿತು. ರಾಕ್ಷಸೇಶ್ವರನ ಧ್ವಜದಲ್ಲಿ ಪ್ರೇತಮುಖವು ಕಂಗೊಳಿಸುತ್ತಿದ್ದಿತು.

೬೮. ಎಣೆಯಿಲ್ಲದ ಕಾಂತಿಯಿಂದ ಕೂಡಿ ಮಹಾಪ್ರಕಾಶಮಾನವಾಗಿ ಬೆಳುಬೆಳಗಿ ಶೋಭಿಸುತ್ತಿದ್ದ ಸೂರ್ಯ ಚಂದ್ರರು ಚಿನ್ನದ ಸಿಂಹಧ್ವಜಗಳುಳ್ಳವ ರಾಗಿದ್ದರು. ದೇವವೈದ್ಯರಾದ ಅಶ್ವಿನೀಕುಮಾರರ ಧ್ವಜದಲ್ಲಿ ಚಿತ್ರವರ್ಣದ ಕುಂಭವೂ ಕಾಣಿಸುತ್ತಿದ್ದಿತು.

೬೯. ವಿಚಿತ್ರವಾದ ರತ್ನಗಳಿಂದ ಕೆತ್ತಲ್ಪಟ್ಟು ಪರಿಷ್ಕೃತವಾಗಿ ಚಿನ್ನದಿಂದ ಮಾಡಲ್ಪಟ್ಟ ಆನೆಯು ಇಂದ್ರನ ಧ್ವಜದಲ್ಲಿ ಶೋಭಿಸುತ್ತಿದ್ದಿತು. ದೇವಾಧೀಶ್ವರನಾದ ಮಹೇಂದ್ರನ ಧ್ವಜವು ಬಿಳಿಯ ಚಾಮರಗಳ ನಡುವೆ ಬಹು ಮನೋಹರವಾಗಿ ಕಂಗೊಳಿಸುತ್ತಿದ್ದಿತು.

೭೦–೭೧. ಇತರರ ಧ್ವಜಗಳು ನಾನಾರೂಪಗಳಾಗಿ ಆ ಯುದ್ಧರಂಗದಲ್ಲಿ ಪ್ರಕಾಶಿಸುತ್ತಿದ್ದುವು. ನಾಗರು, ಯಕ್ಷರು, ಗಂಧರ್ವರು, ಮಹೋರಗರು, ನಿಶಾಚರರು— ಇವರನ್ನೆಲ್ಲ ಒಳಗೊಂಡ ದೇವರಾಜನ ಆ ಸೇನೆಯು ದುರ್ಜಯವಾಗಿ ಕಾಣಿಸುತ್ತಿದ್ದಿತು. ನಾನಾ ಗುಂಪುಗಳಲ್ಲಿ ನಿಂತ ದೇವತೆಗಳ ಮೂವತ್ತು ಮೂರು ಕೋಟಿಗಳು ಈ ರೀತಿ ಪರಮಾದ್ಭುತವಾಗಿ ಕಾಣಬರುತ್ತಿದ್ದುವು.

ಹೈಮಾಚಲಾಭೇ ಸಿತಕರ್ಣಚಾಮರೇ
  ಸುವರ್ಣಪದ್ಮಾಮಲಸುಂದರಸ್ರಜಿ ।
ಕೃತಾಭಿರಾಮೋಜ್ಜ್ವಲಕುಂಕುಮಾಂಕುರೇ
  ಕಪೋಲಲೀಲಾ ವಿವಿಮುಕ್ತರಾವೇ ॥ ೭೨ ॥
ಶ್ರಿತಸ್ತ್ವದೈರಾವಣನಾಮ ಕುಂಜರೇ
  ಮಹಾಬಲಶ್ಚಿತ್ರ ವಿಶೇಷಿತಾಂಬರಃ ।
ವಿಶಾಲವಜ್ರಾಂಗವಿತಾನಭೂಷಿತಃ
  ಪ್ರಕೀರ್ಣಕೇಯೂರಭುಜಾಗ್ರಮಂಡಲಃ ॥ ೭೩ ॥
ಸಹಸ್ರದೃಗ್ವಂದಿ ಸಹಸ್ರಸಂಸ್ತುತ ।
  ಸ್ತ್ರಿವಿಷ್ಟಪೇಽಶೋಭತ ಪಾಕಶಾಸನಃ ॥ ೭೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ತಾರಕಾಸುರ ದೇವೇಂದ್ರ ಯುದ್ಧೋಪಕ್ರಮ ವರ್ಣನಂ" ನಾಮ
ಷೋಡಶೋಽಧ್ಯಾಯಃ

---

೭೨–೭೪. ಹಿಮಾಚಲದ ಹಾಗೆ ಮೆರೆದು ಶೋಭಿಸುವ, ಕಿವಿಗಳೆಡೆಯಲ್ಲಿ ಬಿಳಿಯ ಚಾಮರಗಳನ್ನುಳ್ಳ, ಚಿನ್ನದ ಪದ್ಮಗಳ ನಿರ್ಮಲವಾದ ಮಾಲಿಕೆಗಳನ್ನು ತಳೆದಿರುವ, ಉಜ್ಜ್ವಲವಾದ ಕುಂಕುಮವನ್ನು ಬಳಿದು ಮನೋಹರವಾಗಿ ರಚಿಸಿರುವ, ಕಪೋಲ ಲೀಲೆಯಿಂದ ರಂಜಿಸುತ್ತಿರುವ ಐರಾವಣವೆಂಬ ಆನೆಯ ಮೇಲೇರಿದವನೂ, ಮಹಾಬಲನೂ, ಚಿತ್ರ ವಿಚಿತ್ರವಾದ ವಿಶೇಷ ರೀತಿಯ ಬಟ್ಟೆಗಳನ್ನುಟ್ಟವನೂ, ವಜ್ರಮಯವಾದ ವಿಶಾಲವಾದ ವಿತಾನದಿಂದ ವಿಭೂಷಿತನೂ, ಸುತ್ತಲೂ ಪಸರಿಸಿದ ಕೇಯೂರಗಳ ಕಾಂತಿಯುಳ್ಳ ಭುಜ ಮಂಡಲನೂ, ಸಾವಿರಾರು ಮಂದಿ ವಂದಿಗಳಿಂದ ಸ್ತುತಿಸಲ್ಪಟ್ಟವನೂ, ಸಹಸ್ರಾಕ್ಷನೂ, ಮೂರು ಲೋಕಕ್ಕೂ ಒಡೆಯನೂ ಆದ ಪಾಕಶಾಸನನು ಆ ಸೇನೆಯಲ್ಲಿ ಶೋಭಿಸುತ್ತಿದ್ದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ತಾರಕಾಸುರ ದೇವೇಂದ್ರ ಯುದ್ಧೋಪಕ್ರಮ ವರ್ಣನ"ವೆಂಬ
ಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತದಶೋಽಧ್ಯಾಯಃ

**ತಾರಕಸೈನ್ಯ ದೇವಸೈನ್ಯಯೋರ್ಮಧ್ಯೇ ಯಮಾಗ್ರಸನಯೋರ್ದ್ವಂದ್ವಯುದ್ಧ ವರ್ಣನಂ**

**ನಾರದ ಉವಾಚ :—**

**ತತಸ್ತಯೋಃ ಸಮಾಯೋಗಃ ಸೇನಯೋರುಭಯೋರಭೂತ್ ।**
**ಯುಗಾಂತೇ ಸಮನುಪ್ರಾಪ್ತೇ ಯಥಾಕ್ಷುಬ್ಧಸಮುದ್ರಯೋಃ ॥ ೧ ॥**
**ಸುರಾಸುರಾಣಾಂ ಸಂಮರ್ದೇ ತಸ್ಮಿನ್ ಪರಮದಾರುಣೇ ।**
**ತುಮುಲಂ ಸುಮಹತ್ಪ್ರಾಂತೇ ಸೇನಯೋರುಭಯೋರಪಿ ॥ ೨ ॥**
**ಗರ್ಜತಾಂ ದೇವದೈತ್ಯಾನಾಂ ಶಂಖಭೇರೀರವೇಣ ಚ**
**ತೂರ್ಯಾಣಾಂ ಚೈವ ನಿರ್ಘೋಷೈರ್ಮಾತಂಗಾನಾಂ ಚ ಬೃಂಹಿತೈಃ ॥೩॥**
**ಹೇಷಿತೈರ್ಹಯವೃಂದಾನಾಂ ರಥನೇಮಿಸ್ವನೇನ ಚ ।**
**ಘೋಷೇಣ ಚೈವ ತೂರ್ಯಾಣಾಂ ಯುಗಾಂತ ಇವ ಚಾಭವತ್ ॥ ೪ ॥**
**ರೋಷೇಣಾಭಿಪರೀತಾಂಗಾಸ್ತ್ಯಕ್ತಜೀವಿತಚೇತಸಃ ।**
**ಸಮಸಜ್ಜಂತ ತೇಽನ್ಯೋನ್ಯಂ ಪ್ರಕ್ರಮೇಣಾತಿಲೋಹಿತಾಃ ॥ ೫ ॥**

---

## ಕನ್ನಡದ ಅನುವಾದ

**ತಾರಕ ದೇವಸೇನೆಗಳ ನಡುವೆ ನಡೆದ ಯಮಗ್ರಸನರ ದ್ವಂದ್ವಯುದ್ಧವರ್ಣನ**

೧. ನಾರದನಿಂತೆಂದನು :— ಬಳಿಕ ಯುಗಾಂತವುಂಟಾದಾಗ ಕ್ಷುಬ್ಧ ಸಮುದ್ರಗಳೆರಡೂ ಕಲೆತಂತೆ ಆ ಎರಡು ಸೇನೆಗಳಿಗೂ ಸಮಾಗಮವುಂಟಾಯಿತು.

೨. ಸುರಾಸುರರಿಗುಂಟಾದ ಪರಮದಾರುಣವಾದ ಆ ಘರ್ಷಣೆಯಲ್ಲಿ ಆ ಎರಡು ಸೇನೆಗಳಲ್ಲಿಯೂ ಮಹತ್ತಾದ ತುಮುಲಧ್ವನಿಯು ತಲೆದೋರಿತು.

೩–೪. ದೇವದೈತ್ಯರ ಗರ್ಜನೆಗಳಿಂದಲೂ ಶಂಖ ಭೇರಿಗಳ ರವದಿಂದಲೂ ತೂರ್ಯಗಳ ಘೋಷಗಳಿಂದಲೂ ಆನೆಗಳ ಬೃಂಹಿತಗಳಿಂದಲೂ ಹಯವೃಂದಗಳ ಹೇಷಿತಗಳಿಂದಲೂ ರಥ ಚಕ್ರಗಳ ಚೀತ್ಕಾರದಿಂದಲೂ ಯುಗಾಂತದಲ್ಲಿನ ಹಾಗೆ ಅಬ್ಬರವುಂಟಾಯಿತು.

೫. ರೋಷದಿಂದ ವ್ಯಾಪ್ತವಾದ ಅಂಗಗಳುಳ್ಳವರಾಗಿ ಜೀವಿತದಲ್ಲಿ ಆಸೆಯನ್ನು ತೊರೆದು ಓಡಾಟದಿಂದ ಅತಿ ಕೆಂಪೇರಿದ ಅವರು ಒಬ್ಬರನ್ನೊಬ್ಬರು ತಾಕಿ ಹೋರಾಡತೊಡಗಿದರು.

ರಥಾ ರಥೈಃ ಸಮಾಸಕ್ತಾ ಗಜಾಶ್ಚಾಪಿ ಮಹಾಗಜೈಃ ।
ಪತ್ತಯಃ ಪತ್ತಿಭಿಶ್ಚೈವ ಹಯಾಶ್ಚಾಪಿ ಮಹಾಹಯೈಃ ॥ ೬ ॥
ತತಃ ಪ್ರಾಸಾಶನಿಗದಾಭಿಂಡಿಪಾಲಪರಶ್ವಧೈಃ ।
ಶಕ್ತಿಭಿಃ ಪಟ್ಟಿಶೈಃ ಶೂಲೈರ್ಮುದ್ಗರೈಃ ಕಣಪೈರ್ಗುಡೈಃ ॥ ೭ ॥
ಚಕ್ರೈಶ್ಚ ಶಕ್ತಿಭಿಶ್ಚೈವ ತೋಮರೈರಂಕುಶೈರಪಿ ।
ಕರ್ಣಿನಾಲೀಕನಾರಾಚ ವತ್ಸದಂತಾರ್ಧಚಂದ್ರಕೈಃ ॥ ೮ ॥
ಭಲ್ಲೈರ್ವೇತಸ ಪತ್ರೈಶ್ಚ ಶುಕತುಂಡೈಶ್ಚ ನಿರ್ಮಲೈಃ
ವೃಷ್ಟಿಭಿಶ್ಚಾದ್ಭುತಾಕಾರೈರ್ಗಗನಂ ಸಮಪದ್ಯತ ॥ ೯ ॥
ಸಂಪ್ರಚ್ಛಾದ್ಯ ದಿಶಃ ಸರ್ವಾಸ್ತಮೋಮಯಮಿವಾಭವತ್ ।
ಪ್ರಾಜ್ಞಾಯಂತ ನ ತೇಽನ್ಯೋನ್ಯಂ ತಸ್ಮಿಂಸ್ತಮಸಿ ಸಂಕುಲೇ ॥ ೧೦ ॥
ಅದೃಶ್ಯಭೂತಾಸ್ತಮಸಿ ನ್ಯಕೃಂತತ ಪರಸ್ಪರಂ ।
ತತೋ ಭುಜೈರ್ಧ್ವಜೈಶ್ಛತ್ರೈಃ ಶಿರೋಭಿಶ್ಚ ಸಕುಂಡಲೈಃ ॥ ೧೧ ॥
ಗಜೈಸ್ತುರಂಗೈಃ ಪಾದಾತೈಃ ಪತದ್ಭಿಃ ಪತಿತೈರಪಿ ।
ಆಕಾಶಶಿರಸೋ ಭ್ರಷ್ಟೈಃ ಪಂಕಜೈರಿವ ಭೂಶ್ಚಿತಾ ॥ ೧೨ ॥

---

೬. ರಥಗಳು ರಥಗಳನ್ನು ತಾಕಿದವು; ಗಜಗಳು ಮಹಾ ಗಜಗಳೊಡನೆ ಹೋರಿದವು; ಕಾಲಾಳುಗಳು ಕಾಲಾಳುಗಳನ್ನೆದುರಿಸಿದರು; ಕುದುರೆಗಳು ಕುದುರೆಗಳ ಮೇಲೆರಗಿದವು.

೭–೧೦. ಬಳಿಕ ಪ್ರಾಸ, ಅಶನಿ, ಗದೆ, ಭಿಂಡಿವಾಲಗಳಿಂದಲೂ, ಶಕ್ತಿಗಳಿಂದಲೂ, ಪಟ್ಟಿಶಗಳಿಂದಲೂ, ಶೂಲಗಳಿಂದಲೂ, ಮುದ್ಗರಗಳಿಂದಲೂ, ಕಣಪಗಳಿಂದಲೂ, ಗುಡಗಳಿಂದಲೂ, ಚಕ್ರಗಳಿಂದಲೂ, ತೋಮರಗಳಿಂದಲೂ, ಅಂಕುಶಗಳಿಂದಲೂ, ಕರ್ಣಿ, ನಾಲೀಕ, ನಾರಾಚ, ವತ್ಸದಂತ, ಅರ್ಧಚಂದ್ರ — ಇವುಗಳಿಂದಲೂ, ಭಲ್ಲಗಳಿಂದಲೂ, ವೇತಸ ಪತ್ರಗಳಿಂದಲೂ, ನಿರ್ಮಲವಾದ ಶುಕ ತುಂಡಗಳಿಂದಲೂ ಕೂಡಿದ ಅದ್ಭುತವಾದ ವೃಷ್ಟಿಗಳಿಂದ ಗಗನವು ತುಂಬಿ ಹೋಯಿತು. ಸರ್ವ ದಿಕ್ಕುಗಳೂ ಆವರಿಸಲ್ಪಟ್ಟು ಲೋಕವು ತಮೋಮಯವೇ ಆದಂತಾಯಿತು. ದಟ್ಟವಾಗಿ ಹಬ್ಬಿದ ಆ ಕತ್ತಲೆಯಲ್ಲಿ ಅವರು ಒಬ್ಬರನ್ನೊಬ್ಬರು ಗುರುತಿಸಿ ತಿಳಿಯಲಾರದಾದರು.

೧೧–೧೨. ಕತ್ತಲೆಯಲ್ಲಿ ಕಾಣದವರಾಗಿ ಒಬ್ಬರನ್ನೊಬ್ಬರು ಕತ್ತರಿಸಿದರು. ಬಳಿಕ ಬಿದ್ದ ಮತ್ತು ಬೀಳುತ್ತಿರುವ ಭುಜಗಳಿಂದಲೂ, ಧ್ವಜಗಳಿಂದಲೂ, ಛತ್ರಗಳಿಂಲೂ, ಕುಂಡಲದಿಂದ ಕೂಡಿದ ಶಿರಸ್ಸುಗಳಿಂದಲೂ, ಗಜ ತುರಗ ಪದಾತಿಗಳಿಂದಲೂ ಆಕಾಶದ ಮೇಲಿನಿಂದ ಬಿದ್ದ ಕಮಲಗಳಿಂದಲೆಂಬಂತೆ ಭೂಮಿಯು ಇಡಿಕಿರಿದು ಹೋಯಿತು.

ಭಗ್ನದಂತಾ ಭಿನ್ನ ಕುಂಭಾಶ್ಛಿನ್ನದೀರ್ಘಮಹಾಕರಾಃ ।
ಗಜಾಃ ಶೈಲನಿಭಾಃ ಪೇತುರ್ಧರಣ್ಯಾಂ ರುಧಿರಸ್ರವಾಃ ॥ ೧೩ ॥
ಭಗ್ನೈಷಾಶ್ಚ ರಥಾಃ ಪೇತುರ್ಭಗ್ನಾಕ್ಷಾಃ ಶಕಲೀಕೃತಾಃ ।
ಪತ್ತಯಃ ಕೋಟಿಶಃ ಪೇತುಸ್ತುರಂಗಾಶ್ಚ ಸಹಸ್ರಶಃ ॥ ೧೪ ॥
ತತಃ ಶೋಣಿತನದ್ಯಶ್ಚ ಹರ್ಷದಾಃ ಪಿಶಿತಾಶಿನಾಂ ।
ವೈತಾಲಾನಂದದಾಯಿನ್ಯೋ ವ್ಯಜಾಯಂತ ಸಹಸ್ರಶಃ ॥ ೧೫ ॥
ತಸ್ಮಿಂಸ್ತಥಾವಿಧೇ ಯುದ್ಧೇ ಸೇನಾನೀರ್ಗ್ರಸನೋಽರಿಹಾ ।
ಬಾಣವರ್ಷೇಣ ಮಹತಾ ದೇವಸೈನ್ಯಮಕಂಪಯತ್ ॥ ೧೬ ॥
ತತೋ ಗ್ರಸನಮಾಲೋಕ್ಯ ಯಮಃ ಕ್ರೋಧವಿಮೂರ್ಛಿತಃ ।
ವವರ್ಷ ಶರವರ್ಷೇಣ ವಿಶೇಷಾದಗ್ನಿವರ್ಚಸಾ ॥ ೧೭ ॥
ಸ ವಿದ್ಧೋ ಬಹುಭಿರ್ಬಾಣೈರ್ಗ್ರಸನೋಽತಿಪರಾಕ್ರಮಃ ।
ಕೃತಪ್ರತಿಕೃತಾಕಾಂಕ್ಷೀ ಧನುರಾನಮ್ಯ ಭೈರವಂ ॥ ೧೮ ॥
ಶರೈಃ ಸಹಸ್ರೈಃ ಪಂಚ ಲಕ್ಷೈಶ್ಚೈವ ವ್ಯತಾಡಯತ್ ।
ಗ್ರಸನೇನ ವಿಮುಕ್ತಾಂಸ್ತಾನ್ ಶರಾನ್ಸೋಽಪಿ ನಿವಾರ್ಯ ಚ ॥ ೧೯ ॥

---

೧೩. ದಂತಗಳು ಮುರಿದು ಕುಂಭಗಳೊಡೆದು ಉದ್ದನೆಯ ಸೊಂಡಿಲುಗಳು ಕತ್ತರಿಸಿಹೋಗಿ ರಕ್ತವನ್ನು ಸುರಿಸುತ್ತ ಬೆಟ್ಟದಂತಿರುವ ಆನೆಗಳು ಭೂಮಿಯಲ್ಲಿ ಬಿದ್ದುವು.

೧೪–೧೫. ರಥಗಳು ಮೂಕಿಮರಗಳು ಮುರಿದು ಚೂರು ಚೂರಾಗಿ ಕೆಳಗೆ ಬಿದ್ದವು. ಕಾಲಾಳುಗಳು ಕೋಟಿ ಕೋಟಿಯಾಗಿ ಬಿದ್ದರು. ಕುದುರೆಗಳು ಸಾವಿರ ಸಂಖ್ಯೆಯಲ್ಲಿ ಬಿದ್ದುವು. ಬಳಿಕ ಪಿಶಿತಾಶಿ (ಮಾಂಸಾಹಾರಿ)ಗಳಿಗೆ ಹರ್ಷವನ್ನು ನೀಡುವುವಾಗಿಯೂ ವೇತಾಳಗಳಿಗೆ ಆನಂದದಾಯಕಗಳಾಗಿಯೂ ಇರುವ ಸಾವಿರಾರು ರಕ್ತನದಿಗಳು ಹುಟ್ಟಿದುವು.

೧೬. ಆ ವಿಧವಾದ ಯುದ್ಧದಲ್ಲಿ ಶತ್ರು ವಿಧ್ವಂಸಕನಾದ ಸೇನಾಪತಿ ಗ್ರಸನನು ಮಹತ್ತಾದ ಬಾಣವರ್ಷದಿಂದ ದೇವ ಸೈನ್ಯವನ್ನು ನಡುಗಿಸಿದನು.

೧೭. ಬಳಿಕ ಗ್ರಸನನನ್ನು ಕಂಡು ಯಮನು ಕ್ರೋಧದಿಂದ ಮೈಮರೆತವನಾಗಿ ಅಗ್ನಿಯ ತೇಜಸ್ಸಿನಿಂದ ಕೂಡಿ ಮಿಗಿಲಾದ ಶರಗಳ ಮಳೆಗರೆದನು.

೧೮–೨೦. ಅತಿ ಪರಾಕ್ರಮಿಯಾದ ಆ ಗ್ರಸನನು ಬಹು ಸಂಖ್ಯೆಯ ಬಾಣಗಳಿಂದ ಹೊಡೆಯಲ್ಪಟ್ಟು ಅದಕ್ಕೆ ತಕ್ಕ ಪ್ರತೀಕಾರ ಮಾಡ ಬಯಸುವವನಾಗಿ ಭಯಂಕರವಾದ ಬಿಲ್ಲನ್ನು ಬಗ್ಗಿಸಿ ಐದು ಸಾವಿರ ಮತ್ತು ಲಕ್ಷಗಟ್ಟಲೆಯಾಗಿ ಬಾಣಗಳಿಂದ ಹೊಡೆದನು. ಗ್ರಸನನಿಂದ ಬಿಡಲ್ಪಟ್ಟ ಆ ಬಾಣಗಳನ್ನು ಯಮನು ಕೂಡ ನಿವಾರಿಸಿಕೊಂಡು ಉಗ್ರವಾದ ಬಾಣವರ್ಷಗಳಿಂದ ಗ್ರಸನನನ್ನು ಪೀಡಿ

ಬಾಣವೃಷ್ಟಿಭಿರುಗ್ರಾಭಿರ್ಯಮೋ ಗ್ರಸನಮರ್ದಯತ್ ।
ಕೃತಾಂತಶರವೃಷ್ಟೀನಾಂ ಸಂತತೀಃ ಪ್ರತಿಸರ್ಪತೀಃ ।
ಚಿಚ್ಛೇದ ಶರವರ್ಷೇಣ ಗ್ರಸನೋ ದಾನವೇಶ್ವರಃ ॥ ೨೦ ॥
ವಿಫಲಾಂ ತಾಂ ಸಮಾಲೋಕ್ಯ ಯಮಃ ಸ್ವಶರಸಂತತಿಂ ॥ ೨೧ ॥
ಪ್ರಾಹಿಣೋನ್ಮುದ್ಗರಂ ದೀಪ್ತಂ ಗ್ರಸನಸ್ಯರಥಂ ಪ್ರತಿ ।
ಸ ತಂ ಮುದ್ಗರಮಾಯಾಂತಮುತ್ಪತ್ಯ ರಥಸತ್ತಮಾತ್ ॥ ೨೨ ॥
ಜಗ್ರಾಹ ವಾಮಹಸ್ತೇನ ಲೀಲಯಾ ಗ್ರಸನೋಽರಿಹಾ ।
ತೇನೈವ ಮುದ್ಗರೇಣಾಥ ಯಮಸ್ಯ ಮಹಿಷಂ ರುಷಾ ॥ ೨೩ ॥
ತಾಡಯಾಮಾಸ ವೇಗೇನ ಸ ಪಪಾತ ಮಹೀತಲೇ ।
ಉತ್ಪತ್ಯಾಥಯಮಸ್ತಸ್ಮಾನ್ಮಹಿಷಾನ್ನಿಪತಿಷ್ಯತಃ ॥ ೨೪ ॥
ಪ್ರಾಸೇನ ತಾಡಯಾಮಾಸ ಗ್ರಸನಂ ವದನೇ ದೃಢಂ ।
ಸ ತು ಪ್ರಾಪ್ತಪ್ರಹಾರೇಣ ಮೂರ್ಛಿತೋ ನ್ಯಪತದ್ಭುವಿ ॥ ೨೫ ॥
ಗ್ರಸನಂ ಪತಿತಂ ದೃಷ್ಟ್ವಾ ಜಂಭೋ ಭೀಮಪರಾಕ್ರಮಃ
ಯಮಸ್ಯ ಭಿಂಡಿಪಾಲೇನ ಪ್ರಹಾರಮಕರೋದ್ಧೃದಿ ॥ ೨೬ ॥
ಯಮಸ್ತೇನ ಪ್ರಹಾರೇಣ ಸುಸ್ರಾವ ರುಧಿರಂ ಮುಖಾತ್ ।
ಅತಿಗಾಢಪ್ರಹಾರಾರ್ತಃ ಕೃತಾಂತೋ ಮೂರ್ಛಿತೋಽಭವತ್ ॥ ೨೭ ॥

---

ಸಿದನು. ಹರಿದು ಬರುತ್ತಿದ್ದ ಯಮನ ಆ ಶರವರ್ಷಗಳ ಎಡೆಬಿಡದ ಸಾಲು ಗಳನ್ನು ದಾನವೇಶ್ವರನಾದ ಗ್ರಸನನು ತನ್ನ ಶರವರ್ಷದಿಂದ ಕತ್ತರಿಸಿದನು.

೨೧-೨೫. ಯಮನು ತನ್ನ ಆ ಬಾಣಪರಂಪರೆಯು ವಿಫಲವಾದುದನ್ನು ಕಂಡು ಕಾಂತಿಯಿಂದ ಬೆಳಗುತ್ತಿರುವ ಮುದ್ಗರವನ್ನು ಗ್ರಸನನ ರಥಕ್ಕೆ ಗುರಿಯಿಟ್ಟು ಹೊಡೆದನು. ಶತ್ರುನಾಶಕನಾದ ಗ್ರಸನನು ಬರುತ್ತಿರುವ ಆ ಮುದ್ಗರವನ್ನು ಕಂಡು ತನ್ನ ಉತ್ತಮ ರಥದಿಂದ ನೆಗೆದು ಲೀಲೆಯಿಂದ ಅದನ್ನು ಎಡಗೈಯಲ್ಲಿ ಹಿಡಿದುಕೊಂಡನು. ಕೋಪಗೊಂಡು ಅದೇ ಮುದ್ಗರದಿಂದ ಯಮನ ಕೋಣ ವನ್ನು ವೇಗದಿಂದ ಹೊಡೆದನು. ಅದು ಭೂಮಿಯಲ್ಲಿ ಬಿದ್ದಿತು. ಅನಂತರದಲ್ಲಿ ಬೀಳುತ್ತಿರುವ ಆ ಕೋಣನ ಮೇಲಿನಿಂದ ಹಾರಿ ಯಮನು ಗ್ರಸನನ ಮುಖದ ಮೇಲೆ ಪ್ರಾಸದಿಂದ ಬಹು ಬಲವಾಗಿ ಹೊಡೆದನು. ಆ ಗ್ರಸನನು ಏಟು ತಗುಲಿ ಮೂರ್ಛಿತನಾಗಿ ಭೂಮಿಯಲ್ಲಿ ಬಿದ್ದನು.

೨೬. ಹೀಗೆ ಗ್ರಸನನು ಬಿದ್ದುದನ್ನು ಕಂಡು ಭೀಮಪರಾಕ್ರಮಿಯಾದ ಜಂಭನು ಯಮನ ಹೃದಯದಮೇಲೆ ಭಿಂಡಿಪಾಲದಿಂದ ಪ್ರಹಾರಮಾಡಿದನು.

೨೭. ಆ ಏಟಿನಿಂದ ಯಮನು ಬಾಯಿಂದ ರಕ್ತವನ್ನು ಕಕ್ಕಿದನು. ಅತಿ ಗಾಢವಾದ ಏಟಿನಿಂದ ನೊಂದು ಆ ಕೃತಾಂತನು ಮೂರ್ಛಿತನಾದನು.

ಕೃತಾಂತಮರ್ದಿತಂ ದೃಷ್ಟ್ವಾ ಗದಾಪಣಿರ್ಧನಾಧಿಪಃ ।
ವೃತೋ ಯಕ್ಷಾಯುತಗಣೈರ್ಜಂಭಂ ಪ್ರತ್ಯುದ್ಯಯೌ ರುಷಾ ॥ ೨೮ ॥
ಜಂಭೋ ರುಷಾ ತಮಾಯಾಂತಂ ದಾನವಾನೀಕಸಂವೃತಃ
ಜಗ್ರಾಹ ವಾಕ್ಯಂ ರಾಜ್ಞಸ್ತ್ರಯಥಾ ಸ್ನಿಗ್ಧೇನ ಭಾಷಿತಂ ॥ ೨೯ ॥
ಗ್ರಸನೋ ಲಬ್ಧಸಂಜ್ಞೋಽಥ ಯಮಸ್ಯ ಪ್ರಾಹಿಣೋದ್ಗದಾಂ ।
ಮಣಿಹೇಮಪರಿಷ್ಕಾರಾಂ ಗುರ್ವೀಂ ಪರಿಘಮರ್ದಿನೀಂ ॥ ೩೦ ॥
ತಾಮಾಪತಂತೀಂ ಸಂಪ್ರೇಕ್ಷ್ಯ ಗದಾಂ ಮಹಿಷವಾಹನಃ ।
ಗದಾಯಾಃ ಪ್ರತಿಘಾತಾರ್ಥಂ ಜಗಜ್ಜ್ವಲನಭೈರವಂ ॥ ೩೧ ॥
ದಂಡಂ ಮುಮೋಚ ಕೋಪೇನ ಜ್ವಾಲಾಮಾಲಾಸಮಾಕುಲಂ ।
ಸ ಗದಾಂ ವಿಯತಿ ಪ್ರಾಪ್ಯ ರರಾಸಾಂಬುಧರೋದ್ಧತಾಂ ॥ ೩೨ ॥
ಸಂಘಟ್ಟಶ್ಚಾಭವತ್ತಾಭ್ಯಾಂ ಶೈಲಾಭ್ಯಾಮಿವ ದುಃಸಹಃ ।
ತಾಭ್ಯಾಂ ನಿಷ್ಪೇಷ ನಿಹ್ರಾದ ಜಡೀಕೃತ ದಿಗಂತರಂ ॥ ೩೩ ॥

---

೨೮. ಯಮನು ಈ ಪ್ರಕಾರವಾಗಿ ಜಂಭಾಸುರನು ಹೊಡೆದ ಭಿಂಡಿಪಾಲದ ಹೊಡೆತದಿಂದ ಪೀಡಿತನಾಗಿ ಬಿದ್ದುದನ್ನು ಕಂಡು ಧನಾಧಿಪತಿಯಾದ ಕುಬೇರನು ಗದಾಪಾಣಿಯಾಗಿ ಹತ್ತುಸಾವಿರ ಸಂಖ್ಯೆಯ ಯಕ್ಷಗಣಗಳಿಂದ ಪರಿವೃತನಾಗಿ ರೋಷದಿಂದ ಆ ಜಂಭನನ್ನೆದುರಿಸಿ ನುಗ್ಗಿ ನಡೆದನು.

೨೯. ದಾನವಸೇನೆಗಳಿಂದ ಸುತ್ತುವರಿಯಲ್ಪಟ್ಟ ಆ ಜಂಭನು, ರೋಷದಿಂದ ಬರುತ್ತಿರುವ ಆ ಕುಬೇರನನ್ನು ಪ್ರೀತಿಯಿಂದಾಡಿದ ರಾಜನ ಮಾತನ್ನು ಹೇಗೋ ಹಾಗೆ ಹಿಡಿದುಕೊಂಡನು.

೩೦. ಆಮೇಲೆ ಗ್ರಸನನು ಎಚ್ಚತ್ತು ಮಣಿಗಳಿಂದಲೂ, ಚಿನ್ನದಿಂದಲೂ ಅಂದಗೊಳಿಸಿದ, ಪರಿಘವನ್ನು ಮರ್ದಿಸುವ ಬಲವುಳ್ಳ ದೊಡ್ಡ ಗದೆಯನ್ನು ಯಮನಮೇಲೆ ಪ್ರಯೋಗ ಮಾಡಿದನು.

೩೧–೩೨. ಮಹಿಷವಾಹನನಾದ ಯಮನು ತನ್ನ ಮೇಲೆರಗಿ ಬರುತ್ತಿರುವ ಆ ಗದೆಯನ್ನು ಕಂಡು ಆ ಗದೆಗೆ ಪ್ರತೀಕಾರ ಮಾಡುವುದಕ್ಕಾಗಿ ಜಗತ್ತನ್ನು ಸುಡುವ ಬೆಂಕಿಯಂತೆ ಭಯಂಕರವಾದುದೂ ಉರಿಯ ಮಾಲಿಕೆಗಳಿಂದ ಸುತ್ತುವರಿಯಲ್ಪಟ್ಟುದೂ ಆದ ದಂಡವನ್ನು ಕೋಪದಿಂದ ಮೇಲೆಸೆದನು. ಆ ದಂಡವು ಮೋಡಗಳಿಂದ ಮೇಲೆತ್ತಲ್ಪಟ್ಟ ಗದೆಯನ್ನು ಗಗನದಲ್ಲಿಯೇ ತಡೆಗಟ್ಟಿತು.

೩೩. ಬೆಟ್ಟಗಳೆರಡು ಒಂದಕ್ಕೊಂದು ತಾಕಿದಂತೆ ಗ್ರಸನನೆಸೆದ ಗದೆಗೂ, ಯಮದಂಡಕ್ಕೂ ಸಹಿಸಲಸದಳವಾದ ಸಂಘಟ್ಟವುಂಟಾಯಿತು. ಅವೆರಡರ ಘರ್ಷಣದಿಂದುಂಟಾದ ಭಯಂಕರವಾದ ಅಬ್ಬರದಿಂದ ದಿಗಂತರಗಳೆಲ್ಲವೂ ಜಡವಾಗಿ ಹೋದುವು.

ಜಗದ್ವ್ಯಾಕುಲತಾಂ ಯಾತಂ ಪ್ರಲಯಾಗಮಶಂಕಯಾ ।
ಕ್ಷಣಾತ್ಪ್ರಶಾಂತನಿರ್ಹ್ರಾದಂ ಜ್ವಲದುಲ್ಕಾಸಮಾಚಿತಂ ॥ ೩೪ ॥
ನಿಷ್ಪೇಷಣಂ ತಯೋರ್ಭೀಮಮಭೂದ್ಗಗನಗೋಚರಂ ।
ನಿಹತ್ಯಾಥ ಗದಾಂ ದಂಡಸ್ತತೋ ಗ್ರಸನಮೂರ್ಧನಿ ॥ ೩೫ ॥
ಪಪಾತ ಪೌರುಷಂ ಹತ್ವಾ ಯಥಾ ದೈವಂ ಪುರಾರ್ಜಿತಂ ।
ಸ ತು ತೇನ ಪ್ರಹಾರೇಣ ದೃಷ್ಟ್ವಾ ಸತಿಮಿರಾ ದಿಶಃ ॥ ೩೬ ॥
ಪಪಾತ ಭೂಮೌ ನಿಃಸಂಜ್ಞೋ ಭೂಮಿರೇಣುವಿಭೂಷಿತಃ ।
ತತೋ ಹಾಹಾರವೋ ಘೋರಃ ಸೇನಯೋರುಭಯೋರಭೂತ್ ॥ ೩೭ ॥
ತತೋ ಮುಹೂರ್ತಮಾತ್ರೇಣ ಗ್ರಸನಃ ಪ್ರಾಪ್ಯ ಚೇತನಾಂ ।
ಅಪಶ್ಯತ್ಸ್ವಾಂ ತನುಂ ಧ್ವಸ್ತಾಂ ವಿಲೋಲಾಭರಣಾಂಬರಾಂ ॥ ೩೮ ॥
ಸ ಚಾಪಿ ಚಿಂತಯಾಮಾಸ ಕೃತಪ್ರತಿಕೃತಕ್ರಿಯಾಂ ।
ಧಿಗಸ್ತು ಪೌರುಷಂ ಮಹ್ಯಂ ಪ್ರಭೋರಗ್ರೇಸರಃ ಕಥಂ ॥ ೩೯ ॥
ಮಯ್ಯಾಶ್ರಿತಾನಿ ಸೈನ್ಯಾನಿ ಜಿತೇ ಮಯಿ ಜಿತಾನಿ ಚ ।
ಅಸಂಭಾವಿತರೂಪೋಹಿ ಸಜ್ಜನೋ ಮೋದತೇ ಸುಖಂ ॥ ೪೦ ॥

---

೩೪–೩೯. ಆಗ ಪ್ರಲಯ ಬಂದಿತೇನೋ ಎಂಬಂತೆ ಜಗತ್ತು ವ್ಯಾಕುಲ ಹೊಂದಿತು. ' ಕ್ಷಣಹೊತ್ತಿನಲ್ಲೇ ಆ ಅಬ್ಬರವು ಅಡಗಿ ಉರಿಯುವ ಉಲ್ಕೆಗಳಿಂದ ಸುತ್ತಲ್ಪಟ್ಟುವಾಗಿ ಕಾಣಿಸಿಕೊಂಡುವು. ಆ ಗದಾದಂಡಗಳ ಪರಸ್ಪರ ಘರ್ಷಣವು ಆಕಾಶದಲ್ಲಿ ಭಯಂಕರವಾಗಿ ಕಂಡಿತು. ಬಳಿಕ, ಹಿಂದೆ ಆರ್ಜಿಸಿರುವ ದೈವ ಬಲವು ಪೌರುಷವನ್ನು ಭಂಗಿಸಿಬಿಡುವಂತೆ ದಂಡವು ಗದೆಯನ್ನು ಭಂಗಿಸಿ ಗ್ರಸನನ ತಲೆಯಮೇಲೆ ಬಿದ್ದಿತು. ಆ ಏಟಿನಿಂದ ಗ್ರಸನನಿಗೆ ದಿಕ್ಕುಗಳೆಲ್ಲ ಕತ್ತಲೆ ತುಂಬಿಕೊಂಡಿರುವಂತೆ ಕಾಣಿಸಿತು. ಕಣ್ಣುಕತ್ತಲೆ ಕವಿದು ಎಚ್ಚರತಪ್ಪಿ ಭೂಮಿ ಯಲ್ಲಿ ಬಿದ್ದನು. ಬಿದ್ದು ಧೂಳಿನ ರೇಣುಗಳಿಂದ ವಿಭೂಷಿತನಾದನು. ಬಳಿಕ ಎರಡು ಸೇನೆಗಳಲ್ಲಿಯೂ ಘೋರವಾದ ಹಾಹಾಕಾರಧ್ವನಿಯುಂಟಾಯಿತು. ಆಮೇಲೆ ಒಂದು ಮುಹೂರ್ತ ಮಾತ್ರದಲ್ಲಿಯೇ ಗ್ರಸನನು ಎಚ್ಚತ್ತು ಚೇತನ ವನ್ನು ಪಡೆದು ತನ್ನ ಶರೀರವು ಭಂಗಪಟ್ಟಿರುವುದನ್ನೂ, ಆಭರಣಗಳೂ, ವಸ್ತ್ರಗಳೂ ಚೆದರಿರುವುದನ್ನೂ ಕಂಡನು. ಆಗ ಅವನು ಯಮನು ತನಗೆ ಈ ರೀತಿ ಮಾಡಿದು ದಕ್ಕೆ ಪ್ರತೀಕಾರವಾಗಿ ಏನುಮಾಡಬೇಕೆಂಬುದನ್ನು ಯೋಚಿಸಿದನು. "ನನ್ನ ಪೌರುಷಕ್ಕೆ ಧಿಕ್ಕಾರವಿರಲಿ! ಪ್ರಭುವಿಗೆ ನಾನು ಹೇಗೆತಾನೆ ಅಗ್ರೇಸರನಾದೇನು ?

೪೦. ಸೈನ್ಯಗಳೆಲ್ಲ ನನ್ನನ್ನಾಶ್ರಯಿಸಿವೆ. ನಾನು ಜಿತನಾದರೆ ಆ ಸೈನ್ಯಗಳೂ ಜಿತವಾದಂತೆಯೇ. ಸಜ್ಜನನಾದವನು ಅಸಂಭಾವಿತನಾಗಿದ್ದರೆ (ಜನರ ದೃಷ್ಟಿಗೆ ಬೀಳದಿದ್ದರೆ) ಸುಖವಾಗಿ ಆನಂದಿಸುತ್ತಿರುತ್ತಾನೆ.

ಸಂಭಾವಿತಸ್ತ್ವಶಕ್ತಶ್ಚೇತ್ತಸ್ಯ ನಾಯಂ ಪರೋಽಪಿವಾ ।
ಏವಂ ಸಂಚಿಂತ್ಯ ವೇಗೇನ ಸಮುತ್ತಸ್ಥೌ ಮಹಾಬಲಃ ॥ ೪೧ ॥
ಮುದ್ಗರಂ ಕಾಲದಂಡಾಭಂ ಗೃಹೀತ್ವಾ ಗಿರಿಸಂನಿಭಂ ।
ಗ್ರಸನೋ ಘೋರಸಂಕಲ್ಪಃ ಸಂದಷ್ಟೌಷ್ಠ ಪುಟಚ್ಛದಃ ॥ ೪೨ ॥
ರಥೇನ ತ್ವರಿತೋಽಗಚ್ಛದಾಸಸಾದಾಂತಕಂ ರಣೇ ।
ಸಮಾಸಾದ್ಯ ಯಮಂ ಯುದ್ಧೇ ಗ್ರಸನೋ ಭ್ರಾಮ್ಯ ಮುದ್ಗರಂ ॥ ೪೩ ॥
ವೇಗೇನ ಮಹತಾ ರೌದ್ರಂ ಚಿಕ್ಷೇಪ ಯಮಮೂರ್ಧನಿ ।
ವಿಲೋಕ್ಯ ಮುದ್ಗರಂ ದೀಪ್ತಂ ಯಮಃ ಸಂಭ್ರಾಂತಲೋಚನಃ ॥ ೪೪ ॥
ವಂಚಯಾಮಾಸ ದುರ್ಧರ್ಷಂ ಮುದ್ಗರಂ ತಂ ಮಹಾಬಲಃ ।
ತಸ್ಮಿನ್ನಪಸೃತೇ ದೂರಂ ಚಂಡಾನಾಂ ಭೀಮಕರ್ಮಣಾಂ ॥ ೪೫ ॥
ಯಾಮ್ಯಾನಾಂ ಕಿಂಕರಾಣಾಂ ಚ ಅಯುತಂ ನಿಷ್ಪಿಪೇಷ ಹ ।
ತತಸ್ತದಯುತಂ ದೃಷ್ಟ್ವಾ ಹತಂ ಕಿಂಕರವಾಹಿನೀಂ ॥ ೪೬ ॥
ದಶಾರ್ಬುದಮಿತಾಃ ಕ್ರುದ್ಧಾ ಗ್ರಸನಾಯಾನ್ವಧಾವತ ।
ಗ್ರಸನಸ್ತು ಸಮಾಲೋಕ್ಯ ತಾಂ ಕಿಂಕರಮಯಾಂ ಶುಭಾಂ ॥ ೪೭ ॥

---

೪೧. ಸಂಭಾವಿತನಾಗಿದ್ದ ಆತನು ಅಶಕ್ತನಾದರೆ ಅವನಿಗೆ ಇಹವೂ ಇಲ್ಲ; ಪರಲೋಕವೂ ಇಲ್ಲ.'' ಹೀಗೆಂದು ಆಲೋಚಿಸಿ ಮಹಾಬಲಶಾಲಿಯಾದ ಆ ಗ್ರಸನನು ಮೇಲೆದ್ದು ನಿಂತನು.

೪೨–೪೪. ಕಾಲದಂಡಕ್ಕೆ ಸಮಾನವಾದ ಮತ್ತು ಗಿರಿಗೆಣೆಯಾದ ಮುದ್ಗರ ವೊಂದನ್ನು ಹಿಡಿದುಕೊಂಡು ಘೋರಸಂಕಲ್ಪನಾದ ಗ್ರಸನನು ತುಟಿಗಳನ್ನು ಕಚ್ಚಿ ರಥದಮೇಲೆ ಬಹುವೇಗವಾಗಿ ಹೋಗಿ ಯಮನನ್ನು ಬಳಿಸಾರಿದನು. ಯಮನ ಸಮೀಪಕ್ಕೆ ಹೋಗಿ ಗ್ರಸನನು ಮುದ್ಗರವನ್ನು ಗರ್‍ರನೆ ತಿರುಗಿಸಿ ಮಹತ್ತಾದ ವೇಗದಿಂದ ರೌದ್ರವಾಗಿ ಯಮನ ತಲೆಯಮೇಲೆ ತಾಕುವಂತೆ ಎಸೆದನು. ಹೊತ್ತಿ ಉರಿಯುವಂತೆ ಬೆಳಗುವ ಮುದ್ಗರವನ್ನು ನೋಡಿ ಯಮನು ಸಂಭ್ರಾಂತನಾಗಿ ಕಣ್ಣು ಸುತ್ತತೊಡಗಿದನು.

೪೫–೪೮. ಮಹಾಬಲನಾದ ಆತನು ತಡೆಯಲಸದಳವಾದ ಆ ಮುದ್ಗರಕ್ಕೆ ಸಿಕ್ಕದಂತೆ ತಪ್ಪಿಸಿಕೊಂಡನು. ಹಾಗೆ ಯಮನು ದೂರಕ್ಕೆ ಸರಿದು ಹೋಗಲು, ಆ ಮುದ್ಗರವು ಚಂಡರೂ ಭೀಮಕರ್ಮಿಗಳೂ ಆದ ಯಮನ ಕಿಂಕರರಲ್ಲಿ ಅಯುತವನ್ನು (ಹತ್ತುಸಾವಿರವನ್ನು) ಅರೆದು ಹಾಕಿಬಿಟ್ಟಿತು. ಬಳಿಕ ಆ ಅಯುತ ಮಂದಿಗಳು ಹತರಾದುದನ್ನು ಕಂಡು ಹತ್ತು ಅರ್ಬುದ ಸಂಖ್ಯೆಯ ಕಿಂಕರ ಸೈನ್ಯವು ಕೋಪಗೊಂಡು ಗ್ರಸನನನ್ನು ಹಿಡಿಯಲು ಅವನಮೇಲೆ ಹೋಯಿತು. ಗ್ರಸನನು ಶುಭತರವಾದ ಆ ಕಿಂಕರ ಸೈನ್ಯವನ್ನು ಕಂಡು

ಮೇ ತೇ ಯಮಸಹಸ್ರಾಣಿ ತಾದೃಗ್ರೂಪಬಲಾನಿ ಸಾ ।
ವಿಗಾಹ್ಯ ಗ್ರಸನಂ ಸೇನಾ ವವರ್ಷ ಶರವೃಷ್ಟಿಭಿಃ ॥ ೪೮ ॥
ಕಲ್ಪಾಂತಘೋರ ಸಂಕಾಶೋ ಬಭೂವ ಸ ಮಹಾರಣಃ ।
ಕೇಚಿಚ್ಛೈಲೇನ ಬಿಭಿದುಃ ಕೇ ಚಿದ್ವಾಣೈರಜಿಹ್ಮಗೈಃ ॥ ೪೯ ॥
ಪಿಪಿಷುರ್ಗದಯಾ ಕೇಚಿತ್ ಕೇಚಿನ್ಮುದ್ಗರವೃಷ್ಟಿಭಿಃ
ಕೇಚಿತ್ ಪ್ರಾಸ ಪ್ರಹಾರೈಶ್ಚ ತಾಡಯಾಮಾಸರುದ್ಧತಾಃ ॥ ೫೦ ॥
ಅಪರೇ ಕಿಂಕರಾಸ್ತಸ್ಯ ಲಲಂಬುರ್ಬಾಹುಮಂಡಲೇ ।
ಶಿಲಾಭಿರಪರೇ ಜಘ್ನುರ್ದ್ರುಮೈರನ್ಯೇ ಮಹೋಚ್ಛ್ರಯೈಃ ॥ ೫೧ ॥
ತಸ್ಯಾಪರೇ ಚ ಗಾತ್ರೇಷು ದಶನಾಂಶ್ಚ ನ್ಯಪಾತಯನ್ ।
ಅಪರೇ ಮುಷ್ಟಿಭಿಃ ಪೃಷ್ಠಂ ಕಿಂಕರಾಸ್ತಾಡಯಂತಿ ಚ ॥ ೫೨ ॥
ಏವಂ ಚಾಭಿದ್ರುತೈಸ್ತೈಃ ಸ ಗ್ರಸನಃ ಕ್ರೋಧಮೂರ್ಛಿತಃ ।
ಉತ್ಪಾಟ್ಯ ಗಾತ್ರಂ ಭೂ ಪೃಷ್ಠೇ ನಿಷ್ಪಿಪೇಷ ಸಹಸ್ರಶಃ ॥ ೫೩ ॥

---

ಸಾವಿರಾರು ಯಮರು ತನ್ನಮೇಲೆ ಮುತ್ತಿ ಬರುತ್ತಿರುವರೋ ಏನೋ ಎಂದು ಭಾವಿಸಿದನು. ಆ ಸೈನ್ಯವು ಆ ರೀತಿಯ ಭಯಂಕರ ರೂಪವುಳ್ಳದು; ಅಷ್ಟು ಬಲವುಳ್ಳದು. ಆ ಸೈನ್ಯವು ಗ್ರಸನನನ್ನು ಮುತ್ತಿ ಅವನಮೇಲೆ ಶರವರ್ಷವನ್ನು ಸುರಿಸಿತು.

೪೯. ಆ ಯಮಕಿಂಕರರಿಗೂ, ಗ್ರಸನಾಸುರನಿಗೂ ನಡೆದ ಆ ಮಹಾರಣವು ಕಲ್ಪಾಂತಕಾಲದ ಘೋರ ಸನ್ನಿವೇಶಕ್ಕೆ ಸಮಾನವಾಯಿತು. ಕೆಲವರು ಬೆಟ್ಟಗಳಿಂದ ಭೇದಿಸಿದರು. ಆಗ ಕಿಂಕರರು ಕೆಲವರು ವಕ್ರವಾಗಿ ಹೋಗದ ನೇರವಾದ ಬಾಣಗಳಿಂದ ಹೊಡೆದರು.

೫೦. ಕೆಲವರು ಗದೆಯಿಂದ ಅರೆದರು. ಕೆಲವರು ಮುದ್ಗರ ವರ್ಷಗಳಿಂದ ಜಜ್ಜಿದರು. ಉದ್ಧತರಾದ ಕೆಲವರು ಪ್ರಾಸದೇಟುಗಳಿಂದ ಹೊಡೆದರು.

೫೧. ಬೇರೆ ಕೆಲವರು ಕಿಂಕರರು ಅವನ ಬಾಹುಮಂಡಲದಲ್ಲಿ ಜೋಲುಬಿದ್ದರು. ಮತ್ತೆ ಕೆಲವರು ಕಲ್ಲುಗಳಿಂದ ಹೊಡೆದರು. ಮಹೋನ್ನತಗಳಾದ ಮರಗಳಿಂದ ಬೇರೆ ಕೆಲವರು ಹೊಡೆದರು.

೫೨. ಬೇರೆ ಕೆಲವರು ಅವನ ಮೈಯಲ್ಲೆಲ್ಲ ಹಲ್ಲುಗಳಿಂದ ಕಚ್ಚಿದರು. ಮತ್ತಷ್ಟು ಮಂದಿ ಕಿಂಕರರು ಮುಷ್ಟಿಗಳಿಂದ ಅವನ ಬೆನ್ನಮೇಲೆ ಗುದ್ದುತ್ತಿದ್ದರು.

೫೩. ಹೀಗೆ ಅವರಿಂದ ಮುತ್ತಿ ಹಿಂಸಿಸಲ್ಪಟ್ಟ ಗ್ರಸನನು ಕ್ರೋಧದಿಂದ ಮೈಮರೆತವನಾಗಿ, ಸಾವಿರಗಟ್ಟಳೆಯಾಗಿ ಆ ಕಿಂಕರರ ಶರೀರವನ್ನು ನೆಲದಮೇಲೆ ತಿಕ್ಕಿ ಹಾಕಿದನು.

ಕಾಂಶ್ಚಿದುತ್ಥಾಯ ಜಘ್ನೇಽಸೌ ಮುಷ್ಟಿಭಿಃ ಕಿಂಕರಾನ್ ರಣೇ ।
ಕಾಂಶ್ಚಿತ್ಪಾದಪ್ರಹಾರೇಣ ಧಾವನ್ನನ್ಯಾನಚೂರ್ಣಯತ್ ॥ ೫೪ ॥
ಕ್ಷಣೈಕೇನ ಸ ತಾನ್ ನಿನ್ಯೇ ಯಮಲೋಕಾಯ ಭಾರತ ।
ಸ ಚ ಕಿಂಕರಯುದ್ಧೇನ ವವೃಧೇಽಗ್ನಿರಿವೈಧಸಾ ॥ ೫೫ ॥
ತಮಾಲೋಕ್ಯ ಯಮೋಽಶ್ರಾಂತಂ ಶ್ರಾಂತಾಂಸ್ತಾಂ ಹತಾನ್ ಸ್ವಕಾನ್ ।
ಆಜಗಾಮ ಸಮುದ್ಯಮ್ಯ ದಂಡಂ ಮಹಿಷವಾಹನಃ ॥ ೫೬ ॥
ಗ್ರಸನಸ್ತು ತಮಾಯಾಂತಮಾಜಘ್ನೇ ಗದಯೋರಸಿ ।
ಅಚಿಂತಯಿತ್ವಾ ತತ್ಕರ್ಮ ಗ್ರಸನಸ್ಯಾಂತಕೋಽರಿಹಾ ॥ ೫೭ ॥
ವ್ಯಾಘ್ರಾನ್ ದಂಡೇನ ಸಂಜಘ್ನೇ ಸ ರಥಾನ್ನ್ಯಪತದ್ಭುವಿ ।
ತತಃ ಕ್ಷಣೇನ ಚೋತ್ಥಾಯ ಸಂಚಿಂತ್ಯಾತ್ಮಾನಮುದ್ಧತಃ ॥ ೫೮ ॥
ವಾಯುವೇಗೇನ ಸಹಸಾ ಯಯೌ ಯಮರಥಂ ಪ್ರತಿ ।
ಪದಾತಿಃ ಸ ರಥಂ ತಂ ಚ ಸಮಾರುಹ್ಯ ಯಮಂ ತದಾ ॥ ೫೯ ॥
ಯೋಧಯಾಮಾಸ ಬಾಹುಭ್ಯಾಮಾಕೃಷ್ಯ ಬಲಿನಾಂ ವರಃ ।
ಯಮೋಽಪಿ ಶಸ್ತ್ರಾಣ್ಯುತ್ಸೃಜ್ಯ ಬಾಹುಯುದ್ಧೇ ಪ್ರವರ್ತತೇ ॥ ೬೦ ॥

---

೫೪–೫೬. ಅವನು ಎದ್ದು ನಿಂತು ರಣದಲ್ಲಿ ಕೆಲವರು ಕಿಂಕರರನ್ನು ಮುಷ್ಟಿಪ್ರಹಾರಗಳಿಂದ ಕೊಂದನು. ಕೆಲವರನ್ನು ಪಾದಪ್ರಹಾರದಿಂದ ಸಾಯಿಸಿದನು. ಇತರರನ್ನು ಓಡುತ್ತ ಪುಡುಪುಡಿ ಮಾಡಿದನು. ಎಲೈ ಭಾರತನೇ! ಅವನು ಒಂದು ಕ್ಷಣದಲ್ಲಿ ಅವರನ್ನು ಯಮಲೋಕಪ್ರಾಪ್ತರನ್ನಾಗಿ ಮಾಡಿದನು. ಅವನು ಆ ಕಿಂಕರರ ಯುದ್ಧದಿಂದ ಸೌದೆಯಿಂದ ಬೆಂಕಿಯುರಿಯುವಂತೆ ವೃದ್ಧಿಹೊಂದಿದನು. ಅವನು ಸ್ವಲ್ಪವೂ ಬಳಲದಿರುವುದನ್ನೂ ತನ್ನ ಕಡೆಯವರು ಬಳಲಿ ಹತರಾಗಿರುವುದನ್ನೂ ಕಂಡು ಮಹಿಷವಾಹನನಾದ ಯಮನು ದಂಡವನ್ನು ಹಿಡಿದು ಕದನಕ್ಕೆ ಬಂದನು.

೫೭–೬೦. ಹೀಗೆ ಗ್ರಸನನು ಮುನ್ನುಗ್ಗಿ ಬರುತ್ತಿರುವ ಆ ಯಮನನ್ನು ಗದೆಯಿಂದ ಎದೆಗೆ ಬಡಿದನು. ಅರಿಮಥನನಾದ ಅಂತಕನು ಗ್ರಸನನ ಆ ಏಟನ್ನು ಲೆಕ್ಕಿಸದೆ ಅವನ ರಥಕ್ಕೆ ಹೂಡಿದ್ದ ಹುಲಿಗಳನ್ನು ದಂಡದಿಂದ ಪ್ರಹರಿಸಿದನು. ಗ್ರಸನನು ರಥದಿಂದ ಕೆಳಕ್ಕೆ ಬಿದ್ದನು. ಬಳಿಕ ಒಂದು ಕ್ಷಣದಲ್ಲಿ ಮೇಲೆದ್ದು ತನ್ನ ಸ್ವರೂಪವನ್ನು ಅರಿತುಕೊಂಡವನಾಗಿ ಉದ್ಧತನಾದ ಅವನು ವಾಯುವೇಗದಿಂದ ತಟಕ್ಕನೆ ಯಮನ ರಥದ ಬಳಿಗೆ ನಡೆದನು. ಬಲಿಷ್ಠರಲ್ಲಿ ಶ್ರೇಷ್ಠನಾದ ಆ ಗ್ರಸನನು ಕಾಲ್ನಡಗೆಯಿಂದಲೆ ಬಳಿಸಾರಿ ರಥದ ಮೇಲೇರಿ ಯಮನನ್ನು ಹಿಡಿದೆಳೆದು ಅವನೊಡನೆ ಹೋರತೊಡಗಿದನು. ಯಮನೂ ಶಸ್ತ್ರಗಳನ್ನು ಬಿಸುಟು ಬಾಹುಯುದ್ಧಕ್ಕೆ ಮೊದಲು ಮಾಡಿದನು.

ಗ್ರಸನಃ ಕಟಿವಸ್ತ್ರೇ ತು ಯಮಂ ಗೃಹ್ಯ ಬಲೋತ್ಕಟಃ ।
ಭ್ರಾಮಯಾಮಾಸ ವೇಗೇನ ಸಂಭ್ರಮಾವಿಷ್ಟಚೇತನಂ ॥ ೬೦ ॥
ವಿಮೋಚ್ಯಾಥ ಯಮಃ ಕಷ್ಟಾತ್ಕಂಠೇ ವಷ್ಟಭ್ಯ ಚಾಸುರಂ ।
ಬಾಹುಭ್ಯಾಂ ಭ್ರಾಮಯಾಮಾಸ ಸೋಽಪ್ಯಾತ್ಮಾನಮಮೋಚಯತ್ ॥
ತತೋ ಜಘ್ನತುರನ್ಯೋನ್ಯಂ ಮುಷ್ಟಿಭಿರ್ನಿರ್ದಯೌ ಚ ತೌ ।
ದೈತ್ಯೇಂದ್ರಸ್ಯಾತಿವೀರ್ಯತ್ವಾತ್ಪರಿಶ್ರಾಂತತರೋ ಯಮಃ ॥ ೬೧ ॥
ಸ್ಕಂಧೇ ನಿಧಾಯ ದೈತ್ಯಸ್ಯ ಮುಖಂ ವಿಶ್ರಾಂತಿಮೈಚ್ಛತ ।
ತಮಾಲಕ್ಷ್ಯ ತತೋ ದೈತ್ಯಃ ಶ್ರಾಂತಮುತ್ಪಾಟ್ಯ ಚೌಜಸಾ ॥ ೬೪ ॥
ನಿಷ್ಪಿಪೇಷ ಮಹೀಪೃಷ್ಠೇ ವಿನಿಘ್ನನ್ ಪಾರ್ಷ್ಣಿಪಾಣಿಭಿಃ ।
ತತೋ ಯಮಸ್ಯ ವದನಾತ್ ಸುಸ್ರಾವ ರುಧಿರಂ ಬಹು ॥ ೬೫ ॥
ನಿರ್ಜೀವಮಿತಿ ತಂ ದೃಷ್ಟ್ವಾ ತತಃ ಸಂತ್ಯಜ್ಯ ದಾನವಃ ।
ಜಯಂ ಪ್ರಾಪ್ಯೋದ್ಧತಂ ನಾದಂ ಮುಕ್ತ್ವಾ ಸಂತ್ರಾಸ್ಯ ದೇವತಾಃ ॥
ಸ್ವಕಂ ಸೈನ್ಯಂ ಸಮಾಸಾದ್ಯ ತಸ್ಥೌ ಗಿರಿರಿವಾಚಲಃ ॥ ೬೭ ॥

---

೬೧. ತನ್ನ ಬಲದಿಂದುಬ್ಬಿದ ಗ್ರಸನನು ಯಮನ ಕಟಿವಸ್ತ್ರವನ್ನು ಹಿಡಿದು, ಗಾಬರಿಗೊಂಡಿದ್ದ ಅವನನ್ನು ವೇಗದಿಂದ ಗಿರಗಿರನೆ ತಿರುಗಿಸಿದನು.

೬೨. ಬಳಿಕ ಯಮನು ಕಷ್ಟದಿಂದ ಬಿಡಿಸಿಕೊಂಡು ಅಸುರನ ಕುತ್ತಿಗೆಯನ್ನು ತನ್ನೆರಡು ತೋಳುಗಳಿಂದಲೂ ಬಿಗಿದು ತಬ್ಬಿಕೊಂಡು ಸುತ್ತಿಸಿದನು. ಅವನು ಕೂಡ ಆ ಹಿಡಿತದಿಂದ ಬಿಡಿಸಿಕೊಂಡನು.

೬೩. ತರುವಾಯ ಅವರಿಬ್ಬರೂ ನಿರ್ದಯರಾಗಿ ಒಬ್ಬರನ್ನೊಬ್ಬರು ಮುಷ್ಟಿಗಳಿಂದ ಹೊಡೆಯತೊಡಗಿದರು. ಆ ದೈತ್ಯೇಂದ್ರನ ಅತಿವೀರ್ಯದಿಂದ ಯಮನು ಬಹಳವಾಗಿ ಆಯಾಸಗೊಂಡನು.

೬೪–೬೫. ಬಳಿಕ ದೈತ್ಯನ ಭುಜದಮೇಲೆ ಮುಖವನ್ನಿಟ್ಟು ವಿಶ್ರಾಂತಿಯನ್ನು ಪಡೆಯಬಯಸಿದನು. ಆ ದೈತ್ಯನು ಯಮನು ಬಳಲಿರುವುದನ್ನು ಕಂಡು ಪರಾಕ್ರಮದಿಂದ ಅವನನ್ನು ಕತ್ತೆತ್ತಿ ನೆಲಕ್ಕೆ ಕೆಡವಿ ಅಂಗೈ ಅಂಗಾಲುಗಳಿಂದ ಹೊಡೆಯುತ್ತ ಅರೆದನು. ಆಗ ಯಮನ ಬಾಯಿಯಿಂದ ಬಹಳವಾಗಿ ರಕ್ತವು ಸುರಿಯಿತು.

೬೬–೬೭. ಬಳಿಕ ಅವನು ಜೀವದೊರೆದನೆಂದು ತಿಳಿದು ಆ ದಾನವನು ಯಮನನ್ನು ತೊರೆದು ಜಯವನ್ನು ಪಡೆದು ಗಟ್ಟಿಯಾಗಿ ಅಬ್ಬರಿಸಿ ದೇವತೆಗಳನ್ನೆಲ್ಲ ಭಯಗೊಳಿಸಿ ತನ್ನ ಸೈನ್ಯವನ್ನು ಸೇರಿ ಗಿರಿಯಂತೆ ಅಚಲನಾಗಿ ನಿಂತನು.

ನಾದೇನ ತಸ್ಯ ಗ್ರಸನಸ್ಯ ಸಂಖ್ಯೇ
ಮಹಾಮುಧೈಶ್ಚಾರ್ದಿತ ಸರ್ವಗಾತ್ರಾಃ ॥
ಗತೇ ಕೃತಾಂತೇ ವಸುಧಾಂ ಚ ನಿಷ್ಪ್ರಭೇ
ಚಕಂಪಿರೇ ಕಾಂದಿಶೀಕಾಃ ಸುರಾಸ್ತೇ ॥ ೬೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ತಾರಕಸೈನ್ಯ ದೇವಸೈನ್ಯಯೋರ್ಮಧ್ಯೇ ಯಮಗ್ರಸನಯೋರ್ದ್ವಂದ್ವಯುದ್ಧವರ್ಣನಂ" ನಾಮ ಸಪ್ತದಶೋಽಧ್ಯಾಯಃ

---

೬೮. ಹೀಗೆ ಆಕಾಶದಲ್ಲಿ ಯಮನು ನೆಲಕ್ಕೆ ಬಿದ್ದು ಕಾಂತಿಗುಂದಿರಲಾಗಿ ಗ್ರಸನನ ಮಹಾನಾದದಿಂದಲೂ ಮಹಾಸ್ತ್ರಗಳಿಂದಲೂ ಪೀಡಿತಗಳಾದ ಸರ್ವಾವಯವಗಳುಳ್ಳವರಾಗಿ ದೇವತೆಗಳೆಲ್ಲರೂ ದೆಸೆಗೆಟ್ಟು ನಡುಗಿಹೋದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ತಾರಕಸೈನ್ಯ ದೇವಸೈನ್ಯಗಳ ಕಾಳಗದಲ್ಲಿ ಯಮ ಗ್ರಸನರ ದ್ವಂದ್ವಯುದ್ಧ ವರ್ಣನ"ವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟಾದಶೋಽಧ್ಯಾಯಃ

### ತಾರಕ ದೇವಸೈನ್ಯಯೋರ್ಯುದ್ಧ ವರ್ಣನಂ

ನಾರದ ಉವಾಚ :—

ಧನಾಧಿಪಸ್ಯ ಜಂಭೇನ ಸಾಯಕೈರ್ಮರ್ಮಭೇದಿಭಿಃ ।
ದಿಶೋಽಪರುದ್ಧಾಃ ಕ್ರುದ್ಧೇನ ಸೈನ್ಯಂ ಚಾಭ್ಯರ್ದಿತಂ ಭೃಶಂ ॥ ೧ ॥
ತದ್ದೃಷ್ಟ್ವಾ ಕರ್ಮ ದೈತ್ಯಸ್ಯ ಧನಾಧ್ಯಕ್ಷಃ ಪ್ರತಾಪವಾನ್ ।
ಆಕರ್ಣಾಕೃಷ್ಟಚಾಪಸ್ತು ಜಂಭಮಾಜೌ ಮಹಾಬಲಂ ॥ ೨ ॥
ಹೃದಿ ವಿವ್ಯಾಧ ಬಾಣಾನಾಂ ಸಹಸ್ರೇಣಾಗ್ನಿವರ್ಚಸಾಂ ।
ಸ ಪ್ರಹಸ್ಯ ತತೋ ವೀರೋ ಬಾಣಾನಾಮಯುತತ್ರಯಂ ॥ ೩ ॥
ನಿಯುತಂ ಚ ತಥಾ ಕೋಟಿಮರ್ಬುದಂ ಚಾಕ್ಷಿಪತ್ ಕ್ಷಣಾತ್ ।
ತಸ್ಯ ತಲ್ಲಾಘವಂ ದೃಷ್ಟ್ವಾ ಕ್ರುದ್ಧೋ ಗೃಹ್ಯ ಮಹಾಗದಾಂ ॥ ೪ ॥
ಧನಾಧ್ಯಕ್ಷಃ ಪ್ರಚಿಕ್ಷೇಪ ಸ್ವರ್ಗೇಪ್ಸುಃ ಸ್ವಧನಂ ಯಥಾ ।
ಮುಕ್ತಾಯಾಂ ಚ ಗದಾಯಾಂ ವೈ ನಾದೋಽಭೂತ್ಪ್ರಲಯೇ ಯಥಾ ॥

---

### ಕನ್ನಡದ ಅನುವಾದ

#### ತಾರಕದೇವಸೈನ್ಯಗಳ ಯುದ್ಧವರ್ಣನ

೧. ನಾರದನಿಂತೆಂದನು:—ಧನಾಧಿಪತಿಯಾದ ಕುಬೇರನಿಗೆ ಜಂಭನೊಡನೆ ಕಾಳಗವು ಮೊದಲಾಯಿತು. ಕ್ರುದ್ಧನಾದ ಆ ಜಂಭನೆಸೆದ ಮರ್ಮಭೇದಿಗಳಾದ ಬಾಣಗಳಿಂದ ದಿಕ್ಕುಗಳೆಲ್ಲವೂ ತಡೆಗಟ್ಟಲ್ಪಟ್ಟವು. ಸೈನ್ಯವೂ ಬಹುವಾಗಿ ಪೀಡಿಸಲ್ಪಟ್ಟಿತು.

೨-೫. ಆ ದೈತ್ಯನ ಮಹತ್ತರವಾದ ಆ ಕರ್ಮವನ್ನು ಕಂಡು ಪ್ರತಾಪಶಾಲಿಯಾದ ಧನಾಕ್ಷ್ಯನು, ಆಕರ್ಣಾಂತವಾಗಿ ಬಾಣವನ್ನೆಳೆದವನಾಗಿ ಮಹಾಬಲನಾದ ಜಂಭನನ್ನು ಯುದ್ಧದಲ್ಲಿ ಅಗ್ನಿಯ ತೇಜಸ್ಸಿನಿಂದೊಡಗೂಡಿದುವಾದ ಒಂದು ಸಾವಿರ ಬಾಣಗಳಿಂದ ಎದೆಗೆ ಗುರಿಯಿಟ್ಟು ಹೊಡೆದನು. ಬಳಿಕ ವೀರನಾದ ಆ ಜಂಭನು ಗಟ್ಟಿಯಾಗಿ ನಕ್ಕು ಮೂವತ್ತುಸಾವಿರ ಬಾಣಗಳನ್ನು, ಒಂದು ನಿಯುತ, ಕೋಟಿ ಮತ್ತು ಅರ್ಬುದ ಸಂಖ್ಯೆಯ ಬಾಣಗಳನ್ನೂ ಕ್ಷಣಮಾತ್ರದಲ್ಲಿಯೇ ಅವನ ಮೇಲೆ ಪ್ರಯೋಗಿಸಿದನು. ಅವನ ಕೈಚಳಕವನ್ನು ಕಂಡು ಕೋಪಗೊಂಡ ಧನಾಧ್ಯಕ್ಷನು ಮಹಾಗದೆಯನ್ನು ತೆಗೆದುಕೊಂಡು ಸ್ವರ್ಗವನ್ನು ಪಡೆಯಬೇಕೆಂದು ಅಪೇಕ್ಷಿಸುವವನು ತನ್ನ ಧನವನ್ನು ಹೇಗೆ ಎಸೆಯುವನೋ ಹಾಗೆ ಆ ಗದೆಯನ್ನು ಚಿಮ್ಮಿ ಎಸೆದನು. ಗದೆಯನ್ನೆಸೆಯಲಾಗಿ ಪ್ರಳಯದಲ್ಲಿ ಹೇಗೋ ಹಾಗೆ ಮಹಾಧ್ವನಿಯುಂಟಾಯಿತು.

ಭೂತಾನಾಂ ಬಹುಧಾ ರಾವಾ ಜಜ್ಞಿರೇ ಖೇ ಮಹಾಭಯಾಃ ।
ವಾಯುಶ್ಚ ಸುಮಹಾಞ್ಜಜ್ಞೇ ಸ್ವಮಾಯಾನ್ಮೇಘಸಂಕುಲಂ ॥ ೬ ॥
ಸಾ ಹಿ ವೈಶ್ರವಣಸ್ಯಾಸ್ತ್ರೇ ತ್ರೈಲೋಕ್ಯಾಭ್ಯರ್ಚಿತಾ ಗದಾ ।
ಆಯಾಂತೀಂ ತಾಂ ಸಮಾಲೋಕ್ಯ ತಡಿತ್ಸಂಘಾತ ದುರ್ದೃಶಾಂ ॥ ೭ ॥
ದೈತ್ಯೋ ಗದಾವಿಘಾತಾರ್ಥಂ ಶಸ್ತ್ರವೃಷ್ಟಿಂ ಮುಮೋಚಹ ।
ಚಕ್ರಾಣಿ ಕುಣಪಾನ್ ಪ್ರಾಸಾಞ್ಛತಘ್ನೀಃ ಪಟ್ಟಿಶಾಂಸ್ತಥಾ ॥ ೮ ॥
ಪರಿಘಾನ್ಮುಸಲಾನ್ವೃಕ್ಷಾನ್ಗಿರೀಂಶ್ಚಾತುಲವಿಕ್ರಮಃ ।
ಕದರ್ಥೀಕೃತ್ಯ ಶಸ್ತ್ರಾಣಿ ತಾನಿ ಸರ್ವಾಣಿ ಸಾ ಗದಾ ॥ ೯ ॥
ಕಲ್ಪಾಂತಭಾಸ್ಕರೋ ಯದ್ವನ್ನ್ಯಪತದ್ದೈತ್ಯವಕ್ಷಸಿ ।
ಸ ತಯಾ ಗಾಢಭಿನ್ನಃ ಸನ್ ಸಫೇನರುಧಿರಂ ವಮನ್ ॥ ೧೦ ॥
ನಿಪಪಾತ ರಥಾಜ್ಜಂಭೋ ವಸುಧಾಂ ಗತಚೇತನಃ ।
ಜಂಭಂ ನಿಪತಿತಂ ದೃಷ್ಟ್ವಾ ಕುಜಂಭೋ ಘೋರನಿಶ್ಚಯಃ ॥ ೧೧ ॥
ಧನಾಧಿಪಸ್ಯ ಸಂಕ್ರುದ್ಧೋ ನಾದೇನಾಪೂರಯನ್ ದಿಶಃ ।
ಚಕ್ರೇ ಬಾಣಮಯಂ ಜಾಲಂ ಶಕುಂತಸ್ಯೇವ ಪಂಜರಂ ॥ ೧೨ ॥

---

೬. ಆಕಾಶದಲ್ಲಿ ಭೂತಗಳ ಮಹಾ ಭಯಂಕರವಾದ ನಾನಾ ಬಗೆಯ ಧ್ವನಿಗಳುಂಟಾದುವು. ಗಾಳಿಯೂ ಕೂಡ ಬಹು ಬಿರುಸಾಗಿ ಬೀಸತೊಡಗಿ ಮೇಘ ಸಮೂಹವನ್ನು ಹಾರಿಸಿಕೊಂಡು ಹೊರಟಿತು.

೭–೧೨. ವೈಶ್ರವಣನ ಆ ಗದೆಯು ಮೂರು ಲೋಕಗಳಿಂದಲೂ ಪೂಜಿಸಲ್ಪಟ್ಟುದು. ಮಿಂಚುಗಳ ಗುಂಪಿನಿಂದ ಕೂಡಿ ನೋಡಲಸದಳವಾಗಿ ಬರುತ್ತಿರುವ ಆ ಗದೆಯನ್ನು ಕಂಡು ಆ ದೈತ್ಯನು ಗದೆಯನ್ನು ಹೊಡೆದು ಹಾಕುವುದಕ್ಕಾಗಿ ಶಸ್ತ್ರವೃಷ್ಟಿಯನ್ನು ಸುರಿಸಿದನು: ಚಕ್ರಗಳು, ಕುಣಪಗಳು, ಶತಘ್ನಿಗಳು, ಪಟ್ಟಿಶಗಳು, ಪರಿಘಗಳು, ಮುಸಲಗಳು, ವೃಕ್ಷಗಳು ಮತ್ತು ಗಿರಿಗಳು—ಇವನ್ನೆಲ್ಲವನ್ನೂ ಎಣೆಯಿಲ್ಲದ ಪರಾಕ್ರಮಶಾಲಿಯಾದ ಆ ದೈತ್ಯನು ಗದೆಯ ಮೇಲೆ ಬಿಟ್ಟನು. ಆ ಸಮಸ್ತ ಶಸ್ತ್ರಗಳನ್ನು ವ್ಯರ್ಥಗೊಳಿಸಿ ಆ ಗದೆಯು ಕಲ್ಪಾಂತದ ಸೂರ್ಯನ ಹಾಗೆ ದೈತ್ಯನ ಎದೆಯ ಮೇಲೆ ಬಿದ್ದಿತು. ಆ ಗದೆಯಿಂದ ಬಹು ಬಲವಾಗಿ ಹೊಡೆಯಲ್ಪಟ್ಟವನಾಗಿ ಅವನು ನೊರೆ ನೊರೆಯಾದ ರಕ್ತವನ್ನು ಕಾರಿದನು. ಹೀಗೆ ಚೇತನವನ್ನು ಕಳೆದುಕೊಂಡ ಆ ಜಂಭನು ರಥದಿಂದ ನೆಲಕ್ಕೆ ಉರುಳಿ ಬಿದ್ದನು. ಜಂಭನು ಬಿದ್ದುದನ್ನು ಕಂಡು ಘೋರ ನಿಶ್ಚಯವುಳ್ಳವನಾದ ಕುಜಂಭನು ಧನಾಧಿಪನ ಮೇಲೆ ಕೋಪಗೊಂಡವನಾಗಿ ತನ್ನ ಅಬ್ಬರದ ನಾದದಿಂದ ದಿಕ್ಕುಗಳನ್ನು ತುಂಬುತ್ತ ಹಕ್ಕಿಯ ಪಂಜರಕ್ಕೆ ಬಲೆ ಕವಿಯುವ ಹಾಗೆ ಬಾಣಮಯವಾದ ಬಲೆಯನ್ನು ನಿರ್ಮಿಸಿದನು.

ವಿಚ್ಛಿದ್ಯ ಬಾಣಜಾಲಂ ಚ ಮಾಯಾಜಾಲಮಿವೋತ್ಕಟಂ ।
ಮುಮೋಚ ಬಾಣಾನಪರಾಂಸ್ತಸ್ಯ ಯಕ್ಷಾಧಿಪೋ ಬಲೀ ॥ ೧೩ ॥
ಚಿಚ್ಛೇದ ಲೀಲಯಾ ತಾಂಶ್ಚ ದೈತ್ಯಃ ಕ್ರೋಧೀವ ಸದ್ವಚಃ ।
ನಿಷ್ಫಲಾಂಸ್ತಾಂಸ್ತತೋ ದೃಷ್ಟ್ವಾ ಬಾಣಾನ್ ಕ್ರುದ್ಧೋ ಧನಾಧಿಪಃ ॥
ಶಕ್ತಿಂ ಜಗ್ರಾಹ ದುರ್ಧರ್ಷಾಂ ಶತಘಂಟಾಮಹಾಸ್ವನಾಂ ।
ಪ್ರೇಷಿತಾ ಸಾ ತದಾ ಶಕ್ತಿರ್ದಾರಯಾಮಾಸ ತಂ ಹೃದಿ ॥ ೧೫ ॥
ಯಥಾಲ್ಪಬೋಧಂ ಪುರುಷಂ ದುಃಖಂ ಸಂಸಾರಸಂಭವಂ ।
ತಥಾಸ್ಯ ಹೃದಯಂ ಭಿತ್ವಾ ಜಗಾಮ ಧರಣೀತಲಂ ॥ ೧೬ ॥
ನಿಮೇಷಾತ್ಸೋಽಭಿಸಂಸ್ತಭ್ಯ ದಾನವೋ ದಾರುಣಾಕೃತಿಃ ।
ಜಗ್ರಾಹ ಪಟ್ಟಿಶಂ ದೈತ್ಯೋ ಗಿರೀಣಾಮಪಿ ಭೇದನಂ ॥ ೧೭ ॥
ಸ ತೇನ ಪಟ್ಟಿಶೇನಾಜೌ ಧನದಸ್ಯ ಸ್ತನಾಂತರಂ ।
ವಾಕ್ಯೇನ ತೀಕ್ಷ್ಣರೂಪೇಣ ಮರ್ಮಾಕ್ಷರವಿಸರ್ಪಿಣಾ ॥ ೧೮ ॥

---

೧೩. ಬಲಶಾಲಿಯಾದ ಯಕ್ಷಾಧಿಪತಿಯು ಆ ಬಾಣದ ಬಲೆಯನ್ನು ಉತ್ಕಟವಾದ ಮಾಯದ ಬಲೆಯನ್ನೆಂತೋ ಅಂತು ಕತ್ತರಿಸಿಹಾಕಿ ಬೇರೆ ಬಾಣಗಳನ್ನು ಆ ದೈತ್ಯನ ಮೇಲೆ ಎಸೆದನು.

೧೪–೧೫. ಕೋಪಕ್ಕೊಳಗಾದವನು ಒಳ್ಳೆಯ ಮಾತುಗಳನ್ನು ತಿರಸ್ಕರಿಸುವಂತೆ ಆ ದೈತ್ಯನು ಆ ಬಾಣಗಳನ್ನೆಲ್ಲ ಲೀಲೆಯಿಂದ ಕತ್ತರಿಸಿ ಕೆಡವಿದನು. ಆ ಬಾಣಗಳು ಹಾಗೆ ನಿಷ್ಫಲವಾದುದನ್ನು ಕಂಡು ಧನಾಧಿಪತಿಯು ಕುದ್ಧನಾಗಿ ನೂರು ಘಂಟೆಗಳ ಮಹಾಧ್ವನಿಯುಳ್ಳುದೂ, ತಾಳಲಸದಳವಾದುದೂ ಆದ ಶಕ್ತಿಯನ್ನು ಕೈಗೆ ತೆಗೆದುಕೊಂಡನು. ಬೀಸಿ ಎಸೆಯಲ್ಪಟ್ಟ ಆ ಶಕ್ತಿಯು ಆ ದೈತ್ಯನ ಎದೆಯನ್ನು ಸೀಳಿತು.

೧೬. ಅಲ್ಪ ಜ್ಞಾನವುಳ್ಳ ಪುರುಷನನ್ನು ಸಂಸಾರದಲ್ಲುಂಟಾದ ದುಃಖವು ಹೇಗೆ ಎದೆಸೀಳುವುದೋ ಹಾಗೆ ಆ ಗದೆಯು ಆ ದೈತ್ಯನ ಎದೆಯನ್ನು ಭೇದಿಸಿ ನೆಲದ ಮೇಲೆ ಬಿದ್ದಿತು.

೧೭. ಒಂದು ನಿಮಿಷಮಾತ್ರದಲ್ಲಿಯೇ ಚೇತರಿಸಿಕೊಂಡಿದ್ದು ಭಯಂಕರವಾದ ಆಕಾರವುಳ್ಳ ಆದಾನವನು, ಬೆಟ್ಟಗಳನ್ನೂ ಭೇಧಿಸುವಂಥ ಪಟ್ಟಿಶವನ್ನು ಕೈಗೆ ತೆಗೆದುಕೊಂಡನು.

೧೮–೨೦. ದುರ್ಜನನಾದವನು ಮರ್ಮಭೇದಕಗಳಾದ ತೀಕ್ಷ್ಣ ವಾಕ್ಯಗಳಿಂದ ಕುಲೀನನ ಹೃದಯವನ್ನು ಭೇದಿಸುವ ಹಾಗೆ ಆ ಜಂಭದೈತ್ಯನು ಯುದ್ಧದಲ್ಲಿ ಧನದನ ವಕ್ಷಸ್ಥಲದ ಮಧ್ಯಪ್ರದೇಶವನ್ನು ಪಟ್ಟಿಶದಿಂದ ಹೊಡೆದು ಭೇದಿಸಿದನು. ಆ ಪಟ್ಟಿಶದೇಟಿನಿಂದ ಧನೇಶ್ವರನು, ದುರ್ವಚನದಿಂದ

ನಿರ್ಬಿಭೇದಾಭಿಜಾತಸ್ಯ ಹೃದಯಂ ದುರ್ಜನೋ ಯಥಾ ।
ತೇನ ಪಟ್ಟಿಶಘಾತೇನ ಧನೇಶಃ ಪರಿಮೂರ್ಛಿತಃ ॥ ೧೯ ॥
ನಿಷಸಾದ ರಥೋಪಸ್ಥೇ ದುರ್ವಾಚಾ ಸುಜನೋ ಯಥಾ ।
ತಥಾಗತಂ ತು ತಂ ದೃಷ್ಟ್ವಾ ಧನೇಶಂ ವೈ ಮೃತಂ ಯಥಾ ॥ ೨೦ ॥
ರಾಕ್ಷಸೋ ನಿರ್ಋತಿರ್ದೇವೋ ನಿಶಾಚರಬಲಾನುಗಃ ।
ಅಭಿದುದ್ರಾವ ವೇಗೇನ ಕುಜಂಭಂ ಭೀಮವಿಕ್ರಮಂ ॥ ೨೧ ॥
ಅಥ ದೃಷ್ಟ್ವಾತಿದುರ್ಧರ್ಷಂ ಕುಜಂಭೋ ರಾಕ್ಷಸೇಶ್ವರಂ ।
ನೋದಯಾಮಾಸ ದೈತ್ಯಾನ್ ಸ ರಾಕ್ಷಸೇಂದ್ರರಥಂಪ್ರತಿ ॥ ೨೨ ॥
ಸ ದೃಷ್ಟ್ವಾ ನೋದಿತಾಂ ಸೇನಾಂ ಪ್ರಬಲಾಸ್ತ್ರಾಂ ಸುಭೀಷಣಾಂ ।
ರಥಾದಾಪ್ಲುತ್ಯ ವೇಗೇನ ನಿರ್ಋತೀ ರಾಕ್ಷಸೇಶ್ವರಂ ॥ ೨೩ ॥
ಖಡ್ಗೇನ ತೀಕ್ಷ್ಣಧಾರೇಣ ಚರ್ಮಪಾಣಿರಧಾವತ ।
ಪ್ರವಿಶ್ಯ ದಾನವಾನೀಕಂ ಗಜಃ ಪದ್ಮಸರೋ ಯಥಾ ॥ ೨೪ ॥
ಲೋಡಯಾಮಾಸ ಬಹುಧಾ ವಿನಿಷ್ಪತ್ಯ ಸಹಸ್ರಶಃ ।
ಚಿಚ್ಛೇದ ಕಾಂಶ್ಚಿಚ್ಛತಶೋ ಬಿಭೇದಾನ್ಯಾನ್ಸ್ವರಾಸಿನಾ ॥ ೨೫ ॥

---

ಹೊಡೆಯಲ್ಪಟ್ಟ ಸಜ್ಜನನಂತೆ ಮೂರ್ಛಿತನಾಗಿ ರಥದ ಮೇಲೆ ಕುಸಿದೊರಗಿದನು. ಆಗ ಕುಜಂಭನು ಮೃತನಾದವನಂತೆ ಆ ಅವಸ್ಥೆಗೊಳಗಾದ ಆ ಧನೇಶ್ವರನನ್ನು ಕಂಡನು.

೨೧. ಆ ಸಮಯದಲ್ಲಿ ರಾಕ್ಷಸೇಶ್ವರನಾದ ನಿರ್ಋತಿದೇವನು ನಿಶಾಚರರ ಸೇನೆಯಿಂದ ಹಿಂಬಾಲಿಸಲ್ಪಟ್ಟವನಾಗಿ ಭೀಮಪರಾಕ್ರಮಿಯಾದ ಕುಜಂಭನ ಮೇಲೆ ವೇಗದಿಂದ ನುಗ್ಗಿ ನಡೆದನು.

೨೨. ಬಳಿಕ ಎದುರಿಸಲು ಬಹಳ ಅಸದಳನಾದ ಆ ರಾಕ್ಷಸೇಶ್ವರನನ್ನು ಕಂಡು ಕುಜಂಭನು ತನ್ನ ದೈತ್ಯ ಭಟರನ್ನು ರಾಕ್ಷಸೇಂದ್ರನ ರಥದ ಮೇಲೆ ನುಗ್ಗಿಸಿದನು.

೨೩–೨೪. ಪ್ರಬಲವಾದ ಅಸ್ತ್ರಗಳುಳ್ಳದೂ ಬಹು ಭೀಷಣವಾದುದೂ ಆದ ಆ ಸೇನೆಯನ್ನು ತನ್ನ ಮೇಲೆ ನುಗ್ಗಿಸಿದುದನ್ನು ಕಂಡು ಆ ನಿರ್ಋತಿಯು ರಥದಿಂದ ಕೆಳಕ್ಕೆ ಧುಮುಕಿ ತೀಕ್ಷ್ಣಧಾರೆಯುಳ್ಳ ಕತ್ತಿಯನ್ನು ಹಿರಿದು ಗುರಾಣಿ ಹಿಡಿದು ಆನೆಯು ಪದ್ಮಸರೋವರದೊಳಕ್ಕೆ ನುಗ್ಗುವಂತೆ ದಾನವ ಸೈನ್ಯದೊಳ ಹೊಗ್ಗಿ ವೇಗದಿಂದೋಡಿ ರಾಕ್ಷಸಾಧಿಪತಿಯಾದ ಕುಜಂಭನ ಮೇಲೆರಗಿದನು.

೨೫. ಆತನು ಸಾವಿರಗಟ್ಟಳೆ ವೀರರನ್ನು ಕತ್ತರಿಸಿ ಕೆಡಹಿ ಬಹಳವಾಗಿ ಸೇನೆಯನ್ನು ಕಲಕಿಬಿಟ್ಟನು. ಕೆಲವರನ್ನು ನೂರಾರು ತುಂಡು ಮಾಡಿದನು; ಬೇರೆಯವರನ್ನು ಆ ಬಲ್ಗತ್ತಿಯಿಂದ ಸೀಳಿ ಕೆಡಹಿದನು

ಸಂದಷ್ಟೌಷ್ಠಮುಖೈಃ ಪೃಥ್ವೀಂ ದೈತ್ಯಾನಾಂ ಸೋಽಭ್ಯಪೂರಯತ್ ।
ತತೋ ನಿಃಶೇಷಿತಪ್ರಾಯಾಂ ವಿಲೋಕ್ಯ ಸ್ವಾಂ ಚಮೂಂ ತದಾ ॥ ೨೬ ॥
ಮುಕ್ತ್ವಾ ಧನಪತಿಂ ದೈತ್ಯಃ ಕುಜಂಭೋ ನಿರ್ಋತಿಂ ಯಯೌ ।
ಲಬ್ಧಸಂಜ್ಞಸ್ತು ಜಂಭೋಽಪಿ ಧನಾಧ್ಯಕ್ಷಪದಾನುಗಾನ್ ॥ ೨೭ ॥
ಜೀವಗ್ರಾಹಂ ಸ ಜಗ್ರಾಹ ಬಧ್ವಾ ಪಾಶೈಃ ಸಹಸ್ರಧಾ ।
ಮೂರ್ತಿಮಂತಿ ಚ ರತ್ನಾನಿ ಪದ್ಮಾದೀಂಶ್ಚ ನಿಧೀಂಸ್ತಥಾ ॥ ೨೮ ॥
ವಾಹನಾನಿ ಚ ದಿವ್ಯಾನಿ ವಿಮಾನಾನಿ ಚ ಸರ್ವಶಃ ।
ಧನೇಶೋ ಲಬ್ಧಸಂಜ್ಞಸ್ತು ತಾಮವಸ್ಥಾಂ ವಿಲೋಕ್ಯ ಸಃ ॥ ೨೯ ॥
ನಿಃಶ್ವಸನ್ ದೀರ್ಘಮುಷ್ಣಂ ಚ ರೋಷಾತ್ತಾಮ್ರವಿಲೋಚನಃ ।
ಧ್ಯಾತ್ವಾಸ್ತ್ರಂ ಗಾರುಡಂ ದಿವ್ಯಂ ಬಾಣಂ ಸಂಧಾಯ ಕಾರ್ಮುಕೇ ॥
ಮುಮೋಚ ದಾನವಾನೀಕೇ ತಂ ಬಾಣಂ ಶತ್ರುದಾರಣಂ ।
ಪ್ರಥಮಂ ಕಾರ್ಮುಕಂ ತಸ್ಯ ವಹ್ನಿಜ್ವಾಲಮುದ್ಭೃತ್ಯತ ॥ ೩೧ ॥
ನಿಶ್ಚೇರುರ್ವಿಸ್ಫುಲಿಂಗಾನಾಂ ಕೋಟಯೋ ಧನುಷಸ್ತಥಾ ।
ತತೋ ಜ್ವಾಲಾಕುಲಂ ವ್ಯೋಮ ಚಕ್ರೇ ಚಾಸ್ತ್ರಂ ಸಮಂತತಃ ॥ ೩೨ ॥

---

೨೬–೩೦. ಹೀಗೆ ಆ ನಿರ್ಋತಿಯು ಹಲ್ಲುಮುಡಿ ಕಚ್ಚಿರುವ ದೈತ್ಯರ ಮುಖಗಳಿಂದ ಭೂಮಿಯನ್ನು ತುಂಬಿಬಿಟ್ಟನು. ಬಳಿಕ, ಇನ್ನೇನು ನಿಶ್ಶೇಷವಾಯಿತೋ ಎಂಬಂತಾದ ತನ್ನ ಸೇನೆಯನ್ನು ಕಂಡು ಆ ಕುಜಂಭದೈತ್ಯನು ಧನಪತಿಯನ್ನು ಬಿಟ್ಟು ನಿರ್ಋತಿಯ ಮೇಲೆ ನಡೆದನು. ಜಂಭನೂ ಕೂಡ ಎಚ್ಚತ್ತು ಧನಾಧ್ಯಕ್ಷನ ಅನುಯಾಯಿಗಳನ್ನು ಸಾವಿರಾರು ಬಗೆಯಲ್ಲಿ ಪಾಶಗಳಿಂದ ಬಿಗಿದು ಜೀವಸಹಿತವಾಗಿ ಹಿಡಿದುಕೊಂಡನು. ಮೂರ್ತಿಮಂತಗಳಾದ ರತ್ನಗಳನ್ನೂ ಪದ್ಮ ಮೊದಲಾದ ನಿಧಿಗಳನ್ನೂ ದಿವ್ಯ ವಾಹನಗಳನ್ನೂ ವಿಮಾನಗಳನ್ನೂ ಎಲ್ಲವನ್ನೂ ಹಿಡಿದು ವಶಪಡಿಸಿಕೊಂಡನು. ಆ ಧನೇಶ್ವರನು ಎಚ್ಚತ್ತವನಾಗಿ ಆ ಅವಸ್ಥೆಯನ್ನು ನೋಡಿ ಬಿಸಿಯಾಗಿ ನಿಟ್ಟುಸಿರುಬಿಟ್ಟು ರೋಷದಿಂದ ಕಣ್ಣು ಕೆಂಪಗೆ ಮಾಡಿಕೊಂಡು ದಿವ್ಯವಾದ ಗಾರುಡಾಸ್ತ್ರವನ್ನು ಧ್ಯಾನಮಾಡಿ ಬಿಲ್ಲಿನಲ್ಲಿ ಬಾಣವನ್ನು ಹೂಡಿದನು.

೩೧. ಶತ್ರುಗಳನ್ನು ಸೀಳಿ ಕೆಡಹುವ ಆ ಬಾಣವನ್ನು ದಾನವ ಸೈನ್ಯದ ಮೇಲೆ ಪ್ರಯೋಗಿಸಿಬಿಟ್ಟನು. ಮೊದಲು ಅವನ ಬಿಲ್ಲು ಅಗ್ನಿಜ್ವಾಲೆಯುಳ್ಳದಾಗಿ ಕಾಣಿಸಿತು.

೩೨. ಧನುಸ್ಸಿನಿಂದ ಕೋಟಿಗಟ್ಟಳೆ ಕಿಡಿಗಳು ಹೊರಟು ಹೊರಕ್ಕೆರಚಿದವು. ಬಳಿಕ ಆ ಅಸ್ತ್ರವು ಆಕಾಶವನ್ನು ಎಲ್ಲ ಕಡೆಯೂ ಉರಿಯಿಂದ ವ್ಯಾಪಿಸಿ ಕಲಕಿಬಿಟ್ಟಿತು.

ತದಸ್ತ್ರಂ ಸಹಸಾ ದೃಷ್ಟ್ವಾ ಜಂಭೋ ಭೀಮಪರಾಕ್ರಮಃ ।
ಸಂವರ್ತಂ ಮುಮುಚೇ ತೇನ ಪ್ರಶಾಂತಂ ಗಾರುಡಂ ತದಾ ॥ ೩೩ ॥
ತತಸ್ತಂ ದಾನವೋ ದೃಷ್ಟ್ವಾ ಕುಬೇರಂ ರೋಷವಿಹ್ವಲಃ ।
ಅಭಿದುದ್ರಾವ ವೇಗೇನ ಪದಾತಿರ್ಘನದಂ ನದನ್ ॥ ೩೪ ॥
ಅಥಾಭಿಮುಖಮಾಯಾಂತಂ ದೈತ್ಯಂ ದೃಷ್ಟ್ವಾ ಧನಾಧಿಪಃ ।
ಬಭೂವ ಸಂಭ್ರಮಾವಿಷ್ಟಃ ಪಲಾಯನಪರಾಯಣಃ ॥ ೩೫ ॥
ತತಃ ಪಲಾಯತಸ್ತಸ್ಯ ಮುಕುಟೋ ರತ್ನಮಂಡಿತಃ ।
ಪಪಾತ ಭೂತಲೇ ದೀಪ್ತೋ ರವಿಬಿಂಬಮಿವಾಂಬರಾತ್ ॥ ೩೬ ॥
ಯಕ್ಷಾಣಾಮಭಿಜಾತಾನಾಂ ಭಗ್ನಂ ಪ್ರವವೃತೇ ರಣಾತ್ ।
ಮರ್ತುಂ ಸಂಗ್ರಾಮಶಿರಸಿ ಯುಕ್ತಂ ನೋ ಭೂಷಣಾಯ ತತ್ ॥ ೩೭ ॥
ಇತಿ ವ್ಯವಸ್ಯ ದುರ್ಧರ್ಷಾ ನಾನಾಶಸ್ತ್ರಾಸ್ತ್ರಪಾಣಯಃ ।
ಯುಯುತ್ಸವಸ್ತಥಾ ಯಕ್ಷಾ ಮುಕುಟಂ ಪರಿವಾರ್ಯ ತೇ ॥ ೩೮ ॥
ಅಭಿಮಾನಧನಾ ವೀರಾ ಧನದಸ್ಯ ಪದಾನುಗಾಃ ।
ತಾನಮರ್ಷಾಚ್ಚ ಸಂಪ್ರೇಕ್ಷ್ಯ ದಾನವಶ್ಚಂಡಪೌರುಷಃ ॥ ೩೯ ॥

---

೩೩. ಆ ಅಸ್ತ್ರವನ್ನು ಕಂಡು ಭೀಮಪರಾಕ್ರಮನಾದ ಜಂಭನು ತಟಕ್ಕನೆ ಸಂವರ್ತಾಸ್ತ್ರವನ್ನು ಬಿಟ್ಟನು. ಅದರಿಂದ ಗಾರುಡಾಸ್ತ್ರವು ಶಾಂತವಾಯಿತು.

೩೪. ತರುವಾಯ ಆ ದಾನವನು ಕುಬೇರನನ್ನು ಕಂಡು ರೋಷವಿಹ್ವಲನಾಗಿ ಅಬ್ಬರಿಸುತ್ತ ಪದಾತಿಯಾಗಿಯೇ ಬಹು ವೇಗದಿಂದ ಆ ಧನದನೆಡೆಗೆ ಓಡಿದನು.

೩೫. ಬಳಿಕ ತನಗೆದುರಾಗಿ ಬರುತ್ತಿರುವ ದೈತ್ಯನನ್ನು ಕಂಡು ಆ ಧನಾಧಿಪತಿಯು ಹಿಂದು ಮುಂದು ತೋರದೆ ಗಾಬರಿಗೊಂಡವನಾಗಿ ಓಡಿಹೋದನು.

೩೬. ಆಗ ಪಲಾಯನ ಮಾಡುತ್ತಿದ್ದ ಆತನ ರತ್ನಖಚಿತವಾದ ಕಿರೀಟವು ಬೆಳಗಿ ಹೊಳೆಯುತ್ತ ಸೂರ್ಯಬಿಂಬದಂತೆ ಆಕಾಶದಿಂದ ಕೆಳಗೆ ಬಿದ್ದಿತು.

೩೭. ಗೌರವಶಾಲಿಗಳಾದ ಯಕ್ಷರೆಲ್ಲರೂ ಅದನ್ನು ಕಂಡು "ಯುದ್ಧದ ಮುಂಚೂಣಿ" ಯಲ್ಲಿ ಮರಣಹೊಂದುವುದು ಯುಕ್ತವು. ಅದೇ ನಮಗೆ ಭೂಷಣವು, ಎಂದುಕೊಂಡರು.

೩೮–೪೦. ಹೀಗೆ ನಿಶ್ಚಯಮಾಡಿಕೊಂಡು ಅಡಗಿಸಲರಿದಾದವರೂ ಅಭಿಮಾನಧನರೂ ವೀರರೂ ಧನದನ ಅನುಯಾಯಿಗಳೂ ಆದ ಆ ಯಕ್ಷರು ಯುದ್ಧಮಾಡಬಯಸುವವರಾಗಿ ನಾನಾ ಬಗೆಯ ಶಸ್ತ್ರಾಸ್ತ್ರಗಳನ್ನು ಕೈಯಲ್ಲಿ ಹಿಡಿದು ಕಿರೀಟವನ್ನು ಸುತ್ತುವರಿದು ನಿಂತರು. ಚಂಡಪರಾಕ್ರಮಿಯಾದ ಆ ದಾನವನು ಅವರನ್ನು ಕಂಡು ಕೋಪಗೊಂಡು ಬೆಟ್ಟದಷ್ಟು ದೊಡ್ಡದೂ,

ಭುಶುಂಡೀಂ ಭೀಷಣಾಕಾರಾಂ ಗೃಹೀತ್ವಾ ಶೈಲಗೌರವಾಂ ।
ರಕ್ಷಿಣೋ ಮುಕುಟಸ್ಯಾಥ ನಿಷ್ಪಿಪೇಷ ನಿಶಾಚರಾನ್ ॥ ೪೦ ॥
ತಾನ್ ಪ್ರಮಥ್ಯಾಥ ನಿಯುತಂ ಮುಕುಟಂ ತಂ ಸ್ವಕೇ ರಥೇ ।
ಸಮಾರೋಪ್ಯಾಮರರಿಪುರ್ಜಿತ್ವಾ ಧನದಮಾಹವೇ ॥ ೪೧ ॥
ಧನಾನಿ ಚ ನಿಧೀನ್ ಗೃಹ್ಯ ಸ್ವಸೈನ್ಯೇನ ಸಮಾವೃತಃ ।
ನಾದೇನ ಮಹತಾ ದೇವಾನ್ ದ್ರಾವಯಾಮಾಸ ಸರ್ವಶಃ ॥ ೪೨ ॥
ಧನದೋಽಪಿ ಧನಂ ಸರ್ವಂ ಗೃಹೀತೋ ಮುಕ್ತಮೂರ್ಧಜಃ ।
ಪದಾತಿರೇಕಃ ಸನ್ತ್ರಸ್ತಃ ಪಾಪ್ಯೈವಂ ದೀನವತ್ ಸ್ಥಿತಃ ॥ ೪೩ ॥
ಕುಜಂಭೇನಾಥ ಸಂಸಕ್ತೋ ರಜನೀಚರನಂದನಃ ।
ಮಾಯಾಮಮೋಘಾಮಾಶ್ರಿತ್ಯ ತಾಮಸೀಂ ರಾಕ್ಷಸೇಶ್ವರಃ ॥ ೪೪ ॥
ಮೋಹಯಾಮಾಸ ದೈತ್ಯೇಂದ್ರೋ ಜಗತ್ ಕೃತ್ವಾ ತಮೋಮಯಂ ।
ತತೋ ವಿಫಲನೇತ್ರಾಣಿ ದಾನವಾನಾಂ ಬಲಾನಿ ಚ ॥ ೪೫ ॥
ನ ಶೇಕುಶ್ಚಲಿತುಂ ತತ್ರ ಪದಾದಪಿ ಪದಂ ತದಾ ।
ತತೋ ನಾನಾಸ್ತ್ರವರ್ಷೇಣ ದಾನವಾನಾಂ ಮಹಾಚಮೂಃ ॥ ೪೬ ॥

---

ಭಯಂಕರಾಕಾರವಾದುದೂ ಆದ ಭುಶುಂಡಿಯನ್ನು ತೆಗೆದುಕೊಂಡು ಕಿರೀಟ ರಕ್ಷಕರಾಗಿದ್ದ ಆ ನಿಶಾಚರರನ್ನು ಅರೆದುಬಿಟ್ಟನು.

೪೧–೪೨. ಆ ದೇವ ಶತ್ರುವು ನಿಯುತ ಸಂಖ್ಯೆಯ ಆ ರಕ್ಷಿಗಳನ್ನು ಮಥಿಸಿ ಆ ಬಳಿಕ ಅವರ ಕಿರೀಟವನ್ನು ತನ್ನ ರಥದಲ್ಲಿಟ್ಟುಕೊಂಡು ಯುದ್ಧದಲ್ಲಿ ಕುಬೇರನನ್ನು ಜಯಿಸಿ, ಧನಗಳನ್ನೂ ನಿಧಿಗಳನ್ನೂ ತೆಗೆದುಕೊಂಡು ತನ್ನ ಸೈನ್ಯದಿಂದ ಸುತ್ತುವರಿದು ಗರ್ಜನೆಯ ಮಹತ್ತಾದ ನಾದದಿಂದ ದೇವತೆಗಳನ್ನು ದಿಕ್ಕುದಿಕ್ಕಿಗೂ ಓಡಿಸಿದನು.

೪೩. ಧನದನೂ ಕೂಡ ಸರ್ವ ಧನವನ್ನೂ ಕಸಿಯಲ್ಪಟ್ಟವನಾಗಿ ತಲೆಗೂದಲು ಕೆದರಿಕೊಂಡು ಪದಾತಿಯಾಗಿಯೂ, ಒಂಟಿಗನಾಗಿಯೂ ನಿಂತು ಅತಿಯಾಗಿ ಹೆದರಿ ಕುಜಂಭನಿಂದ ಈ ಸ್ಥಿತಿಯನ್ನು ಪಡೆದು ದೀನನಂತೆ ನಿಂತನು.

೪೪–೪೫. ಅನಂತರದಲ್ಲಿ ರಾಕ್ಷಸನಂದನನಾದ ನಿರ್ಋತಿಯು ಕದನದಲ್ಲಿ ತೊಡಗಿದನು. ಆ ರಾಕ್ಷಸೇಶ್ವರನು ಅಮೋಘವಾದ ತಾಮಸಿಕ ಮಾಯೆಯನ್ನಾಶ್ರಯಿಸಿ ಜಗತ್ತನ್ನು ಕತ್ತಲೆಕವಿಸಿ ಮೋಹಗೊಳಿಸಿದನು. ಆಗ ಕಣ್ಣುದೃಷ್ಟಿಯು ವಿಫಲಗೊಂಡು ದಾನವರ ಬಲಗಳು ಏನು ಮಾಡುವುದಕ್ಕೂ ತೋರದೆ ಹೋದವು.

೪೬–೪೭. ಅವು ಹೆಜ್ಜೆ ಎತ್ತಿ ಹೆಜ್ಜೆಯಿಡುವುದಕ್ಕೂ ಶಕ್ತವಾಗಲಿಲ್ಲ. ಬಳಿಕ ನಿರ್ಋತಿದೇವನು ಕತ್ತಲೆಯಿಂದ ಮುಸುಕಲ್ಪಟ್ಟ ದಾನವರ ಮಹಾ

ಜಘಾನ ನಿರ್ಋತಿರ್ದೇವಸ್ತಮಸಾ ಸಂವೃತಾ ಭೃಶಂ ।
ಹನ್ಯಮಾನೇಷು ದೈತ್ಯೇಷು ಕುಜಂಭೇ ಮೂಢಚೇತಸಿ ॥ ೪೭ ॥
ಮಹಿಷೋ ದಾನವೇಂದ್ರಸ್ತು ಕಲ್ಪಾಂತಾಂಭೋದಸನ್ನಿಭಃ ।
ಅಸ್ತ್ರಂ ಚಕಾರ ಸಾವಿತ್ರಮುಲ್ಕಾಸಂಘಾತ ಮಂಡಿತಂ ॥ ೪೮ ॥
ವಿಜೃಂಭತ್ಯಥ ಸಾವಿತ್ರೇ ಪರಮಾಸ್ತ್ರೇತು ಪ್ರತಾಪಿನಿ ।
ಪ್ರಣಾಶಮಗಮತ್ತೀವ್ರಂ ತಮೋ ಘೋರಮನಂತರಂ ॥ ೪೯ ॥
ತತೋಽಸ್ತ್ರಂ ವಿಸ್ಫುಲಿಂಗಾಂಕಂ ತಮಃ ಶುಕ್ಲಂ ವ್ಯಜಾಯತ ।
ಫ್ರೋತ್ಫುಲ್ಲಾರುಣ ಪದ್ಮೌಘಂ ಶರದೀವಾಮಲಂ ಸರಃ ॥ ೫೦ ॥
ತತಸ್ತಮಸಿ ಸಂಶಾಂತೇ ದೈತ್ಯೇಂದ್ರಾಃ ಪ್ರಾಪ್ತಚಕ್ಷುಷಃ ।
ಚಕ್ರುಃ ಕ್ರೂರೇಣ ತಮಸಾ ದೇವಾನೀಕಂ ಮಹಾದ್ಭುತಂ ॥ ೫೧ ॥
ಅಥಾದಾಯ ಧನುರ್ಘೋರಮಿಷುಂ ಚಾಶೀವಿಷೋಪಮಂ ।
ಕುಜಂಭೋಽಧಾವತ ಕ್ಷಿಪ್ರಂ ರಕ್ಷೋ ದೇವಬಲಂ ಪ್ರತಿ ॥ ೫೨ ॥

---

ಸೇನೆಗಳನ್ನು ನಾನಾ ಅಸ್ತ್ರಗಳ ವರ್ಷದಿಂದ ಕೊಂದುಹಾಕಿದನು. ದೈತ್ಯರು ಎತ್ತೆತ್ತಲೂ ಮುತ್ತಿ ಕೊಲ್ಲಲ್ಪಡುತ್ತಿದ್ದರು; ಆಗ ದಾನವ ಸೇನಾಪತಿಗಳಲ್ಲೊಬ್ಬನಾದ ಕುಜಂಭನು ಎಚ್ಚರತಪ್ಪಿ ಮೈಮರೆತನು.

೪೮. ಆಗ ಕಲ್ಪಾಂತಕಾಲದ ಮೇಘಕ್ಕೆ ಸಮಾನವಾದ ಮಹಿಷನೆಂಬ ದಾನವೇಂದ್ರನು ಉಲ್ಕಾ ಸಮೂಹಗಳಿಂದ ಅಲಂಕೃತವಾದ ಸಾವಿತ್ರಾಸ್ತ್ರವನ್ನು ಪ್ರಯೋಗಿಸಿದನು.

೪೯. ಬಳಿಕ ಪ್ರತಾಪಶಾಲಿಯಾದ ಸಾವಿತ್ರವೆಂಬ ಆ ಪರಮಾಸ್ತ್ರವು ವಿಜೃಂಭಿಸುತ್ತಿರಲಾಗಿ ದಟ್ಟವಾಗಿ ಕವಿದಿದ್ದ ಆ ಘೋರವಾದ ಅಂಧಕಾರವು ನಾಶವಾಗಿಹೋಯಿತು.

೫೦. ತರುವಾಯ, ಶರತ್ಕಾಲದಲ್ಲಿ ಚೆನ್ನಾಗಿ ಅರಳಿದ ಕೆಂದಾವರೆ ಗುಂಪುಗಳಿಂದ ಕೂಡಿರುವ ನಿರ್ಮಲವಾದ ಸರೋವರವೆಂಬಂತೆ ಆ ಸಾವಿತ್ರಾಸ್ತ್ರದ ಕಿಡಿಯಿಂದ ಕೂಡಿದುದಾಗಿ ಕತ್ತಲೆಯು ಕಳೆದು ಬೆಳಗಾಗಿಹೋಯಿತು. ಆಗ ಸಮಸ್ತವೂ ಸ್ಪಷ್ಟವಾಗಿ ಗೋಚರವಾಗತೊಡಗಿತು.

೫೧. ಬಳಕ ಕತ್ತಲೆಯು ಪರಿಹಾರವಾಗಲಾಗಿ ಆ ದೈತ್ಯೇಂದ್ರರೆಲ್ಲರೂ ಕಣ್ಣು ಪಡೆದವರಾಗಿ ದೇವಸೇನೆಯನ್ನು ಕ್ರೂರವಾದ ಕತ್ತಲೆಯಿಂದ ಮಹಾದ್ಭುತವನ್ನಾಗಿ ಮಾಡಿದರು.

೫೨. ಅನಂತರದಲ್ಲಿ ಘೋರವಾದ ಧನುಸ್ಸನ್ನೂ ವಿಷಕ್ಕೆ ಸಮಾನವಾದ ಬಾಣವನ್ನೂ ತೆಗೆದುಕೊಂಡು ಕುಜಂಭನು ರಾಕ್ಷಸದೇವನಾದ ನಿರ್ಋತಿಯ ಸೇನೆಯ ಮೇಲೆ ಓಡಿ ಬಂದು ದಾಳಿ ಮಾಡಿದನು.

ರಾಕ್ಷಸೇಂದ್ರಸ್ತಥಾಯಾಂತಂ ದೃಷ್ಟ್ವಾ ತಂ ಸ ಪದಾನುಗಃ ।
ವಿವ್ಯಾಧ ನಿಶಿತೈರ್ಬಾಣೈಃ ಕಾಲಾಶನಿಸಮಸ್ವನೈಃ ॥ ೫೩ ॥
ನಾದಾನಂ ನ ಚ ಸಂಧಾನಂ ನ ಮೋಕ್ಷೋ ವಾಸ್ಯ ಲಕ್ಷ್ಯತೇ ।
ಚಿಚ್ಛೇದೋಗ್ರೈಃ ಶರವ್ರಾತೈಸ್ತಾಞ್ಛರಾನತಿ ಲಾಘವಾತ್ ॥ ೫೪ ॥
ಧ್ವಜಂ ಶರೇಣ ತೀಕ್ಷ್ಣೇನ ನಿಚಕರ್ತಾಮರದ್ವಿಷಃ ।
ಸಾರಥಿಂ ಚಾಸ್ಯ ಭಲ್ಲೇನ ರಥನೀಡಾದಪಾಹರತ್ ॥ ೫೫ ॥
ಕಾಲಕಲ್ಪೇನ ಬಾಣೇನ ತಂ ಚ ವಕ್ಷಸ್ಯತಾಡಯತ್ ।
ಸ ತು ತೇನ ಪ್ರಹಾರೇಣ ಚಕಂಪೇ ತಾಡಿತೋ ಭೃಶಂ ॥ ೫೬ ॥
ದೈತ್ಯೇಂದ್ರೋ ರಾಕ್ಷಸೇಂದ್ರೇಣ ಕ್ಷಿತಿಕಂಪೇ ನಗೋ ಯಥಾ ।
ಸಮುಹೂರ್ತಾತ್ಸಮಾಶ್ವಾಸ್ಯ ಮತ್ವಾ ತಂ ದುರ್ಜಯಂ ರಣೇ ॥ ೫೭ ॥
ಪದಾತಿರಾಸಾದ್ಯ ರಥಂ ರಕ್ಷೋ ವಾಮಕರೇಣ ಚ ।
ಕೇಶೇಷು ನಿಋೃತಿಂ ಗೃಹ್ಯ ಜಾನುನಾಕ್ರಮ್ಯ ಚ ಸ್ಥಿತಃ ॥ ೫೮ ॥

---

೫೩. ಆ ರಾಕ್ಷಸೇಂದ್ರನು ಹಾಗೆ ತನಗೆದುರಾಗಿ ಬರುತ್ತಿರುವ ಅವನನ್ನು ನೋಡಿ ಕಾಲ್ನಡಗೆಯಲ್ಲಿಯೇ ನಡೆಯುತ್ತ ಪ್ರಳಯಕಾಲದ ವಜ್ರಾಯುಧಕ್ಕೆಣೆಯಾದ ಧ್ವನಿಯಿಂದೊಡಗೂಡಿದ ಹರಿತವಾದ ಬಾಣಗಳಿಂದ ಹೊಡೆದನು.

೫೪. ಸಮರಸಮಯದಲ್ಲಾತನು ಬಾಣಗಳನ್ನು ಕೈಗೆ ತೆಗೆದುಕೊಳ್ಳುವುದಾಗಲಿ ಅವನ್ನು ಬಿಲ್ಲಿಗೆ ಹೂಡುವುದಾಗಲಿ ಬಿಲ್ಲೆಳೆದು ಬಿಡುವುದಾಗಲಿ ಯಾರಿಗೂ ಕಾಣುತ್ತಿರಲಿಲ್ಲ. ಅವನು ಉಗ್ರವಾದ ಶರಸಮೂಹಗಳಿಂದ ಆ ಬಾಣಗಳನ್ನು ಬಹು ಬೇಗ ಕತ್ತರಿಸಿಬಿಟ್ಟನು.

೫೫. ದೇವಶತ್ರುವಾದ ಅವನ ಧ್ವಜವನ್ನು ತೀಕ್ಷ್ಣವಾದ ಬಾಣದಿಂದ ಕತ್ತರಿಸಿದನು. ಭಲ್ಲೆಯನ್ನು ಪ್ರಯೋಗಿಸಿ ಅದರಿಂದ ಅವನ ಸಾರಥಿಯನ್ನು ರಥದ ಮೂಕಿಯಿದೆಂಬ್ಬಿಸಿ ಕೆಳಕ್ಕೆ ಕೆಡವಿದನು.

೫೬. ಕಾಲಸಮಾನವಾದ ಬಾಣದಿಂದ ಅವನನ್ನೂ ಎದೆಗೆ ಹೊಡೆದನು. ಅವನು ಹಾಗೆ ಹೊಡೆಯಲ್ಪಟ್ಟು ಆ ಏಟಿಗೆ ನಡುಗಿದನು.

೫೭. ಆ ದೈತ್ಯೇಂದ್ರನು ರಾಕ್ಷಸೇಂದ್ರನಿಂದ ಹೊಡೆಯಲ್ಪಟ್ಟು ಭೂಕಂಪದಲ್ಲಿ ಬೆಟ್ಟವು ಹೇಗೋ ಹಾಗೆ ಅಲ್ಲಾಡಿಹೋದನು. ಒಂದು ಗಳಿಗೆಯಲ್ಲಿಯೇ ಅವನು ಸಮಾಧಾನಮಾಡಿಕೊಂಡು ರಣದಲ್ಲಿ ಜಯಿಸಲಾಸಾಧ್ಯನೆಂದು ತಿಳಿದನು.

೫೮. ಪದಾತಿಯಾಗಿ ಹೋಗಿ ರಾಕ್ಷಸನಾಥನ ರಥವನ್ನು ಸಾರಿ, ಎಡಗೈಯಿಂದ ಆ ನಿಋೃತಿಯನ್ನು ಜುಟ್ಟು ಹಿಡಿದುಕೊಂಡು ಮೊಳಕಾಲುಗಳಿಂದ ಆಕ್ರಮಿಸಿ ನಿಂತನು.

ತತಃ ಖಡ್ಗೇನ ಚ ಶಿರಶ್ಛೇತ್ತುಮೈಚ್ಛದಮರ್ಷಣಃ ।
ತತಃ ಕಲಕಲೋ ಜಜ್ಞೇ ದೇವಾನಾಂ ಸುಮಹಾಂಸ್ತದಾ ।
ಕುಜಂಭಸ್ಯ ವಶಂ ಪ್ರಾಪ್ತಂ ದೃಷ್ಟ್ವಾ ನಿರ್‍ಋತಿಮಾಹವೇ ॥ ೫೯ ॥
ಏತಸ್ಮಿನ್ನಂತರೇ ದೇವೋ ವರುಣಃ ಪಾಶಭೃದ್ವೃತಃ ।
ಪಾಶೇನ ದಾನವೇಂದ್ರಸ್ಯ ಬಬಂಧಾಶು ಭುಜದ್ವಯಂ ॥ ೬೦ ॥
ತತೋ ಬದ್ಧಭುಜಂ ದೈತ್ಯಂ ವಿಫಲೀಕೃತಪೌರುಷಂ ।
ತಾಡಯಾಮಾಸ ಗದಯಾ ದಯಾಮುತ್ಸೃಜ್ಯ ಪಾಶಭೃತ್ ॥ ೬೧ ॥
ಸ ತು ತೇನ ಪ್ರಹಾರೇಣ ಸ್ರೋತೋಭಿಃ ಕ್ಷತಜಂ ಸ್ರವನ್ ।
ದಧಾರ ಕಾಲಮೇಘಸ್ಯ ರೂಪಂ ವಿದ್ಯುಲ್ಲತಾಭೃತಂ ॥ ೬೨ ॥
ತದವಸ್ಥಾಂಗತಂ ದೃಷ್ಟ್ವಾ ಕುಜಂಭಂ ಮಹಿಷಾಸುರಃ ।
ವ್ಯಾವೃತ್ತ ವದನಾರಾವೋ ಭೋಕ್ತುಮೈಚ್ಛತ್ಸುರಾವುಭೌ ॥ ೬೩ ॥
ನಿರ್‍ಋತಿಂ ವರುಣಂ ಚೈವ ತೀಕ್ಷ್ಣದಂಷ್ಟ್ರೋತ್ಕಟಾನನಃ ।
ತಮಭಿಪ್ರಾಯಮಾಲೋಕ್ಯ ತಸ್ಯ ದೈತ್ಯಸ್ಯ ದೂಷಿತಂ ॥ ೬೪ ॥
ತ್ಯಕ್ತ್ವಾ ರಥಾವುಭೌ ಭೀತೌ ಪದಾತೀ ಪ್ರದ್ರುತೌ ದ್ರುತಂ ।
ಜಗ್ಮತುರ್ಮಹಿಷಾದ್ಭೀತೌ ಶರಣಂ ಪಾಕಶಾಸನಂ ॥ ೬೫ ॥

---

೫೯. ಬಳಿಕ ಕೋಪವೇರಿದವನಾಗಿ ಅವನ ತಲೆಯನ್ನು ಕತ್ತಿಯಿಂದ ಕತ್ತರಿಸಬಯಸಿದನು. ಆಗ ಯುದ್ಧದಲ್ಲಿ ಕುಜಂಭನ ವಶಕ್ಕೆ ಸಿಕ್ಕಿದ ನಿರ್‍ಋತಿಯನ್ನು ಕಂಡು ದೇವತೆಗಳ ಬಲದಲ್ಲಿ ಬಹು ದೊಡ್ಡ ಕಲಕಲವುಂಟಾಯಿತು.

೬೦. ಈ ನಡುವೆ ಪಾಶಧಾರಿಗಳಿಂದ ಸುತ್ತುವರಿಯಲ್ಪಟ್ಟವನಾದ ವರುಣದೇವನು ದಾನವೇಂದ್ರನ ತೋಳುಗಳೆರಡನ್ನೂ ಪಾಶದಿಂದ ಕಟ್ಟಿಹಾಕಿದನು.

೬೧. ಬಳಿಕ ತೋಳು ಬಿಗಿಯಲ್ಪಟ್ಟು ನಿಷ್ಫಲವಾಗಿ ಪರಿಣಮಿಸಿದ ಪೌರುಷವುಳ್ಳ ಆ ದೈತ್ಯನನ್ನು ಪಾಶಧಾರಿಯಾದ ವರುಣನು ದಯೆದೊರೆದು ಗದೆಯಿಂದ ಹೊಡೆದನು.

೬೨. ಆ ಏಟಿನಿಂದ ಆ ರಾಕ್ಷಸನು ಹಲವು ಧಾರೆಗಳಲ್ಲಿ ರಕ್ತವನ್ನು ಸುರಿಸುತ್ತ ವಿದ್ಯುಲ್ಲತೆಯಿಂದ ಕೂಡಿದ ಕಾಲಮೇಘದ ರೂಪವನ್ನು ಧರಿಸಿದನು.

೬೩. ಆ ಅವಸ್ಥೆಗೊಳಗಾದ ಕುಜಂಭನನ್ನು ಕಂಡು ಮಹಿಷಾಸುರನು ಬಾಯನ್ನು ದೊಡ್ಡದಾಗಿ ಅಗಲಿಸಿ ತೆರೆದು ದೇವತೆಗಳಿಬ್ಬರನ್ನೂ ನುಂಗಲಿಚ್ಛಿಸಿದನು.

೬೪–೬೫. ಅವನು ತೀಕ್ಷ್ಣವಾದ ಕೋರೆ ಹಲ್ಲುಗಳಿಂದ ಅತಿ ಭಯಂಕರವಾದ ಮುಖವುಳ್ಳವನಾಗಿ ನಿರ್‍ಋತಿಯನ್ನೂ ವರುಣನನ್ನೂ ನುಂಗಬಯಸಿದನು. ಅವರಿಬ್ಬರೂ ಆ ದೈತ್ಯನ ದೂಷಿತವಾದ ಈ ಅಭಿಪ್ರಾಯವನ್ನು ತಿಳಿದು ರಥವನ್ನು

ಕ್ರುದ್ಧೋಽಥ ಮಹಿಷೋ ದೈತ್ಯೋ ವರುಣಂ ಸಮುಪಾದ್ರವತ್ ।
ತಮಂತಕಮುಖಾಸನ್ನಮಾಲೋಕ್ಯ ಹಿಮದೀಧಿತಿಃ ॥ ೬೬ ॥
ಚಕ್ರೇ ಶಸ್ತ್ರಂ ವಿಸೃಷ್ಟಂ ಹಿ ಹಿಮಸಂಘಾತಮುಲ್ಬಣಂ ।
ವಾಯವ್ಯಂ ಚಾಸ್ತ್ರಮತುಲಂ ಚಂದ್ರಶ್ಚಕ್ರೇ ದ್ವಿತೀಯಕಂ ॥ ೬೭ ॥
ವಾಯುನಾ ತೇನ ಚಂಡೇನ ಸಂಶುಷ್ಕೇಣ ಹಿಮೇನ ಚ ।
ಮಹಾ ಹಿಮನಿಪಾತೇನ ಶಸ್ತ್ರೈಶ್ಚಂದ್ರಪ್ರಣೋದಿತೈಃ ॥ ೬೮ ॥
ಗಾತ್ರಾಣ್ಯಸುರಸೈನ್ಯಾನಾಮದಹ್ಯಂತ ಸಮಂತತಃ ।
ವ್ಯಥಿತಾ ದಾನವಾಸ್ಸರ್ವೇ ಶೀತಾಚ್ಛಾದಿತಪೌರುಷಾಃ ॥ ೬೯ ॥
ನ ಶೇಕುಶ್ಚಲಿತುಂ ತತ್ರ ನಾಸ್ತ್ರಾಣ್ಯಾದಾತುಮೇವ ಚ ।
ಮಹಿಷೋ ನಿಷ್ಪ್ರಯತ್ನಶ್ಚ ಶೀತೇನಾಕಂಪಿತಾನನಃ ॥ ೭೦ ॥
ಅಂಸಮಾಲಿಂಗ್ಯ ಪಾಣಿಭ್ಯಾಮುಪವಿಷ್ಟೋ ಹ್ಯಧೋಮುಖಃ ।
ಸರ್ವೇ ತೇ ನಿಷ್ಪ್ರತೀಕಾರಾ ದೈತ್ಯಾಶ್ಚಂದ್ರಮಸಾ ಜಿತಾಃ ॥ ೭೧ ॥
ರಣೇಚ್ಛಾ ದೂರತಸ್ತ್ಯಕ್ತ್ವಾ ತಸ್ಥುಸ್ತೇ ಜೀವಿತಾರ್ಥಿನಃ ।
ತತ್ರಾಬ್ರವೀತ್ಕಾಲನೇಮಿರ್ದೈತ್ಯಾನ್ ಕ್ರೋಧವಿದೀಪಿತಃ ॥ ೭೨ ॥

---

ಬಿಟ್ಟಳಿದು ಭೀತರಾಗಿ ಕಾಲ್ನಡಗೆಯಿಂದ ಓಡತೊಡಗಿದರು. ಅವರು ಹೀಗೆ ಆ ಮಹಿಷಾಸುರನಿಗೆ ಹೆದರಿ ಇಂದ್ರನಿಗೆ ಶರಣುಹೋದರು.

೬೬–೬೭. ಬಳಿಕಲಾಮಹಿಷದೈತ್ಯನಾದರೋ ಕ್ರುದ್ಧನಾಗಿ ವರುಣನನ್ನು ಹಿಂಬಾಲಿಸಿ ಓಡಿದನು. ಯಮನ ಬಾಯಿಗೆ ಹತ್ತಿರವಾಗಿದ್ದ ಅವನನ್ನು ಕಂಡು ಚಂದ್ರನು ತಾನು ಬಿಟ್ಟ ಹಿಮಸ್ವರೂಪವಾದ ಶಸ್ತ್ರವನ್ನು ಉಲ್ಬಣಗೊಳಿಸಿದನು. ಎರಡನೆಯದಾಗಿ ಚಂದ್ರನು ಎಣೆಯಿಲ್ಲದ ವಾಯವ್ಯಾಸ್ತ್ರವನ್ನು ಪ್ರಯೋಗಿಸಿದನು.

೬೮–೭೦. ಪ್ರಚಂಡವಾದ ಆ ವಾಯುವಿನಿಂದಲೂ ಅತಿ ಶೋಷಕವಾದ ಹಿಮದಿಂದಲೂ, ಮಹತ್ತಾದ ಹಿಮಪಾತದಿಂದಲೂ ಚಂದ್ರನಿಂದ ಪ್ರಯೋಗಿಸಲ್ಪಟ್ಟ ಶಸ್ತ್ರಾಸ್ತ್ರಗಳಿಂದಲೂ ಅಸುರಸೈನ್ಯಗಳ ದೇಹಗಳು ಎಲ್ಲ ಕಡೆಯೂ ಸುಟ್ಟುರಿಯತೊಡಗಿದುವು. ಆಗ ಸರ್ವದಾನವರೂ ವ್ಯಥಿತರಾದರು. ಶೀತದಿಂದ ಮುಚ್ಚಿಹೋದ ಪೌರುಷವುಳ್ಳವರಾಗಿ ಚಲಿಸಲೂ ಶಕ್ತರಾಗಲಿಲ್ಲ; ಅಸ್ತ್ರಗಳನ್ನು ತೆಗೆದುಕೊಳ್ಳಲೂ ಶಕ್ತರಾಗಲಿಲ್ಲವು. ಮಹಿಷನು ಪ್ರಯತ್ನವುಡುಗಿದವನಾಗಿ ಶೀತದಿಂದ ಅತಿಯಾಗಿ ನಡುಗುವ ಮುಖವುಳ್ಳವನಾದನು.

೭೧–೭೨. ತೋಳುಗಳಿಂದ ಭುಜವನ್ನು ತಬ್ಬಿಕೊಂಡು ಅಧೋಮುಖನಾಗಿ ಕುಳಿತುಕೊಂಡನು. ಅವರೆಲ್ಲರೂ ಆ ಸ್ಥಿತಿಗೆ ಪ್ರತೀಕಾರವನ್ನರಿಯದವರಾಗಿ ಚಂದ್ರನಿಂದ ಜಯಿಸಲ್ಪಟ್ಟು ಯುದ್ಧದಾಸೆಯನ್ನು ದೂರಕ್ಕೆ ಬಿಟ್ಟು ಜೀವ

ಭೋ ಭೋಃ ಶೃಂಗಾರಿಣಃ ಕ್ರೂರಾಃ ಸರ್ವಶಸ್ತ್ರಾಸ್ತ್ರಪಾರಗಾಃ ।
ಏಕೈಕೋಽಪಿ ಜಗತ್ಕೃತ್ಸ್ನಂ ಶಕ್ತಸ್ತುಲಯಿತುಂ ಭುಜೈಃ ॥ ೭೩ ॥
ಏಕೈಕೋಽಪಿ ಕ್ಷಮೋ ಗ್ರಸ್ತುಂ ಜಗತ್ಸರ್ವಂ ಚರಾಚರಂ ।
ಏಕೈಕಸ್ಯಾಪಿ ಪರ್ಯಾಪ್ತಾ ನ ಸರ್ವೇಽಪಿ ದಿವೌಕಸಃ ॥ ೭೪ ॥
ಕಿಂ ತ್ರಸ್ತನಯನಾಶ್ಚೈವ ಸಮರೇ ಪರಿನಿರ್ಜಿತಾಃ ।
ನ ಯುಕ್ತಮೇತಚ್ಛೂರಾಣಾಂ ವಿಶೇಷಾದ್ದೈತ್ಯಜನ್ಮನಾಂ ॥ ೭೫ ॥
ರಾಜ್ಞಶ್ಚ ತಾರಕಸ್ಯಾಪಿ ದರ್ಶಯಿಷ್ಯಥ ಕಿಂ ಮುಖಂ ।
ವಿರತಾನಾಂ ರಣಾಚ್ಚಾಸೌ ಕ್ರುದ್ಧಃ ಪ್ರಾಣಾನ್ ಹರಿಷ್ಯತಿ ॥ ೭೬ ॥
ಇತಿ ತೇ ಪ್ರೋಚ್ಯಮಾನಾಪಿ ನೋಚುಃ ಕಿಂಚಿನ್ಮಹಾಸುರಾಃ ।
ಶೀತೇನ ನಷ್ಟಶ್ರುತಯೋ ಭ್ರಷ್ಟವಾಕ್ಯಾಶ್ಚ ತೇ ತಥಾ ॥ ೭೭ ॥
ಮೂಕಾಸ್ತಥಾ ಭವನ್ದೈತ್ಯಾ ಮೃತಕಲ್ಪಾ ಮಹಾರಣೇ ।
ತಾನ್ ದೃಷ್ಟ್ವಾ ನಷ್ಟ ಚೇತಸ್ಕಾನ್ ದೈತ್ಯಾಞ್ಛೀತೇನ ಪೀಡಿತಾನ್ ॥

---

ವುಳಿದರೆ ಸಾಕೆಂದು ನಿಂತುಬಿಟ್ಟರು. ಆ ಸಂದರ್ಭದಲ್ಲಿ ಕಾಲನೇಮಿಯು ಕ್ರೋಧದಿಂದ ಉರಿಯುತ್ತಾ ಆ ದೈತ್ಯರನ್ನು ಕುರಿತು ಇಂತೆಂದನು:

೭೩. "ಎಲೆ ಎಲೈ ಶೃಂಗಾರಿಗಳೇ! ನೀವೆಲ್ಲರೂ ಕ್ರೂರರೂ ಸರ್ವ ಶಸ್ತ್ರಾಸ್ತ್ರ ಪಾರಂಗತರೂ ಆಗಿರುವಿರಿ. ನಿಮ್ಮಲ್ಲಿ ಒಬ್ಬೊಬ್ಬರೇ ಆದರೂ ಜಗತ್ತನ್ನೆಲ್ಲ ತೋಳುಗಳಿಂದೆತ್ತಿ ತೂಗಲು ಶಕ್ತರಾಗಿದ್ದೀರಿ.

೭೪. ಚರಾಚರಗಳಿಂದ ಕೂಡಿದ ಸಮಸ್ತ ಜಗತ್ತನ್ನೂ ಹಿಡಿದುಬಿಡಲು ಒಬ್ಬೊಬ್ಬರೂ ಸಮರ್ಥರಾಗಿದ್ದೀರಿ. ನಿಮ್ಮಲ್ಲಿ ಒಬ್ಬೊಬ್ಬನಿಗೇ ಆದರೂ ಎಲ್ಲ ದೇವತೆಗಳೂ ಸೇರಿದರೂ ಸಮನಾಗಲಾರರು; ಸಾಕಾಗಲಾರರು.

೭೫. ಆದೇಕೆ ನೀವು ಯುದ್ಧದಲ್ಲಿ ಜಿತರಾಗಿ ಹೆದರಿ ಕಣ್ಣು ಕಣ್ಣು ಬಿಡುತ್ತಿದ್ದೀರಿ? ಇದು ಶೂರರಿಗೆ ಅದರಲ್ಲಿಯೂ ದೈತ್ಯರಾಗಿ ಹುಟ್ಟಿದವರಿಗೆ ತಕ್ಕುದಲ್ಲ.

೭೬. ಹೀಗಾದರೆ ನೀವು ರಾಜನಾದ ತಾರಕನಿಗೆ ಹೇಗೆ ಮುಖ ತೋರಿಸುತ್ತೀರಿ? ಅವನು ಕ್ರುದ್ಧನಾಗಿ ರಣದಿಂದ ಹಿಂದೆಗೆದುಬಿಟ್ಟವರ ಪ್ರಾಣಗಳನ್ನು ತೆಗೆಸಿಬಿಡುತ್ತಾನೆ."

೭೭. ಹೀಗೆ ಹೇಳುತ್ತಿದ್ದರೂ ಆ ಮಹಾಸುರನು ಏನೂ ಉತ್ತರ ಹೇಳಲಿಲ್ಲವು. ಶೀತದಿಂದ ಅವರು ಕಿವಿ ಕೇಳದವರೂ ಮಾತುಡುಗಿದವರೂ ಆಗಿದ್ದರು.

೭೮–೮೦. ಆ ದೈತ್ಯರು ಮಹಾಯುದ್ಧದಲ್ಲಿ ಮೂಕರಾಗಿ ಮೃತರಂತಿದ್ದರು. ಆ ದೈತ್ಯರು ಚೈತನ್ಯವನ್ನು ಕಳೆದುಕೊಂಡು ಶೀತದಿಂದ ಪೀಡಿತರಾಗಿರುವ

ಮತ್ವಾ ಕಾಲಕ್ಷಮಂ ಕಾರ್ಯಂ ಕಾಲನೇಮಿರ್ಮಹಾಸುರಃ ।
ಆಶ್ರಿತ್ಯ ಮಾನವೀಂ ಮಾಯಾಂ ವಿತತ್ಯ ಚ ಮಹಾವಪುಃ ॥ ೭೯ ॥
ಪೂರಯಾಮಾಸ ಗಗನಂ ದಿಶೋ ವಿದಿಶ ಏವಚ ।
ನಿರ್ಮಮೇ ದಾನವೇಂದ್ರೋಽಸೌ ಶರೀರೇ ಭಾಸ್ಕರಾಯುತಂ ॥ ೮೦ ॥
ದಿಶಶ್ಚ ವಿದಿಶಶ್ಚೈವ ಪೂರಯಾಮಾಸ ಪಾವಕೈಃ ।
ತತೋ ಜ್ವಾಲಾಕುಲಂ ಸರ್ವಂ ತ್ರೈಲೋಕ್ಯಮಭವತ್ ಕ್ಷಣಾತ್ ॥ ೮೧ ॥
ತೇನ ಜ್ವಾಲಾಸಮೂಹೇನ ಹಿಮಾಂಶುರಗಮದ್ದ್ರುತಂ ।
ತತಃ ಕ್ರಮೇಣ ವಿಭ್ರಷ್ಟಂ ಶೀತದುರ್ದಿನಮಾಬಭೌ ॥ ೮೨ ॥
ತದ್ಬಲಂ ದಾನವೇಂದ್ರಾಣಾಂ ಮಾಯಯಾ ಕಾಲನೇಮಿನಃ ।
ತದ್ದೃಷ್ಟ್ವಾ ದಾನವಾನೀಕಂ ಲಬ್ಧಸಂಜ್ಞಂ ದಿವಾಕರಃ ।
ಉವಾಚಾರುಣಮತ್ಯರ್ಥಂ ಕೋಪರಕ್ತಾಂತಲೋಚನಃ ॥ ೮೩ ॥

ದಿವಾಕರ ಉವಾಚ :—

ನಯಾರುಣ ರಥಂ ಶೀಘ್ರಂ ಕಾಲನೇಮಿರಥೋ ಯತಃ ॥ ೮೪ ॥
ವಿಮರ್ದೋ ತತ್ರ ವಿಷಮೋ ಭವಿತಾ ಭೂತಸಂಕ್ಷಯಃ ।
ಜಿತ ಏಷ ಶಶಾಂಕೋಽಥ ವಯಂ ಯದ್ಬಲಮಾಶ್ರಿತಾಃ ॥ ೮೫ ॥

---

ರೆಂದರಿತು ಮಹಾಸುರನಾದ ಕಾಲನೇಮಿಯು ಕಾಲಹರಣ ಮಾಡುವುದೇ ಯುಕ್ತವೆಂದು ಭಾವಿಸಿ ಮಾನವಮಾಯೆಯನ್ನಾಶ್ರಯಿಸಿ ಮಹತ್ತಾಗಿ ಮೈಯನ್ನು ಬೆಳಸಿಕೊಂಡು ಗಗನವನ್ನೂ ದಿಕ್ಕುವಿದಿಕ್ಕುಗಳನ್ನೂ ತುಂಬಿಬಿಟ್ಟನು. ಆ ದಾನವೇಂದ್ರನು ತನ್ನ ಶರೀರದಲ್ಲಿ ಹತ್ತು ಸಾವಿರ ಸೂರ್ಯರನ್ನು ನಿರ್ಮಿಸಿದನು.

೮೧. ದಿಕ್ಕುಗಳನ್ನೂ ವಿದಿಕ್ಕುಗಳನ್ನೂ ಬೆಂಕಿಗಳಿಂದ ತುಂಬಿದನು. ಬಳಿಕ ಕ್ಷಣಮಾತ್ರದಲ್ಲಿಯೇ ಮೂರು ಲೋಕವೂ ಜ್ವಾಲೆಯಿಂದ ಆಕುಲವಾಯಿತು.

೮೨—೮೩. ಆ ಜ್ವಾಲಾಸಮೂಹದಿಂದ ಹಿಮಾಂಶುವು ಬೇಗಬೇಗ ಓಡಿ ಹೋದನು. ಬಳಿಕ ಕ್ರಮ ಕ್ರಮವಾಗಿ ಶೀತದುರ್ದಿನವು ಕಳೆದುಹೋಯಿತು. ಕಾಲನೇಮಿಯ ಮಾಯೆಯಿಂದ ದಾನವೇಂದ್ರರ ಆ ಬಲವು ಪ್ರಕಾಶವಾಗಿ ಗೋಚರಿಸಿತು. ಎಚ್ಚತ್ತ ಆ ದಾನವ ಸೈನ್ಯವನ್ನು ನೋಡಿ ಕೋಪದಿಂದ ಕಡೆಗಣ್ಣು ಕೆಂಪಗೆ ಮಾಡಿಕೊಂಡು ದಿವಾಕರನು ಅರುಣನಿಗೆ ಹೀಗೆ ಹೇಳಿದನು :

೮೪—೮೫. ದಿವಾಕರನಿಂತೆಂದನು :—"ಅರುಣ! ಕಾಲನೇಮಿಯ ರಥವೆಲ್ಲಿದೆಯೋ ಅಲ್ಲಿಗೆ ನನ್ನ ರಥವನ್ನು ನಡೆಸು. ವಿಷಮವಾಗಿರುವ ಆ ಹೋರಾಟದಲ್ಲಿ ಭೂತಗಳ ವಿನಾಶ ಬಹಳವಾಗುತ್ತದೆ. ನಾವು ಯಾರ ಬಲವನ್ನು ಆಶ್ರಯಿಸಿದ್ದೇವೆಯೋ ಆ ಚಂದ್ರನೂ ಸೋತುಹೋದನು."

ಇತ್ಯುಕ್ತಶ್ಚೋದಯಾಮಾಸ ರಥಂ ಗರುಡ ಪೂರ್ವಜಃ ।
ರಥೇ ಸ್ಥಿತೋಽಪಿ ತೈರಶ್ವೈಃ ಸಿತಚಾಮರಧಾರಿಭಿಃ ॥ ೮೬ ॥
ಜಗದ್ದೀಪೋಽಥ ಭಗವಾಞ್ಜಗ್ರಾಹ ವಿತತಂ ಧನುಃ ।
ಶರೌಘೋ ವೈ ಪಾಂಡುಪುತ್ರ ಕ್ಷಿಪ್ರಮಾಸೀದ್ವಿಷದ್ಯುತಿಃ ॥ ೮೭ ॥
ಶಂಬರಾಸ್ತ್ರೇಣ ಸಂಧಾಯ ಬಾಣಮೇಕಂ ಸಸರ್ಜಹ ।
ದ್ವಿತೀಯಂ ಚೇಂದ್ರಜಾಲೇನಾಯೋಜಿತಂ ಪ್ರಮುಮೋಚಹ ॥ ೮೮ ॥
ಶಂಬರಾಸ್ತ್ರಂ ಕ್ಷಣಾಚ್ಚಕ್ರೇ ತೇಷಾಂ ರೂಪವಿಪರ್ಯಯಂ ।
ದೇವಾನಾಂ ದಾನವಂ ರೂಪಂ ದಾನವಾನಾಂ ಚ ದೈವಿಕಂ ॥ ೮೯ ॥
ಮತ್ವಾ ಸುರಾನ್ಸ್ವಕಾನೇವ ಜಘ್ನೇ ಘೋರಾಸ್ತ್ರಲಾಘವಾತ್ ।
ಕಾಲನೇಮಿ ರುಷಾವಿಷ್ಟಃ ಕೃತಾಂತ ಇವ ಸಂಕ್ಷಯೇ ॥ ೯೦ ॥
ಕಾಂಶ್ಚಿತ್ಖಡ್ಗೇನ ತೀಕ್ಷ್ಣೇನ ಕಾಂಶ್ಚಿನ್ನಾರಾಚವೃಷ್ಟಿಭಿಃ ।
ಕಾಂಶ್ಚಿದ್ಗದಾಭಿರ್ಘೋರಾಭಿಃ ಕಾಂಶ್ಚಿದ್ಘೋರೈಃ ಪರಶ್ವಧೈಃ ॥ ೯೧ ॥

---

೮೬. ಇಂತೆಂದು ಹೇಳಲ್ಪಟ್ಟವನಾಗಿ ಗರುಡನಣ್ಣನಾದ ಆ ಅರುಣನು ಬಿಳಿಯ ಚಾಮರಗಳನ್ನು ಧರಿಸಿರುವ ಕುದುರೆಗಳಿಂದಲಂಕೃತವಾಗಿ ಶೋಭಿಸುತ್ತಿದ್ದ ಆ ರಥವನ್ನು ಮುಂದೆ ನಡಸಿದನು.

೮೭. ಬಳಿಕ ಜಗದ್ದೀಪಕನಾದ ಆ ಸೂರ್ಯಭಗವಂತನು ದೊಡ್ಡ ಧನುಸ್ಸನ್ನು ಕೈಗೆ ತೆಗೆದುಕೊಂಡನು. ಎಲೈ ಪಾಂಡುಪುತ್ರನಾದ ಧನಂಜಯನೇ! ಸೂರ್ಯನು ಪ್ರಯೋಗಿಸಿದ ಆ ಬಾಣಸಮೂಹಗಳು ಬಹು ಬೇಗನೆ ವಿಷದ ಕಾಂತಿಯುಳ್ಳವಾದವು.

೮೮. ಇದಾದ ತರುವಾಯ ಅವನು ಶಂಬರಾಸ್ತ್ರದಿಂದ ಒಂದು ಬಾಣವನ್ನು ಹೂಡಿ ಬಿಟ್ಟನು. ಎರಡನೆಯದನ್ನು ಇಂದ್ರಜಾಲದಿಂದ ಯೋಜಿಸಿ ಬಿಟ್ಟನು. ಇವೆರಡರ ಪ್ರಭಾವವು ಅತಿಶಯವಾಯಿತು.

೮೯. ಶಂಬರಾಸ್ತ್ರವು ಕ್ಷಣಮಾತ್ರದಲ್ಲಿ ಅವರಿಗೆ ರೂಪವಿಪರ್ಯಯವನ್ನುಂಟುಮಾಡಿತು: ದೇವತೆಗಳಿಗೆ ದಾನವರೂಪವೂ ದಾನವರಿಗೆ ದೇವತೆಗಳ ರೂಪವೂ ಉಂಟಾಯಿತು.

೯೦. ಕಾಲನೇಮಿಯು ಪ್ರಲಯಕಾಲದ ಯಮನಂತೆ ರೋಷಾವಿಷ್ಟನಾಗಿ ಸುರರೆಂದು ತಿಳಿದುಕೊಂಡು ಘೋರಾಸ್ತ್ರಗಳನ್ನು ಚುರುಕಾಗಿ ಪ್ರಯೋಗಿಸಿ ತಮ್ಮವರನ್ನೇ ಹೊಡೆಯುತ್ತಿದ್ದನು.

೯೧. ಕೆಲವರನ್ನು ತೀಕ್ಷ್ಣವಾದ ಕತ್ತಿಯಿಂದಲೂ, ಕೆಲವರನ್ನು ನಾರಾಚವರ್ಷಗಳಿಂದಲೂ, ಕೆಲವರನ್ನು ಘೋರವಾದ ಗದೆಗಳಿಂದಲೂ, ಕೆಲವರನ್ನು ಘೋರವಾದ ಪರಶ್ವಧಗಳಿಂದಲೂ ಹೊಡೆದು ಕೊಂದನು.

ಶಿರಾಂಸಿ ಕೇಷಾಂಚಿದಪಾತಯದ್ರಥಾ
ದ್ಭುಜಾಂಸ್ತಥಾ ಸಾರಥೀಂಶ್ಚೋಗ್ರವೇಗಾನ್ ।
ಕಾಂಶ್ಚಿತ್ಪಿಪೇಷಾಥ ರಥಸ್ಯ ವೇಗಾ
ತ್ಕಾಂಶ್ಚಿತ್ತಥಾತ್ಯದ್ಭುತ ಮುಷ್ಟಿಪಾತೈಃ ॥ ೯೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ತಾರಕ ದೇವಸೈನ್ಯಯೋರ್ಯುದ್ಧ ವರ್ಣನಂ" ನಾಮ ಅಷ್ಟಾದಶೋಽಧ್ಯಾಯಃ

---

೯೨. ಕೆಲವರ ತಲೆಗಳನ್ನು ರಥದಿಂದ ಕೆಳಕ್ಕೆ ಬೀಳಿಸಿದನು; ಹಾಗೆಯೇ ಅವರ ಭುಜಗಳನ್ನೂ ಉಗ್ರವೇಗದಿಂದ ರಥನಡಸುವ ಸಾರಥಿಗಳನ್ನೂ ಕೆಳಗುರುಳಿಸಿದನು. ಕೆಲವರನ್ನು ರಥದ ವೇಗದಿಂದ ಅರೆದನು. ಅದೇ ರೀತಿಯಲ್ಲಿ ಮತ್ತೆ ಕೆಲವರನ್ನು ಅತ್ಯದ್ಭುತವಾದ ಮುಷ್ಟಿಯೇಟುಗಳಿಂದ ಅರೆದುಹಾಕಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ತಾರಕಸೈನ್ಯ ದೇವಸೈನ್ಯಗಳ ಯುದ್ಧವರ್ಣನ"ವೆಂಬ
ಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನವಿಂಶೋऽಧ್ಯಾಯಃ

### ಕಾಲನೇಮಿಕೃತ ಯುದ್ಧಸಂಮರ್ದೇ ವಿಷ್ಣುನಾ ಸಹ ಕಾಲನೇಮಿಯುದ್ಧವರ್ಣನಂ

ನಾರದ ಉವಾಚ :—

**ಕಾಲನೇಮಿಮಾ ರುಷಾವಿಷ್ಟಸ್ತೇಷಾಂ ರೂಪಂ ನ ಬುದ್ಧವಾನ್ ।**
**ತತೋ ನಿಮಿಂ ಚ ದೈತ್ಯೇಂದ್ರಂ ಮತ್ವಾ ದೇವಂ ಮಹಾಜವಃ ॥ ೧ ॥**
**ಕೇಶೇಷು ಗೃಹ್ಯ ತಂ ವೀರಂ ಚಕರ್ಷ ಚ ನನಾದ ಚ ।**
**ತತೋ ನಿಮಿರುವಾಚೇದಂ ಕಾಲನೇಮಿಂ ಮಹಾಬಲಂ ॥ ೨ ॥**
**ಅಹಂ ನಿಮಿಃ ಕಾಲನೇಮೇ ಸುತಂ ಮತ್ವಾ ವಧಸ್ವ ಮಾ ।**
**ಭವತಾ ಮೋಹಿತೇನಾಜೌ ದೇವಾನ್ಮತ್ವಾ ಸುರಾಃ ಸ್ವಕಾಃ ॥ ೩ ॥**
**ಸುರೈಃಸುದುರ್ಜಯಾಃ ಕೋಟ್ಯೋ ನಿಹತಾ ದಶ ವಿದ್ಧಿ ತತ್ ।**
**ಸರ್ವಾಸ್ತ್ರವಾರಣಂ ಮುಂಚ ಬ್ರಾಹ್ಮಮಸ್ತ್ರಂ ತ್ವರಾನ್ವಿತಃ ॥ ೪ ॥**
**ಸ ತೇನ ಬೋಧಿತೋ ದೈತ್ಯೋ ಮುಕ್ತ್ವಾ ತಂ ಸಂಭ್ರಮಾಕುಲಃ ।**
**ಬಾಣಂ ಬ್ರಹ್ಮಾಸ್ತ್ರವಿಹಿತಂ ಮುಮೋಚ ತ್ವರಯಾನ್ವಿತಃ ॥ ೫ ॥**

---

### ಕನ್ನಡದ ಅನುವಾದ

#### ಕಾಲನೇಮಿಯುಸಗಿದ ಯುದ್ಧ ಸಂಮರ್ಧದಲ್ಲಿ, ಕಾಲನೇಮಿಗೂ ವಿಷ್ಣುವಿಗೂ ನಡೆದ ಯುದ್ಧವರ್ಣನ

೧-೨. ನಾರದನಿಂತೆಂದನು :—ಕಾಲನೇಮಿಯು ರೋಷಾವಿಷ್ಟನಾಗಿ ತನ್ನವರೇ ಆದರೂ ಅವರ ರೂಪವನ್ನು ತಿಳಿದುಕೊಳ್ಳಲಿಲ್ಲವು. ಬಳಿಕ ಮಹಾ ವೇಗವುಳ್ಳ ಆತನು ದೈತ್ಯೇಂದ್ರನಾದ ನಿಮಿಯನ್ನು ದೇವನೆಂದು ತಿಳಿದು ಆ ವೀರನನ್ನು ಜುಟ್ಟು ಹಿಡಿದೆಳೆದು ಅಬ್ಬರಿಸಿದನು. ಬಳಿಕ ಮಹಾ ಬಲನಾದ ಕಾಲನೇಮಿಯನ್ನು ಕುರಿತು ನಿಮಿಯು ಇಂತೆಂದು ನುಡಿದನು :

೩-೪. "ಅಯ್ಯಾ, ಕಾಲನೇಮಿಯೇ! ನಾನು ನಿಮಿ, ನಿನ್ನ ಮಗನೆಂದು ಭಾವಿಸು. ನನ್ನನ್ನು ವಧಿಸಬೇಡ. ದೇವತೆಗಳಿಂದ ಜಯಿಸಲಸಾಧ್ಯರೂ, ಸ್ವಪಕ್ಷದವರೂ ಆದ ಹತ್ತು ಕೋಟಿ ಅಸುರರು ಮೋಹಿತನಾದ ನಿನ್ನಿಂದ ದೇವತೆಗಳೆಂದು ಭಾವಿಸಲ್ಪಟ್ಟು ಯುದ್ಧದಲ್ಲಿ ಹತರಾದರು. ಅದನ್ನು ತಿಳಿದುಕೊ, ಸರ್ವಾಸ್ತ್ರಗಳನ್ನೂ ನಿವಾರಣೆಮಾಡುವ ಬ್ರಹ್ಮಾಸ್ತ್ರವನ್ನು ಬೇಗ ಬಿಡು" ಎಂದನು.

೫. ಅವನಿಂದ ಆ ರೀತಿ ಎಚ್ಚರಿಸಲ್ಪಟ್ಟ ಆ ದೈತ್ಯನು ಅವನನ್ನು ಕೈಬಿಟ್ಟು ಸಂಭ್ರಮದಿಂದ ಗಡಿಬಿಡಿಗೊಂಡು ಬ್ರಹ್ಮಾಸ್ತ್ರವನ್ನಭಿಮಂತ್ರಿಸಿದ ಬಾಣವನ್ನು ತ್ವರೆಯಿಂದ ಬಿಟ್ಟನು.

ಬ್ರಹ್ಮಾಸ್ತ್ರಂ ತತ್ಪ್ರಜಜ್ವಾಲ ತತಃ ಖೇ ಸುಮಹಾದ್ಭುತಂ ।
ದೇವಾನಾಂ ಚಾಭವತ್ಸೈನ್ಯಂ ಸರ್ವಮೇವ ಭಯಾಕುಲಂ ॥ ೬ ॥
ಶಂಬರಾಸ್ತ್ರಂ ತತಃ ಶಾಂತಂ ಬ್ರಾಹ್ಮಪ್ರತಿಹತಂ ತದಾ ।
ತಸ್ಮಿನ್ ಪ್ರತಿಹತೇ ಹ್ಯಸ್ತ್ರೇ ಸಂಕ್ರುದ್ಧೋ ಭಾಸ್ಕರಃ ಪ್ರಭುಃ ॥ ೭ ॥
ಮಹೇಂದ್ರಜಾಲಮಾಸ್ಥಾಯ ಚಕ್ರೇ ಸ್ವಾಂ ಭೀಷಣಾಂ ತನುಂ ।
ವಿಸ್ಫೂರ್ಜತ್ಕರಸಂಘಾತ ಸಮಾಕ್ರಾಂತ ಜಗತ್ತ್ರಯಃ ॥ ೮ ॥
ತತಾಪ ದಾನವಾನೀಕಂ ಗಲನ್ಮಜ್ಜಾಂಘ್ರಿಶೋಣಿತಂ ।
ಚಕ್ಷೂಂಷಿ ದಾನವೇಂದ್ರಾಣಾಂ ಚಕಾರಾಂಧಾನಿ ಸ ಪ್ರಭುಃ ॥ ೯ ॥
ಗಜಾನಾಮಗಲನ್ಮೇದಃ ಪೇತುಶ್ಚಾಪಿ ರಥಾ ಭುವಿ ।
ತುರಂಗಮಾಃ ಶ್ವಸಂತಶ್ಚ ಘರ್ಮಾರ್ತಾ ರಥಿನೋಽಪಿ ಚ ॥ ೧೦ ॥
ಇತಶ್ಚೇತಶ್ಚ ಸಲಿಲಂ ಪ್ರಾರ್ಥಯಂತಸ್ತೃಷಾತುರಾಃ ।
ಗಿರಿದ್ರೋಣೀಶ್ಚ ಪಾದಾಂಶ್ಚ ಗಿರೀಣಾಂ ಗಹನಾನಿ ಚ ॥ ೧೧ ॥
ತೇಷಾಂ ಪ್ರಾರ್ಥಯತಾಂ ಶೀಘ್ರಮನ್ಯೋನ್ಯಂ ಚ ವಿಸರ್ಪಿಣಾಂ ।
ದಾವಾಗ್ನಿರಜ್ವಲತ್ತೀವ್ರೋ ಘೋರೋ ನಿರ್ದಗ್ಧಪಾದಪಃ ॥ ೧೨ ॥

---

೬. ಬಳಿಕ ಆಕಾಶದಲ್ಲಿ ಆ ಬ್ರಹ್ಮಾಸ್ತ್ರವು ಮಹಾದ್ಭುತವಾಗಿ ಪ್ರಜ್ವಲಿಸಿತು. ಅದರಿಂದ ಆ ದೇವ ಸೈನ್ಯವೆಲ್ಲ ಭಯದಿಂದ ಕಲಕಿಹೋಯಿತು.

೭–೯. ಹೀಗೆ ಬ್ರಹ್ಮಾಸ್ತ್ರದಿಂದ ಹೊಡೆಯಲ್ಪಟ್ಟುದಾಗಿ ಶಂಬರಾಸ್ತ್ರವು ಶಾಂತವಾಯಿತು. ಆ ಅಸ್ತ್ರಕ್ಕೆ ಪ್ರತೀಕಾರಮಾಡಿ ಅಡಗಿಸಲಾಗಿ ಆ ಭಾಸ್ಕರ ಪ್ರಭುವು ಬಹು ಕ್ರುದ್ಧನಾಗಿ ಮಹೇಂದ್ರಜಾಲವನ್ನು ಉಪಯೋಗಿಸಿ, ತನ್ನ ಶರೀರವನ್ನು ಭೀಷಣವನ್ನಾಗಿ ಮಾಡಿಕೊಂಡನು. ಕಿಡಿಗೆದರುವ ಕಿರಣ ಸಮೂಹ ದಿಂದ ಜಗತ್ತ್ರಯವನ್ನೂ ಆಕ್ರಮಿಸಿ ದಾನವ ಸೇನೆಯನ್ನು ಮಜ್ಜೆಯೂ ಕಾಲ ರಕ್ತವೂ ಕರಗಿ ಸುರಿಯುವ ಹಾಗೆ ಕಾವಿನಿಂದ ಕಾಸಿಬಿಟ್ಟನು. ಆ ಪ್ರಭುವು ದಾನವೇಂದ್ರರ ಕಣ್ಣುಗಳನ್ನು ಕುರುಡು ಮಾಡಿದನು.

೧೦–೧೧. ಆನೆಗಳ ಮೇದಸ್ಸು ಕರಗಿತು; ರಥಗಳು ನೆಲಕ್ಕುರುಳಿದವು; ಕುದುರೆಗಳೂ ರಥಿಕರೂ ಸೆಕೆಯಿಂದ ಪೀಡಿತರಾಗಿ ಬಿಸಿಯುಸಿರು ಬಿಡತೊಡಗಿದರು. ಬಾಯಾರಿಕೆಯಿಂದ ಬಳಲಿ ನೀರನ್ನು ಪ್ರಾರ್ಥಿಸುತ್ತಾ ಅತ್ತಿತ್ತ ಸುತ್ತುತ್ತ ಬೆಟ್ಟದ ದೋಣಿಗಳನ್ನೂ ಗಿರಿಯ ತಪ್ಪಲುಗಳನ್ನೂ ಬೆಟ್ಟಗಾಡು ಗಳನ್ನೂ ಹುಡುಕಿ ಅಲೆಯತೊಡಗಿದರು.

೧೨. ಅವರು ಒಬ್ಬರನ್ನೊಬ್ಬರು ಪ್ರಾರ್ಥಿಸುತ್ತಲೂ ಬೇಗ ಬೇಗ ಸಮೀಪಕ್ಕೆ ಹೋಗುತ್ತಲೂ ಇರುವಷ್ಟರಲ್ಲಿ ತೀವ್ರವೂ ಘೋರವೂ ಆದ ಕಾಡು ಬೆಂಕಿಯು ಹೊತ್ತಿಕೊಂಡು ಮರಗಳನ್ನೆಲ್ಲ ಸುಟ್ಟುಹಾಕಿತು.

ತೋಯಾರ್ಥಿನಃ ಪುರೋ ದೃಷ್ಟ್ವಾ ತೋಯಂ ಕಲ್ಲೋಲಮಾಲಿತಂ ।
ಪುರಃ ಸ್ಥಿತಮಪಿ ಪ್ರಾಪ್ತುಂ ನ ಶೇಕುರುಪಸಾದಿತುಂ ॥ ೧೩ ॥
ಅಪ್ರಾಪ್ಯ ಸಲಿಲಂ ಭೂಮಾವಭ್ಯಾಶೇ ದ್ರುತವೇವ ತೇ ।
ತತ್ರ ತತ್ರ ವ್ಯದೃಶ್ಯಂತ ಮೃತಾ ದೈತ್ಯೇಶ್ವರಾ ಭುವಿ ॥ ೧೪ ॥
ರಥಾ ಗಜಾಶ್ಚ ಪತಿತಾಸ್ತುರಂಗಾಶ್ಚ ಶ್ರಮಾನ್ವಿತಾಃ ।
ಸ್ಥಿತಾ ವಮಂತೋ ಧಾವಂತೋ ಗಲದ್ರಕ್ತವಸಾಸ್ರಜಃ ॥ ೧೫ ॥
ದಾನವಾನಾಂ ಕೋಟಿ ಕೋಟಿ ವ್ಯದೃಶ್ಯತ ಮೃತಂ ತದಾ ।
ಏವಂ ಕ್ಷಯೋ ದಾನವಾನಾಂ ತಸ್ಮಿನ್ ಮಹತಿ ವರ್ತತೇ ॥ ೧೬ ॥
ಪ್ರಕೋಪೋದ್ಭೂತತಾಮ್ರಾಕ್ಷಃ ಕಾಲನೇಮಿ ರುಷಾತುರಃ ।
ಬಭೂವ ಕಾಲಮೇಘಾಭಃ ಸ್ಫುರದ್ರೋಮಶತಹ್ರದಃ ॥ ೧೭ ॥
ಗಂಭೀರಾಸ್ಫೋಟಿ ನಿರ್ಹ್ರಾದ ಜಗದ್ಧೃದಯ ಕಂಪನಃ ।
ಪ್ರಚ್ಛಾದ್ಯ ಗಗನಂ ಸೂರ್ಯಪ್ರಭಾಂ ಸರ್ವಾಂ ವ್ಯನಾಶಯತ್ ॥ ೧೮ ॥
ವವರ್ಷ ಶೀತಂ ಚ ಜಲಂ ದಾನವೇಂದ್ರ ಬಲಂ ಪ್ರತಿ ।
ದೈತ್ಯಾಸ್ತಾಂ ವೃಷ್ಟಿಮಾಸಾದ್ಯ ಸಮಾಶ್ವಸ್ತಾಸ್ತತಃ ಕ್ರಮಾತ್ ॥ ೧೯ ॥

---

೧೩. ನೀರು ಹುಡುಕುತ್ತಿದ್ದವರು ಮುಂದುಗಡೆ ತೆರೆಗಳ ಮಾಲೆಯಿಂದ ಕೂಡಿದ ನೀರನ್ನು(ಕೊಳವನ್ನು) ಎದುರಿಗೆ ಕಂಡು, ಎದುರಿಗೇ ಇರುವುದಾದರೂ ಆ ನೀರನ್ನು ಹೋಗಿ ತೆಗೆದುಕೊಳ್ಳಲಾರದಾದರು.

೧೪. ಹತ್ತಿರದಲ್ಲಿ ನೀರು ದೊರೆಯದೆ ಆ ದೈತ್ಯೇಶ್ವರರು ಬೇಗ ಬೇಗನೆ ಅಲ್ಲಲ್ಲೆ ಮೃತರಾಗಿ ನೆಲದ ಮೇಲೊರಗಿದ್ದುದೂ ಕಾಣಿಸಿತು.

೧೫-೧೬. ರಥಗಳೂ, ಆನೆಗಳೂ ನೆಲಕ್ಕೆ ಬಿದ್ದುವು. ಕುದುರೆಗಳು ಬಳಲಿ ರಕ್ತ ಕಕ್ಕುತ್ತ ನಿಂತವು; ಅವು ರಕ್ತವನ್ನೂ ವಸೆಯನ್ನೂ ಸುರಿಸುತ್ತಾ ಓಡಾಡುತ್ತಿದ್ದವು. ಕೋಟಿ ಕೋಟಿ ದಾನವರು ಮೃತರಾಗಿ ಬಿದ್ದುದು ಗೋಚರಿಸಿತು. ಹೀಗೆ ಆ ಯುದ್ಧದಲ್ಲಿ ದಾನವರಿಗೆ ಮಹಾ ವಿನಾಶವುಂಟಾಯಿತು.

೧೭. ಕಾಲನೇಮಿಯು ಅತಿ ಕೋಪದಿಂದ ಕೆಂಪಡರಿದ ಕಣ್ಣುಗಳುಳ್ಳವನಾಗಿ ರೋಷಾತುರನಾಗಿ ಅದುರುವ ರೋಮಗಳೆಂಬ ನೂರಾರು ಮಡುಗಳಿಂದ ಕೂಡಿ ಕಾಲಮೇಘಸಮಾನನಾದನು.

೧೮. ಸಿಡಿತದಿಂದುಂಟಾದ ಗಂಭೀರಧ್ವನಿಯಿಂದ ಜಗತ್ತಿನ ಹೃದಯವನ್ನು ನಡುಗಿಸುವವನಾಗಿ, ಗಗನವನ್ನು ಮುಸುಕಿ ಸೂರ್ಯಪ್ರಭೆಯೆಲ್ಲವನ್ನೂ ನಾಶ ಮಾಡಿದನು.

೧೯-೨೦. ದಾನವ ಸೈನ್ಯದ ಮೇಲೆ ತಣ್ಣನೆಯ ನೀರನ್ನು ಮಳೆಗರೆದನು. ಭೂಮಿಯಲ್ಲಿ ಬಾಡಿಹೋಗಿರುವ ಬೀಜದ ಮೊಳಕೆಗಳು ಮಳೆ ಬಂದರೆ ಹೇಗೋ

ಬೀಜಾಂಕುರಾ ಇವ ಮ್ಲಾನಾಃ ಪ್ರಾಪ್ಯ ವೃಷ್ಟಿಂ ಧರಾತಲೇ ।
ತತಃ ಸ ಮೇಘರೂಪೇಣ ಕಾಲನೇಮಿರ್ಮಹಾಸುರಃ ॥ ೨೦ ॥
ಶಸ್ತ್ರವೃಷ್ಟಿಂ ವವರ್ಷೋಗ್ರಾಂ ದೇವಾನೀಕೇಷು ದುರ್ಜಯಃ ।
ತಯಾ ವೃಷ್ಟ್ಯಾ ಪೀಡ್ಯಮಾನಾ ದೈತ್ಯೈರನ್ಯೈಶ್ಚ ದೇವತಾಃ ॥ ೨೧ ॥
ಗತಿಂ ಕಾಂಚಿನ್ನಪಶ್ಯಂತಿ ಗಾವಃ ಶೀತಾರ್ದಿತಾ ಇವ ।
ಪರಸ್ಪರಂ ವ್ಯಲೀಯಂತ ಗಜೇಷು ತುರಗೇಷು ಚ ।
ರಥೇಷು ಚ ಭಯತ್ರಸ್ತಾಸ್ತತ್ರ ತತ್ರ ನಿಲಿಲ್ಯಿರೇ ॥ ೨೨ ॥
ಏವಂ ತೇ ಲೀಯಮಾನಾಶ್ಚ ನಿಹತಾಃ ಕಾಲನೇಮಿನಾ ।
ದೃಶ್ಯಂತೇ ಪಾತಿತಾ ದೇವಾಃ ಶಸ್ತ್ರಭಿನ್ನಾಂಗಸಂಧಯಃ ॥ ೨೩ ॥
ವಿಭಿನ್ನಾ ಭಿನ್ನಮೂರ್ಧಾನಸ್ತಥಾ ಭಿನ್ನೋರುಜಾನವಃ ।
ವಿಪರ್ಯಸ್ತಂ ರಥಾಂಗೈಶ್ಚ ಪತಿತಂ ಧ್ವಜಶಕ್ತಿಭಿಃ ॥ ೨೪ ॥
ತುರಂಗಾಣಾಂ ಸಹಸ್ರಾಣಿ ಗಜಾನಾಮಯುತಾನಿ ಚ ।
ರಕ್ತೇನ ತೇಷಾಂ ಘೋರೇಣ ದುಸ್ತರಾ ಚಾಭವನ್ಮಹೀ ॥ ೨೫ ॥

---

ಹಾಗೆ ದೈತ್ಯರು ಆ ಮಳೆಯ ನೀರನ್ನು ಪಡೆದು ಕ್ರಮ ಕ್ರಮವಾಗಿ ಸಮಾಧಾನ ಹೊಂದಿದ ಬಳಿಕ ಮಹಾಸುರನಾದ ಆ ಕಾಲನೇಮಿಯು ಮೇಘದ ರೂಪವನ್ನು ತಾಳಿದನು.

೨೧. ಆಗಲವನು ದೇವ ಸೈನ್ಯಗಳಲ್ಲಿ ಉಗ್ರವಾದ ಶಸ್ತ್ರಗಳ ಮಳೆ ಸುರಿಸಿದನು. ಆಗಲಾ ದೇವತೆಗಳು ಆ ಶಸ್ತ್ರವೃಷ್ಟಿಯಿಂದಲೂ ಇತರ ದೈತ್ಯರಿಂದಲೂ ಪೀಡಿಸಲ್ಪಡುವವರಾದರು.

೨೨. ತರುವಾಯ ಅವರೆಲ್ಲರೂ ಶೀತದಿಂದ ಸಂಕಟಕ್ಕೆ ಗುರಿಮಾಡಲ್ಪಟ್ಟ ಗೋವುಗಳ ಹಾಗೆ, ಗತಿಯೇನನ್ನೂ ಕಾಣದೆ ಅದುರುತ್ತ ಒಬ್ಬರಲ್ಲೊಬ್ಬರು ಅಡಗಿಕೊಂಡರು. ಇಷ್ಟೆಯಲ್ಲದೆ ಕೆಲವರು ದೇವತೆಗಳು ಆನೆಗಳಲ್ಲಿಯೂ, ಕುದುರೆಗಳಲ್ಲಿಯೂ, ರಥಗಳಲ್ಲಿಯೂ ಭಯಭೀತರಾಗಿ ಅಲ್ಲಲ್ಲಿ ಅಡಗಿದರು.

೨೩–೨೪. ಹೀಗೆ ದೇವತೆಗಳು ಎತ್ತೆತ್ತಲೂ ಅಡಗಿಕೊಳ್ಳುತ್ತಿರುವವರೂ, ಕಾಲನೇಮಿಯಿಂದ ಹತರಾಗಿ ಬೀಳಿಸಲ್ಪಟ್ಟವರೂ ಆಗಿ ಕಾಣಬಂದರು. ಹೀಗೆ ಸೋತುಬಿದ್ದ ದೇವತೆಗಳ ಅಂಗ ಸಂಧಿಗಳು ಶಸ್ತ್ರಗಳಿಂದ ಕತ್ತರಿಸಲ್ಪಟ್ಟಿದ್ದುವು; ತಲೆಗಳೂ ಕತ್ತರಿಸಿದ್ದುವು; ತೊಡೆ ಮೊಳಕಾಲುಗಳು ತಲೆಕೆಳಗಾಗಿ ಮುರಿದಿದ್ದವು.

೨೫. ಸಾವಿರಗಟ್ಟಳೆ ಕುದುರೆಗಳೂ, ಅಯುತಗಟ್ಟಳೆ ಆನೆಗಳೂ ಮುರಿದು ಬಿದ್ದ ಚಕ್ರ, ಧ್ವಜ, ಶಕ್ತಿಗಳೊಡನೆ ಸೇರಿಕೊಂಡು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಅವುಗಳ ರಕ್ತದಿಂದ ಘೋರವಾಗಿ ಕಾಣುತ್ತ ಸಮರಭೂಮಿಯು ದಾಟಲರಿದಾಯಿತು.

ಏವಮಾಜೌ ಮಹಾದೈತ್ಯಃ ಕಾಲನೇಮಿರ್ಮಹಾಸುರಃ ।
ಜಘ್ನೇ ಮುಹೂರ್ತಮಾತ್ರೇಣ ಗಂಧರ್ವಾಣಾಂ ಶತಾಯುತಂ ॥ ೨೬ ॥
ಯಕ್ಷಾಣಾಂ ಪಂಚಲಕ್ಷಾಣಿ ಕಿನ್ನರಾಣಾಂ ತಥೈವ ಚ ।
ಜಘ್ನೇ ಪಿಶಾಚಮುಖ್ಯಾನಾಂ ಸಪ್ತಲಕ್ಷಾಣಿ ನಿರ್ಭಯಃ ॥ ೨೭ ॥
ಇತರೇಷಾಂ ನ ಸಂಖ್ಯಾಸ್ತಿ ಸುರಜಾತಿನಿಕಾಯಿನಾಂ ।
ಜಘ್ನೇ ಸ ಕೋಟಿಶಃ ಕ್ರುದ್ಧಃ ಕಾಲನೇಮಿರ್ಮದೋತ್ಕಟಃ ॥ ೨೮ ॥
ಏವಂ ಪ್ರತಿಭಯೇ ಭೀಮೇ ತದಾಮರಮಹಾಕ್ಷಯೇ ।
ಸಂಕ್ರುದ್ಧಾವಶ್ವಿನೌ ವೀರೌ ಚಿತ್ರಾಸ್ತ್ರಕವಚೋಜ್ವಲೌ ॥ ೨೯ ॥
ಜಘ್ನತುಶ್ಶಾಸ್ತ್ರ ರಣೇ ದೈತ್ಯಮೇಕೈಕಂ ಷಷ್ಟಿಭಿಃ ಶರೈಃ ।
ನಿರ್ಭಿದ್ಯ ತೇ ಮಹಾದೈತ್ಯಂ ಸ ಪುಂಖಾ ವಿವಿಶುರ್ಮಹೀಂ ॥ ೩೦ ॥
ತಾಭ್ಯಾಂ ಬಾಣಪ್ರಹಾರೈಸ್ತು ಕಾಂಚಿತ್ಸೋಽವಾಪ್ತಚೇತನಃ ।
ಜಗ್ರಾಹ ಚಕ್ರಂ ಲಕ್ಷಾರಂ ತೈಲಧೌತಂ ರಣೇಽಧಿಕಂ ॥ ೩೧ ॥

---

೨೬. ಹೀಗೆ ಯುದ್ಧದಲ್ಲಿ ಮಹಾ ದೈತ್ಯನೂ, ಮಹಾಸುರನೂ ಆದ ಕಾಲನೇಮಿಯು ಮುಹೂರ್ತಮಾತ್ರದಲ್ಲಿಯೇ ನೂರು ಅಯುತ ಗಂಧರ್ವರನ್ನು ಕೊಂದಿಕ್ಕಿದನು.

೨೭. ಇಷ್ಟೆಯಲ್ಲದೆ ಮಹಾ ಪರಾಕ್ರಮಿಯಾದ ಆ ಕಾಲನೇಮಿ ದೈತ್ಯನು ಐದು ಲಕ್ಷ ಯಕ್ಷರನ್ನೂ ಹಾಗೆಯೇ, ಐದು ಲಕ್ಷ ಕಿನ್ನರರನ್ನೂ ಏಳು ಲಕ್ಷ ಪಿಶಾಚ ಮುಖ್ಯರನ್ನೂ ನಿರ್ಭಯನಾಗಿ ಕೊಂದನು.

೨೮. ಆ ಸಮಯದಲ್ಲಿ ದೇವಜಾತಿಯಲ್ಲಿ ಸೇರಿದ ಇತರರು ಎಷ್ಟು ಮಂದಿ ಬಿದ್ದರೆಂಬುದಕ್ಕೆ ಲೆಕ್ಕವೇ ಇಲ್ಲ. ಮದದಿಂದ ಬಹಳವಾಗಿ ಸೊಕ್ಕಿಹೋದ ಕಾಲನೇಮಿಯು ಕ್ರುದ್ಧನಾಗಿ ಈ ಪ್ರಕಾರವಾಗಿ ಕೋಟಿಗಟ್ಟಳೆ ಶತ್ರುಗಳಾದ ದೇವತೆಗಳನ್ನು ಕೊಂದುರುಳಿಸಿದನು.

೨೯. ಈ ರೀತಿಯಲ್ಲಿ ದೇವತೆಗಳಿಗೆ ಬಹು ಭಯಂಕರವಾದ ಮಹಾಕ್ಷಯ ವುಂಟಾಗುತ್ತಿರಲಾಗಿ ಚಿತ್ರವಿಚಿತ್ರವಾದ ಕವಚದಿಂದ ಉಜ್ವಲರಾಗಿ ಹೊಳೆಯುವ ವೀರರಾದ ಅಶ್ವಿನೀದೇವತೆಗಳು ಬಹು ಕೋಪಾವಿಷ್ಟರಾದರು.

೩೦. ಅವರಿಬ್ಬರೂ ಒಬ್ಬೊಬ್ಬರೂ ಅರುವತ್ತು ಬಾಣಗಳಿಂದ ಆ ದೈತ್ಯನನ್ನು ಹೊಡೆದರು. ಆ ಬಾಣಗಳು ಮಹಾ ದೈತ್ಯನನ್ನು ಭೇಧಿಸಿಕೊಂಡು ಪುಂಖ ಸಮೇತವಾಗಿ ಹೊರ ಹೊರಟು ಭೂಮಿಯನ್ನು ಪ್ರವೇಶಮಾಡಿದವು.

೩೧. ಅವರಿಬ್ಬರ ಬಾಣಪ್ರಹಾರಗಳಿಂದ ಅವನು ಸ್ವಲ್ಪ ಮಾತ್ರ ಚೈತನ್ಯವನ್ನು ಹೊಂದಿಕೊಂಡು ಯುದ್ಧದಲ್ಲಿ ಮಿಗಿಲಾದುದೂ ಎಣ್ಣೆಯಿಂದ ತೊಳೆದುದೂ ಒಂದು ಲಕ್ಷ ಅರಗಳುಳ್ಳುದೂ ಆದ ಚಕ್ರವನ್ನು ಹಿಡಿದುಕೊಂಡನು.

ತೇನ ಚಕ್ರೇಣ ಸೋಽಶ್ವಿಭ್ಯಾಂ ಚಿಚ್ಛೇದ ರಥಕೂಬರಂ ।
ಜಗ್ರಾಹಾಥ ಧನುರ್ದೈತ್ಯಃ ಶರಾಂಶ್ಚಾಶೀವಿಷೋಪಮಾನ್ ॥ ೩೨ ॥
ವವರ್ಷ ಭಿಷಜೋರ್ಮೂರ್ಧ್ನಿ ಸಂಧಾಯಾಕಾಶಗೋಚರಂ ।
ತಾವಪ್ಯಸ್ತ್ರೈಃ ಸ್ಮೃತೈಃ ಸರ್ವಾಶ್ಛೇದತುರ್ದೈತ್ಯಸಾಯಕಾನ್ ॥ ೩೩ ॥
ತಚ್ಚ ಕರ್ಮ ತಯೋರ್ದೃಷ್ಟ್ವಾ ವಿಸ್ಮಿತಃ ಕೋಪಮಾವಿಶತ್ ।
ಜಗ್ರಾಹ ಮುದ್ಗರಂ ಭೀಮಂ ಕಾಲದಂಡವಿಭೀಷಣಂ ॥ ೩೪ ॥
ಸ ತಮುದ್ಭ್ರಾಮ್ಯ ವೇಗೇನ ಚಿಕ್ಷೇಪಾಸ್ಯ ರಥಂ ಪ್ರತಿ ।
ತಂತು ಮುದ್ಗರಮಾಯಾಂತಮಾಲೋಕ್ಯಾಂಬರಗೋಚರೇ ॥ ೩೫ ॥
ಮುಕ್ತ್ವಾ ರಥಾವುಭೌ ವೇಗಾದಾಪ್ಲುತೌ ತರಸಾಶ್ವಿನೌ ।
ತೌ ರಥೌ ಸ ತು ನಿಷ್ಪಿಷ್ಯ ಮುದ್ಗರೋಽಚಲಸನ್ನಿಭಃ ॥ ೩೬ ॥
ದಾರಯಾಮಾಸ ಧರಣಿಂ ಹೇಮಜಾಲಪರಿಷ್ಕೃತಃ ।
ತಸ್ಯ ಕರ್ಮಾಥ ತದ್ದೃಷ್ಟ್ವಾ ಭಿಷಜೌ ಚಿತ್ರಯೋಧಿನೌ ॥ ೩೭ ॥
ವಜ್ರಾಸ್ತ್ರಂ ಚ ಪ್ರಕುರ್ವಾಣೌ ದಾನವೇಂದ್ರಮಯುಧ್ಯತಾಂ ।
ಘೋರವಜ್ರಪ್ರಹಾರೈಸ್ತು ದಾನವಃ ಸ ಪರಿಕ್ಷತಃ ॥ ೩೮ ॥

---

೩೨. ಅವನು ಆ ಚಕ್ರದಿಂದ ಅಶ್ವಿನಿಗಳ ರಥದ ಈಚುಮರವನ್ನು ಕತ್ತರಿಸಿದನು. ಬಳಿಕ ದೈತ್ಯನು ಧನುಸ್ಸನ್ನೂ ಸರ್ಪಸಮಾನವಾದ ಬಾಣಗಳನ್ನೂ ಕೈಗೆ ತೆಗೆದುಕೊಂಡನು.

೩೩. ಆಕಾಶದಲ್ಲಿ ಕಾಣಬರುವ ಸೂರ್ಯನನ್ನು ಮುಚ್ಚಿ ಮರೆಮಾಡಿ ಆ ವೈದ್ಯರ ತಲೆಯ ಮೇಲೆ ಬಾಣದ ಮಳೆಗರೆದನು. ಅವರು ಕೂಡ ತಾವು ಸ್ಮರಿಸಿದ ಅಸ್ತ್ರಗಳಿಂದ ದೈತ್ಯನ ಬಾಣಗಳನ್ನೆಲ್ಲಾ ಕಡಿದು ಕೆಡವಿದರು.

೩೪–೩೫. ಅವರ ಆ ಕಾರ್ಯವನ್ನು ಕಂಡು ವಿಸ್ಮಿತನಾಗಿ ಆ ದೈತ್ಯನು ಕೋಪಗೊಂಡು ಕಾಲದಂಡದಂತೆ ಬಹು ಭಯಂಕರವಾದ ಮುದ್ಗರವನ್ನು ತೆಗೆದುಕೊಂಡನು. ಅವನು ಆ ಮುದ್ಗರವನ್ನು ವೇಗದಿಂದ ತಿರುಗಿಸಿ ಅಶ್ವಿನಿಗಳ ರಥಕ್ಕೆ ಗುರಿಯೆಸೆದನು. ಆ ದೇವತೆಗಳು ತಮ್ಮ ಕಡೆಗೆ ಬರುತ್ತಿರುವ ಆ ಮುದ್ಗರವನ್ನು ಕಂಡರು.

೩೬–೩೮. ಇಬ್ಬರು ಅಶ್ವಿನಿಗಳೂ ರಥವನ್ನು ಬಿಟ್ಟು ವೇಗದಿಂದ ಕೆಳಕ್ಕೆ ಧುಮುಕಿದರು. ಚಿನ್ನದ ಅಲಂಕಾರದಿಂದ ರಂಜಿಸುತ್ತಿದ್ದ ಬೆಟ್ಟದಂತೆಸೆಯುತ್ತ ಆ ಮುದ್ಗರವು ಆ ಎರಡು ರಥಗಳನ್ನು ಜಜ್ಜಿಹಾಕಿ ನೆಲವನ್ನು ಸೀಳಿತು. ಚಿತ್ರಯೋಧಿಗಳಾದ ವೈದ್ಯರು ಅವನ ಆ ಕರ್ಮವನ್ನು ಕಂಡು ವಜ್ರಾಸ್ತ್ರವನ್ನು ಸಿದ್ಧಮಾಡಿಕೊಂಡು ದಾನವೇಂದ್ರನನ್ನು ಎದುರಿಸಿದರು. ಘೋರವಾದ ವಜ್ರ ಪ್ರಹಾರಗಳಿಂದ ಆ ದಾನವನು ಗಾಯಗೊಂಡನು.

ರಥೋ ಧ್ವಜೋ ಧನುಶ್ಚೈವ ಛತ್ರಂ ಚ ಕವಚಂ ತಥಾ ।
ಕ್ಷಣೇನ ಶತಧಾ ಭೂತಂ ಸರ್ವಸೈನ್ಯಸ್ಯ ಪಶ್ಯತಃ ॥ ೩೯ ॥
ತದ್ದೃಷ್ಟ್ವಾ ದುಷ್ಕರಂ ಕರ್ಮ ಸೋಽಶ್ವಿಭ್ಯಾಂ ಭೀಮವಿಕ್ರಮಃ ।
ನಾರಾಯಣಾಸ್ತ್ರಂ ಬಲವಾನ್ಮುಮೋಚ ರಣಮೂರ್ಧನಿ ॥ ೪೦ ॥
ತತಃ ಶಶಾಮ ವಜ್ರಾಸ್ತ್ರಂ ಕಾಲನೇಮಿಸ್ತತೋ ರುಷಾ ।
ಜೀವಗ್ರಾಹಂ ಗ್ರಾಹಯಿತುಮಶ್ವಿನೌ ತೌ ಪ್ರಚಕ್ರಮೇ ॥ ೪೧ ॥
ತಾವಭಿಪ್ರಾಯಮಾಲಕ್ಷ್ಯ ಸಂತ್ಯಜ್ಯ ಸಮರಾಂಗಣಂ ।
ಪದಾತೀ ವೇಪಮಾನಾಂಗೌ ಪ್ರದ್ರುತೌ ವಾಸವೋ ಯತಃ ॥ ೪೨ ॥
ತಯೋರನುಗತೋ ದೈತ್ಯಃ ಕಾಲನೇಮಿರ್ನದನ್ಮುಹುಃ ।
ಪ್ರಾಪ್ಯೇಂದ್ರಸ್ಯ ಬಲಂ ಕ್ರೂರೋ ದೈತ್ಯಾನೀಕಪದಾನುಗಃ ॥ ೪೩ ॥
ಸ ಕಾಲ ಇವ ಕಲ್ಪಾಂತೇ ಯದಾ ವಾಸವಮಾದ್ರುತಃ ।
ತಂ ದೃಷ್ಟ್ವಾ ಸರ್ವಭೂತಾನಿ ವಿವಿಶುರ್ವಿಹ್ವಲಾನಿ ತು ॥ ೪೪ ॥
ಹಾಹಾರಾವಂ ಪ್ರಕುರ್ವಾಣಾಸ್ತದಾ ದೇವಾಶ್ಚ ಮೇನಿರೇ ।
ಪರಾಜಯಂ ಮಹೇಂದ್ರಸ್ಯ ಸರ್ವಲೋಕಕ್ಷಯಾವಹಂ ॥ ೪೫ ॥

---

೩೯. ಸರ್ವ ಸೈನ್ಯವೂ ನೋಡುತ್ತಿರಲು ರಥ, ಧ್ವಜ, ಧನುಸ್ಸು, ಛತ್ರ, ಕವಚ—ಈ ಎಲ್ಲವೂ ಕ್ಷಣಮಾತ್ರದಲ್ಲಿ ನೂರಾರು ಚೂರಾಗಿಹೋಯಿತು.

೪೦. ಅಶ್ವಿನಿಗಳ ಆ ದುಷ್ಕರ ಕರ್ಮವನ್ನು ಕಂಡು ಭೀಮಪರಾಕ್ರಮವುಳ್ಳ ಬಲವಂತನಾದ ಆ ದೈತ್ಯನು ನಾರಾಯಣಾಸ್ತ್ರವನ್ನು ಪ್ರಯೋಗಿಸಿದನು.

೪೧. ಬಳಿಕ ವಜ್ರಾಸ್ತ್ರವು ಶಾಂತವಾಯಿತು. ತರುವಾಯ ಆ ಕಾಲನೇಮಿಯು ರೋಷದಿಂದ ಆ ಅಶ್ವಿನಿಗಳಿಬ್ಬರನ್ನೂ ಜೀವದೊಡನೆಯೆ ಹಿಡಿಯಬೇಕೆಂದು ಪ್ರಯತ್ನ ಮಾಡಿದನು.

೪೨. ಆ ಅಭಿಪ್ರಾಯವನ್ನು ಕಂಡುಕೊಂಡು ಅವರಿಬ್ಬರೂ ಸಮರಾಂಗಣವನ್ನು ತ್ಯಜಿಸಿ ಪದಾತಿಗಳಾಗಿ ಸರ್ವಾಂಗಗಳೂ ನಡುಗುತ್ತಿರಲು ಇಂದ್ರನು ಎಲ್ಲಿದ್ದನೊ ಅಲ್ಲಿಗೆ ಬೇಗ ಬೇಗನೆ ಓಡಿಹೋದರು.

೪೩–೪೫. ಕ್ರೂರನಾದ ಕಾಲನೇಮಿದೈತ್ಯನು ಅವರಿಬ್ಬರನ್ನೂ ಬೆಂಬತ್ತಿ ಬಾರಿ ಬಾರಿಗೂ ಗರ್ಜಿಸುತ್ತ ನಡೆದು ಇಂದ್ರನ ಸೇನೆಯನ್ನು ಸೇರಿದನು; ದೈತ್ಯಸೈನ್ಯಗಳೂ ಅವನನ್ನನುಸರಿಸಿಯೆ ನಡೆದವು. ಅವನು ಕಲ್ಪಾಂತದ ಯಮನಂತೆ ಇಂದ್ರನನ್ನು ಯಾವಾಗ ಬಳಿ ಸಾರಿದನೋ ಆಗ ಅವನನ್ನು ನೋಡಿ ಸರ್ವಭೂತಗಳೂ ತಬ್ಬಿಬ್ಬಾಗಿ ಅಡಗಿಕೊಂಡವು. ಆಗ ದೇವತೆಗಳೂ ಕೂಡ ಹಾಹಾಕಾರ ಮಾಡುತ್ತ ಸರ್ವಲೋಕಕ್ಕೂ ಕ್ಷಯವುಂಟುಮಾಡುವಂತೆ ಮಹೇಂದ್ರನಿಗೆ ಪರಾಜಯವಾಗುವುದೆಂದು ತಿಳಿದುಕೊಂಡರು.

ಚೇಲುಃ ಶಿಖರಿಣೋ ಮುಖ್ಯಾಃ ಪೇತುರುಲ್ಕಾ ನಭಸ್ತಲಾತ್ ।
ಜಗರ್ಜುರ್ಜಲದಾ ದಿಕ್ಷು ಸಂಭೂತಶ್ಚ ಮಹಾರವಃ ॥ ೪೬ ॥
ತಾಂ ಭೂತವಿಕೃತಿಂ ದೃಷ್ಟ್ವಾ ದೇವಾಃ ಸೇಂದ್ರಾ ಭಯಾವಹಾಃ ।
ಮನಸಾ ಶರಣಂ ಜಗ್ಮುರ್ವಾಸುದೇವಂ ಜಗತ್ಪತಿಂ ॥ ೪೭ ॥
ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥ ೪೮ ॥
ಸ ನೋ ರಕ್ಷತು ಗೋವಿಂದೋ ಭಯಾರ್ತಾಸ್ತೇ ಜಗುಃ ಸುರಾಃ ।
ಸುರಾಣಾಂ ಚಿಂತಿತಂ ಜ್ಞಾತ್ವಾ ಭಗವಾನ್ ಗರುಡಧ್ವಜಃ ॥ ೪೯ ॥
ವಿಬುಧ್ಯೈವ ಚ ಪರ್ಯಂಕಾದ್ಯೋಗನಿದ್ರಾಂ ವಿಹಾಯ ಸಃ ।
ಲಕ್ಷ್ಮೀಕರಯುಗಾಂಭೋಜ ಲಲಿತಾಂಘ್ರಿಸರೋರುಹಃ ॥ ೫೦ ॥
ಶಾರದಾಂಬರ ನೀರಾಬ್ಜ ಕಾಂತಿದೇಹಚ್ಛವಿಃ ಪ್ರಭುಃ ।
ಕೌಸ್ತುಭೋದ್ಭಾಸಿಹೃದಯಃ ಕಾಂತಕೇಯೂರ ಭಾಸ್ಕರಃ ॥ ೫೧ ॥
ವಿಮೃಶ್ಯ ಸುರಸಂಕ್ಷೋಭಂ ವೈನತೇಯಮಥಾಹ್ವಯತ್ ।
ಆಹೂತೇಽವಸ್ಥಿತೇ ತಸ್ಮಿನ್ ಗರುಡೇ ದುಃಖಿತೇ ಭೃಶಂ ॥ ೫೨ ॥

---

೪೬. ಮುಖ್ಯವಾದ ಪರ್ವತಗಳು ಅಲ್ಲಾಡಿದವು; ಆಕಾಶದಿಂದ ಉಲ್ಕೆಗಳು ಬಿದ್ದವು; ಮೇಘಗಳು ಗರ್ಜಿಸಿದವು; ದಿಕ್ಕುಗಳಲ್ಲಿ ಮಹಾಧ್ವನಿಯುಂಟಾಯಿತು.

೪೭. ಆ ಬಗೆಯ ಪಂಚಭೂತಗಳ ವಿಕಾರವನ್ನು ಕಂಡು ಇಂದ್ರನೂ ಇತರ ದೇವತೆಗಳೂ ಭಯಭೀತರಾಗಿ ಜಗತ್ಪತಿಯಾದ ವಾಸುದೇವನನ್ನು ಸ್ಮರಿಸಿ ಅವನಿಗೆ ಮನಸ್ಸಿನಲ್ಲಿಯೇ ಶರಣುಹೋದರು.

೪೮. "ಓ ಪ್ರಭುವೇ! ಬ್ರಹ್ಮಣ್ಯದೇವನಾದ ನಿನಗೆ ನಮಸ್ಕಾರವು. ಗೋಬ್ರಾಹ್ಮಣರಿಗೆ ಹಿತವುಂಟುಮಾಡುವವನಾದ ನಿನಗೆ ನಮಸ್ಕಾರವು. ಜಗತ್ತಿಗೆ ಹಿತವನ್ನುಂಟುಮಾಡುವ ಕೃಷ್ಣನೇ ನೀನು; ನಿನಗೆ ನಮಸ್ಕಾರವು. ಗೋವಿಂದ ನಾದ ನಿನಗೆ ಪುನಃ ಪುನಃ ನಮಸ್ಕಾರವು.

೪೯–೫೦. ಗೋವಿಂದನು ನಮ್ಮನ್ನು ರಕ್ಷಿಸಲಿ."—ಎಂದು ಭಯಾರ್ತ ರಾದ ಆ ಸುರರು ಹೇಳುತ್ತಿದ್ದರು. ಲಕ್ಷ್ಮೀದೇವಿಯ ಕೈದಾವರೆಗಳಿಂದ ಲಾಲಿಸ ಲ್ಪಟ್ಟ ಪಾದಕಮಲಗಳುಳ್ಳವನಾದ ಭಂಗವಂತನಾದ ಗರುಡಧ್ವಜನು ಸುರರ ಮನಸ್ಸಿನ ಯೋಚನೆಯನ್ನರಿತು, ಯೋಗ ನಿದ್ರೆಯನ್ನು ಬಿಟ್ಟು ಎಚ್ಚತ್ತನು.

೫೧–೫೨. ಶರತ್ಕಾಲದ ಆಕಾಶ ಮತ್ತು ಕನ್ನೈದಿಲೆಗಳ ವರ್ಣದಂತಿರುವ ದೇಹಚ್ಛವಿಯುಳ್ಳವನೂ ಕೌಸ್ತುಭದಿಂದ ವಿಶೇಷವಾಗಿ ಹೊಳೆಯುತ್ತಿರುವ ಹೃದಯವುಳ್ಳವನೂ ಮನೋಹರವಾದ ಕೇಯೂರದಿಂದ ಕಳೆಯೆರಚುವವನೂ ಆದ ಆ ಪ್ರಭುವು ದೇವತೆಗಳಿಗುಂಟಾದ ಕಳವಳವನ್ನು ವಿಮರ್ಶಿಮಾಡಿ ನೋಡಿ

ದಿವ್ಯನಾನಾಸ್ತ್ರತೀಕ್ಷ್ಣಾರ್ಚಿರಾರುಹ್ಯಾಗಾತ್ಸುರಾಹವಂ ।
ತತ್ರಾಪಶ್ಯತ ದೇವೇಂದ್ರಂ ಭಯಭೀತಮಭಿದ್ರುತಂ ॥ ೫೩ ॥
ದಾನವೇಂದ್ರೈರ್ನವಾಂಭೋದ ಸಚ್ಛಾಯೈಃ ಸರ್ವಘೋತ್ಕಟೈಃ ।
ಯಥಾ ಹಿ ಪುರುಷಂ ಘೋರೈರಭಾಗ್ಯೈರರ್ಥಕಾಂಕ್ಷಿಭಿಃ ॥ ೫೪ ॥
ತತ್ರಾಜಗಾಮಾವ್ರಜದ್ವಿಷ್ಣುಃ ಸ್ತೂಯಮಾನೋ ಮುಹುಃ ಸುರೈಃ ।
ಅಭಾಗ್ಯೇಭ್ಯಃ ಪರಿತ್ರಾತುಂ ಸುಕೃತಂ ನಿರ್ಮಲಂ ಯಥಾ ॥ ೫೫ ॥
ಅಥಾಪಶ್ಯತ ದೈತ್ಯೇಂದ್ರೋ ವಿಯತಿದ್ಯುತಿಮಂಡಲಂ ।
ಸ್ಫುರಂತಮುದಯಾಚ್ಛೀಘ್ರಂ ಕಾಂತಂ ಸೂರ್ಯಶತಂ ಯಥಾ ॥೫೬॥
ಪ್ರಭವಂ ಜ್ಞಾತುಮಿಚ್ಛಂತೋ ದಾನವಾಸ್ತಸ್ಯ ತೇಜಸಃ ।
ಗರುಡಂ ತಮಥಾಪಶ್ಯನ್ಕಲ್ಪಾಂತಾನಲಭೈರವಂ ॥ ೫೭ ॥
ತತ್ರ ಸ್ಥಿತಂ ಚತುರ್ಬಾಹುಂ ಹರಿಂ ಚಾನುಪಮದ್ಯುತಿಂ ।
ತಮಾಲೋಕ್ಯಾಸುರೇಂದ್ರಾಸ್ತು ಹರ್ಷಸಂಪೂರ್ಣಮಾನಸಾಃ ॥ ೫೮ ॥

---

ವೈನತೇಯ (ಗರುಡ) ನನ್ನು ಕರೆದನು. ಕೂಡಲೆ ಆ ಗರುಡನು ಹತ್ತಿರ ಬಂದನು. ಬಹು ದುಃಖಿತನಾಗಿದ್ದ ಆ ಗರುಡನು ಕರೆಯಲ್ಪಟ್ಟವನಾಗಿ ಹತ್ತಿರ ಬಂದು ನಿಲ್ಲಲು ದಿವ್ಯವಾದ ನಾನಾ ಬಗೆಯ ಅಸ್ತ್ರಗಳ ತೀಕ್ಷ್ಣಾಸ್ತ್ರಗಳ ಕಾಂತಿಯಿಂದ ಬೆಳಗುವ ವಾಸುದೇವನು ಆರೋಹಣಮಾಡಿ ಸುರಾಸುರ ಯುದ್ಧರಂಗಕ್ಕೆ ತೆರಳಿದನು. ಅಲ್ಲಿ ತಮಗೆ ಭಾಗ್ಯವಿಲ್ಲದೆ ನಿಧನರಾಗಿ ಅರ್ಥಾಪೇಕ್ಷಿಗಳಾಗಿರುವ ಘೋರ ಪುರುಷರಿಗೆ ಹೆದರಿ ನಡುಗುವವನಂತೆ, ಹೊಸ ಮೇಘಕ್ಕೆ ಸಮಾನವಾದ ದೇಹಚ್ಛಾಯೆಯುಳ್ಳವರೂ, ಸರ್ವ ಪ್ರಕಾರದಿಂದಲೂ ಮಿತಿಮೀರಿದವರೂ ಆದ ದಾನವೇಂದ್ರರಿಂದ ಭಯಗೊಳಿಸಲ್ಪಟ್ಟು ಭೀತನಾಗಿ ಓಡುತ್ತಿರುವ ದೇವೇಂದ್ರ ನನ್ನು ಕಂಡನು. ದೇವತೆಗಳಿಂದ ಮತ್ತೆ ಮತ್ತೆ ಸ್ತುತಿಸಲ್ಪಡುತ್ತಿರುವವನಾದ ಶ್ರೀಮಹಾವಿಷ್ಣುವು ಅಭಾಗ್ಯಗಳೂ, ಅನಿಷ್ಟಗಳೂ ಹಿಡಿಯದಂತೆ ಕಾಪಾಡಲು ಹೋಗುವ ನಿರ್ಮಲವಾದ ಸುಕೃತದ ಹಾಗೆ ಅವರ ರಕ್ಷಣೆಗಾಗಿ ಹೋದನು.

೫೬. ಅನಂತರದಲ್ಲಿ ಆ ದೈತ್ಯೇಂದ್ರನಾದರೋ ಆಕಾಶದಲ್ಲಿ ಹುಟ್ಟಿದ ಕ್ಷಣ ದಿಂದಲೂ ಬೇಗಬೇಗ ಹೊರಹೊಮ್ಮುತ್ತಿರುವುದಾಗಿ ನೂರು ಸೂರ್ಯರಂತೆ ಅತ್ಯಂತ ಪ್ರಕಾಶದಿಂದ ಮೆರೆಯುವ ಕಾಂತಿಮಂಡಲವನ್ನು ಕಂಡನು.

೫೭–೫೮. ದಾನವರು ಆ ತೇಜಸ್ಸಿನ ಉತ್ಪತ್ತಿಯನ್ನರಿಯಲಿಚ್ಛಿಸಿದರು. ಬಳಿಕ ಅವರು ಕಲ್ಪಾಂತಕಾಲದ ಬೆಂಕಿಯಂತೆ ಭಯಂಕರನಾದ ಗರುಡನನ್ನು ನೋಡಿದರು. ಆ ಗರುಡನ ಮೇಲಿದ್ದ ಚತುರ್ಬಾಹುಗಳುಳ್ಳವನಾಗಿ ಎಣೆಯಿಲ್ಲದ ಕಾಂತಿಯಿಂದ ಕೂಡಿರುವ ಹರಿಯನ್ನು ಕಂಡರು. ಅವನನ್ನು ಕಂಡು ಅಸುರೇಂದ್ರ ರೆಲ್ಲರೂ ಮನಸ್ಸಿನಲ್ಲಿಯೇ ಹರ್ಷಪೂರ್ಣರಾದರು.

ಅಯಂ ಸ ದೇವಃ ಸರ್ವೇಷಾಂ ಶರಣಂ ಕೇಶವೋಽರಿಹಾ ।
ಅಸ್ಮಿನ್ಜಿತೇ ಜಿತಾಃ ಸರ್ವಾ ದೇವತಾ ನಾತ್ರಸಂಶಯಃ ॥ ೪೯ ॥
ಏನಮಾಶ್ರಿತ್ಯ ಲೋಕೇಶಾ ಯಜ್ಞಭಾಗಭುಜೋಽಮರಾಃ ।
ಇತ್ಯುಕ್ತ್ವಾ ತೇ ಸಮಾಗಮ್ಯ ಸರ್ವ ಏವ ತತಸ್ತತಃ ॥ ೫೦ ॥
ತಂ ಜಘ್ನುರ್ವಿವಿಧೈಃ ಶಸ್ತ್ರೈಃ ಪರಿವಾರ್ಯ ಸಮಂತತಃ ।
ಕಾಲನೇಮಿಪ್ರಭೃತಯೋ ದಶದೈತ್ಯಮಹಾರಥಾಃ ॥ ೫೧ ॥
ಷಷ್ಟ್ಯಾ ವಿವ್ಯಾಧ ಬಾಣಾನಾಂ ಕಾಲನೇಮಿರ್ಜನಾರ್ದನಂ ।
ನಿಮಿಃ ಶತೇನ ಬಾಣಾನಾಂ ಮಥನೋಽಶೀತಿಭಿಃ ಶರೈಃ ॥ ೫೨ ॥
ಜಂಭಕಶ್ಚೈವ ಸಪ್ತತ್ಯಾ ಶುಂಭೋ ದಶಭಿರೇವ ಚ ।
ಶೇಷಾ ದೈತ್ಯೇಶ್ವರಾಃ ಸರ್ವೇ ವಿಷ್ಣುಮೇಕೈಕಶಃ ಶರೈಃ ॥ ೫೩ ॥
ದಶಭಿರ್ದಶಭಿಃ ಶಲ್ಯೈರ್ಜಘ್ನುಃ ಸ ಗರುಡಂ ರಣೇ ।
ತೇಷಾಮಮೃಷ್ಯತ್ತತ್ಕರ್ಮ ವಿಷ್ಣುರ್ದಾನವಸೂದನಃ ॥ ೫೪ ॥
ಏಕೈಕಂ ದಾನವಂ ಜಘ್ನೇ ಷಡ್ಭಿಃ ಷಡ್ಭಿರಜಿಹ್ಮಗೈಃ ।
ಆಕರ್ಣಾಕೃಷ್ಟೈರ್ಭೂಯಶ್ಚ ಕಾಲನೇಮಿಸ್ತ್ರಿಭಿಃ ಶರೈಃ ॥ ೫೫ ॥

---

೪೯–೫೦. "ಇವನು ಸರ್ವರಿಗೂ ಶರಣ್ಯನಾಗಿರುವ ಶತ್ರುನಾಶಕನಾದ ದೇವಕೇಶವನು. ಇವನು ಜಿತನಾದರೆ ಎಲ್ಲ ದೇವತೆಗಳೂ ಜಿತರಾದಂತೆಯೇ ಸರಿ. ಇದರಲ್ಲಿ ಸಂಶಯವಿಲ್ಲವು. ಇವನನ್ನಾಶ್ರಯಿಸಿಯೆ ಲೋಕಾಧಿಪತಿಗಳಾದ ಅಮರರು ಯಜ್ಞಭಾಗಗಳನ್ನು ಭೋಗಿಸುತ್ತಾರೆ." ಹೀಗೆಂದು ಹೇಳಿ ಅವರೆಲ್ಲರೂ ಒಟ್ಟಾಗಿ ಬಂದು ಸೇರಿದರು.

೫೧. ಕಾಲನೇಮಿಯೇ ಮೊದಲಾದ ಹತ್ತು ಮಂದಿ ದೈತ್ಯಮಹಾರಥರು ಸುತ್ತಲೂ ಮುತ್ತಿಕೊಂಡು ಬಗೆಬಗೆಯ ಶಸ್ತ್ರಗಳಿಂದ ಅವನನ್ನು ಹೊಡೆದರು.

೫೨–೫೪. ಕಾಲನೇಮಿಯು ಅರುವತ್ತು ಬಾಣಗಳಿಂದ ಆ ಜನಾರ್ದನನನ್ನು ಹೊಡೆದನು. ನಿಮಿಯು ನೂರು ಬಾಣಗಳನ್ನೂ, ಮಥನನು ಎಂಬತ್ತು ಶರಗಳನ್ನೂ ಪ್ರಯೋಗಿಸಿದರು. ಜಂಭಕನು ಎಪ್ಪತ್ತೆಂಟು ಬಾಣಗಳಿಂದಲೂ, ಶುಂಭನು ಹತ್ತು ಕಣೆಗಳಿಂದಲೂ, ಉಳಿದ ಸರ್ವದೈತ್ಯೇಶ್ವರರೂ ಒಂದೊಂದು ಬಾಣದಿಂದಲೂ ವಿಷ್ಣುವನ್ನು ಹೊಡೆದರು. ರಣದಲ್ಲಿ ಗರುಡ ಸಮೇತನಾದ ಆತನನ್ನು ಹತ್ತು ಹತ್ತು ಶಲ್ಯಗಳಿಂದ ಏಟು ಕೊಟ್ಟು ಹೊಡೆದರು. ದಾನವ ಸಂಹಾರಕನಾದ ವಿಷ್ಣುವು ಅವರ ಆ ಕೆಲಸವನ್ನು ಕಂಡು ಕೋಪಗೊಂಡನು.

೫೫. ಒಬ್ಬೊಬ್ಬ ದಾನವನನ್ನೂ ಕಿವಿವರೆಗೂ ಎಳೆದುಬಿಟ್ಟ ಅತ್ತಿತ್ತ ಸುಳಿಯದೆ ನೇರವಾಗಿ ನುಗ್ಗಿ ಗುರಿಮುಟ್ಟುವ ಆರಾರು ಬಾಣಗಳಿಂದ ಹೊಡೆದನು. ಮತ್ತೊಮ್ಮೆ ಕಾಲನೇಮಿಯು ಕೋಪಗೊಂಡನು.

ವಿಷ್ಣುಂ ವಿವ್ಯಾಧ ಹೃದಯೇ ರೋಷಾದ್ರಕ್ತವಿಲೋಚನಃ ।
ತಸ್ಯಾಶೋಭಂತ ತೇ ಬಾಣಾ ಹೃದಯೇ ತಪ್ತಕಾಂಚನಾಃ ॥ ೬೬ ॥
ಮಯೂಖಾ ಇವ ಸಂದೀಪ್ತಾಃ ಕೌಸ್ತುಭಸ್ಯ ಸ್ಫುರತ್ತ್ವಿಷಃ ।
ಶ್ರೈರ್ಬಾಣೈಃ ಕಿಂಚಿದಾಯಸ್ತೋ ಹರಿರ್ಜಗ್ರಾಹ ಮುದ್ಗರಂ ॥ ೬೭ ॥
ಸ ತಮುದ್ಯಮ್ಯ ವೇಗೇನ ದಾನವಾಯ ಮುಮೋಚ ವೈ ।
ದಾನವೇಂದ್ರಸ್ತಮಪ್ರಾಪ್ತಂ ವಿಯತ್ಯೇವ ಶತ್ಯೈಃ ಶರೈಃ ॥ ೬೮ ॥
ಚಿಚ್ಛೇದ ತಿಲಶಃ ಕ್ರುದ್ಧೋ ದರ್ಶಯನ್ಪಾಣಿಲಾಘವಂ ।
ತತೋ ವಿಷ್ಣುಃ ಪ್ರಕುಪಿತಃ ಪ್ರಾಸಂ ಜಗ್ರಾಹ ಭೈರವಂ ॥ ೬೯ ॥
ತೇನ ದೈತ್ಯಸ್ಯ ಹೃದಯಂ ತಾಡಯಾಮಾಸ ವೇಗತಃ ।
ಕ್ಷಣೇನ ಲಬ್ಧಸಂಜ್ಞಸ್ತು ಕಾಲನೇಮಿರ್ಮಹಾಸುರಃ ॥ ೭೦ ॥
ಶಕ್ತಿಂ ಜಗ್ರಾಹ ತೀಕ್ಷ್ಣಾಗ್ರಾಂ ಹೇಮಘಂಟಾಟ್ಟಹಾಸಿನೀಂ ।
ತಯಾ ವಾಮಂ ಭುಜಂ ವಿಷ್ಣೋರ್ಬಿಭೇದ ದಿತಿನಂದನಃ ॥ ೭೧ ॥
ಭಿನ್ನಂ ಶಕ್ತ್ಯಾ ಭುಜಂ ತಸ್ಯ ಸ್ರುತಶೋಣಿತಮಾಬಭೌ ।
ನೀಲೇ ಬಲಾಹಕೇ ವಿದ್ಯುದ್ವಿದ್ಯೋತಂತೀ ಯಥಾ ಮುಹುಃ ॥ ೭೨ ॥

---

೬೬–೬೭. ಅವನು ಕೆಂಪೇರಿದ ಕಣ್ಣುಗಳುಳ್ಳವನಾಗಿ ವಿಷ್ಣುವಿನ ಹೃದಯಕ್ಕೆ ಮೂರು ಬಾಣಗಳನ್ನು ಬಿಟ್ಟನು. ಅವನ ಹೃದಯದಲ್ಲಿ ಕಾದ ಬಂಗಾರದ ಅಲಗುಳ್ಳ ಆ ಬಾಣಗಳು, ಕಳೆಯೇರಚುತ್ತಿರುವ ಕೌಸ್ತುಭದ ಉರಿಯುವ ಕಿರಣಗಳೋ ಎಂಬಂತೆ ಶೋಭಿಸಿದವು. ಆ ಬಾಣಗಳಿಂದ ಸ್ವಲ್ಪ ಮಾತ್ರ ಆಯಾಸಗೊಂಡ ಹರಿಯು ಮುದ್ಗರವನ್ನು ತೆಗೆದುಕೊಂಡನು.

೬೮–೭೦. ಅವನು ಅದನ್ನು ಹಿಡಿದೆತ್ತಿ ವೇಗದಿಂದ ಆ ದಾನವನ ಮೇಲೆಸೆದನು. ಆ ದಾನವೇಂದ್ರನು ಕ್ರುದ್ಧನಾಗಿ ಅದು ತನ್ನ ಬಳಿ ಬಂದು ಮುಟ್ಟುವ ಮೊದಲು ಆಕಾಶದಲ್ಲಿಯೆ ನೂರು ಬಾಣಗಳಿಂದ ಎಳ್ಳಿನ ಹಾಗೆ ಸಣ್ಣ ಸಣ್ಣ ಚೂರುಗಳಾಗುವಂತೆ ಅದನ್ನು ಭೇದಿಸಿ ತನ್ನ ಹಸ್ತಲಾಘವವನ್ನು ತೋರಿಸಿದನು. ಬಳಿಕ ವಿಷ್ಣುವು ಬಹು ಕೋಪಗೊಳಿಸಲ್ಪಟ್ಟು ಭಯಂಕರವಾದ ಪ್ರಾಸವನ್ನು ತೆಗೆದುಕೊಂಡನು. ಅದನ್ನು ವೇಗವಾಗಿ ಎಸೆದು ಅದರಿಂದ ದೈತ್ಯನ ಹೃದಯವನ್ನು ಕುಟ್ಟಿದನು. ಒಂದು ಕ್ಷಣದಲ್ಲಿಯೇ ಆ ಮಹಾಸುರನಾದ ಕಾಲನೇಮಿಯು ಎಚ್ಚತ್ತುಕೊಂಡನು.

೭೧–೭೨. ಚಿನ್ನದ ಘಂಟೆಗಳಿಂದ ಅಟ್ಟಹಾಸಮಾಡುತ್ತಿರುವ, ಬಹು ಹರಿತವಾದ ಬಾಯುಳ್ಳ ಶಕ್ತಿಯನ್ನು ಹಿಡಿದೆತ್ತಿಕೊಂಡನು. ಆ ದಿತಿನಂದನನು ಆ ಶಕ್ತಿಯಿಂದ ವಿಷ್ಣುವಿನ ಎಡತೋಳನ್ನು ಭೇದಿಸಿದನು. ಶಕ್ತಿಯಿಂದ ಭೇದಿಸಲ್ಪಟ್ಟು ರಕ್ತಸುರಿಸುತ್ತಿರುವ ಅವನ ಭುಜವು ನೀಲವರ್ಣದ ಮೋಡದಲ್ಲಿ ಮತ್ತೆ ಮತ್ತೆ ಮಿಂಚು ಹೊಳೆಹೊಳೆಯುತ್ತಿರುವ ಮಿಂಚಿನ ಹಾಗೆ ಶೋಭಿಸಿತು.

ತತೋ ವಿಷ್ಣುಃ ಪ್ರಕುಪಿತೋ ಜಗ್ರಾಹ ವಿಪುಲಂ ಧನುಃ ।
ಸಪ್ತದಶ ಚ ನಾರಾಚಾಂಸ್ತೀಕ್ಷ್ಣಾಗ್ರಾನ್ಮರ್ಮಭೇದಿನಃ ॥ ೭೩ ॥
ದೈತ್ಯಸ್ಯ ಹೃದಯಂ ಷಡ್ಭಿರ್ವಿವ್ಯಾಧ ಚ ಶರೈಸ್ತ್ರಿಭಿಃ ।
ಚತುರ್ಭಿಃ ಸಾರಥಿಂ ಚಾಸ್ಯ ಧ್ವಜಂ ಚೈಕೇನ ಪತ್ರಿಣಾ ॥ ೭೪ ॥
ದ್ವಾಭ್ಯಾಂ ಧನುರ್ಜ್ಯಾಂ ಧನುಷೀ ಭುಜಂ ಚೈಕೇನ ಪತ್ರಿಣಾ ।
ಸ ವಿದ್ಧೋ ಹೃದಯೇ ಗಾಢಂ ದೋಷೈರ್ಮೂಢೋ ಯಥಾ ನರಃ ॥
ಸ್ರುತರಕ್ತಾರುಣಃ ಪ್ರಾಂಶುಃ ಪೀಡಾಚಲಿತ ಮಾನಸಃ ।
ಚಕಂಪೇ ಮಾರುತೇನೇವ ಚೋದಿತಃ ಕಿಂಶುಕದ್ರುಮಃ ॥ ೭೬ ॥
ತತಃ ಕಂಪಿತಮಾಲಕ್ಷ್ಯ ಗದಾಂ ಜಗ್ರಾಹ ಕೇಶವಃ ।
ತಾಂ ಚ ವೇಗೇನ ಚಿಕ್ಷೇಪ ಕಾಲನೇಮಿವಧಂ ಪ್ರತಿ ॥ ೭೭ ॥
ಸಾ ಪಪಾತ ಶಿರಸ್ಯುಗ್ರಾ ಸಹಸಾ ಕಾಲನೇಮಿನಃ ।
ಸಂಚೂರ್ಣಿತೋತ್ತಮಾಂಗಸ್ತು ಭಿನ್ನಿನ್ನಮುಕುಟೋಽಸುರಃ ॥ ೭೮ ॥
ಸ್ರುತರಕ್ತೌಘರಂಧ್ರಶ್ಚ ಸ್ರುತಧಾತುರಿವಾಚಲಃ ।
ಪಪಾತ ಸ್ವೇ ರಥೇ ಭಗ್ನೋ ವಿಸಂಜ್ಞಃ ಶಿಷ್ಟಜೀವನಃ ॥ ೭೯ ॥

---

೭೩. ವಿಷ್ಣುವು ಬಳಿಕ ಬಹುಕುಪಿತನಾಗಿ ದೊಡ್ಡ ಧನುಸ್ಸನ್ನೂ ಹರಿತ ಬಾಯಿನವೂ, ಮರ್ಮವನ್ನು ಭೇದಿಸುವುವೂ ಆದ ಹದಿನೇಳು ನಾರಾಚಗಳನ್ನೂ ತೆಗೆದುಕೊಂಡನು.

೭೪. ದೈತ್ಯನ ಹೃದಯವನ್ನು ಒಂಬತ್ತು ಬಾಣಗಳಿಂದ ಹೊಡೆದನು. ನಾಲ್ಕು ಬಾಣಗಳಿಂದ ಅವನ ಸಾರಥಿಯನ್ನು ಹೊಡೆದನು. ಒಂದನ್ನು ಅವನ ಧ್ವಜಕ್ಕೆ ಹೊಡೆದನು.

೭೫–೭೬. ಎರಡರಿಂದ ಬಿಲ್ಲಿನ ಹೆದೆಯನ್ನೂ ಬಿಲ್ಲನ್ನೂ ಕತ್ತರಿಸಿದನು. ತೋಳನ್ನು ಒಂದಂಬಿನಿಂದ ಘಾತಿಸಿದನು. ಮೂಢನಾದ ಮನುಷ್ಯನು ದೋಷಗಳಿಂದ ಹೇಗೋ ಹಾಗೆ ಅವನು ಗಾಢವಾಗಿ ಹೃದಯದಲ್ಲಿ ಹೊಡೆಯಲ್ಪಟ್ಟು ಹೊರ ಸೋರುವ ರಕ್ತದಿಂದ ಕೆಂಪಾಗಿ ವ್ಯಥೆಯಿಂದ ಚಲಿಸಿದ ಮನಸ್ಸುಳ್ಳವನಾಗಿ ಗಾಳಿಯಿಂದ ಅಲುಗಿಸಲ್ಪಟ್ಟ ಬಹು ಎತ್ತರವಾದ ಮುತ್ತುಗದ ಮರದ ಹಾಗೆ ನಡುಗಿದನು.

೭೭. ಬಳಿಕ ಆತನು ಕಂಪಿಸುತ್ತಿರುವುದನ್ನು ನಿರೀಕ್ಷಿಸಿ ಆ ಕೇಶವನು ಗದೆಯನ್ನು ತೆಗೆದುಕೊಂಡನು. ಕಾಲನೇಮಿಯನ್ನು ವಧಿಸಲೆಂದು ಅದನ್ನು ವೇಗದಿಂದೆಸೆದನು.

೭೮–೭೯. ಉಗ್ರವಾದ ಆ ಗದೆಯು ಕಾಲನೇಮಿಯ ತಲೆಯ ಮೇಲೆ ತಟಕ್ಕನೆ ಬಿದ್ದಿತು. ತಲೆ ಜಜ್ಜಿ ಕಿರೀಟವು ಪುಡಿಪುಡಿಯಾಗಿ ಅಸುರನು ರಂಧ್ರ

ಪತಿತಸ್ಯ ರಥೋಪಸ್ಥೇ ದಾನವಸ್ಯಾಚ್ಯುತೋಽರಿಹಾ ।
ಸ್ಮಿತಪೂರ್ವಮುವಾಚೇದಂ ವಾಕ್ಯಂ ಚಕ್ರಾಯುಧಃ ಪ್ರಭುಃ ॥ ೮೦ ॥
ಗಚ್ಛಾಸುರ ವಿಮುಕ್ತೋಽಸಿ ಸಾಂಪ್ರತಂ ಜೀವ ನಿರ್ವೃತಃ ।
ತತಃ ಸ್ವಲ್ಪೇನ ಕಾಲೇನ ಅಹಮೇವ ತವಾಂತಕಃ ॥ ೮೧ ॥

ಏವಂ ವಚಸ್ತಸ್ಯ ನಿಶಮ್ಯ ವಿಷ್ಣೋಃ
ಸರ್ವೇಶ್ವರಸ್ಯಾಥ ರಥಂ ನಿಮೇಷಾತ್ ।
ನಿನಾಯ ದೂರಂ ಕಿಲ ಕಾಲನೇಮಿನೋ
ಭೀತಸ್ತದಾ ಸಾರಥಿರ್ಲೋಕನಾಥಾತ್ ॥ ೮೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಕಾಲನೇಮಿಕೃತ ಯುದ್ಧ ಸಂಮರ್ದೇ ವಿಷ್ಣುನಾಸಹ ಕಾಲನೇಮಿ ಯುದ್ಧ ವರ್ಣನಂ"
ನಾಮೈಕೋನವಿಂಶೋಽಧ್ಯಾಯಃ

---

ಗಳಿಂದ ರಕ್ತಪ್ರವಾಹಗಳನ್ನು ಸುರಿಸುತ್ತಾ ಧಾತುಗಳನ್ನು ಸುರಿಸುತ್ತಿರುವ ಬೆಟ್ಟದಂತೆ ಭಗ್ನನಾಗಿ ಎಚ್ಚರ ತಪ್ಪಿ ಜೀವ ಮಾತ್ರ ಉಳಿದು ತನ್ನ ರಥದಲ್ಲಿ ಕುಸಿದು ಬಿದ್ದನು.

೮೦. ರಥದ ಮೇಲೆ ಬಿದ್ದ ಆ ದಾನವನಿಗೆ ಅರಿವಿನಾಶಕನೂ, ಚಕ್ರಾಯುಧವನ್ನು ಧರಿಸಿದವನೂ ಪ್ರಭುವೂ ಆದ ಅಚ್ಯುತನು ಮುಗುಳುನಗೆಯಿಂದ ಕೂಡಿ ಈ ಮಾತು ಹೇಳಿದನು.

೮೧. "ಎಲೈ ಅಸುರನೇ, ಹೋಗು. ಈಗ ನಿನ್ನನ್ನು ಜೀವಸಹಿತ ಬಿಟ್ಟಿದ್ದೇನೆ. ಬಳಿಕ ಸ್ವಲ್ಪ ಕಾಲದಲ್ಲಿ ನಿನಗೆ ನಾನೇ ಅಂತಕನಾಗುತ್ತೇನೆ."

೮೨. ಸರ್ವೇಶ್ವರನಾದ ಆ ವಿಷ್ಣುವಿನ ಈ ರೀತಿಯಾದ ಮಾತನ್ನಾಲಿಸಿ ಕಾಲನೇಮಿಯ ಸಾರಥಿಯು ಭೀತನಾಗಿ ರಥವನ್ನು ಆ ಲೋಕನಾಥನಿಂದ ಬಹು ದೂರಕ್ಕೆ ನಿಮಿಷಮಾತ್ರದಲ್ಲಿ ನಡಸಿಕೊಂಡು ಹೋದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ದೇವಾಸುರ ಸಂಗ್ರಾಮದಲ್ಲಿ ಕಾಲನೇಮಿಯಿಂದಾದ ಯುದ್ಧ ಸಂಮರ್ದದಲ್ಲಿ
ವಿಷ್ಣುವಿನೊಡನೆ ಕಾಲನೇಮಿಯ ಯುದ್ಧವರ್ಣನೆ" ಯೆಂಬ
ಹತ್ತೊಂಬತ್ತನೆಯ ಅಧ್ಯಾಯ ಮುಗಿದುದು

॥ ಶ್ರೀಃ ॥

## ಅಥ ವಿಂಶೋಽಧ್ಯಾಯಃ

### ದೈತ್ಯೈಃ ಸಹ ವಿಷ್ಣೋರ್ಯುದ್ಧ ಸಮುಪವರ್ಣನಂ

ನಾರದ ಉವಾಚ :—

ತಂ ದೃಷ್ಟ್ವಾ ದಾನವಾಃ ಸರ್ವೇ ಕ್ರುದ್ಧಾಃ ಸ್ವೈಃ ಸ್ವೈರ್ಬಲೈರ್ವೃತಾಃ ।
ಸರಘಾ ಇವ ಮಾಕ್ಷಿಕಂ ರುರುಧುಃ ಸರ್ವತಸ್ತತು ॥ ೧ ॥
ಪರ್ವತಾಭೇ ಗಜೇ ಭೀಮೇ ಮದಸ್ರಾವಿಣಿ ದುರ್ದಮೇ ।
ಸಿತಚಿತ್ರಪತಾಕೇ ತು ಪ್ರಭಿನ್ನಕರಟಾಮುಖೇ ॥ ೨ ॥
ಸ್ವರ್ಣವರ್ಣಾಂಚಿತೇ ಯುದ್ಧನಗೇ ದಾವಾಗ್ನಿಸಂವೃತೇ ।
ಆರುಹ್ಯಾಜೌ ನಿಮಿರ್ದೈತ್ಯೋ ಹರಿಂ ಪ್ರತ್ಯುದ್ಯಯೌ ಬಲೀ ॥ ೩ ॥
ತಸ್ಯಾಸನ್ ದಾನವಾ ರೌದ್ರಾ ಗಜಸ್ಯ ಪರಿರಕ್ಷಣಃ ।
ಸಪ್ತವಿಂಶತಿ ಕೋಟ್ಯಶ್ಚ ಕಿರೀಟ ಕವಚೋಜ್ಜ್ವಲಾಃ ॥ ೪ ॥
ಅಶ್ವಮಾರುಹ್ಯ ಶೈಲಾಭಂ ಮಥನೋ ಹರಿಮಾದ್ರವತ್ ।
ಪಂಚಯೋಜನಪೃಗ್ರೀವಮುಷ್ಟ್ರಮಾಸ್ಥಾಯ ಜಂಭಕಃ ॥ ೫ ॥

---

### ಕನ್ನಡದ ಅನುವಾದ

#### ದೈತ್ಯರೊಡನೆ ವಿಷ್ಣುವು ಯುದ್ಧ ಮಾಡಲು ಹೊರಟಿದ್ದು

೧. ನಾರದನು ಹೇಳುತ್ತಾನೆ:—ಈ ರೀತಿ ರಣಾಂಗಣಕ್ಕೈತಂದ ಆ ಹರಿಯನ್ನು ಕಂಡು ದಾನವರೆಲ್ಲರೂ ಕ್ರುದ್ಧರಾಗಿ ತಮ್ಮ ತಮ್ಮ ಬಲಗಳಿಂದ ಕೂಡಿದವರಾಗಿ ಜೇನಿಗೆ ದುಂಬಿಗಳು ಮುತ್ತುವಂತೆ ಅವನನ್ನು ಎಲ್ಲ ಕಡೆಯಿಂದಲೂ ಸುತ್ತಿಮುತ್ತಿಕೊಂಡರು.

೨–೩. ಪರ್ವತಕ್ಕೆ ಸಮಾನವಾಗಿಯೂ, ಭಯಂಕರವಾಗಿಯೂ, ಮದವನ್ನು ಸುರಿಸುತ್ತಿರುವುದಾಗಿಯೂ, ಅಡಗಿಸಲಸದಳವಾಗಿಯೂ, ಬೆಳ್ಳಗಿರುವ ಚಿತ್ರಪತಾಕೆಯುಳ್ಳುದಾಗಿಯೂ, ಬಿರಿದ ಗಂಡಸ್ಥಳವುಳ್ಳುದಾಗಿಯೂ, ಕಾಡು ಕಿಚ್ಚಿನಿಂದಾವರಿಸಲ್ಪಟ್ಟ ಬೆಟ್ಟದಂತೆ ಹೊಂಬಣ್ಣದಿಂದ ಕೂಡಿದುದಾಗಿಯೂ ಇರುವ ಆನೆಯನ್ನೇರಿ ಬಲವಂತನಾದ ನಿಮಿದೈತ್ಯನು ಯುದ್ಧದಲ್ಲಿ ಹರಿಯ ಮೇಲೆ ದಂಡೆತ್ತಿ ನಡೆದನು.

೪. ಕಿರೀಟ ಕವಚಗಳಿಂದ ಉಜ್ವಲವಾಗಿ ಹೊಳೆಹೊಳೆಯುವ ಇಪ್ಪತ್ತೇಳು ಕೋಟಿ ರೌದ್ರದಾನವರು ಆ ಆನೆಗೆ ರಕ್ಷಕರಾಗಿದ್ದರು.

೫. ಬೆಟ್ಟದಂತಹ ಕುದುರೆಯನ್ನೇರಿ ಮಥನನು ಹರಿಯಮೇಲೆ ನುಗ್ಗಿದನು. ಐದು ಯೋಜನದಷ್ಟು ಉದ್ದವಾದ ಕತ್ತುಳ್ಳ ಒಂಟೆಯ ಮೇಲೆ ಕುಳಿತು ಜಂಭಕನು ನುಗ್ಗಿ ನಡೆದನು.

ಶುಂಭೋ ಮೇಷಂ ಸಮಾರುಹ್ಯಾವ್ರಜದ್ದ್ವಾದಶಯೋಜನಂ ।
ಅಪರೇ ದಾನವೇಂದ್ರಾಶ್ಚ ಯತ್ತಾ ನಾನಾಸ್ತ್ರಪಾಣಯಃ ॥ ೬ ॥
ಆಜಗ್ಮುಃ ಸಮರೇ ಕ್ರುದ್ಧಾ ವಿಷ್ಣುಮಕ್ಲಿಷ್ಟಕಾರಿಣಂ ।
ಪರಿಘೇಣ ನಿಮಿರ್ದೈತ್ಯೋ ಮಥನೋ ಮುದ್ಗರೇಣ ಚ ॥ ೭ ॥
ಶುಂಭಃ ಶೂಲೇನ ತೀಕ್ಷ್ಣೇನ ಪ್ರಾಸೇನ ಗ್ರಸನಸ್ತಥಾ ।
ಚಕ್ರೇಣ ಕ್ರಥನಃ ಕ್ರುದ್ಧೋ ಜಂಭಃ ಶಕ್ತ್ಯಾ ಮಹಾರಣೇ ॥ ೮ ॥
ಜಘ್ನುರ್ನಾರಾಯಣಂ ಶೇಷಾ ವಿಶಿಖೈರ್ಮರ್ಮಭೇದಿಭಿಃ ।
ತಾನ್ಯಸ್ತ್ರಾಣಿ ಪ್ರಯುಕ್ತಾನಿ ವಿವಿಶುಃ ಪುರುಷೋತ್ತಮಂ ॥ ೯ ॥
ಉಪದೇಶಾ ಗುರೋರ್ಯದ್ವತ್ಸಚ್ಛಿಷ್ಯಂ ಬಹುಧೇರಿತಾಃ ।
ತತಃ ಕ್ರುದ್ಧೋ ಹರಿರ್ಗೃಹ್ಯ ಧನುರ್ಬಾಣಾಂಶ್ಚ ಪುಷ್ಕಲಾನ್ ॥ ೧೦ ॥
ಮಮರ್ದ ದೈತ್ಯಸೇನಾಂ ತದ್ಧರ್ಮಮರ್ಥವಚೋ ಯಥಾ ।
ನಿಮಿಂ ವಿವ್ಯಾಧ ವಿಂಶತ್ಯಾ ಬಾಣೈರನಲವರ್ಚಸೈಃ ॥ ೧೧ ॥
ಮಥನಂ ದಶಭಿಶ್ಚೈವ ಶುಂಭಂ ಪಂಚಭಿರೇವ ಚ ।
ಶತೇನ ಮಹಿಷಂ ಕ್ರುದ್ಧೋ ವಿವ್ಯಾಧೋರಸಿ ಮಾಧವಃ ॥ ೧೨ ॥
ಜಂಭಂ ದ್ವಾದಶಭಿಸ್ತೀಕ್ಷ್ಣೈಃ ಸರ್ವಾಂಶ್ಚೈಕೈಕಶೋಽಷ್ಟಭಿಃ ।
ತಸ್ಯ ತಲ್ಲಾಘವಂ ದೃಷ್ಟ್ವಾ ದಾನವಾಃ ಕ್ರೋಧಮೂರ್ಛಿತಾಃ ॥ ೧೩ ॥

---

೬–೧೩. ಶುಂಭನು ಹನ್ನೆರಡು ಯೋಜನದಷ್ಟು ದೊಡ್ಡದಾದ ಟಗರಿನ ಮೇಲೇರಿ ನಡೆದನು. ಉಳಿದ ದಾನವೇಂದ್ರರೆಲ್ಲರೂ ನಾನಾ ಶಸ್ತ್ರಗಳನ್ನು ಧರಿಸಿ ಸನ್ನದ್ಧರಾಗಿ ಅತ್ಯಂತ ಕೋಪಗೊಂಡು ಸಮರದಲ್ಲಿ ಲೀಲೆಯಿಂದಲೇ ಎಲ್ಲ ಕಾರ್ಯಗಳನ್ನೂ ಸಾಧಿಸಬಲ್ಲ ವಿಷ್ಣುವಿನ ಮೇಲೆ ನುಗ್ಗಿದರು. ನಿಮಿದೈತ್ಯನು ಪರಿಘದಿಂದಲೂ ಮಥನನು ಮುದ್ಗರದಿಂದಲೂ ಶುಂಭನು ತೀಕ್ಷ್ಣವಾದ ಶೂಲದಿಂದಲೂ ಗ್ರಸನನು ಪ್ರಾಸದಿಂದಲೂ ಕ್ರಥನನು ಚಕ್ರದಿಂದಲೂ ಕ್ರುದ್ಧನಾದ ಜಂಭನು ಶಕ್ತಿಯಿಂದಲೂ ಆ ಮಹಾಯುದ್ಧದಲ್ಲಿ ನಾರಾಯಣನನ್ನು ಹೊಡೆದರು. ಉಳಿದವರು ಮರ್ಮಭೇದಿಗಳಾದ ಬಾಣಗಳಿಂದ ನಾರಾಯಣನನ್ನು ಹೊಡೆದರು. ಬಹು ಬಗೆಯಲ್ಲಿ ಹೇಳಿದ ಗುರುವಿನ ಉಪದೇಶಗಳು ಸಚ್ಛಿಷ್ಯನನ್ನು ಹೇಗೆ ಪ್ರವೇಶಿಸುವುವೋ ಹಾಗೆ ಅವರೆಲ್ಲರೂ ಪ್ರಯೋಗಿಸಿದ ಆ ಅಸ್ತ್ರಗಳು ಪುರುಷೋತ್ತಮನನ್ನು ಪ್ರವೇಶಿಸಿದವು. ಬಳಿಕ ಹರಿಯು ಧನುರ್ಬಾಣಗಳನ್ನು ಪುಷ್ಕಲವಾಗಿ ತೆಗೆದುಕೊಂಡನು. ಕ್ರುದ್ಧನಾದ ಮಾಧವನು ಮಥನನನ್ನು ಹತ್ತು ಬಾಣಗಳಿಂದಲೂ ಶುಂಭನನ್ನು ಐದರಿಂದಲೂ ಮಹಿಷನನ್ನು ನೂರರಿಂದಲೂ ಎದೆಗೆ ಹೊಡೆದನು. ಜಂಭನನ್ನು ಹನ್ನೆರಡು ಕೂರಂಬುಗಳಿಂದಲೂ ಎಲ್ಲರನ್ನೂ ಒಬ್ಬೊಬ್ಬರನ್ನೂ ಎಂಟೆಂಟರಿಂದಲೂ ಹೊಡೆದನು. ಅವನ ಆ ಲಾಘವವನ್ನು ನೋಡಿ ದಾನವರು ಕ್ರೋಧದಿಂದ ಮೈಮರೆತರು.

ಚಕ್ರುರ್ಗಾಢತರಂ ಯತ್ನಮಾವೃಣ್ವಾನಾ ಹರಿಂ ಶರೈಃ ।
ಚಿಚ್ಛೇದಾಥ ಧನುರ್ಜ್ಯಾಂ ಚ ನಿಮಿರ್ಭಲ್ಲೇನ ದಾನವಃ ॥ ೧೪ ॥
ಹಸ್ತಾವಾಪಂ ಚ ಸಂರಬ್ಧಶ್ಚಿಚ್ಛೇದ ಮಹಿಷಾಸುರಃ ।
ಪೀಡಯಾಮಾಸ ಗರುಡಂ ಜಂಭೋ ಬಾಣಾಯುತೈಸ್ತ್ರಿಭಿಃ ॥ ೧೫ ॥
ಭುಜಾವಸ್ಯ ಚ ವಿವ್ಯಾಧ ಶುಂಭೋ ಬಾಣಾಯುತೇನ ವೈ ।
ತತೋ ವಿಸ್ಮಿತಚಿತ್ತಸ್ತು ಗದಾಂ ಜಗ್ರಾಹ ಮಾಧವಃ ॥ ೧೬ ॥
ತಾಂ ಪ್ರಾಹಿಣೋತ್ಸ ವೇಗೇನ ಮಥನಾಯ ಮಹಾಹವೇ ।
ತಾಮಪ್ರಾಪ್ತಾಂ ನಿಮಿರ್ಬಾಣೈರ್ಮುಶಲಾಭೈಃ ಸಹಸ್ರಶಃ ॥ ೧೭ ॥
ಆಹತ್ಯ ಪಾತಯಾಮಾಸ ನಿನದನ್ ಕಾಲಮೇಘವತ್ ।
ತತೋಽಂತರಿಕ್ಷೇ ಹಾಹೇತಿ ಭೂತಾನಾಂ ಜಜ್ಞಿರೇ ಕಥಾಃ ॥ ೧೮ ॥
ನೈತದಸ್ತಿ ಬಲಂ ವ್ಯಕ್ತಂ ಯತ್ರಾಶೀರ್ಯತ ಸಾ ಗದಾ ।
ತಾಂ ಹರಿಃ ಪತಿತಾಂ ದೃಷ್ಟ್ವಾ ಅಸ್ಥಾನೇ ಪ್ರಾರ್ಥನಾಮಿವ ॥ ೧೯ ॥
ಜಗ್ರಾಹ ಮುದ್ಗರಂ ಘೋರಂ ದಿವ್ಯರತ್ನಪರಿಷ್ಕೃತಂ ।
ತಂ ಮುಮೋಚಾತಿವೇಗೇನ ನಿಮಿಮುದ್ದಿಶ್ಯ ದಾನವಂ ॥ ೨೦ ॥

---

೧೪. ಹರಿಯನ್ನು ಶರಗಳಿಂದ ಆವರಿಸುವವರಾಗಿ ಗಾಢತರವಾದ ಪ್ರಯತ್ನ ಮಾಡಿದರು. ನಿಮಿದಾನವನು ಭಲ್ಲೆಯಿಂದ ವಿಷ್ಣುವಿನ ಬಿಲ್ಲಿನ ಹೆದೆಯನ್ನು ಕತ್ತರಿಸಿ ಹಾಕಿದನು.

೧೫–೧೬. ಮಹಿಷಾಸುರನು ಕೈಯ ಬಿಲ್ಲನ್ನು ಛೇದಿಸಿದನು. ಜಂಭನು ಮೂವತ್ತುಸಾವಿರ ಬಾಣಗಳಿಂದ ಗರುಡನನ್ನು ಪೀಡಿಸಿದನು. ಶುಂಭನು ಅಯುತ (ಹತ್ತುಸಾವಿರ) ಬಾಣಗಳಿಂದ ಅವನ ಭುಜಗಳನ್ನು ಘಾತಿಸಿದನು. ಬಳಿಕ ವಿಸ್ಮಿತನಾಗಿ ಮಾಧವನು ಗದೆಯನ್ನು ತೆಗೆದುಕೊಂಡನು.

೧೭–೧೮. ಆ ಗದೆಯನ್ನು ಮಹಾಯುದ್ಧದಲ್ಲಿ ಮಥನನ ಮೇಲೆ ವೇಗದಿಂದ ಬೀಸಿ ಎಸೆದನು. ಅದು ಗುರಿಮುಟ್ಟುವ ಮೊದಲೆ ನಿಮಿಯು ಕಾಲಮೇಘದಂತೆ ಗಟ್ಟಿಯಾಗಿ ಅಬ್ಬರಿಸುತ್ತ ಒನಕೆಯಂತಹ ಸಾವಿರಾರು ಬಾಣಗಳಿಂದ ಅದನ್ನು ಹೊಡೆದು ಕೆಡವಿದನು. ಬಳಿಕ ಅಂತರಿಕ್ಷದಲ್ಲಿ ಭೂತಗಳ ಹಾಹಾಕಾರ ವುಂಟಾಯಿತು.

೧೯–೨೦. "ಆ ಗದೆಯನ್ನು ಸೀಳಿಹಾಕುವಂತಹ ಬಲ ಎಲ್ಲಿಯೂ ಕಾಣಲಿಲ್ಲ!" ಎಂಬ ಧ್ವನಿಯುಂಟಾಯಿತು. ಅಸ್ಥಾನದಲ್ಲಿ ಮಾಡಿದ ಪ್ರಾರ್ಥನೆಯಂತೆ ಬಿದ್ದುಹೋದ ಆ ಗದೆಯನ್ನು ಕಂಡು ಹರಿಯು ದಿವ್ಯರತ್ನಗಳಿಂದ ಅಲಂಕರಿಸಲ್ಪಟ್ಟ ಘೋರವಾದ ಮುದ್ಗರವನ್ನು ಕೈಗೆ ತೆಗೆದುಕೊಂಡನು. ಆ ಮುದ್ಗರವನ್ನು ನಿಮಿದಾನವನಿಗೆ ಗುರಿಯಿಟ್ಟು ಅತಿವೇಗದಿಂದ ಎಸೆದುಬಿಟ್ಟನು.

ತಮಾಯಾಂತಂ ವಿಯತ್ಯೇವ ತ್ರಯೋ ದೈತ್ಯಾ ಹ್ಯವಾರಯನ್ ।
ಗದಯಾ ಜಂಭದೈತ್ಯಸ್ತು ಗ್ರಸನಃ ಪಟ್ಟಿಶೇನ ತು ॥ ೨೦ ॥
ಶಕ್ತ್ಯಾ ಚ ಮಹಿಷೋ ದೈತ್ಯೋ ವಿನದಂತೋ ಮಹಾರವಂ ।
ನಿರಾಕೃತಂ ತಮಾಲೋಕ್ಯ ದುರ್ಜನೈಃ ಸುಜನಂ ಯಥಾ ॥ ೨೧ ॥
ಜಗ್ರಾಹ ಶಕ್ತಿಮುಗ್ರೋಗ್ರಾಂ ಶತಘಂಟಾಮಹಾಸ್ವನಾಂ ।
ಜಂಭಾಯ ತಾಂ ಸಮುದ್ದಿಶ್ಯ ಪ್ರಾಹಿಣೋದ್ಭೀಷಣೇ ರಣೇ ॥ ೨೨ ॥
ತಾಮಾಯಾಂತೀಮಥಾಲೋಕ್ಯ ಜಂಭೋಽನ್ಯಸ್ಯ ರಥಾತ್ತ್ವರಾತ್ ।
ಆಪ್ಲುತ್ಯ ಲೀಲಯಾ ಗೃಹ್ಣನ್ಕಾಮಿನೀಂ ಕಾಮುಕೋ ಯಥಾ ॥ ೨೩ ॥
ತಯೈವ ಗರುಡಂ ಮೂರ್ಧ್ನಿ ಜಘ್ನೇ ಸ ಪ್ರಹಸನ್ ಬಲೀ ।
ತತೋ ಭೂಯೋ ರಥಂ ಪ್ರಾಪ್ಯ ಧನುರ್ಗೃಹ್ಯಾಭ್ಯಯೋಜಯತ್ ॥
ವಿಚೇತಾಶ್ಚಾಭವದ್ಯುದ್ಧೇ ಗರುಡಃ ಶಕ್ತಿಪೀಡಿತಃ ।
ತತಃ ಪ್ರಹಸ್ಯ ತಂ ವಿಷ್ಣುಃ ಸಾಧು ಸಾಧ್ವಿತಿ ಭಾರತ ॥ ೨೫ ॥
ಕರಸ್ಪರ್ಶೇನ ಕೃತವಾನ್ವಿಮೋಹಂ ವಿನತಾತ್ಮಜಂ ।
ಸಮಾಶ್ವಾಸ್ಯ ಚ ತಂ ವಾಗ್ಭಿಃ ಶಕ್ತಿಂ ದೃಷ್ಟ್ವಾ ಚ ನಿಷ್ಫಲಾಂ ॥ ೨೬ ॥

---

೨೦–೨೨. ಮೇಲೆ ಬರುತ್ತಿರುವ ಆ ಮುದ್ಗರವನ್ನು ಮೂವರು ದೈತ್ಯರೂ ಆಕಾಶದಲ್ಲಿಯೇ ತಡೆದು ನಿವಾರಿಸಿಬಿಟ್ಟರು: ಜಂಭ ದೈತ್ಯನು ಗದೆಯಿಂದಲೂ, ಗ್ರಸನನು ಪಟ್ಟಿಶದಿಂದಲೂ, ಮಹಿಷನು ಶಕ್ತಿಯಿಂದಲೂ ಹೀಗೆ ಈ ಮೂವರೂ ಮಹಾ ಧ್ವನಿಯಿಂದ ಆರ್ಭಟಿಸುತ್ತ ಅದನ್ನು ತಡೆದರು. ದುರ್ಜನರಿಂದ ಸುಜನನು ಹೇಗೋ ಹಾಗೆ ನಿರಾಕೃತವಾದ ಆ ಮುದ್ಗರವನ್ನು ಕಂಡು (ನಾರಾಯಣನು) ನೂರು ಘಂಟೆಗಳ ಮಹಾಧ್ವನಿಯುಳ್ಳ ಉಗ್ರೋಗ್ರವಾದ ಶಕ್ತಿಯನ್ನು ಕೈಗೆ ತೆಗೆದುಕೊಂಡನು. ಭೀಷಣವಾದ ಆ ರಣದಲ್ಲಿ ಜಂಭನಿಗೆಂದುದ್ದೇಶಿಸಿ ಅದನ್ನು ಪ್ರಯೋಗಿಸಿದನು.

೨೩–೨೪. ಜಂಭನು ತನ್ನ ಕಡೆ ಬರುತ್ತಿರುವ ಶಕ್ತಿಯನ್ನು ಕಂಡು ತ್ವರಿಯಾಗಿ ರಥದಿಂದ ಧುಮುಕಿ ಕಾಮಿನಿಯನ್ನು ಕಾಮುಕನು ಹೇಗೋ ಹಾಗೆ ಲೀಲೆಯಿಂದ ಅದನ್ನು ಹಿಡಿದುಕೊಂಡು, ಆ ಬಲವಂತನು ಗಟ್ಟಿಯಾಗಿ ನಗುತ್ತಾ ಅದರಿಂದಲೇ ಗರುಡನನ್ನು ತಲೆಯ ಮೇಲೆ ಹೊಡೆದನು. ಬಳಿಕ ಮತ್ತೆ ತನ್ನ ರಥವನ್ನು ಹತ್ತಿ ಧನುಸ್ಸನ್ನು ಹಿಡಿದು ಸನ್ನದ್ಧನಾಗಿ ನಿಂತನು.

೨೫–೨೮. ಶಕ್ತಿಯಿಂದ ಪೀಡಿಸಲ್ಪಟ್ಟ ಗರುಡನು ಚೈತನ್ಯವನ್ನು ತೊರೆದು ಮೈಮರೆತನು. ಬಳಿಕ, ಎಲೈ ಭಾರತನೇ, ವಿಷ್ಣುವು ನಕ್ಕು, "ಸಾಧು! ಸಾಧು!" ಎಂದು ನುಡಿಯುತ್ತ ಕೈಯಿಂದ ಸವರಿ, ವೈನತೇಯನ ಮೂರ್ಛೆಯನ್ನು ಪರಿಹರಿಸಿದನು. ಅವನನ್ನು ಒಳ್ಳೆಯ ಮಾತುಗಳಿಂದ ಸಮಾಧಾನ ಪಡಿಸಿ,

ಕುಭಾರ್ಯಸ್ಯ ಯಥಾ ಪುಂಸಃ ಸರ್ವಂ ಸ್ಯಾಚ್ಚಿಂತಿತಂ ವೃಥಾ ।
ದೃಢಸಾರಮಹಾಮೌರ್ವೀಮನ್ಯಾಂ ಸಂಯೋಜಯತ್ತತಃ ॥ ೨೮ ॥
ಕೃತ್ವಾ ಚ ತಲನಿರ್ಘೋಷಂ ರೌದ್ರಮಸ್ತ್ರಂ ಮುಮೋಚ ಸಃ ।
ತತೋಽಸ್ತ್ರತೇಜಸಾ ಸರ್ವಮಾಕಾಶಂ ನೈವ ದೃಶ್ಯತೇ ॥ ೨೯ ॥
ಭೂಮಿರ್ದಿಶಶ್ಚ ವಿದಿಶೋ ಬಾಣಜಾಲಮಯಾ ಬಭುಃ ।
ದೃಷ್ಟ್ವಾ ತದಸ್ತ್ರಮಾಹಾತ್ಮ್ಯಂ ಸೇನಾನೀರ್ಗ್ರಸನೋಽಸುರಃ ॥ ೩೦ ॥
ಬ್ರಾಹ್ಮಮಸ್ತ್ರಂ ಚಕಾರಾಶು ಸರ್ವಾಸ್ತ್ರವಿನಿವಾರಣಂ ।
ತೇನ ತತ್ಪ್ರಶಮಂ ಯಾತಂ ರೌದ್ರಾಸ್ತ್ರಂ ಲೋಕಭೀಷಣಂ ॥ ೩೦ ॥
ಅಸ್ತ್ರೇ ಪ್ರತಿಹತೇ ತಸ್ಮಿನ್ ವಿಷ್ಣುರ್ದಾನವಸೂದನಃ ।
ಕಾಲದಂಡಾಸ್ತ್ರಮಕರೋತ್ಸರ್ವಲೋಕಭಯಂಕರಂ ॥ ೩೧ ॥
ಸಂಧೀಯಮಾನೇಽಸ್ತ್ರೇ ತಸ್ಮಿನ್ಮಾರುತಃ ಪರುಷೋ ವವೌ ।
ಚಕಂಪೇ ಚ ಮಹೀ ದೇವೀ ಕ್ಷುಬ್ಧಾಶ್ಚಾಂಬುಧಯೋಽಭವನ್ ॥ ೩೨ ॥
ತದಸ್ತ್ರಮುಗ್ರಂ ದೃಷ್ಟ್ವಾ ತು ದಾನವಾ ಯುದ್ಧದುರ್ಮದಾಃ ।
ಚಕ್ರುರಸ್ತ್ರಾಣಿ ದಿವ್ಯಾನಿ ನಾನಾರೂಪಾಣಿ ಸಂಯುಗೇ ॥ ೩೪ ॥

---

ಕೆಟ್ಟ ಹೆಂಡತಿಯುಳ್ಳವನ ಆಲೋಚನೆಗಳೆಲ್ಲ ಹೇಗೆ ವ್ಯರ್ಥವಾಗುವುವೋ ಹಾಗೆ ನಿಷ್ಫಲವಾದ ಶಕ್ತಿಯನ್ನು ಕಂಡು ಬಹು ದೃಢವಾದ ದೊಡ್ಡ ಹೆದೆಯುಳ್ಳ ಮತ್ತೊಂದು ಧನುಸ್ಸನ್ನು ಹೆದೆಯೇರಿಸಿ ಸಿದ್ಧಗೊಳಿಸಿಕೊಂಡನು.

೨೯. ತಲನಿರ್ಘೋಷವನ್ನು ಮಾಡಿ ರೌದ್ರಾಸ್ತ್ರವನ್ನು ಬಿಟ್ಟನು. ಬಳಿಕ ಆ ಅಸ್ತ್ರದ ತೇಜಸ್ಸಿನಿಂದ ಆಕಾಶವೆಲ್ಲ ಮುಚ್ಚಿಹೋಗಿ ಕಾಣದಂತಾಯಿತು.

೩೦–೩೧. ಭೂಮಿ, ದಿಕ್ಕುಗಳು, ವಿದಿಕ್ಕುಗಳು — ಎಲ್ಲವೂ ಬಾಣಜಾಲ ಮಯವಾಗಿ ಪ್ರಕಾಶಿಸಿದುವು. ಆ ಅಸ್ತ್ರದ ಮಾಹಾತ್ಮ್ಯವನ್ನು ಕಂಡು ಸೇನಾ ಪತಿಯಾದ ಗ್ರಸನಾಸುರನು ಸರ್ವಾಸ್ತ್ರಗಳನ್ನೂ ನಿವಾರಣೆ ಮಾಡುವಂತಹ ಬ್ರಹ್ಮಾಸ್ತ್ರವನ್ನು ಬೇಗ ತೊಟ್ಟುಬಿಟ್ಟನು. ಆ ಬ್ರಹ್ಮಾಸ್ತ್ರದಿಂದ ಲೋಕ ಭಯಂಕರವಾದ ರೌದ್ರಾಸ್ತ್ರವು ಶಾಂತವಾಯಿತು.

೩೨. ಆ ಅಸ್ತ್ರವು ಅಡಗಿಸಲ್ಪಡಲಾಗಿ ದಾನವಧ್ವಂಸಿಯಾದ ವಿಷ್ಣುವು ಸರ್ವಲೋಕ ಭಯಂಕರವಾದ ಕಾಲದಂಡಾಸ್ತ್ರವನ್ನು ಹೂಡಿದನು.

೩೩. ಆ ಅಸ್ತ್ರವನ್ನು ಸಂಧಾನಮಾಡುತ್ತಿರುವಾಗಲೆ ಗಾಳಿಯು ಬಿರುಸಾಗಿ ಬೀಸಿತು. ಭೂಮಿದೇವಿಯು ನಡುಗಿದಳು. ಸಮುದ್ರಗಳೆಲ್ಲ ಕ್ಷೋಭೆಗೊಂಡುವು.

೩೪. ಉಗ್ರವಾದ ಆ ಅಸ್ತ್ರವನ್ನು ಕಂಡು ಯುದ್ಧದಲ್ಲಿ ಅತಿಯಾಗಿ ಮದಿಸಿದ ದಾನವರು ನಾನಾ ರೂಪಗಳಾದ ದಿವ್ಯಾಸ್ತ್ರಗಳನ್ನು ಬಿಟ್ಟರು.

ನಾರಾಯಣಾಸ್ತ್ರಂ ಗ್ರಸನಸ್ತು ಚಕ್ರೇ
ತ್ವಾಷ್ಟ್ರಂ ನಿಮಿಶ್ಚಾಸ್ತ್ರವರಂ ಮುಮೋಚ ।
ಐಷೀಕಮಸ್ತ್ರಂ ಚ ಚಕಾರ ಜಂಭೋ
ಯುದ್ಧಸ್ಯ ದಂಡಾಸ್ತ್ರ ನಿವಾರಣಾಯ ॥ ೩೫ ॥
ಯಾವಚ್ಚ ಸಂಧಾನವಶಂ ಪ್ರಯಾಂತಿ
ನಾರಾಯಣಾದೀನಿ ನಿವಾರಣಾಯ ।
ತಾವತಕ್ಷಣೇನೈವ ಜಘಾನ ಕೋಟೀಂ
ದೈತ್ಯೇಶ್ವರಾಣಾಂ ಕಿಲ ಕಾಲದಂಡಃ ॥ ೩೬ ॥
ಅನಂತರಂ ಶಾಂತಭಯಂ ತದಸ್ತ್ರಂ
ದೈತ್ಯಾಸ್ತ್ರಯೋಗೇನ ಚ ಕಾಲದಂಡಂ ।
ಶಾಂತಂ ತದಾಲೋಕ್ಯ ಹರಿಃ ಸ್ವಮಸ್ತ್ರಂ
ಕೋಪೇನ ಕಾಲಾನಲತುಲ್ಯಮೂರ್ತಿಃ ॥ ೩೭ ॥
ಜಗ್ರಾಹ ಚಕ್ರಂ ತಪನಾಯುತಪ್ರಭ
ಮುಗ್ರಾರಮಾತ್ಮಾನಮಿವ ದ್ವಿತೀಯಂ ।
ಚಿಕ್ಷೇಪ ಸೇನಾಪತಯೇ ಜ್ವಲಂತಂ
ಚತುರ್ಭುಜಃ ಸಂಯತಿ ಸಂಪ್ರಗೃಹ್ಯ ॥ ೩೮ ॥

---

೩೫. ಯುದ್ಧದಲ್ಲಿ ದಂಡಾಸ್ತ್ರವನ್ನು ನಿವಾರಿಸುವುದಕ್ಕಾಗಿ ಗ್ರಸನನು ನಾರಾಯಣಾಸ್ತ್ರವನ್ನು ಪ್ರಯೋಗಿಸಿದನು. ನಿಮಿಯು ಅದೇ ಉದ್ದೇಶದಿಂದಲೇ ಅಸ್ತ್ರಶ್ರೇಷ್ಠವಾದ ತ್ವಾಷ್ಟ್ರಾಸ್ತ್ರವನ್ನು ಬಿಟ್ಟನು; ಜಂಭನು ಐಷೀಕಾಸ್ತ್ರವನ್ನು ಪ್ರಯೋಗಿಸಿದನು.

೩೬. ಹೀಗೆ ಗ್ರಸನ, ನಿಮಿ, ಜಂಭನೇ ಮೊದಲಾದ ದೈತ್ಯೇಶ್ವರರು ನಿವಾರಣೆಗಾಗಿ ನಾರಾಯಣಾದಿ ಅಸ್ತ್ರಗಳನ್ನು ಹೂಡುತ್ತಿರುವಷ್ಟರಲ್ಲಿಯೇ ವಿಷ್ಣುವು ಪ್ರಯೋಗಿಸಿದ ಆ ಕಾಲದಂಡಾಸ್ತ್ರವು ಒಂದು ಕ್ಷಣಮಾತ್ರದಲ್ಲಿಯೇ ಒಂದು ಕೋಟಿ ದೈತ್ಯೇಶ್ವರರನ್ನು ಕೊಂದು ಕೆಡವಿತು.

೩೭–೩೮. ಅನಂತರ ಭಯವನ್ನರಿಯದ ಆ ಕಾಲದಂಡಾಸ್ತ್ರವು ದೈತ್ಯರ ಅಸ್ತ್ರಗಳ ಸಂಪರ್ಕದಿಂದ ಶಾಂತವಾಯಿತು. ಅದನ್ನು ಕಂಡು ಹರಿಯು ಕೋಪದಿಂದ ಕಾಲಾಗ್ನಿಸಮಾನವಾದ ಶರೀರವನ್ನು ತಾಳಿದವನಾಗಿ ತನ್ನ ಸ್ವಂತ ಅಸ್ತ್ರವಾದ ಚಕ್ರವನ್ನು ಕೈಗೆತ್ತಿಕೊಂಡನು. ಹತ್ತು ಸಾವಿರ ಸೂರ್ಯರ ಪ್ರಭೆಯಿಂದ ಹೊಳೆಯುತ್ತಿರುವುದೂ ಉಗ್ರವಾದ ಅರಗಳುಳ್ಳದ್ದೂ ತನ್ನೆರಡನೆಯ ಆತ್ಮಸ್ವರೂಪವಾದುದೂ ಕಾಂತಿಯಿಂದುರಿಯುತ್ತಿರುವುದೂ ಆದ ಆ ಚಕ್ರವನ್ನು ಚತುರ್ಭುಜನಾದ ಹರಿಯು ತೆಗೆದುಕೊಂಡು ಸೇನಾಪತಿಯ ಮೇಲೆಸೆದನು.

ತದಾವ್ರಜಚ್ಚಕ್ರಮುಖೋ ವಿಲೋಕ್ಯ
ಸರ್ವಾತ್ಮನಾ ದೈತ್ಯವರಾಃ ಸ್ವವೀರ್ಯಾತ್ ।
ನಾಶಕ್ನುವನ್ವಾರಯಿತುಂ ಪ್ರಚಂಡಂ
ದೈವಂ ಯಥಾ ಪೂರ್ವಮಿಹೋಪಪನ್ನಂ ॥ ೩೯ ॥
ತದಪ್ರತರ್ಕ್ಯಂ ನವಹೇತಿತುಲ್ಯಂ
ಚಕ್ರಂ ಪಪಾತ ಗ್ರಸನಸ್ಯ ಕಂಠೇ ।
ತದ್ರಕ್ತಧಾರಾರುಣ ಘೋರನಾಭಿ
ಜಗಾಮ ಭೂಯೋಽಪಿ ಕರಂ ಮುರಾರೇಃ ॥ ೪೦ ॥
ಚಕ್ರಾಹತಃ ಸಂಯತಿ ದಾನವಶ್ಚ
ಪಪಾತ ಭೂಮೌ ಪ್ರಮಮಾರ ಚಾಪಿ ।
ದೈತ್ಯಾಶ್ಚ ಶೇಷಾ ಭೃಶಶೋಕಮಾಪುಃ
ಕ್ರೋಧಂ ಚ ಕೇಚಿತ್ಪಿಪಿಷುರ್ಭುಜಾಂಶ್ಚ ॥ ೪೧ ॥
ತತೋ ವಿನಿಹತೇ ದೈತ್ಯೇ ಗ್ರಸನೇ ಬಲನಾಯಕೇ ।
ನಿರ್ವಾರ್ಯಾದಮಯುಧ್ಯಂತ ಹರಿಣಾ ಸಹ ದಾನವಾಃ ॥ ೪೨ ॥
ಪಟ್ಟಿಶೈರ್ಮುಸಲೈಃ ಪ್ರಾಸೈರ್ಗದಾಭಿಃ ಕಣಪೈರಪಿ ।
ತೀಕ್ಷ್ಣಾನನೈಶ್ಚ ನಾರಾಚೈಶ್ಚಕ್ರೈಃ ಶಕ್ತಿಭಿರೇವ ಚ ॥ ೪೩ ॥

---

೩೯. ಆಗ ತಮ್ಮ ಮೇಲೆ ನುಗ್ಗಿ ಬರುತ್ತಿರುವ ಚಕ್ರವನ್ನು ಕಂಡು ದೈತ್ಯಶ್ರೇಷ್ಠರು ತಮ್ಮ ಸ್ವಂತ ವೀರ್ಯವನ್ನೆಲ್ಲ ಪ್ರಯೋಗಿಸಿದರೂ, ಪೂರ್ವದಲ್ಲಿ ಸಂಪಾದಿಸಿ ಒದಗಿಬಂದಿರುವ ಪ್ರಚಂಡವಾದ ದೈವವನ್ನು (ಅದೃಷ್ಟವನ್ನು) ಪರಿಹರಿಸಿಕೊಳ್ಳುವುದಕ್ಕೆ ಹೇಗೋ ಹಾಗೆ ಆ ಉಗ್ರಾಸ್ತ್ರವನ್ನು ನಿವಾರಣೆ ಮಾಡಿಕೊಳ್ಳಲು ಅಶಕ್ತರಾದರು.

೪೦. ಊಹಿಸಲಸಾಧ್ಯವಾದ ಮಹಾಬಲವುಳ್ಳ ಹೊಸ ಅಸ್ತ್ರಕ್ಕೆ ಸಮಾನವಾದ ಆ ಚಕ್ರವು ಗ್ರಸನನ ಕತ್ತಿನಲ್ಲಿ ಬಿದ್ದಿತು. ಆಗ ಅವನ ರಕ್ತದ ಧಾರೆಗಳಿಂದ ಕೆಂಪಾಗಿಯೂ ಘೋರವಾಗಿಯೂ ಕಾಣುವ ನಾಭಿಯುಳ್ಳದಾಗಿ ಮರಳಿ ಮುರಾರಿಯ ಕೈಗೇ ಹೋಗಿ ಸೇರಿತು.

೪೧. ಚಕ್ರದಿಂದ ಹೊಡೆಯಲ್ಪಟ್ಟ ಆ ದಾನವನು ನೆಲಕ್ಕುರುಳಿಬಿದ್ದು ಮಡಿದುಹೋದನು. ಉಳಿದ ದೈತ್ಯರು ಬಹು ಶೋಕವನ್ನು ಪಡೆದರು; ಕೋಪವನ್ನೂ ಪಡೆದರು. ಕೆಲವರು ಶೋಕಕೋಪಗಳಿಂದ ಭುಜಗಳನ್ನು ಹಿಡಿದುಕೊಂಡರು.

೪೨–೪೩. ಬಳಿಕ, ಸೇನಾನಾಯಕನಾದ ಗ್ರಸನದೈತ್ಯನು ಕೊಲ್ಲಲ್ಪಡಲಾಗಿ ದಾನವರು ಕಟ್ಟುನಿಟ್ಟಿಲ್ಲದೆ ಪಟ್ಟಿಶಗಳಿಂದಲೂ, ಮುಸಲಗಳಿಂದಲೂ,

ತದಸ್ತ್ರಜಾಲಂ ತೈರ್ಮುಕ್ತಂ ಲಬ್ಧಲಕ್ಷ್ಯೋ ಜನಾರ್ದನಃ ।
ಏಕೈಕಂ ಶತಧಾ ಚಕ್ರೇ ಬಾಣೈರಗ್ನಿಶಿಖೋಪಮೈಃ ॥ ೪೪ ॥
ಜಘಾನ ತೇಷಾಂ ಸಂಕ್ರುದ್ಧಃ ಕೋಟಿ ಕೋಟಿಂ ಜನಾರ್ದನಃ ।
ತತಸ್ತೇ ಸಹಸಾ ಭೂತ್ವಾ ನ್ಯಪತನ್ ಕೇಶವೋಪರಿ ॥ ೪೫ ॥
ಗರುಡಂ ಜಗೃಹುಃ ಕೇಚಿತ್ಪಾದಯೋಃ ಶತಶೋಽಸುರಾಃ ।
ಲಲಂಬಿರೇಚ ಪಕ್ಷಾಭ್ಯಾಂ ಮುಖೇ ಚಾನ್ಯೇ ಲಲಂಬಿರೇ ॥ ೪೬ ॥
ಕೇಶವಸ್ಯಾಪಿ ಧನುಷಿ ಭುಜಯೋಃ ಶೀರ್ಷಏವ ಚ ।
ಲಲಂಬಿರೇ ಮಹಾದೈತ್ಯಾ ನಿಶ್ವಸಂತೋ ಮುಹುರ್ಮುಹುಃ ॥ ೪೭ ॥
ತದದ್ಭುತಂ ಮಹದ್ದೃಷ್ಟ್ವಾ ಸಿದ್ಧಚಾರಣವಾರ್ತಿಕಾಃ ।
ಹಾಹೇತಿ ಮುಮುಚುರ್ನಾದಮಂಬರೇ ಚಾಸ್ತುವನ್ ಹರಿಂ ॥ ೪೮ ॥
ತತೋ ಹರಿರ್ವಿನಿರ್ಧೂಯ ಪಾತಯಾಮಾಸ ತಾನ್‌ಭುವಿ ।
ಯಥಾ ಪ್ರಬುದ್ಧಃ ಪುರುಷೋ ದೋಷಾನ್ ಸಂಸಾರ ಸಂಭವಾನ್ ॥

---

ಪ್ರಾಸಗಳಿಂದಲೂ, ಗದೆಗಳಿಂದಲೂ, ಕಣಪಗಳಿಂದಲೂ, ತೀಕ್ಷ್ಣವಾದ ಬಾಯುಳ್ಳ ನಾರಾಚಗಳಿಂದಲೂ, ಚಕ್ರಗಳಿಂದಲೂ, ಶಕ್ತಿಗಳಿಂದಲೂ ಹರಿಯೊಡನೆ ಯುದ್ಧಮಾಡಿದರು.

೪೪. ಜನಾರ್ದನನು ಗುರಿಹಿಡಿದು ಅವರಿಂದ ಬಿಡಲ್ಪಟ್ಟ ಆ ಅಸ್ತ್ರಜಾಲವನ್ನೆಲ್ಲ ಬೆಂಕಿಯುರಿಗೆ ಸಮಾನವಾದ ಬಾಣಗಳಿಂದ ಒಂದೊಂದನ್ನೂ ನೂರಾರು ಭಾಗಗಳಾಗುವಂತೆ ತುಂಡರಿಸಿದನು.

೪೫. ಬಹು ಕ್ರುದ್ಧನಾಗಿ ಜನಾರ್ದನನು ಕೋಟಿಕೋಟಿ ದೈತ್ಯರನ್ನು ಸಂಹಾರಮಾಡಿದನು. ಬಳಿಕ ಅವರೆಲ್ಲರೂ ಒಟ್ಟಾಗಿ ಆ ಕೇಶವನ ಮೇಲೆ ಬಿದ್ದರು.

೪೬. ಕೆಲವರು ಗರುಡನನ್ನು ಹಿಡಿದುಕೊಂಡರು. ನೂರು ಗಟ್ಟಳೆ ಅಸುರರು ಗರುಡನ ಎರಡು ಪಾದಗಳನ್ನೂ ಹಿಡಿದು ನೇತಾಡತೊಡಗಿದರು. ಎರಡು ರೆಕ್ಕೆಗಳಿಂದಲೂ ಮುಖದಿಂದಲೂ ಮತ್ತೆ ಕೆಲವರು ತೂಗಾಡತೊಡಗಿದರು.

೪೭. ಕೇಶವನ ಧನುಸ್ಸು, ಭುಜಗಳು, ತಲೆ— ಇವುಗಳಲ್ಲಿ ಕೂಡ ಮಹಾದೈತ್ಯರು ಬಾರಿ ಬಾರಿಗೂ ಗರ್ಜನೆ ಮಾಡುತ್ತ ತೂಗಾಡುತ್ತಿದ್ದರು.

೪೮. ಆ ಮಹಾ ಅದ್ಭುತವನ್ನು ಕಂಡು ಗೂಢಚಾರರಾದ ಸಿದ್ಧಚಾರಣರೆಲ್ಲರೂ ಆಕಾಶದಲ್ಲಿ ನಿಂತು "ಹಾ! ಹಾ!" ಎಂದು ಧ್ವನಿ ಮಾಡಿದರು; ಹರಿಯನ್ನು ಸ್ತುತಿಸಿದರು.

೪೯. ಬಳಿಕ ಹರಿಯು ಮೈಕೊಡವಿಕೊಂಡು ಪ್ರಬುದ್ಧನಾದ (ಎಚ್ಚೆತ್ತ) ಪುರುಷನು ಸಂಸಾರದಲ್ಲುಂಟಾದ ದೋಷಗಳನ್ನು ಹೇಗೊ ಹಾಗೆ ಅವರನ್ನು ನೆಲದ ಮೇಲಕ್ಕೆ ಕೊಡವಿ ಬೀಳಿಸಿದನು.

ವಿಕೋಶಂಚ ತತಃ ಕೃತ್ವಾ ನಂದಕಂ ಖಡ್ಗಮುತ್ತಮಂ ।
ಚರ್ಮ ಚಾಪ್ಯಮಲಂ ವಿಷ್ಣುಃ ಪದಾತಿಸ್ತಾನಧಾವತ ॥ ೫೦ ॥
ತತೋ ಮುಹೂರ್ತಮಾತ್ರೇಣ ಪದ್ಮಾನಿ ದಶ ಕೇಶವಃ ।
ಚಕರ್ತ ಮಾರ್ಗೇ ಬಹುಭಿರ್ವಿಚರನ್ದೈತ್ಯಸತ್ತಮಾನ್ ॥ ೫೧ ॥
ತತೋ ನಿಮಿಪ್ರಭೃತಯೋ ವಿನದ್ಯಾಸುರಸತ್ತಮಾಃ ।
ಅಧಾವಂತ ಮಹೇಷ್ವಾಸಾಃ ಕೇಶವಂ ಪಾದಚಾರಿಣಂ ॥ ೫೨ ॥
ಗರುತ್ಮಾಂಶ್ಚಾಭ್ಯಯಾತ್ತೂರ್ಣಮಾರುರೋಹ ಚ ತಂ ಹರಿಃ ।
ಉವಾಚ ಚ ಗರುತ್ಮಂತಂ ತಸ್ಮಿಂಸ್ತು ತುಮುಲೇ ರಣೇ ॥ ೫೩ ॥
ಅಶ್ರಾಂತೋ ಯದಿ ತಾರ್ಕ್ಷ್ಯಸಿ ಮಥನಂ ಪ್ರತಿ ತದ್ವ್ರಜ ।
ಶ್ರಾಂತಶ್ಚೇಚ್ಛ ಮುಹೂರ್ತಂ ತ್ವಂ ರಣಾದಪಸೃತೋ ಭವ ॥ ೫೪ ॥

ತಾರ್ಕ್ಷ್ಯ ಉವಾಚ:—

ನ ಮೇ ಶ್ರಮೋಽಸ್ತಿ ಲೋಕೇಶ ಕಿಂಚಿತ್ಸಂಸ್ಮರತಶ್ಚ ಮೇ ।
ಯನ್ಮೇ ಸುತಾನ್ವಾಹನತ್ವೇ ಕಲ್ಪಯಾಮಾಸ ತಾರಕಃ ॥ ೫೫ ॥

---

೫೦. ಬಳಿಕ ಖಡ್ಗೋತ್ತಮವಾದ ನಂದಕವನ್ನು ಒರೆಯಿಂದ ಹೊರದೆಗೆದು ನಿರ್ಮಲವಾದ ಗುರಾಣಿಯನ್ನು ಹಿಡಿದು ವಿಷ್ಣುವು ಪದಾತಿಯಾಗಿಯೇ ಓಡಿ ಅವರ ಮೇಲೆ ಬಿದ್ದನು.

೫೧. ಬಳಿಕಲಾ ಕೇಶವನು ದಾರಿಯಲ್ಲಿ ಬಹು ಮಂದಿಯೊಡನೆ ಓಡುತ್ತಾ ಮುಹೂರ್ತಮಾತ್ರದಲ್ಲಿಯೆ ಹತ್ತು ಪದ್ಮ ಸಂಖ್ಯೆಯ ದೈತ್ಯಶ್ರೇಷ್ಠರನ್ನು ಕತ್ತರಿಸಿ ಕೆಡವಿದನು.

೫೨. ಬಳಿಕ ನಿಮಿಯೇ ಮೊದಲಾದ ಅಸುರ ಪ್ರಮುಖರು ದೊಡ್ಡ ಬಿಲ್ಲುಗಳನ್ನು ಹಿಡಿದು ಅಬ್ಬರಿಸುತ್ತಾ ಪಾದಚಾರಿಯಾದ ಕೇಶವನ ಮೇಲೆ ನುಗ್ಗಿದರು.

೫೩. ಹರಿಯು ಬೇಗ ಗರುಡನ ಬಳಿ ಹೋಗಿ ಅವನ ಮೇಲೇರಿದನು. ಆ ತುಮುಲಯುದ್ಧದಲ್ಲಿ ಗರುಡನನ್ನು ಕುರಿತು ಹೀಗೆ ಹೇಳಿದನು:

೫೪. "ಎಲೈ ತಾರ್ಕ್ಷ್ಯನೇ! ನೀನಿನ್ನೂ ದಣಿದಿಲ್ಲದವನಾದರೆ, ಮಥನನ ಮೇಲೆ ನಡೆ. ದಣಿದಿರುವ ಪಕ್ಷದಲ್ಲಿ ಸ್ವಲ್ಪ ಹೊತ್ತು ರಣವನ್ನು ಬಿಟ್ಟು ದೂರ ಹೋಗು" ಎಂದನು.

೫೫. ಅದನ್ನು ಕೇಳಿ ತಾರ್ಕ್ಷ್ಯನಿಂತೆಂದನು:—"ಲೋಕೇಶಾ! ನನಗೆ ಶ್ರಮವಿಲ್ಲ. ಒಂದು ವಿಷಯ ನೆನಪಿಗೆ ಬಂದು ಸಂಕಟವಾಗುತ್ತಿದೆ. ತಾರಕನು ನನ್ನ ಪುತ್ರರನ್ನು ತನ್ನ ವಾಹನಗಳಾಗಿ ಮಾಡಿಕೊಂಡು ಬಿಟ್ಟಿದ್ದಾನೆ."

ಇತಿ ಬ್ರುವನ್ರಣೇ ದೈತ್ಯಂ ಮಥನಂ ಪ್ರತಿ ಸೋಽಗಮತ್ ।
ದೈತ್ಯಸ್ತ್ವಭಿಮುಖಂ ದೃಷ್ಟ್ವಾ ಶಂಖ ಚಕ್ರ ಗದಾಧರಂ ॥ ೫೬ ॥
ಜಘಾನ ಭಿಂಡಿವಾಲೇನ ಶಿತಧಾರೇಣ ವಕ್ಷಸಿ ।
ತಂ ಪ್ರಹಾರಮಚಿಂತ್ಯೈವ ವಿಷ್ಣುಸ್ತಸ್ಮಿನ್ಮಹಾಹವೇ ॥ ೫೭ ॥
ಜಘಾನ ಪಂಚಭಿರ್ಬಾಣೈರ್ಗಿರೀಂದ್ರಸ್ಯಾಪಿ ಭೇದಕೈಃ ।
ಆಕರ್ಣಕೃಷ್ಟೈರ್ದಶಭಿಃ ಪುನರ್ವಿದ್ಧಃ ಸ್ತನಾಂತರೇ ॥ ೫೮ ॥
ವಿಚೇತನೋ ಮುಹೂರ್ತಾತ್ಸ ಸಂಸ್ತಭ್ಯ ಮಥನಃ ಪುನಃ ।
ಗೃಹೀತ್ವಾ ಪರಿಘಂ ಮೂರ್ಧ್ನಿ ಜನಾರ್ದನಮತಾಡಯತ್ ॥ ೫೯ ॥
ವಿಷ್ಣುಸ್ತೇನ ಪ್ರಹಾರೇಣ ಕಿಂಚಿದಾಘೂರ್ಣಿತೋಽಭವತ್ ।
ತತಃ ಕೋಪವಿವೃತ್ತಾಕ್ಷೋ ಗದಾಂ ಜಗ್ರಾಹ ಮಾಧವಃ ॥ ೬೦ ॥
ತಯಾ ಸಂತಾಡಯಾಮಾಸ ಮಥನಂ ಹೃದಯೇ ದೃಢಂ ।
ಸ ಪಪಾತ ತಥಾ ಭೂಮೌ ಚೂರ್ಣಿತಾಂಗೋ ಮಮಾರ ಚ ॥ ೬೧ ॥
ತಸ್ಮಿನ್ನಿಪತಿತೇ ಭೂಮೌ ಮಥನೇ ಮಥಿತೇ ಭೃಶಂ ।
ಅವಸಾದಂ ಯಯುರ್ದೈತ್ಯಾಃ ಸರ್ವೇ ತೇ ಯುದ್ಧಮಂಡಲೇ ॥ ೬೨ ॥

---

೫೬–೫೯. ಹೀಗೆಂದು ನುಡಿಯುತ್ತಿರುವಾಗಲೆ, ರಣದಲ್ಲಿ ಮಥನನ ಬಳಿಗೆ ಅವನು ನಡೆದನು. ದೈತ್ಯನಾದರೋ ಶಂಖಚಕ್ರಗದಾಧರನಾದ ವಿಷ್ಣುವು ಅಭಿಮುಖನಾಗಿ ಬಂದುದನ್ನು ಕಂಡು ಹರಿತವಾದ ಬಾಯಿನ ಭಿಂಡಿವಾಲದಿಂದ ವಿಷ್ಣುವಿನ ಎದೆಗೆ ಹೊಡೆದನು. ವಿಷ್ಣುವು ಆ ಮಹಾಯುದ್ಧದಲ್ಲಿ ಆ ಏಟನ್ನು ಗಣನೆಗೇ ತಂದುಕೊಳ್ಳದೆ ಮಹಾಪರ್ವತವನ್ನಾದರೂ ಭೇದಿಸುವ ಸಾಮರ್ಥ್ಯವುಳ್ಳವುಗಳಾದ ಐದು ಬಾಣಗಳಿಂದ ಅವನನ್ನು ಹೊಡೆದನು. ಕಿವಿಯವರೆಗೂ ಎಳೆದುಬಿಟ್ಟ ಹತ್ತು ಬಾಣಗಳಿಂದ ಮತ್ತೆ ಮೊಲೆಗಳ ನಡುವಣೆದೆಗೆ ಹೊಡೆಯಲ್ಪಟ್ಟವನಾಗಿ ಆ ಮಥನನು ಎಚ್ಚರ ತಪ್ಪಿದವನಾಗಿ ಮುಹೂರ್ತಮಾತ್ರದಲ್ಲಿಯೇ ಚೇತರಿಸಿಕೊಂಡೆದ್ದು ಮತ್ತೆ ಪರಿಘವನ್ನು ಕೈಗೆ ತೆಗೆದುಕೊಂಡು ಜನಾರ್ದನನ ತಲೆಗೆ ಹೊಡೆದನು.

೬೦. ಆ ಪ್ರಹಾರದಿಂದ ವಿಷ್ಣುವು ಸ್ವಲ್ಪಮಟ್ಟಿಗೆ ತತ್ತರಿಸಿ ಸುತ್ತು ತಿರುಗುವವನಾದನು. ಬಳಿಕ ಕೋಪದಿಂದ ಕಣ್ಣರಳಿಸಿ ಮಾಧವನು ಗದೆಯನ್ನು ಕೈಗೆ ತೆಗೆದುಕೊಂಡನು.

೬೧. ಆ ಗದೆಯಿಂದ ಮಥನನನ್ನು ಎದೆಯ ಮೇಲೆ ಬಲವಾಗಿ ಹೊಡೆದನು. ಅವನು ನೆಲಕ್ಕುರುಳಿ ಮೈಯೆಲ್ಲ ಜಜ್ಜಿ ಮೃತನಾದನು.

೬೨. ಬಹುವಾಗಿ ಮಥಿಸಲ್ಪಟ್ಟು ಆ ಮಥನನು ನೆಲಕ್ಕುರುಳಿ ಬೀಳಲಾಗಿ ಯುದ್ಧ ಮಂಡಲದಲ್ಲಿ ಆ ದೈತ್ಯರೆಲ್ಲರೂ ಸೋತು ಸೊರಗಿಹೋದರು.

ತತಸ್ತೇಷು ವಿಷಣ್ಣೇಷು ದಾನವೇಷ್ವತಿ ಮಾನಿಷು ।
ಚುಕೋಪ ರಕ್ತನಯನೋ ಮಹಿಷೋ ದಾನವೇಶ್ವರಃ ॥ ೬೩ ॥
ಪ್ರತ್ಯುದ್ಯಯೌ ಹರಿಂ ರೌದ್ರಃ ಸ್ವಬಾಹುಬಲಮಾಶ್ರಿತಃ ।
ತೀಕ್ಷ್ಣಧಾರೇಣ ಶೂಲೇನ ಮಹಿಷೋ ಹರಿಮರ್ದಯನ್ ॥ ೬೪ ॥
ಶಕ್ತ್ಯಾ ಚ ಗರುಡಂ ವೀರೋ ಹೃದಯೇಽಭ್ಯಹನದ್ದೃಢಂ ।
ತತೋ ವಿವೃತ್ಯ ವದನಂ ಮಹಾಚಲಗುಹಾನಿಭಂ ॥ ೬೫ ॥
ಗ್ರಸ್ತುಮೈಚ್ಛದ್ರಣೇ ದೈತ್ಯಃ ಸ ಗರುತ್ಮಂತಮಚ್ಯುತಂ ।
ಅಥಾಚ್ಯುತೋಽಪಿ ವಿಜ್ಞಾಯ ದಾನವಸ್ಯ ಚಿಕೀರ್ಷಿತಂ ॥ ೬೬ ॥
ವದನಂ ಪೂರಯಾಮಾಸ ದಿವ್ಯೈರಸ್ತ್ರೈರ್ಮಹಾಬಲಃ ।
ಸ ತೈರ್ಬಾಣೈರಭಿಹತೋ ಮಹಿಷೋಽಚಲಸನ್ನಿಭಃ ॥ ೬೭ ॥
ಪರಿವರ್ತಿತಕಾಯಾರ್ಧಃ ಪಪಾತಾಥ ಮಮಾರ ಚ ।
ಮಹಿಷಂ ಪತಿತಂ ದೃಷ್ಟ್ವಾ ಜೀವಯಿತ್ವಾ ಪುನರ್ಹರಿಃ ॥ ೬೮ ॥
ಮಹಿಷಂ ಪ್ರಾಹ ಮತ್ತಸ್ತ್ವಂ ವಧಂ ನಾರ್ಹಸಿ ದಾನವ ।
ಯೋಷಿದ್ವಧ್ಯಃ ಪುರೋಕ್ತಸ್ತ್ವಂ ಸಾಕ್ಷಾತ್ಕಮಲಯೋನಿನಾ ॥ ೬೯ ॥
ಉತ್ತಿಷ್ಠ ಗಚ್ಛ ಮುಕ್ತೋಽಸಿ ದ್ರುತಮಸ್ಮಾನ್ಮಹಾರಣಾತ್ ।
ಇತ್ಯುಕ್ತೋ ಹರಿಣಾ ತಸ್ಮಾದ್ದೇಶಾದಪಗತೋಽಸುರಃ ॥ ೭೦ ॥

---

೬೩. ಅತಿಮಾನಿಗಳಾದ ಆ ದಾನವರು ವಿಷಣ್ಣರಾಗಿರಲಾಗಿ ದಾನವೇಶ್ವರನಾದ ಮಹಿಷನು ಕೆಂಗಣ್ಣುಮಾಡಿಕೊಂಡು ತುಂಬ ಕೋಪಿಸಿಕೊಂಡನು.

೬೪–೭೦. ರೌದ್ರನಾದ ಆ ಮಹಿಷನು ತನ್ನ ಬಾಹುಬಲವನ್ನಾಶ್ರಯಿಸಿ ಹರಿಯ ಮೇಲೆ ಬಿದ್ದನು. ಹರಿತವಾದ ಬಾಯಿಯ ಶೂಲದಿಂದ ಹರಿಯನ್ನು ಪೀಡಿಸುತ್ತ ಆ ವೀರನು ಶಕ್ತಿಯಿಂದ ಗರುಡನ ಎದೆಯನ್ನು ಬಲವಾಗಿ ಕುಟ್ಟಿದನು. ಬಳಿಕ ಮಹಾಪರ್ವತದ ಗುಹೆಗೆ ಸಮಾನವಾದ ತನ್ನ ಬಾಯನ್ನಗಲಿಸಿ ದೈತ್ಯನು ಗರುಡಸಮೇತನಾದ ಅಚ್ಯುತನನ್ನು ನುಂಗಬಯಸಿದನು. ಆಗ ಅಚ್ಯುತನು ಕೂಡ ದಾನವನ ಆ ಆಲೋಚನೆಯನ್ನು ತಿಳಿದು ಅವನ ಬಾಯನ್ನು ದಿವ್ಯಾಸ್ತ್ರಗಳಿಂದ ತುಂಬಿದನು. ಆ ಬಾಣಗಳಿಂದ ಹೊಡೆಯಲ್ಪಟ್ಟ ಪರ್ವತಸಮಾನನಾದ ಆ ಮಹಿಷನು ಪರಿವರ್ತನೆ ಹೊಂದಿದ ಅರ್ಧ ಶರೀರವುಳ್ಳವನಾಗಿ ಕೆಳಗೆ ಬಿದ್ದು ಮರಣಹೊಂದಿದನು. ಮಹಿಷನು ಬಿದ್ದುದನ್ನು ನೋಡಿ ಹರಿಯು ಅವನನ್ನು ಮತ್ತೆ ಬದುಕಿಸಿ ಅವನನ್ನು ಕುರಿತು, "ಎಲೈ ದಾನವನೇ! ನೀನು ನನ್ನಿಂದ ವಧೆ ಹೊಂದಲು ಅರ್ಹನಲ್ಲ. ಸಾಕ್ಷಾತ್ ಕಮಲಸಂಭವನಾದ ಬ್ರಹ್ಮನು 'ನೀನು ಹೆಂಗಸಿನಿಂದ ಮರಣ ಹೊಂದತಕ್ಕವ'ನೆಂದು ಹೇಳಿದ್ದಾನೆ. ಏಳು. ನಿನ್ನನ್ನು ಬಿಟ್ಟಿದ್ದೇನೆ. ಈ ಮಹಾರಣದಿಂದ ಬೇಗ

ತಸ್ಮಿನ್ಪರಾಙ್ಮುಖೇ ದೈತ್ಯೇ ಮಹಿಷೇ ಶುಂಭದಾನವಃ ।
ಸಂದಷ್ಟೌಷ್ಠ ಪುಟಾಟೋಪೋ ಭೃಕುಟೀ ಕುಟಿಲಾನನಃ ॥ ೭೧ ॥
ನಿರ್ಮೃಜ್ಯ ಪಾಣಿನಾ ಪಾಣಿಂ ಧನುರಾದಾಯ ಭೈರವಂ ।
ಸಜ್ಜೀಕೃತ್ಯ ಮಹಾಘೋರಾನ್ಮುಮೋಚ ಶತಶಃ ಶರಾನ್ ॥ ೭೨ ॥

ಸ ಚಿತ್ರಯೋಧೀ ದೃಢಮುಷ್ಟಿಪಾತತ
ಸ್ತತಶ್ಚ ವಿಷ್ಣುಂ ಗರುಡಂ ಚ ದೈತ್ಯಃ ।
ಬಾಣೈರ್ಜ್ವಲದ್ವಹ್ನಿಶಿಖಾನಿಕಾಶೈಃ
ಕ್ಷಿಪ್ತೈರಸಂಖ್ಯೈಃ ಪ್ರತಿಘಾತಹೀನೈಃ ॥ ೭೩ ॥
ವಿಷ್ಣುಶ್ಚ ದೈತ್ಯೇಂದ್ರಶರಾರ್ದಿತೋ ಭೃಶಂ
ಭುಶುಂಡಿಮಾದಾಯ ಕೃತಾಂತತುಲ್ಯಾಂ ।
ತಯಾ ಮುಖಂ ಚಾಸ್ಯ ಪಿಪೇಷ ಸಂಖ್ಯೇ
ಶುಂಭಸ್ಯ ಜತ್ರುಂ ಚ ಧರಾಧರಾಭಂ ॥ ೭೪ ॥
ತತಸ್ತ್ರಿಭಿಃ ಶುಂಭಭುಜಂ ದ್ವಿಷಷ್ಟ್ಯಾ
ಸೂತಸ್ಯ ಶೀರ್ಷಂ ದಶಭಿಶ್ಚ ಕೇತುಂ ।
ವಿಷ್ಣುರ್ವಿಕೃಷ್ಯೈಃ ಶ್ರವಣಾವಸಾನಂ
ದೈತ್ಯಸ್ಯ ಬಾಣೈರ್ಜ್ವಲನಾರ್ಕವರ್ಣೈಃ ॥ ೭೫ ॥

---

ಹೊರಟುಹೋಗು" ಎಂದನು. ಹರಿಯಿಂದ ಈ ರೀತಿ ಹೇಳಲ್ಪಟ್ಟವನಾಗಿ ಆ ಆಸುರನು ಆ ರಣಸ್ಥಳದಿಂದ ಹೊರಟುಹೋದನು.

೭೧–೭೨. ಆ ಮಹಿಷದೈತ್ಯನು ಬೆಂಗೊಟ್ಟು ಹೋಗಲು ಶುಂಭದಾನವನು ಹಲ್ಲುಮುಡಿಕಚ್ಚಿ ಹುಬ್ಬುಗಂಟು ಹಾಕಿಕೊಂಡು ಕೈ ಕೈ ಹಿಸುಕಿಕೊಳ್ಳುತ್ತ ಭಯಂಕರವಾದ ಧನುಸ್ಸನ್ನು ಕೈಗೆ ತೆಗೆದುಕೊಂಡು ಸಜ್ಜುಗೊಳಿಸಿಕೊಂಡು ಮಹಾಘೋರವಾದ ಬಾಣಗಳನ್ನು ನೂರುಗಟ್ಟಳೆ ಪ್ರಯೋಗಿಸಿದನು.

೭೩. ಚಿತ್ರಯೋಧಿಯಾದ ಆ ದೈತ್ಯನು ದೃಢವಾಗಿ ಮುಷ್ಟಿಮಾಡಿಕೊಂಡು ಹೊಡೆಯುತ್ತ ವಿಷ್ಣುವನ್ನೂ, ಗರುಡನನ್ನೂ ಪೀಡಿಸಿದನು. ಬಳಿಕ ಉರಿಯುವ ಅಗ್ನಿಶಿಖೆಗಳಿಗೆ ಸಮಾನಗಳಾದುವೂ, ಪರಿಹಾರವಿಲ್ಲದುವೂ, ಜ್ವಲಿಸುತ್ತಿರುವುವೂ ಆದ ಲೆಕ್ಕವಿಲ್ಲದಷ್ಟು ಬಾಣಗಳನ್ನು ಬಿಟ್ಟು ವಿಷ್ಣು ಗರುಡರನ್ನು ಘಾತಿಸಿದನು.

೭೪. ವಿಷ್ಣುವು ಕೂಡ ದೈತ್ಯೇಂದ್ರನ ಬಾಣಗಳಿಂದ ಬಹಳ ವ್ಯಥಿತನಾಗಿ ಯಮನಂತಿರುವ ಭುಶುಂಡಿಯನ್ನು ತೆಗೆದುಕೊಂಡು ಅದರಿಂದ ಆ ಶುಂಭನ ಮುಖವನ್ನೂ, ಬೆಟ್ಟಕ್ಕೆಣೆಯಾದ ಅವನ ಹೆಗಲನ್ನೂ ಕದನದಲ್ಲಿ ಜಜ್ಜಿಹಾಕಿದನು.

೭೫. ಬಳಿಕ ವಿಷ್ಣುವು ಜ್ವಲಿಸುವ ಸೂರ್ಯನ ಬಣ್ಣವುಳ್ಳವಾದ ಬಾಣಗಳನ್ನು ಆಕರ್ಣಾಂತವಾಗಿ ಸೆಳೆದು ಮೂರು ಬಾಣಗಳಿಂದ ಶುಂಭನ ಭುಜ

ಸ ತೈಶ್ಚ ವಿದ್ಧೋ ವ್ಯಥಿತೋ ಬಭೂವ
ದೈತ್ಯೇಶ್ವರೋ ವಿಸ್ರುತಶೋಣಿತಾಕ್ತಃ ।
ತತೋಽಸ್ಯ ಕಿಂಚಿಚ್ಚಲಿತಸ್ಯ ಧೈರ್ಯಾ
ದುವಾಚ ಶಂಖಾಂಬುಜಶಾರ್ಙ್ಗಪಾಣಿಃ ॥ ೭೬ ॥
ಯೋಷಿತ್ಸು ವಧ್ಯೋಽಸಿ ರಣಂ ವಿಮುಂಚ
ಶುಂಭಾಶುಭ ಸ್ವಲ್ಪತರೈರಹೋಭಿಃ ।
ಮತ್ತೋಽರ್ಹಸಿ ತ್ವಂ ನ ವೃಥೈವ ಮೂಢ
ತತೋಽಪಯಾತಃ ಸ ಚ ಶುಂಭದಾನವಃ ॥ ೭೭ ॥
ಜಂಭೋಽಥ ತದ್ವಿಷ್ಣುಮುಖಾನ್ನಿಶಮ್ಯ
ಜಗರ್ಜ ಚೋಚ್ಚೈಃ ಕೃತಸಿಂಹನಾದಃ ।
ಪ್ರೋವಾಚ ವಾಕ್ಯಂ ಚ ಸಲೀಲಮಾಜೌ
ಮಹಾಟ್ಟಹಾಸೇನ ಜಗದ್ವಿಕಂಪ್ಯ ॥ ೭೮ ॥
ಕಿಮೇಭಿಸ್ತೇ ಜಲಾವಾಸ ದೈತ್ಯೈರ್ಹೀನಪರಾಕ್ರಮೈಃ ।
ಮಾಮಾಸಾದಯ ಯುದ್ಧೇಽಸ್ಮಿನ್ಯದಿ ತೇ ಪೌರುಷಂ ಕ್ವಚಿತ್ ॥ ೭೯ ॥

---

ವನ್ನೂ ಅರುವತ್ತೆರಡು ಬಾಣಗಳಿಂದ ಆ ದೈತ್ಯಸುತನ ತಲೆಯನ್ನೂ ಹತ್ತರಿಂದ ಬಾವುಟವನ್ನೂ ಹೊಡೆದನು.

೭೬. ಅವುಗಳಿಂದ ಭೇದಿಸಲ್ಪಟ್ಟವನಾದ ಆ ದೈತ್ಯೇಶ್ವರನು ಸುರಿದು ಹೊರಹರಿಯುವ ರಕ್ತದಿಂದ ನೆನೆದು ವ್ಯಥಿತನಾದನು. ಬಳಿಕ ಸ್ವಲ್ಪಮಟ್ಟಿಗೆ ಧೈರ್ಯ ತಳೆದುಕೊಂಡ ಅವನನ್ನು ಕುರಿತು ಶಂಖ ಪದ್ಮ ಶಾರ್ಙ್ಗಗಳನ್ನು ಧರಿಸಿದವನಾದ ಶ್ರೀ ಮಹಾವಿಷ್ಣುವು ಈ ರೀತಿ ಹೇಳಿದನು:—

೭೭. "ಅಶುಭನಾದ ಎಲೈ ಶುಂಭನೇ! ನೀನು ಸ್ವಲ್ಪ ದಿನಗಳಲ್ಲಿಯೇ ಹೆಂಗಸರಿಂದ ಮರಣ ಹೊಂದತಕ್ಕವನು. ಯುದ್ಧವನ್ನು ಬಿಟ್ಟು ಹೋಗು. ಎಲೈ ಮೂಢನೇ! ನನ್ನಿಂದ ಮರಣಹೊಂದಲು ನೀನು ಅರ್ಹನಲ್ಲ. ಏಕೆ ವ್ಯರ್ಥವಾಗಿ ಶ್ರಮಪಡುವೆ?" ಎಂದನು. ಹೀಗೆನ್ನಲಾಗಿ ಆ ಶುಂಭದಾನವನು ರಣರಂಗವನ್ನು ಬಿಟ್ಟು ಹೊರಟುಹೋದನು.

೭೮. ತರುವಾಯ ಜಂಭನು ಆ ಮಾತನ್ನು ವಿಷ್ಣುಮುಖದಿಂದ ಕೇಳಿ ಗಟ್ಟಿಯಾಗಿ ಸಿಂಹನಾದಮಾಡಿ ಗರ್ಜಿಸಿದನು. ಕದನದಲ್ಲಿ ತನ್ನ ಮಹಾ ಅಟ್ಟಹಾಸದಿಂದ ಜಗತ್ತನ್ನೆ ನಡುಗಿಸುತ್ತ ಲೀಲೆಯಿಂದ ಈ ಮಾತನ್ನು ಆಡಿದನು:

೭೯. "ಎಲೈ ಜಲವಾಸಿಯೇ! ಹೀನಪರಾಕ್ರಮಿಗಳಾದ ಈ ದೈತ್ಯರಿಂದ ನಿನಗೆ ಏನು ಪ್ರಯೋಜನ? ನಿನಗೇನಾದರೂ ಪೌರುಷವಿರುವುದಾದರೆ ಈ ಯುದ್ಧದಲ್ಲಿ ನನ್ನ ಮೇಲೆ ಬೀಳು, ಬಾ.

ಯತ್ತ್ವಯಾ ಪೂರ್ವಂ ಹತಾ ದೈತ್ಯಾ ಹಿರಣ್ಯಾಕ್ಷಮುಖಾಃ ಕಿಲ ।
ಜಂಭಸ್ತದಾಭವನ್ನೈವ ಪಶ್ಯ ಮಾಮದ್ಯ ಸಂಸ್ಥಿತಂ ॥ ೬೦ ॥
ಪಶ್ಯ ತಾಲಪ್ರತೀಕಾಶೌ ಭುಜಾವೇತೌ ಹರೇ ಮಮ ।
ವಕ್ಷೋ ವಾ ವಜ್ರಕಠಿನಂ ಮಯಿ ಪ್ರಹರ ತತ್ಸುಖಂ ॥ ೬೧ ॥
ಇತ್ಯುಕ್ತಃ ಕೇಶವಸ್ತೇನ ಸೃಕ್ವಿಣೀ ಸಂಲಿಹನ್ರುಷಾ ।
ಮುಮೋಚ ಪರಿಘಂ ಘೋರಂ ಗಿರೀಣಾಮಪಿದಾರುಣಂ ॥ ೬೨ ॥
ತತಸ್ತಸ್ಯಾಪ್ಯನುಪದಂ ಕಾಲಾಯಸಮಯಂ ದೃಢಂ ।
ಮುಮೋಚ ಮುದ್ಗರಂ ವಿಷ್ಣುರ್ದ್ವಿತೀಯಂ ಪರ್ವತಂ ಯಥಾ ॥ ೬೩ ॥
ತದಾಯುಧದ್ವಯಂ ದೃಷ್ಟ್ವಾ ಜಂಭೋಽನ್ಯಸ್ಯ ರಥೇ ಧನುಃ ।
ಆಪ್ಲುತ್ಯ ಪರಿಘಂ ಗೃಹ್ಯ ಗರುಡಂ ತೇನ ಜಘ್ನಿವಾನ್ ॥ ೬೪ ॥
ದ್ವಿತೀಯಂ ಮುದ್ಗರಂ ಚಾನುಗೃಹೀತ್ವಾ ವಿನದನ್ರಣೇ ।
ಸರ್ವಪ್ರಾಣೇನ ಗೋವಿಂದಂ ತೇನ ಮೂರ್ಧ್ನಿ ಜಘಾನ ಸಃ ॥ ೬೫ ॥

---

೬೦. ಪೂರ್ವದಲ್ಲಿ ನಿನ್ನಿಂದ ಹಿರಣ್ಯಾಕ್ಷನೇ ಮೊದಲಾದ ದೈತ್ಯರು ಹತರಾದರಷ್ಟೆ. ಆಗ ಈ ಜಂಭನಿರಲಿಲ್ಲ. ಈಗ ನಾನು ಬಂದು ನಿಂತಿದ್ದೇನೆ, ನೋಡು.

೬೧. ಹರಿಯೇ! ತಾಲವೃಕ್ಷಗಳಿಗೆ ಸಮಾನವಾದ ಈ ನನ್ನ ಭುಜಗಳನ್ನು ನೋಡು. ವಜ್ರಕಠಿನವಾದ ನನ್ನೆದೆಯನ್ನು ನೋಡು. ನನ್ನಲ್ಲಿ ಸುಖವಾಗಿ ಪ್ರಹಾರಮಾಡು."

೬೨. ಹೀಗೆಂದು ಅವನಿಂದ ಹೇಳಲ್ಪಟ್ಟ ಕೇಶವನು ಕೋಪದಿಂದ ತುಟಿ ಕಚ್ಚಿಕೊಂಡು ಗಿರಿಗಳಿಗೂ ಕೂಡ ದಾರುಣವಾದ ಘೋರಪರಿಘವನ್ನು ಬೀಸಿ ಎಸೆದನು.

೬೩. ಆ ಪರಿಘದ ಹಿಂದೆ ಅದರ ಒತ್ತಿನಲ್ಲಿಯೇ, ವಿಷ್ಣುವು ಕರಿಯ ಕಬ್ಬಿಣದಿಂದ ಮಾಡಿದುದೂ ದೃಢವಾಗಿ ಎರಡನೆಯ ಪರ್ವತವೋ ಎಂಬಂತೆಯೂ ಇರುವ ಮುದ್ಗರವನ್ನು ಬಿಟ್ಟನು.

೬೪. ಆ ಎರಡು ಆಯುಧಗಳನ್ನೂ ಕಂಡು ಜಂಭನು ಧನುಸ್ಸನ್ನು ರಥದಲ್ಲಿಟ್ಟು ಪರಿಘವನ್ನು ತೆಗೆದುಕೊಂಡು ಹಾಗೆಯೇ ನೆಗೆದು ಅದರಿಂದಲೇ ಗರುಡನನ್ನು ಬಡಿದನು.

೬೫. ಎರಡನೆಯದೊಂದು ಮುದ್ಗರವನ್ನು ಕೈಗೆ ತೆಗೆದುಕೊಂಡು ರಣದಲ್ಲಿ ಗಟ್ಟಿಯಾಗಿ ಅಬ್ಬರಿಸುತ್ತ ತನ್ನ ಸರ್ವಶಕ್ತಿಯನ್ನೂ ಪ್ರಯೋಗಿಸಿ ಅದರಿಂದ ಗೋವಿಂದನ ತಲೆಗೆ ಗುರಿಯಿಟ್ಟು ಹೊಡೆದನು.

ತಾಭ್ಯಾಂ ಚಾತಿಪ್ರಹಾರಾಭ್ಯಾಮುಭೌ ಗರುಡಕೇಶವೌ ।
ಮೋಹಾವಿಷ್ಟೌ ವಿಚೇತಸ್ಕೌ ಮೃತಕಲ್ಪಾವಿವಾಸತಾಂ ॥ ೮೬ ॥
ತದದ್ಭುತಂ ಮಹದ್ದೃಷ್ಟ್ವಾ ಜಗರ್ಜುರ್ದೈತ್ಯಸತ್ತಮಾಃ ।
ನೈತಾನ್ ಹರ್ಷಮದೋದ್ಧೂತಾನಿದಂ ಸೇಹೇ ಜಗತ್ತದಾ ॥ ೮೭ ॥
ಸಿಂಹನಾದೈಸ್ತಲೋನ್ನಾದೈರ್ಧನುರ್ನಾದೈಶ್ಚ ಬಾಣಜೈಃ ।
ಜಂಭಂ ತೇ ಹರ್ಷಯಾಮಾಸುರ್ವಾಸಾಂಸ್ಯಾದುಧುವುಶ್ಚ ತೇ ॥ ೮೮ ॥
ಶಂಖಾಂಶ್ಚ ಪೂರಯಾಮಾಸುಶ್ಚಿಕ್ಷಿಪುರ್ದೇವತಾ ಭೃಶಂ ॥ ೮೯ ॥
ಸಂಜ್ಞಾಮವಾಪ್ಯಾಥ ಮಹಾರಣೇ ಹರಿಃ
ಸ ವೈನತೇಯಃ ಪರಿರಭ್ಯ ಜಂಭಂ ।
ಪರಾಙ್ಮುಖಃ ಸಂಯುಗಾದಪ್ರಧೃಷ್ಯಾ
ತ್ಪಲಾಯನಂ ವೇಗಪರಶ್ಚಕಾರ ॥ ೯೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
“ದೈತ್ಯೈಃ ಸಹ ವಿಷ್ಣೋರ್ಯುದ್ಧಗಮನ ವರ್ಣನಂ” ನಾಮ
ವಿಂಶೋಽಧ್ಯಾಯಃ

---

೮೬. ಆ ಬಲವಾದ ಪ್ರಹಾರಗಳಿಂದ ಗರುಡಕೇಶವರಿಬ್ಬರೂ ಮೋಹಾವಿಷ್ಟರಾಗಿ ಚೈತನ್ಯವುಡುಗಿ ಮೃತರಾದವರಂತೆ ಕಾಣಿಸುತ್ತಿದ್ದರು.

೮೭. ಆ ಮಹಾದ್ಭುತವನ್ನು ಕಂಡು ದೈತ್ಯಶ್ರೇಷ್ಠರೆಲ್ಲರೂ ಗರ್ಜಿಸಿದರು. ಹರ್ಷಮದದಿಂದುಬ್ಬಿಹೋದ ಅವರನ್ನು ನೋಡಿ ಆಗ ಜಗತ್ತು ಸಹಿಸಲಾರದಾಯಿತು.

೮೮. ಸಿಂಹನಾದಗಳಿಂದಲೂ, ಕೈಚಪ್ಪಾಳೆಗಳಿಂದಲೂ ಧನುಷ್ಟಂಕಾರಗಳಿಂದಲೂ ಬಾಣಗಳಿಂದುಂಟಾದ ಧ್ವನಿಗಳಿಂದಲೂ ಅವರು ಜಂಭನನ್ನು ಹರ್ಷಗೊಳಿಸಿದರು. ಆನಂದದಿಂದ ತಮ್ಮ ಬಟ್ಟೆಗಳನ್ನು ಕೊಡವಿದರು.

೮೯. ಶಂಖಗಳನ್ನೂದಿದರು. ದೇವತೆಗಳನ್ನು ಬಹುವಾಗಿ ಮೂದಲಿಸಿದರು. ಹೀಗೆ ಅವರು ತಮ್ಮ ಹರ್ಷವನ್ನು ವ್ಯಕ್ತಮಾಡಿದರು.

೯೦. ಬಳಿಕ ಆ ಮಹಾರಣದಲ್ಲಿ ಹರಿಯು ಎಚ್ಚರಿಕೆ ಪಡೆದು ವೈನತೇಯನೊಡಗೂಡಿ, ಜಂಭನಿಂದ ತಪ್ಪಿಸಿಕೊಂಡು ಎದುರಿಸಲಸದಳವಾದ ಆ ಯುದ್ಧದಿಂದ ಪರಾಙ್ಮುಖನಾಗಿ ಬಹು ವೇಗದಿಂದ ಪಲಾಯನ ಮಾಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
“ದೈತ್ಯರೊಡನೆ ವಿಷ್ಣುವಿನ ಯುದ್ಧ ವರ್ಣನೆ”ಯೆಂಬ
ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕವಿಂಶತಿತಮೋಽಧ್ಯಾಯಃ

## ದೇವಾಸುರಸಂಗ್ರಾಮೇ ತಾರಕವಿಜಯ ವರ್ಣನಂ

ನಾರದ ಉವಾಚ :—

ತಮಾಲೋಕ್ಯ ಪಲಾಯಂತಂ ವಿಧ್ವಸ್ತಧ್ವಜಕಾರ್ಮುಕಂ ।
ದೈತ್ಯಾಂಶ್ಚ ಮುದಿತಾನಿಂದ್ರಃ ಕರ್ತವ್ಯಂ ನಾಧ್ಯಗಚ್ಛತ ॥ ೧ ॥
ಅಥಾಯಾನ್ನಿಕಟಂ ವಿಷ್ಣೋಃ ಸುರೇಶಸ್ತ್ವರಯಾನ್ವಿತಃ ।
ಉವಾಚ ಚೈನಂ ಮಧುರಮುತ್ಸಾಹಪರಿಬೃಂಹಿತಂ ॥ ೨ ॥
ಕಿಮೇಭಿಃ ಕ್ರೀಡಸೇ ದೇವ ದಾನವೈರ್ದುಷ್ಟಮಾನಸೈಃ ।
ದುರ್ಜನೈರ್ಲಬ್ಧರಂಧ್ರಸ್ಯ ಪುರುಷಸ್ಯ ಕುತಃ ಕ್ರಿಯಾಃ ॥ ೩ ॥
ಶಕ್ತೇನೋಪೇಕ್ಷಿತೋ ನೀಚೋ ಮನ್ಯತೇ ಬಲಮಾತ್ಮನಃ ।
ತಸ್ಮಾನ್ನ ನೀಚಂ ಮತಿಮಾನುಪೇಕ್ಷೇತ ಕಥಂಚನ ॥ ೪ ॥
ಅಥಾಗ್ರೇಸರಸಂಪತ್ತ್ಯಾ ರಥಿನೋ ಜಯಮಾಯಯುಃ ।
ಕಸ್ತೇ ಸಖಾಭವತ್ಪೂರ್ವಂ ಹಿರಣ್ಯಾಕ್ಷವಧೇ ವಿಭೋ ॥ ೫ ॥

---

## ಕನ್ನಡದ ಅನುವಾದ

### ದೇವಾಸುರಸಂಗ್ರಾಮ, ತಾರಕ ವಿಜಯ ವರ್ಣನ

೧. ನಾರದನು ಹೇಳುತ್ತಾನೆ:—ಇಂತು ಧ್ವಜವನ್ನೂ ಬಿಲ್ಲನ್ನೂ ಕಳೆದುಕೊಂಡು ಓಡಿಹೋಗುತ್ತಿರುವ ಮಹಾ ವಿಷ್ಣುವನ್ನೂ ಸಂತೋಷಗೊಂಡ ರಾಕ್ಷಸರನ್ನೂ ಕಂಡು ಮಹೇಂದ್ರನು ಏನುಮಾಡಬೇಕೆಂಬುದನ್ನು ತಿಳಿಯದಾದನು.

೨. ಆಗ ಇಂದ್ರನು ಸಂಭ್ರಮದಿಂದ ನಾರಾಯಣನ ಸಮೀಪವನ್ನು ಸೇರಿದವನಾಗಿ, ಮಧುರಗಳೂ ಉತ್ಸಾಹಪೂರಿತಗಳೂ ಆದ ಮಾತುಗಳನ್ನು ಅವನಲ್ಲಿ ಆಡತೊಡಗಿದನು.

೩. "ಎಲೈ ದೇವೋತ್ತಮನೆ! ದುಷ್ಟಮನಸ್ಕರಾದ ಈ ರಾಕ್ಷಸರೊಡನೆ ಏಕೆ ಆಟವಾಡುತ್ತಿರುವೆ? ದುರ್ಜನರಿಂದ ಯಾವನಲ್ಲಿ ಛಿದ್ರವು ಕಾಣಲ್ಪಡುವುದೋ ಆ ಮನುಷ್ಯನಿಂದ ಯಾವ ಕೆಲಸಗಳು ತಾನೇ ಆಗುವುವು?

೪. ನೀಚನಾದವನು ಬಲಿಷ್ಠನಿಂದ ಉಪೇಕ್ಷೆ ಮಾಡಲ್ಪಟ್ಟರೆ ತಾನೇ ಬಲಿಷ್ಠನೆಂದು ತಿಳಿದುಕೊಳ್ಳುವನು. ಆದುದರಿಂದ ಬುದ್ಧಿವಂತನು ನೀಚರನ್ನು ಸರ್ವಥಾ ಉದಾಸೀನ ಮಾಡಬಾರದು.

೫. ಸೇನಾನಾಯಕನ ನೇತೃತ್ವದಲ್ಲಿಯೇ ಸೈನಿಕರು ಜಯವನ್ನು ಸಂಪಾದಿಸುವರೆಂದು ನೀನು ಹೇಳುವೆಯಾದರೆ ಸರ್ವವ್ಯಾಪಿಯಾದ ನಿನಗೆ ಮುನ್ನು ಹಿರಣ್ಯಾಕ್ಷವಧೆಯಾದ ಸಮಯದಲ್ಲಿ ಯಾರು ಮುಂದಾಳಾಗಿದ್ದರು?

ಹಿರಣ್ಯಕಶಿಪುರ್ದೈತ್ಯೋ ವೀರ್ಯಶಾಲೀ ಮದೋದ್ಧತಃ ।
ಪ್ರಾಪ್ಯ ತ್ವಾಂ ತೃಣವನ್ನಷ್ಟಸ್ತತ್ರ ಕೋಽಗ್ರೇಸರಸ್ತವ ॥ ೬ ॥
ಪೂರ್ವಂ ಪ್ರತಿಬಲಾ ದೈತ್ಯಾ ಮಧುಕೈಟಭಸನ್ನಿಭಾಃ ।
ನಿನಿಷ್ಪ್ರಾಸ್ತ್ವಾಂತು ಸಂಪ್ರಾಪ್ಯ ಶಲಭಾ ಇವ ಪಾವಕಂ ॥ ೭ ॥
ಯುಗೇ ಯುಗೇ ಚ ದೈತ್ಯಾನಾಂ ತ್ವತ್ತೋ ನಾಶೋಽಭವದ್ಧರೇ ।
ತಥೈವಾದ್ಯೇಹ ಭೀತಾನಾಂ ತ್ವಂ ಹಿ ವಿಷ್ಣೋ ಸುರಾಶ್ರಯಃ ॥ ೮ ॥
ಏವಂ ಸನ್ನೋದಿತೋ ವಿಷ್ಣುರ್ವವರ್ಧತ ಮಹಾಭುಜಃ ।
ಬಲೇನ ತೇಜಸಾ ಋದ್ಧ್ಯಾ ಸರ್ವಭೂತಾಶ್ರಯೋಽರಿಹಾ ॥ ೯ ॥
ಅಥೋವಾಚ ಸಹಸ್ರಾಕ್ಷಂ ಕೇಶವಃ ಪ್ರಹಸನ್ನಿವ ।
ಏವಮೇತದ್ಯಥಾ ಪ್ರಾಹ ಭವಾನಸ್ಮದ್ಗತಂ ವಚಃ ॥ ೧೦ ॥
ತ್ರೈಲೋಕ್ಯದಾನವಾನ್ಸರ್ವಾನ್ಹಗ್ತುಂ ಶಕ್ತಃ ಕ್ಷಣಾದಹಂ ।
ದುರ್ಜಯಸ್ತಾರಕಃ ಕಿಂ ತು ಮುಕ್ತ್ವಾ ಸಪ್ತದಿನಂ ಶಿಶುಂ ॥ ೧೧ ॥
ಮಹಿಷಶ್ಚೈವ ಶುಂಭಶ್ಚ ಉಭೌ ವಧ್ಯೌ ಚ ಯೋಷಿತಾ ।
ಜಂಭೋ ದುರ್ವಾಸಸಾ ಶಪ್ತಃ ಶಕ್ರವಧ್ಯೋ ಭವಾಖಿತಿ ।
ತಸ್ಮಾತ್ತ್ವಂ ದಿವ್ಯವೀರ್ಯೇಣ ಜಹಿ ಜಂಭಂ ಮದೋತ್ಕಟಂ ॥ ೧೨ ॥

---

೬. ಅತ್ಯಂತ ಬಲಿಷ್ಠನೂ, ಗರ್ವದಿಂದ ಉದ್ಧತನಾದವನೂ ಆದ ಹಿರಣ್ಯ ಕಶಿಪುವೆಂಬ ರಾಕ್ಷಸನು ನಿನ್ನನ್ನೆದುರಿಸಿ ಹುಲ್ಲು ಕಡ್ಡಿಯಂತೆ ನಾಶವನ್ನು ಹೊಂದ ಲಿಲ್ಲವೆ? ಆಗ ನಿನಗೆ ಯಾವ ಅಗ್ರೇಸರನಿದ್ದನು?

೭. ಪೂರ್ವದಲ್ಲಿ ಮಧುಕೈಟಭರಿಗೆ ಸಮಾನರಾದ ರಾಕ್ಷಸರು ಎದುರಾಳಿ ಗಳಾಗಿ ನಿನ್ನನ್ನು ಸೇರಿ ಬೆಂಕಿಯಲ್ಲಿ ಬಿದ್ದ ಶಲಭಗಳಂತೆ ನಾಶವನ್ನೈದಲಿಲ್ಲವೆ?

೮. ಎಲೈ ಹರಿಯೇ! ಪ್ರತಿ ಯುಗದಲ್ಲಿಯೂ ರಾಕ್ಷಸರ ನಾಶವು ನಿನ್ನಿಂದಲೇ ಆಗಿರುವುದು. ಅಂತೆಯೇ ಈಗಲೂ ರಾಕ್ಷಸರಿಂದ ಭಯಗೊಂಡಿರುವ ದೇವತೆಗಳಿಗೆ ನೀನೇ ಆಶ್ರಯನಾಗಬೇಕು.''

೯. ಇಂತು ಇಂದ್ರನಿಂದ ಪ್ರಚೋದಿತನಾಗಿ ಮಹಾಪರಾಕ್ರಮಿಯಾದ ನಾರಾಯಣನು ಶತ್ರುಗಳ ನಿಗ್ರಹದಿಂದ ಸಕಲ ಭೂತಗಳಿಗೂ ಆಶ್ರಯನಾಗಿ ಬಲದಿಂದಲೂ, ತೇಜಸ್ಸಿನಿಂದಲೂ, ವಿಜಯದಿಂದಲೂ ವೃದ್ಧಿಯನ್ನೈದಿದನು.''

೧೦. ಬಳಿಕ ನಸುನಗುತ್ತ ಇಂದ್ರನನ್ನು ಕುರಿತು ಇಂತೆಂದನು: ''ನೀನು ನನ್ನ ವಿಷಯದಲ್ಲಿ ಆಡಿದ ಮಾತುಗಳೆಲ್ಲವೂ ಯಥಾರ್ಥಗಳೇ ಆಗಿರುವುವು.

೧೧–೧೨. ಒಂದು ಕ್ಷಣಮಾತ್ರದಲ್ಲಿ ಮೂರು ಲೋಕಗಳಲ್ಲಿರುವ ರಾಕ್ಷಸ ರೆಲ್ಲರನ್ನೂ ಸುಟ್ಟುಬಿಡಲು ನಾನು ಶಕ್ತನಾಗಿರುವೆನು. ಆದರೆ ಈ ತಾರಕಾ ಸುರನು ಏಳುದಿನಗಳ ಶಿಶುವಿನಿಂದಲ್ಲದೆ ಗೆಲ್ಲಲ್ಪಡಲಾರನು. ಮಹಿಷಾಸುರನೂ,

ಅವಧ್ಯಃ ಸರ್ವಭೂತಾನಾಂ ತ್ವಾಮೃತೇ ಸ ತು ದಾನವಃ ॥ ೧೩ ॥
ಮಯಾ ಗುಪ್ತೋ ರಣೇ ಜಂಭಂ ಜಗತ್ಕಂಟಕಮುದ್ಧರ ।
ತದ್ವೈಕುಂಠವಚಃ ಶ್ರುತ್ವಾ ಸಹಸ್ರಾಕ್ಷೋಽಮರಾರಿಹಾ ॥ ೧೪ ॥
ಸಮಾದಿಶತ್ಸುರಾಧ್ಯಕ್ಷಾನ್ಸೈನ್ಯಸ್ಯ ರಚನಾಂ ಪ್ರತಿ ।
ತತಶ್ಚಾಭ್ಯರ್ಥಿತೋ ದೇವೈರ್ವಿಷ್ಣುಃ ಸೈನ್ಯಮಕಲ್ಪಯತ್ ॥ ೧೫ ॥
ಯತ್ಸಾರಂ ಸರ್ವಲೋಕಸ್ಯ ವೀರ್ಯಸ್ಯ ತಪಸೋಽಪಿ ಚ ।
ತದ್ವೈಕಾದಶ ರುದ್ರಾಂಶ್ಚ ಚಕಾರಾಗ್ರೇಸುರಾನ್ ಹರಿಃ ॥ ೧೬ ॥
ವ್ಯಾಲೀಢಾಂಗಾ ಮಹಾದೇವಾ ಬಲಿನೋ ನೀಲಕಂಧರಾಃ ।
ಚಂದ್ರಖಂಡತ್ರಿಪುಂಡ್ರಾಶ್ಚ ಪಿಂಗಾಕ್ಷಾಃ ಶೂಲಪಾಣಯಃ ॥ ೧೭ ॥
ಪಿಂಗೋತ್ತುಂಗ ಜಟಾಜೂಟಾಃ ಸಿಂಹಚರ್ಮಾವಸಾಯಿನಃ ।
ಭಸ್ಮೋದ್ಧೂಲಿತಗಾತ್ರಾಶ್ಚ ಭುಜಮಂಡಲಭೈರವಾಃ ॥ ೧೮ ॥

---

ಶುಂಭನೂ ಸ್ತ್ರೀಯ ಕೈಗಳಿಂದಲೇ ಹತರಾಗಬೇಕು. ಜಂಭಾಸುರನು ಮಾತ್ರ 'ನೀನು ಇಂದ್ರನಿಂದ ನಾಶವನ್ನು ಹೊಂದು' ಎಂಬುದಾಗಿ ದೂರ್ವಾಸ ಮಹರ್ಷಿಗಳಿಂದ ಶಾಪವನ್ನು ಹೊಂದಿರುವನು. ಆದುದರಿಂದ ಮದೋನ್ಮತ್ತನಾದ ಇವನನ್ನು ನೀನು ನಿನ್ನ ದಿವ್ಯ ಪರಾಕ್ರಮದಿಂದ ನಿಗ್ರಹಿಸು. ನಿನ್ನಿಂದಲ್ಲದೆ ಮತ್ತೆ ಯಾರಿಂದಲೂ ಆ ರಾಕ್ಷಸನು ವಧ್ಯನಾಗಲಾರನು.

೧೪. ಆದುದರಿಂದ ನನ್ನ ರಕ್ಷಣೆಯಲ್ಲಿದ್ದುಕೊಂಡು ಲೋಕಕ್ಕೆ ಕಂಟಕಪ್ರಾಯನಾದ ಜಂಭಾಸುರನನ್ನು ಕೊನೆಗಾಣಿಸು." ಇಂತು ನುಡಿದ ಮಹಾವಿಷ್ಣುವಿನ ಮಾತುಗಳನ್ನು ಕೇಳಿ ದೇವಶತ್ರುಮಾರಕನಾದ ಮಹೇಂದ್ರನು ದೇವತೆಗಳ ಸೇನಾನಾಯಕರನ್ನು ಕರೆದು ಸೈನ್ಯವನ್ನು ಸಿದ್ಧಪಡಿಸುವಂತೆ ಅಪ್ಪಣೆ ಮಾಡಿದನು.

೧೫. ಬಳಿಕ ದೇವತೆಗಳಿಂದ ಪ್ರಾರ್ಥಿತನಾಗಿ ವಿಷ್ಣುವು ಸಮಸ್ತಲೋಕಗಳ ಬಲವನ್ನೂ ತಪಶ್ಶಕ್ತಿಯನ್ನೂ ಸಂಗ್ರಹಿಸಿ ಸಾರಭೂತವಾದ ಒಂದು ಸೈನ್ಯವನ್ನು ನಿರ್ಮಿಸಿದನು.

೧೬-೧೮. ಮತ್ತು ಏಕಾದಶರುದ್ರರನ್ನೇ ಸೇನಾನಾಯಕರನ್ನಾಗಿ ಮಾಡಿದನು. ಈ ಮಹಾ ದೇವಾಂಶಗಳೆಲ್ಲರೂ, ವಜ್ರಸಮಾನ ಶರೀರವುಳ್ಳವರೂ, ನೀಲಕಂಠರೂ, ಹಣೆಗಳಲ್ಲಿ ಚಂದ್ರಬಿಂಬ ತ್ರಿಪುಂಡ್ರಗಳುಳ್ಳವರೂ, ಕೆಂಪಾದ ಕಣ್ಣುಗಳುಳ್ಳವರೂ, ತ್ರಿಶೂಲಗಳನ್ನು ಕೈಯಲ್ಲಿ ಹಿಡಿದಿರುವವರೂ, ಕೆಂಚಗೆ ಎತ್ತರವಾಗಿ ಕಟ್ಟಿರುವ ಜಟಾಕಿರೀಟಗಳುಳ್ಳವರೂ, ಸಿಂಹಚರ್ಮಗಳಿಂದ ಆವೃತರೂ, ಮೈಗಳಿಗೆ ಭಸ್ಮವನ್ನು ಬಳಿದುಕೊಂಡಿರುವವರೂ, ಭುಜಗಳಲ್ಲಿ ಮಂಡಲಾಕಾರದಿಂದಿರುವ ಸರ್ಪಗಳಿಂದ ಭಯಂಕರರಾಗಿಯೂ ಇದ್ದ ಕಪಾಲಿಯೇ

ಕಪಾಲೀಶಾದಯೋ ರುದ್ರಾ ವಿದ್ರಾವಿತಮಹಾಸುರಾಃ ।
ಕಪಾಲೀ ಪಿಂಗಲೋ ಭೀಮೋ ವಿರೂಪಾಕ್ಷೋ ವಿಲೋಹಿತಃ ।
ಅಜಕಃ ಶಾಸನಃ ಶಾಸ್ತಾ ಶಂಭುಶ್ಚಂಡ್ರೋ ಭವಸ್ತಥಾ ॥ ೧೯ ॥
ಏತ ಏಕಾದಶಾನಂತಬಲಾ ರುದ್ರಾಃ ಪ್ರಭಾವಿನಃ ।
ಅಪಾಲಯಂತ ತ್ರಿದಶಾನ್ನಿಗರ್ಜಂತ ಇವಾಂಬುದಾಃ ॥ ೨೦ ॥
ಹಿಮಾಚಲಾಭೇ ಮಹತಿ ಕಾಂಚನಾಂಬುರುಹಸ್ರಜಿ ।
ಪ್ರಚಂಚಲ ಮಹಾಹೇಮ ಘಂಟಾಸಂಹತಿ ಮಂಡಿತೇ ॥ ೨೧ ॥
ಐರಾವತೇ ಚತುರ್ದಂತೇ ಮತ್ತಮಾತಂಗ ಆಸ್ಥಿತಃ ।
ಮಹಾಮದಜಲಸ್ರಾವೇ ಕಾಮರೂಪೇ ಶತಕ್ರತುಃ ॥ ೨೨ ॥
ತಸ್ಥೌ ಹಿಮಗಿರೇಃ ಶೃಂಗೇ ಭಾನುಮಾನಿವ ದೀಪ್ತಿಮಾನ್ ।
ತಸ್ಯಾರಕ್ಷತ್ಪದಂ ಸವ್ಯಂ ಮಾರುತೋಽಮಿತವಿಕ್ರಮಃ ॥ ೨೩ ॥
ಜುಗೋಪಾಪರಮಗ್ನಿಶ್ಚ ಜ್ವಾಲಾಪೂರಿತದಿಙ್ಮುಖಃ ।
ಪೃಷ್ಠರಕ್ಷೋಽಭವದ್ವಿಷ್ಣುಃ ಸಮರೇಶಃ ಶತಕ್ರತೋಃ ॥ ೨೪ ॥

---

ಮೊದಲಾದ ಏಕಾದಶರುದ್ರರು ರಾಕ್ಷಸಶ್ರೇಷ್ಠರನ್ನು ಹಿಂದಕ್ಕೋಡಿಸುವ ಸಾಮರ್ಥ್ಯವುಳ್ಳವರಾಗಿದ್ದರು.

೧೯. ಕಪಾಲಿ, ಪಿಂಗಲ, ಭೀಮ, ವಿರೂಪಾಕ್ಷ, ವಿಲೋಹಿತ, ಅಜಕ, ಶಾಸನ, ಶಾಸ್ತಾ, ಶಂಭು, ಚಂದ್ರ, ಭವ ಎಂಬುವರೇ ರುದ್ರರು.

೨೦. ಈ ಹನ್ನೊಂದು ಜನರೂ ಅಪರಿಮಿತಪರಾಕ್ರಮವುಳ್ಳವರೂ, ಪ್ರಭಾವ ಸಂಪನ್ನರೂ, ಆಗಿ ಮೇಘಗಳಂತೆ ಗಂಭೀರವಾಗಿ ಸಿಂಹನಾದಗಳನ್ನು ಮಾಡುತ್ತ ಸಕಲ ದೇವತೆಗಳನ್ನೂ ರಕ್ಷಿಸುತ್ತಿದ್ದರು.

೨೧–೨೩. ಹಿಮಾಚಲಪರ್ವತದಂತೆ ಉನ್ನತವಾದುದೂ, ಹೊಂಬಣ್ಣದ ಕಮಲಗಳ ಹಾರವುಳ್ಳದುದೂ, ಸದಾ ಚಲಿಸುತ್ತಿರುವ ಭಾರವಾದ ಚಿನ್ನದ ಗಂಟೆಗಳ ಸಮೂಹದಿಂದಲಂಕೃತವಾದುದೂ, ನಾಲ್ಕು ದಂತಗಳುಳ್ಳದುದೂ, ವಿಶೇಷವಾಗಿ ಮದಜಲವನ್ನು ಸುರಿಸುತ್ತಿರುವುದೂ, ಇಚ್ಛಾರೂಪವುಳ್ಳದುದೂ ಆದ ಐರಾವತವೆಂಬ ಮತ್ತಗಜದ ಮೇಲೆ ಏರಿ ಇಂದ್ರನು ಹಿಮಾಚಲದ ಶಿಖರದಲ್ಲಿ ನೆಲಸಿದ ತೇಜೋರಾಶಿಯಾದ ಸೂರ್ಯನಂತೆ ಕಾಣುತ್ತಿದ್ದನು. ಅಮಿತಬಲವಂತನಾದ ವಾಯುದೇವನು ಇಂದ್ರನ ಎಡಭಾಗವನ್ನು ರಕ್ಷಿಸುತ್ತಿದ್ದನು.

೨೪. ಬಲ ಪಾರ್ಶ್ವವನ್ನು ಜ್ವಾಲೆಗಳಿಂದ ದಿಕ್ಕುಗಳನ್ನು ತುಂಬುತ್ತಿರುವ ಅಗ್ನಿದೇವನು ರಕ್ಷಿಸಿದನು. ಯುದ್ಧಕುಶಲನಾದ ಮಹಾವಿಷ್ಣುವು ಮಹೇಂದ್ರನ ಹಿಂಬದಿಯನ್ನು ರಕ್ಷಿಸುವವನಾದನು.

ಆದಿತ್ಯಾ ವಸವೋ ವಿಶ್ವೇ ಮರುತಶ್ಚಾಶ್ವಿನಾವಪಿ ।
ಗಂಧರ್ವಾ ರಾಕ್ಷಸಾ ಯಕ್ಷಾಃ ಸಕಿನ್ನರಮಹೋರಗಾಃ ॥ ೨೫ ॥
ಕೋಟಿಶಃ ಕೋಟಿಶಃ ಕೃತ್ವಾ ವೃಂದಂ ಚಿಹ್ನೋಪಲಕ್ಷಿತಂ ।
ವಿಶ್ರಾವಯಂತಃ ಸ್ವಾಂ ಕೀರ್ತಿಂ ಬಂದಿವೃಂದೈಃ ಪುರಸ್ಸರೈಃ ॥ ೨೬ ॥
ಚೇಲುರ್ದೈತ್ಯವಧೇ ದೃಪ್ತಾ ನಾನಾವರ್ಣಾಯುಧಧ್ವಜಾಃ ॥ ೨೭ ॥
ಶತಕ್ರತೋರಮರ ನಿಕಾಯಪಾಲಿತಾ
ಪತಾಕಿನೀ ಯಾನನಿನಾದನಾದಿತಾ ।
ಸಿತೋನ್ನತಧ್ವಜಪಟ ಕೋಟಿಮಂಡಿತಾ
ಬಭೂವ ಸಾ ದಿತಿಸುತ ಶೋಕವರ್ಧಿನೀ ॥ ೨೮ ॥
ಆಯಾಂತೀಂ ತಾಂ ವಿಲೋಕ್ಯಾಥ ಸುರಸೇನಾಂ ಗಜಾಸುರಃ ।
ಗಜರೂಪೀ ಮಹಾಂಶ್ಚೈವ ಸಂಹಾರಾಂಭೋದಿವಿಕ್ರಮಃ ॥ ೨೯ ॥
ಪರಶ್ವಧಾಯುಧೋ ದೈತ್ಯೋ ದಶನೌಷ್ಠಕಸಂಪುಟೈಃ ।
ಮಮರ್ದ ಚರಣೇ ದೇವಾಂಶ್ಚಿಕ್ಷೇಪಾನ್ಯಾನ್ಕರೇಣ ಚ ॥ ೩೦ ॥
ಪರಾನ್ಪರಶುನಾ ಜಘ್ನೇ ದೈತ್ಯೇಂದ್ರೋ ರೌದ್ರವಿಕ್ರಮಃ ।
ತಸ್ಯೈವಂ ನಿಘ್ನತಃ ಕ್ರುದ್ಧಾ ದೇವಗಂಧರ್ವಕಿನ್ನರಾಃ ॥ ೩೧ ॥

---

೨೫-೨೮. ಆದಿತ್ಯರು, ವಸುಗಳು, ವಿಶ್ವೇದೇವರು, ಮರುತ್ತುಗಳು, ಅಶ್ವಿನೀದೇವತೆಯರು, ಗಂಧರ್ವರು, ರಾಕ್ಷಸರು, ಯಕ್ಷರು, ಕಿನ್ನರರು, ಉರಗರು ಮುಂತಾದವರೆಲ್ಲರೂ ಕೋಟಿ ಕೋಟಿಯಾಗಿ ನೆರೆದು ಧ್ವಜ ಚಿಹ್ನೆಗಳೊಡನೆ ವ್ಯೂಹಗಳನ್ನು ಮಾಡಿಕೊಂಡು, ಮುಂದೆ ಹೋಗುತ್ತಲಿರುವ ವಂದಿಮಾಗಧರು ತಮ್ಮ ಬಿರುದಾವಳಿಗಳನ್ನು ಹೊಗಳುತ್ತಿರಲು, ಬಣ್ಣಬಣ್ಣವಾದ ಆಯುಧ ಗಳಿಂದಲೂ, ಧ್ವಜಗಳಿಂದಲೂ ಕೂಡಿದವರಾಗಿ ದರ್ಪದಿಂದ ರಾಕ್ಷಸರನ್ನು ನಿಗ್ರಹಿಸಲು ಹೊರಟರು. ಇಂತು ಇಂದ್ರನ ಸೈನ್ಯವು ದೇವತೆಗಳ ಸಮೂಹದಿಂದ ರಕ್ಷಿತವಾಗಿ, ರಥಗಳ ಘೋಷದಿಂದ ಕೂಡಿ, ಶುಭ್ರವಾದ ಅನೇಕ ಕೋಟಿ ಪತಾಕೆ ಗಳಿಂದ ಶೋಭಿಸುತ್ತ ರಾಕ್ಷಸರಿಗೆ ದುಃಖವನ್ನು ಹೆಚ್ಚುಗೊಳಿಸುವುದಾಯಿತು.

೨೯-೩೧. ಇಂತು ಮೇಲೆರಗುತ್ತಿರುವ ಸುರಸೈನ್ಯವನ್ನು ಕಂಡು ಗಜಾಸುರನು ಪರ್ವತಾಕಾರವಾದ ಆನೆಯ ರೂಪವನ್ನು ತಾಳಿದವನಾಗಿ, ವಿನಿಗ್ರಹವೆಂಬ ಸಮುದ್ರದಲ್ಲಿ ಓಲಾಡುತ್ತ, ಪರಶ್ವಧವೆಂಬ ಆಯುಧದೊಡನೆ ಹಲ್ಲುಗಳಿಂದ ತುಟಿಗಳನ್ನು ಕಚ್ಚುತ್ತ ತನ್ನ ಕಾಲುಗಳಿಂದ ಕೆಲವು ದೇವತೆಗಳನ್ನು ತುಳಿದು ಇತರರನ್ನು ಸೊಂಡಿಲಿನಿಂದ ಎತ್ತಿ ಬೀಸುತ್ತಿದ್ದನು. ಭಯಂಕರ ಪರಾ ಕ್ರಮಿಯಾದ ಆ ರಾಕ್ಷಸೇಶ್ವರನು ಕೆಲವರನ್ನು ಪರಶುವಿನಿಂದ (ಗಂಡುಗೊಡಲಿ ಯಿಂದ) ಕತ್ತರಿಸಿದನು. ಇಂತು ದೇವಸೈನ್ಯವನ್ನು ಕ್ಷಯಗೊಳಿಸುತ್ತಿರುವ

ಮುಮುಚುಃ ಸಂಹತಾಃ ಸರ್ವೇ ಚಿತ್ರಶಸ್ತ್ರಾಸ್ತ್ರಸಂಹತಿಂ ।
ಪರಶ್ವಧಾಂಶ್ಚ ಚಕ್ರಾಣಿ ಭಿಂಡಿಪಾಲಾನ್ನಮುದ್ಗರಾನ್ ॥ ೩೨ ॥
ಕುಂತಾನ್ಪ್ರಾಸಾನ್ಶರಾಂಸ್ತೀಕ್ಷ್ಣಾನ್ಮುದ್ಗರಾಂಶ್ಚಾಪಿ ದುಃಸಹಾನ್ ।
ತಾನ್ಸರ್ವಾನ್ಸೋಽಗ್ರಸದ್ದೈತ್ಯೋ ಯಥೋಕ್ಷಃ ಕವಲಾನಿವ ॥ ೩೩ ॥
ಕೋಪಸ್ಫುರಿತದಂಷ್ಟ್ರಾಗ್ರೈಃ ಕರಸ್ಫೋಟೇನ ನಾದಯನ್ ।
ಸುರಾನ್ನಿಘ್ನಂಶ್ಚಚಾರಾಜೌ ದುಃಪ್ರೇಕ್ಷ್ಯಃ ಸೋಽಥ ದಾನವಃ ॥ ೩೪ ॥
ಯಸ್ಮಿನ್ಯಸ್ಮಿನ್ನಿಪತತಿ ಸುರವೃಂದೇ ಗಜಾಸುರಃ ।
ತಸ್ಮಿನ್ಸ್ತಸ್ಮಿನ್ಮಹಾಶಬ್ದೋ ಹಾಹಾಕಾರೋ ವ್ಯಜಾಯತ ॥ ೩೫ ॥
ಅಥ ವಿದ್ರವಮಾನಂ ತದ್ಬಲಂ ಪ್ರೇಕ್ಷ್ಯ ಸಮಂತತಃ ।
ರುದ್ರಾಃ ಪರಸ್ಪರಂ ಪ್ರೋಚುರಹಂಕಾರೋತ್ಥಿತಾರ್ಚಿಷಃ ॥ ೩೬ ॥
ಭೋ ಭೋ ಗೃಹ್ಣತ ದೈತ್ಯೇಂದ್ರಂ ಭಿಂದತ್ಯೈನಂ ಮಹಾಬಲಾಃ ।
ಕರ್ಷತ್ಯೈನಂ ಶಿತೈಃ ಶೂಲೈರ್ಭಂಜತ್ಯೈನಂ ಹಿ ಮರ್ಮಸು ॥ ೩೭ ॥

---

ದೈತ್ಯನನ್ನು ಕಂಡು ಕೋಪಗೊಂಡ ದೇವತೆಗಳೂ, ಗಂಧರ್ವರೂ ಕಿನ್ನರರೂ ಒಟ್ಟುಗೂಡಿ ವಿವಿಧಶಸ್ತ್ರಗಳ ಸಮೂಹವನ್ನೂ ಅವನ ಮೇಲೆ ಸುರಿಸಿದರು.

೩೨. ಗಂಡುಗೊಡಲಿಗಳು, ಚಕ್ರಗಳು, ಈಟಿಗಳು, ಗದೆಗಳು, ಭರ್ಜಿಗಳು, ಪ್ರಾಸಗಳು, ತೀಕ್ಷ್ಣಗಳಾದ ಬಾಣಗಳು, ಸಹಿಸಲಸಾಧ್ಯವಾದ ಸುತ್ತಿಗೆಗಳು—ಮುಂತಾದ ಆಯುಧಗಳನ್ನು ದೇವತೆಗಳು ಪ್ರಯೋಗಿಸಿದರು.

೩೩–೩೪. ಮದಿಸಿದ ಸಲಗನು ಅನ್ನದ ತುತ್ತುಗಳನ್ನು ನುಂಗುವಂತೆ ಆ ಗಜಾಸುರನು ಆ ಅಸ್ತ್ರಗಳನ್ನೆಲ್ಲಾ ನಿರಾಯಾಸವಾಗಿ ಕಬಳಿಸಿದನು. ರೋಷದಿಂದ ದಂತಗಳ ಕೊನೆಗಳನ್ನಾಡಿಸುತ್ತ, ಸೊಂಡಿಲನ್ನು ನೆಲಕ್ಕೆ ಅಪ್ಪಳಿಸಿ ಧ್ವನಿಗೈಯುತ್ತ ದೇವತೆಗಳನ್ನು ಸದೆಬಡಿಯುತ್ತ ಆ ರಾಕ್ಷಸನು ನೋಡಲಾರದವನಾಗಿ ರಣರಂಗದಲ್ಲೆಲ್ಲ ತಾನೇ ತಾನಾಗಿ ಸಂಚರಿಸುತ್ತಿದ್ದನು.

೩೫. ಗಜಾಸುರನು ಯಾವಯಾವ ದೇವಸೈನ್ಯದ ಮೇಲೆರಗಿದನೊ, ತಕ್ಷಣದಲ್ಲಿಯೇ ಆ ಸೈನ್ಯದಲ್ಲೆಲ್ಲ ಹಾಹಾಕಾರವೂ ಯುದ್ಧಶಬ್ದವೂ ಬಹಳವಾಗಿ ಉಂಟಾದುವು.

೩೬. ಆಗ ದಿಕ್ಕೆಟ್ಟು ಓಡುತ್ತಿದ್ದ ದೇವತೆಗಳ ಸೈನ್ಯವನ್ನು ಕಂಡು ಅಹಂಕಾರದಿಂದುಂಟಾದ ತೇಜಸ್ಸಿನಿಂದ ಕೂಡಿದ ಏಕಾದಶರುದ್ರರು ಎಲ್ಲಾ ಕಡೆಗಳಿಂದಲೂ ನುಗ್ಗಿ ತಮ್ಮತಮ್ಮಲ್ಲಿಯೇ ಕೂಗಿಕೊಳ್ಳತೊಡಗಿದರು.

೩೭. 'ಈ ರಾಕ್ಷಸೇಂದ್ರನನ್ನು ಹಿಡಿಯಿರಿ; ಮಹಾಬಲಿಷ್ಠರಾದ ನೀವು ಇವನ ಶರೀರವನ್ನು ಭೇದಿಸಿರಿ; ತೀಕ್ಷ್ಣಗಳಾದ ಶೂಲಗಳಿಂದ ಇವನನ್ನು ಸೆಳೆಯಿರಿ; ಮರ್ಮಸ್ಥಳಗಳಲ್ಲಿ ಘಾತಿಸಿರಿ.

**ಕಪಾಲೀ ವಾಕ್ಯಮಾಕರ್ಣ್ಯ ಶೂಲಂ ಸಿತಶಿತಂ ಮುಖೇ ।**
**ಸಂಮಾರ್ಜ್ಯ ವಾಮಹಸ್ತೇನ ಸಂರಂಭಾದ್ವಿವೃತೇಕ್ಷಣಃ ॥ ೩೮ ॥**
**ಪ್ರೋತ್ಫುಲ್ಲಾರುಣನೀಲಾಬ್ಜಸಂಹತಿಃ ಸರ್ವತೋ ದಿಶಃ ।**
**ಅಥಾಗಾದ್ಭ್ರುಕುಟೀವಕ್ತ್ರೋ ದೈತ್ಯೇಂದ್ರಾಭಿಮುಖೋ ರಣೇ ॥ ೩೯ ॥**
**ದೃಢೇನ ಮುಷ್ಟಿಬಂಧೇನ ಶೂಲಂ ವಿಷ್ಟಭ್ಯ ನಿರ್ಮಲಃ ।**
**ಜಘಾನ ಕುಂಭದೇಶೇ ತು ಕಪಾಲೀ ಗಜದಾನವಂ ॥ ೪೦ ॥**
**ತತೋ ದಶಾಪಿ ತೇ ರುದ್ರಾ ನಿರ್ಮಲಾಯೋಮಯೈ ರಣೇ ।**
**ಜಘ್ನುಃ ಶೂಲೈಸ್ತು ದೈತ್ಯೇಂದ್ರಂ ಶೈಲವರ್ಷಾರ್ಣಮಾಹವೇ ॥ ೪೧ ॥**
**ಸುಸ್ರಾವ ಶೋಣಿತಂ ಪಶ್ಚಾತ್ಸರ್ವಸ್ರೋತಸ್ಸು ತಸ್ಯ ವೈ ।**
**ಶೂಲರಕ್ತೇನ ರುದ್ರಸ್ಯ ಶುಶುಭೇ ಗಜದಾನವಃ ॥ ೪೨ ॥**
**ಪ್ರೋತ್ಫುಲ್ಲಾಮಲನೀಲಾಬ್ಜಂ ಶರದೀವಾಮಲಂ ಸರಃ ।**
**ಭಸ್ಮಶುಭ್ರತನುಚ್ಛಾಯೈ ರುದ್ರೈರ್ಹಂಸೈರಿವಾವೃತಂ ॥ ೪೩ ॥**

---

೩೮–೩೯. ಈ ಮಾತುಗಳನ್ನು ಕೇಳಿ ಕಪಾಲಿಯು ನಿರ್ಮಲವೂ ತೀಕ್ಷ್ಣವೂ ಆದ ಶೂಲದ ಕೊನೆಯನ್ನು ಎಡಗೈಯಿಂದ ಸವರುತ್ತ, ಸಂಭ್ರಮದಿಂದ ಬಿಟ್ಟ ಕಣ್ಣುಗಳು ಅರಳಿದ ಕೆಂದಾವರೆಗಳಂತೆ ಹೊಳೆಯುತ್ತಿರಲು, ಸಕಲ ದಿಕ್ಕುಗಳನ್ನೂ ನೋಡುತ್ತಿರುವವನಾಗಿ ಹುಬ್ಬುಗಳನ್ನು ಗಂಟಿಕ್ಕಿದ ಮುಖದಿಂದ ಕೂಡಿ ರಾಕ್ಷಸೇಂದ್ರನೆದುರಾಗಿ ರಣರಂಗದಲ್ಲಿ ಬಂದು ನಿಂತನು.

೪೦. ಪರಿಶುದ್ಧನಾದ ಆ ಕಪಾಲಿಯು ದೃಢವಾದ ಮುಷ್ಟಿಯಿಂದ ಶೂಲವನ್ನು ತಿರುಗಿಸುತ್ತ ಆ ಗಜಾಸುರನನ್ನು ಕುಂಭಪ್ರದೇಶದಲ್ಲಿ ಹೊಡೆದನು.

೪೧. ಆ ರಾಕ್ಷಸನಾದರೋ ಈ ರುದ್ರನಮೇಲೆ ಕಲ್ಲುಗಳ ಮಳೆಯನ್ನು ಸುರಿಸುತ್ತಿರಲು ಉಳಿದ ಹತ್ತುಮಂದಿ ರುದ್ರರೂ ಶುದ್ಧಗಳೂ ಕಬ್ಬಿಣದಲ್ಲಿ ಮಾಡಿದವುಗಳೂ ಆದ ಶೂಲಗಳಿಂದ ಯುದ್ಧಸನ್ನದ್ಧನಾದ ರಾಕ್ಷಸೇಶ್ವರನನ್ನು ಹೊಡೆದರು.

೪೨. ಇದರಿಂದ ದೈತ್ಯನ ಮೈಯಲ್ಲೆಲ್ಲಾ ರಕ್ತವು ಸ್ರವಿಸುವಂತಾಯಿತು. ಇಂತು ರುದ್ರನ ಶೂಲದಿಂದುದ್ಭವಿಸಿದ ರಕ್ತದಿಂದ ಕೂಡಿದ ಶರೀರವುಳ್ಳ ರಾಕ್ಷಸನು ಶರತ್ಕಾಲದಲ್ಲಿ ಅರಳಿದ ಕಮಲಗಳಿಂದ ಶೋಭಿಸುವ ಗಂಭೀರವಾದ ಸರೋವರದಂತೆ ಕಾಣುತ್ತಿದ್ದನು.

೪೩–೪೪. ಭಸ್ಮೋದ್ಧೂಳಿತಗಾತ್ರರಾದ ರುದ್ರರೂ ಕೂಡ ಸರೋವರದ ಸುತ್ತಲೂ ನೆರೆದಿರುವ ಹಂಸಗಳಂತೆ ತೋರುತ್ತಿದ್ದರು. ಆ ಗಜಾಸುರನಾದರೊ ಕಿವಿಗಳನ್ನು ಬೀಸುತ್ತ ಓಡಿಬಂದು ಕ್ರುದ್ಧನಾದ ಕಪಾಲಿಯನ್ನೂ ಭವನನ್ನೂ ನಾಭಿಪ್ರದೇಶದಲ್ಲಿ ತನ್ನ ದಂತಗಳಿಂದ ತಿವಿದನು.

ಕೃದ್ಧಂ ಕಪಾಲಿನಂ ದೈತ್ಯಃ ಪ್ರಚಲತ್ಕರ್ಣಪಲ್ಲವಃ ।
ಭವಂ ಚ ದಂತೈರ್ಬಿಭಿದೇ ನಾಭಿದೇಶೇ ಗಜಾಸುರಃ ॥ ೪೪ ॥
ದೃಷ್ಟ್ವಾಽಸುರಕ್ತಂ ರುದ್ರಾಭ್ಯಾಂ ನವರುದ್ರಾಸ್ತತೋ ದ್ರುತಂ ।
ವಿವ್ಯಧುರ್ವಿಶಿಖೈಃ ಶೂಲೈಃ ಶರೀರಮಮರದ್ವಿಷಃ ॥ ೪೫ ॥
ತತಃ ಕಪಾಲಿನಂ ತ್ಯಕ್ತ್ವಾ ಭವಂ ಚಾಸುರಪುಂಗವಃ ।
ವೇಗೇನ ಕುಪಿತೋ ದೈತ್ಯೋ ನವರುದ್ರಾನುಪಾದ್ರವತ್ ।
ಮಮರ್ದ ಚರಣಾಘಾತೈರ್ದಂತೈಶ್ಚಾಪಿ ಕರೇಣ ಚ ॥ ೪೬ ॥
ತತೋಽಸೌ ಶೂಲಯುದ್ಧೇನ ಶ್ರಮಮಾಸಾದಿತೋ ಯದಾ ।
ತದಾ ಕಪಾಲೀ ಜಗ್ರಾಹ ಕರಮಸ್ಯಾಮರದ್ವಿಷಃ ॥ ೪೭ ॥
ಭ್ರಾಮಯಾಮಾಸ ಚಾತೀವ ವೇಗೇನ ಚ ಗಜಾಸುರಂ ।
ದೃಷ್ಟ್ವಾ ಶ್ರಮಾತುರಂ ದೈತ್ಯಂ ಕಿಂಚಿಚ್ಛ್ವಸಿತ ಜೀವಿತಂ ॥ ೪೮ ॥
ನಿರುತ್ಸಾಹಂ ರಣೇ ತಸ್ಮಿನ್ಗತಯುದ್ಧೋತ್ಸವೋಽಭವತ್ ।
ತತೋ ಭ್ರಮತ ಏವಾಸ್ಯ ಚರ್ಮ ಉತ್ಕೃತ್ಯ ಭೈರವಂ ॥ ೪೯ ॥

೪೫. ಇಂತು ಇಬ್ಬರು ರುದ್ರರೊಡನೆ ಯುದ್ಧಾಸಕ್ತನಾಗಿದ್ದ ರಾಕ್ಷಸನನ್ನು ಕಂಡು ಮಿಕ್ಕ ಒಂಭತ್ತು ಜನರೂ ಶೀಘ್ರವಾಗಿ ಆ ದೇವಶತ್ರುವಿನ ಶರೀರವನ್ನು ಬಾಣಗಳಿಂದಲೂ ಶೂಲಗಳಿಂದಲೂ ವ್ಯಥೆಗೊಳಿಸಿದರು.

೪೬. ಇದನ್ನು ಕಂಡು ಅಸುರಶ್ರೇಷ್ಠನಾದ ಗಜನು ಅವರಿಬ್ಬರನ್ನೂ ಬಿಟ್ಟು ಕೋಪದಿಂದಲೂ, ವೇಗದಿಂದಲೂ ಮಿಕ್ಕವರ ಕಡೆಗೆ ಓಡಿಬಂದನು. ಮತ್ತು ಕಾಲುಗಳಿಂದಲೂ, ದಂತಗಳಿಂದಲೂ, ಸೊಂಡಿಲಿನಿಂದಲೂ ಅವರನ್ನು ಬಹಳವಾಗಿ ಮರ್ದಿಸಿದನು.

೪೭. ಆ ಕಪಾಲಿಯು ಇಂತು ಶೂಲವನ್ನು ಕೈಯಲ್ಲಿ ಹಿಡಿದು ಸುರದ್ವೇಷಿಯಾದ ಆ ಗಜಾಸುರನು ಅತ್ಯಂತ ಶ್ರಮಗೊಂಡ ಸಮಯವನ್ನರಿತು ಅವನ ಸೊಂಡಿಲನ್ನು ಬಿಗಿಯಾಗಿ ಹಿಡಿದುಕೊಂಡನು.

೪೮–೪೯. ಆಗಲಾ ಗಜಾಸುರನನ್ನು ಅವನು ಬಹಳ ವೇಗದಿಂದ ಆಕಾಶದಲ್ಲಿ ತಿರುಗಿಸಿದನು. ಈ ಆಯಾಸದಿಂದ ಆತುರಗೊಂಡವನೂ ಪ್ರಾಣವಾಯುಗಳು ಸ್ಖಲಿತಗಳಾಗಿರುವವನೂ, ಯುದ್ಧದಲ್ಲಿ ಉತ್ಸಾಹಹೀನನಾದವನೂ ಆದ ರಾಕ್ಷಸನನ್ನು ಕಂಡು ಆ ಕಪಾಲಿಯು ತಾನೂ ಯುದ್ಧೋದ್ಯಮವನ್ನು ತ್ಯಜಿಸಿ ಸುಮ್ಮನಾದನು. ಇಂತು ಆಕಾಶದಲ್ಲಿ ತಿರುಗಿಸುತ್ತಿದ್ದಂತೆಯೇ ಆ ರುದ್ರ ಕಪಾಲಿಯು ಗಜಾಸುರನ ಭೀಕರವಾದ ಚರ್ಮವನ್ನು ಸುಲಿದು ಸರ್ವತೋಮುಖವಾಗಿ ರಕ್ತಪ್ರವಾಹಗಳನ್ನೆಡೆಬಿಡದೆ ಸುರಿಸುತ್ತಿರುವ ಆ ಚರ್ಮವನ್ನೇ ಮೈಗೆ ಸುತ್ತಿಕೊಂಡನು.

ಸ್ರವತ್ಸರ್ವಾಂಗರಕ್ತೌಘಂ ಚಕಾರಾಂಬರಮಾತ್ಮನಃ ।
ತುಷ್ಟುವುಸ್ತಂ ತದಾ ದೇವಾ ಬಹುಧಾ ಬಹುಭಿಃ ಸ್ತವೈಃ ।
ಊಚುಶ್ಚೈನಂ ಚ ಯೋ ಹನ್ಯಾತ್ಸನ್ಮ್ರಿಯೇತ ತತಸ್ತ್ವಸೌ ॥ ೫೦ ॥
ದೃಷ್ಟ್ವಾ ಕಪಾಲಿನೋ ರೂಪಂ ಗಜಚರ್ಮಾಂಬರಾವೃತಂ ।
ವಿತ್ರೇಸುರ್ದುದ್ರುವುರ್ಜಘ್ನುರ್ನಿಪೇತುಶ್ಚ ಸಹಸ್ರಶಃ ॥ ೫೧ ॥
ಏವಂ ವಿಲುಲಿತೇ ತಸ್ಮಿನ್ದಾನವೇಂದ್ರಮಹಾಬಲೇ ॥ ೫೨ ॥
ಗಜಂ ಮತ್ತಮಥಾರುಹ್ಯ ಶತದುಂದುಭಿನಾದಿತಂ ।
ನಿಮಿರಭ್ಯಪತತ್ತೂರ್ಣಂ ಸುರಸೈನ್ಯಾನಿ ಲೋಡಯನ್ ॥ ೫೩ ॥
ಯಾಂ ಯಾಂ ನಿಮಿಗಜೋ ಯಾತಿ ದಿಶಂ ತಾಂ ತಾಂ ಸವಾಹನಾಃ ।
ದುದ್ರುವುಶ್ಚುಕ್ರುಶುರ್ದೇವಾ ಭಯೇನಾಕಂಪಿತಾ ಮುಹುಃ ॥ ೫೪ ॥
ಗಂಧೇನ ಸುರಮಾತಂಗಾ ದುದ್ರುವುಸ್ತಸ್ಯ ಹಸ್ತಿನಃ ।
ಪಲಾಯಿತೇಷು ಸೈನ್ಯೇಷು ಸುರಾಣಾಂ ಪಾಕಶಾಸನಃ ॥ ೫೫ ॥

---

೫೦. ಆಗ ದೇವತೆಗಳು ಅನೇಕ ಸ್ತೋತ್ರಗಳಿಂದ ಅನೇಕ ಪ್ರಕಾರವಾಗಿ ಆ ಕಪಾಲಿಯನ್ನು ಸ್ತೋತ್ರಮಾಡಿ "ಈ ರಾಕ್ಷಸನನ್ನು ಸಾಕ್ಷಾತ್ತಾಗಿ ಯಾವನು ಕೊಲ್ಲುವನೋ ಅವನೇ ಸಾಯುವನು. ಈ ರೀತಿ ಇವನಿಗೆ ವರಬಲವಿರುವುದರಿಂದಲೇ ಯಾರ ಲಕ್ಷ್ಯವೂ ಇಲ್ಲದೆ ಇಷ್ಟು ದರ್ಪದಿಂದಿರುವನು" ಎಂದು ಹೇಳಿದರು.

೫೧. ಅದೇ ಸಮಯದಲ್ಲಿಯೇ ಗಜಾಸುರನ ಚರ್ಮದಿಂದ ವೇಷ್ಟಿತವಾದ ಕಪಾಲಿಯ ಭಯಂಕರವಾದ ರೂಪವನ್ನು ಕಂಡು ಸಾವಿರಾರು ರಾಕ್ಷಸರು ನಡುಗಿದರು, ಓಡಿದರು, ರೋಷದಿಂದ ಶತ್ರುಗಳನ್ನು ಹೊಡೆದರು, ಕೆಲವರು ರಣಭೂಮಿಯಲ್ಲಿ ಬಿದ್ದರು.

೫೨–೫೩. ಈರೀತಿಯಾಗಿ ತಾರಕಾಸುರನ ಮಹಾ ಸೈನ್ಯವು ಛಿನ್ನಭಿನ್ನವಾಗಲು ನಿಮಿಯೆಂಬ ಸೇನಾಪತಿಯು ನೂರು ದುಂದುಭಿಗಳಂತೆ ಘೋಷ ಮಾಡತಕ್ಕ ಮತ್ತಗಜವನ್ನು ಏರಿದವನಾಗಿ ದೇವಸೈನ್ಯವನ್ನು ಕಲಕುತ್ತ ರಣರಂಗಕ್ಕೆ ಇಳಿದನು.

೫೪. ನಿಮಿಯ ಆನೆಯು ಯಾವ ಯಾವ ದಿಕ್ಕಿಗೆ ಓಡಿತೋ, ಆಯಾ ದಿಕ್ಕುಗಳಲ್ಲೆಲ್ಲ ದೇವತೆಗಳು ವಾಹನ ಸಮೇತರಾಗಿ ದಿಕ್ಕಾಪಾಲಾಗಿ ಓಡುತ್ತ ಭಯದಿಂದ ಕಿರಿಚಿಕೊಳ್ಳುತ್ತಿದ್ದರು.

೫೫. ಆ ನಿಮಿಗಜದ ವಾಸನೆಯಿಂದಲೇ ದೇವತೆಗಳ ಆನೆಗಳು ಓಡತೊಡಗಿದವು. ಸುರಸೈನ್ಯವೆಲ್ಲವೂ ಚೆದರಿಹೋಗಲು ಮಹೇಂದ್ರನು ಮಾತ್ರ ವಿಷ್ಣು ಮತ್ತು ಅಷ್ಟದಿಕ್ಪಾಲಕರೊಡನೆ ರಣರಂಗದಲ್ಲಿ ನಿಂತನು.

ತಸ್ಥೌ ದಿಕ್ಪಾಲಕೈಃ ಸಾರ್ಧಮಷ್ಟಭಿಃ ಕೇಶವೇನ ಚ ।
ಸಂಪ್ರಾಪ್ತಸ್ತಸ್ಯ ಮಾತಂಗೋ ಯಾವಚ್ಛಕ್ರಗಜಂ ಪ್ರತಿ । ॥ ೫೬ ॥
ತಾವಚ್ಛಕ್ರಗಜೋ ಭೀತೋ ಮುಕ್ತ್ವಾ ನಾದಂ ಸುಭೈರವಂ ।
ಧ್ರಿಯಮಾಣೋಽಪಿ ಯತ್ನೇನ ಚಕೋರ ಇವ ತಿಷ್ಠತಿ ॥ ೫೭ ॥
ಪಲಾಯತಿ ಗಜೇ ತಸ್ಮಿನ್ನಾರೂಢಃ ಪಾಕಶಾಸನಃ ।
ವಿಪರೀತಮುಖಂ ಯುದ್ಧಂ ದಾನವೇಂದ್ರೇಣ ಸೋಽಕರೋತ್ ॥ ೫೮ ॥
ಶತಕ್ರತುಸ್ತು ಶೂಲೇನ ನಿಮಿಂ ವಕ್ಷಸ್ಯತಾಡಯತ್ ।
ಗದಯಾ ದಂತಿನಂ ತಸ್ಯ ಗಲ್ಲದೇಶೇಽಹನದ್ಧೃತಂ ॥ ೫೯ ॥
ತಂ ಪ್ರಹಾರಮಚಿಂತ್ಯೈವ ನಿಮಿರ್ನಿರ್ಭಯಪೌರುಷಃ ।
ಐರಾವತಂ ಕಟೀದೇಶೇ ಮುದ್ಗರೇಣಾಭ್ಯತಾಡಯತ್ ॥ ೬೦ ॥
ಸ ಹತೋ ಮುದ್ಗರೇಣಾಥ ಶಕ್ರಕುಂಜರ ಆಹವೇ ।
ಜಗಾಮ ಪಶ್ಚಾತ್ಪದ್ಭ್ಯಾಂ ಚ ಪೃಥಿವೀಂ ಭೂಧರಾಕೃತಿಃ ॥ ೬೧ ॥
ಲಾಘವಾತ್ಸಿಪ್ರಮುತ್ಥಾಯ ತತೋಽಮರ ಮಹಾಗಜಃ ।
ರಣಾದಪಸಸರ್ಪಾಥ ಭೀಷಿತೋ ನಿಮಿಹಸ್ತಿನಾ ॥ ೬೨ ॥

---

೫೬–೫೭. ಆ ನಿಮಿಯ ಗಜವು ಎದುರಿನಲ್ಲಿ ಪ್ರಾಪ್ತವಾದೊಡನೆಯೆ ಇಂದ್ರನ ವಾಹನವಾದ ಐರಾವತವು ಭಯಗೊಂಡು ಭಯಂಕರವಾಗಿ ಘೀಳಿಡುತ್ತ ಪ್ರಯತ್ನದಿಂದ ನಿಗ್ರಹಿಸಿ ತಡೆದರೂ ಕೂಡ ವಶವಾಗದೆ ಸೆಟೆದು ಹಿಂದು ಮುಂದಾಗಿ ನಿಂತಿತು.

೫೮. ಇಂತು ಗಜೋತ್ತಮವಾದ ಐರಾವತವು ಆ ಸಮರದಲ್ಲಿ ನಿಲ್ಲದೆ ಪಲಾಯನವನ್ನು ಮಾಡಲು, ಅದರ ಮೇಲೇರಿ ಮಹೇಂದ್ರನು ಅದರ ಬಾಲದ ಕಡೆಗೆ ಮುಖವನ್ನು ಮಾಡಿಕೊಂಡು ಆ ರಾಕ್ಷಸೇಂದ್ರನೊಡನೆ ಯುದ್ಧವನ್ನು ಮಾಡತೊಡಗಿದನು.

೫೯. ಆಗಲಾ ಇಂದ್ರನು ತನ್ನ ಶೂಲದಿಂದ ನಿಮಿಯನ್ನು ಎದೆಯಲ್ಲಿ ಪ್ರಹಾರ ಮಾಡಿ ಅವನ ಆನೆಯನ್ನು ಕಪೋಲ ಪ್ರದೇಶದಲ್ಲಿ ಗದೆಯಿಂದ ಹೊಡೆದನು.

೬೦. ಆದರೆ ಭಯವೆಂಬುದನ್ನೇ ಅರಿಯದ ಪೌರುಷವಂತನಾದ ನಿಮಿಯು ಆ ಪ್ರಹಾರವನ್ನು ಲೆಕ್ಕಿಸದೆಯೇ ಇಂದ್ರನ ಐರಾವತವನ್ನು ಗದೆಯಿಂದ ನಡುವಿಗೆ ಬಲವಾಗಿ ಹೊಡೆದನು.

೬೧. ಆ ಗದೆಯ ಪೆಟ್ಟನ್ನು ತಡೆಯಲಾರದೆ ಐರಾವತವು ಯುದ್ಧರಂಗದಲ್ಲಿ ಹಿಂಗಾಲುಗಳನ್ನು ಭೂಮಿಯಲ್ಲಿ ಎಳೆದಾಡುತ್ತ ಪರ್ವತಾಕಾರವಾಗಿ ಬಿದ್ದಿತು.

೬೨. ಬಳಿಕ ವೇಗವಾಗಿ ಮತ್ತೆ ಮೇಲಕ್ಕೆದ್ದು ನಿಮಿಯ ಗಜದಿಂದ ಭಯಗೊಳಿಸಲ್ಪಟ್ಟು ಯುದ್ಧದಿಂದ ಓಡಿಹೋಯಿತು.

ತತೋ ವಾಯುರ್ವವೌ ರೂಕ್ಷೋ ಬಹುಶರ್ಕರಪಾಂಸುಲಃ ।
ಸಮ್ಮುಖೋ ನಿಮಿಮಾತಂಗೋಽಕಂಪನೋಽಚಲಕಂಪನಃ ।
ಸ್ರುತರಕ್ತೋ ಬಭೌ ಶೈಲೋ ಘನಧಾತುಹ್ರದೋ ಯಥಾ ॥ ೬೩ ॥
ಧನೇಶೋಽಪಿ ಗದಾಂ ಗುರ್ವೀಂ ತಸ್ಯ ದಾನವಹಸ್ತಿನಃ ।
ಮುಮೋಚ ವೇಗಾನ್ನ್ಯಪತತ್ಸಾ ಗದಾ ತಸ್ಯ ಮೂರ್ಧನಿ ॥ ೬೪ ॥
ಗಜೋ ಗದಾನಿಪಾತೇನ ಸ ತೇನ ಪರಿಮೂರ್ಛಿತಃ ।
ದಂತೈರ್ಭಿತ್ತ್ವಾ ಧರಾಂ ವೇಗಾತ್ಪಪಾತಾಚಲ ಸನ್ನಿಭಃ ॥ ೬೫ ॥
ಪತಿತೇ ಚ ಗಜೇ ತಸ್ಮಿನ್ಸಿಂಹನಾದೋ ಮಹಾನಭೂತ್ ।
ಸರ್ವತಃ ಸುರಸೈನ್ಯಾನಾಂ ಗಜಬೃಂಹಿತಬೃಂಹಿತಃ ।
ಹೇಷಾರವೇಣ ಚಾಶ್ವಾನಾಂ ರಣಾಸ್ಫೋಟೈಶ್ಚ ಧನ್ವಿನಾಂ ॥ ೬೬ ॥
ಗಜಂ ತಂ ನಿಹತಂ ದೃಷ್ಟ್ವಾ ನಿಮಿಂ ಚಾಪಿ ಪರಾಙ್ಮುಖಂ ॥ ೬೭ ॥
ಸುರಾಣಾಂ ಸಿಂಹನಾದಂ ಚ ಸನ್ನಾದಿತದಿಗಂತರಂ ।
ಜಂಭೋ ಜಜ್ವಾಲ ಕೋಪೇನ ಸಂದೀಪ್ತ ಇವ ಪಾವಕಃ ॥ ೬೮ ॥

---

೬೩. ಆಗ ತೀಕ್ಷ್ಣವಾದುದೂ, ಮರಳು, ಧೂಳಿಗಳಿಂದ ತುಂಬಿದುದೂ ಆದ ಬಿರುಗಾಳಿಯು ಬೀಸತೊಡಗಿತು. ಆದರೂ ಎದುರಿನಲ್ಲಿ ನಿಮಿಯ ಆನೆಯು ಅಲ್ಲಾಡದಂತೆ ಪರ್ವತಪ್ರಾಯವಾಗಿ ನಿಂತು ಮೈಯಿಂದ ರಕ್ತಧಾರೆಗಳನ್ನು ಸುರಿಸುತ್ತ ಧಾತುಗಳಿಂದ ಕೂಡಿದ ಪರ್ವತದಂತೆ ಶೋಭಿಸುತ್ತಿದ್ದಿತು.

೬೪. ಅದೇ ಸಮಯದಲ್ಲಿ ಕುಬೇರನೂ ತನ್ನ ಭಾರವಾದ ಗದೆಯನ್ನು ಆ ರಾಕ್ಷಸನ ಆನೆಗೆ ಗುರಿಯಿಟ್ಟು ಹೊಡೆಯಲು ಅದು ವೇಗದಿಂದ ಬಂದು ಆನೆಯ ಹಣೆಗೆ ತಗುಲಿತು.

೬೫. ಗದೆಯ ವೇಗದಿಂದಲೂ ಭಾರದಿಂದಲೂ ಆ ಗಜವು ಮೂರ್ಛೆಗೊಂಡು ದಂತಗಳಿಂದ ಭೂಮಿಯನ್ನು ಬಗಿಯುತ್ತ ಪರ್ವತದಂತೆ ನೆಲದಲ್ಲಿ ಬಿದ್ದಿತು.

೬೬. ಇಂತು ಆ ರಾಕ್ಷಸನ ಗಜವು ನೆಲಕ್ಕೆ ಬೀಳಲು ದೇವತೆಗಳ ಸೈನ್ಯದಲ್ಲಿ ಆನೆಗಳ ಘೀಂಕಾರದಿಂದಲೂ, ಕುದುರೆಗಳ ಕೆನೆಯುವಿಕೆಯಿಂದಲೂ, ಯೋಧರ ಬಾಹುಗಳ ಆಸ್ಫೋಟನೆಗಳಿಂದಲೂ ಕೂಡಿದ ಸಿಂಹನಾದವು ಎಲ್ಲೆಲ್ಲಿಯೂ ಉಂಟಾಯಿತು.

೬೭–೬೮. ಈ ರೀತಿ ಗಜವು ಮಡಿದುದನ್ನೂ, ನಿಮಿಯು ಪರಾಜಿತನಾದುದನ್ನೂ, ದಿಕ್ಕುವಿದಿಕ್ಕುಗಳಿಗೂ ಪ್ರತಿಧ್ವನಿಸುವಂತೆ ದೇವತೆಗಳು ಜಯಘೋಷವನ್ನು ಮಾಡುತ್ತಿರುವುದನ್ನೂ ಕಂಡು ಜಂಭಾಸುರನು ಪ್ರಜ್ವಲಿಸುವ ಬೆಂಕಿಯಂತೆ ಕೋಪದಿಂದ ಮೈಯುರಿದನು.

ತತಃ ಸ ಕೋಪರಕ್ತಾಕ್ಷೋ ಧನುಷ್ಯಾರೋಪ್ಯ ಸಾಯಕಂ ।
ತಿಷ್ಠೇತಿ ಚಾಬ್ರವೀತ್ತಾರಂ ಸಾರಥಿಂ ಚಾಪ್ಯಸಂದಯತ್ ॥ ೧೯ ॥
ತಮಾಯಾಂತಮಭಿಪ್ರೇಕ್ಷ್ಯ ಧನುಷ್ಯಾಹಿತಸಾಯಕಂ ।
ಶತಕ್ರತುರದೀನಾತ್ಮಾ ದೃಢಮಾಧತ್ತ ಕಾರ್ಮುಕಂ ॥ ೨೦ ॥
ಬಾಣಂ ಚ ತೈಲಧೌತಾಗ್ರಮರ್ಧಚಂದ್ರಮಜಿಹ್ಮಗಂ ॥ ೨೦ ॥
ತೇನಾಸ್ಯ ಸಶರಂ ಚಾಪಂ ಚಿಚ್ಛೇದ ಬಲವೃತ್ರಹಾ ।
ಅಪಾಸ್ಯ ತದ್ಧನುಶ್ಛಿನ್ನಂ ಜಂಭೋ ದಾನವನಂದನಃ ॥ ೨೩ ॥
ಅನ್ಯತ್ಕಾರ್ಮುಕಮಾದಾಯ ವೇಗವದ್ಭಾರಸಾಧನಂ ।
ಶರಾಂಶ್ಚಾಶೀವಿಷಾಕಾರಾಂಸ್ತೈಲಧೌತಾನಜಿಹ್ಮಗಾನ್ ॥ ೨೩ ॥
ಶಕ್ರಂ ವಿವ್ಯಾಧ ದಶಭಿರ್ಜತ್ರುದೇಶೇ ಚ ಪತ್ರಿಭಿಃ ।
ಹೃದಯೇ ಚ ತ್ರಿಭಿಶ್ಚೈವ ದ್ವಾಭ್ಯಾಂ ಚ ಸ್ಕಂಧಯೋರ್ದ್ವಯೋಃ ॥
ಶಕ್ರೋಽಪಿ ದಾನವೇಂದ್ರಾಯ ಬಾಣಜಾಲಮುದೀರಯನ್ ।
ಅಪ್ರಾಪ್ತಾನ್ದಾನವೇಂದ್ರಸ್ತು ಶರಾಂಶ್ಚಿಚ್ಛೇದ ಚೇರಿತಾನ್ ॥ ೨೫ ॥

---

೧೯. ಬಳಿಕ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಧನುಸ್ಸಿನಲ್ಲಿ ಬಾಣವನ್ನು ಹೂಡಿ "ನಿಲ್ಲು ನಿಲ್ಲು" ಎಂದು ಕೂಗುತ್ತ ರಥವನ್ನು ವೇಗವಾಗಿ ಬಿಡುವಂತೆ ಸಾರಥಿಯನ್ನು ಒತ್ತಾಯಪಡಿಸಿದನು.

೨೦–೨೧. ಇಂತು ಸಜ್ಜೀಕೃತವಾದ ಧನುಸ್ಸಿನೊಡನೆ ಎದುರಿಗೆ ಬರುತ್ತಿರುವ ರಾಕ್ಷಸನನ್ನು ಕಂಡು ಮಹೇಂದ್ರನು ಧೈರ್ಯಗೆಡದೆ ದೃಢವಾದ ಧನುಸ್ಸನ್ನೂ ತೈಲದಲ್ಲಿ ಅದ್ದಿದ ಕೊನೆಯುಳ್ಳದುದೂ ಅಮೋಘವಾದುದೂ ಆದ ಅರ್ಧ ಚಂದ್ರನಂತಿರುವ ಬಾಣವನ್ನೂ ಕೈಯಲ್ಲಿ ತೆಗೆದುಕೊಂಡನು.

೨೨–೨೫. ಬಲ ಮತ್ತು ವೃತ್ರಾಸುರರನ್ನು ನಿಗ್ರಹಿಸಿದ ಮಹೇಂದ್ರನು ತನ್ನ ಬಾಣದಿಂದ ರಾಕ್ಷಸೋತ್ತಮನಾದ ಜಂಭನ ಧನುಸ್ಸನ್ನು ಕಡಿದುಹಾಕಲು, ಆ ದೈತ್ಯನು ಅದನ್ನು ಬಿಸುಟು ಮತ್ತೊಂದನ್ನು ಕೈಯಲ್ಲಿ ಹಿಡಿದು ವೇಗವೂ ಮಹತ್ತರ ಬಾಣಗಳಿಗೆ ತಕ್ಕುದೂ ಆದ ಆ ಧನುಸ್ಸಿನಿಂದ ಆಶೀವಿಷದಂತಿರುವುವೂ, ತೈಲಾಕ್ತಗಳೂ, ಗುರಿತಪ್ಪದಿರುವುಗಳೂ ಆದ ಬಾಣಗಳನ್ನು ಬಿಡುತ್ತ ಇಂದ್ರನಿಗೆ ಹತ್ತು ಬಾಣಗಳಿಂದ ಭುಜಗಳ ಮೂಳೆಗಳಲ್ಲಿಯೂ. ಮೂರು ಬಾಣಗಳಿಂದ ಹೃದಯ ಪ್ರದೇಶದಲ್ಲಿಯೂ, ಎರಡು ಬಾಣಗಳಿಂದ ಎರಡು ತೋಳುಗಳಲ್ಲಿಯೂ ಹೊಡೆದನು. ಇಂದ್ರನೂ ಭಯಗೊಳ್ಳದೆ ಆ ರಾಕ್ಷಸೇಂದ್ರನಮೇಲೆ ಬಾಣವೃಷ್ಟಿಯನ್ನು ಕರೆದನು. ಜಂಭಾಸುರನಾದರೋ ಅವುಗಳು ಹತ್ತಿರಕ್ಕೆ ಬರದಂತೆಯೇ ಇಂದ್ರನ ಬಾಣಗಳನ್ನು ಬೆಂಕಿಯ ಜ್ವಾಲೆಗಳಂತೆ ತೇಜೋಮಯಗಳಾದ ತನ್ನ ಬಾಣಗಳಿಂದ ನೂರಾರು ತುಂಡುಗಳಾಗಿ ಕತ್ತರಿಸಿ ಹಾಕಿದನು.

ಚಿಚ್ಛೇದ ಶತಧಾಕಾಶೇ ಶರೈರಗ್ನಿಶಿಖೋಪಮೈಃ ।
ತತಶ್ಚ ಶರಜಾಲೇನ ದೇವೇಂದ್ರೋ ದಾನವೇಶ್ವರಂ ॥ ೭೬ ॥
ಆಚ್ಛಾದಯತ ಯತ್ನೇನ ವರ್ಷಾಸ್ವಿವ ಘನೈರ್ನಭಃ ।
ದೈತ್ಯೋಽಪಿ ಬಾಣಜಾಲೇನ ವಿವ್ಯಾಧ ಸಾಯಕೈಃ ಶಿತೈಃ ॥ ೭೭ ॥
ಯಥಾ ವಾಯುರ್ಘನಾಟೋಪಂ ಯದವಾರ್ಯಂ ದಿಶಾಂ ಮುಖೇ ।
ಶಕ್ರೋಽಥ ಕ್ರೋಧಸಂರಂಭಾನ್ನ ವಿಶೇಷಯುತೇ ಯದಾ ।
ದಾನವೇಂದ್ರಂ ತದಾ ಚಕ್ರೇ ಗಂಧರ್ವಾಸ್ತ್ರಂ ಮಹಾದ್ಭುತಂ ॥ ೭೮ ॥
ತತೋಽಸ್ಯ ತೇಜಸಾ ವ್ಯಾಪ್ತಮಭೂದ್ಗಗನಗೋಚರಂ ॥ ೭೯ ॥
ಗಂಧರ್ವನಗರೈಶ್ಚಾಪಿ ನಾನಾಪ್ರಾಕಾರತೋರಣೈಃ ।
ಮುಂಚದ್ಭಿರದ್ಭುತಾಕಾರೈರಸ್ತ್ರವೃಷ್ಟಿಂ ಸಮಂತತಃ ॥ ೮೦ ॥
ತಯಾಸ್ತ್ರವೃಷ್ಟ್ಯಾ ದೈತ್ಯಾನಾಂ ಹನ್ಯಮಾನಾ ಮಹಾಚಮೂಃ ।
ಜಂಭಂ ಶರಣಮಾಗಚ್ಛತ್ತ್ರಾಹಿ ತ್ರಾಹೀತಿ ಭಾರತ ॥ ೮೧ ॥

---

೭೬. ಬಳಿಕ ದೇವೇಂದ್ರನು ಬಹಳ ಪ್ರಯತ್ನದಿಂದ ರಾಕ್ಷಸನ ಸುತ್ತಲೂ ಬಾಣಗಳ ಪಂಜರವನ್ನು ನಿರ್ಮಿಸಿ ಮಳೆಗಾಲದಲ್ಲಿ ಮೋಡಗಳು ಕವಿದಿರುವ ಆಕಾಶದಂತೆ ಅವನನ್ನು ಅಗೋಚರನನ್ನಾಗಿ ಮಾಡಿದನು.

೭೭. ದೈತ್ಯನೂ ಸಹ ಬಾಣಗಳ ಸಮೂಹದಿಂದ ಇಂದ್ರನೊಡ್ಡಿದ ಶರಪಂಜರವನ್ನು ಹೊಡೆದನು. ತೀಕ್ಷ್ಣವಾದ ಆ ಶರಜಾಲದಿಂದ ಇಂದ್ರನ ಶರಪಂಜರವು, ಬಿರುಗಾಳಿಯ ದೆಸೆಯಿಂದ ದಿಕ್ಕುದಿಕ್ಕುಗಳಿಗೂ ಚೆದುರಿಹೋಗುವ ಮೇಘಮಂಡಲದಂತೆ ಕ್ಷಣಮಾತ್ರದಲ್ಲಿಯೇ ಎತ್ತೆತ್ತಲೂ ಚೆದುರಿದುದಾಗಿ ನಾಶವಾಯಿತು; ಇದು ಪರಮಾಶ್ಚರ್ಯಕರವಾಗಿ ತೋರಿತು.

೭೮. ಇಂತು ಇಬ್ಬರಲ್ಲಿಯೂ ಯಾವ ವಿಶೇಷ ಪರಾಕ್ರಮವೂ ಕಾಣದಂತಾಗಲು, ಮಹೇಂದ್ರನು ಕೋಪದಿಂದಲೂ, ಸಂಭ್ರಮದಿಂದಲೂ, ಮಿತಿಮೀರಿದ ರೋಷದಿಂದಲೂ ಕೂಡಿದವನಾಗಿ ಅತ್ಯಂತ ಅದ್ಭುತವಾದ ಗಾಂಧರ್ವಾಸ್ತ್ರವನ್ನು ಆ ದಾನವೇಂದ್ರನಾದ ಜಂಭನ ಮೇಲೆ ಪ್ರಯೋಗ ಮಾಡಿದನು.

೭೯–೮೦. ಆ ಅಸ್ತ್ರದ ತೇಜಸ್ಸಿನಿಂದ ಕಣ್ಣಿಗೆ ಕಾಣುವ ಆಕಾಶವೆಲ್ಲವೂ ಅನೇಕ ಸೌಧ, ಹೆಬ್ಬಾಗಿಲುಗಳಿಂದ ಕೂಡಿದ ಗಂಧರ್ವನಗರಗಳಿಂದಲೂ ಎಲ್ಲೆಡೆಗಳಲ್ಲಿಯೂ ಬಾಣವೃಷ್ಟಿಯನ್ನು ಸುರಿಸುತ್ತಿರುವ ಅದ್ಭುತಾಕಾರಗಳುಳ್ಳವರಿಂದ ತುಂಬಿದಂತೆ ಕಾಣತೊಡಗಿತು.

೮೧. ಎಲೈ ಅರ್ಜುನನೇ! ತರುವಾಯ ಈ ಅಸ್ತ್ರವೃಷ್ಟಿಯಿಂದ ಎತ್ತೆತ್ತಲೂ ಕೊಲ್ಲಲ್ಪಡುತ್ತಿರುವ ರಾಕ್ಷಸ ಸೈನ್ಯವು "ಕಾಪಾಡು ಕಾಪಾಡು" ಎಂದು ಹೇಳುತ್ತ ಜಂಭಾಸುರನನ್ನು ಮರೆಹೊಕ್ಕಿತು.

ತತೋ ಜಂಭೋ ಮಹಾವೀರ್ಯೋ ವಿನದ್ಯ ಪ್ರಹಸನ್ಮುಹುಃ ।
ಸ್ಮರನ್ನಾಥು ಸಮಾಚಾರಂ ದೈತ್ಯಾನಾಮಭಯಂ ದದೌ ॥ ೮೩ ॥
ತತೋಽಸ್ತ್ರಂ ಮೌಸಲಂ ನಾಮ ಮುಮೋಚ ಸುಮಹಾಭಯಂ ।
ಅಥೋಗ್ರಮುಸಲೈಃ ಸರ್ವಮಭವತ್ಪೂರಿತಂ ಜಗತ್ ॥ ೮೪ ॥
ತೈಶ್ಚ ಭಗ್ನಾನಿ ಸರ್ವಾಣಿ ಗಂಧರ್ವನಗರಾಣಿ ಚ ।
ಅಥೋಗ್ರೈಕಪ್ರಹಾರೇಣ ರಥಮಶ್ವಂ ಗಜಂ ಸುರಂ ।
ಚೂರ್ಣಯಾಮಾಸ ತತ್ಕ್ಷಿಪ್ರಂ ಶತಶೋಽಥ ಸಹಸ್ರಶಃ ॥ ೮೫ ॥
ತತಃ ಸುರಾಧಿಪಃ ಶಕ್ರಸ್ತ್ವಾಷ್ಟ್ರಮಸ್ತ್ರಮುದೈರಯತ್ ।
ಸಂಧ್ಯಮಾನೇ ತತಶ್ಚಾಸ್ತ್ರೇ ನಿಶ್ಚೇರುಃ ಪಾವಕಾರ್ಚಿಷಃ ॥ ೮೬ ॥
ತತೋ ಯಂತ್ರಮಯಾ ವಿದ್ಯಾಃ ಪ್ರಾದುರಾಸನ್ಸಹಸ್ರಶಃ ।
ತೈರ್ಯಂತ್ರೈರಭವದ್ಯುದ್ಧಮಂತರಿಕ್ಷಂ ವಿತಾರಕಂ ॥ ೮೭ ॥
ತೈರ್ಯಂತ್ರೈರ್ಮೌಸಲಂ ಭಗ್ನಂ ಹನ್ಯಂತೇ ಚಾಸುರಾಸ್ತದಾ ।
ಶೈಲಾಸ್ತ್ರಂ ಮುಮುಚೇ ಜಂಭೋ ಯಂತ್ರಸಂಘಾತಚೂರ್ಣನಂ ॥೮೮॥

---

೮೩–೮೪. ಆಗ ಮಹಾಬಲಶಾಲಿಯಾದ ಜಂಭಾಸುರನು ಸಿಂಹನಾದವನ್ನು ಮಾಡಿ ಮತ್ತೆ ಮತ್ತೆ ನಗುತ್ತ ದೇವತೆಗಳ ಆ ಕೃತ್ಯವನ್ನು ಮನಸ್ಸಿನಲ್ಲಿ ತಂದವನಾಗಿ ರಾಕ್ಷಸರಿಗೆಲ್ಲ ಅಭಯವನ್ನು ಕೊಟ್ಟನು. ಬಳಿಕ ಜಂಭಾಸುರನು ಮಹಾ ಭಯಂಕರವಾದ ಮೌಸಲವೆಂಬ ಅಸ್ತ್ರವನ್ನು ಪ್ರಯೋಗಿಸಿದನು. ಅದರ ಪ್ರಭಾವದಿಂದ್ಲೋಕವೆಲ್ಲವೂ ಉಗ್ರಗಳಾದ ಮುಸಲ(ಒನಕೆ)ಗಳಿಂದ ತುಂಬಿತು.

೮೫. ಅವುಗಳಿಂದ ಮಹೇಂದ್ರನು ನಿರ್ಮಿಸಿದ ಗಂಧರ್ವನಗರಗಳೆಲ್ಲವೂ ಭಗ್ನವಾದುವು. ಒಂದೊಂದು ಮುಸಲವೂ ಒಬ್ಬೊಬ್ಬ ದೇವತೆಯನ್ನು ತೀಕ್ಷ್ಣವಾದ ಪ್ರಹಾರದಿಂದ ರಥ, ಅಶ್ವ, ಗಜಗಳೊಡನೆ ತಕ್ಷಣದಲ್ಲಿಯೇ ಚೂರ್ಣಿಸಿತು. ಇಂತು ನೂರಾರು, ಸಾವಿರಾರು ದೇವತೆಗಳು ದುಃಖಗೊಂಡರು.

೮೬. ಬಳಿಕ ದೇವತೆಗಳ ಒಡೆಯನಾದ ಇಂದ್ರನು ತ್ವಾಷ್ಟ್ರನ ಅಸ್ತ್ರವನ್ನು ಜಪಿಸಿ ಬಾಣವನ್ನು ಬಿಲ್ಲಿನಲ್ಲಿ ಜೋಡಿಸಿದನು. ಬಾಣವು ಬಿಲ್ಲಿನಲ್ಲಿ ಸೇರುತ್ತಲೇ ಅದರಿಂದ ಬೆಂಕಿಯ ಜ್ವಾಲೆಗಳು ಹೊರಡತೊಡಗಿದುವು.

೮೭. ಅದರಿಂದ ಸಾವಿರಾರು ಯಂತ್ರಮಯಗಳಾದ ವಿದ್ಯೆಗಳು ಪ್ರಾದುರ್ಭೂತಗಳಾದುವು. ಈ ಯಂತ್ರಗಳಿಗೂ ರಾಕ್ಷಸನ ಮುಸಲಗಳಿಗೂ ಯುದ್ಧವಾಗಲು ಆಕಾಶವೆಲ್ಲವೂ ನಕ್ಷತ್ರವಿಹೀನವಾಯಿತು.

೮೮. ಆ ಯಂತ್ರಗಳಿಂದ ಮುಸಲಾಸ್ತ್ರವು ಭಗ್ನವಾಗಿ ರಾಕ್ಷಸರೆಲ್ಲರೂ ನಾಶವಾಗತೊಡಗಿದರು. ಜಂಭಾಸುರನು ಯಂತ್ರಸಮೂಹವನ್ನು ಧ್ವಂಸಮಾಡಲು ಶೈಲಾಸ್ತ್ರವನ್ನು ಪ್ರಯೋಗಿಸಿದನು.

ವ್ಯಾಮಪ್ರಮಾಣೈರುಪಲೈಸ್ತತೋ ವರ್ಷಃ ಪ್ರವರ್ತತ ॥ ೮೮ ॥
ತ್ವಾಷ್ಟ್ರೇನ ನಿರ್ಮಿತಾನ್ಯಾಶು ಯಾನಿ ಯಂತ್ರಾಣಿ ಭಾರತ ।
ತೇನೋಪಲನಿಪಾತೇನ ಗತಾನಿ ತಿಲಶಸ್ತತಃ ॥ ೮೯ ॥
ತತಃ ಶಿರಸ್ಸು ದೇವಾನಾಂ ಶಿಲಾಃ ಪೇತುರ್ಮಹಾಜವಾಃ ।
ದಾರಯಂತ್ಯಶ್ಚ ವಸುಧಾಂ ಚತುರಂಗಬಲಂ ಚ ತತ್ ॥ ೯೦ ॥
ತತೋ ವಜ್ರಾಸ್ತ್ರಮಕರೋತ್ಸಹಸ್ರಾಕ್ಷಃ ಪುರಂದರಃ ।
ತತಃ ಶಿಲಾಮಹಾವರ್ಷಂ ವ್ಯಶೀರ್ಯತ ಸಮಂತತಃ ॥ ೯೧ ॥
ತತಃ ಪ್ರಶಾಂತ್ಯೈಃ ಶೈಲಾಸ್ತ್ರೈರ್ಜಂಭೋ ಭೂಧರಸನ್ನಿಭಃ ।
ಐಷೀಕಮಸ್ತ್ರಮಕರೋಚ್ಚೂರ್ಣಿತಾನ್ಯಪರಾಕ್ರಮಃ ॥ ೯೨ ॥
ಐಷೀಕೇಣಾಗಮನ್ನಾಶಂ ವಜ್ರಾಸ್ತ್ರಂ ಗಿರಿದಾರಣಂ ।
ವಿಜೃಂಭತ್ಯಥ ಚೈಷೀಕೇ ಪರಮಾಸ್ತ್ರೇಽತಿದಾರುಣೇ ।
ಜಜ್ವಲುರ್ದೇವಸೈನ್ಯಾನಿ ಸಸ್ಯಂದನಗಜಾನಿ ಚ ॥ ೯೩ ॥

---

೮೮-೮೯. ಈ ಶೈಲಾಸ್ತ್ರದ ಪ್ರಭಾವದಿಂದ ಸಮರಾಂಗಣದ ಎಲ್ಲೆಡೆಗಳಲ್ಲಿಯೂ ಒಂದು ಬಾರಿನ ಪ್ರಮಾಣವುಳ್ಳ ಕಲ್ಲುಗಳ ಮಳೆಯು ಬೀಳತೊಡಗಿತು. ಎಲೈ ಪಾರ್ಥನೆ! ಈ ಪ್ರಕಾರವಾಗಿ ಮಹೇಂದ್ರನ ತ್ವಾಷ್ಟ್ರಾಸ್ತ್ರದಿಂದ ನಿರ್ಮಿತಗಳಾಗಿದ್ದ ಯಂತ್ರಗಳೆಲ್ಲವೂ ಈ ಕಲ್ಲುಗಳ ಮಳೆಯಿಂದ ಸಣ್ಣ ಸಣ್ಣ ಚೂರುಗಳಾಗಿ ಸಿಡಿದು ನಾಶವಾದುವು.

೯೦. ಮತ್ತು ದೇವತೆಗಳ ತಲೆಗಳ ಮೇಲೆ ಅತ್ಯಂತ ರಭಸದಿಂದ ಕಲ್ಲುಗಳು ಬೀಳತೊಡಗಿದುವು; ಚತುರಂಗ ಸೈನ್ಯವನ್ನೂ ಕ್ಲೇಶಗೊಳಿಸಿ ಭೂಮಿಯನ್ನು ಸೀಳಿಕೊಂಡು ಹೋದುವು.

೯೧. ಅದನ್ನು ಕಂಡು ಸಹಸ್ರಾಕ್ಷನಾದ ಮಹೇಂದ್ರನು ವಜ್ರಾಸ್ತ್ರವನ್ನು ಬಿಟ್ಟನು. ಅದರಿಂದ ರಣಭೂಮಿಯಲ್ಲೆಲ್ಲ ಕಲ್ಲುಗಳ ಮಳೆಯು ನಿಂತು ಹೋಯಿತು.

೯೨. ತನ್ನ ಶೈಲಾಸ್ತ್ರವು ನಿಷ್ಪ್ರಯೋಜನವಾಗಲು ಮಹಾ ಪರ್ವತಾಕಾರನಾದ ಜಂಭಾಸುರನು ಇತರ ಅಸ್ತ್ರಗಳು ಶಕ್ತಿಹೀನಗಳೆಂದು ತಿಳಿದು ಐಷೀಕವೆಂಬ ಅಸ್ತ್ರವನ್ನು ಬಿಟ್ಟನು.

೯೩. ಇಂತು ಆ ದಾನವನು ಪ್ರಯೋಗಿಸಿದ ಐಷೀಕಾಸ್ತ್ರದಿಂದ ಪರ್ವತಗಳನ್ನೂ ಭೇದಿಸುವ ಶಕ್ತಿಯುಳ್ಳ ವಜ್ರಾಸ್ತ್ರವು ಭಗ್ನವಾಯಿತು. ಇಷ್ಟೆಯಲ್ಲದೆ ಆ ಅಸ್ತ್ರವು ಅತ್ಯಂತ ಭಯಂಕರವಾಗಿ ನಿರ್ದ್ವಂದ್ವವಾಗಿ ಎದುರೇ ಇಲ್ಲದೆ ವಿಜೃಂಭಿಸುತ್ತಿರಲು ದೇವ ಸೈನ್ಯಗಳೂ, ರಥ, ಗಜ ಮೊದಲಾದ ವಾಹನಗಳೂ ಬೆಂಕಿಯಿಂದ ಸುಡಲ್ಪಟ್ಟುವು.

ದಹ್ಯಮಾನೇಷ್ವನೀಕೇಷು ತೇಜಸಾಸ್ತ್ರಸ್ಯ ಸರ್ವತಃ ।
ಆಗ್ನೇಯಮಸ್ತ್ರಮಕರೋದ್ಬಲಹಾ ಪಾಕಶಾಸನಃ ॥ ೯೪ ॥
ತೇನಾಸ್ತ್ರೇಣ ಚ ತನ್ನಾಶಮೈಷೀಕಮಗಮತ್ತದಾ ॥ ೯೫ ॥
ತಸ್ಮಿನ್ಪ್ರತಿಹತೇ ಚಾಸ್ತ್ರೇ ಪಾವಕಾಸ್ತ್ರಂ ವ್ಯಜೃಂಭತ ।
ಜಜ್ವಾಲ ಸೇನಾ ಜಂಭಸ್ಯ ರಥಃ ಸಾರಥಿರೇವ ಚ ॥ ೯೬ ॥
ತತಃ ಪ್ರತಿಹತಾಸ್ತ್ರೋಽಸೌ ದೈತ್ಯೇಂದ್ರಃ ಪ್ರತಿಭಾನವಾನ್ ।
ವಾರುಣಾಸ್ತ್ರಂ ಮುಮೋಚಾಥ ಶಮನಂ ಪಾವಕಾರ್ಚಿಷಾಂ ॥ ೯೭ ॥
ತತೋ ಜಲಧರೈರ್ವ್ಯೋಮ ಸ್ಫುರದ್ವಿದ್ಯುಲ್ಲತಾಕುಲೈಃ ।
ಗಂಭೀರಾಕ್ಷಸಮಾಧಾರೈಶ್ಚಾಭ್ಯಪೂರ್ಯತ ಮೇದಿನೀ ॥ ೯೮ ॥
ಕರೀಂದ್ರ ಕರತುಲ್ಯಾಭಿರ್ಧಾರಾಭಿಃ ಪೂರಿತಂ ಜಗತ್ ।
ಶಾಂತಮಾಗ್ನೇಯಮಸ್ತ್ರಂ ಚ ವಿಲೋಕ್ಯೇಂದ್ರಶ್ಚಕಾರಹ ॥ ೯೯ ॥
ವಾಯುವ್ಯಮಸ್ತ್ರಮತುಲಂ ತೇನ ಮೇಘಾ ಯಯುಃ ಕ್ಷಯಂ ।
ವಾಯವ್ಯಾಸ್ತ್ರಬಲೇನಾಥ ನಿರ್ಧೂತೇ ಮೇಘಮಂಡಲೇ ।
ಬಭೂವಾನಾವಿಲಂ ವ್ಯೋಮ ನೀಲೋತ್ಪಲದಲಪ್ರಭಂ । ॥ ೧೦೦ ॥

---

೯೪. ತನ್ನ ಸೈನ್ಯವು ಭಸ್ಮೀಭೂತವಾಗುತ್ತಿರುವುದನ್ನು ಕಂಡು ಬಲ ಮರ್ದನನಾದ ಮಹೇಂದ್ರನು ಆ ಅಸ್ತ್ರದ ತೇಜಸ್ಸನ್ನು ಶಮನಮಾಡಲು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು.

೯೫–೯೬. ಆ ಅಸ್ತ್ರದಿಂದ ರಾಕ್ಷಸನ ಐಷೀಕಾಸ್ತ್ರವು ನಾಶವನ್ನುಹೊಂದಿತು. ಇಂತು ಪ್ರತ್ಯಸ್ತ್ರವನ್ನು ನಿಗ್ರಹಿಸಿ ಆಗ್ನೇಯಾಸ್ತ್ರವು ರಣಭೂಮಿಯಲ್ಲಿ ವಿಜೃಂಭಿಸುತ್ತಿರಲು ಜಂಭಾಸುರನ ಸೈನ್ಯವೂ, ರಥವೂ, ಸಾರಥಿಯೂ ತಪಿಸತೊಡಗಿದರು.

೯೭–೯೮. ತನ್ನ ಅಸ್ತ್ರವು ನಿರರ್ಥಕವಾದುದನ್ನು ಕಂಡು ಮೇಧಾವಿಯಾದ ರಾಕ್ಷಸೇಂದ್ರನು ಅಗ್ನಿಯ ಜ್ವಾಲೆಗಳನ್ನು ನಿವಾರಿಸಲು ವಾರುಣಾಸ್ತ್ರವನ್ನು ಬಿಟ್ಟನು. ಆಗ ಹೊಳೆಯುತ್ತಿರುವ ಮಿಂಚುಗಳೊಡನೆ ಕೂಡಿದ ಮೇಘಜಾಲದಿಂದ ಆಕಾಶವೂ, ದೊಡ್ಡ ದೊಡ್ಡ ಆನೆಗಳ ಗಾತ್ರದ ಆಲಿಕಲ್ಲುಗಳಿಂದ ಭೂಮಿಯೂ ತುಂಬಿಬಿಟ್ಟುವು.

೯೯–೧೦೦. ಲೋಕವೆಲ್ಲವೂ ಆನೆಯ ಸೊಂಡಿಲಿನ ಗಾತ್ರದ ಮಳೆಯ ಧಾರೆಗಳಿಂದ ಪೂರಿತವಾಯಿತು. ತನ್ನ ಆಗ್ನೇಯಾಸ್ತ್ರವು ಉಪಶಾಂತವಾದುದನ್ನು ಕಂಡು ಇಂದ್ರನು ಅಪ್ರತಿಮವಾದ ವಾಯವ್ಯಾಸ್ತ್ರವನ್ನು ಪ್ರಯೋಗಮಾಡಲು ಅದರಿಂದ ಮೇಘಗಳೆಲ್ಲವೂ ನಾಶವಾದುವು. ವಾಯವ್ಯಾಸ್ತ್ರದ ಪ್ರಭಾವದಿಂದ ಮೇಘಮಂಡಲವೆಲ್ಲವೂ ದಿಕ್ಕಾಪಾಲಾಗಿ ಚೆದುರಿಹೋಗಲು ಆಕಾಶವು ನೀಲೋತ್ಪಲದಂತೆ ಶುಭ್ರವೂ ಕಳಂಕರಹಿತವೂ ಆಯಿತು.

ವಾಯುನಾ ಚಾತಿರೂಪೇಣ ಕಂಪಿತಾಶ್ಚೈವ ದಾನವಾಃ ।
ನ ಶೇಕುಸ್ತತ್ರ ತೇ ಸ್ಥಾತುಂ ರಣೇಽಪಿ ಬಲಿನೋಽಪಿ ಯೇ ॥ ೧೦೧ ॥
ಜಂಭಸ್ತತೋಽಭವಚ್ಛೈಲೋ ದಶಯೋಜನವಿಸ್ತೃತಃ ॥ ೧೦೨ ॥
ಮಾರುತಪ್ರತಿಘಾತಾರ್ಥಂ ದಾನವಾನಾಂ ಬಲಾಧಿಪಃ ।
ನಾನಾಶ್ಚರ್ಯಸಮಾಯುಕ್ತೋ ನಾನಾದ್ರುಮಲತಾವೃತಃ ॥ ೧೦೩ ॥
ತತಃ ಪ್ರಶಮಿತೇ ವಾಯೌ ದೈತ್ಯೇಂದ್ರೇ ಪರ್ವತಾಕೃತೌ ।
ಮಹಾಶನಿಂ ವಜ್ರಮಯೀಂ ಮುಮೋಚಾಶು ಶತಕ್ರತುಃ ॥ ೧೦೪ ॥
ತಯಾಽಶನ್ಯಾ ಪತಿತಯಾ ದೈತ್ಯಸ್ಯಾಚಲರೂಪಿಣಃ ।
ಕಂದರಾಣಿ ವ್ಯಶೀರ್ಯಂತ ಸಮಂತಾನ್ನಿರ್ಝರಾಣಿ ಚ ॥ ೧೦೫ ॥
ತತಃ ಸ ದಾನವೇಂದ್ರಸ್ಯ ಶೈಲಮಾಯಾನ್ಯವರ್ತತ ।
ನಿವೃತ್ತಶೈಲಮಾಯೋಽಥ ದಾನವೇಂದ್ರೋ ಮದೋತ್ಕಟಃ ।
ಬಭೂವ ಕುಂಜರೋ ಭೀಮೋ ಮಹಾಶೈಲಮಯಾಕೃತಿಃ ॥ ೧೦೬ ॥

---

೧೦೧. ಅಸಾಧಾರಣವಾದ ಆ ವಾಯುವಿನಿಂದ ದಾನವರೆಲ್ಲರೂ ಕಂಪಿಸ ತೊಡಗಿದರು. ಅತ್ಯಂತ ಬಲಿಷ್ಠರಾದವರೂ ಕೂಡ ಯುದ್ಧರಂಗದಲ್ಲಿಯೇ ನಿಲ್ಲಲಾರದೆ ಹೋದರು.

೧೦೨–೧೦೩. ಆಗ ದಾನವ ಸೈನ್ಯದ ಅಧಿಪತಿಯಾದ ಜಂಭಾಸುರನು ಗಾಳಿಯ ಹಾವಳಿಯನ್ನು ತಡೆಯುವ ಉದ್ದೇಶದಿಂದ ಹತ್ತು ಯೋಜನ ವಿಸ್ತಾರವೂ, ಅನೇಕ ಆಶ್ಚರ್ಯಗಳಿಂದ ಕೂಡಿದುದೂ, ವಿಧವಿಧವಾದ ಗಿಡ ಬಳ್ಳಿಗಳಿಂದ ಆವೃತವಾದುದೂ ಆಗಿ ಕಾಣುವಂತಹ ಪರ್ವತರೂಪನಾಗಿ ನಿಂತನು.

೧೦೪. ಇಂತು ರಾಕ್ಷಸೇಂದ್ರನು ಪರ್ವತಾಕೃತಿಯನ್ನು ಹೊಂದಲು ವಾಯುವು ನಿಷ್ಫಲವಾದುದನ್ನು ಕಂಡು ಇಂದ್ರನು ವಜ್ರಸಾರದಿಂದ ಮಾಡಿದ ತನ್ನ ವಜ್ರಾಯುಧವನ್ನು ಬೀಸಿದನು.

೧೦೫. ಆ ವಜ್ರಾಯುಧದ ಪೆಟ್ಟಿನಿಂದ ಪರ್ವತರೂಪಿಯಾದ ರಾಕ್ಷಸನ ತಪ್ಪಲುಗಳೆಲ್ಲವೂ ಸೀಳಿಕೊಂಡು ಎಲ್ಲಾ ಕಡೆಗಳಿಗೂ ಝರಿಗಳು ಹರಿಯ ತೊಡಗಿದುವು.

೧೦೬. ಅದರಿಂದ ರಾಕ್ಷಸೋತ್ತಮನ ಶೈಲರೂಪವಾದ ಆ ಮಾಯೆಯು ತೊಲಗಿತು. ಆಗ ಆ ದಾನವೇಂದ್ರನು ಶೈಲಮಾಯೆಯನ್ನು ಬಿಟ್ಟು ಪರ್ವತಾಕಾರವಾದ ಭಯಂಕರ ಮದ್ದಾನೆಯ ರೂಪವನ್ನು ಸ್ವೀಕರಿಸಿ ಮದೋದಕದಿಂದ ಮೆರೆದನು.

ಮಮರ್ದ ಚ ಸುರಾನೀಕಂ ದಂಷ್ಟ್ರೈಶ್ಚಾಭ್ಯಹನತ್ಸುರಾನ್ ।
ಬಭಂಜ ಪೃಷ್ಠತಃ ಕಾಂಶ್ಚಿತ್ಕರೇಣಾಕೃಷ್ಯ ದಾನವಃ ॥ ೧೦೭ ॥
ತತಃ ಕ್ಷಪಯತಸ್ತಸ್ಯ ಸುರಸೈನ್ಯಾನಿ ವೃತ್ರಹಾ ।
ಅಸ್ತ್ರಂ ತ್ರೈಲೋಕ್ಯದುರ್ಧರ್ಷಂ ನಾರಸಿಂಹಂ ಮುಮೋಚಹ ॥ ೧೦೮ ॥
ತತಃ ಸಿಂಹಸಹಸ್ರಾಣಿ ನಿಶ್ಚೇರುರ್ಮಂತ್ರತೇಜಸಾ ।
ಹೃಷ್ಟದಂಷ್ಟ್ರಾಟ್ಟಹಾಸಾನಿ ಕ್ರಕಚಾಭನಖಾನಿ ಚ ॥ ೧೦೯ ॥
ತೈರ್ವಿಪಾಟಿತಗಾತ್ರೋಽಸೌ ಗಜಮಾಯಾಂ ವ್ಯಪೋಹಯತ್ ॥ ೧೧೦ ॥
ತತಶ್ಚಾಶೀವಿಷೋ ಘೋರೋಽಭವತ್ಫಣಸಮಾಕುಲಃ ।
ವಿಷನಿಃಶ್ವಾಸನಿರ್ದಗ್ಧಸುರಸೈನ್ಯಮಹಾರಥಃ ॥ ೧೧೧ ॥
ತತೋಽಸ್ತ್ರಂ ಗಾರುಡಂ ಚಕ್ರೇ ಶಕ್ರಃ ಸಂಪ್ರಹರನ್‌ರಣೇ ।
ತತಸ್ತಸ್ಮಾದ್ಗರುತ್ಮಂತಃ ಸಹಸ್ರಾಣಿ ವಿನಿರ್ಯಯುಃ ॥ ೧೧೨ ॥

---

೧೦೭. ಮತ್ತು ಸೈನ್ಯವನ್ನು ಮರ್ದನಮಾಡುತ್ತ ದೇವತೆಗಳನ್ನು ದಂತಗಳಿಂದ ತಿವಿದು ಕೊಲ್ಲುತ್ತಿದ್ದನು. ಕೆಲವರನ್ನು ಸೊಂಡಿಲಿನಿಂದ ಎಳೆದು ಕೊಂಡು ಕಾಲಿನಕಡೆಯಿಂದ ಸೀಳಿದನು.

೧೦೮. ಇಂತು ಸುರಸೈನ್ಯವನ್ನು ಕ್ಷಯಗೊಳಿಸುತ್ತಿರುವ ಆ ರಾಕ್ಷಸನನ್ನು ಕಂಡು ವೃತ್ರಶತ್ರುವಾದ ಇಂದ್ರನು ಮೂರು ಲೋಕಗಳಲ್ಲಿಯೂ ಮಿಗಿಲೆನಿಸಿದ ನಾರಸಿಂಹಾಸ್ತ್ರವನ್ನು ಬಿಟ್ಟನು.

೧೦೯. ಆ ಮಂತ್ರದ ಪುರಶ್ಚರಣೆಯ ಪ್ರಭಾವದಿಂದ ಸಾವಿರಾರು ಸಿಂಹಗಳುಂಟಾದುವು. ಅವುಗಳೆಲ್ಲವೂ ಸಂತೋಷದಿಂದ ಕೋರೆ ಹಲ್ಲುಗಳನ್ನು ಬಿಟ್ಟುಕೊಂಡು ಅಟ್ಟಹಾಸವನ್ನು ಮಾಡುತ್ತ ಗರಗಸಗಳಂತೆ ತೀಕ್ಷ್ಣಗಳಾದ ನಖಗಳುಳ್ಳವಾಗಿದ್ದುವು.

೧೧೦–೧೧೧. ಅವುಗಳಿಂದ ಸೀಳಲ್ಪಟ್ಟ ಶರೀರವುಳ್ಳವನಾಗಿ ರಾಕ್ಷಸನು ತನ್ನ ಮಾಯೆಯನ್ನು ತ್ಯಜಿಸಿದನು. ಮತ್ತು ಕಾಲಕೂಟವಿಷದಿಂದಲೂ ಘೋರವಾದ ಹೆಡೆಯಿಂದಲೂ ಕೂಡಿದ ಸರ್ಪನಾಗಿ ವಿಷಪೂರಿತಗಳಾದ ತನ್ನ ನಿಶ್ವಾಸಗಳಿಂದ ದೇವತೆಗಳ ಸೈನ್ಯದ ಮಹಾರಥಿಕರನ್ನೆಲ್ಲ ದಹಿಸಲುಪಕ್ರಮಿಸಿದನು.

೧೧೨. ಆಗ ಮಹೇಂದ್ರನು ಅವನನ್ನು ಯುದ್ಧದಲ್ಲಿ ನಿಗ್ರಹಿಸುವುದಕ್ಕಾಗಿ ಗರುಡಾಸ್ತ್ರವನ್ನು ಅಭಿಮಂತ್ರಿಸಿದನು. ಆ ಅಸ್ತ್ರದಿಂದ ಸಾವಿರಾರು ಗರುಡ ಪಕ್ಷಿಗಳು ಹೊರಕ್ಕೆ ಹೊರಟುವು.

ತೈರ್ಗರುತ್ಮದ್ಭಿರಾಸಾದ್ಯ ಜಂಭಂ ಭುಜಗರೂಪಿಣಂ ।
ಕೃತಸ್ತು ಖಂಡಶೋ ದೈತ್ಯಃ ಸಾಸ್ಯ ಮಾಯಾ ವ್ಯನಶ್ಯತ ॥ ೧೧೩ ॥
ಮಾಯಾಯಾಂ ಚ ಪ್ರಣಷ್ಟಾಯಾಂ ತತೋ ಜಂಭೋ ಮಹಾಸುರಃ ।
ಚಕಾರ ರೂಪಮತುಲಂ ಚಂದ್ರಾದಿತ್ಯಪದಾನುಗಂ ॥ ೧೧೪ ॥
ವಿವೃತ್ತನಯನೋ ಗ್ರಸ್ತುಮಿಯೇಷ ಸುರಪುಂಗವಾನ್ ।
ತತೋಽಸ್ಯ ಪ್ರಾವಿಶದ್ವಕ್ತ್ರಂ ಸಮಹಾರಥಕುಂಜರಾಃ ॥ ೧೧೫ ॥
ಸುರಸೇನಾಽಭವದ್ಭೀಮಂ ಪಾತಾಲೋತ್ತಾಲತಾಲುಕಂ ।
ಸೈನ್ಯೇಷು ಗ್ರಸ್ಯಮಾನೇಷು ದಾನವೇನ ಬಲೀಯಸಾ ॥ ೧೧೬ ॥
ಶಕ್ರೋ ದೀನತ್ವಮಾಪನ್ನಃ ಶ್ರಾಂತವಾಹನವಾಹನಃ ।
ಕರ್ತವ್ಯತಾಂ ನಾಧ್ಯಗಚ್ಛತ್ಸೋಽವಾಚೇದಂ ಜನಾರ್ದನಂ ॥ ೧೧೭ ॥
ಕಿಮನಂತರಮೇವಾಸ್ತಿ ಕರ್ತವ್ಯಂ ನೋ ವಿಶೇಷತಃ ।
ತದಾದಿಶ ಘಟಾಮೋಽಸ್ಯ ದಾನವಸ್ಯ ಯುಯುತ್ಸತಃ ॥ ೧೧೮ ॥

---

೧೧೩. ಆ ಗರುಡ ಪಕ್ಷಿಗಳೆಲ್ಲವೂ ಮೇಲೆ ಬಂದು ಸರ್ಪಾಕಾರನಾದ ಜಂಭಾಸುರನನ್ನು ಮುತ್ತಿದುವು. ಅವುಗಳಿಂದ ತುಂಡು ತುಂಡಾಗಿ ಕತ್ತರಿಸಲ್ಪಟ್ಟ ಶರೀರವುಳ್ಳವನಾಗಿ ಆ ರಾಕ್ಷಸನು ಮುಂದೇನು ಮಾಡಲೂ ಶಕ್ತನಾಗದೆ, ತನ್ನ ಮಾಯೆಯನ್ನು ವಿಸರ್ಜಿಸಿ ಪುನಃ ಸ್ವಸ್ವರೂಪವನ್ನೇ ತಾಳಿದನು.

೧೧೪. ಇಂತು ತನ್ನ ಮಾಯೆಯು ನಿಷ್ಫಲವಾಗಲು ಮಹಾರಾಕ್ಷಸನಾದ ಜಂಭನು ಸೂರ್ಯ ಚಂದ್ರರ ಪಥವನ್ನು ಆಕ್ರಮಿಸುವಂತಹ ಅಪ್ರತಿಮವಾದ ರೂಪವನ್ನು ತಾಳಿದನು.

೧೧೫–೧೧೬. ತರುವಾಯ ಮಹಾ ಭಯಂಕರನಾದ ಆ ಅಸುರನು ಬಿರಿದ ಕಣ್ಣುಗಳುಳ್ಳವನಾಗಿ ರಣರಂಗದಲ್ಲಿದ್ದ ದೇವಶ್ರೇಷ್ಠರೆಲ್ಲರನ್ನೂ ನುಂಗಲು ಇಚ್ಛಿಸಿದನು. ಒಡನೆಯೇ ಮಹಾರಥರಿಂದಲೂ ಆನೆಗಳಿಂದಲೂ ಕೂಡಿದ ದೇವತೆಗಳ ಸೈನ್ಯವು ಅವನ ಮುಖದಲ್ಲಿ ಹೋಗಲಾರಂಭಿಸಿತು. ಆಗ ಅವನ ಬಾಯಿಯೂ ಸಹ ಪಾತಾಲದ ಬಿಲದಂತೆ ವಿಶಾಲವಾಯಿತು.

೧೧೭. ಬಲಶಾಲಿಯಾದ ರಾಕ್ಷಸನಿಂದಿಂತು ಸೈನ್ಯಗಳೆಲ್ಲ ಭಕ್ಷಿತಗಳಾಗುತ್ತಿರಲು ಇಂದ್ರನು ದೈನ್ಯವನ್ನು ಹೊಂದಿ ಆಯಾಸಗೊಂಡ ಹಯಗಜಗಳುಳ್ಳವನಾಗಿ ಮುಂದೇನು ಮಾಡಬೇಕೆಂಬುದನ್ನು ಕಾಣದಾದನು. ಅವನು ನಾರಾಯಣನನ್ನು ಶರಣುಹೊಕ್ಕು ಅವನನ್ನು ಕುರಿತು ಇಂತೆಂದನು.

೧೧೮. "ಈಗ ನಮಗೆ ವಿಶೇಷವಾಗಿ ಮಾಡತಕ್ಕ ಕರ್ತವ್ಯವಾವುದಿರುವುದು? ನೀನು ತಿಳಿಸಿದರೆ, ಯುದ್ಧ ಮಾಡುತ್ತಿರುವ ಈ ರಾಕ್ಷಸನಿಗೆ ತಕ್ಕ ಪ್ರತೀಕಾರವನ್ನು ಮಾಡಲು ಬಂದೀತು."

ತತೋ ಹರಿರುವಾಚೇದಂ ವಜ್ರಾಯುಧಮುದಾರಧೀಃ ।
ನ ಸಾಂಪ್ರತಂ ರಣಂ ತ್ಯಾಜ್ಯಂ ಶತ್ರುಕಾತರಭೈರವಂ ॥ ೧೧೯ ॥
ಮಾ ಗಚ್ಛ ಮೋಹಂ ಮಾ ಗಚ್ಛ ಕ್ಷಿಪ್ರಮಸ್ತ್ರಂ ಸ್ಮರ ಪ್ರಭೋ ।
ನಾರಾಯಣಾಸ್ತ್ರಂ ಪ್ರಯತಃ ಶ್ರುತ್ವೇತಿ ಮುಮುಚೇ ಸ ಚ ॥ ೧೨೦ ॥
ಏತಸ್ಮಿನ್ನಂತರೇ ದೈತ್ಯೋ ವಿವೃತಾಸ್ಯೋಽಗ್ರಸತ್ಕ್ಷಣಾತ್ ।
ತ್ರೀಣಿ ತ್ರೀಣಿಚ ಲಕ್ಷಾಣಿ ಕಿನ್ನರೋರಗರಕ್ಷಸಾಂ ॥ ೧೨೧ ॥
ತತೋ ನಾರಾಯಣಾಸ್ತ್ರಂ ಚ ನಿಪಪಾತಾಸ್ಯ ವಕ್ಷಸಿ ।
ಮಹಾಸ್ತ್ರಭಿನ್ನಹೃದಯಃ ಸುಸ್ರಾವ ರುಧಿರಂ ಚ ಸಃ ॥ ೧೨೨ ॥
ತತಃ ಸ್ವತೇಜಸಾ ರೂಪಂ ತಸ್ಯ ದೈತ್ಯಸ್ಯ ನಾಶಿತಂ ।
ತತಶ್ಚಾಂತರ್ದಧೇ ದೈತ್ಯಃ ಕೃತ್ವಾ ಹಾಸಂ ಮಹೋತ್ಕಟಂ ॥ ೧೨೩ ॥
ಗಗನಸ್ಥಃ ಸ ದೈತ್ಯೇಂದ್ರಃ ಶಸ್ತ್ರಶನಿಮತೀಂದ್ರಿಯಃ ।
ಮುಮೋಚ ಸುರಸೈನ್ಯಾನಾಂ ಸಂಹಾರಕರಣೀಂ ಪರಾಂ ॥ ೧೨೪ ॥

---

೧೧೯. ಆಗ ವಿಶಾಲಮತಿಯಾದ ಹರಿಯು ಮಹೇಂದ್ರನನ್ನು ಕುರಿತು ಇಂತೆಂದನು :—"ಶತ್ರುಗಳ ಪರಾಕ್ರಮದಿಂದ ಭಯಂಕರವಾದ ಯುದ್ಧವನ್ನು ಈಗ ತ್ಯಜಿಸುವುದು ಯುಕ್ತವಲ್ಲ.

೧೨೦. ನೀನು ಸಮಯದಲ್ಲಿ ಓಡಿಹೋಗಬೇಡ; ಮೋಹವನ್ನು ಹೊಂದಬೇಡ; ಬೇಗ ನಿನ್ನ ಬಳಿಯಲ್ಲಿರುವ ನಾರಾಯಣಾಸ್ತ್ರವನ್ನು ಸ್ಮರಿಸಿಕೊ." ಈ ಮಾತುಗಳನ್ನು ಕೇಳಿ ಇಂದ್ರನು ಪ್ರಯತ್ನಪೂರ್ವಕವಾಗಿ ಆ ಅಸ್ತ್ರವನ್ನು ಪ್ರಯೋಗ ಮಾಡಿದನು.

೧೨೧. ಅಷ್ಟರಲ್ಲಿಯೇ ದೊಡ್ಡದಾಗಿ ಬಾಯಿ ತೆರೆದ ಆ ರಾಕ್ಷಸನು ಕಿನ್ನರರು, ಉರಗರು, ರಾಕ್ಷಸರುಗಳಲ್ಲಿ ಮೂರು ಮೂರು ಲಕ್ಷ ಜನರನ್ನು ಒಂದೊಂದು ಕಬಳವನ್ನಾಗಿಮಾಡಿ ನುಂಗುತ್ತಿದ್ದನು.

೧೨೨. ಆಗ ಇಂದ್ರನಿಂದ ಬಿಡಲ್ಪಟ್ಟ ನಾರಾಯಣಾಸ್ತ್ರವು ಅವನ ಹೃದಯದಲ್ಲಿ ನಟ್ಟಿತು. ಆ ಮಹಾಸ್ತ್ರದಿಂದ ಹೃದಯವು ಭೇದಿಸಲು ರಾಕ್ಷಸನೂ ರಕ್ತವನ್ನು ಕಾರಿದನು.

೧೨೩. ಮತ್ತು ಅಸ್ತ್ರದ ತೇಜಸ್ಸಿನಿಂದ ರಾಕ್ಷಸನ ಮಾಯಾರೂಪವು ನಾಶವಾಯಿತು. ತತ್‌ಕ್ಷಣವೇ ಆ ರಾಕ್ಷಸನು ಮಹಾಭಯಂಕರವಾದ ಅಟ್ಟಹಾಸವನ್ನು ಮಾಡುತ್ತ ಅಂತರ್ಧಾನವನ್ನು ಹೊಂದಿದನು.

೧೨೪. ಆ ರಾಕ್ಷಸೇಶ್ವರನು ಆಕಾಶದಲ್ಲಿ ಅದೃಶ್ಯನಾಗಿದ್ದುಕೊಂಡೇ ದೇವಸೈನ್ಯವನ್ನು ನಾಶಗೊಳಿಸುವುದೂ, ಅಮೋಘವೂ, ವಜ್ರಸಮಾನವೂ ಆದ ಶಸ್ತ್ರಗಳ ಮಳೆಯನ್ನು ಕರೆದನು.

ತಥಾ ಪರಶ್ವಥಾಂಶ್ಚಕ್ರವಜ್ರಬಾಣಾನ್ಸಮುದ್ಗರಾನ್ ।
ಕೃಂತಾನ್ಖಡ್ಗಾನ್ಭಿಂಡಿಪಾಲಾನಯೋಮುಖಗುಡಾಂಸ್ತಥಾ ॥ ೧೨೫ ॥
ವವರ್ಷ ದಾನವೋ ರೋಷಾದವಧ್ಯಾನಕ್ಷಯಾನಪಿ ।
ತೈರಸ್ತ್ರೈರ್ದಾನವೋನ್ಮುಕ್ತೈರ್ದೇವಾನೀಕೇಷು ಭೀಷಣೈಃ ।
ಬಾಹುಭಿರ್ಧರಣೀ ಪೂರ್ಣಾ ಶಿರೋಭಿಶ್ಚ ಸಕುಂಡಲೈಃ ॥ ೧೨೬ ॥
ಊರುಭಿರ್ಗಜಹಸ್ತಾಭೈಃ ಕರೀಂದ್ರೈಶ್ಚಾಚಲೋಪಮೈಃ ॥ ೧೨೭ ॥
ಭಗ್ನೇಷುದಂಡಚಕ್ರಾಕ್ಷೈ ರಥೈಶ್ಚ ರಥಿಭಿಃ ಸಹ ।
ದುಃಸಂಚಾರಾಭವತ್ಪೃಥ್ವೀ ಮಾಂಸಶೋಣಿತಕರ್ದಮಾ ॥ ೧೨೮ ॥
ರುಧಿರೌಘಹ್ರದಾವರ್ತಾ ಗಜದೇಹಶಿಲೋಚ್ಚಯಾ ।
ಕಬಂಧನೃತ್ಯಬಹುಲಾ ಮಹಾಸುರ ಪ್ರವಾಹಿನೀ ॥ ೧೨೯ ॥
ಶೃಗಾಲಗೃಧ್ರಧ್ವಾಂಕ್ಷಾಣಾಂ ಪರಮಾನಂದಕಾರಿಣೀ ।
ಪಿಶಾಚಜಾತಿಭಿಃ ಕೀರ್ಣಂ ಪೀತ್ವಾಮಿಷಂ ಸಶೋಣಿತಂ ।
ಅಸಂಭ್ರಮಾಭಿರ್ಭಾರ್ಯಾಭಿಃ ಸಹ ನೃತ್ಯದ್ಭಿರುದ್ಧತಾ ॥ ೧೩೦ ॥

---

೧೨೫–೧೨೬. ಆ ರಾಕ್ಷಸೇಶ್ವರನು ಕೋಪದಿಂದ ಅಪ್ರತಿಮಗಳೂ, ಅಕ್ಷಯಗಳೂ ಆದ ಪರಶು, ಚಕ್ರ, ವಜ್ರೋಪಮ ಬಾಣ, ಮುದ್ಗರ, ಕೃಂತ, ಖಡ್ಗ, ಭಿಂಡಿಪಾಲ, ಕಬ್ಬಿಣದ ಗುಂಡು ಮುಂತಾದ ಶಸ್ತ್ರಗಳ ವರ್ಷವನ್ನು ಸುರಿಸಿದನು. ದಾನವನಿಂದ ಸುರಸೈನ್ಯದಲ್ಲಿ ಬಿಡಲ್ಪಟ್ಟ ಭಯಂಕರ ಅಸ್ತ್ರಗಳಿಂದ ರಣರಂಗವೆಲ್ಲವೂ ಬಾಹುಗಳಿಂದಲೂ ಕುಂಡಲಾಲಂಕೃತಗಳಾದ ತಲೆಗಳಿಂದಲೂ ತುಂಬಿ ಹೋಯಿತು.

೧೨೭–೧೨೮. ಆನೆಯ ಸೊಂಡಿಲನ್ನು ಹೋಲುವ ಯೋಧರ ತೊಡೆಗಳಿಂದಲೂ, ಪರ್ವತಾಕಾರಗಳಾಗಿ ಕೆಡೆದಿರುವ ಆನೆಗಳ ದೇಹಗಳಿಂದಲೂ, ಶಿಥಿಲಗಳಾದ ಮೂಕೀಮರ, ಚಕ್ರ, ಅಚ್ಚುಗಳುಳ್ಳ ರಥಗಳಿಂದಲೂ, ಸಾರಥಿಗಳಿಂದಲೂ, ರಕ್ತಮಾಂಸಗಳ ಕೆಸರಿನಿಂದಲೂ ಭೂಮಿಯೆಲ್ಲವೂ ಸಂಚಾರಕ್ಕೆ ಅನರ್ಹವಾಯಿತು.

೧೨೯–೧೩೦. ಸುಳಿಗಳಿಂದ ಕೂಡಿದ ರಕ್ತದ ಸರೋವರಗಳಿಂದಲೂ, ಆನೆಗಳ ದೇಹಗಳೆಂಬ ದೊಡ್ಡ ಕಲ್ಲುಗುಂಡುಗಳಿಂದಲೂ, ತಲೆಯಿಲ್ಲದ ಮುಂಡಗಳ ಅಸಂಖ್ಯಾತ ನರ್ತನಗಳಿಂದಲೂ, ದೊಡ್ಡ ದೊಡ್ಡ ರಾಕ್ಷಸರ ಸಮೂಹದಿಂದಲೂ, ಆ ರಣಭೂಮಿಯು ನರಿಗಳು, ರಣಹದ್ದುಗಳು ಮತ್ತು ಕಾಗೆಗಳಿಗೆ ಮಹದಾನಂದವನ್ನುಂಟುಮಾಡುವುದಾಯಿತು. ಯಥಾಸಾವಕಾಶವಾಗಿ ರಕ್ತಸಹಿತವಾದ ಮಾಂಸವನ್ನು ಸೇವಿಸುತ್ತ ತಮ್ಮ ಹೆಂಡಂದಿರೊಡನೆ ನೃತ್ಯವನ್ನು ಮಾಡುತ್ತಿರುವ ಪಿಶಾಚಗಣಗಳಿಂದ ಆವೃತವಾಗಿದ್ದಿತು.

ಕಾಚಿತ್ಪತ್ನೀ ಪ್ರಕುಪಿತಾ ಗಜಕುಂಭಾಂತಮೌಕ್ತಿಕೈಃ ।
ಪಿಶಾಚೋ ಯತ್ರ ಚಾಶ್ವಾನಾಂ ಖುರಾನೇಕತ್ರ ಚಾಕರೋತ್ ॥ ೧೩೧ ॥
ಕರ್ಣಪೂರೇಷು ಮೋದಂತೇ ಪಶ್ಯಂತ್ಯನ್ಯಾಃ ಸರೋಷತಃ ।
ಪ್ರಸಾದಯಂತಿ ಬಹುಧಾ ಮಹಾಕರ್ಣಾರ್ಥಕೋವಿದಾಃ ॥ ೧೩೨ ॥
ಕೇಚಿದ್ವದಂತಿ ಭೋ ದೇವಾ ಭೋ ದೈತ್ಯಾಃ ಪ್ರಾರ್ಥಯಾಮಹೇ ।
ಆಕಲ್ಪಮೇವಂ ಯೋದ್ಧವ್ಯಮಸ್ಮಾಕಂ ತೃಪ್ತಿಹೇತವೇ ॥ ೧೩೩ ॥
ಕೇಚಿದೂಚುರಯಂ ದೈತ್ಯೋ ದೇವೋಽಯಮತಿಮಾಂಸಲಃ ।
ಮ್ರಿಯತೇ ಯದಿ ಸಂಗ್ರಾಮೇ ಧಾತುರ್ದದ್ಮೋಽಪಯಾಚಿತಂ ॥ ೧೩೪ ॥
ಕೇಚಿದ್ಯುದ್ಧ್ಯತ್ಸು ವೀರೇಷು ಸೃಕ್ಕಿಣೀ ಸಂಲಿಹಂತಿ ಚ ।
ಏತೇನ ಪಯಸಾ ವಿದ್ಮೋ ದುರ್ಜನಃ ಸುಜನೋ ಯಥಾ ॥ ೧೩೫ ॥
ಕೇಚಿದ್ರಕ್ತನದೀನಾಂ ಚ ತೀರೇಷ್ವಾಸ್ತಿಕ್ಯಬುದ್ಧಯಃ ।
ಪಿತೄನ್ ದೇವಾಸ್ತರ್ಪಯಂತಿ ಶೋಣಿತೈರ್ಮಾಮಿಶ್ರೈಶ್ಶುಭೈಃ ॥ ೧೩೬ ॥

---

೧೩೧. ಒಂದೆಡೆಯಲ್ಲಿ ಕುದುರೆಗಳ ಗೊರಸುಗಳಿಂದ ಅಲಂಕಾರವನ್ನು ಮಾಡಿಕೊಳ್ಳುತ್ತಿದ್ದ ಪಿಶಾಚನನ್ನು ಕಂಡು ಆನೆಗಳ ಕುಂಭಸ್ಥಳಗಳಿಂದುದುರಿದ ಮುತ್ತುಗಳನ್ನು ಆರಿಸುತ್ತಿದ್ದ ಅವನ ಪತ್ನಿಯು ಕೋಪಗೊಂಡಳು.

೧೩೨. ಕೆಲವರು ಕರ್ಣಕುಂಡಲಗಳಿಂದ ಸಂತೋಷಗೊಳ್ಳುತ್ತಿರಲು ಇತರ ಪಿಶಾಚಿಯರು ಅವರನ್ನು ರೋಷದಿಂದ ನೋಡುತ್ತಿದ್ದರು. ಕಿವಿಮಾತುಗಳಲ್ಲಿ ಅತ್ಯಂತ ನಿಪುಣರಾದ ಇತರರು ಅವರನ್ನು ಅನೇಕ ವಿಧಗಳಿಂದ ಪ್ರಸನ್ನೀಕರಿಸಿ ಕೊಳ್ಳುತ್ತಿದ್ದರು.

೧೩೩. ಕೆಲವರು "ಎಲೈ ದೇವತೆಗಳೆ! ಎಲೈ ರಾಕ್ಷಸರೆ! ನಮಗೆ ತೃಪ್ತಿಯನ್ನುಂಟುಮಾಡುವ ಸಲುವಾಗಿ ನೀವು ಕಲ್ಪಾಂತದವರೆಗೂ ಹೀಗೆಯೇ ಯುದ್ಧವನ್ನು ಮಾಡುತ್ತಿರಬೇಕೆಂದು ಪ್ರಾರ್ಥಿಸುವೆವು" ಎಂದು ಹೇಳುತ್ತಿದ್ದರು.

೧೩೪. ಮತ್ತೆ ಕೆಲವರು "ಈ ರಾಕ್ಷಸನೂ ದೇವನೂ ಅತ್ಯಂತ ಹೃಷ್ಟ ಪುಷ್ಟರಾಗಿರುವರು; ಇವರು ಯುದ್ಧದಲ್ಲಿ ಮಡಿದರೆ ಇವರನ್ನು ಸೃಷ್ಟಿಸಿದ ಬ್ರಹ್ಮನಿಗೆ ಯಥೋಚಿತವಾದ ಪೂಜೆಯನ್ನು ಮಾಡುವೆವು" ಎಂದರು.

೧೩೫—೧೩೬. ಕೆಲವರು ವೀರರ ಯುದ್ಧೋತ್ಸಾಹವನ್ನು ಕಂಡು "ಇವರ ಮುಖಗಳ ಬೆವರಿನ ರುಚಿಯಿಂದ ಯಾರು ದೇವತೆಗಳು, ಯಾರು ರಾಕ್ಷಸರು, ಎಂಬುದನ್ನು ತಿಳಿಯಬಹುದು" ಎಂದು ತಮ್ಮ ಕಟವಾಯಿಗಳನ್ನು ನೆಕ್ಕುತ್ತಿದ್ದರು. ವೈದಿಕ ಕರ್ಮಗಳಲ್ಲಿ ಆಸ್ತಿಕ ಬುದ್ಧಿಯುಳ್ಳ ಮತ್ತೆ ಕೆಲವು ಪಿಶಾಚಗಳು ರಕ್ತದ ನದಿಗಳ ದಡಗಳಲ್ಲಿ ಕುಳಿತು ಪಿತೃಗಳಿಗೂ ದೇವತೆಗಳಿಗೂ ಮಾಂಸಮಿಶ್ರಿತವಾದ ಉತ್ತಮ ರಕ್ತದಿಂದ ತರ್ಪಣಗಳನ್ನು ಕೊಡುತ್ತಿದ್ದುವು.

ಕೇಚಿದಾಮಿಷರಾಶಿಸ್ಥಾ ದೃಷ್ಟ್ವಾನ್ಯಸ್ಯ ಕರಾಮಿಷಂ ।
ದೇಹಿ ದೇಹೀತಿ ವಾಶಂತೋ ಧನಿನಃ ಕೃಪಣಾ ಯಥಾ ॥ ೧೩೭ ॥
ಕೇಚಿತ್ಸ್ವಯಂ ಪ್ರತೃಪ್ತಾಶ್ಚ ದೃಷ್ಟ್ವಾ ವೈ ಖಾದತಃ ಪರಾನ್ ।
ಸರೋಷಮೋಷ್ಠೌ ನಿರ್ಭುಜ್ಯ ಪಶ್ಯಂತ್ಯೇವಾತ್ಯಸೂಯಯಾ ॥ ೧೩೮ ॥
ಕೇಚಿತ್ಸ್ವಮುದರಂ ಕೃದ್ಧಾ ನಿಂದಂತಿ ತಾಡಯಂತಿ ಚ ।
ಸರ್ವಭಕ್ಷಮಭೀಪ್ಸಂತಸ್ತೃಪ್ತಾಃ ಪರಧನಂ ಯಥಾ ॥ ೧೩೯ ॥
ಕೇಚಿದಾಹುರದ್ಯ ಏವ ಶ್ಲಾಘ್ಯಾ ಸೃಷ್ಟಿಸ್ತು ವೇಧಸಃ ।
ಸುಪ್ರಭಾತಂ ಸುನಕ್ಷತ್ರಂ ಪೂರ್ವಮಾಸೀದ್ವೃಥೈವ ತತ್ ॥ ೧೪೦ ॥
ಏವಂ ಬಹುವಿಧಾಲಾಪೇ ಕುಲಾದಾನಾಂ ತತಸ್ತತಃ ।
ಅದೃಶ್ಯಃ ಸಮರೇ ಜಂಭೋ ದೇವಾನ್ಶಸ್ತ್ರೈರಚೂರ್ಣಯತ್ ॥ ೧೪೧ ॥
ತತಃ ಶಕ್ರೋ ಧನೇಶಶ್ಚ ವರುಣಃ ಪವನೋಽನಲಃ ।
ಯಮೋಽಥ ನಿರ್ಋತಿಶ್ಚಾಪಿ ದಿವ್ಯಾಸ್ತ್ರಾಣಿ ಮಹಾಬಲಾಃ ॥ ೧೪೨ ॥
ಆಕಾಶೇ ಮುಮುಚುಃ ಸರ್ವೇ ದಾನವಾಯಾಭಿಸಂಧ್ಯ ತು ॥ ೧೪೩ ॥

---

೧೩೭. ಕೆಲವು ಪಿಶಾಚಗಳು ತಾವೇ ಮಾಂಸರಾಶಿಗಳಮೇಲೆ ಕುಳಿತಿದ್ದರೂ ಇತರರ ಕೈಗಳಲ್ಲಿ ಮಾಂಸಪಿಂಡಗಳನ್ನು ಕಂಡು ಪರದ್ರವ್ಯವನ್ನಾಶಿಸುವ ಲೋಭಿಗಳಾದ ಧನಿಕರಂತೆ "ಕೊಡು, ಕೊಡು" ಎಂದು ಕೂಗಾಡುತ್ತಿದ್ದುವು.

೧೩೮. ಮತ್ತೆ ಕೆಲವರು ಹೊಟ್ಟೆಯು ಬಿರಿಯುವಂತೆ ಉಂಡಿದ್ದರೂ ಇತರರು ತಿನ್ನುವುದನ್ನು ಕಂಡು ಸಹಿಸಲಾರದೆ ರೋಷದಿಂದ ತುಟಿಗಳನ್ನು ನಾಲಿಗೆಯಿಂದ ಸವರುತ್ತ ಅಸೂಯೆಗೊಳ್ಳುತ್ತಿದ್ದರು.

೧೩೯. ಕೆಲವರು ಸರ್ವಭಕ್ಷಕತ್ವವನ್ನಪೇಕ್ಷಿಸುತ್ತ, ಕೋಪದಿಂದ ತಮ್ಮ ಹೊಟ್ಟೆಗಳನ್ನು ನಿಂದಿಸಿ ಹೊಯ್ದುಕೊಳ್ಳುತ್ತ ಅನುಕೂಲಸ್ಥರೂ ಕೂಡ ಪರಧನವನ್ನು ಆಶಿಸುವರೆಂಬುದಕ್ಕೆ ನಿದರ್ಶನವಾಗಿದ್ದರು.

೧೪೦. ಕೆಲವರು "ಇಂದೇ ಬ್ರಹ್ಮನ ಸೃಷ್ಟಿಯು ಉತ್ತಮರೀತಿಯದೆನಿಸಿತು. ಇಂದೇ ಶುಭೋದಯ ಕಾಲವು. ಈದಿನವೇ ಶುಭನಕ್ಷತ್ರದ ದಿನವು. ಇಲ್ಲಿಯವರೆಗೆ ಸೃಷ್ಟಿಕ್ರಿಯೆಯೆಲ್ಲವೂ ವ್ಯರ್ಥವೇ ಸರಿ" ಎಂದು ಮಾತನಾಡಿಕೊಂಡರು.

೧೪೧. ಇಂತು ಅಲ್ಲಲ್ಲಿ ಪಿಶಾಚಿಗಳು ಅನೇಕ ವಿಧಗಳಾಗಿ ಕೂಗಾಡುತ್ತಿರಲು ಜಂಭಾಸುರನು ಅಂತರ್ಧಾನವನ್ನೈದಿ ಆಕಾಶದಿಂದ ಶಸ್ತ್ರಗಳ ಮಳೆಯನ್ನು ಸುರಿಸಿ ದೇವತೆಗಳ ಸೈನ್ಯವನ್ನೆಲ್ಲ ಚೂರ್ಣಿಸತೊಡಗಿದನು.

೧೪೨–೧೪೩. ಆಗ ಇಂದ್ರನು, ಕುಬೇರ, ವರುಣ, ವಾಯು, ಅಗ್ನಿ

ವ್ಯರ್ಥತಾಂ ಜಗ್ಮುರಸ್ತ್ರಾಣಿ ದೇವಾನಾಂ ದಾನವಂ ಪ್ರತಿ ।
ಯಥಾತಿಕ್ರೂರಚಿತ್ತಾನಾಮಾರ್ಯೇ ಕೃತ್ಯಕತಾನ್ಯಪಿ ॥ ೧೪೪ ॥
ಗತಿಂ ನ ವಿವಿದುಶ್ಚಾಪಿ ಶ್ರಾಂತಾ ದೈತ್ಯಾಶ್ಚ ದೇವತಾಃ ।
ದೈತ್ಯಾಸ್ತ್ರಭಿನ್ನಸರ್ವಾಂಗಾ ಗಾವಃ ಶೀತಾರ್ದಿತಾ ಇವ ॥ ೧೪೫ ॥
ಪರಸ್ಪರಂ ವ್ಯಲೀಯಂತ ಹಾಹಾ ಕಿಂಭಾವಿವಾದಿನಃ ।
ತಾಮುವಸ್ಥಾಂ ಹರಿರ್ದೃಷ್ಟ್ವಾ ದೇವಾನ್ಶಕ್ರಮುವಾಚ ಹ ॥ ೧೪೬ ॥
ಅಘೋರಮಂತ್ರಂ ಸ್ಮರ ದೇವರಾಜ
ಅಸ್ತ್ರಂ ಹಿ ಯತ್ಪಾಶುಪತಪ್ರಭಾವಂ ।
ರುದ್ರೇಣ ತುಷ್ಟೇನ ತವ ಪ್ರದತ್ತ
ಮವ್ಯಾಹತಂ ವೀರವರಾಭಿಘಾತಿ ॥ ೧೪೭ ॥
ಏವಂ ಸ ಶಕ್ರೋ ಹರಿಬೋಧಿತಸ್ತದಾ
ಪ್ರಣಮ್ಯ ದೇವಂ ವೃಷಕೇತುಮೀಶ್ವರಂ ।
ಸಮಾದದೇ ಬಾಣಮಮಿತ್ರ ಘಾತನಂ
ಸಂಪೂಜಿತಂ ದೈವರತೇಽರ್ಧಚಂದ್ರಂ ॥ ೧೪೮ ॥

---

ಯಮ, ನಿರ್ಋತಿಗಳೂ ಮಹಾಬಲಶಾಲಿಗಳಾದುದರಿಂದ ರಾಕ್ಷಸನನ್ನು ಕುರಿತು ಅನೇಕ ದಿವ್ಯಾಸ್ತ್ರಗಳನ್ನು ಆಕಾಶದಲ್ಲಿ ಪ್ರಯೋಗಮಾಡಿದರು.

೧೪೪. ಆದರೆ ಪರಿಶುದ್ಧನಾದ ಬ್ರಾಹ್ಮಣೋತ್ತಮನಲ್ಲಿ ಕ್ರೂರಮನಸ್ಕರಾದವರು ಮಾಡುವ ಅನೇಕ ಅಕಾರ್ಯಗಳಂತೆ ದೇವತೆಗಳ ಅಸ್ತ್ರಗಳೆಲ್ಲವೂ ರಾಕ್ಷಸನ ವಿಷಯದಲ್ಲಿ ವ್ಯರ್ಥವಾಗಿ ಪರಿಣಮಿಸಿದುವು.

೧೪೫–೧೪೬. ಅಂತರ್ಹಿತನಾದ ರಾಕ್ಷಸನಿಂದ ಅಸ್ತ್ರಗಳು ಒಂದೇ ಸಮನೆ ಸುರಿಯುತ್ತಿರಲು ಅವುಗಳಿಂದ ಭಿನ್ನಭಿನ್ನಗಳಾದ ಶರೀರವುಳ್ಳವರಾಗಿ ದೇವತೆಗಳೂ ದಾನವರೂ ಸಹ ಚಳಿಗೆ ಸಿಕ್ಕಿದ ಗೋವುಗಳಂತೆ ಮುಂದು ಗತಿಯನ್ನು ಕಾಣದಾದರು. "ಅಯ್ಯೋ! ಮುಂದೇನು ಮಾಡೋಣ" ಎಂಬದಾಗಿ ಕೂಗಾಡಿಕೊಳ್ಳುತ್ತ ಎರಡು ಸೈನ್ಯಗಳೂ ಕಲೆತುವು. ಈ ದುರವಸ್ಥೆಯನ್ನು ಕಂಡು ಶ್ರೀ ಮಹಾವಿಷ್ಣುವು ದೇವತೆಗಳನ್ನೂ ಮಹೇಂದ್ರನನ್ನೂ ಕುರಿತು ಹೇಳತೊಡಗಿದನು.

೧೪೭–೧೪೮. "ಎಲೈ ಸುರನಾಯಕನೇ! ಪಾಶುಪತಾಸ್ತ್ರಕ್ಕೆ ಸಮಾನವಾದುದೂ ಸಂತೋಷಗೊಂಡ ರುದ್ರನಿಂದ ನಿನಗೆ ಕೊಡಲ್ಪಟ್ಟುದೂ ಅಪ್ರತಿಹತವಾದುದೂ ಶತ್ರುವೀರನನ್ನು ಸದೆಬಡಿಯುವುದೂ ಆದಂತಹ ನಿನ್ನ ಅಘೋರಾಸ್ತ್ರ ಮಂತ್ರವನ್ನು ಸ್ಮರಿಸಿಕೊ". ಇಂತು ಹರಿಯಿಂದ ಜ್ಞಾಪಿಸಲ್ಪಟ್ಟವನಾಗಿ ಇಂದ್ರನು ವೃಷಾಂಕನಾದ ಮಹೇಶ್ವರನಿಗೆ ಮನಸ್ಸಿನಲ್ಲಿಯೇ ನಮಸ್ಕರಿಸಿ,

ಧನುಷ್ಯಜಯ್ಯೇ ವಿನಿಯೋಜ್ಯ ಬುದ್ಧಿಮಾ
ನ್ನ್ಯಯೋಜಯತ್ತತ್ರ ಅಘೋರಮಂತ್ರಂ ॥ ೧೪೯ ॥
ತತೋ ವಧಾಯಾಶು ಮಹೋಜ ತಸ್ಯಾ
ಆಕೃಷ್ಯ ಕರ್ಣಾಂತಮಕುಂಠದೀಧಿತಿಂ ।
ಅಥಾಸುರಃ ಪ್ರೇಕ್ಷ್ಯ ಮಹಾಸ್ತ್ರಮಾಪತ
ದ್ವಿಸೃಜ್ಯ ಮಾಯಾಂ ಸಹಸಾ ವ್ಯವಸ್ಥಿತಃ ॥ ೧೫೦ ॥
ಪ್ರವೇಪಮಾನೇನ ಮುಖೇನ ಯುಜ್ಯತಾ
ಚಲೇನ ಗಾತ್ರೇಣ ಚ ಸಂಭ್ರಮಾಕುಲಃ ।
ತತಸ್ತು ತಸ್ಯಾಸ್ತ್ರವರಾಭಿಮಂತ್ರಿತಃ
ಶರೋಽರ್ಧಚಂದ್ರಃ ಪ್ರಸಭಂ ಮಹಾರಣೇ ॥ ೧೫೧ ॥
ಪುರಂದರಸ್ಯೇಷ್ವಾಸನಪ್ರಮುಕ್ತೋ ।
ಮಧ್ಯಾರ್ಕಬಿಂಬಂ ವಪುಷಾ ವಿಡಂಬಯನ್ ॥ ೧೫೨ ॥
ಕಿರೀಟಕೂಟಸ್ಫುರಕಾಂತಿಸಂಕುಲಂ
ಸುಗಂಧಿ ನಾನಾ ಕುಸುಮಾಧಿವಾಸಿತಂ ।
ಪ್ರಕೀರ್ಣಧೂಮ ಜ್ವಲನಾಭಮೂರ್ಧಜಂ
ನ್ಯಪಾತಯಜ್ಜಂಭಶಿರಃ ಸ ಕುಂಡಲಂ ॥ ೧೫೩ ॥

---

ರಾಕ್ಷಸ ಯುದ್ಧದಲ್ಲಿ ಶತ್ರುಗಳನ್ನು ನಿರ್ಮೂಲಮಾಡತಕ್ಕ ಅರ್ಧಚಂದ್ರಾಕಾರವಾದ ಅಸ್ತ್ರವನ್ನು ಪೂಜಿಸಿ ಕೈಗೆ ತೆಗೆದುಕೊಂಡನು.

೧೪೯. ಮತ್ತು ಬುದ್ಧಿವಂತನಾಗಿ ತನ್ನ ಅಜೇಯವಾದ ಧನುಸ್ಸಿನಲ್ಲಿ ಬಾಣವನ್ನು ಸೇರಿಸಿ ಅಘೋರಾಸ್ತ್ರದ ಮಂತ್ರವನ್ನು ಜಪಿಸಿದನು.

೧೫೦. ಮತ್ತು ಅಪರಿಮಿತವಾದ ತೇಜಸ್ಸಿನಿಂದ ಕೂಡಿದ ಬಾಣವನ್ನು ಕಿವಿಯ ವರೆಗೂ ಎಳೆದು ಆ ರಾಕ್ಷಸನ ವಧೆಯ ಉದ್ದೇಶದಿಂದ ವೇಗವಾಗಿ ಬಿಟ್ಟನು. ಆ ಮಹಾಸ್ತ್ರವು ಮೇಲೆರಗುತ್ತಿರುವುದನ್ನು ಕಂಡು ಜಂಭಾಸುರನೂ ತನ್ನ ಮಾಯೆಯನ್ನು ವಿಸರ್ಜಿಸಿ ಭೂಮಿಯಲ್ಲಿ ನಿಂತನು.

೧೫೧–೧೫೩. ಆ ರಾಕ್ಷಸನು ಸ್ಫುರಿಸುತ್ತಿರುವ ಮುಖದಿಂದಲೂ ಕಂಪಿಸುತ್ತಿರುವ ದೇಹದಿಂದಲೂ ಮನಸ್ಸಿನ ಸಂಭ್ರಮದಿಂದಲೂ ವ್ಯಾಕುಲಗೊಂಡಿದ್ದನು. ಆ ಸಮಯದಲ್ಲಿ ಅಘೋರಾಸ್ತ್ರದಿಂದ ಅಭಿಮಂತ್ರಿಸಲ್ಪಟ್ಟ ಅರ್ಧಚಂದ್ರಾಕಾರವಾದ ಬಾಣವು ಮಹೇಂದ್ರನಿಂದ ವೇಗವಾಗಿ ಬಿಡಲ್ಪಟ್ಟುದಾಗಿ ತೇಜಸ್ಸಿನಿಂದ ಮಧ್ಯಾಹ್ನದ ಸೂರ್ಯನನ್ನೂ ಧಿಕ್ಕರಿಸುತ್ತ, ಕಿರೀಟಮಣಿಗಳ ಕಾಂತಿಯಿಂದ ಕೂಡಿದುದೂ ಸುಗಂಧ ಸಹಿತಗಳಾದ ಅನೇಕ ಪುಷ್ಪ ಸಾರಗಳಿಂದ ವಾಸಿತವಾದುದೂ ಹೊಗೆಯಿಲ್ಲದ ಬೆಂಕಿಯ, ಜ್ವಾಲೆಗಳನ್ನು ಹೋಲುವ

ತಸ್ಮಿನ್ನಿಂದ್ರಹತೇ ಜಂಭೇ ಪ್ರಶಶಂಸುಃ ಸುರಾ ಬಹು ।
ವಾಸುದೇವೋಽಪಿ ಭಗವಾನ್ಸಾಧು ಸಾಧ್ವಿತಿ ಚಾಬ್ರವೀತ್ ॥ ೧೫೪ ॥
ತತೋ ಜಂಭಂ ಹತಂ ದೃಷ್ಟ್ವಾ ದಾನವೇಂದ್ರಾಃ ಪರಾಙ್ಮುಖಾಃ ।
ಸರ್ವೇ ತೇ ಭಗ್ನಸಂಕಲ್ಪಾ ದುದ್ರುವುಸ್ತಾರಕಂ ಪ್ರತಿ ॥ ೧೫೫ ॥
ತಾಂಶ್ಚ ತ್ರಸ್ತಾನ್ಸಮಾಲೋಕ್ಯ ಶ್ರುತ್ವಾ ಸ ಚತುರೋ ಹತಾನ್ ।
ಸಾರಥಿಂ ಪ್ರೇರಯಾಮಾಸ ಯಾಹೀಂದ್ರಂ ಲಘು ಸಂಗರೇ ॥ ೧೫೬ ॥
ತಥೇತ್ಯುಕ್ತ್ವಾ ಸ ಚ ಪ್ರಾಯಾತ್ತಾರಕೇ ರಥಮಾಸ್ಥಿತೇ ।
ಸಾವಲೇಪಂ ಚ ಸಕ್ರೋಧಂ ಸಗರ್ವಂ ಸಪರಾಕ್ರಮಮ್ ॥ ೧೫೭ ॥
ಸಾವಿಷ್ಕಾರಂ ಸಧಿಕ್ಕಾರಂ ಪ್ರಯಾತೋ ದಾನವೇಶ್ವರಃ ।
ಸ ಯುಕ್ತಂ ರಥಮಾಸ್ಥಾಯ ಸಹಸ್ರೇಣ ಗರುತ್ಮತಾಂ ॥ ೧೫೮ ॥
ಸರ್ವಾಯುಧಪರಿಷ್ಕಾರಂ ಸರ್ವಾಸ್ತ್ರಪರಿರಕ್ಷಿತಂ ।
ತ್ರೈಲೋಕ್ಯಋದ್ಧಿಸಂಪನ್ನಂ ಕಲ್ಪಾಂತಾಂತಕನಾದಿತಂ ॥ ೧೫೯ ॥

---

ಕೂದಲುಳ್ಳುದುದೂ, ಕುಂಡಲಾಲಂಕೃತವಾದುದೂ ಆಗಿ ರಂಜಿಸುತ್ತಿದ್ದ ಜಂಭಾಸುರನ ಶಿರಸ್ಸನ್ನು ನೆಲಕ್ಕೆ ಕೆಡವಿತು.

೧೫೪. ಜಂಭಾಸುರನು ಮಹೇಂದ್ರನಿಂದ ಹತನಾಗಲು ದೇವತೆಗಳು ಆತನನ್ನು ಬಹುವಿಧವಾಗಿ ಹೊಗಳಿದರು. ಭಗವಂತನಾದ ನಾರಾಯಣನೂ ಆತನ ರಣಕರ್ಮವನ್ನು ಶ್ಲಾಘನೆಮಾಡಿದನು.

೧೫೫. ಮರಣವನ್ನು ಹೊಂದಿದ ಜಂಭನನ್ನು ಕಂಡು ರಾಕ್ಷಸರೆಲ್ಲರೂ ಯುದ್ಧದಿಂದ ಪರಾಙ್ಮುಖರಾಗಿ ತಮ್ಮ ಆಶೆಗಳೆಲ್ಲವೂ ನಿರರ್ಥಕಗಳಾದುದರಿಂದ ತಾರಕಾಸುರನನ್ನು ಮರೆಹೊಕ್ಕರು.

೧೫೬. ಅವರೆಲ್ಲರೂ ಭಯಗೊಂಡಿರುವುದನ್ನು ಕಂಡು, ಗಜಾಸುರ, ನಿಮಿ, ಜಂಭ ಮೊದಲಾದವರು ಹತರಾದುದನ್ನೂ ಕೇಳಿ ತಾರಕನು "ಬೇಗನೆ ಯುದ್ಧರಂಗದಲ್ಲಿ ಇಂದ್ರನಿಗೆದುರಾಗಿ ರಥವನ್ನು ತೆಗೆದುಕೊಂಡು ಹೋಗು" ಎಂದು ತನ್ನ ಸಾರಥಿಗೆ ಅಪ್ಪಣೆಮಾಡಿದನು.

೧೫೭–೧೫೯. ಹಾಗೆಯೇ ಆಗಲೆಂದು ತಾರಕನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಸಾರಥಿಯು ಹೊರಟನು. ಆ ರಾಕ್ಷಸೇಂದ್ರನು ಗಾಂಭೀರ್ಯದಿಂದಲೂ, ಕ್ರೋಧದಿಂದಲೂ, ಗರ್ವದಿಂದಲೂ, ಪರಾಕ್ರಮದಿಂದಲೂ, ಅಭಿವ್ಯಕ್ತಿಯಿಂದಲೂ, ಧಿಕ್ಕಾರದಿಂದಲೂ ಯುದ್ಧಕ್ಕೆ ಅನುವಾದನು. ಅವನು ಸಾವಿರಾರು ಪಕ್ಷಿಗಳಿಂದಲಂಕೃತವಾದುದೂ, ಸಮಸ್ತ ಆಯುಧಗಳಿಂದ ಪೂರ್ಣವಾದುದೂ, ಸಕಲಾಸ್ತ್ರಗಳಿಂದ ರಕ್ಷಿತವಾದುದೂ, ಮೂರು ಲೋಕಗಳ ಐಶ್ವರ್ಯದಿಂದ ಸಮೃದ್ಧವಾದುದೂ ಪ್ರಳಯಕಾಲದ ಯಮನಂತೆ ಭಯಂಕರ ಶಬ್ದವನ್ನು

ಸೈನ್ಯೇನ ಮಹತಾ ಯುಕ್ತೋ ನಾದಯನ್ವಿದಿಶೋ ದಿಶಃ ।
ಸಹಸ್ರಾಕ್ಷಶ್ಚ ತಂ ದೃಷ್ಟ್ವಾ ತ್ಯಕ್ತ್ವಾ ವಾಹನದಂತಿನಂ ॥ ೧೬೦ ॥
ರಥಂ ಮಾತಲಿನಾ ಯುಕ್ತಂ ತಪ್ತಹೇಮಪರಿಷ್ಕೃತಂ ।
ಚತುರ್ಯೋಜನವಿಸ್ತೀರ್ಣಂ ಸಿದ್ಧಸಂಘಪರಿಷ್ಕೃತಂ ॥ ೧೬೧ ॥
ಗಂಧರ್ವ ಕಿನ್ನರೋದ್ಗೀತಮಪ್ಸರೋ ನೃತ್ಯಸಂಕುಲಂ ॥ ೧೬೨ ॥
ಸರ್ವಾಯುಧಮಹಾಬಾಧಂ ಮಹಾರತ್ನಸಮಾಚಿತಂ ।
ಅಧ್ಯತಿಷ್ಠತ್ತಂ ರಥಂ ಚ ಪರಿವಾರ್ಯ ಸಮಂತತಃ ।
ದಂಶಿತಾ ಲೋಕಪಾಲಾಶ್ಚ ತಸ್ಥುಃ ಸಗರುಡಧ್ವಜಾಃ ॥ ೧೬೩ ॥
ತತಶ್ಚಚಾಲ ವಸುಧಾ ವವೌ ರೂಕ್ಷೋ ಮರುದ್ಗಣೈಃ ।
ಚೇಲುಶ್ಚ ಸಾಗರಾಃ ಸಪ್ತ ತಥಾನಶ್ಯದ್ರವೇಃ ಪ್ರಭಾ ॥ ೧೬೪ ॥
ತತೋ ಜಜ್ವಲುರಸ್ತ್ರಾಣಿ ತತೋಽಕಂಪಂತ ವಾಹನಾಃ ।
ತತಃ ಸಮಸ್ತಮುದ್ವೃತ್ತಂ ತತೋಽದೃಶ್ಯತ ತಾರಕಃ ॥ ೧೬೫ ॥

---

ಮಾಡುವುದೂ ಆದ ರಥದಲ್ಲಿ ಕುಳಿತು ಅನಂತವಾದ ಸೈನ್ಯದಿಂದ ಕೂಡಿದವನಾಗಿ ದಿಕ್ಕುದಿಕ್ಕುಗಳಲ್ಲಿಯೂ ಜಯಘೋಷವು ಪ್ರತಿಧ್ವನಿಸುತ್ತಿರಲು ಯುದ್ಧಕ್ಕೆ ಹೊರಟನು.

೧೬೦–೧೬೨. ಈ ಪ್ರಕಾರವಾಗಿ ರಾಕ್ಷಸೇಶ್ವರನಾದ ಆ ತಾರಕ ದೈತ್ಯನು ರಣಭೂಮಿಯನ್ನು ಪ್ರವೇಶಿಸಿದುದನ್ನು ಕಂಡು ದೇವಾಧೀಶ್ವರನಾದ ಮಹೇಂದ್ರನೂ ಕೂಡ ತನ್ನ ವಾಹನವಾದ ಐರಾವತವನ್ನು ಬಿಟ್ಟು ಮಹಾದ್ಭುತವಾದ ರಥವನ್ನೇರಿದನು. ಆ ರಥವಾದರೋ ಮಾತಲಿಯ ಸಾರಥ್ಯವುಳ್ಳದೂ, ಪುಟಕ್ಕೆ ಹಾಕಿದ ಚಿನ್ನದಿಂದಲಂಕೃತವಾದುದೂ, ನಾಲ್ಕುಯೋಜನ ವಿಸ್ತಾರವುಳ್ಳದೂ, ಸಿದ್ಧ ಸಮೂಹಗಳಿಂದ ಸೇವಿತವಾದುದೂ, ಗಂಧರ್ವ, ಕಿನ್ನರರ ಗೀತಗಳಿಂದ ಮನೋಹರವಾದುದೂ, ಅಪ್ಸರಸ್ತ್ರೀಯರ ನೃತ್ಯಗಳಿಂದ ಕೂಡಿದುದೂ, ಸಕಲಾಯುಧಗಳಿಂದ ಪರಿಪೂರ್ಣವಾದುದೂ, ನವರತ್ನಗಳಿಂದಲಂಕೃತವಾದುದೂ ಆಗಿದ್ದಿತು. ಇಂತಹ ಮಹಾರಥವನ್ನು ಮಹೇಂದ್ರನು ಏರಿದನು.

೧೬೩. ಆ ರಥವನ್ನು ಸುತ್ತಲೂ ಬಳಸಿಕೊಂಡು ವಿಷ್ಣುವಿನೊಡನೆ ಸಕಲ ಲೋಕಪಾಲಕರೂ ಕವಚಗಳನ್ನು ಧರಿಸಿಕೊಂಡು ರಕ್ಷಿಸಲು ನಿಂತರು.

೧೬೪–೧೬೫. ಆಗ ಭೂಮಿಯು ಕಂಪಿಸಿತು. ವಾಯುವು ತೀಕ್ಷ್ಣವಾಗಿ ಬೀಸತೊಡಗಿತು. ಸಪ್ತಸಮುದ್ರಗಳೂ ಅಲ್ಲಕಲ್ಲೋಲವಾದುವು. ಸೂರ್ಯನ ತೇಜಸ್ಸು ಕಳೆಗುಂದಿತು. ಯೋಧರ ಅಸ್ತ್ರಗಳು ಜ್ವಲಿಸಿದುವು. ಗಜ, ರಥ, ತುರಗಗಳು ಕಂಪಿಸಿದುವು. ಲೋಕವೆಲ್ಲವೂ ಮೇರೆತಪ್ಪಿತು. ಆ ತಾರಕಾಸುರನು ರಣರಂಗದಲ್ಲಿ ಕಾಣುವವನಾದನು.

ಏಕತಸ್ತಾರಕೋ ದೈತ್ಯಃ ಸುರಸಂಘಾಸ್ತ್ವಥೈಕತಃ ।
ಲೋಕಾವಸಾದಮೇಕತ್ರ ಲೋಕೋದ್ಧರಣಮೇಕತಃ ॥ ೧೬೬ ॥
ಚರಾಚರಾಣಿ ಭೂತಾನಿ ಭಯವಿಸ್ಮಯವಂತಿ ಚ ॥ ೧೬೭ ॥
ಪ್ರಶಶಂಸುಃ ಸುರಾಃ ಪಾರ್ಥ ತದಾ ತಸ್ಮಿನ್ಸಮಾಗಮೇ ॥ ೧೬೮ ॥
ಅಸ್ತ್ರಾಣಿ ತೇಜಾಂಸಿ ಧನಾನಿ ಯೋಧಾ
ಯಶೋ ಬಲಂ ವೀರಪರಾಕ್ರಮಾಶ್ಚ ।
ಸತ್ತ್ವೌಜಸಾನ್ಯಂಗ ಬಭೂವುರೇಷಾಂ ।
ದೇವಾಸುರಾಣಾಃ ತಪಸಃ ಪರಂತು ನಃ ॥ ೧೬೯ ॥
ಅಥಾಭಿಮುಖಮಾಯಾಂತಂ ದೇವಾ ವಿನತಪರ್ವಭಿಃ ।
ಬಾಣೈರನಲಕಲ್ಪಾಗ್ರೈ ರ್ವಿವ್ಯಧುಸ್ತಾರಕಂ ಪ್ರತಿ ॥ ೧೭೦ ॥
ಸ ತಾನಚಿಂತ್ಯ ದೈತ್ಯೇಂದ್ರೋ ದೇವಬಾಣಕ್ಷತಾನ್ಹೃದಿ ।
ಬಾಣೈರ್ವ್ಯೋಮ ದಿಶಃ ಪೃಥ್ವೀಂ ಪೂರಯಾಮಾಸ ದಾನವಃ ॥ ೧೭೧ ॥

---

೧೬೬. ಒಂದು ಕಡೆ ಲೋಕವನ್ನೆಲ್ಲ ನಾಶಗೊಳಿಸುವ ಭಯಂಕರವಾದ ಪ್ರಳಯಶಕ್ತಿಯೇ ರೂಪುಗೊಂಡಂತೆ ದಾನವೇಶ್ವರನಾದ ತಾರಕಾಸುರನು ನಿಂತನು. ಮತ್ತೊಂದು ಕಡೆ ಲೋಕೋದ್ಧಾರಕ ಶಕ್ತಿಯ ಮೂರ್ತಿಯಂತೆ ದೇವತೆಗಳ ಸೇನಾ ಸಮೂಹವು ಸೇರಿತು.

೧೬೭–೧೬೮. ಆ ಸಮಯದಲ್ಲಿ ಸಕಲ ಚರಾಚರಪ್ರಾಣಿಗಳೂ ಏಕಕಾಲ ದಲ್ಲಿಯೇ ಅಪರಿಮಿತವಾದ ಭಯವನ್ನೂ, ವಿಸ್ಮಯವನ್ನೂ ಹೊಂದಿದುವು. ಅರ್ಜುನಾ! ಈ ಪ್ರಕಾರವಾಗಿ ಇಂದ್ರ ತಾರಕರಿಗೆ ಯುದ್ಧವು ಪ್ರಾರಂಭವಾಗಲು ದೇವತೆಗಳೆಲ್ಲರೂ ಮಹೇಂದ್ರನನ್ನು ಪ್ರಶಂಸಿಸಿದರು.

೧೬೯. ಎಲೈ ಪ್ರಿಯನಾದ ಪಾರ್ಥನೆ! ಆ ದೇವದಾನವರ ಅಸ್ತ್ರಗಳು, ತೇಜಸ್ಸು, ಐಶ್ವರ್ಯ, ಸೈನ್ಯಗಳು, ಯಶಸ್ಸು, ದೇಹದಾರ್ಢ್ಯ, ವೀರ್ಯಯುಕ್ತ ವಾದ ಪರಾಕ್ರಮ, ಸತ್ತ್ವ, ಬುದ್ಧಿ – ಇವುಗಳೆಲ್ಲವೂ ನಮ್ಮ ಆಲೋಚನೆಗೆ ಸಿಕ್ಕಲಾರದಷ್ಟು ಮಹತ್ವದ್ದಾಗಿದ್ದುವು.

೧೭೦. ಆಗ ಎದುರಾಗಿ ಬರುತ್ತಿರುವ ತಾರಕನನ್ನು ತಡೆಯಲು ದೇವತೆ ಗಳು ದೃಢಪರ್ವಗಳುಳ್ಳವೂ, ಬೆಂಕಿಯಂತೆ ಜ್ವಲಿಸುತ್ತಿರುವ ಮುಖಗಳುಳ್ಳವೂ ಆದ ಬಾಣಗಳಿಂದ ವ್ಯಥೆಗೊಳಿಸಿದರು.

೧೭೧. ಆ ದೇವತೆಗಳ ಬಾಣಗಳನ್ನು ಮನಸ್ಸಿಗೇ ಹಚ್ಚಿಕೊಳ್ಳದೆ ರಾಕ್ಷ ಸೇಶ್ವರನು ತನ್ನ ಬಾಣಗಳಿಂದ ಆಕಾಶವನ್ನೂ, ಅಷ್ಟದಿಕ್ಕುಗಳನ್ನೂ ಭೂಮಿ ಯನ್ನೂ ತುಂಬಿಬಿಟ್ಟನು.

ನಾರಾಯಣಂ ಚ ಸಪ್ತತ್ಯಾ ನವತ್ಯಾ ಚ ಹುತಾಶನಂ ।
ದಶಭಿರ್ಮಾರುತಂ ಮೂರ್ಧ್ನಿ ಯಮಂ ದಶಭಿರೇವ ಚ ॥ ೧೭೨ ॥
ಧನದಂ ಚೈವ ಸಪ್ತತ್ಯಾ ವರುಣಂ ಚ ತಥಾಷ್ಟಭಿಃ ।
ವಿಂಶತ್ಯಾ ನಿಋೃತಿಂ ದೈತ್ಯಃ ಪುನಶ್ಚಾಷ್ಟಾಭಿರೇವ ಚ ।
ವಿವ್ಯಾಧ ಪುನರೇಕೈಕಂ ದಶಭಿರ್ಮರ್ಮಭೇದಿಭಿಃ ॥ ೧೭೩ ॥
ತಥಾ ಚ ಮಾತಲಿಂ ದೈತ್ಯೋ ವಿವ್ಯಾಧ ತ್ರಿಭಿರಾಶುಗೈಃ ।
ಗರುಡಂ ದಶಭಿಶ್ಚೈವ ಮಹಿಷಂ ನವಭಿಸ್ತಥಾ ॥ ೧೭೪ ॥
ಪುನರ್ದೈತ್ಯೋಽಥ ದೇವಾನಾಂ ತಿಲಶೋ ನತಪರ್ವಭಿಃ ।
ಚಕಾರ ಮರ್ಮಜಾಲಾನಿ ಚಿಚ್ಛೇದ ಚ ಧನೂಂಷಿ ಚ ॥ ೧೭೫ ॥
ತತೋ ವಿಕವಚಾ ದೇವಾ ವಿಧನುಷ್ಕಾಃ ಪ್ರಪೀಡಿತಾಃ ।
ಚಾಪಾನ್ಯನ್ಯಾನಿ ಸಂಗೃಹ್ಯ ಯಾವನ್ಮುಂಚಂತಿ ಸಾಯಕಾನ್ ॥ ೧೭೬ ॥
ತಾವದ್ಬಾಣಂ ಸಮಾಧಾಯ ಕಾಲಾನಲಸಮಪ್ರಭಂ ।
ತಾಡಯಾಮಾಸ ಶಕ್ರಂ ಸ ಹೃದಿ ಸೋಽಪಿ ಮುಮೋಹ ಚ ॥ ೧೭೭ ॥

---

೧೭೨. ಇಷ್ಟೇಯಲ್ಲದೆ ಆ ರಾಕ್ಷಸನು ಶ್ರೀ ಮಹಾವಿಷ್ಣುವನ್ನು ಎಪ್ಪತ್ತು ಬಾಣಗಳಿಂದಲೂ, ಅಗ್ನಿಯನ್ನು ತೊಂಭತ್ತರಿಂದಲೂ, ಹತ್ತರಿಂದ ವಾಯುವನ್ನು ತಲೆಯಲ್ಲಿಯೂ, ಯಮನನ್ನು ಹತ್ತರಿಂದಲೂ ಹೊಡೆದನು.

೧೭೩. ಕುಬೇರನನ್ನು ಎಪ್ಪತ್ತರಿಂದಲೂ, ವರುಣನನ್ನು ಎಂಟರಿಂದಲೂ, ನಿಋತಿಯನ್ನು ಇಪ್ಪತ್ತೆಂಟು ಬಾಣಗಳಿಂದಲೂ ಹೊಡೆದನು. ಪುನಃ ಒಬ್ಬೊಬ್ಬನಿಗೂ ಹತ್ತು ಮರ್ಮಭೇದಕಗಳಾದ ಬಾಣಗಳನ್ನು ಪ್ರಯೋಗಿಸಿ ಗಾಸಿಗೊಳಿಸಿದನು.

೧೭೪–೧೭೫. ಆ ದೈತ್ಯೇಂದ್ರನು ಇಂದ್ರನ ಮಾತಲಿಯನ್ನು ಮೂರು ಬಾಣಗಳಿಂದಲೂ, ಗರುಡನನ್ನು ಹತ್ತರಿಂದಲೂ, ಯಮನ ವಾಹನವಾದ ಮಹಿಷವನ್ನು ಒಂಭತ್ತು ಬಾಣಗಳಿಂದಲೂ ಹೊಡೆದನು. ರಾಕ್ಷಸನು ಸಮವಾದ ಗಂಟುಗಳುಳ್ಳ ಬಾಣಗಳಿಂದ ದೇವತೆಗಳ ಕವಚಗಳನ್ನೆಲ್ಲ ಎಳ್ಳುಕಾಳಿನಷ್ಟು ಚೂರುಗಳನ್ನಾಗಿ ಕಡಿದು ಅವರ ಬಿಲ್ಲುಗಳನ್ನೂ ಕತ್ತರಿಸಿಹಾಕಿದನು.

೧೭೬–೧೭೭. ಬಳಿಕ ದೇವತೆಗಳು ಕವಚಗಳಿಲ್ಲದೆ ಬರಿಗೈಗಳುಳ್ಳವರಾಗಿ ವ್ಯಥೆಗೊಂಡು ದಿಕ್ಕುತೋರದೆ ಬೇರೆ ಧನುಸ್ಸುಗಳನ್ನು ಸಜ್ಜುಗೊಳಿಸಿಕೊಂಡು ಬಾಣಗಳನ್ನು ಹೂಡಿ ಬಿಡುವಷ್ಟರಲ್ಲಿಯೇ ಮಹಾ ಪರಾಕ್ರಮಿಯಾದ ಆ ತಾರಕ ದೈತ್ಯನು ಪ್ರಳಯಾಗ್ನಿಗೆ ಸಮಾನವಾಥ ತೇಜಸ್ಸಿನ ಬಾಣವೊಂದನ್ನು ಬಿಲ್ಲಿಗೇರಿಸಿ ಮಹೇಂದ್ರನನ್ನು ಹೃದಯ ಪ್ರದೇಶದಲ್ಲಿ ಹೊಡೆಯಲು ಅವನು ಒಡನೆಯೇ ಮೂರ್ಛೆಗೊಂಡು ಬಿದ್ದನು.

ತತೋಽಂತರಿಕ್ಷಮಾಲೋಕ್ಯ ದೃಷ್ಟ್ವಾ ಸೂರ್ಯಶತಾಕೃತೀ ।
ತಾರ್ಕ್ಷ್ಯವಿಷ್ಣೂ ಸಮಾಜಘ್ನೇ ಶರಾಭ್ಯಾಂ ತಾವಮುಹ್ಯತಾಂ ॥ ೧೭೮ ॥
ಪ್ರೇತನಾಥಸ್ಯ ವಹ್ನೇಶ್ಚ ವರುಣಸ್ಯ ಶಿತೈಃ ಶರೈಃ ।
ನಿರ್ಋತೇಶ್ಚಾಕರೋತ್ಕಾರ್ಯಂ ಭೀತಭೀತಂ ವಿಮೋಹಯನ್ ॥ ೧೭೯ ॥
ನಿರುಚ್ಛ್ವಾಸಂ ಸಮಾಹೃತ್ಯ ಚಕ್ರೇ ಬಾಣೈಃ ಸಮೀರಣಂ ॥ ೧೮೦ ॥
ತತಃ ಪ್ರಾಪ್ಯ ಹರಿಃ ಸಂಜ್ಞಾಂ ಪ್ರೋತ್ಸಾಹ್ಯ ಚ ದಿಶಾಂ ಪತೀನ್ ।
ಬಾಣೇನ ಸಾರಥೇಃ ಕಾಯಾಚ್ಛಿರೋಽಹಾರ್ಷೀತ್ಸಕುಂಡಲಂ ॥ ೧೮೧ ॥
ಧೂಮಕೇತೋರ್ಜ್ವಲತ್ಯದ್ಧಸ್ತಸ್ಯ ಛಿತ್ವಾ ನ್ಯಪಾತಯತ್ ।
ದೈತ್ಯರಾಜಕಿರೀಟಂ ಚ ಚಿಚ್ಛೇದ ವಾಸ್ತವಸ್ತತಃ ॥ ೧೮೨ ॥
ಧನೇಶಶ್ಚ ಧನುಃಕ್ರುದ್ಧೋ ಬಿಭೇದ ಬಹುಧಾಶರೈಃ ।
ವಾಯುಶ್ಚಕ್ರೇ ಚ ತಿಲಶೋ ರಥಂ ವಾ ಕ್ಷ್ಣೋಣಿಕೂಬರಂ ॥ ೧೮೩ ॥
ನಿರ್ಋತಿಸ್ತಿಲಶೋ ವರ್ಮ ಚಕ್ರೇ ಬಾಣೈಸ್ತತೋ ರಣೇ ।
ಕೃತ್ವೈತದತುಲಂ ಕರ್ಮ ತಿಷ್ಠ ತಿಷ್ಠೇತಿ ಚಾಬ್ರುವನ್ ॥ ೧೮೪ ॥

---

೧೭೮. ಆಗ ತಾರಕನು ಆಕಾಶದಲ್ಲಿ ನೂರು ಸೂರ್ಯರು ಏಕಕಾಲದಲ್ಲಿ ಉದಯಿಸಿದಂತೆ ಬೆಳಗುತ್ತಿರುವ ಗರುಡನಾರಾಯಣರನ್ನು ಕಂಡು ಎರಡು ಬಾಣಗಳಿಂದಲೇ ಅವರನ್ನು ಮೂರ್ಛೆಗೊಳಿಸಿದನು.

೧೭೯. ಯಮ, ಅಗ್ನಿ, ವರುಣ ಮತ್ತು ನಿರ್ಋತಿಯರು ಭಯದಿಂದ ಮೋಹಗೊಳ್ಳುವಂತೆ ಮಾಡಿ ತೀಕ್ಷ್ಣಗಳಾದ ಬಾಣಗಳಿಂದ ಅದ್ಭುತ ಪರಾಕ್ರಮವನ್ನು ತೋರಿಸಿದನು.

೧೮೦–೧೮೧. ಮತ್ತು ಬಾಣಗಳಿಂದ ವಾಯುದೇವನನ್ನು ನಿರೋಧಿಸಿ ಉಸಿರಾಡದಂತೆ ಮಾಡಿದನು. ಆಗ ವಿಷ್ಣುವು ಮೂರ್ಛೆಯಿಂದೆದ್ದು ದಿಕ್ಪಾಲಕರನ್ನೆಲ್ಲ ಪ್ರೋತ್ಸಾಹಗೊಳಿಸುತ್ತ ಒಂದು ಬಾಣದಿಂದ ಸಾರಥಿಯ ಕುಂಡಲಾಲಂಕೃತವಾದ ತಲೆಯನ್ನು ಶರೀರದಿಂದ ಕತ್ತರಿಸಿದನು.

೧೮೨. ಕ್ರೋಧದಿಂದ ಉರಿಯುತ್ತಿರುವವನಾಗಿ ಧೂಮಕೇತುವೆಂಬ ಆ ಸಾರಥಿಯ ತಲೆಯನ್ನು ಛೇದಿಸಿ ಭೂಮಿಯಲ್ಲಿ ಕೆಡವಿದನು. ಮಹೇಂದ್ರನು ಆ ಸಮಯದಲ್ಲಿಯೇ ತಾರಕಾಸುರನ ಕಿರೀಟವನ್ನು ಮುರಿದುಹಾಕಿದನು.

೧೮೩–೧೮೪. ಕುಬೇರನು ಕೋಪಗೊಂಡು ಬಾಣಗಳಿಂದ ಆ ರಾಕ್ಷಸನ ಧನುಸ್ಸನ್ನು ತುಂಡುಗಳಾಗಿ ಕತ್ತರಿಸಿದನು. ವಾಯುವು ರಥದ ಮೂಕಿಯ ಮರವನ್ನು ಚೂರ್ಣಿಸಿ ಅದನ್ನು ಭೂಮಿಗಿಳಿಸಿದನು. ಆಗ ನಿರ್ಋತಿಯು ರಣರಂಗಕ್ಕೆ ಬಂದು ತಾರಕನ ಕವಚವನ್ನು ತಿಲಶಃ ಕತ್ತರಿಸಿದನು. ಇಂತು

ಲಿಹಂತಃ ಸೃಕ್ಕಿಣೀಂ ದೇವಾ ವಾಸುದೇವಾದಯಸ್ತದಾ ।
ದೃಷ್ಟ್ವಾ ತತ್ಕರ್ಮ ದೇವಾನಾಂ ತಾರಕೋಽತುಲವಿಕ್ರಮಃ ॥ ೧೪೫ ॥
ಮುಮೋಚ ಮುದ್ಗರಂ ಭೀಮಂ ಸಹಸ್ರಾಕ್ಷಾಯ ಸಂಗರೇ ।
ದೃಷ್ಟ್ವಾ ಮುದ್ಗರಮಾಯಾಂತಮನಿವಾರ್ಯಂ ರಣಾಜಿರೇ ॥ ೧೪೬ ॥
ರಥಾದಾಪ್ಲುತ್ಯ ಧರಣೀಮಗಮತ್ಪಾಕಶಾಸನಃ ।
ಮುದ್ಗರೋಽಪಿ ರಥೋಪಸ್ಥೇ ಪಪಾತ ಪರುಷಸ್ವನಃ ॥ ೧೪೭ ॥
ಸ ರಥಂ ಚೂರ್ಣಯಾಮಾಸ ನ ಮಮಾರ ಚ ಮಾತಲಿಃ ।
ಗೃಹೀತ್ವಾ ಪಟ್ಟಿಶಂ ದೈತ್ಯೋ ಜಘಾನೋರಸಿ ಕೇಶವಂ ॥ ೧೪೮ ॥
ಸ್ಕಂಧೇ ಗರುತ್ಮತಃ ಸೋಽಪಿ ವಿಷಸಾದ ವಿಚೇತನಃ ।
ಖಡ್ಗೇನ ರಾಕ್ಷಸೇಂದ್ರಂಚ ಭಿತ್ವಾ ಭೂಮಾವಪಾತಯತ್ ॥ ೧೪೯ ॥
ಯಮಂ ಚ ಪಾತಯಾಮಾಸ ಭೂಯೋ ದೈತ್ಯೋ ಮುಖೇ ಹತಂ ।
ವಹ್ನಿಂ ಚ ಭಿಂಡಿಪಾಲೇನ ಚಕ್ರೇ ಹತ್ವಾ ವಿಚೇತನಂ ॥ ೧೫೦ ॥
ವಾಯುಂ ಪದಾ ತದಾಕ್ಷಿಪ್ಯ ಪಾತಯಾಮಾಸ ಭೂತಲೇ ।
ಧನೇಶಂ ತದ್ಧನುಷ್ಕೋಟ್ಯಾ ಕುಟ್ಟಯಾಮಾಸ ಕೋಪನಃ ॥ ೧೫೧ ॥

---

ಅಪ್ರತಿಮವಾದ ಕರ್ಮವನ್ನು ಮಾಡಿ ನಾರಾಯಣನೇ ಮೊದಲಾದ ದೇವತೆಗಳು ತುಟಿಗಳನ್ನು ನೆಕ್ಕಿಕೊಳ್ಳುತ್ತ "ನಿಲ್ಲು, ನಿಲ್ಲು" ಎಂದು ಕೂಗುತ್ತಿದ್ದರು.

೧೪೫. ದೇವತೆಗಳು ಮಾಡಿದ ಈ ಕೆಲಸವನ್ನು ಕಂಡು ಅಸಮಬಲಶಾಲಿಯಾದ ತಾರಕಾಸುರನು ಯುದ್ಧವನ್ನು ಮಾಡುತ್ತ ಇಂದ್ರನಿಗೆ ಗುರಿಯಿಟ್ಟು ಭಯಂಕರವಾದ ಗದೆಯನ್ನು ಬೀಸಿಬಿಟ್ಟನು.

೧೪೬. ತಡೆಯಲಸಾಧ್ಯವಾದ ಮುದ್ಗರವು ಬರುತ್ತಿರುವುದನ್ನು ನೋಡಿ ಮಹೇಂದ್ರನು ರಥದಿಂದ ಹಾರಿ ಭೂಮಿಯ ಮೇಲೆ ನಿಂತನು.

೧೪೭. ಆ ಗದೆಯು ಕಠಿನ ಶಬ್ದವನ್ನು ಮಾಡುತ್ತ ರಥದ ಮೇಲೆ ಬೀಳಲು ರಥವನ್ನು ಪುಡಿಮಾಡಿತು. ಸಾರಥಿಯಾದ ಮಾತಲಿಯು ಮಾತ್ರ ಸಾಯಲಿಲ್ಲ.

೧೪೮–೧೫೦. ಬಳಿಕ ರಾಕ್ಷಸೇಶ್ವರನು ಪಟ್ಟಿಶವನ್ನು ಕೈಯಲ್ಲಿ ಹಿಡಿದು ನಾರಾಯಣನ ಹೃದಯಕ್ಕೆ ಹೊಡೆಯಲು, ಆತನು ನಿಶ್ಚೇಷ್ಟವಾಗಿ ತನ್ನ ವಾಹನವಾದ ಗರುಡನ ಮೇಲೆಯೇ ಬಿದ್ದಿದ್ದನು. ಬಳಿಕ ತಾರಕನು ನಿರ್ಋತಿಯನ್ನು ಖಡ್ಗದಿಂದ ಪ್ರಹರಿಸಿ ಭೂಮಿಗೆ ಕೆಡವಿದನು. ಯಮನನ್ನೂ ಕೂಡ ಮುಖದಲ್ಲಿ ಮರ್ದಿಸಿ ಭೂಮಿಯಲ್ಲಿ ಬೀಳಿಸಿದನು. ಅಗ್ನಿಯನ್ನು ಭಿಂಡಿಪಾಲವೆಂಬ ಆಯುಧದಿಂದ ಹೊಡೆದು ನಿಶ್ಚೇತನನನ್ನಾಗಿ ಮಾಡಿದನು.

೧೫೧. ವಾಯುವನ್ನು ಕಾಲಿನಿಂದ ತುಳಿದು ಭೂಮಿಯ ಮೇಲೆ ಮಲಗಿಸಿದನು. ಕುಬೇರನನ್ನು ತನ್ನ ಧನುರ್ದಂಡದಿಂದ ಅಪ್ಪಳಿಸಿ ಕೆಡಹಿದನು.

ತತೋ ದೇವನಿಕಾಯಾನಾಮೇಕೈಕಂ ಕ್ಷಣಮಾತ್ರತಃ ।
ತೇಷಾಮೇವ ಜಘಾನಾಸೌ ಶಸ್ತ್ರೈರ್ಬಾಲಾನ್ಯಥಾಗುರುಃ ॥ ೧೯೨ ॥
ಲಬ್ಧಸಂಜ್ಞಸ್ತತೋ ವಿಷ್ಣುಶ್ಚಕ್ರಂ ಜಗ್ರಾಹ ದುರ್ಧರಂ ।
ದಾನವೇಂದ್ರವಸಾಮೇದೋರುಧಿರೇಣಾಭಿರಂಜಿತಂ ॥ ೧೯೩ ॥
ಮುಮೋಚ ದಾನವೇಂದ್ರಸ್ಯ ದೃಢಂ ವಕ್ಷಸಿ ಕೇಶವಃ ।
ಪಪಾತ ಚಕ್ರಂ ದೈತ್ಯಸ್ಯ ಪತಿತಂ ಭಾಸ್ಕರದ್ಯುತಿ ॥ ೧೯೪ ॥
ವ್ಯಶೀರ್ಯತಾಥ ಕಾಯೇಽಸ್ಯ ನೀಲೋತ್ಪಲಮಿವಾಶ್ಮನಿ ।
ತತೋ ವಜ್ರಂ ಮಹೇಂದ್ರೋಽಪಿ ಪ್ರಮುಮೋಚಾರ್ಚಿತಂ ಚಿರಂ ॥ ೧೯೫ ॥
ತಸ್ಮಿನ್ಜಯಾಶಾ ಶಕ್ರಸ್ಯ ದಾನವೇಂದ್ರಾಯ ಸಂಯುಗೇ ।
ತಾರಕಸ್ಯತು ಸಂಪ್ರಾಪ್ಯ ಶರೀರಂ ಶೌರ್ಯಶಾಲಿನಃ ॥ ೧೯೬ ॥
ವಿಶೀರ್ಯತ ವಿಕೀರ್ಣಾರ್ಚಿಃ ಶತಧಾ ಖಂಡಶೋ ಗತಂ ।
ತತೋ ವಾಯುರದೀನಾತ್ಮಾ ವೇಗೇನ ಮಹತಾ ನದನ್ ॥ ೧೯೭ ॥

---

೧೯೨. ಮತ್ತು ದೇವತೆಗಳ ಸೈನ್ಯದಲ್ಲಿ ಒಂದೊಂದು ಭಾಗವನ್ನೂ ಕ್ಷಣ ಮಾತ್ರದಲ್ಲಿಯೇ ಆಕ್ರಮಿಸಿಕೊಂಡು, ಉಪಾಧ್ಯಾಯನು ಶಿಷ್ಯರನ್ನು ಶಿಕ್ಷಿಸು ವಂತೆ ಅವರ ಅಸ್ತ್ರಶಸ್ತ್ರಗಳಿಂದ ಅವರನ್ನೇ ಪ್ರಹರಿಸಿದನು.

೧೯೩. ಇಷ್ಟರಲ್ಲಿ ಮಹಾವಿಷ್ಣುವು ಚೇತರಿಸಿಕೊಂಡು ಅನೇಕ ರಾಕ್ಷಸರ ಮಾಂಸ, ಮೇದಸ್ಸು, ರಕ್ತಗಳಿಂದ ಲೇಪಗೊಂಡು ಅಪ್ರತಿಮವಾದ ತನ್ನ ಚಕ್ರ ವನ್ನು ಕೈಗೆ ತೆಗೆದುಕೊಂಡನು.

೧೯೪. ಮತ್ತು ಬಲವಾಗಿ ತಿರುಗಿಸಿ ಅದನ್ನು ಆ ರಾಕ್ಷಸೇಶ್ವರನ ಎದೆಗೆ ಗುರಿ ಯಿಟ್ಟು ಬೀಸಿದನು. ಆ ಚಕ್ರವು ರಾಕ್ಷಸನಿಗೆ ತಗುಲಿತು. ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳ ಆ ಚಕ್ರವು ರಾಕ್ಷಸನ ಶರೀರಕ್ಕೆ ತಗುಲಿ ಕಲ್ಲಿಗೆ ಅಪ್ಪಳಿಸಿದ ಕಮಲಪುಷ್ಪದಂತೆ ತಾನೇ ಭಿನ್ನವಾಯಿತು.

೧೯೫. ಬಳಿಕ ಮಹೇಂದ್ರನೂ ಕೂಡ ಬಹಳ ಕಾಲದಿಂದ ಪೂಜಿಸುತ್ತಿದ್ದ ತನ್ನ ವಜ್ರಾಯುಧವನ್ನು ಪ್ರಯೋಗಿಸಿದನು. ಯುದ್ಧದಲ್ಲಿ ದಾನವೇಶ್ವರನನ್ನು ಗೆಲ್ಲಲು ಮಹೇಂದ್ರನಿಗೆ ಅದರಲ್ಲಿಯೇ ಪೂರ್ಣ ನಂಬುಗೆಯಿದ್ದಿತು.

೧೯೬. ಆದರೆ ಆ ಆಯುಧವು ವೀರಾಗ್ರೇಸರನಾದ ತಾರಕನ ಶರೀರವನ್ನು ಹೊಂದಿ ಕಿಡಿಗಳನ್ನು ಕಾರುತ್ತ ಭಿನ್ನವಾಗಿ ನೂರಾರು ಶಕಲಗಳಾಗಿ ನಿಷ್ಫಲ ವಾಯಿತು.

೧೯೭. ಆಗ ಧೈರ್ಯಾನ್ವಿತನಾದ ವಾಯುವು ಸಿಂಹನಾದವನ್ನು ಮಾಡುತ್ತ ಅತ್ಯಂತ ವೇಗದಿಂದ ಪ್ರಾಪ್ತನಾಗಿ ಪ್ರಜ್ವಲಿಸುವ ಬೆಂಕಿಯನ್ನು ಹೋಲುವ ಅಂಕುಶವನ್ನು ಎಸೆದನು.

ಜ್ವಲಿತಜ್ವಲನಾಭಾಸಮಂಕುಶಂ ಪ್ರಮುಮೋಚ ಹ ।
ವಿಶೀರ್ಣಂ ತಚ್ಚ ತಸ್ಯಾಂಗೇ ದೃಷ್ಟ್ವಾ ವಾಯುರ್ಮಹಾರುಷಾ ॥ ೧೯೮ ॥
ತತಃ ಶೈಲೇಂದ್ರಮುತ್ಪಾಟ್ಯ ಪುಷ್ಪಿತದ್ರುಮಕಂದರಂ ।
ಚಿಕ್ಷೇಪ ದಾನವೇಂದ್ರಾಯ ದಶಯೋಜನವಿಸ್ತೃತಂ ॥ ೧೯೯ ॥
ಮಹೀಧರಂ ತಮಾಯಾಂತಂ ಸಸ್ಮಿತಂ ದೈತ್ಯಪುಂಗವಃ ।
ಜಗ್ರಾಹ ವಾಮಹಸ್ತೇನ ಬಾಲಕಂದುಕಲೀಲಯಾ ॥ ೨೦೦ ॥
ತತಸ್ತೇನೈವ ಚಾಹತ್ಯ ಪಾತಯಾಮಾಸ ಚಾಂತಕಂ ।
ದಂಡಂ ತತಃ ಸಮುದ್ಯಮ್ಯ ಕೃತಾಂತಃ ಕ್ರೋಧಮೂರ್ಛಿತಃ ॥ ೨೦೧ ॥
ದೈತ್ಯೇಂದ್ರಮೂರ್ಧ್ನಿ ಚಿಕ್ಷೇಪ ಭ್ರಾಮ್ಯ ವೇಗೇನ ದುರ್ಜಯಂ ।
ಸೋಽಸುರಸ್ಯಾಪತನ್ಮೂರ್ಧ್ನಿ ದೈತ್ಯಸ್ತಂ ಜಗೃಹೇ ಸ್ಮಯನ್ ॥ ೨೦೨ ॥
ಕಲ್ಪಾಂತಲೋಕದಹನೋ ಜ್ವಲನೋ ರೋಷಸಂಜ್ವಲನ್ ।
ಶಕ್ತಿಂ ಚಿಕ್ಷೇಪ ದುರ್ಧರ್ಷಾಂ ದಾನವೇಂದ್ರಾಯ ಸಂಯುಗೇ ॥ ೨೦೩ ॥
ತತಃ ಶಿರೀಷಮಾಲೇವ ಸಾಸ್ಯ ವಕ್ಷಸ್ಯರಾಜತ ।
ತತಃ ಖಡ್ಗಂ ಸಮಾಕೃಷ್ಯ ಕೋಶಾದಾಕಾಶನಿರ್ಮಲಂ ॥ ೨೦೪ ॥

---

೧೯೮–೧೯೯. ಅದೂ ಆ ರಾಕ್ಷಸನ ಶರೀರದಲ್ಲಿ ಭಿನ್ನಭಿನ್ನವಾಯಿತು. ಅದನ್ನು ಕಂಡು ವಾಯುವು ಮಹಾರೋಷದಿಂದ ಹೂವುಗಳುಳ್ಳ ಮರಗಳಿಂದ ತುಂಬಿದ ಹತ್ತುಯೋಜನದಗಲದ ದೊಡ್ಡ ಪರ್ವತಾಗ್ರವನ್ನು ಕಿತ್ತು ರಾಕ್ಷಸನ ಮೇಲೆ ಬೀಸಿದನು.

೨೦೦. ಆ ರಾಕ್ಷಸನಾದರೊ, ತನ್ನ ಮೇಲೆ ಬರುತ್ತಿರುವ ಪರ್ವತವನ್ನು ಕಂಡು ನಗುತ್ತ ಹುಡುಗರು ಚೆಂಡನ್ನು ಹಿಡಿಯುವಂತೆ ಅನಾಯಾಸವಾಗಿ ಅದನ್ನು ಎಡಗೈಯಲ್ಲಿ ಹಿಡಿದುಕೊಂಡನು.

೨೦೧. ಮತ್ತು ಅದರಿಂದಲೇ ಯಮನನ್ನು ಹೊಡೆದು ನೆಲಕ್ಕೆ ಬೀಳಿಸಿದನು. ಯಮನು ಮೇಲಕ್ಕೆದ್ದು ಕೋಪದಿಂದ ಮೈಮರೆತು ಅಜೇಯವಾದ ತನ್ನ ದಂಡವನ್ನು ವೇಗವಾಗಿ ತಿರುಗಿಸಿ ರಾಕ್ಷಸೇಂದ್ರನ ತಲೆಯಮೇಲೆ ಹೊಡೆದನು.

೨೦೨–೨೦೩. ಅದು ತಲೆಯಮೇಲೆ ಬೀಳುತ್ತಿರುವಂತೆಯೇ ತಾರಕಾಸುರನು ನಗುತ್ತ ಅದನ್ನು ಕೈಯಲ್ಲಿ ಹಿಡಿದನು. ಅಗ್ನಿಯು ಪ್ರಳಯಕಾಲದ ಅಗ್ನಿಯಂತೆ ರೋಷದಿಂದ ಉರಿಯುತ್ತ ಯುದ್ಧಕ್ಕೆ ನಿಂತು ರಾಕ್ಷಸನಮೇಲೆ ತನ್ನ ಅಪ್ರತಿಹತವಾದ ಶಕ್ತ್ಯಾಯುಧವನ್ನು ಬೀಸಿದನು.

೨೦೪–೨೦೫. ಆ ಆಯುಧವೂ ರಾಕ್ಷಸನ ವಕ್ಷಸ್ಥಳದಲ್ಲಿ ಶಿರೀಷಮಾಲೆಯಂತೆ ರಾಜಿಸುತ್ತಿತ್ತು. ಆಗ ಲೋಕಪಾಲಕನಾದ ನಿರ್ಋತಿಯೂ ಕೂಡ

ದ್ಯುತಿಭಾಸಿತತ್ರೈಲೋಕ್ಯಂ ಲೋಕಪಾಲೋಽಪಿ ನಿರ್ಮಲಾಕೃತಿಃ ।
ಚಿಕ್ಷೇಪ ದಾನವೇಂದ್ರಾಯ ತಸ್ಯ ಮೂರ್ಧ್ನಿ ಪಪಾತಹ ॥ ೨೦೫ ॥
ಪತಿತಶ್ಚಾಗಮತ್ಖಡ್ಗಃ ಸ ಶೀಘ್ರಂ ಶತಖಂಡತಾಂ ।
ಜಲೇಶಶ್ಚ ತತಃ ಕ್ರುದ್ಧೋ ಮಹಾಭೈರವರೂಪಿಣಂ ॥ ೨೦೬ ॥
ಮುಮೋಚ ಪಾಶಂ ದೈತ್ಯೇಂದ್ರಭುಜಬಂಧಾಭಿಲಾಷುಕಃ ।
ಸ ದೈತ್ಯಭುಜಮಾಸಾದ್ಯ ಪಾಶಃ ಸದ್ಯೋ ವ್ಯಪದ್ಯತ ॥ ೨೦೭ ॥
ಸ್ಫುಟಿತಃ ಕ್ರಕಚಕ್ರೂರದಶನಾಲಿರಹೀಶ್ವರಃ ।
ತತೋಽಶ್ವಿನೌ ಸಚಂದ್ರಾರ್ಕೌ ಸಾಧ್ಯಾಶ್ಚ ವಸವಶ್ಚ ಯೇ ॥ ೨೦೮ ॥
ಯಕ್ಷರಾಕ್ಷಸಗಂಧರ್ವಾಃ ಸರ್ಪಾಶ್ಚಾಸ್ತ್ರೈಃ ಪೃಥಗ್ವಿಧೈಃ ।
ಜಘ್ನುರ್ದೈತ್ಯೇಶ್ವರಂ ಸರ್ವೇ ಭೂಯಶಸ್ತೇ ಮಹಾಬಲಾಃ ॥ ೨೦೯ ॥
ನ ಚಾಸ್ತ್ರಾಣ್ಯಸ್ಯ ಸಜ್ಜಂತ ಗಾತ್ರೇ ವಜ್ರಾಚಲೋಪಮೇ ।
ತತೋ ದೇವಾನವಪ್ಲುತ್ಯ ತಾರಕೋ ದಾನವಾಧಿಪಃ ॥ ೨೧೦ ॥

---

ಆಕಾಶದಂತೆ ಶುಭ್ರವಾದುದೂ, ಕಾಂತಿಯಿಂದ ಮೂರು ಲೋಕಗಳನ್ನು ಬೆಳಗುವುದೂ ಆದ ತನ್ನ ಖಡ್ಗವನ್ನು ಒರೆಯಿಂದ ಸೆಳೆದು ರಾಕ್ಷಸನಿಗೆ ಗುರಿಯಿಟ್ಟು ಹೊಡೆಯಲು, ಅದು ಆತನ ತಲೆಯ ಮೇಲೆ ಬಿದ್ದಿತು.

೨೦೬. ತಾರಕನ ವಜ್ರಶರೀರದಲ್ಲಿ ಬಿದ್ದ ಆ ಖಡ್ಗವು ತಕ್ಷಣದಲ್ಲಿಯೇ ನೂರಾರು ಚೂರುಗಳಾಗಿ ನಾಶವಾಯಿತು. ಅದನ್ನು ಕಂಡು ಕ್ರೋಧಗೊಂಡ ವರುಣನು ರಾಕ್ಷಸೇಶ್ವರನ ಬಾಹುಗಳನ್ನು ಬಿಗಿಯಬೇಕೆಂಬ ಅಭಿಲಾಷೆಯುಳ್ಳವನಾಗಿ ಭಯಂಕರವಾದ ಸ್ವರೂಪವುಳ್ಳ ತನ್ನ ಪಾಶವನ್ನು ಬಿಟ್ಟನು.

೨೦೭. ಆ ಪಾಶವು ಗರಗಸದಂತೆ ಕ್ರೂರಗಳಾದ ಹಲ್ಲುಗಳುಳ್ಳ ಸರ್ಪಗಳನ್ನು ಸೃಷ್ಟಿಸುವುದಾಗಿದ್ದರೂ, ರಾಕ್ಷಸನ ಭುಜವನ್ನು ಸಮೀಪಿಸಿ ನುಚ್ಚುನುಚ್ಚಾಗಿ ಒಡೆದುಹೋಯಿತು.

೨೦೮–೨೦೯. ಬಳಿಕ ಅಶ್ವಿನಿದೇವತೆಯರು, ಚಂದ್ರಸೂರ್ಯರು, ಸಾಧ್ಯರು, ಅಷ್ಟವಸುಗಳು, ಯಕ್ಷರು, ರಾಕ್ಷಸರು, ಗಂಧರ್ವರು, ನಾಗರು ಮುಂತಾದ ಮಹಾ ಬಲಶಾಲಿಗಳಾದವರೆಲ್ಲರೂ ವಿಧವಿಧಗಳಾದ ಅಸ್ತ್ರಗಳಿಂದ ರಾಕ್ಷಸೇಂದ್ರನನ್ನು ಹೊಡೆದರು.

೨೧೦. ಆದರೆ ವಜ್ರಸಮಾನವಾದ ಆತನ ದೇಹದಲ್ಲಿ ಯಾವ ಅಸ್ತ್ರಗಳೂ ಉಪಯೋಗವಾಗಲಿಲ್ಲ. ರಾಕ್ಷಸರ ಅಧಿಪತಿಯಾದ ತಾರಕಾಸುರನು ಆಗ ಕೋಪದಿಂದ ದೇವತೆಗಳ ಸೈನ್ಯದ ಮೇಲೆ ಬಿದ್ದು ಮುಷ್ಟಿಪ್ರಹಾರದಿಂದಲೂ, ಪಾದಘಾತದಿಂದಲೂ ಕೋಟಿಗಟ್ಟಲೆ ಜನರನ್ನು ಸಂಹರಿಸತೊಡಗಿದನು.

ಜಘಾನ ಕೋಟಿಶಃ ಕ್ರುದ್ಧೋ ಮುಷ್ಟಿಪಾರ್ಷ್ಣಿಭಿರೇವ ಚ ।
ತಥಾವಿಧಂ ತಸ್ಯ ವೀರ್ಯಮಾಲೋಕ್ಯ ಭಗವಾನ್‌ಹರಿಃ ॥ ೨೧೧ ॥
ಪಲಾಯಧ್ವಮಹೋ ದೇವಾ ವದನ್ನಂತರ್ಹಿತೋಽಭವತ್ ।
ಶಕ್ರಾದಯಸ್ತತೋ ದೇವಾಃ ಪಲಾಯನಕೃತಾದರಾಃ ॥ ೨೧೨ ॥
ಕಾಲನೇಮಿಮುಖೈರ್ದೈತ್ಯೈರುಪರುದ್ಧಾ ಮದೋತ್ಕಟೈಃ ।
ಮುಷ್ಟಿಭಿಃ ಪಾದಘಾತೈಶ್ಚ ಕೇಶೇಷ್ವಾಕೃಷ್ಯ ತೈರ್ಮುದಾ ॥ ೨೧೩ ॥
ತಾರಿತಾಃ ಶುಷ್ಕಸರಿತಂ ದೇವಮಾರ್ಗಾಶ್ಚ ದರ್ಶಿತಾಃ ।
ಬಹುಧಾ ಚಾಪ್ಯಕೃಷ್ಯಂತ ಲೋಕಪಾಲಾ ಮಹಾಸುರೈಃ ॥ ೨೧೪ ॥
ತತೋ ನಿನಾದಃ ಸಂಜಜ್ಞೇ ದೈತ್ಯಾನಾಂ ಬಲಶಾಲಿನಾಂ ।
ಕಂಪಯನ್ಪೃಥಿವೀಂ ದ್ಯಾಂ ಚ ಪಾತಾಲಾನಿ ಚ ಭಾರತ ॥ ೨೧೫ ॥
ಜಯೇತಿ ಮುದಿತಾ ದೈತ್ಯಾಸ್ತುಷ್ಟುವುಸ್ತಾರಕಂ ತದಾ ।
ಶಂಖಾಂಶ್ಚ ಪೂರಯಾಮಾಸುಃ ಕುಂದೇಂದು ಸದೃಶಪ್ರಭಾನ್ ॥ ೨೧೬ ॥
ಧನುರ್ಬಾಣರವಾಂಶ್ಚೋಗ್ರಾನ್ಕರಾಘಾತಾಂಶ್ಚ ಚಕ್ರಿರೇ ।
ಭೃಶಂ ಹರ್ಷಾನ್ವಿತಾ ದೈತ್ಯಾ ನೇದುಶ್ಚ ನನೃತುರ್ಮುಹುಃ ॥ ೨೧೭ ॥

---

೨೧೧–೨೧೨. ಈ ವಿಧವಾದ ರಾಕ್ಷಸನ ಪರಾಕ್ರಮವನ್ನು ನೋಡಿ ಭಗವಂತನಾದ ನಾರಾಯಣನು "ಎಲೈ ದೇವತೆಗಳೆ! ನೀವೆಲ್ಲರೂ ಓಡಿಹೋಗಿರಿ" ಎಂದು ಹೇಳಿ ಅಂತರ್ಧಾನವನ್ನು ಹೊಂದಿದನು. ಬಳಿಕ ಇಂದ್ರನೇ ಮೊದಲಾದ ದೇವತೆಗಳು ಪಲಾಯನವನ್ನು ಮಾಡಲಿಚ್ಛಿಸಿ ಮದದಿಂದ ಉದ್ಧತರಾದ ಕಾಲನೇಮಿಯೊಡಗೂಡಿದ ರಾಕ್ಷಸರಿಂದ ತಡೆಯಲ್ಪಟ್ಟರು.

೨೧೩. ಅವರ ಮುಷ್ಟಿಘಾತಗಳನ್ನೂ ಪಾದಪ್ರಹಾರಗಳನ್ನೂ, ಕೇಶಗ್ರಹಣಾದಿ ಕ್ಲೇಶಗಳನ್ನೂ ಸಹಿಸಿಕೊಂಡು ಕಷ್ಟದಿಂದ ಪಾರಾಗಿ ಶತ್ರುಗಳಿಗೆ ಬೆನ್ನುತೋರಿಸಿ ಓಡಿದರು.

೨೧೪–೨೧೫. ಲೋಕಪಾಲಕರೆಲ್ಲರೂ ಮಹಾರಾಕ್ಷಸರಿಂದ ಬಹುವಿಧವಾಗಿ ಎಳೆದಾಡಲ್ಪಟ್ಟರು. ಎಲೈ ಪಾರ್ಥನೆ! ಆಗ ಭೂಮಿಯನ್ನೂ, ಆಕಾಶವನ್ನೂ, ಪಾತಾಲವನ್ನೂ ನಡುಗಿಸುವಂತಹ ಭಯಂಕರ ಸಿಂಹನಾದವು ಬಲಶಾಲಿಗಳಾದ ರಾಕ್ಷಸರಿಂದ ಮಾಡಲ್ಪಟ್ಟಿತು.

೨೧೬–೨೧೭. ದೈತ್ಯರೆಲ್ಲರೂ ಸಂತೋಷದಿಂದ ತಾರಕಾಸುರನಿಗೆ ಜಯಕಾರಗಳನ್ನು ಮಾಡುತ್ತ ಅವನನ್ನು ಸ್ತೋತ್ರಮಾಡಿದರು. ಪೌರ್ಣಮಿಯ ಚಂದ್ರನಂತೆ ಶುಭ್ರವಾದ ಶಂಖಗಳನ್ನೂ ಊದಿದರು. ಧನುಷ್ಟಂಕಾರಗಳನ್ನೂ ಉಗ್ರವಾದ ಕರತಾಡನಗಳನ್ನೂ ಮಾಡಿದರು. ದೈತ್ಯರೆಲ್ಲರೂ ಅತ್ಯಂತ ಸಂತೋಷದಿಂದ ಅಬ್ಬರಿಸಿ ಮತ್ತೆ ಮತ್ತೆ ನರ್ತನಗಳನ್ನು ಮಾಡತೊಡಗಿದರು.

ತತೋ ದೇವಾನ್ಪುರಸ್ಕೃತ್ಯ ಪಶುಪಾಲಃ ಪಶೂನಿವ ।
ದೈತ್ಯೇಂದ್ರೋ ರಥಮಾಸ್ಥಾಯ ಜಗಾಮ ಸಹಿತೋಽಸುರೈಃ ॥ ೨೦೮ ॥
ಮಹೀಸಾಗರಕೂಲಸ್ಥಂ ತಾರಕಃ ಸ ಪುರಂ ಬಲೀ ।
ಯೋಜನದ್ವಾದಶಾಯಾಮಂ ತಾಮ್ರಪ್ರಾಕಾರಶೋಭಿತಂ ॥ ೨೦೯ ॥
ಪ್ರಾಸಾದೈರ್ಬಹುಭಿಃ ಕೀರ್ಣಂ ದಿವ್ಯಾಶ್ಚರ್ಯೋಪಶೋಭಿತಂ ।
ಯತ್ರ ಶಬ್ದಾಸ್ತ್ರಯೋ ನೈವ ಜೀರ್ಯಂತೇ ಚಾನಿಶಂ ಪುರೇ ।
ಗೀತಘೋಷಶ್ಚ ವ್ಯಾಘೋಷೋ ಭುಜ್ಯಂತಾಂ ವಿಷಯಾಸ್ತ್ವಿತಿ ॥ ೨೧೦ ॥
ತತ್ಪ್ರವಿಶ್ಯ ಪುರಂ ರಾಜಾ ಜಗಾಮ ಸ್ವಕಮಾಲಯಂ ।
ಮಹೋತ್ಸವೇನ ಮಹತಾ ಪುತ್ರಸ್ತ್ರೀಪ್ರತಿನಂದಿತಃ ॥ ೨೧೧ ॥
ತತ್ರ ದಿವ್ಯಾಂ ಸಭಾಂ ರಾಜಾ ಪ್ರಾಪ್ಯ ಸಿಂಹಾಸನಸ್ಥಿತಃ ॥ ೨೧೨ ॥
ಸ್ತೂಯಮಾನೋ ದಿತಿಸುತೈರಪ್ಸರೋಭಿರ್ವನೋದಿತಃ ।
ದಿವ್ಯಾಸನಸ್ಥೈರ್ದೈತ್ಯೇಂದ್ರೈರ್ವೃತೈಃ ಸಿಂಹೈರಿವ ಪ್ರಭುಃ ॥ ೨೧೩ ॥

---

೨೦೮. ಬಳಿಕ ಹಸುಗಳನ್ನು ಮುಂದೆ ಓಡಿಸಿಕೊಂಡು ಹೋಗುವ ಗೊಲ್ಲನಂತೆ ತಾರಕಾಸುರನು ದೇವತೆಗಳನ್ನು ಹಿಂಡುಗಟ್ಟಿಸಿಕೊಂಡು ರಥವನ್ನೇರಿ ರಾಕ್ಷಸರೊಡನೆ ಹೊರಟನು.

೨೦೯. ಇಂತು ಬಲಿಷ್ಠನಾದ ಆ ರಾಕ್ಷಸರಾಜನು ಮಹೀಸಾಗರ ಸಂಗಮದಲ್ಲಿದ್ದ ತನ್ನ ಪುರವನ್ನು ಸೇರಿದನು. ಆ ಪಟ್ಟಣವು ಹತ್ತು ಯೋಜನಗಳ ವಿಸ್ತಾರವುಳ್ಳದ್ದಾಗಿ ತಾಮ್ರದ ಕೋಟೆಯಿಂದ ರಂಜಿಸುತ್ತಿದ್ದಿತು.

೨೧೦. ಅನೇಕ ಮಹಡಿಗಳಿಂದಲೂ ತುಂಬಿ ದಿವ್ಯಾಶ್ಚರ್ಯಗಳಿಂದಲೂ ಸಹಿತವಾಗಿದ್ದಿತು. ಆ ಪಟ್ಟಣದಲ್ಲಿ ಸಂಗೀತದ ಶಬ್ದ, ಜನರ ಕೋಲಾಹಲ, "ವಿಷಯ ಸುಖಗಳನ್ನೇ ಅನುಭವಿಸಿ" ಎಂಬ ಕೂಗುಗಳು — ಈ ಮೂರು ಶಬ್ದಗಳೂ ತ್ರಿಕಾಲಗಳಲ್ಲಿಯೂ ಬಿಡುವಿಲ್ಲದೆ ಕೇಳಿಬರುತ್ತಿದ್ದುವು.

೨೧೧. ಇಂತಹ ರಾಜಧಾನಿಯನ್ನು ರಾಜನಾದ ತಾರಕಾಸುರನು ಹೆಂಡಿರು ಮಕ್ಕಳಿಂದ ಸತ್ಕಾರವನ್ನು ಹೊಂದಿ ಅತ್ಯಂತ ವೈಭವದಿಂದ ಹೊಕ್ಕು ತನ್ನ ಅರಮನೆಯನ್ನು ಪ್ರವೇಶಿಸಿದನು.

೨೧೨–೨೧೩. ಅಲ್ಲಿ ಅತ್ಯುತ್ತಮವಾದ ಸಭಾಮಂಟಪವನ್ನು ಸೇರಿ ದಿವ್ಯ ಸಿಂಹಾಸನವನ್ನಲಂಕರಿಸಿದನು. ಅನೇಕ ರಾಕ್ಷಸರು ತನ್ನ ಪರಾಕ್ರಮಗಳನ್ನು ಹೊಗಳುತ್ತಿರಲು, ಅಪ್ಸರಸೆಯರು ನರ್ತನದಿಂದ ಮನಸ್ಸಂತೋಷಗೊಳಿಸುತ್ತಿರಲು ದಿವ್ಯಾಸನಗಳಲ್ಲಿ ಕುಳಿತಿರುವ ರಾಕ್ಷಸಶ್ರೇಷ್ಠರಿಂದ ಪರಿವೃತನಾಗಿ ತಾರಕನು ಸಿಂಹಗಳ ಸಮೂಹದ ಮಧ್ಯದಲ್ಲಿದ್ದಂತೆ ರಾಜಿಸುತ್ತಿದ್ದನು.

ಏತಸ್ಮಿನ್ನಂತರೇ ಕಾಚಿದ್ದಿವ್ಯಸ್ತ್ರೀ ತತ್ಪುರೇಽಭವತ್ ।
ರೂಪೇಣಾನುಪಮಾ ಪಾರ್ಥ ನಾನಾಭರಣಭೂಷಿತಾ ॥ ೨೨೪ ॥
ತಾಂ ದೃಷ್ಟ್ವಾ ತಾರಕೋ ರಾಜಾ ಭೃಶಂ ವೈ ವಿಸ್ಮಿತೋಽಭವತ್ ।
ವಿಸ್ಮಿತಸ್ತ್ರೈರ್ವೃತೋ ದೈತ್ಯೈಃ ಪ್ರೋವಾಚೇದಂ ಸ್ಮಯನ್ನಿವ ॥ ೨೨೫ ॥
ಕಾಸಿ ದೇವಿ ಮಮ ಬ್ರೂಹಿ ಕಿಂ ಮಯಾ ರೂಪಸುಂದರಿ ।
ತ್ವತ್ಸಮಾಂ ಯೋಷಿತಂ ನೈವ ದೃಷ್ಟವಂತಃ ಪುರಾ ವಯಂ ॥ ೨೨೬ ॥

ಸ್ತ್ರ್ಯುವಾಚ :—

ಅಹಂ ತ್ರೈಲೋಕ್ಯಲಕ್ಷ್ಮೀತಿ ವಿದ್ಧಿ ಮಾಂ ದೈತ್ಯಸತ್ತಮ ।
ಅರ್ಜಿತಾ ತಪಸಾ ಚಾಸ್ಮಿ ತ್ವಯಾ ವೀರ್ಯೇಣ ವಾ ವಿಭೋ ॥ ೨೨೭ ॥
ವೀರ್ಯವಂತಂ ತ್ವನಲಸಂ ತಪಸ್ವಿನಮಕಾತರಂ ।
ದಾತಾರಂ ಚಾಪಿ ಭೋಕ್ತಾರಂ ಯುಕ್ತ್ಯಾ ಸೇವಾಮಿ ತಂ ನರಂ ॥ ೨೨೮ ॥
ಭೀರುಂ ನಿರ್ವಿಣ್ಣಮತ್ಯರ್ಥಂ ಸಾಧ್ವೀಪೀಡಾಕರಂ ನರಂ ।
ಸರ್ವಾತಿಶಂಕಿನಂ ಸದ್ಯಸ್ತ್ಯಜಾಮಿ ದಿತಿನಂದನ ॥ ೨೨೯ ॥

---

೨೨೪. ಇಷ್ಟರಲ್ಲಿಯೇ ಆ ಪಟ್ಟಣದಲ್ಲಿ ಅಪ್ರತಿಮ ಸೌಂದರ್ಯವತಿಯೂ ಸರ್ವಾಭರಣಭೂಷಿತೆಯೂ ಆದ ಸ್ತ್ರೀಯೊಬ್ಬಳು ಕಾಣಿಸಿಕೊಂಡಳು.

೨೨೫. ಆಕೆಯನ್ನು ಕಂಡು ರಾಜನಾದ ತಾರಕನೂ ಬಹಳ ವಿಸ್ಮಯವನ್ನು ಹೊಂದಿ ತನ್ನ ರಾಕ್ಷಸ ಪರಿವಾರದೊಡನೆ ಆಕೆಯನ್ನು ಕಂಡು ನಗುತ್ತ ಇಂತೆಂದನು.

೨೨೬. "ಎಲೌ ದೇವಿಯೆ! ನೀನು ಯಾರೆಂಬುದನ್ನು ನನಗೆ ತಿಳಿಸು. ಸರ್ವಾಂಗ ಸುಂದರಿಯೆ! ನನ್ನಿಂದ ನಿನಗೆ ಯಾವ ಕಾರ್ಯವಾಗಬೇಕು? ನಿನ್ನ ಸಮಾನರಾದ ಸ್ತ್ರೀಯರನ್ನು ಮುನ್ನು ನಾವು ಎಲ್ಲಿಯೂ ನೋಡಿಯೇ ಇರಲಿಲ್ಲ."

೨೨೭. ಸ್ತ್ರೀಯು ಹೇಳುತ್ತಾಳೆ:—"ಎಲೈ ರಾಕ್ಷಸ ಶ್ರೇಷ್ಠನೆ! ನಾನೇ ಮೂರು ಲೋಕಗಳ ರಾಜ್ಯಲಕ್ಷ್ಮಿಯೆಂದು ತಿಳಿದುಕೊ. ಎಲೈ ಸ್ವಾಮಿಯೆ! ನಿನ್ನ ತಪಸ್ಸಿನಿಂದಲೂ ಪರಾಕ್ರಮದಿಂದಲೂ ನೀನು ನನ್ನನ್ನು ಸಂಪಾದಿಸಿರುವೆ.

೨೨೮. ಪರಾಕ್ರಮಿಯೂ ಆಲಸ್ಯವಿಲ್ಲದವನೂ, ತಪಸ್ಸಂಪನ್ನನೂ, ಧೈರ್ಯಶಾಲಿಯೂ, ದಾನಶೀಲನೂ, ಭೋಕ್ತೃವೂ ಆದ ಮನುಷ್ಯನನ್ನು ಮಾತ್ರ ನಾನು ಸೇರಿ ಭಜಿಸುತ್ತೇನೆ.

೨೨೯. ಅಂಜುಬುರುಕನು, ಹೆಚ್ಚಾದ ಜಿಹಾಸಾಪರನು, ಪತಿವ್ರತೆಯರನ್ನು ಪೀಡಿಸುವವನು, ಎಲ್ಲವನ್ನೂ ಮಿತಿಮೀರಿ ಅನುಮಾನ ಪಡುವವನೂ ಆದ ಮನುಷ್ಯನನ್ನು ತಕ್ಷಣದಲ್ಲಿಯೇ ಬಿಟ್ಟುಬಿಡುವೆನು.

ಮಹೇಂದ್ರೇಣ ಚ ಮಾತಾ ತೇ ಯದಾ ಸಾ ಹ್ಯಪಮಾನಿತಾ ।
ತದೈವ ತ್ಯಕ್ತ್ವಾಸ್ಮ್ಯಹಂ ಸೋಽಯಂ ಸಾವಿದಾನೀಂ ತವ ಸಂವಶೇ ॥ ೨೩೦ ॥
ತಾರಕಶ್ಚ ತತಃ ಪ್ರಾಹ ಪರಮಂ ಚೇತಿ ತಾಂ ತದಾ ।
ಸಾ ಚಾವಿವೇಶ ತಂ ದೇವೀ ತ್ರಿಜಗತ್ಪೂಜಿತಾ ರಮಾ ॥ ೨೩೧ ॥
ತತೋ ದೈತ್ಯಾಧಿಪಂ ನಾರ್ಯೋ ದಾನವಾನಾಂ ವಿಭೂಷಿತಾಃ ।
ವೀರಕಾಂಸ್ಯಮುಪಾದಾಯ ವರ್ಧಯಾಂಚಕ್ರಿರೇ ಮುದಾ ॥ ೨೩೨ ॥
ದೇವಾಶ್ಚ ದ್ವಾರಿ ತಿಷ್ಠಂತಿ ಬದ್ಧಾ ದೈತ್ಯೈರ್ಭೃಶಾತುರಾಃ ।
ಉಪಹಸ್ಯಮಾನಾ ನಾರೀಭಿರ್ದೈತ್ಯೈರನ್ಯೈಶ್ಚ ನಾಗರೈಃ ॥ ೨೩೩ ॥
ಏತಸ್ಮಿನ್ನಂತರೇ ವಿಷ್ಣುರ್ದೈತ್ಯರೂಪಂ ಸಮಾಸ್ಥಿತಃ ।
ಉಪಹಾಸಕಮಧ್ಯಸ್ಥೋ ಗಾಥೇ ದ್ವೇ ಪ್ರಾಹ ಬುದ್ಧಿಮಾನ್ ॥ ೨೩೪ ॥
ಇದಮಲ್ಪತರಂ ನಾಮ ಯದಮೀಷಾಂ ಚ ದೃಶ್ಯತೇ ।
ಮಾತೃಕ್ರೋಧಂ ಸ್ಮರನ್ರಾಜಾ ಕಿಂ ಕಿಂ ಯನ್ನ ಕರಿಷ್ಯತಿ ॥ ೨೩೫ ॥
ಬಲೀಯಾಂಸಂ ಸಮಾಸಾದ್ಯ ನ ನಮೇದ್ಯೋ ನ ಚಾಸ್ತಿ ಸಃ ।
ಮರ್ಕಟವಚ್ಛ್ವೇತಬಾಕೀಯೈರುಪಾಯೈಃ ಸ್ಥೀಯತಾಂ ಸುರಾಃ ॥ ೨೩೬ ॥

---

೨೩೦. ನಿನ್ನ ತಾಯಿಯನ್ನು ಯಾವಾಗ ಮಹೇಂದ್ರನು ಅವಮಾನಗೊಳಿಸಿದನೋ, ಆಗಲೇ ಅವನನ್ನು ಬಿಟ್ಟಿರುವೆನು ಮತ್ತು ಈಗ ನಿನ್ನನ್ನು ಸೇರಿರುವೆನು.''

೨೩೧. ತಾರಕಾಸುರನು ಬಳಿಕ ಉತ್ತಮವಾಯಿತೆಂದು ಹೇಳಲು ಮೂರು ಲೋಕಗಳಲ್ಲಿಯೂ ಪೂಜೆಗೊಳ್ಳುವ ವಿಜಯಲಕ್ಷ್ಮಿಯು ಅವನನ್ನು ಸೇರಿದಳು.

೨೩೨–೨೩೩. ಆಗ ಅಲಂಕೃತೆಯರಾದ ರಾಕ್ಷಸಸ್ತ್ರೀಯರು ಕಂಚಿನ ತಟ್ಟೆಗಳಲ್ಲಿ ಮಂಗಳಾರತಿಗಳನ್ನು ಮಾಡಿ ಆ ರಾಕ್ಷಸೇಶ್ವರನಿಗೆ ಸಂತೋಷದಿಂದ ಬೆಳಗಿ ಹರಸಿದರು. ದೇವತೆಗಳಾದರೂ ರಾಕ್ಷಸಿಯರಿಂದಲೂ, ಪಟ್ಟಣಿಗರಾದ ಇತರ ರಾಕ್ಷಸರಿಂದಲೂ ಪರಿಹಾಸ್ಯ ಮಾಡಲ್ಪಟ್ಟವರಾಗಿ ಅತ್ಯಂತ ವ್ಯಾಕುಲರಾಗಿ ಅರಮನೆಯ ಬಾಗಿಲುಗಳಲ್ಲಿ ಕೈಕಾಲುಗಳನ್ನು ಕಟ್ಟಿಸಿಕೊಂಡು ನಿಂತಿದ್ದರು.

೨೩೪–೨೩೫. ಆಗ ಮಹಾವಿಷ್ಣುವು ರಾಕ್ಷಸರೂಪವನ್ನು ತಾಳಿ ಹಾಸ್ಯ ಮಾಡುತ್ತಿರುವವರ ಮಧ್ಯದಲ್ಲಿ ಸೇರಿಕೊಂಡೇ ಬಹಳ ಬುದ್ಧಿವಂತಿಕೆಯಿಂದ ಎರಡು ಶ್ಲೋಕಗಳನ್ನು ಹೇಳಿದನು. ಇವರು ಮಾಡುತ್ತಿರುವುದನ್ನು ನಾವು ಕಾಣುವುದು ಬಹಳ ಸ್ವಲ್ಪವಾಗಿರುವುದು. ಈ ರಾಜನು ಪೂರ್ವದ ತಾಯಿಯ ಕೋಪವನ್ನು ನೆನಸಿಕೊಂಡರೆ ಏನನ್ನುತಾನೆ ಮಾಡಲಾರನು ?

೨೩೬. ಬಲಿಷ್ಠನನ್ನು ಕಂಡಾಗ ಯಾವನು ತಲೆಬಾಗಿಸುವುದಿಲ್ಲವೋ, ಅವನ ಪ್ರಾಣವೇ ಹೋಗುವುದು. ಎಲೈ ದೇವತೆಗಳೇ! ಆದುದರಿಂದ ಈಗ ಬಕವೃತ್ತಿಯಿಂದ ಭಕ್ತಿಯನ್ನು ತೋರಿಸುತ್ತ, ನೀವೆಲ್ಲರೂ ಕೋತಿಗಳ ರೂಪವನ್ನುತಾಳಿರಿ.

ಉಪಹಾಸಮುಖೇನಾಮೀ ಉಪದೇಶಂ ಹರೇರ್ಮುಖಾತ್ ।
ಸಮಾಕರ್ಣ್ಯ ತತೋ ದೇವಾ ಮರ್ಕಟರೂಪೇಣ ಸಂಸ್ಥಿತಾಃ ॥ ೨೩೭ ॥
ನೃತ್ಯಂತಸ್ತೇ ಚ ಬಹುಧಾ ದೈತ್ಯಾಶ್ಚಾಸುರಯೋಷಿತಃ ।
ಭೃಶಂ ಚ ನೋದಯಾಮಾಸುರ್ಮುದಾ ಭೋಜ್ಯಾನಿ ತೇ ದದುಃ ॥ ೨೩೮ ॥
ವಿಷ್ಣುರ್ದೈತ್ಯಪ್ರತೀಹಾರಂ ತತಃ ಪ್ರೋವಾಚ ಬುದ್ಧಿಮಾನ್ ।
ವಿನೋದಾಯ ಮಹಾರಾಜ್ಞೋ ಮರ್ಕಾನೇತಾನ್ಪ್ರಕೀರ್ತಯ ॥ ೨೩೯ ॥
ಪ್ರತೀಹಾರಸ್ತತೋ ಹೃಷ್ಟಃ ಸಭಾಮಧ್ಯೇ ವಿವೇಶ ಸಃ ।
ಜಾನುಭ್ಯಾಂ ಧರಣೀಂ ಗತ್ವಾ ಬದ್ಧ್ವಾ ಚ ಕರಸಂಪುಟಂ ॥ ೨೪೦ ॥
ಉವಾಚಾನಾವಿಲಂ ವಾಕ್ಯಮಲ್ಪಾಕ್ಷರಪರಿಸ್ಫುಟಂ ।
ದೈತ್ಯೇಂದ್ರ ಮರ್ಕವೃಂದಾನಿ ದ್ವಾರಿ ತಿಷ್ಠಂತಿ ತೇ ಪ್ರಭೋ ॥ ೨೪೧ ॥
ಭೃಶಂ ವಿನೋದಕಾರೀಣಿ ಸ್ಪೃಹಾಚೇದ್ದ್ರಷ್ಟುಮರ್ಹಸಿ ।
ತನ್ನಿಶಮ್ಯಾಬ್ರವೀದ್ರಾಜಾ ಕಿಂ ಚಿರಂ ಕ್ರಿಯತೇ ತ್ವಯಾ ॥ ೨೪೨ ॥
ಕ್ಷತ್ತಾ ಚೇತಿ ವಚಃ ಶ್ರುತ್ವಾ ಕಾಲನೇಮಿಂ ತದಾಬ್ರವೀತ್ ।
ಮರ್ಕಾನೇತಾನ್ಮಹಾರಾಜೋ ದ್ರಷ್ಟುಮಿಚ್ಛತಿ ಶೀಘ್ರತಃ ॥ ೨೪೩ ॥

---

೨೩೭. ಹಾಸ್ಯಮಾಡುವ ವ್ಯಾಜದಿಂದ ವಿಷ್ಣುವಿನ ಮುಖದಿಂದ ಬಂದ ಈ ಉಪದೇಶವನ್ನು ಕೇಳಿ ದೇವತೆಗಳೆಲ್ಲರೂ ಮರ್ಕಟರೂಪಗಳನ್ನು ಧರಿಸಿದರು.

೨೩೮–೨೩೯. ಮತ್ತು ವಿಧವಿಧವಾಗಿ ನರ್ತನಗಳನ್ನು ಮಾಡಿ ರಾಕ್ಷಸ ಸ್ತ್ರೀಯರನ್ನು ಸಂತೋಷಗೊಳಿಸಲು, ಅವರು ಆ ಕಪಿಗಳಿಗೆ ತಿನ್ನುವ ಪದಾರ್ಥಗಳನ್ನೆಸೆಯುತ್ತಿದ್ದರು. ಆಗ ಬುದ್ಧಿವಂತನಾದ ನಾರಾಯಣನು ಅರಮನೆಯ ದ್ವಾರಪಾಲಕನನ್ನು ಕುರಿತು "ಮಹಾರಾಜನನ್ನು ವಿನೋದಗೊಳಿಸುವುದಕ್ಕಾಗಿ ಕೆಲವು ಕೋತಿಗಳು ಬಂದಿರುವುವು ಎಂಬುದಾಗಿ ತಿಳಿಸು" ಎಂದು ಹೇಳಿದನು.

೨೪೦–೨೪೧. ಆ ಪ್ರತೀಹಾರಿಯು ಸಂತೋಷದಿಂದ ಸಭಾಮಂಟಪವನ್ನು ಪ್ರವೇಶಿಸಿ ರಾಜಸಮ್ಮುಖದಲ್ಲಿ ಮೊಣಕಾಲುಗಳನ್ನೂರಿ ಕೈಗಳನ್ನು ಜೋಡಿಸಿ ಕೊಂಡು ಮೃದುಮಧುರವಾಗಿಯೂ, ಸೂಕ್ಷ್ಮವಾಗಿಯೂ, ಸ್ಫುಟವಾಗಿಯೂ ಇರುವ ವಾಕ್ಯವನ್ನು ನಿವೇದಿಸಿದನು. "ಎಲೈ ರಾಕ್ಷಸೇಂದ್ರನೆ! ನಿನಗೆ ಅಮಿತವಾದ ಆನಂದವನ್ನುಂಟುಮಾಡುವ ಕೋತಿಗಳ ಗುಂಪುಗಳು ಬಂದು ಬಾಗಿಲಲ್ಲಿ ಕಾದು ನಿಂತಿರುವುವು. ನಿನಗಿಷ್ಟವಿದ್ದಲ್ಲಿ ನೋಡಬಹುದು."

೨೪೨–೨೪೩. ಅದನ್ನು ಕೇಳಿ ತಾರಕಾಸುರನು "ನೀನೇತಕ್ಕೆ ತಡ ಮಾಡುತ್ತಿರುವೆ?" ಎಂದು ಕೇಳಿದನು. ಈ ಮಾತುಗಳನ್ನು ಕೇಳಿ ಪ್ರತೀಹಾರಿಯು ಕಾಲನೇಮಿಯನ್ನು ಕುರಿತು ಇಂತೆಂದನು. "ಎಲೈ ಅಂಗರಕ್ಷಕನೆ! ಮಹಾರಾಜನು ಶೀಘ್ರವಾಗಿ ಈ ಕೋತಿಗಳನ್ನು ನೋಡಲೆಳಸುವನು.

ರಕ್ಷಪಾಲ ಸಹೈಭಿಸ್ತ್ವಂ ರಾಜಾನಮನುಕೂಲಯ ।
ಕಾಲನೇಮಿರುಪಾದಾಯ ಮರ್ಕಾನ್ಯಾತೋ ನೃಪಂ ತತಃ ॥ ೨೪೪ ॥
ಮರ್ಕಮಧ್ಯೇ ವಿಷ್ಣುಮರ್ಕೋ ಯಾತಸ್ತ್ಯಕ್ತ್ವಾ ಚ ದೈತ್ಯತಾಂ ।
ತತಸ್ತಾರಕದೈತ್ಯಸ್ಯ ಪುರತೋ ನನೃತುರ್ಭೃಶಂ ॥ ೨೪೫ ॥
ಮರ್ಕಾ ದೈತ್ಯಕರೋತ್ತಾಲೈರ್ಹರ್ಷನಾದ ವಿನೋದಿತೈಃ ।
ತತೋಽತಿಮುದಿತೋ ರಾಜಾ ತೇಷಾಂ ನೃತ್ಯೇನ ಸೋಽಬ್ರವೀತ್ ॥ ೨೪೬ ॥
ಅಭಯಂ ವೋ ಮರ್ಕದೇವಾಸ್ತುಷ್ಟೋ ಯಚ್ಛಾಮ್ಯಹಂ ತ್ವಿದಂ ।
ಮದ್ಗೃಹೇ ಸ್ಥೀಯತಾಮೇವ ನ ಚ ಕಾರ್ಯಂ ಭಯಂ ಹೃದಿ ॥ ೨೪೭ ॥
ಇತಿ ಶ್ರುತ್ವಾ ವಿಷ್ಣುಮರ್ಕಃ ಪ್ರನೃತ್ಯನ್ನಿದಮಬ್ರವೀತ್ ।
ರಾಜನ್ವಿಜ್ಞಾತುಮಿಚ್ಛಾಮಸ್ತವ ಗೇಹಾವಧಿಂ ವಯಂ ॥ ೨೪೮ ॥
ಏವಮುಕ್ತೋ ಪ್ರಹಸ್ಯಾಹ ತಾರಕೋ ದೈತ್ಯಸತ್ತಮಃ ।
ತ್ರಿಭೂಮಿಕಂ ಹಿ ಮೇ ಗೇಹಮಿದಂ ಯದ್ಭುವನತ್ರಯಂ ॥ ೨೪೯ ॥
ಹರಿಮರ್ಕಸ್ತತಃ ಪ್ರಾಹ ಯದ್ಯೇವಂ ಸ್ವಂ ವಚಃ ಸ್ಮರ ।
ತ್ರೈಲೋಕ್ಯೇ ವಿಚರಂತ್ವೇತೇ ಮರ್ಕಾ ರಾಜನ್ನಿರ್ಭಯಾಃ ॥ ೨೫೦ ॥

---

೨೪೪–೨೪೫. ಆದುದರಿಂದ ನೀನು ಅವರೊಡನೆ ಬಂದು ರಾಜನನ್ನು ಸಂತೋಷಗೊಳಿಸು.” ಕಾಲನೇಮಿಯು ಆ ಕಪಿಗಳನ್ನೆಲ್ಲ ಕೂಡಿಕೊಂಡು ರಾಜಾಸ್ಥಾನಕ್ಕೆ ಬಂದನು. ವಿಷ್ಣುವೂ ಕೂಡ ತನ್ನ ರಾಕ್ಷಸರೂಪವನ್ನು ತ್ಯಜಿಸಿ ತಾನೂ ಕೋತಿಯಾಗಿ ದೇವತೆಗಳೊಡನೆ ಹೊರಟನು. ಬಳಿಕ ಆ ಕಪಿಗಳೆಲ್ಲರೂ ರಾಕ್ಷಸರು ಸಂತೋಷದಿಂದ ಚಪ್ಪಾಳೆಗಳನ್ನು ಹೊಡೆದು ಕೂಗುತ್ತಿರಲು ತಾರಕಾಸುರನ ಸನ್ನಿಧಿಯಲ್ಲಿ ಬಹು ವಿಧವಾದ ನರ್ತನಗಳನ್ನು ಮಾಡಿದರು.

೨೪೬. ಆಗ ಅವರ ನೃತ್ಯದಿಂದ ಮಹಾರಾಜನು ತುಂಬ ಸಂತುಷ್ಟನಾಗಿ ಹೇಳತೊಡಗಿದನು. “ಎಲೈ ಮರ್ಕಟರೂಪಿಗಳಾದ ದೇವತೆಗಳೆ! ನಿಮ್ಮ ನರ್ತನದಿಂದ ಸಂತೋಷಗೊಂಡು ನಾನು ನಿಮಗೆ ಅಭಯವನ್ನು ಕೊಟ್ಟಿರುವೆನು.

೨೪೭–೨೫೦. ನೀವೆಲ್ಲರೂ ನನ್ನ ಮನೆಯಲ್ಲಿಯೇ ವಾಸಮಾಡಿ. ಮನಸ್ಸಿನಲ್ಲಿ ಸ್ವಲ್ಪವೂ ಭಯಪಡಬೇಕಾದುದಿಲ್ಲ.” ಇದನ್ನು ಕೇಳಿ ವಿಷ್ಣುವು ಕುಣಿಯುತ್ತ “ರಾಜನೆ! ನಾವು ನಿನ್ನ ಮನೆಯ ವಿಸ್ತಾರವನ್ನು ತಿಳಿಯಲಿಚ್ಛಿಸುವೆವು” ಎಂದು ಹೇಳಿದನು. ಆಗ ತಾರಕಾಸುರನು ಗಟ್ಟಿಯಾಗಿ ನಗುತ್ತ “ಈ ಬ್ರಹ್ಮಾಂಡವೇ ನನಗೆ ಮನೆಯಾಗಿರುವುದು. ಇದಕ್ಕೆ ಪಾತಾಲ, ಭೂಲೋಕ, ಸ್ವರ್ಗಗಳು ಮೂರು ಅಂತಸ್ತುಗಳಾಗಿರುವುವು” ಎಂದನು. ಆಗ ಕಪಿರೂಪಿಯಾದ ನಾರಾಯಣನು ಇಂತೆಂದನು. “ಹಾಗಾದರೆ ನಿನ್ನ ಹಿಂದಿನ ಮಾತುಗಳನ್ನು ನೆನಸಿಕೊ. ಎಲೈ ರಾಜನೆ! ಈ ಕಪಿಗಳೆಲ್ಲವೂ ಮೂರು ಲೋಕಗಳಲ್ಲಿಯೂ ನಿರ್ಭಯವಾಗಿ ಸಂಚರಿಸುತ್ತಿರಲಿ.

ಅಶ್ವಮೇಧಶತಸ್ಯಾಪಿ ಸತ್ಯಂ ರಾಜನ್ನಿಶಿಷ್ಯತೇ ।
ಧರ್ಮಮೇನಂ ಸ್ಮರನ್ಸತ್ಯಂ ವಚನಂ ಕುರು ದೈತ್ಯಪ ॥ ೨೫೧ ॥
ತತಃ ಸುವಿಸ್ಮಿತೋ ದೈತ್ಯಃ ಪ್ರಾಹೇದಂ ವಚನಂ ತದಾ ।
ಮರ್ಕಟಾಹೋ ಪ್ರಬುದ್ಧೋಽಸಿ ಸತ್ಯಂ ಬ್ರೂಹಿ ಚ ಕೋ ಭವಾನ್ ॥

ಶ್ರೀ ಭಗವಾನುವಾಚ :—

ಅಹಂ ನಾರಾಯಣೋ ನಾಮ ಯದಿ ಶ್ರೋತ್ರಮುಪಾಗತಃ ॥
ದೇವಾನಾಂ ರಕ್ಷಣಾರ್ಥಾಯ ಮರ್ಕರೂಪಮುಪಾಶ್ರಿತಃ ॥ ೨೫೩ ॥
ತಚ್ಚೇನ್ಮಾನ್ಯತಮೋ ಧರ್ಮಸ್ತವ ತದ್ವಚನಂ ಸ್ವಕಂ ।
ಪರಿಪಾಲಯ ತೇ ಗೇಹಂ ವಿಚರಂತು ಸುರಾಸ್ತ್ವಮೀ ॥ ೨೫೪ ॥
ಅವಲೇಪಶ್ಚ ರಾಜೇಂದ್ರ ನ ಕರ್ತವ್ಯಸ್ತ್ವಯಾ ಹೃದಿ ।
ವೀರೋಽಹಮಿತಿ ಸಂಚಿತ್ಯ ಪಶ್ಯತಾ ಕಾಲಜಂ ಬಲಂ ॥ ೨೫೫ ॥
ಪರ್ಯಾಯೈರ್ಹನ್ಯಮಾನಾನಾಮಭಿಹಂತಾ ನ ವಿದ್ಯತೇ ।
ಮೌಢ್ಯಮೇತತ್ತು ಯದ್ದ್ವೇಷಾತ್ಕರ್ತಾಹಮಿತಿ ಮನ್ಯತೇ ॥ ೨೫೬ ॥

---

೨೫೧. ನೂರು ಅಶ್ವಮೇಧ ಯಾಗಗಳಿಗಿಂತಲೂ ಸತ್ಯವೆಂಬುದು ಹೆಚ್ಚಿನದೆಂದು ಹೇಳುವರು. ಆದುದರಿಂದ ಈ ಧರ್ಮವನ್ನೂ ಸತ್ಯವನ್ನೂ ಸ್ಮರಿಸಿಕೊಂಡು ನೀನು ಹೇಳಿದಂತೆ ನಡೆಸು.''

೨೫೨. ಈ ಮಾತುಗಳಿಂದ ಆಶ್ಚರ್ಯಗೊಂಡ ರಾಕ್ಷಸನು "ಎಲೈ ಕೋತಿಯೆ! ನೀನು ಬಹಳ ಪ್ರಾಜ್ಞನಾಗಿ ತೋರುತ್ತಿರುವೆ. ನಿಜವಾಗಿಯೂ ನೀನು ಯಾರೆಂಬುದನ್ನು ತಿಳಿಸು" ಎಂದು ಅಪ್ಪಣೆಮಾಡಿದನು.

೨೫೩. ಶ್ರೀ ನಾರಾಯಣನು ಹೇಳುತ್ತಾನೆ:—"ನಾನೇ ನಾರಾಯಣನೆಂದು ಕರೆಯಲ್ಪಡುವವನು. ನನ್ನ ಹೆಸರೂ ನಿನ್ನ ಕಿವಿಗೆ ಬಿದ್ದಿರಬಹುದು. ದೇವತೆಗಳನ್ನು ಕಾಪಾಡುವುದಕ್ಕಾಗಿ ಈ ಮರ್ಕಟರೂಪವನ್ನು ಸ್ವೀಕರಿಸಿರುವೆನು.

೨೫೪. ಧರ್ಮವೆಂಬುದು ನಿನಗೆ ಮಾನ್ಯವೆಂಬುದಾಗಿದ್ದರೆ ನಿನ್ನ ಮಾತಿನಂತೆ ನಡೆದುಕೊ. ಈ ದೇವತೆಗಳೆಲ್ಲರೂ ನಿನ್ನ ಮನೆಯಾದ ತ್ರಿಲೋಕದಲ್ಲಿ ಯಥೇಚ್ಛವಾಗಿ ವಿಹರಿಸುತ್ತಿರಲಿ.

೨೫೫. ಎಲೈ ರಾಜೇಂದ್ರನೆ! ನೀನು ವೀರನೆಂದು ಹೆಮ್ಮೆಗೊಂಡು ಮನಸ್ಸಿನಲ್ಲಿ ಯಾರ ನಿಂದೆಯನ್ನೂ ಮಾಡಬಾರದು. ಬಲವೆಂಬುದು ಎಲ್ಲರಿಗೂ ಕಾಲದ ಮಹಿಮೆಯಿಂದುಂಟಾಗುವುದನ್ನು ನೀನು ಬಲ್ಲೆಯಷ್ಟೆ.

೨೫೬. ಪರ್ಯಾಯದಿಂದ ಪರಾಜಯವನ್ನು ಹೊಂದುವವರಿಗೆ ಅಭಿಹಂತೃವೆಂಬುವನು ಎಲ್ಲಿಯೂ ಕಾಣುವುದಿಲ್ಲವು. ದ್ವೇಷದಿಂದ ಯಾವನಾದರೂ "ನಾನೇ ಪರಾಕ್ರಮಶಾಲಿ" ಎಂದು ಹೇಳಿಕೊಂಡರೆ ಅದು ಕೇವಲ ಮೌಢ್ಯವು.

ಋಷೀಂಶ್ಚ ದೇವಾಂಶ್ಚ ಮಹಾಸುರಾಂಶ್ಚ
ತ್ರೈವಿಧ್ಯವೃದ್ಧಾಂಶ್ಚ ವನೇ ಮುನೀಂಶ್ಚ ।
ಕಂ ನಾಪದೋ ನೋಪನಮಂತಿ ಕಾಲೇ
ಕಾಲಸ್ಯ ವೀರ್ಯಂ ನತು ಕರ್ತುರೇತತ್ ॥ ೨೫೭ ॥
ನ ಮಂತ್ರಬಲವೀರ್ಯೇಣ ಪ್ರಜ್ಞಯಾ ಪೌರುಷೇಣ ವಾ ।
ಅಲಭ್ಯಂ ಲಭ್ಯತೇ ಕಾಲೇ ಕಾಲೇ ಸುಪ್ತೋಽಪಿ ವಿಂದತಿ ॥ ೨೫೮ ॥
ನ ಮಾತೃಪಿತೃಶುಶ್ರೂಷಾ ನ ಚ ದೈವತಪೂಜನಂ ।
ನಾನ್ಯೋ ಗುಣಸಮಾಚಾರಃ ಪುರುಷಸ್ಯ ಸುಖಾವಹಃ ॥ ೨೫೯ ॥
ನ ವಿದ್ಯಾ ನ ತಪೋ ದಾನಂ ನ ಮಿತ್ರಾಣಿ ನ ಬಾಂಧವಾಃ ।
ಶಕ್ನುವಂತಿ ಪರಿತ್ರಾತುಂ ನರಂ ಕಾಲೇನ ಪೀಡಿತಂ ॥ ೨೬೦ ॥
ನಾಗಾಮಿಗಮನಾರ್ಥಂ ಹಿ ಪ್ರತಿಘಾತಶತೈರಪಿ ।
ಶಕ್ನುವಂತಿ ಪ್ರತಿವ್ಯೋಢುಮೃತೇ ಕಾಲಬಲಂ ನರಾಃ ॥ ೨೬೧ ॥
ದೇಹವತ್ಪುಣ್ಯಕರ್ಮಾಣಿ ಜೀವವತ್ಕಾಲ ಉಚ್ಯತೇ ।
ದ್ವಯೋಃ ಸಮಾಗಮೇ ದೈತ್ಯ ಕಾರ್ಯಾಣಾಂ ಸಿದ್ಧಿರಿಷ್ಯತೇ ॥ ೨೬೨ ॥

---

೨೫೭–೨೫೮. ಋಷಿಗಳು, ದೇವತೆಗಳು, ರಾಕ್ಷಸರು, ವೇದಜ್ಞರಾದ ವೃದ್ಧ ಬ್ರಾಹ್ಮಣರು, ಅರಣ್ಯವಾಸಿಗಳಾದ ಮುನಿಗಳು— ಇವರಲ್ಲಿ ಯಾರನ್ನು ತಾನೆ ಕಾಲಮಹಿಮೆಯಿಂದ ವಿಪತ್ತುಗಳು ಮುತ್ತುವುದಿಲ್ಲ? ಆದುದರಿಂದ ಜಯಪರಾಜಯಗಳು ಕಾಲದ ಮಹಿಮೆಯೇ ಹೊರತು ಕರ್ತೃವಿನದಲ್ಲ. ಮಂತ್ರಬಲದಿಂದಾಗಲಿ, ಪರಾಕ್ರಮದಿಂದಾಗಲಿ, ಬುದ್ಧಿಶಕ್ತಿಯಿಂದಾಗಲಿ, ಪೌರುಷದಿಂದಾಗಲಿ ಕಾಲಪ್ರಾಪ್ತಿಯಿಲ್ಲದೆ ಅಲಭ್ಯವಾದುದು ಲಭಿಸುವುದಿಲ್ಲ. ಮಲಗಿದವನೂ ಕೂಡ ಯಥಾಕಾಲದಲ್ಲಿಯೇ ಎಚ್ಚರವಾಗುವನು.

೨೫೯. ಮಾತಾಪಿತೃಗಳ ಸೇವೆಯಾಗಲಿ, ದೇವತಾರ್ಚನೆಯಾಗಲಿ, ಇತರ ಸದ್ಗುಣ ಸಮೂಹವಾಗಲಿ ಮನುಷ್ಯನಿಗೆ ಸುಖವನ್ನು ಕೊಡಲು ಸಮರ್ಥವಲ್ಲ.

೨೬೦–೨೬೧. ಕಾಲಾನುಗುಣವಾಗಿ ಕಷ್ಟಗಳಲ್ಲಿ ಸಿಕ್ಕಿರುವ ಮನುಷ್ಯನನ್ನು ವಿದ್ಯೆಯಾಗಲಿ, ತಪಸ್ಸಾಗಲಿ, ದಾನಧರ್ಮಗಳಾಗಲಿ, ಸ್ನೇಹಿತರಾಗಲಿ, ಬಂಧುಗಳಾಗಲಿ ಸಂರಕ್ಷಿಸಲು ಶಕ್ತರಾಗುವುದಿಲ್ಲ. ಮುಂದೆ ಬರಲಿರುವ ಅನರ್ಥಗಳ ನಿವಾರಣೆಗೋಸ್ಕರ ನೂರಾರು ಪ್ರತಿಘಾತಗಳನ್ನೊಡ್ಡಿದರೂ ಕೂಡ ಮನುಷ್ಯರು ಕಾಲದ ಬಲವಿದ್ದ ಹೊರತು ಅವುಗಳನ್ನು ತಡೆಯಲಾರರು.

೨೬೨. ಪುಣ್ಯ ಕರ್ಮವು ದೇಹದಂತೆಯೂ, ಕಾಲವು ಜೀವನಂತೆಯೂ ಇರುವುವೆಂದೂ ಹೇಳಲ್ಪಟ್ಟಿರುವುದು. ಎಲೈ ರಾಕ್ಷಸೇಂದ್ರನೇ! ಆದುದರಿಂದ ಈ ಎರಡರ ಸಮಾಗಮದಿಂದಲೇ ಸಕಲಕಾರ್ಯಗಳ ಸಿದ್ಧಿಯು ಸಂಭವಿಸುವುದು.

ಅಹೋ ದೈತ್ಯ ತ್ವದ್ವಿಶಿಷ್ಟಾ ದೈತ್ಯಾನಾಂ ಕೋಟಯಃ ಪುರಾ ।
ಶಾಲ್ಮಲೇಸ್ತೂಲವತ್ಕ್ಷಿಪ್ತಾಃ ಕಾಲವಾತೇನ ದುರ್ದಶಾಃ ॥ ೨೬೩ ॥
ಇದಂ ತು ಲಬ್ಧ್ವಾ ತ್ವಂ ಸ್ಥಾನಮಾತ್ಮಾನಂ ಬಹು ಮನ್ಯಸೇ ।
ಸರ್ವಭೂತಭವಂ ದೇವಂ ಬ್ರಹ್ಮಾಣಮಿವ ಶಾಶ್ವತಂ ॥ ೨೬೪ ॥
ನಚೇದಮಚಲಂ ಸ್ಥಾನಮನಂತಂ ಚಾಪಿ ಕಸ್ಯಚಿತ್ ।
ತ್ವಂ ತು ಬಾಲಿಶಯಾ ಬುದ್ಧ್ಯಾ ಮಮೇದಮಿತಿ ಮನ್ಯಸೇ ॥ ೨೬೫ ॥
ಅವಿಶ್ವಾಸ್ಯೇ ವಿಶ್ವಸಿಷಿ ಮನ್ಯಸೇ ಚಾಧ್ರುವಂ ಧ್ರುವಂ ।
ಮಮೇದಮಿತಿ ಮೋಹಾತ್ತ್ವಂ ತ್ರಿಲೋಕೀಶ್ರಿಯಮಿಚ್ಛಸಿ ॥ ೨೬೬ ॥
ನೇಯಂ ತವ ನ ಚಾಸ್ಮಾಕಂ ನ ಚಾನ್ಯೇಷಾಂ ಸ್ಥಿರಾ ಮತಾ ।
ಅತಿಕ್ರಮ್ಯ ಬಹೂನನ್ಯಾಂಸ್ತ್ವಯಿ ತಾವದಿಯಂ ಸ್ಥಿತಾ ॥ ೨೬೭ ॥
ಕಿಂಚಿತ್ಕಾಲಮಿಯಂ ಸ್ಥಿತ್ವಾ ತ್ವಯಿ ತಾರಕ ಚಂಚಲಾ ।
ಪುಂಶ್ಚಲೀವಾತಿಚಪಲಾ ಪುನರನ್ಯಂ ಗಮಿಷ್ಯತಿ ॥ ೨೬೮ ॥

---

೨೬೩. ಅಯ್ಯಾ ರಾಕ್ಷಸನೆ! ನಿನಗಿಂತಲೂ ಅಧಿಕ ಪರಾಕ್ರಮಿಗಳಾದ ಅನೇಕಕೋಟಿ ದೈತ್ಯರು ಮುನ್ನು ಕಾಲವೆಂಬ ಬಿರುಗಾಳಿಗೆ ಸಿಕ್ಕಿ ಬೂರಗದ ಹತ್ತಿಯಂತೆ ದಿಕ್ಕುಗೆಟ್ಟು ದುರ್ದಶೆಯನ್ನು ಹೊಂದಿದರು.

೨೬೪. ಈ ಸ್ಥಾನವನ್ನು ಹೊಂದಿ ನೀನು ಸಕಲ ಭೂತಗಳ ಸೃಷ್ಟಿಕರ್ತನಾದ ಬ್ರಹ್ಮನ ಸ್ಥಾನವನ್ನೇ ಹೊಂದಿರುವೆಯೆಂಬ ಹೆಮ್ಮೆಯನ್ನು ಹೊಂದಿ ಶಾಶ್ವತ ಬುದ್ಧಿಯನ್ನು ಮಾಡಿರುವೆ.

೨೬೫. ಈ ತ್ರೈಲೋಕ್ಯಾಧಿಪತ್ಯವು ಸ್ಥಿರವಾದುದಲ್ಲ. ಯಾವನಿಗೂ ಶಾಶ್ವತವಾದುದೂ ಅಲ್ಲ. ನೀನು ಮಾತ್ರ ಕೇವಲ ಬಾಲಕನಾಗಿ ಇದು ನಿನಗೆ ಶಾಶ್ವತವೆಂದು ಮನಸ್ಸಿನಲ್ಲಿ ತಿಳಿದಿರುವೆ.

೨೬೬. ನಂಬುಗೆಗೆ ಅನರ್ಹವಾದುದರಲ್ಲಿ ವಿಶ್ವಾಸವನ್ನು ಮಾಡುತ್ತಿರುವೆ. ನಶ್ವರವಾದುದನ್ನು ಶಾಶ್ವತವೆಂದು ತಿಳಿದಿರುವೆ. ನಿನಗೇ ಶಾಶ್ವತವೆಂದು ಮೂರು ಲೋಕಗಳ ಐಶ್ವರ್ಯವನ್ನೂ ಹೊಂದಲೆಳಸುತ್ತಿರುವೆ.

೨೬೭. ಇದು ನಿನ್ನದೂ ಅಲ್ಲ; ನಮ್ಮದೂ ಅಲ್ಲ; ಇತರರಿಗೂ ಸ್ಥಿರವಾದುದಲ್ಲವೆಂದು ಹೇಳಲ್ಪಟ್ಟಿರುವುದು. ಎಷ್ಟೋ ಜನರನ್ನು ಕಡೆಹಾಯ್ದು ಈಗ ನಿನ್ನಲ್ಲಿ ತಾತ್ಕಾಲಿಕವಾಗಿ ನೆಲಸಿರುವುದು.

೨೬೮. ಎಲೈ ತಾರಕನೆ! ಈ ಐಶ್ವರ್ಯವು ಚಂಚಲವಾದುದು. ನಿನ್ನಲ್ಲಿ ಸ್ವಲ್ಪಕಾಲದವರೆಗೂ ನೆಲಸಿ ಬಳಿಕ ಸೂಳೆಯಂತೆ ಚಪಲಮನಸ್ಕಳಾಗಿ ಮತ್ತೊಬ್ಬನನ್ನು ಈ ವಿಜಯಲಕ್ಷ್ಮಿಯು ಸೇರುವಳು.

ಸರತ್ನೌಷಧಿಸಂಪನ್ನಂ ಸಸರಿತ್ಪರ್ವತಾಕರಂ ।
ತಾನಿದಾನೀಂ ನ ಪಶ್ಯಾಮಿ ಯೈರ್ಭುಕ್ತಂ ಭುವನತ್ರಯಂ ॥ ೨೬೯ ॥
ಹಿರಣ್ಯಕಶಿಪುರ್ವೀರೋ ಹಿರಣ್ಯಾಕ್ಷಶ್ಚ ದುರ್ಜಯಃ ।
ಪ್ರಹ್ಲಾದೋ ನಮುಚಿರ್ವೀರೋ ವಿಪ್ರಚಿತ್ತಿರ್ವಿರೋಚನಃ ॥ ೨೭೦ ॥
ಕೀರ್ತಿಃ ಶೂರಶ್ಚ ವೀರಶ್ಚ ವಾತಾಪಿರಿಲ್ವಲಸ್ತಥಾ ।
ಅಶ್ವಗ್ರೀವಃ ಶಂಬರಶ್ಚ ಪುಲೋಮಾ ಮಧುಕೈಟಭೌ ॥ ೨೭೧ ॥
ವಿಶ್ವಜಿತ್ಪ್ರಮುಖಾಶ್ಚಾನ್ಯೇ ದಾನವೇಂದ್ರಾ ಮಹಾಬಲಾಃ ।
ಕಾಲೇನ ನಿಹತಾಃ ಸರ್ವೇ ಕಾಲೋ ಹಿ ಬಲವತ್ತರಃ ॥ ೨೭೨ ॥
ಸರ್ವೈರ್ವರ್ಷಾಯುತಂ ತಪ್ತಂ ನ ತ್ವಮೇಕೋ ಮಹಾತಪಾಃ ।
ಸರ್ವೇ ಸತ್ಯವ್ರತಪರಾಃ ಸರ್ವೇ ಚಾಸನ್ಬಹುಶ್ರುತಾಃ ॥ ೨೭೩ ॥
ಸರ್ವೇ ಯಥಾರ್ಹದಾತಾರಃ ಸರ್ವೇ ದಾಕ್ಷಾಯಣೀಸುತಾಃ ।
ಜ್ವಲಂತಃ ಪ್ರಜಯಾತಶ್ಚ ಕಾಲೇನ ಪ್ರತಿಸಂಹತಾಃ ॥ ೨೭೪ ॥
ಮುಂಚೇಚ್ಛಾಂ ಕಾಮಭೋಗೇಷು ಮುಂಚೇಮಂ ಶ್ರೀಭವಂ ಮದಂ ।
ಏತದೈಶ್ವರ್ಯನಾಶೇ ತ್ವಾಂ ಶೋಕಃ ಸಂಪೀಡಯಿಷ್ಯತಿ ॥ ೨೭೫ ॥

---

೨೬೯. ಸಮಸ್ತ ರತ್ನಗಳಿಂದಲೂ, ನದೀ ಪರ್ವತ ಸರೋವರಗಳಿಂದಲೂ ಕೂಡಿದ ತ್ರಿಭುವನಗಳನ್ನು ಏಕಛತ್ರವಾಗಿ ಆಳಿದವರನ್ನೆಲ್ಲ ಈಗ ಎಲ್ಲಿಯೂ ನಾನು ನೋಡುತ್ತಿಲ್ಲವು.

೨೭೦–೨೭೩. ವೀರನಾದ ಹಿರಣ್ಯಕಶಿಪು, ಅಜೇಯನಾದ ಹಿರಣ್ಯಾಕ್ಷ, ಪ್ರಹ್ಲಾದ, ನಮುಚಿ, ವಿಪ್ರಚಿತ್ತಿ, ವಿರೋಚನ, ಕೀರ್ತಿ, ಶೂರ, ವೀರನಾದ, ವಾತಾಪಿ, ಇಲ್ವಲ, ಅಶ್ವಗ್ರೀವ, ಶಂಬರ, ಪುಲೋಮ, ಮಧುಕೈಟಭರು, ವಿಶ್ವಜಿತ್ತು ಮುಂತಾದ ಮಹಾ ಬಲಶಾಲಿಗಳಾದ ರಾಕ್ಷಸೇಂದ್ರರೆಲ್ಲರೂ ಕಾಲದಿಂದಲೇ ನಾಶವನ್ನು ಹೊಂದಿದರು. ಎಲ್ಲಕ್ಕಿಂತಲೂ ಕಾಲವೇ ಪರಮ ಬಲಿಷ್ಠವಾದುದು. ಎಲ್ಲರೂ ಸಾವಿರಾರು ವರ್ಷಗಳ ತಪಸ್ಸನ್ನು ಮಾಡಿದವರೇ; ನೀನೊಬ್ಬನೇ ಮಹಾತಪಸ್ವಿಯಲ್ಲ. ಎಲ್ಲರೂ ಸತ್ಯದ ವ್ರತವನ್ನು ಹಿಡಿದಿದ್ದರು. ಎಲ್ಲರೂ ಅಪಾರವಾದ ವೇದಗಳ ಜ್ಞಾನವನ್ನೂ ಹೊಂದಿದ್ದರು.

೨೭೪. ಎಲ್ಲರೂ ತಮಗೆ ತಕ್ಕಂತೆ ದಾನಧರ್ಮಗಳನ್ನು ಮಾಡಿದರು. ಎಲ್ಲರೂ ದಿತಿಯ ಪುತ್ರರೇ. ತೇಜೋವಂತರಾಗಿಯೂ ವಿಜಯಶಾಲಿಗಳಾಗಿಯೂ ಇದ್ದರೂ ಕೂಡ ಕಾಲಮಹಿಮೆಯಿಂದ ನಿಗ್ರಹಿಸಲ್ಪಟ್ಟರು.

೨೭೫. ಆದುದರಿಂದ ಕಾಮಭೋಗಗಳಲ್ಲಿ ಅಭಿಲಾಷೆಯನ್ನು ಬಿಡು. ಐಶ್ವರ್ಯದ ಈ ಮದವನ್ನು ತ್ಯಜಿಸು. ಈ ಸಂಪತ್ತು ನಾಶವಾದಾಗ ದುಃಖವು ನಿನ್ನನ್ನು ಪೀಡಿಸುವುದು.

**ಶೋಕಕಾಲೇ ಶುಚೋ ಮಾ ತ್ವಂ ಹರ್ಷಕಾಲೇ ಚ ಮಾ ಹೃಷಃ ।**
**ಅತೀತಾನಾಗತೇ ಹಿತ್ವಾ ಪ್ರತ್ಯುತ್ಪನ್ನೇನ ವರ್ತಯ || ೨೭೬ ||**
**ಇಂದ್ರಂ ಚೇದಾಗತಃ ಕಾಲಃ ಸದಾ ಯುಕ್ತಮತಂದ್ರಿತಂ ।**
**ಕ್ಷಮಸ್ವ ನ ಚಿರಾದ್ದೈತ್ಯ ತ್ವಾಮಪ್ಯುಪಗಮಿಷ್ಯತಿ || ೨೭೭ ||**
**ಕೋಹಿ ಸ್ಥಾತುಮಲಂ ಲೋಕೇ ಮಮ ಕೃದ್ಧಸ್ಯ ಸಂಯುಗೇ ।**
**ಕಾಲಸ್ತು ಬಲವಾನ್ಪ್ರಾಪ್ತಸ್ತೇನ ತಿಷ್ಠಾಮಿ ತಾರಕ || ೨೭೮ ||**
**ತ್ವಮೇವ ವೇತ್ಸಿ ಮಾಂ ದೈತ್ಯ ಯೋಽಹಂ ಯಾದೃಕ್ಪರಾಕ್ರಮಃ ।**
**ಕಲ್ಪೇ ಕಲ್ಪೇ ಮಹಾದೈತ್ಯಾಃ ಕೋಟಿಶೋಽರ್ಬುದಶೋ ಹತಾಃ || ೨೭೯ ||**
**ಯೇಷಾಂ ತ್ವಂ ಕೋಟಿಭಾಗೇಽಪಿ ಪರಿಪೂರ್ಣೋ ನ ತಾರಕ ।**
**ಕಲ್ಪೇ ಕಲ್ಪೇ ಸೃಜಾಮೀದಂ ಬ್ರಹ್ಮಾದಿ ಸಕಲಂ ಜಗತ್ || ೨೮೦ ||**
**ಇಚ್ಛನ್ಸಂಜೀವಯಾಮ್ಯೇತದನಿಚ್ಛನ್ನಾಶಯೇ ಕ್ಷಣಾತ್ ।**
**ನ ಹಿ ತ್ವಾಂ ನೋತ್ಸಹೇ ಹಂತುಂ ಸರ್ವದೈತ್ಯಸಮಾಯುತಂ ।**
**ಅಂಗುಲ್ಯಗ್ರೇಣ ದೈತ್ಯೇಂದ್ರ ಪುನರ್ಧರ್ಮಂ ನ ಲೋಪಯೇ || ೨೮೧ ||**

---

೨೭೬. ಕಷ್ಟಗಳು ಬಂದಾಗ ನೀನು ದುಃಖಗೊಳ್ಳಬೇಡ. ಸುಖಗಳಲ್ಲಿ ಸಂತೋಷಪಡಬೇಡ. ಕಳೆದುಹೋದುದನ್ನೂ, ಮುಂದೆ ಬರುವುದನ್ನೂ ಗಣನೆಗೆ ತರದೆ ಈ ಕ್ಷಣದಲ್ಲಿರುವುದರಲ್ಲಿಯೇ ವರ್ತಿಸುತ್ತಿರು.

೨೭೭. ಎಲೈ ದೈತ್ಯನೆ! ನನ್ನ ಮಾತುಗಳು ನಿನಗೆ ಅಪ್ರಿಯವೆನಿಸಿದಲ್ಲಿ ಕ್ಷಮಿಸು. ಯಾವಾಗಲೂ ಸಂಪದ್ಯುಕ್ತನೂ ಅನಾಲಸ್ಯವಂತನೂ ಆದ ಮಹೇಂದ್ರನಿಗೇ ಕಾಲವೆಂಬುದು ಸನ್ನಿಹಿತವಾಯಿತೆಂದ ಮೇಲೆ ನಿನ್ನನ್ನೂ ಕೂಡ ಕ್ಷಿಪ್ರದಲ್ಲಿಯೇ ಆವರಿಸುವುದೆಂಬುದರಲ್ಲಿ ಸಂಶಯವಿಲ್ಲ.

೨೭೮. ತಾರಕಾಸುರನೆ! ಕೋಪಗೊಂಡ ನನ್ನ ಇದುರಿನಲ್ಲಿ ನಿಲ್ಲಲು ಲೋಕದಲ್ಲಿ ಯಾವ ಯೋಧನು ತಾನೆ ಶಕ್ತನಾದಾನು? ಆದರೆ ಎಲ್ಲಕ್ಕಿಂತಲೂ ಬಲವಾದ ಕಾಲವು ಪ್ರಾಪ್ತವಾಗಿರುವುದರಿಂದ ಏನೂ ಮಾಡಲಾರದವನಾಗಿ ಸುಮ್ಮನಿರುವೆನು.

೨೭೯. ದೈತ್ಯೇಂದ್ರ! ಪ್ರತಿಯೊಂದು ಕಲ್ಪದಲ್ಲಿಯೂ ಕೋಟಿ, ಅರ್ಬುದಗಳ ಸಂಖ್ಯೆಯ ಮಹಾದೈತ್ಯರನ್ನು ನಿಗ್ರಹಿಸಿರುವ ನಾನು ಯಾರೆಂಬುದನ್ನೂ ಎಷ್ಟು ಪರಾಕ್ರಮವುಳ್ಳವನೆಂಬುದನ್ನೂ ನೀನೇ ತಿಳಿದಿರುವೆ.

೨೮೦. ಅವರಲ್ಲಿ ಒಂದು ಕೋಟಿಯ ಒಂದು ಭಾಗದ ಪ್ರತಾಪವೂ ನಿನ್ನಲ್ಲಿ ಪರಿಪೂರ್ಣವಾಗಿಲ್ಲ. ನಾನು ಪ್ರತಿಯೊಂದು ಕಲ್ಪದ ಆದಿಯಲ್ಲಿಯೂ ಬ್ರಹ್ಮನೇ ಮೊದಲಾದ ಸಕಲ ಬ್ರಹ್ಮಾಂಡದ ಸೃಷ್ಟಿಯನ್ನು ಮಾಡುತ್ತೇನೆ.

೨೮೧. ಇಷ್ಟಬಂದರೆ ಎಲ್ಲವನ್ನೂ ಉಜ್ಜೀವಿಸುತ್ತೇನೆ; ಇಚ್ಛೆಯಿಲ್ಲದಾಗ

ಯದ್ಯಹಂ ಪ್ರವರೋ ಭೂತ್ವಾ ಧರ್ಮಂ ಬ್ರಹ್ಮವರಾತ್ಮಕಂ ।
ಲೋಪಯಾಮಿ ತತಃ ಕಂ ಚ ಧರ್ಮೋಽಯಂ ಶರಣಂ ವ್ರಜೇತ್ ॥ ೨೮೩ ॥
ಅಹಂ ಕರ್ತೇತಿ ಮಾ ಮಂಸ್ಥಾಃ ಕರ್ತಾ ಯಸ್ತು ಸದಾ ಪ್ರಭುಃ ।
ಸೋಽಯಂ ಕಾಲಃ ಪಚೇದ್ವಿಶ್ವಂ ವೃಕ್ಷೇ ಫಲಮಿವಾಗತಂ ॥ ೨೮೪ ॥
ಯೈರೇವ ಕರ್ಮಭಿಃ ಸೌಖ್ಯಂ ದುಃಖಂ ತೈರೇವ ಕರ್ಮಭಿಃ ।
ಪ್ರಾಪ್ನೋತಿ ಪುರುಷೋ ದೈತ್ಯ ಪಶ್ಯ ಕಾಲಸ್ಯ ಚಿತ್ರತಾಂ ॥ ೨೮೫ ॥
ಸರ್ವಂ ಕಾಲವಶಾದೇವ ಬೋದ್ಧವ್ಯಂ ಧೀಯುಕ್ತೈರ್ನರೈಃ ।
ಸ್ವಕರ್ಮಪರಿಪಾಕಸ್ಯ ಫಲದಂ ವೈ ವಿದುರ್ಬುಧಾಃ ॥ ೨೮೬ ॥
ತಸ್ಮಾತ್ಕರ್ಮ ಶುಭಂ ಕಾರ್ಯಂ ಪುಣ್ಯಾತ್ಪುಣ್ಯಾತ್ಮಕಂ ಚ ಯತ್ ।
ಪುಣ್ಯೇನ ತತ್ರ ಸೌಖ್ಯಂ ಸ್ಯಾದ್ದುಃಖಂ ಪಾಪೇನ ನಿಶ್ಚಿತಂ ॥ ೨೮೭ ॥
ಇತಿ ಸಂಚಿಂತ್ಯ ದೈತ್ಯೇಂದ್ರ ಸ್ವಂ ವಚಃ ಪರಿಪಾಲಯ ।
ಮದುಕ್ತಂ ವಚನಂ ಸರ್ವಂ ಯದಿ ಮಾತುಮಿಹಾರ್ಹಸಿ ॥ ೨೮೮ ॥

---

ಕ್ಷಣಮಾತ್ರದಲ್ಲಿ ನಾಶಗೊಳಿಸುವೆನು. ಸಕಲ ದೈತ್ಯರಿಂದೊಡಗೂಡಿದ ನಿನ್ನನ್ನೂ ಬೆರಳಿನ ಕೊನೆಯಿಂದಲೇ ಕೊಲ್ಲಲು ನನ್ನಲ್ಲಿ ಶಕ್ತಿಯಿಲ್ಲವೆಂದು ತಿಳಿಯಬೇಡ. ಎಲೈ ರಾಕ್ಷಸನೆ! ಆದರೆ ಧರ್ಮಮಾರ್ಗವನ್ನು ಅತಿಕ್ರಮಿಸಲಿಚ್ಛಿಸುವುದಿಲ್ಲ.

೨೮೩—೨೮೪. ಲೋಕಕ್ಕೆ ಮಾರ್ಗದರ್ಶಕನಾದ ನಾನೇ ಬ್ರಹ್ಮವರ ರೂಪವಾದ ಧರ್ಮವನ್ನು ಪಾಲಿಸದೆ ಲೋಪಗೊಳಿಸಿದರೆ ಧರ್ಮವೆಂಬುದು ಮತ್ತೆ ಯಾರನ್ನು ಶರಣುಹೋಗಬೇಕು? ನಾನೇ ಕರ್ತೃವೆಂದೂ ತಿಳಿಯಬೇಡ. ಸರ್ವವ್ಯಾಪಕವಾಗಿ ನಿಜವಾಗಿಯೂ ಕರ್ತೃವಾದ ಕಾಲವೆಂಬುದು ವೃಕ್ಷದಲ್ಲಿ ಫಲವನ್ನು ಪಕ್ವವನ್ನಾಗಿ ಮಾಡುವಂತೆಯೇ ಸಕಲ ಪ್ರಪಂಚವನ್ನೂ ಪಚನೆ ಮಾಡುವುದು.

೨೮೫. ಎಲೈ ರಾಕ್ಷಸೇಂದ್ರನೆ! ಮನುಷ್ಯನು ಯಾವ ಕರ್ಮಗಳಿಂದ ಸುಖವನ್ನುಅನುಭವಿಸುವನೋ, ಆ ಕರ್ಮಗಳಿಂದಲೇ ದುಃಖಗಳನ್ನೂ ಸಂಪಾದಿಸಿಕೊಳ್ಳುವನು. ಕಾಲದ ವಿಚಿತ್ರವಾದ ವ್ಯಾಪಾರವನ್ನು ಕಂಡೆಯಾ?

೨೮೬. ಆದುದರಿಂದ ಬುದ್ಧಿವಂತರಾದ ಜನರೆಲ್ಲರೂ ಸಕಲವೂ ಕಾಲವಶದಿಂದಲೇ ನಡೆಯುತ್ತದೆಯೆಂದು ತಿಳಿಯಬೇಕು. ಅದೇ ಅವರವರ ಕರ್ಮಗಳ ಫಲಗಳನ್ನು ಕೊಡುವುದೆಂದು ತಿಳಿದವರು ಹೇಳುವರು.

೨೮೭—೨೮೮. ಆದುದರಿಂದ ಪುಣ್ಯವನ್ನಿಚ್ಛಿಸುವರು ಪುಣ್ಯಾತ್ಮಕವಾದ ಶುಭಕರ್ಮವನ್ನೇ ಮಾಡಬೇಕು. ಪುಣ್ಯದಿಂದಲೇ ಸೌಖ್ಯವೂ, ಪಾಪದಿಂದಲೇ ದುಃಖವೂ ಉಂಟಾಗುವುವೆಂಬುದು ನಿಶ್ಚಿತವಾಗಿರುವುದು. ಎಲೈ ರಾಕ್ಷಸೇಂದ್ರನೆ! ಇದನ್ನೆಲ್ಲ ಪರಿಶೀಲಿಸಿ ನನ್ನ ಮಾತುಗಳೆಲ್ಲವನ್ನೂ ಪಥ್ಯವೆಂದು ನೀನು ತಿಳಿದಿದ್ದರೆ ನಿನ್ನ ಮಾತನ್ನು ನೀನು ನಡೆಸಿಕೊಡು."

ತಾರಕ ಉವಾಚ :—

ಮಾಮತ್ರ ಸಂಸ್ಥಿತಂ ದೃಷ್ಟ್ವಾ ಕಾಲನೇಮಿಮುಖ್ಯೈರ್ಯುತಂ ।
ಕಸ್ಯೇಹ ನ ವ್ಯಥೇದ್ಬುದ್ಧಿರ್ಮೃತ್ಯೋರಪಿ ಜಿಘಾಂಸತಃ ॥ ೨೮೮ ॥
ಸಾ ತೇ ನ ವ್ಯಥತೇ ಬುದ್ಧಿರಚಲಾ ತತ್ತ್ವದರ್ಶಿನೀ ।
ಬ್ರವೀಷಿ ಯದ್ಯತ್ತ್ವಂ ವಾಕ್ಯಂ ತತ್ತಥೈವ ನ ಸಂಶಯಃ ॥ ೨೮೯ ॥
ಕೋ ಹಿ ವಿಶ್ವಾಸಮರ್ಥೇಷು ಶರೀರೇ ವಾ ಶರೀರಭೃತ್ ।
ಕರ್ತುಮುತ್ಸಹತೇ ಲೋಕೇ ದೃಷ್ಟ್ವಾ ಸಂಪ್ರಸ್ಥಿತಂ ಜಗತ್ ॥ ೨೯೦ ॥
ಅಹಮಪ್ಯೇವಮೇವೈನಂ ಲೋಕಂ ಜಾನಾಮ್ಯಶಾಶ್ವತಂ ।
ಕಾಲಾಗ್ನಾವಾಹಿತಂ ಘೋರೇ ಗುಹ್ಯೇ ಸತತಗತ್ವರೇ ॥ ೨೯೧ ॥
ಇದಮದ್ಯ ಕರಿಷ್ಯಾಮಿ ಶ್ವಃಕರ್ತಾಸ್ಮೀತಿ ವಾದಿನಂ ।
ಕಾಲೋ ಹರತಿ ಸಂಪ್ರಾಪ್ತೋ ನದೀವೇಗ ಇವೋರ್ಮಿಣಾನ್ ॥ ೨೯೨ ॥
ಇದಾನೀಂ ತಾವದೇವಾಸೌ ಮಯಾ ದೃಷ್ಟೋ ನ ವಿಸ್ಮೃತಃ ।
ಕಾಲೇನ ಹ್ರಿಯಮಾಣಾನಾಂ ಪ್ರಲಾಪಃ ಶ್ರೂಯತೇ ನೃಣಾಂ ॥ ೨೯೩ ॥

---

೨೮೮–೨೮೯. ತಾರಕನು ಹೇಳುತ್ತಾನೆ :—“ಕಾಲನೇಮಿಯೇ ಮೊದಲಾದವರಿಂದ ಕೂಡಿದ ನಾನು ಇಲ್ಲಿ ನೆಲಸಿರುವುದನ್ನು ಕಂಡು ಯಾರಿಗೆ ತಾನೆ ಬುದ್ಧಿಯು ವ್ಯಥೆಗೊಳ್ಳದಿರುವುದು? ಮೃತ್ಯುದೇವತೆಯಾದ ಯಮನಿಗೂ ಹಾಗೆಯೇ ಆಗುವುದು. ಆದರೆ ಸ್ಥಿರವೂ ತತ್ತ್ವನಿಶ್ಚಯವುಳ್ಳದೂ ಆದ ನಿನ್ನ ಬುದ್ಧಿಯು ಮಾತ್ರ ಚಲಿಸಲಿಲ್ಲ. ನೀನು ಹೇಳಿದ ಮಾತುಗಳೆಲ್ಲ ಯಥಾರ್ಥಗಳೆಂಬುದರಲ್ಲಿ ಸಂಶಯವಿಲ್ಲ.

೨೯೦. ದೇಹವನ್ನು ಧರಿಸಿದ ಯಾವ ಜೀವನು ತಾನೆ ಈ ಕ್ಷಣಿಕವಾದ ಜಗತ್ತನ್ನು ಕಂಡು ಧನದಲ್ಲಿಯಾಗಲಿ ಶರೀರದಲ್ಲಿಯಾಗಲಿ ಶಾಶ್ವತವೆಂಬ ವಿಶ್ವಾಸವನ್ನು ಮಾಡಬಹುದು?

೨೯೧. ನಾನೂ ಕೂಡ ಈ ಲೋಕವು ಅಶಾಶ್ವತವಾದುದೂ, ಭಯಂಕರವೂ, ಅದೃಶ್ಯವೂ, ಸಂತತಗಮನವುಳ್ಳದೂ, ಕಾಲವೆಂಬ ಅಗ್ನಿಯಲ್ಲಿ ಆಹುತಿಪ್ರಾಯವೂ ಆದುದೆಂದು ತಿಳಿದಿರುವೆನು.

೨೯೨. “ಇದನ್ನು ಇಂದು ಮಾಡುವೆನು; ನಾಳೆ ಮತ್ತೊಂದನ್ನು ಮಾಡುವೆನು” ಎಂದು ಹೇಳುವ ಮನುಷ್ಯನನ್ನು ನದಿಯ ಪ್ರವಾಹವು ಎದುರಿಸುವ ಪ್ರಾಣಿಗಳನ್ನು ಸೆಳೆಯುವಂತೆ ಪ್ರಾಪ್ತಸಮಯದಲ್ಲಿ ಕಾಲನು ಸೆಳೆಯುವನು.

೨೯೩. ಈಗ ತಾನೆ ಈ ವಿಚಾರವನ್ನು ನಿಮ್ಮ ವಿಷಯದಲ್ಲಿ ನೋಡಿರುವುದನ್ನು ಇನ್ನೂ ಮರೆತಿಲ್ಲ. ಕಾಲನಿಂದ ಸೆಳೆಯಲ್ಪಡುತ್ತಿರುವ ಮನುಷ್ಯರ ಪ್ರಲಾಪವು ಕೇಳುತ್ತಿರುವುದು.

ಈರ್ಷ್ಯಾಭಿಮಾನಲೋಭೇಷು ಕಾಮಕ್ರೋಧಭಯೇಷು ಚ ।
ಸ್ಪೃಹಾಮೋಹಾತಿವಾದೇಷು ಲೋಕಃ ಸಕ್ತೋ ನ ಬುಧ್ಯತೇ ॥ ೨೯೪ ॥
ಗುರುಂ ವಾಪ್ಯಗುರುಂ ವಾಪಿ ಕೃತ್ಯಾಕೃತ್ಯಂ ಚ ಕೇಶವ ।
ಜಾನಾಮಿ ತ್ವಾಮಹಂ ವಿಷ್ಣೋ ಸರ್ವಭೂತವರಂ ಪ್ರಭುಂ ॥ ೨೯೫ ॥
ಕಿಂ ಕುರ್ಮಃ ಸ್ವಸ್ವಭಾವೇನ ಬಲಿನಂ ತ್ವಾಂ ನ ಮನ್ಮಹೇ ।
ಕೇಚಿದ್ಭಜಂತಿ ತ್ವಾಂ ಭಕ್ತ್ಯಾ ವೈರೇಣ ಹೇಲಯಾ ಪರೇ ॥ ೨೯೬ ॥
ಸರ್ವೇಽನುಕಂಪ್ಯಾಸ್ತೇ ತುಭ್ಯಮಂತರಾತ್ಮಾಸಿ ದೇಹಿನಾಂ ॥ ೨೯೭ ॥
ಪುರಾಣಃ ಶಾಶ್ವತೋ ಧರ್ಮಃ ಸರ್ವಪ್ರಾಣಭೃತಾಂ ಸಮಃ ।
ಮಾಮಾಲಂಬ್ಯ ಮಯಾ ಮುಕ್ತಾ ಯಾಂತು ಸರ್ವೇ ದಿವೌಕಸಃ ॥ ೨೯೮ ॥
ಪುನರ್ಮರ್ಕಸ್ವರೂಪೇಣ ಭ್ರಾಂತವ್ಯಂ ಭುವನತ್ರಯಂ ।
ಸ್ಪೃಹಾಪಿ ಯಜ್ಞಭಾಗಾನಾಂ ನ ಕಾರ್ಯಂ ಸಮಯಸ್ತ್ವಯಂ ॥ ೨೯೯ ॥
ಏವಮುಕ್ತೇ ತಾರಕೇಣ ದೇವಾ ಹರ್ಷಂ ಪ್ರಪೇದಿರೇ ।
ಮುಚ್ಯತೇ ಹೃತಲೋಮಾಪಿ ಮೇಷೋ ಲಾಭೋ ಹಿ ಸೌನಿಕಾತ್ ॥

---

೨೯೪. ಅಸೂಯೆ, ಅಭಿಮಾನ, ಲೋಭ, ಕಾಮ, ಕ್ರೋಧ, ಭಯ, ಅಭಿಲಾಷೆ, ಮೋಹ, ಪರನಿಂದೆ ಮುಂತಾದುವುಗಳಿಂದ ಆಸಕ್ತವಾಗಿರುವ ಪ್ರಪಂಚವು ಈ ತತ್ತ್ವವನ್ನು ತಿಳಿಯಲಾರದು.

೨೯೫. ಗುರು ಲಘುಗಳ ವಿಷಯಗಳನ್ನೂ, ಕೃತ್ಯಾಕೃತ್ಯಗಳನ್ನೂ, ಸಕಲ ಭೂತಗಳಿಗೆ ನಾಯಕನಾದ ನಿನ್ನನ್ನೂ ನಾನು ಚೆನ್ನಾಗಿ ಬಲ್ಲೆನು.

೨೯೬–೨೯೭. ಆದರೆ ನಾವೇನು ಮಾಡಬಲ್ಲೆವು? ಬಲಶಾಲಿಯಾದ ನಮ್ಮ ಸ್ವಭಾವದಿಂದ ನಿನ್ನನ್ನು ಚೆನ್ನಾಗಿ ತಿಳಿಯಲಾರೆವು. ಕೆಲವರು ಭಕ್ತಿಯಿಂದಲೂ, ಕೆಲವರು ವೈರದಿಂದಲೂ, ಹಲವರು ಪರಿಹಾಸ್ಯಕ್ಕಾಗಿಯೂ ನಿನ್ನನ್ನು ಭಜಿಸುವರು. ಆದರೆ ನೀನೇ ಸಕಲರಲ್ಲಿಯೂ ಅಂತರ್ಯಾಮಿಯಾಗಿರುವುದರಿಂದ ಎಲ್ಲರೂ ನಿನ್ನ ಕೃಪೆಗೆ ಪಾತ್ರರಾಗಲು ಅರ್ಹರೇ ಸರಿ.

೨೯೮. ಧರ್ಮವು ಅನಾದಿಯಾದುದೂ, ಶಾಶ್ವತವಾದುದೂ, ಸಕಲ ಪ್ರಾಣಿಗಳಿಗೂ ಸಮಾನವಾದುದೂ ಆಗಿರುವುದು. ನನ್ನಿಂದ ಮುಕ್ತರಾದ ಸಕಲ ದೇವತೆಗಳೂ ನನ್ನ ಅಧೀನದಲ್ಲಿಯೇ ಇದ್ದುಕೊಂಡು ಚರಿಸುತ್ತಿರಲಿ.

೨೯೯–೩೦೦. ಆದರೆ, ಈ ಕಪಿರೂಪಗಳಿಂದಲೇ ಇವರು ಮೂರು ಲೋಕಗಳನ್ನೂ ಸುತ್ತಲಿ. ಯಜ್ಞಗಳಲ್ಲಿ ಹವ್ಯಭಾಗಗಳ ಇಚ್ಛೆಯನ್ನೂ ಇವರು ತ್ಯಜಿಸಬೇಕು. ಇದೇ ಶಪಥದಲ್ಲಿ ನಡೆಯಬೇಕು.'' ಇಂತು ತಾರಕಾಸುರನು ಅಪ್ಪಣೆ ಮಾಡಲು ದೇವತೆಗಳು ಆನಂದವನ್ನು ಹೊಂದಿದರು. ಕಟುಕನ ಕೈಗೆ ಸಿಕ್ಕಿದ

ಶ್ರೀ ಭಗವಾನುವಾಚ :—

**ದೈತ್ಯೇಂದ್ರ ಭವ ತತ್ತ್ವಜ್ಞೋ ವಿದ್ಯಾಜ್ಞಾನತಪೋಽನ್ವಿತಃ ।**
**ಕಾಲಂ ಪಶ್ಯಸಿ ಸುವ್ಯಕ್ತಂ ಪಾಣಾವಾಮಲಕಂ ಯಥಾ ॥ ೩೦೦ ॥**
**ಕಾಲಚಾರಿತ್ರತತ್ತ್ವಜ್ಞ ಶಿವಭಕ್ತ ಮಹಾಮತೇ ।**
**ವಜ್ರಾಂಗಸುತ ಧನ್ಯೋಽಸಿ ಸ್ಪೃಹಣೀಯೋಽಸಿ ಧೀಮತಾಂ ॥ ೩೦೨ ॥**
**ಯಾವತ್ತೇ ತಪಸೋ ವೀರ್ಯಂ ತಾವದ್ಭುಂಕ್ಷ್ವ ಜಗತ್ತ್ರಯಂ ।**
**ಏತೇನ ಸಮಯೇನೈತೇ ಚರಿಷ್ಯಂತಿ ಸುರಾ ಜಗತ್ ॥ ೩೦೩ ॥**
**ಇತ್ಯುಕ್ತ್ವಾ ಮರ್ಕಯೂಥೇನ ವೃತೋ ನಾರಾಯಣಃ ಪ್ರಭುಃ ।**
**ಸ್ಥಾನಾದಸ್ಮಾದಪಾಕ್ರಮ್ಯ ಮೇರುಂ ಪ್ರತಿ ಯಯೌ ತದಾ ॥ ೩೦೪ ॥**
**ತತೋ ಮೇರುಂ ಸಮಾಗಮ್ಯ ಪ್ರೋವಾಚ ವಚನಂ ಹರಿಃ ।**
**ಭವಂತೋ ಯಾಂತು ಬ್ರಹ್ಮಾಣಂ ಸ ಧಾಸ್ಯತಿ ಚ ವೋ ಹಿತಂ ॥ ೩೦೫ ॥**
**ಅಪ್ರಮತ್ತೈಃ ಸದಾ ಭಾವ್ಯಂ ಪಾಲ್ಯಶ್ಚ ಸಮಯಸ್ತಥಾ ।**
**ಇತ್ಯುಕ್ತ್ವಾ ಭಗವಾನ್ವಿಷ್ಣುಸ್ತತ್ರೈವಾಂತರಧೀಯತ ॥ ೩೦೬ ॥**

---

ಮೇಕೆಯು ಕೂದಲನ್ನು ಕಳೆದುಕೊಂಡು ತಪ್ಪಿಸಿಕೊಂಡರೂ ಅದನ್ನೂ ಲಾಭವೆಂದೇ ತಿಳಿಯಬೇಕು.

೩೦೧. ನಾರಾಯಣನು ಹೇಳುತ್ತಾನೆ:—“ರಾಕ್ಷಸೇಶ್ವರನೆ! ನೀನು ತತ್ತ್ವಜ್ಞನು; ವಿದ್ಯೆ, ಬುದ್ಧಿ, ತಪಸ್ಸುಗಳಿಂದ ಕೂಡಿದವನೂ ಆಗು. ನೀನು ಕೈಯೊಳಗಿನ ನೆಲ್ಲಿಯ ಕಾಯಿಯಂತೆ ಕಾಲವನ್ನು ಸ್ಪಷ್ಟವಾಗಿ ತಿಳಿದಿರುವೆ.

೩೦೨–೩೦೩. ಕಾಲದ ವ್ಯಾಪಾರಗಳ ಸೂಕ್ಷ್ಮಗಳನ್ನು ತಿಳಿದವನೂ, ಶಿವ ಭಕ್ತನೂ, ಮಹಾಬುದ್ಧಿಶಾಲಿಯೂ, ವಜ್ರಾಂಗನ ಮಗನೂ ಆದ ನೀನು ಲೋಕದ ಜ್ಞಾನಿಗಳಿಗೆ ಇಷ್ಟನಾಗಿರುವೆ. ನಿನ್ನ ತಪಸ್ಸಿನ ಶಕ್ತಿಯಿರುವವರೆಗೂ ತ್ರಿಲೋಕಗಳ ಆಧಿಪತ್ಯವನ್ನು ಅನುಭವಿಸು. ನಿನ್ನ ಸಮಯವನ್ನನುಸರಿಸಿಯೇ ಈ ದೇವತೆಗಳು ಪ್ರಪಂಚದಲ್ಲಿ ತಿರುಗುವರು.”

೩೦೪. ಇಂತೆಂದು ಜಗನ್ನಾಥನಾದ ನಾರಾಯಣನು ಕಪಿಗಳ ಸಮೂಹ ದಿಂದ ಪರಿವೃತನಾಗಿ ಆ ಸ್ಥಳದಿಂದ ಹೊರಟು ಮೇರುಪರ್ವತವನ್ನು ಕುರಿತು ತೆರಳಿದನು.

೩೦೫. ಮೇರು ಪರ್ವತವನ್ನು ಸೇರಿ ವಿಷ್ಣುವು ದೇವತೆಗಳನ್ನು ಕುರಿತು ಇಂತೆಂದನು. “ನೀವೆಲ್ಲರೂ ಬ್ರಹ್ಮನ ಬಳಿಗೆ ಹೊರಡಿರಿ. ಆತನೇ ನಿಮಗೆ ಅನುಕೂಲವನ್ನು ಮಾಡಿಕೊಡುವನು.

೩೦೬–೩೦೭. ಯಾವಾಗಲೂ ಜಾಗರೂಕರಾಗಿರಿ; ಅಲ್ಲದೆ ತಾರಕಾಸುರ ನೊಡನೆ ಮಾಡಿಕೊಂಡಿರುವ ಒಪ್ಪಂದವನ್ನು ನೀವು ಪಾಲಿಸುತ್ತಿರಿ.” ಇಂತೆಂದು

ಪ್ರಣತಃ ಸಂಸ್ತುತೋ ದೇವೈರ್ಬ್ರಹ್ಮಾಣಂ ಚ ಸುರಾ ಯಯುಃ ॥ ೩೦೭ ॥
ದಿವ್ಯೋತ್ತಮೈಸ್ತತ್ರಗತೈರಭಿಷ್ಟುತೋ
ವಿದೀಪ್ತತೇಜಾ ಭುವನತ್ರಯೇಽಪಿ ।
ವಜ್ರಾಂಗಪುತ್ರೋಽಪಿ ಮುಮೋದ ವೀರಃ
ಶಿವಪ್ರಸಾದೇನ ಮಹಿರ್ದ್ಧಿಮಾಪ್ಯ ॥ ೩೦೮ ॥
ಸ್ವಯಮಿಂದ್ರೋ ನಿಮಿರ್ವಹ್ನಿಃ ಕಾಲನೇಮಿರ್ಯಮೋಽಪಿ ಚ ।
ಸ್ತಂಭಶ್ಚ ನಿರ್ಋತಿಸ್ಥಾನೇ ಮಹಿಷೋ ವರುಣಸ್ತಥಾ ॥ ೩೦೯ ॥
ಮೇಷೋ ವಾತಾಧಿಕಾರೀ ಚ ಕುಜಂಭೋ ಧನದೋಽಭವತ್ ।
ಅನ್ಯೇಷಾಂ ಚಾಧಿಕಾರಾಂಶ್ಚ ದೈತ್ಯಾನಾಂ ತಾರಕೋ ದದೌ ॥ ೩೧೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ದೇವಾಸುರಸಂಗ್ರಾಮೇ ತಾರಕವಿಜಯವರ್ಣನಂ" ನಾಮ್ನೈಕವಿಂಶತಿತಮೋಽಧ್ಯಾಯಃ

---

ಮಹಾವಿಷ್ಣುವು ಸಕಲ ದೇವತೆಗಳೂ ನಮಸ್ಕರಿಸಿ ಸ್ತೋತ್ರ ಮಾಡುತ್ತಿರಲು ಅಲ್ಲಿಯೇ ಅಂತರ್ಹಿತನಾದನು. ದೇವತೆಗಳೂ ಕೂಡ ಬ್ರಹ್ಮನಿಗೆ ಶರಣಾಗತರಾದರು.

೩೦೮. ವಜ್ರಾಂಗದನ ಮಗನಾದ ತಾರಕನೂ ಸಹ ತನ್ನಲ್ಲಿಗೆ ಬಂದ ದೇವತೆಗಳಿಂದ ಸ್ತೋತ್ರಗಳನ್ನು ಕೇಳುತ್ತ, ಮೂರು ಲೋಕಗಳಲ್ಲಿಯೂ ಬೆಳಗುತ್ತಿರುವ ತೇಜಸ್ಸುಳ್ಳವನಾಗಿ. ಪರಮೇಶ್ವರನ ಅನುಗ್ರಹದಿಂದ ಅಮಿತೈಶ್ವರ್ಯವನ್ನು ಹೊಂದಿ ಲೋಕೈಕವೀರನಾಗಿ ಸಂತೋಷದಿಂದಿದ್ದನು.

೩೦೯–೩೧೦. ಅವನು ತಾನೇ ಇಂದ್ರನ ಸಿಂಹಾಸನವನ್ನೇರಿದನು. ಆಗ ನಿಮಿಯು ಅಗ್ನಿಯಾದನು. ಕಾಲನೇಮಿಯೇ ಯಮನು. ಸ್ಥಂಭನನ್ನು ನಿರ್ಋತಿಯ ಸ್ಥಾನದಲ್ಲಿರಿಸಿದನು. ಮಹಿಷಾಸುರನೇ ವರುಣನಾದನು. ಮೇಷನು ವಾಯುವಿಗೆ ಅಧಿಕಾರಿಯಾದನು. ಕುಜಂಭನು ಕುಬೇರನಾದನು. ಇಂತು ತಾರಕಾಸುರನು ಇತರ ರಾಕ್ಷಸರಿಗೂ ಯಥಾಯೋಗ್ಯವಾದ ಅಧಿಕಾರಗಳನ್ನು ಕೊಟ್ಟನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾ ಖಂಡದಲ್ಲಿ "ದೇವಾಸುರ ಸಂಗ್ರಾಮ — ತಾರಕವಿಜಯ ವರ್ಣನ"ವೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾವಿಂಶೋಽಧ್ಯಾಯಃ

## ಕುಮಾರೀಶ ಮಾಹಾತ್ಮ್ಯೇ — ಪಾರ್ವತೀ ಜನ್ಮವರ್ಣನಂ

ನಾರದ ಉವಾಚ :—

ಏವಂ ವಿಪ್ರಕೃತಾ ದೇವಾ ಮಹೇಂದ್ರಸಹಿತಾಸ್ತದಾ ।
ಯಯುಃ ಸ್ವಾಯಂಭುವಂ ಧಾಮ ಮರ್ಕರೂಪಮುಪಾಶ್ರಿತಾಃ ॥ ೧ ॥
ತತಶ್ಚ ವಿಸ್ಮಿತೋ ಬ್ರಹ್ಮಾ ಪ್ರಾಹ ತಾನ್ಸುರಪುಂಗವಾನ್ ।
ಸ್ವರೂಪೇಣೇಹ ತಿಷ್ಠಧ್ವಂ ನಾತ್ರ ವಸ್ತಾರಕಾದ್ಭಯಂ ॥ ೨ ॥
ತತೋ ದೇವಾಃ ಸ್ವರೂಪಸ್ಥಾಃ ಪ್ರಮ್ಲಾನವದನಾಂಬುಜಾಃ ।
ತುಷ್ಟುವುಃ ಪ್ರಣತಾಃ ಸರ್ವೇ ಪಿತರಂ ಪುತ್ರಕಾ ಯಥಾ ॥ ೩ ॥
ನಮೋ ಜಗತ್ಪ್ರಸೂತ್ಯೈ ತೇ ಹೇತವೇ ಪಾಲಕಾಯ ಚ ।
ಸಂಹರ್ತ್ರೇ ಚ ನಮಸ್ತುಭ್ಯಂ ತಿಸ್ರೋಽವಸ್ಥಾಸ್ತವ ಪ್ರಭೋ ॥ ೪ ॥
ತ್ವಮಾಪಃ ಪ್ರಥಮಂ ಸೃಷ್ಟ್ವಾ ತಾಸು ವೀರ್ಯಮವಾಸೃಜಃ ।
ತದಂಡಮಭವದ್ಧೈಮಂ ಯಸ್ಮಿನ್ ಲೋಕಾಶ್ಚರಾಚರಾಃ ॥ ೫ ॥

---

## ಕನ್ನಡದ ಅನುವಾದ

### ಕುಮಾರೀಶ ಮಾಹಾತ್ಮ್ಯ — ಪಾರ್ವತೀ ಜನ್ಮವರ್ಣನ

೧. ಈ ರೀತಿ ಪರಾಭವವನ್ನು ಹೊಂದಿದವರಾಗಿ ಮಹೇಂದ್ರನೇ ಮೊದಲಾದ ದೇವತೆಗಳೆಲ್ಲರೂ ಕೋತಿಗಳ ರೂಪಗಳನ್ನು ಧರಿಸಿಯೇ ಬ್ರಹ್ಮನ ಸತ್ಯಲೋಕವನ್ನು ಕುರಿತು ಹೊರಡುವವರಾದರು.

೨. ಆಗ ಬ್ರಹ್ಮನು ವಿಸ್ಮಯಗೊಂಡವನಾಗಿ ಆ ದೇವತೆಗಳನ್ನು ಕುರಿತು "ನಿಮ್ಮನಿಮ್ಮ ಸ್ವರೂಪಗಳಿಂದಲೇ ನಿಲ್ಲಿರಿ. ಇಲ್ಲಿ ನಿಮಗೆ ತಾರಕಾಸುರನಿಂದ ಯಾವ ಭಯವೂ ಉಂಟಾಗಲಾರದು" ಎಂದು ಅಭಯವನ್ನಿತ್ತನು.

೩. ಆಗ ದೇವತೆಗಳೆಲ್ಲರೂ ತಮ್ಮ ಸ್ವರೂಪಗಳಿಂದ ಕೂಡಿದವರಾಗಿ ತಂದೆಯನ್ನು ಮಕ್ಕಳು ಸ್ತುತಿಸುವಂತೆ ಬಾಡಿದ ಮೊಗಗಳಿಂದ ಸ್ತೋತ್ರಮಾಡತೊಡಗಿದರು.

೪. "ಹದಿನಾಲ್ಕು ಲೋಕಗಳ ಉತ್ಪತ್ತಿಗೆ ಹೇತುಭೂತನೂ, ಸಂರಕ್ಷಕನೂ, ಸಂಹಾರಕನೂ ಆದ ನಿನಗೆ ನಮಸ್ಕಾರವು. ಎಲೈ ಪಿತಾಮಹನೆ! ನೀನೇ ಈ ಮೂರು ಅವಸ್ಥೆಗಳನ್ನೂ ಸ್ವೀಕರಿಸಿರುವೆ.

೫. ನೀನು ಜಲತತ್ತ್ವವನ್ನು ಮೊದಲು ಸೃಷ್ಟಿಮಾಡಿ ಅದರಲ್ಲಿ ವೀರ್ಯವನ್ನು ವಿಸರ್ಜಿಸಿದುದರಿಂದ ಹಿರಣ್ಯಗರ್ಭವೆಂಬ ಸಮಷ್ಟಿರೂಪವಾದ ಬ್ರಹ್ಮಾಂಡ

ವೇದೇಷ್ವಾಹುರ್ವಿರಾಡ್ರೂಪಂ ತ್ವಾಮೇಕರೂಪಮಿಮಾದೃಶಂ ।
ಪಾತಾಲಂ ಪಾದಮೂಲಂಚ ಪಾರ್ಷ್ಣಿಪಾದೇ ರಸಾತಲಂ ॥ ೬ ॥
ಮಹಾತಲಂ ಚಾಸ್ಯಗುಲ್ಫೌ ಜಂಘೇ ಚಾಪಿ ತಲಾತಲಂ ।
ಸುತಲಂ ಜಾನುನೀ ಚಾಸ್ಯ ಊರೂ ಚ ವಿತಲಾತಲೇ ॥ ೭ ॥
ಮಹೀತಲಂ ಚ ಜಘನಂ ನಾಭಿಶ್ಚಾಸ್ಯ ನಭಸ್ತಲಂ ।
ಜ್ಯೋತಿಃಪದಮುರಃಸ್ಥಾನಂ ಸ್ವರ್ಲೋಕೋ ಬಾಹುರುಚ್ಯತೇ ॥ ೮ ॥
ಗ್ರೀವಾ ಮಹಶ್ಚ ವದನಂ ಜನಲೋಕಃ ಪ್ರಕೀರ್ತ್ಯತೇ ।
ಲಲಾಟಂ ಚ ತಪೋಲೋಕಃ ಶೀರ್ಷಂ ಸತ್ಯಮುದಾಹೃತಂ ॥ ೯ ॥
ಚಂದ್ರಸೂರ್ಯೌ ಚ ನಯನೇ ದಿಶಃ ಶ್ರೋತ್ರೇ ನಾಸಿಕಾಶ್ವಿನೌ ।
ಆತ್ಮಾನಂ ಬ್ರಹ್ಮರಂಧ್ರಸ್ಥಮಾಹುಸ್ತ್ವಾಂ ವೇದವೇದಿನಃ ॥ ೧೦ ॥
ಏವಂ ಯೇ ತೇ ವಿರಾಡ್ರೂಪಂ ಸಂಸ್ಮರಂತ ಉಪಾಸತೇ ।
ಜನ್ಮಬಂಧವಿನಿರ್ಮುಕ್ತಾ ಯಾಂತಿ ತ್ವಾಂ ಪರಮಂ ಪದಂ ॥ ೧೧ ॥

---

ವುಂಟಾಯಿತು. ಅದರಲ್ಲಿಯೇ ಸಕಲ ಚರಾಚರಾತ್ಮಕಗಳಾದ ಲೋಕಗಳೂ ನೆಲೆಗೊಂಡಿರುವುವು.

೬. ಇಂತಹ ಏಕರೂಪನಾದ ನಿನಗೆ ವೇದಗಳಲ್ಲಿ ವಿರಾಡ್ರೂಪನೆಂದು ಹೇಳಿರುವರು. ನಿನ್ನ ಅಂಗಾಲುಗಳೇ ಪಾತಾಳವು; ಪಾದಗಳ ಮೇಲ್ಭಾಗವೇ ರಸಾತಲವು.

೭. ಹಿಮ್ಮಡಿಯು ಮಣಿಕಟ್ಟುಗಳೇ ಮಹಾತಲವು; ಕಾಲುಗಳೇ ತಲಾತಲವು; ಮೊಣಕಾಲುಗಳೇ ಸುತಲಲೋಕವು; ತೊಡೆಗಳೇ ಅತಲ ವಿತಲಗಳು.

೮. ಮಹೀತಲವೇ (ಭೂಲೋಕವೇ) ಕಟಿಪಶ್ಚಾದ್ಭಾಗವು; ನಭೋಲೋಕವೇ ನಾಭಿಯು; ಭುವರ್ಲೋಕವೇ ಎದೆಯು; ಸ್ವರ್ಲೋಕವು ಬಾಹುಗಳು.

೯. ಮಹೋಲೋಕವು ಕಂಠವು; ಜನೋಲೋಕವೇ ಮುಖವೆಂದು ಕರೆಯಲ್ಪಡುವುದು; ತಪೋಲೋಕವು ಹಣೆಯು; ಸತ್ಯಲೋಕವು ತಲೆಯು.

೧೦. ಚಂದ್ರಸೂರ್ಯರೇ ನಿನ್ನ ನೇತ್ರಗಳು; ದಿಕ್ಕುಗಳೇ ಕಿವಿಗಳು; ಅಶ್ವಿನೀ ನಕ್ಷತ್ರಗಳೇ ನಿನ್ನ ನಾಸಿಕಗಳು; ಇಂತು ವೇದಜ್ಞರಾದವರು ಶರೀರದಲ್ಲಿ ಬ್ರಹ್ಮರಂಧ್ರದಲ್ಲಿರುವ ಆತ್ಮನೇ ನೀನೆಂದು ಹೇಳುವರು.

೧೧. ಈ ರೀತಿಯಾದ ನಿನ್ನ ವಿರಾಡ್ರೂಪವನ್ನು ಯಾರು ಮನಸ್ಸಿಗೆ ತಂದುಕೊಂಡು ಉಪಾಸನೆ ಮಾಡುವರೋ ಅವರು ಜನನ ಮರಣ ರೂಪವಾದ ಈ ಸಂಸಾರದಿಂದ ಬಿಡುಗಡೆಯನ್ನು ಹೊಂದಿ ಪರಮಪದವಾದ ನಿನ್ನನ್ನೇ ಹೊಂದುವರು.

ಏವಂ ಸ್ಥೂಲಂ ಪ್ರಾಣಿಮಧ್ಯಂ ಚ ಸೂಕ್ಷ್ಮಂ
ಭಾವೇ ಭಾವೇ ಭಾವಿತಂ ತ್ವಾಂ ಗೃಣಂತಿ ।
ಸರ್ವತ್ರಸ್ಥಂ ತ್ವಾಮತಃ ಪ್ರಾಹುರ್ವೇದಾಃ
ತಸ್ಮೈ ತುಭ್ಯಂ ಪದ್ಮಜ ಇದ್ವಿಧೇಮ ॥ ೧೨ ॥
ಏವಂ ಸ್ತುತೋ ವಿರಿಂಚಸ್ತು ಕೃಪಯಾಭಿಪರಿಪ್ಲುತಃ ।
ಜಾನನ್ನಪಿ ತದಾ ಪ್ರಾಹ ತೇಷಾಮಾಶ್ವಾಸಹೇತವೇ ॥ ೧೩ ॥
ಸರ್ವೇ ಭವಂತೋ ದುಃಖಾರ್ತಾಃ ಪರಿಮ್ಲಾನಮುಖಾಂಬುಜಾಃ ।
ಭ್ರಷ್ಟಾಯುಧಾಸ್ತಥಾ ಕಸ್ಮಾದ್ಭ್ರಷ್ಟಾಭರಣವಾಸಸಾಃ ॥ ೧೪ ॥
ಮಮೈವೇಯಂ ಕೃತಿರ್ದೇವಾ ಮಹತೀ ಯದ್ವಿಡಂಬನಾ ।
ಯದ್ವೈರಾಜಶರೀರೇ ಮೇ ಭವಂತೋ ಬಾಹುಸಂಜ್ಞಕಾಃ ॥ ೧೫ ॥
ಯದ್ಯದ್ವಿಭೂತಿಮತ್ಸತ್ತ್ವಂ ಧಾರ್ಮಿಕಂ ಚೋರ್ಜಿತಂ ಮಹತ್ ।
ತತ್ರಾಸೀದ್ಬಾಹುನಾಶೋ ಮೇ ಬಾಹುಸ್ಥಾನೇ ಚ ತೇ ಮಮ ॥ ೧೬ ॥

---

೧೨. ಈ ರೀತಿಯಾಗಿ ಬಹಿರ್ಲೋಕಗಳಲ್ಲಿ ಸ್ಥೂಲರೂಪದಿಂದಲೂ ಪ್ರಾಣಿಗಳ ಹೃದಯಗಳಲ್ಲಿ ಅಂತರ್ಯಾಮಿಯಾಗಿ ಸೂಕ್ಷ್ಮರೂಪದಿಂದಲೂ ಇದ್ದುಕೊಂಡು ಅಂತಃಕರಣದ ಪ್ರತಿಯೊಂದು ವೃತ್ತಿಯಲ್ಲಿಯೂ ಸಾಕ್ಷಿಯಾಗಿರುವವನೆಂದು ವೇದಗಳು ನಿನ್ನನ್ನು ತಿಳಿಸುತ್ತಿರುವುವು; ನೀನು ಎಲ್ಲೆಡೆಗಳಲ್ಲಿಯೂ ವ್ಯಾಪ್ತನಾಗಿರುವೆ. ಆದುದರಿಂದ ನಿನಗೆ ನಮಸ್ಕಾರವನ್ನು ಮಾಡುತ್ತೇವೆ."

೧೩. ಈ ರೀತಿಯಾಗಿ ದೇವತೆಗಳು ಸ್ತೋತ್ರಮಾಡುತ್ತಿರಲು ಬ್ರಹ್ಮನಿಗೆ ಕರುಣೆಯುಂಟಾಯಿತು. ಮುಂದೆ ನಡೆಯಬೇಕಾದ ಸಕಲವನ್ನೂ ತಿಳಿದವನಾದರೂ ಕೂಡ ದೇವತೆಗಳನ್ನು ಸಮಾಧಾನಗೊಳಿಸುವವನಾಗಿ ಅವರನ್ನು ಕುರಿತು ಇಂತೆಂದನು.

೧೪. "ನೀವೆಲ್ಲರೂ ದುಃಖಾರ್ತರಾಗಿ ಒಣಗಿದ ಮುಖಗಳಿಂದ ಕೂಡಿ ನಿಮ್ಮ ನಿಮ್ಮ ಆಯುಧಗಳನ್ನು ಕಳೆದುಕೊಂಡು ಒಡವೆ ವಸ್ತ್ರಗಳನ್ನು ಕಳಚಿದವರಾಗಿರುವಿರಲ್ಲವೆ!

೧೫. ನಿಮಗೆ ಈಗ ಸಂಭವಿಸಿರುವ ಅವಮಾನವು ನನಗೇ ಆದಂತಾಗಿದೆ. ಏಕೆಂದರೆ ಸ್ವರ್ಗಲೋಕವಾಸಿಗಳಾದ ನೀವೆಲ್ಲರೂ ವಿರಾಡ್ರೂಪನಾದ ನನಗೆ ಬಾಹುಸ್ಥಾನೀಯರಾಗಿರುವಿರಿ.

೧೬. ಲೋಕದಲ್ಲಿ ವಿಭೂತಿಯುಕ್ತವೂ, ಧರ್ಮಸಹಿತವೂ, ಊರ್ಜಿತವೂ, ಮಹತ್ತ್ವವುಳ್ಳದುದೂ ಆದುವುಗಳೆಲ್ಲವೂ ನನಗೆ ಬಾಹುಗಳಾದುದರಿಂದ ಈಗ ನನಗೆ ಬಾಹುನಾಶವಾದಂತೆಯೇ ಆಯಿತು.

ತನ್ನೋನಂ ಮಮ ಭಗ್ನೌ ಚ ಬಾಹೂ ತೇನ ದುರಾತ್ಮನಾ ।
ಯೇನ ಚೋಪಹೃತಂ ದೇವಾಸ್ತನ್ಮಮಾಖ್ಯಾತುಮರ್ಹಥ ॥ ೧೭ ॥
ದೇವಾ ಊಚುಃ :—
ಯೋಽಸೌ ವಜ್ರಾಂಗತನಯಸ್ತ್ವಯಾ ದತ್ತವರಃ ಪ್ರಭೋ ।
ಭೃಶಂ ವಿಪ್ರಕೃತಾಸ್ತೇನ ತತ್ತ್ವಂ ಜಾನಾಸಿ ತತ್ತ್ವತಃ ॥ ೧೮ ॥
ಯತ್ತನ್ಮಹೀಸಮುದ್ರಸ್ಯ ತಟಂ ಶಾರ್ವಿಕತೀರ್ಥಕಂ ।
ತದಾಕ್ರಮ್ಯ ಕೃತಂ ತೇನ ಮರುಭೂಮಿಸಮಂ ಪ್ರಭೋ ॥ ೧೯ ॥
ಋದ್ಧಯಃ ಸರ್ವದೇವಾನಾಂ ಗೃಹೀತಾಸ್ತೇನ ಸರ್ವತಃ ।
ಮಹಾಭೂತಸ್ವರೂಪೇಣ ಸ ಏವ ಚ ಜಗತ್ಪತಿಃ ॥ ೨೦ ॥
ಚಂದ್ರಸೂರ್ಯೌ ಗ್ರಹಾಸ್ತಾರಾ ಯಚ್ಚಾನ್ಯದ್ದೇವಪಕ್ಷತಃ ।
ತಚ್ಚ ಸರ್ವಂ ನಿರಾಕೃತ್ಯ ಸ್ಥಾಪಿತೋ ದೈತ್ಯಪಕ್ಷಕಃ ॥ ೨೧ ॥
ವಯಂ ಚ ವಿಧೃತಾಸ್ತೇನ ಬಹೂಪಹಸಿತಾಸ್ತಥಾ ।
ವಿಷ್ಣೋಃ ಪ್ರಸಾದಾನ್ಮುಕ್ತಾಶ್ಚ ಕಥಂಚಿದಿವ ಕಷ್ಟತಃ ॥ ೨೨ ॥

---

೧೭. ಆದುದರಿಂದ ಆ ದುರಾತ್ಮನಾದವನು ನನ್ನ ಬಾಹುಗಳನ್ನು ಕತ್ತರಿಸಿರುವನಲ್ಲವೆ! ಎಲೈ ದೇವತೆಗಳಿರಾ! ಯಾರಿಂದ ನಿಮ್ಮ ಸ್ಥಾನಮಾನಗಳು ಈ ರೀತಿ ಅಪಹರಿಸಲ್ಪಟ್ಟಿರುವುವೆಂಬುದನ್ನು ತಿಳಿಸಿರಿ."

೧೮. ದೇವತೆಗಳು ಹೇಳುತ್ತಾರೆ:—"ಹೇ ಸ್ವಾಮಿಯೇ! ಪೂರ್ವದಲ್ಲಿ ನಿನ್ನಿಂದ ವರವನ್ನು ಪಡೆದ ವಜ್ರಾಂಗನ ಮಗನಾದ ತಾರಕಾಸುರನೆಂಬುವನು ನಿನಗೆ ತಿಳಿದವನೇ ಅಲ್ಲವೆ! ಆತನಿಂದಲೇ ಈಗ ನಾವು ಬಹಳವಾಗಿ ಪರಾಭವವನ್ನು ಹೊಂದಿರುವೆವು.

೧೯. ಆತನೇ ಮಹೀಸಾಗರ ತಟದ ಪ್ರದೇಶವನ್ನೂ ಶಾರ್ವಿಕ ತೀರ್ಥವನ್ನೂ ಆಕ್ರಮಿಸಿ ಆ ಪ್ರದೇಶವನ್ನೆಲ್ಲ ಮರುಭೂಮಿಗೆ ಸಮನಾಗಿ ಮಾಡಿರುವನು.

೨೦. ಆತನಿಂದಲೇ ಸಕಲ ದೇವತೆಗಳ ಐಶ್ವರ್ಯಗಳೂ ಸೆಳೆಯಲ್ಪಟ್ಟುವು. ಆತನೇ ಮಹಾಭೂತಸ್ವರೂಪನಾಗಿ ಜಗನ್ನಾಯಕನಾಗಿ ವರ್ತಿಸುತ್ತಿರುವನು.

೨೧. ಚಂದ್ರ ಸೂರ್ಯರನ್ನೂ, ಇತರ ಗ್ರಹಗಳನ್ನೂ, ನಕ್ಷತ್ರಗಳನ್ನೂ, ಇತರ ದೇವ ಪಕ್ಷೀಯಗಳಾದ ವಸ್ತುಗಳೆಲ್ಲವನ್ನೂ ಆತನು ವಿಪರೀತಗಳನ್ನಾಗಿ ಮಾಡಿ ದೈತ್ಯರಿಗೆ ಅನುಕೂಲಗಳಾಗುವಂತೆ ಸ್ಥಾಪಿಸಿರುವನು.

೨೨. ನಾವೂ ಕೂಡ ಆತನಿಂದ ಕಾಪಾಡಲ್ಪಟ್ಟವರಾದರೂ ಬಹುವಾಗಿ ಅಡಿಗಡಿಗೂ ಉಪಹಾಸ್ಯವನ್ನು ಹೊಂದುತ್ತಿರುವೆವು. ಮಹಾವಿಷ್ಣುವಿನ ಸಹಾಯದಿಂದ ಆ ಕಷ್ಟದೆಶೆಯಿಂದ ಹೇಗೆ ಹೇಗೆಯೋ ವಿಮೋಚನೆಯನ್ನು ಹೊಂದಿದೆವು.

ತದ್ವಯಂ ಶರಣಂ ಪ್ರಾಪ್ತಾಃ ಪೀಡಿತಾಃ ಕ್ಷುತ್ತೃಷಾರ್ದಿತಾಃ ।
ಧರ್ಮರಕ್ಷಾಕರಾಶ್ಚೇತಿ ಸಂಚಿಂತ್ಯ ತ್ರಾತುಮರ್ಹಸಿ ॥ ೨೩ ॥
ಇತ್ಯುಕ್ತಃ ಸ್ವಾತ್ಮಭೂರ್ದೇವಃ ಸುರೈರ್ದೈತ್ಯವಿಚೇಷ್ಟಿತಂ ।
ಸುರಾನುವಾಚ ಭಗವಾನತಃ ಸಂಚಿಂತ್ಯ ತತ್ತ್ವತಃ ॥ ೨೪ ॥
ಅವಧ್ಯಸ್ತಾರಕೋ ದೈತ್ಯಃ ಸರ್ವೈರಪಿ ಸುರಾಸುರೈಃ ।
ಯಸ್ಯ ವಧ್ಯಶ್ಚ ನಾದ್ಯಾಪಿ ಸ ಜಾತೋ ಭಗವಾನ್ಪುನಃ ॥ ೨೫ ॥
ಮಯಾ ಚ ವರದಾನೇನ ಛಂದಯಿತ್ವಾ ನಿವಾರಿತಃ ॥ ೨೬ ॥
ತಪಸಾ ಸ ಹಿ ದೀಪ್ತೋಽಭೂತ್ತ್ರೈಲೋಕ್ಯದಹನಾತ್ಮಕಃ ।
ಸ ಚ ವವ್ರೇ ವಧಂ ದೈತ್ಯಃ ಶಿಶುತಃ ಸಪ್ತವಾಸರಾತ್ ॥ ೨೭ ॥
ಸ ಚ ಸಪ್ತದಿನೋ ಬಾಲಃ ಶಂಕರಾದ್ಯೋ ಭವಿಷ್ಯತಿ ।
ತಾರಕಸ್ಯ ಚ ವೀರಸ್ಯ ವಧಕರ್ತಾ ಭವಿಷ್ಯತಿ ॥ ೨೮ ॥
ಸತೀ ನಾಮಾ ತು ಯಾ ದೇವೀ ವಿನಷ್ಟಾ ದಕ್ಷಹೇಳಯಾ ।
ಸಾ ಭವಿಷ್ಯತಿ ಕಲ್ಯಾಣೀ ಹಿಮಾಚಲಶರೀರಜಾ ॥ ೨೯ ॥

---

೨೩. ಆದುದರಿಂದ ದುಃಖಗೊಂಡವರೂ ಹಸಿವು ನೀರಡಿಕೆಗಳಿಂದ ಕೂಡಿದವರೂ ಆಗಿ ನಾವು ನಿನ್ನನ್ನೇ ಶರಣುಹೋಗಿರುವೆವು. ನಾವು ಧರ್ಮರಕ್ಷಾತತ್ಪರರೆಂಬುದನ್ನು ಮನಸ್ಸಿನಲ್ಲಿ ತಂದು ನಮ್ಮನ್ನು ಸಲಹುವವನಾಗು."

೨೪. ಈ ರೀತಿಯಾದ ರಾಕ್ಷಸಚೇಷ್ಟಿತಗಳನ್ನು ಕೇಳಿ ಬ್ರಹ್ಮನು ಬಹಳಕಾಲ ವಸ್ತುಸ್ಥಿತಿಯನ್ನು ಕುರಿತು ಯೋಚಿಸಿದವನಾಗಿ ದೇವತೆಗಳನ್ನು ಕುರಿತು ಹೇಳತೊಡಗಿದನು.

೨೫. "ಎಲೈ ದೇವತೆಗಳೆ! ಈ ತಾರಕಾಸುರನು ಸಕಲ ಸುರಾಸುರರಿಂದಲೂ ನಿಗ್ರಹವನ್ನು ಹೊಂದುವವನಲ್ಲ. ಮತ್ತು ಯಾರಿಂದ ಇವನ ವಧೆಯಾಗಬೇಕಾಗಿರುವುದೊ, ಆತನು ಇನ್ನೂ ಜನ್ಮವನ್ನು ತಾಳಲಿಲ್ಲವು.

೨೬–೨೭. ನನ್ನಿಂದಲೂ ಮೋಸಗೊಂಡವನಾಗಿ ಆ ದೈತ್ಯನು ತಪಸ್ಸಿನಿಂದ ನಿರ್ವೃತನಾದನು. ತನ್ನ ತಪಸ್ಸಿನಿಂದಲೇ ತ್ರಿಲೋಕಗಳನ್ನೂ ದಹಿಸುವ ಸಾಮರ್ಥ್ಯವನ್ನು ಪಡೆದು ಆ ರಾಕ್ಷಸನು ಏಳು ದಿನಗಳ ಮಗುವಿನಿಂದಲ್ಲದೆ ತನಗೆ ಮರಣವಾಗಬಾರದೆಂದು ವರವನ್ನು ಕೇಳಿಕೊಂಡನು.

೨೮. ಆದುದರಿಂದ ಪರಶಿವನಿಂದ ಉತ್ಪನ್ನನಾದ ಪುತ್ರನೊಬ್ಬನೇ ಏಳು ದಿನಗಳ ವಯಸ್ಸಿನಲ್ಲಿ ಈ ವೀರನಾದ ತಾರಕಾಸುರನನ್ನು ನಿಗ್ರಹಿಸಲು ಶಕ್ತನಾಗುವನು.

೨೯. ದಕ್ಷನಿಂದ ಅವಮಾನಿತಳಾಗಿ ಶರೀರತ್ಯಾಗವನ್ನು ಮಾಡಿದ ಸತಿಯೇ ಈಗ ಹಿಮವಂತನಲ್ಲಿ ಅವತಾರವನ್ನು ಪಡೆಯುವವಳಾಗುತ್ತಾಳೆ.

ಶಂಕರಸ್ಯ ಚ ತಸ್ಯಾಶ್ಚ ಯತ್ನಃ ಕಾರ್ಯಃ ಸಮಾಗಮೇ ।
ಅಹಮಪ್ಯಸ್ಯ ಕಾರ್ಯಸ್ಯ ಶೇಷಂ ಕರ್ತಾ ನ ಸಂಶಯಃ ॥ ೩೦ ॥
ಇತ್ಯುಕ್ತಾಸ್ತ್ರಿದಶಾಸ್ತೇನ ಸಾಕ್ಷಾತ್ಕಮಲಯೋನಿನಾ ।
ಜಗ್ಮುರ್ಮೇರುಂ ಪ್ರಣಮ್ಯೇಶಂ ಮರ್ಕಟರೂಪೇಣ ಸಂಯುತಾಃ ॥ ೩೧ ॥
ತತೋ ಗತೇಷು ದೇವೇಷು ಬ್ರಹ್ಮಾ ಲೋಕಪಿತಾಮಹಃ ।
ನಿಶಾಂ ಸಸ್ಮಾರ ಭಗವಾನ್ಸ್ವಾಂ ತನುಂ ಪೂರ್ವಸಂಭವಾಂ ॥ ೩೨ ॥
ತತೋ ಭಗವತೀ ರಾತ್ರಿರುಪತಸ್ಥೇ ಪಿತಾಮಹಂ ।
ತಾಂ ವಿವಿಕ್ತೇ ಸಮಾಲೋಕ್ಯ ತಥೋವಾಚ ವಿಭಾವರೀಂ ॥ ೩೩ ॥
ವಿಭಾವರಿ ಮಹತ್ಕಾರ್ಯಂ ವಿಬುಧಾನಾಮುಪಸ್ಥಿತಂ ।
ತತ್ಕರ್ತವ್ಯಂ ತ್ವಯಾ ದೇವಿ ಶೃಣು ಕಾರ್ಯಸ್ಯ ನಿಶ್ಚಯಂ ॥ ೩೪ ॥
ತಾರಕೋ ನಾಮ ದೈತ್ಯೇಂದ್ರಃ ಸುರಕೇತುರನಿರ್ಜಿತಃ ।
ತಸ್ಯಾಭಾವಾಯ ಭಗವಾನ್ಜನಯಿಷ್ಯತಿ ಯಂ ಶಿವಃ ॥ ೩೫ ॥

---

೩೦. ಆದುದರಿಂದ ನೀವೆಲ್ಲರೂ ಆಕೆಗೂ ಮಹಾದೇವನಿಗೂ ಸಮಾಗಮವುಂಟಾಗುವುದಕ್ಕಾಗಿ ಪ್ರಯತ್ನವನ್ನು ಮಾಡಿರಿ. ನಾನೂ ಸಹ ನಿಸ್ಸಂಶಯವಾಗಿಯೂ ಈ ಬಗ್ಗೆ ಕಾರ್ಯಶೇಷವನ್ನು ಮಾಡುವವನಾಗುತ್ತೇನೆ.''

೩೧. ಈ ರೀತಿಯಾಗಿ ಚತುರ್ಮುಖನಿಂದ ಅಭಯವನ್ನು ಪಡೆದು ದೇವತೆಗಳೆಲ್ಲರೂ ಪುನಃ ಮರ್ಕಟರೂಪಗಳಿಂದ ಕೂಡಿದವರಾಗಿ ಆತನಿಗೆ ನಮಸ್ಕರಿಸಿ ಮೇರು ಪರ್ವತವನ್ನು ಕುರಿತು ತೆರಳಿದರು.

೩೨. ಇಂತು ದೇವತೆಗಳೆಲ್ಲರೂ ಹೊರಡಲು, ಲೋಕಪಿತಾಮಹನಾದ ಬ್ರಹ್ಮನು ತನ್ನ ಶರೀರದಿಂದ ಪೂರ್ವದಲ್ಲಿಯೇ ಉತ್ಪನ್ನಳಾದ ರಾತ್ರಿರೂಪಳಾದ ದುರ್ಗೆಯನ್ನು ಸ್ಮರಿಸಿದನು.

೩೩. ಕೂಡಲೇ ರಾತ್ರಿದೇವಿಯು ಆತನಿಗೆ ಸಮೀಪಸ್ಥಳಾದಳು. ಆಗ ಬ್ರಹ್ಮನು ಆಕೆಯನ್ನು ಏಕಾಂತ ಸ್ಥಳಕ್ಕೆ ಕರೆದುಕೊಂಡು ಹೋಗಿ ಹೇಳತೊಡಗಿದನು.

೩೪. "ಎಲೌ ದೇವಿಯೆ! ಈಗ ದೇವತೆಗಳಿಗೋಸ್ಕರ ಮಹತ್ಕಾರ್ಯವೊಂದು ಉಪಸ್ಥಿತವಾಗಿರುವುದು. ಅದರಲ್ಲಿ ನಿನ್ನಿಂದ ಆಗಬೇಕಾಗಿರುವ ಕರ್ತವ್ಯವು ಸ್ವಲ್ಪವಿರುವುದು. ಅದರ ನಿಶ್ಚಯವನ್ನು ಕೇಳು.

೩೫. ತಾರಕನೆಂಬ ರಾಕ್ಷಸೇಶ್ವರನೊಬ್ಬನು ಅಜೇಯನಾಗಿ ದೇವತೆಗಳಿಗೆ ಧೂಮಕೇತುವಿನಂತೆ ಭಯವನ್ನುಂಟುಮಾಡುತ್ತ ಇರುವನು. ಆತನ ನಾಶಕ್ಕಾಗಿಯೇ ಮಹೇಶ್ವರನು ಯಾರನ್ನು ಸೃಜಿಸುವನೊ, ಆ ಶಿವಕುಮಾರನೇ ತಾರಕಾಸುರನ ಸಂಹಾರವನ್ನು ಮಾಡಲು ಶಕ್ತನಾಗುವನು.

ಸುತಃ ಸ ಭವಿತಾ ತಸ್ಯ ತಾರಕಸ್ಯಾಂತಕಾರಕಃ ।
ಅಹಂ ತ್ವಾದೌ ಯದಾ ಜಾತಸ್ತದಾಪಶ್ಯಂ ಪುರಃಸ್ಥಿತಂ ॥ ೩೬ ॥
ಅರ್ಧನಾರೀಶ್ವರಂ ದೇವಂ ವ್ಯಾಪ್ಯ ವಿಶ್ವಮವಸ್ಥಿತಂ ।
ದೃಷ್ಟ್ವಾ ತಮಬ್ರುವಂ ದೇವಂ ಭಜಸ್ವೇತಿ ಚ ಭಕ್ತಿತಃ ॥ ೩೭ ॥
ತತೋ ನಾರೀ ಪೃಥಾಗ್ಜಾತಾ ಪುರುಷಶ್ಚ ತಥಾ ಪೃಥಕ್ ।
ತಸ್ಯಾಶ್ಚೈವಾಂಶಜಾಃ ಸರ್ವಾಃ ಸ್ತ್ರಿಯಸ್ತ್ರಿಭುವನೇ ಸ್ಮೃತಾಃ ॥ ೩೮ ॥
ಏಕಾದಶ ಚ ರುದ್ರಾಶ್ಚ ಪುರುಷಾಸ್ತಸ್ಯ ಚಾಂಶಜಾಃ ।
ತಾಂ ನಾರೀಮಹಮಾಲೋಕ್ಯ ಪುತ್ರಂ ದಕ್ಷಮಥಾಬ್ರುವಂ ॥ ೩೯ ॥
ಭಜಸ್ವ ಪುತ್ರೀಂ ಜಗತೀಂ ಮಮಾಪಿ ಚ ತವಾಪಿ ಚ ।
ಪುಂದುಃಖನರಕತ್ರಾತ್ರೀ ಪುತ್ರೀ ತೇ ಭಾವಿನೀ ತ್ವಿಯಂ ॥ ೪೦ ॥
ಏವಮುಕ್ತೋ ಮಯಾ ದಕ್ಷಃ ಪುತ್ರೀತ್ವೇ ಪರಿಕಲ್ಪಿತಾಂ ।
ರುದ್ರಾಯ ದತ್ತವಾನ್ಭಕ್ತ್ಯಾ ನಾಮ ದತ್ವಾ ಸತೀತಿ ಯತ್ ॥ ೪೧ ॥
ತತಃ ಕಾಲೇ ಚ ಕಸ್ಮಿಂಶ್ಚಿದವಮೇನೇ ಚ ತಾಂ ಪಿತಾ ।
ಮುಮೂರ್ಷುಃ ಪಾಪಸಂಕಲ್ಪೋ ದುರಾತ್ಮಾ ಕುಲಕಜ್ಜಲಃ ॥ ೪೨ ॥

---

೩೬–೩೭. ಪೂರ್ವದಲ್ಲಿ ನಾನು ಹುಟ್ಟಿದಾಗಲೇ ವಿಶ್ವವನ್ನು ವ್ಯಾಪಿಸಿ ನನ್ನ ಮುಂದಿದ್ದ ಪರಶಿವನ ಅರ್ಧನಾರೀಶ್ವರ ರೂಪವನ್ನು ಕಂಡು ಭಕ್ತಿಯಿಂದ ಕೂಡಿದವನಾಗಿ ಆತನನ್ನು ಭಿನ್ನನಾಗುವಂತೆ ಪ್ರಾರ್ಥಿಸಿದೆನು.

೩೮–೩೯. ಆಗ ಆ ರೂಪವು ಸ್ತ್ರೀ ಮತ್ತು ಪುರುಷ ರೂಪಗಳಿಂದ ಭಿನ್ನವಾಯಿತು. ಆ ಸ್ತ್ರೀರೂಪದ ಅಂಶದಿಂದಲೇ ತ್ರಿಲೋಕಗಳಲ್ಲಿರುವ ಸಕಲ ಸ್ತ್ರೀಯರೂ ಜನಿಸಿರುವರು. ಪುರುಷಾಂಶದಿಂದ ಏಕಾದಶ ರುದ್ರರೂ ತ್ರಿಲೋಕಗಳಲ್ಲಿನ ಪುರುಷರೂ ಉದಿಸಿದರು. ಅರ್ಧನಾರೀಶ್ವರನ ಸ್ತ್ರ್ಯಂಶವನ್ನು ಕಂಡು ನಾನು ಮಗನಾದ ದಕ್ಷನನ್ನು ಕುರಿತು ಇಂತೆಂದನು.

೪೦. "ಎಲೈ ದಕ್ಷನೇ! ಈಕೆಯನ್ನು ನಿನಗೂ ನನಗೂ ಮಗಳಾಗಿ ಭಾವಿಸಿ ಸ್ವೀಕರಿಸುವವನಾಗು. ಈಕೆಯೇ ನಿನಗೆ ಪುನ್ನಾಮ ನರಕದಿಂದ ಮೋಕ್ಷವನ್ನು ಕೊಡುವವಳಾಗಿ ನಿನ್ನ ಪುತ್ರಿಯೆಂದೆನಿಸಿಕೊಳ್ಳುವಳು."

೪೧. ಇಂತು ನನ್ನಿಂದ ಆಜ್ಞಪ್ತನಾಗಿ ದಕ್ಷನು ಆಕೆಯನ್ನು ಪುತ್ರಿಯೆಂದು ಪರಿಗ್ರಹಿಸಿ ಸತಿಯೆಂದು ನಾಮಕರಣವನ್ನು ಮಾಡಿ ಆಕೆಯನ್ನು ಭಕ್ತಿಪುರಸ್ಸರವಾಗಿ ರುದ್ರನಿಗೆ ಮದುವೆ ಮಾಡಿಕೊಟ್ಟನು.

೪೨. ಆದರೆ ಆತನೇ ಕಾಲಾಂತರದಲ್ಲಿ ಪಾಪಸಂಕಲ್ಪನೂ, ದುರಾತ್ಮನೂ, ಕುಲಕಳಂಕನೂ ಆಗಿ ಮೃತ್ಯೂನ್ಮುಖನಾದವನಂತೆ ಆ ಸತೀದೇವಿಯನ್ನೇ ಅವಮಾನಗೊಳಿಸಿದನು.

ಯೇ ರುದ್ರಂ ನೈವ ಮನ್ಯಂತೇ ತೇ ಸ್ಫುಟಂ ಕುಲಕಜ್ಜಲಾಃ ।
ಪಿಶಾಚಾಸ್ತೇ ದುರಾತ್ಮಾನೋ ಭವಂತಿ ಬ್ರಹ್ಮರಾಕ್ಷಸಾಃ ॥ ೪೩ ॥
ಅವಮಾನೇನ ತಸ್ಯಾಪಿ ಯಥಾ ದೇವೀ ಜಹೌ ತನುಂ ।
ಯಥಾ ಯಜ್ಞಃ ಸ ಚ ಧ್ವಸ್ತೋ ಭವೇನ ವಿದಿತಂ ಹಿ ತೇ ॥ ೪೪ ॥
ಅಧುನಾ ಹಿಮಶೈಲಸ್ಯ ಭವಿತ್ರೀ ದುಹಿತಾ ಚ ಸಾ ।
ಮಹೇಶ್ವರಂ ಪತಿಂ ಸಾ ಚ ಪುನಃ ಪ್ರಾಪ್ಸ್ಯತಿ ನಿಶ್ಚಿತಂ ॥ ೪೫ ॥
ತದಿದಂ ಚ ತ್ವಯಾ ಕಾರ್ಯಂ ಮೇನಾಗರ್ಭೇ ಪ್ರವಿಶ್ಯ ಚ ।
ತಸ್ಯಾಶ್ಛವಿಂ ಕುರು ಕೃಷ್ಣಾಂ ಯಥಾ ಕಾಲೀ ಭವೇತ್ತು ಸಾ ॥ ೪೬ ॥
ಯದಾ ರುದ್ರೋಪಹಸಿತಾ ತಪಸ್ತಪ್ಸ್ಯತಿ ಸಾ ಮಹತ್ ।
ಸಮಾಪ್ತನಿಯಮಾ ದೇವೀ ಯದಾ ಚೋಗ್ರಾ ಭವಿಷ್ಯತಿ ॥ ೪೭ ॥
ಸ್ವಯಮೇವ ಯದಾ ರೂಪಂ ಸುಗೌರಂ ಪ್ರತಿಪತ್ಸ್ಯತೇ ।
ವಿರಹೇಣ ಹರಶ್ಚಾಸ್ಯಾ ಮತ್ವಾ ಶೂನ್ಯಂ ಜಗತ್ತ್ರಯಂ ॥ ೪೮ ॥
ತಸ್ಯೈವ ಹಿಮಶೈಲಸ್ಯ ಕಂದರೇ ಸಿದ್ಧಸೇವಿತೇ ।
ಪ್ರತೀಕ್ಷಮಾಣಸ್ತಾಂ ದೇವೀಮುಗ್ರಂ ಸಂತಪ್ಸ್ಯತೇ ತಪಃ ॥ ೪೯ ॥

---

೪೩–೪೪. ಯಾರು ಪರಮೇಶ್ವರನನ್ನು ಪೂಜಿಸುವುದಿಲ್ಲವೋ ಅವರು ನಿಜವಾಗಿಯೂ ಕುಲಕಳಂಕರೇ ಸರಿ. ಅಂತಹ ದುರಾತ್ಮರೇ ಪಿಶಾಚಿಗಳೂ, ಬ್ರಹ್ಮರಾಕ್ಷಸರೂ ಆಗಿ ಬಾಳುವರು. ಈ ಅವಮಾನದಿಂದ ಸತಿಯು ಹೇಗೆ ಶರೀರವನ್ನು ತ್ಯಜಿಸಿದಳೆಂಬುದನ್ನೂ ರುದ್ರನಿಂದ ಆ ಮಹಾಯಜ್ಞವು ಹೇಗೆ ಭ್ರಷ್ಟವಾಯಿತೆಂಬುದನ್ನೂ ನೀನೇ ಬಲ್ಲೆ.

೪೫–೪೬. ಈಗ ಆ ಸತಿಯೇ ಹಿಮವಂತನ ಪುತ್ರಿಯಾಗಿ ಜನಿಸುವವಳಾಗಿರುವಳು. ಮತ್ತೆ ಆಕೆಯು ಪರಮೇಶ್ವರನನ್ನೇ ಪತಿಯನ್ನಾಗಿ ಪಡೆಯುವಳೆಂಬುದು ಖಂಡಿತವು. ಈಗ ನೀನು ಇಷ್ಟು ಕೆಲಸವನ್ನು ಮಾಡಬೇಕು. ನೀನು ಹಿಮವಂತನ ಪತ್ನಿಯಾದ ಮೇನಾದೇವಿಯ ಗರ್ಭವನ್ನು ಪ್ರವೇಶಿಸಿ ಒಳಗಿನ ಶಿಶುವು ಕಾಳಿಯಾಗುವಂತೆ ಅದರ ಬಣ್ಣವನ್ನು ಕಪ್ಪಾಗಿ ಮಾಡು.

೪೭–೪೯. ಈ ವರ್ಣವಿಷಯಕವಾಗಿಯೇ ರುದ್ರನು ಆಕೆಯನ್ನು ಯಾವಾಗ ಅಪಹಾಸ್ಯವನ್ನು ಮಾಡುವನೊ, ತನ್ನ ನಿಯಮವನ್ನು ಮುಗಿಸಿ ಯಾವಾಗ ದೇವಿಯು ಉಗ್ರಳಾಗುತ್ತಾಳೆಯೊ, ಯಾವಾಗ ಆಕೆಯೇ ತನ್ನ ಪೂರ್ವದ ಗೌರರೂಪವನ್ನು ಹೊಂದುವಳೊ, ಆಗ ಮಹಾದೇವನೂ ಕೂಡ ಆಕೆಯ ವಿರಹದಿಂದ ತ್ರಿಲೋಕವನ್ನೇ ಶೂನ್ಯವನ್ನಾಗಿ ಭಾವಿಸಿ, ಸಿದ್ಧರಿಂದ ಸೇವಿತವಾದ ಆ ಹಿಮವತ್ಪರ್ವತದ ತಪ್ಪಲಿನಲ್ಲಿಯೇ ಆಕೆಯ ಆಗಮನವನ್ನೇ ನಿರೀಕ್ಷಿಸುತ್ತ ಉಗ್ರವಾದ ತಪಸ್ಸನ್ನು ಮಾಡುವನು.

ತಯೋಃ ಸುತಪ್ತತಪಸೋರ್ಭವಿತಾ ಯೋ ಮಹಾನ್ಸುತಃ ।
ಭವಿಷ್ಯತಿ ಸ ದೈತ್ಯಸ್ಯ ತಾರಕಸ್ಯ ನಿವಾರಕಃ ॥ ೫೦ ॥
ತಪಸೋ ಹಿ ವಿನಾ ನಾಸ್ತಿ ಸಿದ್ಧಿಃ ಕುತ್ರಾಪಿ ಶೋಭನೇ ।
ಸರ್ವಾಸಾಂ ಕರ್ಮಸಿದ್ಧೀನಾಂ ಮೂಲಂ ಹಿ ತಪ ಉಚ್ಯತೇ ॥ ೫೧ ॥
ತ್ವಯಾಪಿ ದಾನವಾ ದೇವಿ ದೇಹನಿರ್ಗತಯಾ ತದಾ ।
ಚಂಡಮುಂಡಪುರೋಗಾಶ್ಚ ಹಂತವ್ಯಾ ಲೋಕದುರ್ಜಯಾಃ ॥ ೫೨ ॥
ಯಸ್ಮಾಚ್ಚಂಡಂ ಚ ಮುಂಡಂ ಚ ತ್ವಂ ದೇವಿ ನಿಹನಿಷ್ಯಸಿ ।
ಚಾಮುಂಡೇತಿ ತತೋ ಲೋಕೇ ಖ್ಯಾತಾ ದೇವಿ ಭವಿಷ್ಯಸಿ ॥ ೫೩ ॥
ತತಸ್ತ್ವಾಂ ವರದೇ ದೇವಿ ಲೋಕಃ ಸಂಪೂಜಯಿಷ್ಯತಿ ।
ಭೇದೈರ್ಬಹುವಿಧಾಕಾರೈಃ ಸರ್ವಗಾಂ ಕಾಮಸಾಧನೀಂ ॥ ೫೪ ॥
ಓಂಕಾರವಕ್ತ್ರಾಂ ಗಾಯತ್ರೀಂ ತ್ವಾಮರ್ಚಂತಿ ದ್ವಿಜೋತ್ತಮಾಃ ।
ಊರ್ಜಿತಾಂ ಬಲದಾಂ ವಾಪಿ ರಾಜಾನಃ ಸುಮಹಾಬಲಾಃ ॥ ೫೫ ॥

---

೫೦. ಈ ರೀತಿಯಾಗಿ ಉಗ್ರವಾದ ತಪಸ್ಸುಗಳನ್ನು ಮಾಡಿದ ಅವರಿಬ್ಬರಿಂದಲೂ ಜನಿಸುವ ಮಗನೇ ಮಹಾತ್ಮನಾಗಿ ಈ ತಾರಕಾಸುರನ ಉಪಟಳವನ್ನು ನಿವಾರಿಸುವವನಾಗುವನು.

೫೧. ಎಲ್ಲಿಯೂ ಶುಭಕಾರ್ಯಗಳ ಸಿದ್ಧಿಯು ತಪಸ್ಸಿನಿಂದಲ್ಲದೆ ಉಂಟಾಗುವುದಿಲ್ಲವಷ್ಟೆ. ಸಕಲ ವಿಧಗಳಾದ ಕರ್ಮಸಿದ್ಧಿಗಳಿಗೂ ತಪಸ್ಸೇ ಮೂಲವಾಗಿರುವುದು.

೫೨. ಬಳಿಕ ಮೇನಾದೇವಿಯ ದೇಹದಿಂದ ಹೊರಟು ನೀನು ಇತರರಿಗೆ ಜಯಿಸಲಸಾಧ್ಯರಾದ ಚಂಡ, ಮುಂಡರೇ ಮೊದಲಾದ ಅನೇಕ ರಾಕ್ಷಸರನ್ನು ಕೊಲ್ಲಬೇಕು.

೫೩. ಇಂತು ನೀನು ಚಂಡ ಮತ್ತು ಮುಂಡರೆಂಬ ರಾಕ್ಷಸರನ್ನು ಕೊಲ್ಲುವುದರಿಂದ ನಿನಗೆ ಚಾಮುಂಡಿಯೆಂಬ ಹೆಸರು ಲೋಕದಲ್ಲಿ ಪ್ರಖ್ಯಾತವಾಗಿರುವುದು.

೫೪. ಎಲೌ ವರಪ್ರದಳಾದ ದೇವಿಯೆ! ಬಳಿಕ ನಾನಾ ವಿಧಗಳಾದ ರೂಪಗಳಿಂದ ಕೂಡಿದ ನಿನ್ನನ್ನು ಬಹು ವಿಧ ಪೂಜೆಗಳಿಂದ ಕಾಮದಾಯಕಳೆಂಬುದಾಗಿ ಜನರು ಪೂಜಿಸುವರು.

೫೫. ಬ್ರಾಹ್ಮಣರು ಓಂಕಾರ ಮುಖಳೆಂದೂ ಗಾಯತ್ರಿಯೆಂದೂ ತಿಳಿದು ನಿನ್ನನ್ನು ಅರ್ಚಿಸುವರು. ಕ್ಷತ್ರಿಯರು ಐಶ್ವರ್ಯಪ್ರದಳೆಂದೂ ಬಲದಾಯಕಳೆಂದೂ ನಿನ್ನನ್ನು ಪೂಜಿಸುವರು.

ವೈಶ್ಯಾಶ್ಚ ಭೂತಿಮಿತ್ಯೇವ ಶಿವಾಂ ಶೂದ್ರಾಸ್ತಥಾ ಶುಭೇ ।
ಕ್ಷಾಂತಿರ್ಮುನೀನಾಮಕ್ಷೋಭ್ಯಾ ದಯಾ ನಿಯಮಿನಾಮಪಿ ॥ ೫೬ ॥
ತ್ವಂ ಮಹೋಪಾಯಸಂದೋಹಾ ನೀತಿರ್ನಯವಿಸರ್ಪಿಣಾಂ ।
ಪರಿಸ್ಥಿತಿಸ್ತ್ವಮರ್ಥಾನಾಂ ತ್ವಮಹೋ ಪ್ರಾಣಿಶಾ ಮತಾ ॥ ೫೭ ॥
ತ್ವಂ ಯುಕ್ತಿಃ ಸರ್ವಭೂತಾನಾಂ ತ್ವಂ ಗತಿಃ ಸರ್ವದೇಹಿನಾಂ ।
ರತಿಸ್ತ್ವಂ ರತಿಚಿತ್ತಾನಾಂ ಪ್ರೀತಿಸ್ತ್ವಂ ಹೃದ್ಯದರ್ಶಿನಾಂ ॥ ೫೮ ॥
ತ್ವಂ ಕಾಂತಿಃ ಶುಭರೂಪಾಣಾಂ ತ್ವಂ ಶಾಂತಿಃ ಶುಭಕರ್ಮಿಣಾಂ ।
ತ್ವಂ ಭ್ರಾಂತಿರ್ಮೂಢಚಿತ್ತಾನಾಂ ತ್ವಂ ಫಲಂ ಕ್ರತುಯಾಜಿನಾಂ ॥ ೫೯ ॥
ಜಲಧೀನಾಂ ಮಹಾವೇಲಾ ತ್ವಂ ಚ ಲೀಲಾವಿಲಾಸಿನಾಂ ।
ಸಂಭೂತಿಸ್ತ್ವಂ ಪದಾರ್ಥಾನಾಂ ಸ್ಥಿತಿಸ್ತ್ವಂ ಲೋಕಪಾಲಿನೀ ॥ ೬೦ ॥
ತ್ವಂ ಕಾಳರಾತ್ರಿರ್ನಿಶ್ಶೇಷಭುವನಾವಳಿನಾಶಿನೀ ।
ಪ್ರಿಯಕಂಠಗ್ರಹಾನಂದದಾಯಿನೀ ತ್ವಂ ವಿಭಾವರೀ ॥ ೬೦ ॥
ಪ್ರಸೀದ ಪ್ರಣತಾನಸ್ಮಾನ್ಸೌಮ್ಯದೃಷ್ಟ್ಯಾ ವಿಲೋಕಯ ॥ ೬೨ ॥

---

೫೬. ವೈಶ್ಯರು ಸಂಪತ್ಪ್ರದಾತ್ರಿಯೆಂದೂ ಶೂದ್ರರು ಶುಭಾಂಗಿಯಾದ ನಿನ್ನನ್ನು ಮಂಗಳರೂಪಳೆಂದೂ ಪೂಜಿಸುವರು. ನೀನೇ ಮುನಿಗಳಿಗೆ ಅಪಾರ ವಾದ ಕ್ಷಮೆಯಾಗಿಯೂ, ವ್ರತಿಗಳಿಗೆ ದಯೆಯಾಗಿಯೂ ಇರುವೆ.

೫೭. ನೀನೇ ಸಕಲೋಪಾಯಗಳಿಗೂ ನಿಧಿಯಾಗಿರುವೆ. ನಯ ವಿಶಾರದರಿಗೆ ನೀನೇ ನೀತಿಸ್ವರೂಪಿಣಿಯು. ಸಕಲೈಶ್ವರ್ಯಗಳಿಗೂ ನೀನೇ ನಿಧಾನಸ್ಥಾನವಾಗಿರುವೆ. ಎಲ್ಲರಲ್ಲಿಯೂ ನೀನೇ ಪ್ರಾಣಶಕ್ತಿಯಾಗಿರುವೆ.

೫೮–೬೦. ಸರ್ವಪ್ರಾಣಿಗಳಲ್ಲಿಯೂ ನೀನೇ ಬುದ್ಧಿಯಾಗಿರುವೆ. ಸಕಲ ಜೀವರಿಗೂ ನೀನೇ ಗತಿದಾಯಕಳು. ಭೋಗಿಗಳಿಗೆ ನೀನೇ ರತಿಯಾಗಿರುವೆ. ಸುಂದರ ಸ್ತ್ರೀಪುರುಷರಲ್ಲಿ ನೀನೇ ಪ್ರೀತಿಯಾಗಿರುವೆ. ಮನೋಹರ ವ್ಯಕ್ತಿಗಳಲ್ಲಿ ನೀನೇ ಕಾಂತಿಯು. ಸರ್ವಶುಭಕರ್ಮಗಳಿಗೂ ನೀನೇ ಶಾಂತಿರೂಪಳು. ಮೋಹಗೊಂಡವರಲ್ಲಿ ನೀನೇ ಭ್ರಾಂತಿಯು. ಯಜ್ಞಯಾಗಗಳನ್ನು ಮಾಡುವ ವರಿಗೆ ನೀನೇ ಫಲರೂಪಳು. ನೀನು ಸಮುದ್ರಗಳನ್ನೆಲ್ಲ ತಡೆಗಟ್ಟುವ ತೀರ ಪ್ರದೇಶವು. ವಿಲಾಸಿ ಪುರುಷರ ಲೀಲೆಯೂ ನೀನೇ. ಸಕಲ ಪದಾರ್ಥಗಳಿಗೂ ಉತ್ಪತ್ತಿಯೂ ನೀನೇ. ಸ್ಥಿತಿರೂಪಳಾಗಿ ಲೋಕಗಳನ್ನೆಲ್ಲ ಪಾಲಿಸುವೆ.

೬೧–೬೨. ನೀನೇ ಕಾಳರಾತ್ರಿಯಾಗಿ ಸಮಸ್ತಲೋಕಗಳನ್ನೂ ನಾಶ ಮಾಡುವವಳು. ಪ್ರಿಯನಿಗೆ ಕಂಠಾಲಿಂಗನದಿಂದ ಆನಂದವನ್ನುಂಟುಮಾಡುವ ವಿಭಾವರಿಯೂ ನೀನೇ. ನಿನಗೆ ನಮಸ್ಕರಿಸುತ್ತಿರುವ ನಮ್ಮಲ್ಲಿ ಪ್ರಸನ್ನಳಾಗಿ ಸೌಮ್ಯದೃಷ್ಟಿಯಿಂದ ನಮ್ಮನ್ನು ನೋಡುವವಳಾಗು.

ಇತಿ ಸ್ತುವಂತೋ ಯೇ ದೇವಿ ಪೂಜಯಿಷ್ಯಂತಿ ತ್ವಾಂ ಶುಭೇ ।
ತೇ ಸರ್ವಕಾಮಾನಾಪ್ಸ್ಯಂತಿ ನಿಯತಾ ನಾತ್ರ ಸಂಶಯಃ ॥ ೬೩ ॥
ಇತ್ಯುಕ್ತಾ ತು ನಿಶಾದೇವೀ ತಥೇತ್ಯುಕ್ತ್ವಾ ಕೃತಾಂಜಲಿಃ ।
ಜಗಾಮ ತ್ವರಿತಾ ಪೂರ್ವಂ ಗೃಹಂ ಹಿಮಗಿರೇರ್ಮಹತ್ ॥ ೬೪ ॥
ತತ್ರಾಸೀನಾಂ ಮಹಾಹರ್ಮ್ಯೇ ರತ್ನಭಿತ್ತಿಸಮಾಶ್ರಯೇ ।
ದದರ್ಶ ಮೇನಾಮಾಪಾಂಡುಚ್ಛವಿವಕ್ತ್ರಸರೋರುಹಾಂ ॥ ೬೫ ॥
ಕಿಂಚಿಚ್ಛ್ಯಾಮಮುಖೋದಗ್ರಸ್ತನಭಾಗಾವನಾಮಿತಾಂ ।
ಮಹೌಷಧಿಗಣಾಬದ್ಧಮಂತ್ರರಾಜನಿಷೇವಿತಾಂ ॥ ೬೬ ॥
ತತಃ ಕಿಂಚಿತ್ಪ್ರಮಿಲಿತೇ ಮೇನಾನೇತ್ರಾಂಬುಜದ್ವಯೇ ।
ಆವಿವೇಶ ಮುಖಂ ರಾತ್ರಿರ್ಬ್ರಹ್ಮಣೋ ವಚನಾತ್ತದಾ ॥ ೬೭ ॥
ಜನ್ಮದಾ ಯಾ ಜಗನ್ಮಾತುಃ ಕ್ರಮೇಣ ಜಠರಾಂತರಂ ।
ಅರಂಜಯಚ್ಛವಿಂ ದೇವ್ಯಾ ಮುಖಂಮಾತುರ್ವಿಭಾವರೀ ॥ ೬೮ ॥

---

೬೩. ಎಲೌ ದೇವಿಯೆ! ಈ ವಿಧವಾಗಿ ನಿನ್ನನ್ನು ಸ್ತೋತ್ರಮಾಡುತ್ತ ಯಾರು ಪೂಜಿಸುವರೋ, ನಿಯಮದಿಂದಿರುವ ಅಂತಹರಿಗೆ ಖಂಡಿತವಾಗಿಯೂ ಸಕಲ ಇಷ್ಟಾರ್ಥಗಳೂ ನೆರವೇರುವುವು. ಇದರಲ್ಲಿ ಸಂದೇಹವಿಲ್ಲ."

೬೪. ಈ ರೀತಿಯಾಗಿ ಬ್ರಹ್ಮನು ಹೇಳಲು ರಾತ್ರಿದೇವಿಯು ಅವನಿಗೆ ಕೈಮುಗಿದು ಹಾಗೆಯೇ ಮಾಡಲು ಅಂಗೀಕರಿಸಿ ತಕ್ಷಣದಲ್ಲಿಯೇ ಹಿಮವದ್ ರಾಜನ ಉತ್ತಮವಾದ ಅರಮನೆಯನ್ನು ಕುರಿತು ಹೊರಟಳು.

೬೫. ಅಲ್ಲಿ ರತ್ನ ಸಮೂಹಗಳಿಂದಲಂಕೃತವಾದ ಉತ್ತಮಾಸನದಲ್ಲಿ ಕುಳಿತಿರುವವಳೂ, ಶುಭ್ರವರ್ಣದಿಂದ ಕೂಡಿದ ಮುಖಕಮಲವುಳ್ಳವಳೂ ಆದ ಮೇನಾದೇವಿಯನ್ನು ಕಂಡಳು.

೬೬. ಆ ಮೇನಾದೇವಿಯು ಸ್ವಲ್ಪ ಕಪ್ಪಾದ ಚೂಚುಕಗಳಿಂದೊಪ್ಪುವ ಸ್ತನಗಳಿಂದ ಬಾಗಿದ ನಡುವುಳ್ಳವಳೂ, ಮಹೌಷಧಿ ಸಮೂಹಗಳಿಂದೊಪ್ಪುವ ಮಂತ್ರ ಶ್ರೇಷ್ಠಗಳಿಂದ ಪರಿವಾರಿತಳೂ ಆಗಿದ್ದಳು.

೬೭. ಆಗ ಆ ಮೇನೆಯು ಸ್ವಲ್ಪಕಾಲ ತನ್ನ ನೇತ್ರಗಳನ್ನು ಮುಚ್ಚಿಕೊಂಡಿರಲು ಬ್ರಹ್ಮವಚನಾನುಸಾರವಾಗಿ ರಾತ್ರಿದೇವಿಯು ಆಕೆಯ ಮುಖವನ್ನು ಆವರಿಸಿದಳು.

೬೮. ಬಳಿಕ ಕ್ರಮವಾಗಿ ಜಗನ್ಮಾತೆಯ ಜನ್ಮದಾಯಿನಿಯಾದ ಆಕೆಯ ಜಠರಪ್ರದೇಶವನ್ನು ಹೊಂದಿ ಗರ್ಭದಲ್ಲಿದ್ದ ಪಾರ್ವತಿಯ ಶರೀರವನ್ನು ಶ್ಯಾಮಲ ವರ್ಣದ್ದನ್ನಾಗಿ ಮಾಡಿದಳು.

ತತೋ ಜಗನ್ಮಂಗಳದಾ ಮೇನಾ ಹಿಮಗಿರೇಃ ಪ್ರಿಯಾ ।
ಬ್ರಾಹ್ಮೇ ಮುಹೂರ್ತೇ ಸುಭಗೇ ಪ್ರಾಸೂಯತ ಶುಭಾನನಾಂ ॥ ೬೯ ॥
ತಸ್ಯಾಂ ತು ಜಾಯಮಾನಾಯಾಂ ಜಂತವಃ ಸ್ಥಾಣುಜಂಗಮಾಃ ।
ಅಭವನ್ಸುಖಿನಃ ಸರ್ವೇ ಸರ್ವಲೋಕನಿವಾಸಿನಃ ॥ ೭೦ ॥
ಅಭವತ್ಕ್ರೂರಸತ್ತ್ವಾನಾಂ ಚೇತಃ ಶಾಂತಂ ಚ ದೇಹಿನಾಂ ।
ಜ್ಯೋತಿಷಾಮಪಿ ತೇಜಸ್ತ್ವಮಭವತ್ಸುತರಾಂ ತದಾ ॥ ೭೧ ॥
ವನಾಶ್ರಿತಾಶ್ಚೌಷಧಯಃ ಸ್ವಾದುವಂತಿ ಫಲಾನಿ ಚ ।
ಗಂಧವಂತಿ ಚ ಮಾಲ್ಯಾನಿ ವಿಮಲಂ ಚ ನಭೋಽಭವತ್ ॥ ೭೨ ॥
ಮಾರುತಶ್ಚ ಸುಖಸ್ಪರ್ಶೋ ದಿಶಶ್ಚ ಸುಮನೋಹರಾಃ ।
ವಿಸ್ಮೃತಾನಿ ಚ ಶಾಸ್ತ್ರಾಣಿ ಪ್ರಾದುರ್ಭಾವಂ ಪ್ರಪೇದಿರೇ ॥ ೭೩ ॥
ಪ್ರಭಾವಸ್ತೀರ್ಥಮುಖ್ಯಾನಾಂ ತದಾ ಪುಣ್ಯತಮೋಽಭವತ್ ।
ಸತ್ಯೇ ಧರ್ಮೇ ಚಾಧ್ಯಯನೇ ಯಜ್ಞೇ ದಾನೇ ತಪಸ್ಯಪಿ ॥ ೭೪ ॥
ಸರ್ವೇಷಾಮಭವಚ್ಛ್ರದ್ಧಾ ಜನ್ಮಕಾಲೇ ಗುಹಾರಣೇಃ ।
ಅಂತರಿಕ್ಷೇಽಮರಾಶ್ಚಾಪಿ ಪ್ರಹರ್ಷೋತ್ಫುಲ್ಲಲೋಚನಾಃ ॥ ೭೫ ॥

---

೬೯. ಬಳಿಕ ಹಿಮವಂತನ ಪ್ರಿಯ ಪತ್ನಿಯೂ ಜಗನ್ಮಂಗಳದಾಯಕಿಯೂ ಆದ ಮೇನಾದೇವಿಯು ಒಂದಾನೊಂದು ದಿವಸ ಶುಭವಾದ ಬ್ರಾಹ್ಮೀ ಮುಹೂರ್ತದಲ್ಲಿ ಸುಂದರ ಮುಖಿಯಾದ ಒಂದು ಸ್ತ್ರೀ ಶಿಶುವನ್ನು ಪ್ರಸವಿಸಿದಳು.

೭೦–೭೧. ಆಕೆಯು ಜನಿಸುತ್ತಿದ್ದಂತೆಯೇ ಲೋಕದಲ್ಲಿನ ಸಕಲ ಸ್ಥಾವರ ಜಂಗಮಗಳೂ ಸುಖವನ್ನು ಹೊಂದಿದುವು. ಸಕಲ ಲೋಕಗಳ ನಿವಾಸಿಗಳೂ ಸಂತೋಷಗೊಂಡರು. ಸ್ವಭಾವದಿಂದಲೇ ಕ್ರೂರಗಳಾಗಿದ್ದ ಪ್ರಾಣಿಗಳಿಗೂ ಕೂಡ ಆ ಸಮಯದಲ್ಲಿ ಶಾಂತಮನಸ್ಸುಂಟಾಯಿತು. ಆಕಾಶದಲ್ಲಿ ಸಕಲ ಗ್ರಹನಕ್ಷತ್ರಗಳೂ ಹೆಚ್ಚು ತೇಜಸ್ಸಿನಿಂದ ಬೆಳಗಿದುವು.

೭೨. ವನಗಳಲ್ಲಿ ವೃಕ್ಷಗಳು ರುಚಿಕರಗಳಾದ ಫಲಗಳನ್ನೂ ಸುಗಂಧ ಯುಕ್ತಗಳಾದ ಪುಷ್ಪಗಳನ್ನೂ ಕೊಟ್ಟವು. ಆಕಾಶವು ನಿರ್ಮಲವಾಯಿತು.

೭೩. ಶರೀರಕ್ಕೆ ಸುಖಕರವಾದ ಮಂದಮಾರುತವು ಬೀಸತೊಡಗಿತು. ಅಷ್ಟದಿಕ್ಕುಗಳೂ ಪ್ರಸನ್ನಗಳಾದುವು. ಕಾಲಾಂತರದಿಂದ ಅಂತರ್ಧಾನವನ್ನು ಹೊಂದಿದ್ದ ಶಾಸ್ತ್ರಗಳೆಲ್ಲವೂ ಅಧ್ಯೇತೃಗಳ ಮನಸ್ಸುಗಳಲ್ಲಿ ಬೆಳಗಲಾರಂಭಿಸಿದುವು.

೭೪–೭೫. ಶ್ರೇಷ್ಠಗಳಾದ ತೀರ್ಥಕ್ಷೇತ್ರಗಳಿಗೆ ಆಗ ವಿಶೇಷವಾದ ಪುಣ್ಯ ವೊದಗಿತು. ಗುಹನಿಗೆ ಮಾತೃವಾಗಬೇಕಾದ ಪಾರ್ವತಿಯ ಜನ್ಮಕಾಲದಲ್ಲಿ ಸಕಲ ಆಸ್ತಿಕಜನರಿಗೂ ಸತ್ಯ, ಧರ್ಮ, ಅಧ್ಯಯನ, ಯಜ್ಞ, ದಾನ, ತಪಸ್ಸು ಮುಂತಾದುವುಗಳಲ್ಲಿ ವಿಶೇಷ ಶ್ರದ್ಧೆಯುಂಟಾಯಿತು.

ಹರಿಬ್ರಹ್ಮಮಹೇಂದ್ರಾರ್ಕವಾಯುವಹ್ನಿ ಪುರೋಗಮಾಃ ।
ಪುಷ್ಪವೃಷ್ಟಿಂ ಪ್ರಮುಮುಚುಸ್ತಸ್ಮಿನ್ಮೇನಾಗೃಹೇ ಶುಭೇ ॥ ೭೬ ॥
ಮೇರುಪ್ರಭೃತಯಶ್ಚಾಪಿ ಮೂರ್ತಿಮಂತೋ ಮಹಾನಗಾಃ ।
ತಸ್ಮಿನ್ಮಹೋತ್ಸವೇ ಪ್ರಾಪ್ತಾ ನೀರಕಾಂಸ್ಯೋಪಶೋಭಿತಾಃ ॥ ೭೭ ॥
ಸಾಗರಾಃ ಸರಿತಶ್ಚೈವ ಸಮಾಜಗ್ಮುಶ್ಚ ಸರ್ವಶಃ ॥ ೭೮ ॥
ಹಿಮಶೈಲೋಽಭವಲ್ಲೋಕೇ ತದಾ ಸರ್ವೈಶ್ಚರಾಚರೈಃ ।
ಸೇವ್ಯಶ್ಚಾಪ್ಯಭಿಗಮ್ಯಶ್ಚ ಪೂಜನೀಯಶ್ಚ ಭಾರತ ॥ ೭೯ ॥
ಅನುಭೂಯೋತ್ಸವಂ ತೇ ಚ ಜಗ್ಮುಃ ಸ್ವಾನಾಲಯಾಂಸ್ತದಾ ॥ ೮೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಕುಮಾರೇಶ ಮಾಹಾತ್ಮ್ಯೇ — ಪಾರ್ವತೀ ಜನ್ಮವರ್ಣನಂ"
ನಾಮ ದ್ವಾವಿಂಶೋಽಧ್ಯಾಯಃ

---

೭೬. ಸ್ವರ್ಗಲೋಕದಲ್ಲಿ ವಿಷ್ಣು, ಬ್ರಹ್ಮ, ಇಂದ್ರ, ಸೂರ್ಯ, ವಾಯು, ಅಗ್ನಿ ಮೊದಲಾದ ದೇವತೆಗಳೆಲ್ಲರೂ ಹರ್ಷದಿಂದ ಅರಳಿದ ಕಣ್ಣುಗಳುಳ್ಳವರಾಗಿ ಆ ಮೇನಾದೇವಿಯ ಗೃಹಪ್ರದೇಶದಲ್ಲಿ ಹೂಮಳೆಗರೆದರು.

೭೭. ಆ ಮಹೋತ್ಸವ ಕಾಲದಲ್ಲಿ ಮೇರುವೇ ಮೊದಲಾದ ಪರ್ವತರಾಜರೆಲ್ಲರೂ ಕೈಗಳಲ್ಲಿ ನೀರಾಜನದಾರತಿಗಳನ್ನು ಹಿಡಿದವರಾಗಿ ಆ ಅರಮನೆಯಲ್ಲಿ ಪ್ರಾಪ್ತರಾದರು.

೭೮–೭೯. ಸಕಲ ಸಮುದ್ರಗಳ ಮತ್ತು ನದಿಗಳ ಅಭಿಮಾನಿದೇವತೆಯರೂ ಅಲ್ಲಿ ಸನ್ನಿಹಿತರಾದರು. ನಾನಾ ದಿಕ್ಕುಗಳಿಂದ ಪ್ರಾಪ್ತರಾದ ಚರಾಚರ ಭೂತಗಳಿಂದ ಸೇವೆಗೊಳ್ಳುವವನೂ, ಪ್ರಾಪ್ಯನೂ, ಪೂಜೆಯನ್ನು ಹೊಂದಿದವನೂ ಆಗಿ ಅಗ ಹಿಮವಂತನು ಮೆರೆಯುತ್ತಿದ್ದನು.

೮೦. ಬಳಿಕ ಜನ್ಮೋತ್ಸವವನ್ನು ಎಲ್ಲರೂ ನೋಡಿ ಆನಂದಪಟ್ಟು ತಮ್ಮ ತಮ್ಮ ನಿವಾಸಗಳಿಗೆ ಹಿಂದಿರುಗಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಕುಮಾರೇಶ ಮಹಾತ್ಮ್ಯ — ಪಾರ್ವತೀ ಜನ್ಮವರ್ಣನ"ವೆಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋವಿಂಶೋಽಧ್ಯಾಯಃ

### ಕುಮಾರೀಶ ಮಾಹಾತ್ಮ್ಯೇ ಹಿಮವದಾಖ್ಯಾನಕಂ

ನಾರದ ಉವಾಚ:—

**ತತಶ್ಚ ಶೈಲಜಾ ದೇವೀ ಚಿಕ್ರೀಡ ಸುಭಗಾ ತದಾ ।**
**ದೇವಗಂಧರ್ವಕನ್ಯಾಭಿರ್ನಗಕಿನ್ನರ ಸಂಭವಾಃ ।**
**ಮುನೀನಾಂ ಚಾಪಿ ಯಾಃ ಕನ್ಯಾಸ್ತಾಭಿಃ ಸಾರ್ಧಂ ಚ ಶೋಭನಾ ॥ ೧ ॥**
**ಕದಾಚಿದಥ ಮೇರುಸ್ಥೋ ವಾಸವಃ ಪಾಂಡುನಂದನ ।**
**ಸಸ್ಮಾರ ಮಾಂ ಯಯೌ ಚಾಹಂ ಸಂಸ್ಮೃತೋ ವಾಸವಂ ತದಾ ॥ ೨ ॥**
**ಮಾಂ ದೃಷ್ಟ್ವಾ ಚ ಸಹಸ್ರಾಕ್ಷಂ ಸಮುತ್ಥಾಯಾತಿಹರ್ಷಿತಃ ।**
**ಪೂಜಯಾಮಾಸ ತಾಂ ಪೂಜಾಂ ಪ್ರತಿಗೃಹ್ಯಾಹಮಬ್ರುವಂ ॥ ೩ ॥**
**ಮಹಾಸುರ ಮಹೋನ್ಮಾದಕಾಲಾನಲದಿವಸ್ಪತೇ ।**
**ಕುಶಲಂ ವಿದ್ಯತೇ ಕಚ್ಚಿತ್ತ್ವ ಕಚ್ಚಿಚ್ಚ ನಂದಸಿ ॥ ೪ ॥**
**ಪೃಷ್ಟಸ್ತ್ವೇವಂ ಮಯಾ ಶಕ್ರಃ ಪ್ರೋವಾಚ ವಚನಂ ಸ್ಮಯನ್ ।**
**ಕುಶಲಸ್ಯಾಂಕುರಸ್ತಾವತ್ಸಂಭೂತೋ ಭುವನತ್ರಯೇ ॥ ೫ ॥**

---

### ಕನ್ನಡದ ಅನುವಾದ

#### ಕುಮಾರೀಶ ಮಹಾತ್ಮ್ಯ—ಹಿಮವದಾಖ್ಯಾನಕ

೧. ನಾರದನು ಹೇಳುತ್ತಾನೆ:—ಬಳಿಕ ಸೌಭಾಗ್ಯವತಿಯೂ ಶೋಭನೆಯೂ ಆದ ಗಿರಿಜೆಯು ಶೈಶವದಲ್ಲಿ ಇತರ ದೇವ, ಗಂಧರ್ವ ಕನ್ಯೆಯರೊಡನೆಯೂ, ಪರ್ವತರಾಜರ ಮತ್ತು ಕಿನ್ನರರ ಕನ್ಯಕೆಯರೊಡನೆಯೂ ಮುನಿಬಾಲಿಕೆಯ ರೊಡನೆಯೂ ಕ್ರೀಡಿಸುತ್ತಿದ್ದಳು.

೨. ಆ ಸಮಯದಲ್ಲಿ ಮೇರುಪರ್ವತವನ್ನು ಮರೆಹೊಕ್ಕಿದ್ದ ಮಹೇಂದ್ರನು ನನ್ನನ್ನು ಸ್ಮರಿಸಲು, ನಾನು ಆತನಿದ್ದಲ್ಲಿಗೆ ಹೋದೆನು.

೩. ನನ್ನನ್ನು ಕಾಣುತ್ತಲೇ ಅತ್ಯಂತ ಹರ್ಷದಿಂದ ಇಂದ್ರನು ಎದ್ದು ಬಂದು ನನಗೆ ಅರ್ಘ್ಯಪಾದ್ಯಾದಿಗಳಿಂದ ಸಪರ್ಯೆಯನ್ನು ಮಾಡಲು ನಾನು ಆ ಪೂಜೆಯನ್ನು ಸ್ವೀಕರಿಸಿ ಇಂತು ಹೇಳತೊಡಗಿದೆನು.

೪. "ಮಹಾ ರಾಕ್ಷಸರ ಮದಕ್ಕೆ ಕಾಲಾಗ್ನಿರೂಪನೂ ಸ್ವರ್ಗ ಲೋಕಾಧಿಪನೂ ಆದ ಮಹೇಂದ್ರನೆ! ನಿನಗೆ ಕುಶಲವೆ? ನೀನು ಸಂತೋಷ ಗೊಂಡವನಾಗಿರುವೆಯಾ?"

೫. ಈ ರೀತಿಯಾಗಿ ನಾನು ಕೇಳಲು ಇಂದ್ರನು ನಗುತ್ತ ಹೇಳತೊಡ ಗಿದನು. "ನಾರದ! ನಮ್ಮೆಲ್ಲರ ಕುಶಲಕ್ಕೆ ಅಂಕುರಪ್ರಾಯವಾದ ವಸ್ತುವು ಈಗತಾನೇ ಉತ್ಪನ್ನವಾಗಿರುವುದು.

ತತ್ಫಲೋದಯಸಂಪತ್ತೌ ತದ್ಧ್ಯವಾನ್ಸಂಸ್ಮೃತೋ ಮುನೇ ।
ವೇತ್ಸಿ ಸರ್ವಮತಂ ತ್ವಂ ವೈ ತಥಾಪಿ ಪರಿನೋದಕಃ ॥ ೬ ॥
ನಿರ್ವೃತಿಂ ಪರಮಾಂ ಯಾತಿ ನಿವೇದ್ಯಾರ್ಥಂ ಸುಹೃಜ್ಜನೇ । ॥ ೭ ॥
ತದ್ಭವಾನ್ಶೈಲಜಾಂ ದೇವೀಂ ಶೈಲೇಂದ್ರಂ ಶೈಲವಲ್ಲಭಾಂ ।
ಹರಂ ಸಂಭಾವಯ ವರಂ ಯನ್ನಾನ್ಯಂ ರೋಚಯಂತಿ ತೇ ॥ ೮ ॥
ತತಸ್ತದ್ವಾಕ್ಯಮಾಕರ್ಣ್ಯ ಗತೋಽಹಂ ಶೈಲಸತ್ತಮಂ ।
ಓಷಧಿಪ್ರಸ್ಥನಿಲಯಂ ಸಾಕ್ಷಾದಿವ ದಿವಸ್ಪತಿಂ ॥ ೯ ॥
ತತ್ರ ಹೈಮೇ ಸ್ವಯಂ ತೇನ ಮಹಾಭಕ್ತ್ಯಾ ನಿವೇದಿತೇ ।
ಮಹಾಸನೇ ಪೂಜಿತೋಽಹಮುಪಾವಿಷ್ಟೋ ಮಹಾಸುಖಂ ॥ ೧೦ ॥
ಗೃಹೀತಾರ್ಘ್ಯಂ ತತೋ ಮಾಂ ಚ ಪಪ್ರಚ್ಛ ಶ್ಲಕ್ಷ್ಣಯಾ ಗಿರಾ ।
ಕುಶಲಂ ತಪಸಃ ಶೈಲಃ ಶನೈಃ ಫುಲ್ಲಾನನಾಂಬುಜಃ ॥ ೧೧ ॥
ಅಹಮಪ್ಯಸ್ಯ ತತ್ಪ್ರೋಚ್ಯ ಪ್ರತ್ಯವೋಚಂ ಗಿರೀಶ್ವರಂ ।
ತ್ವಯಾ ಶೈಲೇಂದ್ರ ಪೂರ್ವಾಂ ವಾಪ್ಯಪರಾಂ ಚ ದಿಶಂ ತಥಾ ।
ಅವಗಾಹ್ಯ ಸ್ಥಿತವತಾ ಕ್ರಿಯತೇ ಪ್ರಾಣಿಪಾಲನಾ ॥ ೧೨ ॥

---

೬—೮. ಆದರ ಫಲವನ್ನು ಶೀಘ್ರದಲ್ಲಿಯೇ ಹೊಂದಬೇಕೆಂಬ ಬಯಕೆಯಿಂದಲೇ ನಾನು ನಿನ್ನನ್ನು ಸ್ಮರಿಸಿದೆನು. ನೀನು ಸಕಲ ಭವಿಷ್ಯರ್ಥವನ್ನೂ ತಿಳಿದವನಾದರೂ ನನ್ನನ್ನು ಪ್ರಶ್ನಿಸುತ್ತಿರುವೆಯಾದುದರಿಂದ ಹೇಳುವೆನು. ಸ್ನೇಹಿತರಲ್ಲಿ ವಿಷಯಗಳನ್ನು ತಿಳಿಸುವುದರಿಂದ ಅತ್ಯಂತವಾದ ಸುಖವುಂಟಾಗುವುದಲ್ಲವೆ! ಈಗ ನೀನು ಹಿಮವಂತ ಮೇನೆಯರಲ್ಲಿಗೆ ಹೋಗಿ ಅವರ ಮಗಳಾದ ಪಾರ್ವತೀದೇವಿಗೆ ಪರಮೇಶ್ವರನೇ ತಕ್ಕ ವರನೆಂದೂ ಇತರರು ಯಾರೂ ಆಕೆಯ ಮನಸ್ಸಿಗೆ ಒಪ್ಪತಕ್ಕವರಲ್ಲವೆಂದೂ ನಿರೂಪಿಸುವವನಾಗು."

೯—೧೦. ದೇವೇಂದ್ರನ ಈ ಮಾತುಗಳನ್ನು ಕೇಳಿ ನಾನು ಸಮಸ್ತ ಔಷಧಿಗಳಿಗೂ ನಿಲಯವಾಗಿ ಮಹೇಂದ್ರನಂತೆ ತೇಜೋವಂತನಾಗಿರುವ ಹಿಮವಂತನಲ್ಲಿಗೆ ತಕ್ಷಣವೇ ಹೊರಟೆನು. ನನ್ನನ್ನು ಕಾಣುತ್ತಲೇ ಆತನು ಪರಮ ಭಕ್ತಿಯಿಂದ ಉತ್ತಮೋತ್ತಮವಾದ ಚಿನ್ನದ ಸಿಂಹಾಸನದಲ್ಲಿ ನನ್ನನ್ನು ಕುಳ್ಳಿರಿಸಿ ಪೂಜೆಯನ್ನುಮಾಡಲು ನಾನು ಸುಖವಾಗಿ ಮಂಡಿಸುವವನಾದೆನು.

೧೧. ಬಳಿಕ ನನಗೆ ಅರ್ಘ್ಯಪಾದ್ಯಾದಿಗಳನ್ನೊಪ್ಪಿಸಿ ಆ ಶೈಲರಾಜನು ಮೃದುಮಧುರಗಳಾದ ವಾಕ್ಯಗಳಿಂದ ನನ್ನನ್ನು ಕುರಿತು ಮೆಲ್ಲಮೆಲ್ಲನೆ ತಪಸ್ಸಿನ ಕುಶಲವನ್ನು ಕುರಿತು ನಗೆಮೊಗದಿಂದ ಕೇಳತೊಡಗಿದನು.

೧೨. ನಾನೂ ಸಹ ತಕ್ಕ ಉತ್ತರಗಳನ್ನು ಕೊಡುತ್ತಲೇ ಆತನನ್ನು ಕುರಿತು ಪ್ರತಿವಚನವನ್ನು ಹೇಳಿದೆನೆಂತೆಂದರೆ:—" ಎಲಾ ಪರ್ವತಶ್ರೇಷ್ಠನೆ! ಪೂರ್ವ

ಅಹೋ ಧನ್ಯೋಽಸಿ ವಿಪ್ರೇಂದ್ರಾಃ ಸಾಹಾಯ್ಯೇನ ತವಾಚಲ ।
ತಪೋಜಪವ್ರತಸ್ನಾನೈಃ ಸಾಧಯಂತ್ಯಾತ್ಮನಃ ಪರಂ ॥ ೧೩ ॥
ಯಜ್ಞಾಂಗಸಾಧನೈಃ ಕಾಂಶ್ಚಿತ್ಕಂದಾದಿಫಲದಾನತಃ ।
ತ್ವಂ ಸಮುದ್ಧರಸಿ ವಿಪ್ರಾನ್ಕಿಮುತಃ ಪ್ರೋಚ್ಯತೇ ತವ ॥ ೧೪ ॥
ಅನ್ಯೇಽಪಿ ಜೀವಾ ಬಹುಧಾ ತ್ವಾಮುಪಾಶ್ರಿತ್ಯ ಭೂಧರ ।
ಮುದಿತಾಃ ಪ್ರತಿವರ್ತಂತೇ ಗೃಹಸ್ಥಮಿವ ಪ್ರಾಣಿನಃ ॥ ೧೫ ॥
ಶೀತಮಾತಪವರ್ಷಾಂಶ್ಚ ಕ್ಲೇಶಾನ್ನಾನಾವಿಧಾನ್ಸಹನ್ ।
ಉಪಾಕರೋಷಿ ಜಂತೂನಾಮೇವಂ ರೂಪಾ ಹಿ ಸಾಧವಃ ॥ ೧೬ ॥
ಕಿಮುತಃ ಪ್ರೋಚ್ಯತೇ ತುಭ್ಯಂ ಧನ್ಯಸ್ತ್ವಂ ಪೃಥಿವೀಧರ ।
ಕಂದರಂ ಯಸ್ಯ ಚಾಧ್ಯಾಸ್ತೇ ಸ್ವಯಂ ತವ ಮಹೇಶ್ವರಃ ॥ ೧೭ ॥
ಇತ್ಯುಕ್ತವತಿ ವಾಕ್ಯಂ ಚ ಯಥಾರ್ಥಂ ಮಯಿ ಫಾಲ್ಗುನ ।
ಹಿಮಶೈಲಸ್ಯ ಮಹಿಷೀ ಮೇನಾ ಆಗಾದ್ದಿದೃಕ್ಷಯಾ ॥ ೧೮ ॥

---

ಮತ್ತು ಪಶ್ಚಿಮ ಸಮುದ್ರಗಳನ್ನು ಅವಗಾಹನಮಾಡಿ ನಿಂತಿರುವ ನಿನ್ನಿಂದ ಅನೇಕ ಜಂತುಗಳ ರಕ್ಷಣೆಯು ಮಾಡಲ್ಪಡುತ್ತಿರುವುದು.

೧೩. ನೀನೇ ಧನ್ಯನು. ನಿನ್ನ ಸಹಾಯದಿಂದಲೇ ಬ್ರಾಹ್ಮಣೋತ್ತಮರು ತಪಸ್ಸು, ಜಪ, ವ್ರತ, ತೀರ್ಥಸ್ನಾನ ಮುಂತಾದುವುಗಳಿಂದ ತಮ್ಮ ಪರಗತಿಯನ್ನು ಸಾಧಿಸಿಕೊಳ್ಳುತ್ತಿರುವರು.

೧೪. ಕೆಲವರನ್ನು ಯಜ್ಞಾಂಗಗಳಿಗೆ ಬೇಕಾದ ಸಮಿತ್ಕುಶಾದಿಗಳಿಂದಲೂ, ಕೆಲವರನ್ನು ಕಂದ ಮೂಲ ಫಲಗಳಿಂದಲೂ ನೀನು ಸಂತೋಷಗೊಳಿಸುತ್ತಿರುವೆ. ನಿನ್ನ ಅನುಜೀವಿಗಳಾದ ಬ್ರಾಹ್ಮಣರನ್ನು ಕುರಿತು ಹೆಚ್ಚಿಗೆ ಹೇಳತಕ್ಕುದೇನಿದೆ?

೧೫–೧೬. ಗೃಹಸ್ಥನಾದವನನ್ನು ಅನೇಕ ಪ್ರಾಣಿಗಳು ಆಶ್ರಯಿಸುವಂತೆ ನಿನ್ನನ್ನೂ ಸಹ ಇತರ ಜೀವರೂ ಬಹುವಿಧವಾಗಿ ಆಶ್ರಯಗೊಂಡು ಸಂತುಷ್ಟಾಂತರಂಗರಾಗಿ ಹಿಂದಿರುಗುತ್ತಿರುವರು. ಚಳಿ, ಬಿಸಿಲು, ಮಳೆಗಳನ್ನೂ ಇತರ ನಾನಾ ವಿಧಗಳಾದ ಕ್ಲೇಶಗಳನ್ನೂ ಸಹಿಸಿಕೊಂಡು ನೀನು ಅನೇಕ ಜಂತುಗಳಿಗೆ ಉಪಕಾರವನ್ನೆಸಗುತ್ತಿರುವೆ. ಸಾಧುಪುರುಷರು ಇಂತೆಯೇ ಇರುವರಲ್ಲವೆ.

೧೭. ನಿನಗೆ ವಿಶೇಷವಾಗಿ ಹೇಳುವುದೇನಿದೆ? ಅಯ್ಯಾ ಪರ್ವತರಾಜನೆ! ಪ್ರಪಂಚದಲ್ಲಿ ನೀನೇ ಧನ್ಯನು. ನಿನ್ನ ತಪ್ಪಲಿನ ಪ್ರದೇಶವನ್ನೇ ಮಹಾದೇವನು ಆಶ್ರಯಿಸಿ ವಾಸಮಾಡುತ್ತಿರುವನು.''

೧೮. ಎಲೈ ಅರ್ಜುನನೆ! ಈ ರೀತಿ ಯಥಾರ್ಥಗಳಾದ ಮಾತುಗಳನ್ನು ನಾನು ಆಡುತ್ತಿರಲು ಆ ಪರ್ವತರಾಜನ ಪಟ್ಟಮಹಿಷಿಯಾದ ಮೇನಾದೇವಿಯು ನನ್ನನ್ನು ನೋಡಲೆಳಸಿ ಅಲ್ಲಿಗೆ ಬಂದಳು.

ಅನುಯಾತಾ ದುಹಿತ್ರಾ ಚ ಸ್ವಲ್ಪಾಶ್ಚ ಪರಿಚಾರಿಕಾಃ ।
ಲಜ್ಜಯಾನತಸರ್ವಾಂಗೀ ಪ್ರವಿವೇಶ ಸದೋ ಮಹತ್ ॥ ೧೯ ॥
ತತೋ ಮಾಂ ಶೈಲಮಹಿಷೀ ವವಂದೇ ಪ್ರಣಿಪತ್ಯ ಸಾ ।
ವಸ್ತ್ರನಿಗೂಢವದನಾ ಪಾಣಿಪದ್ಮಕೃತಾಂಜಲಿಃ ॥ ೨೦ ॥
ತಾಮಹಂ ಸತ್ಯರೂಪಾಭಿರಾಶೀರ್ಭಿಃ ಸಮವರ್ಧಯಂ ।
ಪತಿವ್ರತಾ ಶುಭಾಚಾರಾ ಸುಭಗಾ ವೀರಸೂಃ ಶುಭೇ ॥ ೨೧ ॥
ಸದಾ ವೀರವತೀ ಚಾಪಿ ಭವ ವಂಶೋನ್ನತಿಪ್ರದೇ ।
ತತೋಽಹಂ ವಿಸ್ಮಿತಾಕ್ಷೀಂ ಚ ಹಿಮವದ್ಗಿರಿಪುತ್ರಿಕಾಂ ॥ ೨೨ ॥
ಮೃದುವಾಣ್ಯಾ ಪ್ರತ್ಯವೋಚಮೇಹಿ ಬಾಲೇ ಮಮಾಂತಿಕಂ ॥ ೨೩ ॥
ತತೋ ದೇವೀ ಜಗನ್ಮಾತಾ ಬಾಲಭಾವಂ ಸ್ವಕಂ ಮಯಿ ।
ದರ್ಶಯಂತೀ ಸ್ವಪಿತರಂ ಕಂಠೇ ಗೃಹ್ಯಾಂಕಮಾವಿಶತ್ ॥ ೨೪ ॥
ಉವಾಚ ವಾಚಂ ತಾಂ ಮಂದಂ ಮುನಿಂ ವಂದಯ ಪುತ್ರಿಕೇ ।
ಮುನೇಃ ಪ್ರಸಾದತೋಽವಶ್ಯಂ ಪತಿಮಾಪ್ಸ್ಯಸಿ ಸಮ್ಮತಂ ॥ ೨೫ ॥

---

೧೯–೨೦. ಮಗಳು ಹಿಂಬಾಲಿಸುತ್ತಿರಲು ಕೆಲವೇ ಪರಿಚಾರಿಕೆಯರೊಡನೆ ಕೂಡಿದವಳಾಗಿ ಲಜ್ಜೆಯಿಂದ ಕುಗ್ಗಿದ ಮೈಯುಳ್ಳ ಆಕೆಯು ವಿಶಾಲವಾದ ಆ ಸಭಾಮಂಟಪವನ್ನು ಪ್ರವೇಶಿಸಿದಳು. ಆಗಲಾ ಮೇನಾದೇವಿಯು ಸೆರಗಿನಿಂದ ಮುಖವನ್ನು ಮುಚ್ಚಿಕೊಂಡು ತನ್ನ ತಾವರೆಗೈಗಳಿಂದ ಅಂಜಲಿಬಂಧವನ್ನುಮಾಡಿ ನನಗೆ ವಂದನೆಯನ್ನು ಮಾಡಿದಳು.

೨೧–೨೩. ಆಕೆಯನ್ನು ನಾನು ಸಫಲಗಳಾದ ಆಶೀರ್ವಚನಗಳಿಂದ ತೃಪ್ತಿಗೊಳಿಸುವವನಾಗಿ ಇಂತೆಂದೆನು:—"ಎಲೌ ಶುಭಾಂಗಿಯೆ! ನೀನು ಪತಿವ್ರತೆಯೂ, ಶುಭಾಚಾರ ಸಂಪನ್ನಳೂ, ಸೌಭಾಗ್ಯವತಿಯೂ ವೀರ ಮಾತೆಯೂ ಯಾವಾಗಲೂ ವೀರವತಿಯೂ ಆಗಿ ವಂಶದ ಉನ್ನತಿಯನ್ನುಂಟು ಮಾಡುವವಳಾಗು." ಬಳಿಕ ವಿಸ್ಮಿತ ನೇತ್ರಗಳಿಂದೊಡಗೂಡಿದ ಹಿಮವಂತನ ಮಗಳಾದ ಗಿರಿಜೆಯನ್ನು ಕಂಡು ನಾನು 'ಎಲೌ ಬಾಲಕಿಯೆ! ಇಲ್ಲಿ ಬಂದು ನನ್ನ ತೊಡೆಯಮೇಲೆ ಕೂತುಕೊ' ಎಂದು ಮೃದುವಚನಗಳನ್ನಾಡಿದೆನು.

೨೪. ಆಗಲಾ ಜಗನ್ಮಾತೆಯು ನನ್ನಲ್ಲಿ ತನ್ನ ಬಾಲಭಾವವನ್ನು ತೋರಿಸುವವಳಂತೆ ತನ್ನ ತಂದೆಯ ಕಂಠವನ್ನು ಗಟ್ಟಿಯಾಗಿ ಆಲಿಂಗನೆ ಮಾಡಿಕೊಂಡಳು.

೨೫. ಆತನಾದರೊ ಆಕೆಯನ್ನುಕುರಿತು "ಮಗಳೆ! ನೀನು ಈ ಮಹರ್ಷಿಗೆ ನಮಸ್ಕಾರವನ್ನು ಮಾಡು. ಈತನ ವರಪ್ರಸಾದದಿಂದ ನಿಜವಾಗಿಯೂ ನಿನಗೆ ಸಮ್ಮತನಾದ ಪತಿಯನ್ನು ಪಡೆಯುವೆ."

ಇತ್ಯುಕ್ತ್ವಾ ಸಾ ತತೋ ಬಾಲಾ ವಸ್ತ್ರಾಂತಪಿಹಿತಾನನಾ ।
ಕಿಂಚಿತ್ಸಹುಂಕೃತೋತ್ಕಂಪಂ ಪ್ರೋಚ್ಯ ನೋವಾಚ ಕಿಂಚನ ॥ ೨೬ ॥
ತತೋ ವಿಸ್ಮಿತಚಿತ್ತೋಽಹಮುಪಚಾರವಿದಾಂವರಃ ।
ಪ್ರತ್ಯವೋಚಂ ಪುನರ್ದೇವೀಮೇಹಿ ದಾಸ್ಯಾಮಿ ತೇ ಶುಭೇ ।
ರತ್ನಕ್ರೀಡನಕಂ ರಮ್ಯಂ ಸ್ಥಾಪಿತಂ ಸುಚಿರಂ ಮಯಾ ॥ ೨೭ ॥
ಇತ್ಯುಕ್ತ್ವಾ ಸಾ ತದೋತ್ಥಾಯ ಪಿತುರಂಕಾತ್ಸವೇಗತಃ ।
ವಂದಮಾನಾ ಚ ಮೇ ಪಾದೌ ಮಯಾ ನೀತಾಂಕಮಾತ್ಮನಃ ॥ ೨೮ ॥
ಮನ್ಯತಾ ತಾಂ ಜಗತ್ಪೂಜ್ಯಾಮುಕ್ತಂ ಬಾಲೇ ತವೋಚಿತಂ ।
ನ ತತ್ಪಶ್ಯಾಮಿ ಯತ್ತುಭ್ಯಂ ದದ್ಯಾಂ ಶೀಃ ಕಾ ತವೋಚಿತಾ ॥ ೨೯ ॥
ಇತ್ಯುಕ್ತೇ ಮಾತೃವಾತ್ಸಲ್ಯಾಚ್ಛೈಲೇಂದ್ರಮಹಿಷೀ ತದಾ ।
ನೋದಯಾಮಾಸ ಮಾಂ ಮಂದಮನಾಶೀಃ ಶಂಕಿತಾ ತದಾ ॥ ೩೦ ॥
ಭಗವನ್ವೇತ್ಸಿ ಸರ್ವಂ ತ್ವಮತೀತಾನಾಗತಂ ಪ್ರಭೋ ।
ತದಹಂ ಜ್ಞಾತುಮಿಚ್ಛಾಮಿ ಕೀದೃಶೋಽಸ್ಯಾಃ ಪತಿರ್ಭವೇತ್ ॥ ೩೧ ॥

---

೨೬–೨೭. ಈ ಮಾತುಗಳನ್ನು ಕೇಳಿ ಆಕೆಯು ವಸ್ತ್ರದಿಂದ ಮುಖವನ್ನು ಮುಚ್ಚಿದವಳಾಗಿ ಸ್ವಲ್ಪ ಹುಂಕಾರವನ್ನು ಮಾಡುವವಳಂತೆ ತೋರುತ್ತ ಏನನ್ನೂ ಉತ್ತರ ಕೊಡಲಿಲ್ಲ. ಆಕೆಯ ಬಾಲಕೇಳಿಗೆ ವಿಸ್ಮಯಗೊಂಡ ನಾನು ಮಕ್ಕಳನ್ನು ಉಪಚರಿಸುವ ಬಗೆಯನ್ನು ಬಲ್ಲೆನಾದುದರಿಂದ ಮತ್ತೆ ಆಕೆಯನ್ನು ಕುರಿತು "ಅಮ್ಮಾ! ನನ್ನ ಹತ್ತಿರಕ್ಕೆ ಬಾ. ನಿನಗೆ ರತ್ನಖಚಿತವಾದ ಒಂದು ಚೆಂಡನ್ನು ಕೊಡುವೆನು. ಅದನ್ನು ನಿನಗಾಗಿಯೇ ಬಹುದಿನಗಳಿಂದ ಬಚ್ಚಿಟ್ಟಿರುವೆನು."

೨೮. ಹೀಗೆ ಹೇಳಲು ಆ ಮಗುವು ಥಟ್ಟನೆ ತಂದೆಯ ಮಡಿಲನ್ನು ಬಿಟ್ಟು ಎದ್ದು ವೇಗದಿಂದ ಬಂದು ನನ್ನ ಕಾಲಿಗೆ ನಮಸ್ಕರಿಸಲು ನಾನು ಆಕೆಯನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡೆನು.

೨೯. ಆಕೆಯನ್ನು ಲೋಕವಂದ್ಯಳೆಂದು ತಿಳಿದಿದ್ದೆನಾದುದರಿಂದಲೇ ಆಕೆಗೆ ನಾನು ಇಂತೆಂದೆನು :—"ತಾಯಿ! ನಿನಗೆ ಯೋಗ್ಯವಾದ ಉಪಾಯನವನ್ನಾಗಲಿ, ನಿನ್ನ ವೈಭವಕ್ಕೆ ತಕ್ಕ ಆಶೀರ್ವಾದವನ್ನಾಗಲಿ ನಾನರಿಯೆನು."

೩೦. ಹೀಗೆಂದ ನನ್ನನ್ನು ಕಂಡು ಮೇನಾದೇವಿಯು ಸಹಜವಾದ ಮಾತೃ ವಾತ್ಸಲ್ಯದಿಂದ ಕೂಡಿ ನಾನು ಮಗಳನ್ನು ಆಶೀರ್ವಾದ ಮಾಡಲಿಲ್ಲವೆಂದು ಭಯಗೊಂಡವಳಾಗಿ ನನ್ನನ್ನು ಕುರಿತು ವಿಜ್ಞಾಪಿಸಿದಳು.

೩೧. "ಎಲೈ ಮುನೀಶ್ವರನೆ! ನೀನು ಭೂತ ಭವಿಷ್ಯತ್ಕಾಲಗಳ ವ್ಯವಹಾರ ಗಳೆಲ್ಲವನ್ನೂ ತಿಳಿದವನು. ಆದುದರಿಂದ ಈ ಹುಡುಗಿಗೆ ಸದೃಶನಾದ ವರನು ಎಂತಹವನೆಂಬುದನ್ನು ತಿಳಿಯಲಿಚ್ಛಿಸುವೆನು."

ಶ್ರುತ್ವೇತಿ ಸುಸ್ಮಿತಮುಖಃ ಪ್ರಾವೋಚಂ ನರ್ಮವಲ್ಲಭಃ ॥ ೩೨ ॥
ನ ಜಾತೋಽಸ್ಯಾಃ ಪತಿರ್ಭದ್ರೇ ವರ್ತತೇ ಚ ಕುಲಕ್ಷಣಃ ।
ನಗ್ನೋಽತಿನಿರ್ಧನಃ ಕ್ರೋಧೀ ವೃತಃ ಕ್ರೂರೈಶ್ಚ ಸರ್ವದಾ ॥ ೩೩ ॥
ಶ್ರುತ್ವೇತಿ ಸಂಭ್ರಮಾವಿಷ್ಟೋ ಧ್ವಸ್ತವೀರ್ಯೋ ಹಿಮಾಚಲಃ ।
ಮಾಂ ತದಾ ಪ್ರತ್ಯುವಾಚೇದಂ ಸಾಶ್ರುಕಂಠೋ ಮಹಾಗಿರಿಃ ॥ ೩೪ ॥
ಅಹೋ ವಿಚಿತ್ರಃ ಸಂಸಾರೋ ದುರ್ವೇದ್ಯೋ ಮಹತಾಮಪಿ ।
ಪ್ರವರಸ್ತ್ವಪಿ ಶಕ್ತ್ಯಾ ಯೋ ನರೇಷು ನ ಕೃಪಾಯತೇ ॥ ೩೫ ॥
ಯತ್ನೇನ ಮಹತಾ ತಾವತ್ಪುಣ್ಯೈರ್ಬಹುವಿಧೈರಪಿ ।
ಸಾಧಯತ್ಯಾತ್ಮನೋ ಲೋಕೋ ಮಾನುಷ್ಯಮತಿದುರ್ಲಭಂ ॥ ೩೬ ॥
ಅಧ್ರುವಂ ತದ್ಧ್ರುವತ್ವೇ ಚ ಕಥಂಚಿತ್ಪರಿಕಲ್ಪ್ಯತೇ ।
ತತ್ರಾಪಿ ದುರ್ಲಭಾ ನಾಮ ಸಮಾನವ್ರತಚಾರಿಣೀ ॥ ೩೭ ॥
ಸಾಧ್ವೀ ಮಹಾಕುಲೋತ್ಪನ್ನಾ ಭಾರ್ಯಾ ಯಾ ಸ್ಯಾತ್ಪತಿವ್ರತಾ ।
ತತ್ರಾಪಿ ದುರ್ಲಭಂ ಯಚ್ಚ ತಯಾ ಧರ್ಮನಿಷೇವಣಂ ॥ ೩೮ ॥

---

೩೨–೩೩. ಇದನ್ನು ಕೇಳಿ ನಗೆಮೊಗವುಳ್ಳವನಾಗಿ ನಾನು ಗೂಢಾರ್ಥಯುಕ್ತಗಳಾದ ಮಾತುಗಳನ್ನು ನುಡಿದೆನೆಂತೆನೆ:—" ಅಮ್ಮಾ! ಈಕೆಯ ಪತಿಗೆ ಜನ್ಮವೆಂಬುದೇ ಇಲ್ಲವು. ಆತನು ಅನೇಕ ದುರ್ಲಕ್ಷಣಗಳಿಂದ ಕೂಡಿರುವನು. ದಿಗಂಬರನು; ಕೇವಲ ದರಿದ್ರನು; ಬಹಳ ಮುಂಗೋಪಿಯು; ಯಾವಾಗಲೂ ಕ್ರೂರ ಸತ್ವಗಳಿಂದ ಪರಿವೃತನಾಗಿರುವನು."

೩೪. ಈ ಮಾತುಗಳನ್ನು ಕೇಳಿ ಪರ್ವತರಾಜನಾದ ಹಿಮವಂತನು ವ್ಯಾಕುಲಗೊಂಡವನಾಗಿ ಕಳೆಗುಂದಿದವನಂತೆ ಕಾಣುವವನಾಗಿ ಕಣ್ಣುಗಳಿಂದ ನೀರನ್ನು ಸುರಿಸುತ್ತ ಗದ್ಗದಕಂಠನಾಗಿ ನನ್ನನ್ನು ಕುರಿತು ಇಂತೆಂದನು.

೩೫–೩೬. " ಅಹೋ! ಮಹಾಮಹಿಮರಿಗೂ ಕೂಡ ದುರ್ವಿಜ್ಞೇಯವಾದ ಈ ಸಂಸಾರವೆಂಬುದು ಅತ್ಯಂತ ವಿಚಿತ್ರವಾದುದು. ಮನುಷ್ಯರಲ್ಲಿ ಶ್ರೇಷ್ಠನೆನಿಸಿದವನೂ ಕೂಡ ತನ್ನ ಶಕ್ತಿಯಿಂದ ಭಗವಂತನ ಕೃಪೆಯನ್ನು ಸಂಪಾದಿಸಲಾರನು. ಮಹತ್ತರವಾದ ಪ್ರಯತ್ನದಿಂದಲೂ ಅನೇಕ ವಿಧಗಳಾದ ಪುಣ್ಯಗಳ ಫಲರೂಪವಾಗಿಯೂ ಜೀವನು ತನ್ನ ಲೋಕವನ್ನು ಸಾಧಿಸಿಕೊಂಡು ಅತ್ಯಂತ ದುರ್ಲಭವಾದ ಮನುಷ್ಯಜನ್ಮವನ್ನು ಪಡೆಯುವನು.

೩೭–೩೮. ಅಶಾಶ್ವತವಾದ ಆ ಮನುಷ್ಯಜನ್ಮದಲ್ಲಿಯೂ ಸಹ ಹೇಗೋ ಒಂದು ವಿಧವಾಗಿ ಶಾಶ್ವತಬುದ್ಧಿಯನ್ನು ಮಾಡುವನು. ಅದರಲ್ಲಿಯೂ ಸಹ ತನ್ನೊಡನೆ ಸಹಕರಿಸಿ ವ್ರತಾಚರಣೆಗಳನ್ನು ಮಾಡುವವಳೂ, ಸಾಧ್ವಿಯೂ,

ಸಹ ವೇದಪುರಾಣೋಕ್ತಂ ಜಗತ್ತ್ರಯಹಿತಾವಹಂ ।
ಏತತ್ಸುದುರ್ಲಭಂ ಯಚ್ಚ ತಸ್ಯಾಂ ಚೈವ ಪ್ರಜಾಯತೇ ॥ ೩೯ ॥
ತದಪತ್ಯಮಪತ್ಯಾರ್ಥಂ ಸಂಸಾರೇ ಕಿಲ ನಾರದ ।
ಏತೇಷಾಂ ದುರ್ಲಭಾನಾಂ ಹಿ ಕಿಂಚಿತ್ಪ್ರಾಪ್ನೋತಿ ಪುಣ್ಯವಾನ್ ॥ ೪೦ ॥
ಸರ್ವಮೇತದವಾಪ್ನೋತಿ ಸ ಕೋಽಪಿ ಯದಿ ವಾ ನವಾ ।
ಕಿಂಚಿತ್ಕೇನಾಪಿ ಹಿ ನ್ಯೂನಂ ಸಂಸಾರಃ ಕುರುತೇ ವರಂ ॥ ೪೧ ॥
ಅಥ ಸಾಂಸಾರಿಕೋ ದೋಷಃ ಸ್ವಕೃತಂ ಯತ್ರ ಭುಜ್ಯತೇ ।
ಗಾರ್ಹಸ್ಥ್ಯಂ ಚ ಪ್ರಶಂಸಂತಿ ವೇದಾಃ ಸರ್ವೇಽಪಿ ನಾರದ ॥ ೪೨ ॥
ನೇತಿ ಕೇಚಿತ್ತತ್ರ ಪುನಃ ಕಥಂ ತೇ ಯದಿ ನೋ ಗೃಹೇ ।
ಅತೋ ಧಾತ್ರಾ ಚ ಶಾಸ್ತ್ರೇಷು ಸುತಲಾಭಃ ಪ್ರಶಂಸಿತಃ ॥ ೪೩ ॥
ಪುನಶ್ಚ ಸೃಷ್ಟಿವೃದ್ಧ್ಯರ್ಥಂ ನರಕತ್ರಾಣನಾಯ ಚ ।
ತತ್ರ ಸ್ತ್ರೀಣಾಂ ಸಮುತ್ಪತ್ತಿಂ ವಿನಾ ಸೃಷ್ಟಿರ್ನ ಜಾಯತೇ ॥ ೪೪ ॥

---

ಉತ್ತಮ ಕುಲದಲ್ಲಿ ಹುಟ್ಟಿದವಳೂ ಪತಿವ್ರತೆಯೂ ಆದ ಸಹಧರ್ಮಿಣಿಯು ದೊರಕುವುದೇ ಅತ್ಯಂತ ದುರ್ಲಭವು.

೩೯. ಹಾಗಾದರೂ ವೇದ ಪುರಾಣಗಳಲ್ಲಿ ಹೇಳಿರುವಂತೆ ಸಕಲ ಲೋಕಗಳಿಗೂ ಹಿತಕರಗಳೆನಿಸುವ ಧರ್ಮಗಳನ್ನು ಆಕೆಯೊಡನೆ ಆಚರಿಸುವುದು ಅಸಾಧ್ಯವೇ ಸರಿ.

೪೦–೪೧. ಅಯ್ಯಾ ನಾರದನೆ! ವಿಶೇಷ ದುರ್ಲಭವೆಂದರೆ ಪುತ್ರಸಂತಾನಕ್ಕಾಗಿಯೇ ಅನುಸರಿಸುವ ಸಂಸಾರ ಮಾರ್ಗದಲ್ಲಿ ಉತ್ತಮ ಪತ್ನಿಯ ಗರ್ಭದಲ್ಲಿ ಮಕ್ಕಳನ್ನು ಪಡೆಯುವುದೇ ಆಗಿರುವುದು. ಸಂಸಾರವೆಂಬುದು ಯಾವ ವಿಷಯದಲ್ಲಿಯಾದರೂ ಮನುಷ್ಯನನ್ನು ಸ್ವಲ್ಪವಾದರೂ ನ್ಯೂನತೆಯುಳ್ಳವನನ್ನಾಗಿಯೇ ಮಾಡುವದು. ಹಾಗೂ ತಾನು ಮಾಡಿದ ಕರ್ಮಗಳ ಫಲವನ್ನೇ ತಾನು ಅನುಭವಿಸುವುದು ಸಂಸಾರದ ದೋಷವೆನಿಸುವುದು.

೪೨–೪೩. ಅಯ್ಯಾ ನಾರದನೆ! ಸಕಲ ವೇದಗಳೂ ಗೃಹಸ್ಥ ಧರ್ಮವನ್ನೇ ಪ್ರಶಂಸೆಮಾಡುತ್ತಿರುವುವಲ್ಲವೆ? ಹಾಗಲ್ಲವೆಂದು ಕೆಲವರು ಹೇಳುವವರಾದರೂ, ಅವರು ತಾನೆ ಗೃಹಸ್ಥಾಶ್ರಮಿಗಳಿಂದಲ್ಲದೆ ಹೇಗೆ ಉತ್ಪನ್ನರಾದರು? ಆದುದರಿಂದಲೇ ಬ್ರಹ್ಮನಿಂದ ಸಕಲ ಶಾಸ್ತ್ರಗಳಲ್ಲಿಯೂ ಪುತ್ರಲಾಭವೆಂಬುದು ಸ್ತುತಿಸಲ್ಪಟ್ಟಿರುವುದು.

೪೪. ಪ್ರಪಂಚದ ಸೃಷ್ಟಿ ಮತ್ತು ವೃದ್ಧಿಗಳ ದೃಷ್ಟಿಯಿಂದಲೂ ಪಿತೃಗಳ ನರಕೋತ್ತಾರಣಾರ್ಥವಾಗಿಯೂ ಸಂತಾನವನ್ನು ಪಡೆಯಬೇಕು; ಅದರಲ್ಲಿಯೂ, ಸ್ತ್ರೀ ಸಂತಾನವಿಲ್ಲದೆ ಸೃಷ್ಟಿಕಾರ್ಯವೆಂಬುದು ಮುಂದುವರೆಯುವುದಿಲ್ಲ.

ಸಾ ಚ ಜಾತಿಃ ಪ್ರಕೃತ್ಯೈವ ಕೃಪಣಾ ದೈನ್ಯಭಾಗಿನೀ ।
ತಾಸಾಮುಪರಿ ಮಾವಜ್ಞಾ ಭವೇದಿತಿ ಚ ವೇಧಸಾ ।
ಶಾಸ್ತ್ರೇಷೂಕ್ತಮಸಂದಿಗ್ಧಂ ವಾಕ್ಯಮೇತನ್ಮಹತ್ಫಲಂ ॥ ೪೫ ॥
ದಶಪುತ್ರಸಮಾ ಕನ್ಯಾ ದಶಪುತ್ರಾನ್ಪ್ರವರ್ಧಯನ್ ।
ಯತ್ಫಲಂ ಲಭತೇ ಮರ್ತ್ಯಸ್ತಲ್ಲಭ್ಯಂ ಕನ್ಯಯೈಕಯಾ ॥ ೪೬ ॥
ತಸ್ಮಾತ್ಕನ್ಯಾ ಪಿತುಃಶೋಚ್ಯಾ ಸದಾ ದುಃಖವಿವರ್ಧಿನೀ ॥ ೪೭ ॥
ಯಾಪಿ ಸ್ಯಾತ್ಪೂರ್ಣಸರ್ವಾರ್ಥಾ ಪತಿಪುತ್ರಧನಾನ್ವಿತಾ ।
ತ್ವಯೋಕ್ತಂ ಚ ಕೃತೇ ಹ್ಯಸ್ಯಾಸ್ತದ್ವಾಕ್ಯಂ ಮಮ ಶೋಕದಂ ॥ ೪೮ ॥
ಕೇನ ದೋಷೇಣ ಮೇ ಪುತ್ರೀ ನ ಯೋಗ್ಯಾ ಆಶಿಷಾ ಮತಾ ।
ನ ಜಾತೋಽಸ್ಯಾಃ ಪತಿಃ ಕಸ್ಮಾದ್ವರ್ತತೇ ವಾ ಕುಲಕ್ಷಣಃ ॥ ೪೯ ॥
ನಿರ್ಧನಶ್ಚ ಮುನೇ ಕಸ್ಮಾತ್ಸರ್ವೇಷಾಂ ಸರ್ವದಃ ಕುತಃ ।
ಇತಿ ದುರ್ಘಟವಾಕ್ಯಂ ತೇ ಮುನೇ ಮೋಹಯತೀವ ಮೇ ॥ ೫೦ ॥

---

೪೫. ಸ್ತ್ರೀಜಾತಿಯು ಸಾಮಾನ್ಯವಾಗಿ ಸ್ವಭಾವದಿಂದಲೂ ಕೃಪೆಗೆ ಪಾತ್ರವಾಗಿಯೂ, ದೈನ್ಯದಿಂದ ಕೂಡಿಯೂ ಇರುವುದು. ಇಂತಹ ಸ್ತ್ರೀಯರ ಅಸಡ್ಡೆಯಾಗಬಾರದೆಂದೇ ಬ್ರಹ್ಮನು ಶಾಸ್ತ್ರಗಳಲ್ಲಿ ನಿಸ್ಸಂದೇಹವಾಗಿ ಉತ್ತಮಫಲದಾಯಕವಾದ ಈ ಮಾತನ್ನು ಹೇಳಿರುವನು.

೪೬–೪೭. ಪುತ್ರಿಯು ಒಬ್ಬಳೇ ಆದರೂ ಅವಳೂ ಹತ್ತುಮಂದಿ ಪುತ್ರರಿಗೆ ಸಮಳಾದವಳು. ಹತ್ತುಮಂದಿ ಪುತ್ರರನ್ನು ಪಡೆದ ತಂದೆಯು ಯಾವ ಫಲವನ್ನು ಪಡೆಯುವನೊ, ಅದೇ ಫಲವನ್ನೇ ಒಬ್ಬ ಸ್ತ್ರೀ ಸಂತಾನದಿಂದಲೇ ಅವನು ಪಡೆಯಬಹುದು! ಆದುದರಿಂದಲೇ ಕನ್ಯೆಯಾದವಳು ಸರ್ವಾರ್ಥಸಂಪೂರ್ಣಳೂ, ಪತಿಪುತ್ರಧನಾದಿಗಳುಳ್ಳವಳಾದರೂ ಸಹ ತಂದೆಗೆ ದುಃಖವನ್ನುಂಟುಮಾಡುವವಳೂ ಕನಿಕರಾರ್ಹಳೂ ಆಗಿರುವಳು.

೪೮–೪೯. ಈಕೆಯ ವಿಷಯವಾಗಿ ನೀನು ಹೇಳಿರುವ ವಾಕ್ಯವು ನನಗೆ ವಿಶೇಷ ಶೋಕವನ್ನುಂಟುಮಾಡುತ್ತಿರುವುದು. ನನ್ನ ಮಗಳು ಯಾವ ದೋಷದಿಂದ ನಿನ್ನ ಆಶೀರ್ವಾದಕ್ಕೆ ಸತ್ಪಾತ್ರಳಾಗಲಿಲ್ಲ? ಇವಳಿಗೆ ಗಂಡನು ಏತಕ್ಕಾಗಿ ಅವತರಿಸಲಿಲ್ಲ? ಅಥವಾ ಅವತರಿಸಿದ್ದರೂ ದುರ್ಲಕ್ಷಣನಾಗಿಯೇ ಏಕೆ ಇದ್ದಾನು? ಇದು ತೀರ ವಿಚಿತ್ರವಾಗಿರುವುದು.

೫೦. ಎಲೈ ಮುನಿಯೇ! ಆತನು ದರಿದ್ರನೆಂತಾದಾನು? ಆದರೂ ಸಕಲರಿಗೂ ಅಭೀಷ್ಟದಾಯಕನು ಹೇಗೆ ಆದಾನು? ಈ ರೀತಿಯಾದ ದುರ್ಭೇದ್ಯವಾದ ನಿನ್ನ ವಾಕ್ಯವು ನನ್ನ ಮನಸ್ಸನ್ನು ಮೋಹಗೊಳಿಸುತ್ತಿರುವುದು. ಈ ವಿಷಯಗಳೆಲ್ಲವನ್ನೂ ನನಗೆ ತಿಳಿಯಹೇಳಬೇಕು.”

ಇತಿ ತಂ ಪುತ್ರಿವಾತ್ಸಲ್ಯಾತ್ಸಭಾರ್ಯಂ ಶೋಕಸಂಪ್ಲುತಂ ।
ಅಹಮಾಶ್ವಾಸಯಂ ವಾಗ್ಭಿಃ ಸತ್ಯಾಭಿಃ ಪಾಂಡುನಂದನ ॥ ೩೦ ॥
ಮಾ ಶುಚಃ ಶೈಲರಾಜ ತ್ವಂ ಹರ್ಷಸ್ಥಾನೇಽತಿಪುಣ್ಯಭಾಕ್ ।
ಶೃಣು ತದ್ವಚನಂ ಮಹ್ಯಂ ಯನ್ಮಯೋಕ್ತಂ ಚ ಪೂರ್ವವತ್ ॥ ೩೧ ॥
ಜಗನ್ಮಾತಾ ತ್ವಿಯಂ ಬಾಲಾ ಪುತ್ರೀ ತೇ ಸರ್ವಸಿದ್ಧಿದಾ ।
ಪುರಾ ಭವೇಽಭವದ್ಭಾರ್ಯಾ ಸತೀನಾಮ್ನಾ ಭವಸ್ಯ ಯಾ ॥ ೩೨ ॥
ತದಸ್ಯಾಃ ಕಿಮಹಂ ದದ್ಮಿ ರವೇರ್ದೀಪಮಿವಾಲ್ಪಕಃ ।
ಸಂಚಿಂತ್ಯೇತಿ ಮಹಾದೇವ್ಯಾ ನಾಶಿಷಂ ದತ್ತವಾನಹಂ ॥ ೩೩ ॥
ನ ಜಾತೋಽಸ್ಯಾಃ ಪತಿಶ್ಚೇತಿ ವರ್ತತೇ ಚ ಭವೋ ಹಿ ಸಃ ।
ನ ಸ ಜಾತೋ ಮಹಾದೇವೋ ಭೂತಭವ್ಯಭವೋದ್ಭವಃ ॥ ೩೪ ॥
ಶರಣ್ಯಃ ಶಾಶ್ವತಃ ಶಾಸ್ತಾ ಶಂಕರಃ ಪರಮೇಶ್ವರಃ ॥ ೩೫ ॥
ಸರ್ವೇ ದೇವಾ ಯತ್ಪದಮಾಮನಂತಿ
ವೇದೈಶ್ಚ ಸರ್ವೈರಪಿ ಯೋ ನ ಲಭ್ಯಃ ।
ಬ್ರಹ್ಮಾದಿ ವಿಶ್ವಂ ನನುಯಸ್ಯ ಶೈಲ
ಬಾಲಸ್ಯ ವಾ ಕ್ರೀಡನಕಂ ವದಂತಿ ॥ ೩೬ ॥

---

೩೦. ಇಂತು ಪುತ್ರವಾತ್ಸಲ್ಯದಿಂದ ಶೋಕಾಕುಲಿತನಾಗಿ ಪತ್ನೀಸಹಿತನಾದ ಆ ಹಿಮವಂತನನ್ನು ಕುರಿತು ಸತ್ಯವಾಕ್ಯಗಳಿಂದ ಸಮಾಧಾನಪಡಿಸಲೋಸುಗ ಇಂತೆಂದೆನು.

೩೧–೩೨. "ಅಯ್ಯಾ ಪರ್ವತರಾಜನೆ! ಸಂತೋಷಪಡಬೇಕಾದ ಸಂದರ್ಭದಲ್ಲಿ ನೀನಿಂತು ಶೋಕಮಾಡಬಾರದು. ನಾನು ಹಿಂದೆ ಅರ್ಥಗರ್ಭಿತವಾಗಿ ಹೇಳಿದ ವಾಕ್ಯವನ್ನು ವಿವರಿಸುವೆನು ಕೇಳು. ಈ ನಿನ್ನ ಮಗಳು ಸಾಕ್ಷಾಜ್ಜಗನ್ಮಾತೆಯು. ಸಕಲರಿಗೂ ಇಷ್ಟಾರ್ಥಗಳನ್ನು ಕೊಡುವಳು. ಈಕೆಯೇ ಮುನ್ನಿನ ಜನ್ಮದಲ್ಲಿ ಸತಿಯೆಂಬ ಹೆಸರಿನಿಂದ ಮಹಾದೇವನಿಗೆ ಪತ್ನಿಯಾಗಿದ್ದಳು.

೩೩–೩೬. ಇಂತಹ ಜಗನ್ಮಾತೆಗೆ ನಾನೇನು ಕೊಟ್ಟರೂ ಸೂರ್ಯನಿಗೆ ದೀಪವನ್ನರ್ಪಿಸಿದಂತೆಯೇ ಸರಿ ಎಂದೆಣಿಸಿಯೇ ಈ ಮಹಾದೇವಿಗೆ ನಾನು ಯಾವ ಆಶೀರ್ವಾದವನ್ನೂ ಮಾಡಲಾರದಾದೆನು. ಈಕೆಯ ಪತಿಯು ಹುಟ್ಟಲಿಲ್ಲವೆಂದು ಹೇಳಿದೆನಲ್ಲವೆ. ಮಹಾರುದ್ರನೇ ಈಕೆಯ ಪತಿಯು. ತ್ರಿಕಾಲಗಳಲ್ಲಿಯೂ ಉಂಟಾಗುವ ಭೂತಗಳಿಗೆಲ್ಲ ಉತ್ಪತ್ತಿಸ್ಥಾನೀಯನಾದುದರಿಂದ ಆತನಿಗೆ ಜನ್ಮವೆಲ್ಲಿಯದು? ಆತನೇ ಲೋಕಶರಣ್ಯನು. ತ್ರಿಕಾಲಾಬಾಧ್ಯನು. ಜಗನ್ನಿಯಾಮಕನು. ಸುಖಕ್ಕೆ ಕಾರಣನಾದವನು. ಆತನೇ ಪರಮೇಶ್ವರನು. ಸಕಲದೇವತೆಗಳೂ ಆತನ ಪಾದಗಳನ್ನು ನಮಸ್ಕರಿಸುವರು. ಸಕಲ ವೇದಗಳಿಗೂ

**ಸ ಚಾಮಂಗಲ್ಯಶೀಲೋಽಪಿ ಮಂಗಳಾಯತನೋ ಹರಃ ।**
**ನಿರ್ಧನಃ ಸರ್ವದಶ್ಚಾಸೌ ವೇದ ಸ್ವಂ ಸ್ವಯಮೇವ ಸಃ ॥ ೫೮ ॥**
**ಸ ಚ ದೇವೋಽಚಲಃ ಸ್ಥಾಣುರ್ಮಹಾದೇವೋಽಜರೋ ಹರಃ ।**
**ಭವಿಷ್ಯತಿ ಪತಿಃ ಸೋಽಸ್ಯಾಸ್ತತ್ಕಿಮರ್ಥಂ ತು ಶೋಚಸಿ ॥ ೫೯ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ಕುಮಾರೇಶಮಾಹಾತ್ಮ್ಯೇ ಹಿಮವದಾಶ್ವಾಸನಂ" ನಾಮ ತ್ರಯೋವಿಂಶೋಽಧ್ಯಾಯಃ**

---

ಅಲಭ್ಯವಾದ ಮಹಿಮೆಯುಳ್ಳವನಾಗಿರುವನು. ಅಯ್ಯಾ ಪರ್ವತರಾಜನೇ! ಬ್ರಹ್ಮಾದಿ ಸ್ತಂಬಪರ್ಯಂತಗಳಾದ ಎಂಬತ್ತು ನಾಲ್ಕು ಲಕ್ಷ ಜೀವರಾಶಿಗಳನ್ನೊಳಕೊಂಡ ಬ್ರಹ್ಮಾಂಡವೆಲ್ಲವೂ ಆತನಿಗೆ ಲೀಲಾಕಂತುಕ (ಆಟದ ಚೆಂಡು) ವಾಗಿರುವುದು.

೫೮. ಆತನು ಅಮಂಗಳನಾಗಿ ಕಂಡರೂ ಕೂಡ ಸರ್ವಶುಭಗಳಿಗೂ ನಿಧಿಯಾಗಿರುವನು. ಸ್ವತಃ ದರಿದ್ರನಾದರೂ ಸಕಲರಿಗೂ ಅಭೀಷ್ಟಗಳನ್ನು ಕೊಡುವನು. ತನ್ನ ಮಹಿಮೆಯನ್ನು ತಾನು ಬಲ್ಲನೇ ಹೊರತು ಇತರರು ಆತನನ್ನು ಅರಿಯಲಾರರು.

೫೯. ಆ ದೇವನೇ ಶಾಶ್ವತನು. ನಿರ್ವಿಕಲ್ಪನು. ಮಹಾದೇವನು. ಜರಾಮರಣವರ್ಜಿತನು. ಭಕ್ತರ ಪಾಪಗಳನ್ನು ಪರಿಹರಿಸುವನು. ಆತನೇ ಈ ಕನ್ಯೆಗೆ ಪತಿಯಾಗುವನಾದುದರಿಂದ ನೀನು ಈ ವಿಚಾರದಲ್ಲಿ ದುಃಖಪಡಬೇಕಾದುದೇ ಇಲ್ಲವು."

**ಇಲ್ಲಿಗೆ ಎಂಭತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂಧಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ಕುಮಾರೇಶ ಮಾಹಾತ್ಮ್ಯ-ಹಿಮವದಾಶ್ವಾಸನ"ವೆಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

## ಅಥ ಚತುರ್ವಿಂಶೋಽಧ್ಯಾಯಃ

### ಕುಮಾರೀಶಮಾಹಾತ್ಮ್ಯೇ ಶಾಪವಚನಂ

ನಾರದ ಉವಾಚ :—

ಏವಂ ಶ್ರುತ್ವಾ ಸಭಾರ್ಯಃ ಸ ಪ್ರಮೋದಾಪ್ಲುತಮಾನಸಃ ।
ಪ್ರಣಮ್ಯ ಮಾಮಿತಿ ಪ್ರಾಹ ಯದ್ಯೇವಂ ಪುಣ್ಯವಾನಹಂ ॥ ೧ ॥
ಪುನಃ ಕಿಂಚಿತ್ಪ್ರವಕ್ಷ್ಯಾಮಿ ಪುತ್ರ್ಯಾ ಮೇ ದಕ್ಷಿಣಃ ಕರಃ ।
ಉತ್ತಾನಃ ಕಾರಣಂ ಕಿಂ ತಚ್ಛ್ರೋತುಮಿಚ್ಛಾಮಿ ನಾರದ ॥ ೨ ॥
ಇತಿ ಪೃಷ್ಟೋಽಸ್ಮಿ ಶೈಲೇನ ಪ್ರಾವೋಚಂ ಕಾರಣಂ ತದಾ ।
ಸರ್ವದೈವ ಕರೋ ಹ್ಯಸ್ಯಾಃ ಸರ್ವೇಷಾಂ ಪ್ರಾಣಿನಾಂ ಪ್ರತಿ ॥ ೩ ॥
ಅಭಯಸ್ಯ ಪ್ರದಾತಾಽಸಾವುತ್ತಾನಸ್ತು ಕರಸ್ತತಃ ।
ಏಷಾ ಭಾರ್ಯಾ ಜಗದ್ಭರ್ತುರ್ವೃಷಾಂಕಸ್ಯ ಮಹೀಧರ ।
ಜನನೀ ಸರ್ವಲೋಕಸ್ಯ ಭಾವಿನೀ ಭೂತಭಾವಿನೀ ॥ ೪ ॥

---

### ಕನ್ನಡದ ಅನುವಾದ

#### ಕುಮಾರೀಶ ಮಾಹಾತ್ಮ್ಯ— ಶಾಪವಚನ

೧. ನಾರದನು ಹೇಳುತ್ತಾನೆ:— ಭಾರ್ಯಾಸಹಿತನಾದ ಹಿಮವಂತನು ನನ್ನ ಮಾತುಗಳನ್ನು ಕೇಳಿ ಸಂತುಷ್ಟಾಂತರಂಗನಾಗಿ ನನ್ನನ್ನು ಕುರಿತು ಅಂತಾದರೆ ತಾನೇ ಭಾಗ್ಯವಂತನೆಂದು ಹೇಳಿದನು.

೨. "ಎಲೈ ನಾರದನೆ! ನಿನ್ನನ್ನು ಮತ್ತೊಂದು ವಿಷಯವನ್ನು ಕೇಳಲಿಚ್ಛಿಸುವೆನು. ಈ ನನ್ನ ಮಗಳ ಬಲಗೈಯು ಯಾವಾಗಲೂ ಮೇಲಕ್ಕೆ ಹಿಡಿದಿರಲು ಕಾರಣವೇನು?"

೩. ಇಂತೆಂದ ಪರ್ವತರಾಜನ ಮಾತುಗಳನ್ನು ಕೇಳಿ ಅದರ ಕಾರಣವನ್ನು ನಾನು ಹೇಳತೊಡಗಿದೆನು. "ಅಯ್ಯಾ ದೊರೆಯೆ! ಈಕೆಯ ದಕ್ಷಿಣ ಹಸ್ತವು ಸರ್ವಕಾಲದಲ್ಲಿಯೂ ಸಮಸ್ತ ಪ್ರಾಣಿಗಳಿಗೂ ಅಭಯವನ್ನು ನೀಡುವ ಹಸ್ತವಾದುದರಿಂದ ಅದು ಯಾವಾಗಲೂ ಅಭಯ ಮುದ್ರೆಯಲ್ಲಿಯೇ ಇರುವುದು.

೪. ಈಕೆಯು ಜಗನ್ನಾಯಕನೂ ವೃಷಭಧ್ವಜನೂ ಆದ ಮಹೇಶ್ವರನ ಮಹಿಷಿಯಾದವಳು. ಎಲೈ ಪರ್ವತೇಶ್ವರನೆ! ಈಕೆಯೇ ಸಮಸ್ತ ಲೋಕಗಳಿಗೂ ಮಾತೆಯಾದವಳು. ಈಕೆಯು ಸಮಸ್ತ ಭೂತಗಳಲ್ಲಿಯೂ ಅತ್ಯಂತ ಸುಂದರಳಾಗಿ ಬೆಳೆಯುವಳು. ಸರ್ವಭೂತಸಂಮಾನ್ಯಳು.

ತದ್ಯಥಾ ಶೀಘ್ರಮೇವೈಷಾ ಯೋಗಂ ಯಾತು ಪಿನಾಕಿನಾ ॥ ೫ ॥
ತ್ವಯಾ ವಿಧೇಯಂ ವಿಧಿವತ್ತಥಾ ಶೈಲೇಂದ್ರಸತ್ತಮ ।
ಅಸ್ಯತ್ರ ಸುಮಹತ್ಕಾರ್ಯಂ ದೇವಾನಾಂ ಹಿಮಭೂಧರ ॥ ೬ ॥
ಇತಿ ಪ್ರೋಚ್ಯ ತಮಾಪೃಚ್ಛ್ಯ ಪ್ರಾವೋಚಂ ವಾಸವಾಯ ತತ್ ।
ಮಮ ಭೂಯಸ್ತು ಕರ್ತವ್ಯಂ ತನ್ಮಯಾ ಕೃತಮೇವಹಿ ॥ ೭ ॥
ಕಿಂತು ಪಂಚಶರಃ ಪ್ರೇರ್ಯಃ ಕಾರ್ಯಶೇಷೇಽತ್ರ ವಾಸವ ।
ಇತ್ಯಾದಿಶ್ಯ ಗತಶ್ಚಾಹಂ ತಾರಕಂ ಪ್ರತಿ ಫಾಲ್ಗುನ ॥ ೮ ॥
ಕಲಿಪ್ರಿಯತ್ವಾತ್ತಸ್ಯೈನಮರ್ಥಂ ಕಥಯಿತುಂ ಸ್ಫುಟಂ ।
ಹಿಮಾದ್ರಿರಪಿ ಮೇ ವಾಕ್ಯಾತ್ಪ್ರೇರಿತಃ ಪಾರ್ವತೀಂ ಪ್ರತಿ ॥ ೯ ॥
ಭವಸ್ಯಾರಾಧನಾಂ ಕರ್ತುಂ ಸಸಖೀಮಾದಿಶತ್ತಥಾ ।
ಸಾ ತಂ ಪರಿಚಚಾರೇಶಂ ತಸ್ಯಾ ದೃಷ್ಟ್ವಾ ಸುಶೀಲತಾಂ ।
ಪುಷ್ಪತೋಯಫಲಾದೀನಿ ನಿಯುಕ್ತಾ ಪಾರ್ವತೀ ವ್ಯಧಾತ್ ॥ ೧೦ ॥

---

೫–೬. ಆದುದರಿಂದ ಶೀಘ್ರವಾಗಿಯೇ ಈಕೆಯು ಮಹಾದೇವನೊಡನೆ ಸಮಾಗಮವನ್ನು ಎಂತು ಹೊಂದುವಳೊ ಅಂತಹ ಪ್ರಯತ್ನವನ್ನು ನೀನು ಮಾಡಬೇಕು. ಈ ಕೆಲಸವನ್ನು ನೀನು ವಿಧಿವತ್ತಾಗಿ ಮಾಡುವುದರಿಂದ ದೇವತೆಗಳಿಗಾಗಬೇಕಾದ ಮಹತ್ಕಾರ್ಯವೊಂದು ನಡೆದಂತಾಗುವುದು.''

೭. ಇಂತೆಂದು ನಾನು ಆತನನ್ನು ಬೀಳ್ಕೊಂಡು ಬಂದು ಮಹೇಂದ್ರನಿಗೆ ನಡೆದುದೆಲ್ಲವನ್ನೂ ನಿರೂಪಿಸಿ "ಅಯ್ಯಾ! ನನ್ನಿಂದಾಗಬೇಕಾದ ಕಾರ್ಯವನ್ನು ನಾನು ಸಾಂಗವಾಗಿ ನೆರವೇರಿಸಿರುವೆನು.

೮. ಇನ್ನು ಉಳಿದ ಕಾರ್ಯದ ಸಿದ್ಧಿಗಾಗಿ ನೀನು ಮನ್ಮಥನನ್ನು ಪ್ರೇರೇಪಿಸುವನಾಗು.'' ಇಂತೆಂದು ಆದೇಶವನ್ನು ಮಾಡಿ ಕಲಹ ಪ್ರಿಯನಾದ ನಾನು ಈ ಸರ್ವಸ್ವವನ್ನೂ ತಾರಕಾಸುರನಿಗೆ ವಿಶದವಾಗಿ ತಿಳಿಸಲು ಹೊರಡುವವನಾದೆನು.

೯. ಹಿಮವಂತನೂ ಸಹ ನನ್ನ ವಾಕ್ಯಗಳಿಂದ ಪ್ರೇರಿತನಾಗಿ ಮಹಾದೇವನ ಆರಾಧನೆಯನ್ನೆಸಗಲು ಪಾರ್ವತಿಯನ್ನು ನಿಯಮಿಸಿ ಆಕೆಯ ಸಹಾಯಕ್ಕೆ ಒಬ್ಬ ಸಖಿಯನ್ನು ಕಳುಹಿಸಿದನು.

೧೦. ಪಾರ್ವತಿಯೂ ಮಹೇಶ್ವರನನ್ನು ಭಕ್ತಿಯುಕ್ತಳಾಗಿ ಪರಿಚರಿಸುತ್ತಿರಲು ಆತನು ಆಕೆಯ ಸೌಶೀಲ್ಯಕ್ಕೆ ಮೆಚ್ಚಿದವನಾಗಿ ಆಕೆಯನ್ನು ಫಲ ಪುಷ್ಪ ಜಲಾದಿಗಳನ್ನು ಸಂಗ್ರಹಿಸುವುದರಲ್ಲಿ ನಿಯೋಜಿಸಿದನು. ಆ ಕೆಲಸವನ್ನೇ ಆಕೆಯು ಮಾಡುತ್ತಿದ್ದಳು.

ಮಹೇಂದ್ರೋಽಪಿ ಚ ಮದ್ವಾಕ್ಯಾತ್ಸ್ಮರಂ ಸಸ್ಮಾರ ಭಾರತ ॥ ೧೧ ॥
ಸ ಚ ತತ್ಸ್ಮರಣಂ ಜ್ಞಾತ್ವಾ ವಸಂತರತಿಸಂಯುತಃ ।
ಚೂತಾಂಕುರಾಸ್ತ್ರಃ ಸಹಸಾ ಪ್ರಾದುರಾಸೀನ್ಮನೋಭವಃ ॥ ೧೨ ॥
ತಮಾಹ ಚ ವಚೋ ಧೀಮಾನ್ಸ್ಮಯನ್ನಿವ ಚ ತಂ ಸ್ಪೃಶನ್
ಉಪದೇಶೇನ ಬಹುನಾ ಕಿಂ ತ್ವಾಂ ಪ್ರತಿ ರತಿಪ್ರಿಯ ॥ ೧೩ ॥
ಚಿತ್ತೇ ವಸಸಿ ತೇನ ತ್ವಂ ವೇತ್ಸಿ ಭೂತಮನೋಗತಂ ।
ತಥಾಪಿ ತ್ವಾಂ ವದಿಷ್ಯಾಮಿ ಸ್ವಕಾರ್ಯಪರತಾಂ ಸ್ಮರನ್ ॥ ೧೪ ॥
ಮಮೈಕಂ ಸುಮಹತ್ಕಾರ್ಯಂ ಕರ್ತುಮರ್ಹಸಿ ಮನ್ಮಥ ।
ಮಹೇಶ್ವರಂ ಕೃಪಾನಾಥಂ ಸತೀಭಾರ್ಯಾವಿಯೋಜಿತಂ ॥ ೧೫ ॥
ಸಂಯೋಜಯ ಪುನರ್ದೇವ್ಯಾ ಹಿಮಾದ್ರಿಗೃಹಜಾತಯಾ ।
ದೇವೀ ದೇವಶ್ಚ ತುಷ್ಟೌ ತೇ ಕರಿಷ್ಯತ ಇಹೇಪ್ಸಿತಂ ॥ ೧೬ ॥

ಮದನ ಉವಾಚ:—

ಅಲೀಕಮೇತದ್ದೇವೇಂದ್ರ ಸ ಹಿ ದೇವಸ್ತ್ರಪೋರತಃ ।
ನಾನ್ಯಾಸಾದಯಿತವ್ಯಾನಿ ತೇಜಾಂಸಿ ಮುಹುರಬ್ರವೀತ್ ॥ ೧೭ ॥

---

೧೧–೧೩. ಮಹೇಂದ್ರನೂ ನನ್ನ ವಾಕ್ಯಗಳಿಂದ ಚೋದಿತನಾಗಿ ಮನ್ಮಥನನ್ನು ಸ್ಮರಿಸಲು ಅದನ್ನು ತಿಳಿದು ಮನೋಭವನು ವಸಂತ ಮತ್ತು ರತಿಯೊಡನೆ ಮಾವಿನ ಚಿಗುರಿನ ಅಸ್ತ್ರವನ್ನು ಕೈಗೊಂಡವನಾಗಿ ಶೀಘ್ರವಾಗಿಯೇ ಅಲ್ಲಿಗೆ ಬಂದನು. ಬುದ್ಧಿವಂತನಾದ ಮಹೇಂದ್ರನು ಅತನನ್ನು ಕಂಡು ಮುಗುಳ್ನಗೆಯೊಡಗೂಡಿ ಮೈದಡವುತ್ತ "ಅಯ್ಯಾ ರತಿವಲ್ಲಭನೆ! ನಿನಗೆ ಹೆಚ್ಚಾಗಿ ಉಪದೇಶವನ್ನು ಮಾಡಿದುದರಿಂದ ಆಗಬೇಕಾದುದೇನು?

೧೪. ನೀನು ಎಲ್ಲರ ಮನಸ್ಸಿನಲ್ಲಿಯೂ ವಾಸಮಾಡುವವನಾದುದರಿಂದ ಎಲ್ಲರ ಮನಸ್ಸಿನ ಯೋಚನೆಗಳನ್ನೂ ತಿಳಿದೇ ಇರುವೆ. ಹಾಗಾದರೂ ನಮ್ಮ ಕಾರ್ಯಗೌರವವನ್ನು ನೆನಸಿಕೊಂಡು ಈಗ ನಿನಗೆ ಹೇಳಲೆಳಸುವೆನು.

೧೫–೧೬. ಎಲೈ ಮನ್ಮಥನೆ! ನೀನು ನನಗೊಂದು ಮಹತ್ಕಾರ್ಯವನ್ನು ಮಾಡಬೇಕಾಗಿರುವುದು. ಪತ್ನಿಯಾದ ಸತೀದೇವಿಯಿಂದ ವಿರಹಿತನಾಗಿರುವ ಕೃಪಾಸಾಗರನಾದ ಮಹಾದೇವನನ್ನು ಹಿಮವಂತನ ಗೃಹದಲ್ಲಿ ಮತ್ತೆ ಅವತರಿಸಿರುವ ದೇವಿಯೊಡನೆ ಸೇರುವಂತೆ ಮಾಡಬೇಕು. ಆಗ ಪಾರ್ವತಿಯೂ ಪರಮೇಶ್ವರನೂ ಸಂತುಷ್ಟರಾಗಿ ನಮ್ಮ ಇಷ್ಟಾರ್ಥವನ್ನು ನಡೆಸಿಕೊಡುವರು."

೧೭. ಮನ್ಮಥನು ಹೇಳುತ್ತಾನೆ:—"ಎಲೈ ದೇವೇಂದ್ರನೆ! ನಿನ್ನ ಮಾತುಗಳು ಶುದ್ಧ ಮೋಸದಿಂದೊಡಗೂಡಿರುವುವು. ಮಹೇಶ್ವರನು ಯಾವಾಗಲೂ

**ವೇದಾಂತೇಷು ಚ ಮಾಂ ವಿಪ್ರಾ ಗರ್ಹಯಂತಿ ಪುನಃ ಪುನಃ ।**
**ಮಹಾಶನೋ ಮಹಾಪಾಪ್ಮಾ ಕಾಮೋಽಯಮನಲೋ ಮಹಾನ್ ॥ ೧೮ ॥**
**ಆವೃತಂ ಜ್ಞಾನಮೇತೇನ ಜ್ಞಾನಿನಾಂ ನಿತ್ಯವೈರಿಣಾ ।**
**ತಸ್ಮಾದಯಂ ಸದಾ ತ್ಯಾಜ್ಯಃ ಕಾಮೋಽಹಿರಿವ ಸತ್ತಮೈಃ ॥ ೧೯ ॥**
**ಏವಂ ಶೀಲಸ್ಯ ಮೇ ಕಸ್ಮಾತ್ಪ್ರತುಷ್ಯತಿ ಮಹೇಶ್ವರಃ ।**
**ಮದನಸ್ಯೇವ ಪಾಪಸ್ಯ ವಾಸುದೇವೋ ಜಗದ್ಗುರುಃ ॥ ೨೦ ॥**

ಇಂದ್ರ ಉವಾಚ :—

**ಮೈವಂ ಬ್ರೂಹಿ ಮಹಾಭಾಗ ತ್ವಾಂ ವಿನಾ ಕಃ ಪುಮಾನ್ಭುವಿ ।**
**ಧರ್ಮಮರ್ಥಂ ತಥಾ ಕಾಮಂ ಮೋಕ್ಷಂ ವಾ ಪ್ರಾಪ್ತುಮೀಶ್ವರಃ ॥ ೨೧ ॥**
**ಯತ್ಕಿಂಚಿತ್ಸಾಧ್ಯತೇ ಲೋಕೇ ಮೂಲಂ ತಸ್ಯ ಚ ಕಾಮನಾ ।**
**ಕಥಂ ಕಾಮಂ ವಿನಿಂದಂತಿ ತಸ್ಮಾತ್ತೇ ಮೋಕ್ಷಸಾಧಕಾಃ ॥ ೨೨ ॥**

---

ತಪೋನಿರತನಾಗಿರುವನು. ಆತನ ತೇಜಸ್ಸನ್ನು ಇತರರು ಯಾರೂ ವಿಮುಖ ಮಾಡಲಾರರೆಂದು ಮನುವೇ ಹೇಳಿರುವನು.

೧೮. ಬ್ರಾಹ್ಮಣರೂ ಸಹ ವೇದಾಂತ ಶಾಸ್ತ್ರಗಳಲ್ಲಿ ನನ್ನನ್ನು ಬಹು ವಿಧಗಳಾಗಿ ನಿಂದಿಸಿರುವರು. 'ಈ ಕಾಮವೆಂಬ ಮಹಾ ದಾವಾಗ್ನಿಯು ಸರ್ವ ಭಕ್ಷಕವೂ ಮಹಾ ಪಾಪಕಾರಕವೂ ಆಗಿರುವುದು.

೧೯. ಶಾಶ್ವತ ವೈರಿಯಾದ ಈ ಕಾಮದಿಂದ ಜ್ಞಾನಿಗಳ ಬುದ್ಧಿಶಕ್ತಿಯೂ ಕೂಡ ಆವರಿಸಲ್ಪಟ್ಟಿರುವುದು. ಆದುದರಿಂದ ಉತ್ತಮರಾದವರು ಇದನ್ನು ದುಷ್ಟಸರ್ಪದಂತೆ ಯಾವಾಗಲೂ ತ್ಯಜಿಸಬೇಕು.'

೨೦. ಇಂತಹ ಶೀಲವೃತ್ತಗಳುಳ್ಳ ನನ್ನಲ್ಲಿ ಎಂದಾದರೂ ಮಹಾದೇವನು ಸಂತೋಷಗೊಳ್ಳುವನೆ? ಸುರಾಪಾನವನ್ನು ಮಾಡುವ ನೀಚನಲ್ಲಿ ಜಗದ್ಗುರುವಾದ ಮಹಾವಿಷ್ಣುವು ಎಂದಾದರೂ ಪ್ರೀತನಾಗುವನೆ?"

೨೧. ಇಂದ್ರನು ಹೇಳುತ್ತಾನೆ:— "ಅಯ್ಯಾ ಮಹಾನುಭಾವನೆ! ನೀನಿಂತು ಮಾತಾಡಬಾರದು. ನೀನಲ್ಲದೆ ಲೋಕದಲ್ಲಿ ಪೌರುಷವಂತನಾವನಿರುವನು? ನೀನೇ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳನ್ನು ದೊರಕಿಸಲು ಸಮರ್ಥನಾಗಿರುವವನು.

೨೨. ಲೋಕದಲ್ಲಿ ಯಾವ ಕಿಂಚಿತ್ಕಾರ್ಯವನ್ನು ಮಾಡಬೇಕಾದರೂ ಅದಕ್ಕೆ ಕಾಮನೆಯೆಂಬುದೇ ಮೂಲವಾಗಿರುವುದು. ಆದುದರಿಂದ ಮೋಕ್ಷದ [illegible] ಫಲವಾದುದರಿಂದ ಅದರ ಅಪೇಕ್ಷೆಯುಳ್ಳವರಾದರೂ ಕಾಮ [illegible] ನಿಂದಿಸಬಹುದು?

ಸತ್ಯಂ ಚಾಪಿ ಶ್ರುತೇರ್ವಾಕ್ಯಂ ತವ ರೂಪಂ ತ್ರಿಧಾಗತಂ ।
ತಾಮಸಂ ರಾಜಸಂ ಚೈವ ಸಾತ್ವಿಕಂ ಚಾಪಿ ಮನ್ಮಥ ॥ ೨೩ ॥
ಅಮುಕ್ತಿತಃ ಕಾಮನಯಾ ರೂಪಂ ತತ್ತಾಮಸಂ ತವ ।
ಸುಖಬುದ್ಧ್ಯಾ ಸ್ಪೃಹಾ ಯಾ ಚ ರೂಪಂ ತದ್ರಾಜಸಂ ತವ ॥ ೨೪ ॥
ಕೇವಲಂ ಯಾವದರ್ಥಾರ್ಥಂ ತದ್ರೂಪಂ ಸಾತ್ವಿಕಂ ತವ ।
ತತ್ತೇ ರೂಪತ್ರಯಮಿದಂ ಬ್ರೂಹಿ ನೋಪಾಸತೇ ಹಿ ಕೇ ॥ ೨೫ ॥
ತ್ವಂ ಸಾಕ್ಷಾತ್ಪರಮಃ ಪೂಜ್ಯಃ ಕುರು ಕಾರ್ಯಮಿದಂ ಹಿ ನಃ ।
ಅಥವಾ ಪೀಡಿತಾನ್ದೃಷ್ಟ್ವಾ ಸಾಮಾನ್ಯಾನಪಿ ಪಂಡಿತಾಃ ।
ಸ್ವಪ್ರಾಣೈರಪಿ ತ್ರಾಯಂತಿ ಪರಮೇತನ್ಮಹಾಫಲಂ ॥ ೨೬ ॥
ಇತಿ ಸಂಚಿಂತ್ಯ ಕಾರ್ಯಂ ತ್ವಂ ಸರ್ವಥಾ ಕುರು ತತ್ಸ್ಫುಟಂ ॥ ೨೭ ॥
ಇತ್ಯಾಕರ್ಣ್ಯ ತಥೇತ್ಯುಕ್ತ್ವಾ ವಸಂತರತಿಸಂಯುತಃ ।
ಪಿಕಾದಿಸೈನ್ಯಸಂಪನ್ನೋ ಹಿಮಾದ್ರಿಂ ಪ್ರಯಯೌ ಸ್ಮರಃ ॥ ೨೮ ॥

---

೨೩. ಎಲೈ ಮನ್ಮಥನೆ! ವೇದವಾಕ್ಯವು ಸತ್ಯಸ್ವರೂಪವಾದುದು. ಆದರಲ್ಲಿ ನಿನ್ನ ರೂಪವು ಸಾತ್ವಿಕ, ರಾಜಸ, ತಾಮಸಗಳೆಂಬ ಮೂರು ವಿಧಗಳುಳ್ಳುದೆಂದು ಹೇಳಲ್ಪಟ್ಟಿರುವುದು.

೨೪. ಮೋಚನೋಪಾಯವೇ ಇಲ್ಲದೆ ಇರುವ ಇಚ್ಛೆಯೇ ನಿನ್ನ ತಾಮಸ ರೂಪವು. ವಿಷಯಗಳಲ್ಲಿ ಸುಖಬುದ್ಧಿಯಿಂದುಂಟಾಗುವ ಇಚ್ಛೆಯು ನಿನ್ನ ರಾಜಸ ರೂಪವು.

೨೫. ಯದೃಚ್ಛೆಯಿಂದ ಲಬ್ಧಗಳಾದ ಪದಾರ್ಥಗಳಲ್ಲಿ ಕೇವಲ ನಿರಪೇಕ್ಷತೆಯಿಂದ ಅನುಭವಿಸಿದುದೇ ನಿನ್ನ ಸಾತ್ವಿಕ ಸ್ವರೂಪವು. ಇಂತಹ ನಿನ್ನ ಮೂರು ರೂಪಗಳನ್ನು ಯಾರು ತಾನೆ ಸೇವಿಸುವುದಿಲ್ಲ?

೨೬. ನೀನೇ ಪೂಜ್ಯರೆಲ್ಲರಲ್ಲಿಯೂ ಉತ್ತಮೋತ್ತಮನು. ನೀನು ಈ ಕಾರ್ಯವನ್ನು ನಮಗಾಗಿ ಮಾಡಲೇಬೇಕು. ಅಲ್ಲದೆ ಸಾಮಾನ್ಯ ಪುರುಷರು ಕಷ್ಟಗಳಿಂದ ಪೀಡಿತರಾಗಿರುವುದನ್ನು ಕಂಡು ಪ್ರಾಜ್ಞರಾದವರು ಅವರನ್ನು ತಮ್ಮ ಪ್ರಾಣಗಳಿಂದಾದರೂ ಸಂರಕ್ಷಿಸುವರು. ಇದು ಉತ್ತಮ ಫಲದಾಯಕವಾಗಿರುವುದು.

೨೭. ಇದನ್ನಾದರೂ ಮನಸ್ಸಿಗೆ ತಂದುಕೊಂಡು ಈ ಕಾರ್ಯವನ್ನು ನೀನು ಸರ್ವಪ್ರಯತ್ನದಿಂದಲೂ ಸಾಧಿಸಬೇಕು.''

೨೮. ಈ ಮಾತುಗಳನ್ನು ಕೇಳಿ ಮನ್ಮಥನು ಒಪ್ಪಿಕೊಂಡು ಸ್ನೇಹಿತನಾದ ವಸಂತನಿಂದಲೂ, ಪತ್ನಿಯಾದ ರತಿಯಿಂದಲೂ ಕೂಡಿ ಶುಕಪಿಕಗಳೇ ಮೊದಲಾದ ತನ್ನ ಸೈನ್ಯಗಳನ್ನೆಲ್ಲ ಸೇರಿಸಿಕೊಂಡು ಹಿಮವತ್ಪರ್ವತವನ್ನು ಕುರಿತು ಹೊರಟನು.

ತತ್ರಾಪಶ್ಯತ ಶಂಭೋಃ ಸ ಪುಣ್ಯಮಾಶ್ರಮಮಂಡಲಂ ।
ನಾನಾವೃಕ್ಷಸಮಾಕೀರ್ಣಂ ಶಾಂತಸತ್ವಸಮಾಕುಲಂ ॥ ೨೯ ॥
ತತ್ರಾಪಶ್ಯತ್ತ್ರಿಣೇತ್ರಸ್ಯ ವೀರಕಂ ನಾಮ ದ್ವಾರಪಂ ।
ಯಥಾ ಸಾಕ್ಷಾನ್ಮಹೇಶಾನಂ ಗಣಾಂಶ್ಚಾಯುತಶೋಽಸ್ಯ ಚ ॥ ೩೦ ॥
ದದರ್ಶ ಚ ಮಹೇಶಾನಂ ನಾಸಾಗ್ರಕೃತಲೋಚನಂ ।
ದೇವದಾರುದ್ರುಮಚ್ಛಾಯಾವೇದಿಕಾಮಧ್ಯಮಾಶ್ರಿತಂ ।
ಸಮಕಾಯಂ ಸುಖಾಸೀನಂ ಸಮಾಧಿಸ್ಥಂ ಮಹೇಶ್ವರಂ ॥ ೩೧ ॥
ನಿಸ್ತರಂಗಂ ವಿನಿರ್ಗೃಹ್ಯ ಸ್ಥಿತಮಿಂದ್ರಿಯಗೋಚರಾನ್ ।
ಆತ್ಮಾನಮಾತ್ಮನಾ ದೇವಂ ಪ್ರವಿಷ್ಟಂ ತಪಸೋ ನಿಧಿಂ ॥ ೩೨ ॥
ತಂ ತಥಾವಿಧಮಾಲೋಕ್ಯ ಸೋಽಂತರ್ಭೇದಾಯ ಯತ್ನವಾನ್ ।
ಭ್ರಮರಧ್ವನಿವ್ಯಾಜೇನ ವಿವೇಶ ಮದನೋ ಮನಃ ॥ ೩೩ ॥
ಏತಸ್ಮಿನ್ನಂತರೇ ದೇವೋ ವಿಕಾಸಿತವಿಲೋಚನಃ ।
ಸಸ್ಮಾರ ನಗರಾಜಸ್ಯ ತನಯಾಂ ರಕ್ತಮಾನಸಃ ॥ ೩೪ ॥

---

೨೯. ಅಲ್ಲಿ ಅನೇಕ ವೃಕ್ಷಗಳಿಂದೊಡಗೂಡಿದುದೂ, ಪ್ರಶಾಂತಗಳಾದ ಮೃಗಗಳಿಂದ ರಮ್ಯವಾದುದೂ ಆದ ಆಶ್ರಮದ ಪುಣ್ಯಪ್ರದೇಶವನ್ನು ಕಂಡನು.

೩೦. ಸಮೀಪದಲ್ಲಿಯೇ ಸಾಕ್ಷಾದ್ರುದ್ರನಂತೆ ಕಂಗೊಳಿಸುತ್ತಿರುವ ವೀರಕನೆಂಬ ಮಹೇಶ್ವರನ ದ್ವಾರಪಾಲಕನನ್ನೂ ಸಾವಿರಾರು ಪ್ರಮಥಗಣಗಳನ್ನೂ ಕಂಡನು.

೩೧. ಅಲ್ಲಿಯೇ ನಾಸಾಗ್ರದಲ್ಲಿ ನಟ್ಟ ದೃಷ್ಟಿಯುಳ್ಳವನಾಗಿ ಮಹೇಶ್ವರನು ಒಂದು ದೇವದಾರು ವೃಕ್ಷದ ನೆರಳಿನಲ್ಲಿ ಜಗುಲಿಯ ಮಧ್ಯವನ್ನಾಶ್ರಯಿಸಿ ಅಚಲವಾದ ಶರೀರದಿಂದ ಸುಖಾಸನದಲ್ಲಿ ಮಂಡಿಸಿ ಸಮಾಧಿಸ್ಥನಾಗಿದ್ದುದನ್ನೂ ಆ ಮನ್ಮಥನು ಕಂಡನು.

೩೨. ಮಹಾದೇವನಾದರೊ ಇಂದ್ರಿಯಗಳನ್ನೂ ತದ್ವಿಷಯಕಗಳಾದ ಬಾಹ್ಯ ಪದಾರ್ಥಗಳನ್ನೂ ನಿಗ್ರಹಿಸಿದವನಾಗಿ ನಿಶ್ಚಂಚಲವಾದ ಮನಸ್ಸಿನಿಂದ ಕುಳಿತು ತನ್ನ ಆತ್ಮನಿಂದಲೇ ಪರಮಾತ್ಮನಲ್ಲಿ ಐಕ್ಯಭಾವವನ್ನು ಹೊಂದಿದವನಾಗಿ ಕೇವಲ ತಪಸ್ಸಿನ ನಿಧಿಯಾಗಿಯೇ ಇದ್ದನು.

೩೩. ಇಂತಿರುವ ಮಹಾದೇವನನ್ನು ಕಂಡು ಮನ್ಮಥನು ಆತನ ಮನಸ್ಸನ್ನು ಚಂಚಲಗೊಳಿಸುವವನಾಗಿ ಪ್ರಯತ್ನ ಪೂರ್ವಕವಾಗಿ ದುಂಬಿಗಳ ಝೇಂಕಾರಧ್ವನಿಯೆಂಬ ನೆವದಿಂದ ಆತನ ಮನಸ್ಸನ್ನು ಹೊಕ್ಕನು.

೩೪. ಇಷ್ಟರಲ್ಲಿಯೇ ಆ ದೇವದೇವನು ಕಣ್ಣುಗಳನ್ನು ತೆರೆದವನಾಗಿ ಮನಸ್ಸಿನ ಅಭಿಲಾಷೆಯಿಂದ ಪರ್ವತರಾಜನ ಕುವರಿಯನ್ನು ಸ್ಮರಿಸಿಕೊಂಡನು.

ನಿವೇದಿತಾ ವೀರಕೇಣ ವಿವೇಶ ಚ ಗಿರೇಃ ಸುತಾ ।
ತಸ್ಮಿನ್ಕಾಲೇ ಮಹಾಭಾಗಾ ಸದಾ ಯದ್ವದುಪೈತಿ ಸಾ ॥ ೩೫ ॥
ತತಸ್ತಸ್ಯಾ ಮನಃ ಸ್ವೀಯಮನುರಕ್ತಮವೇಕ್ಷ್ಯ ಸಃ ।
ನಿಗೃಹ್ಯ ಲೀಲಯಾ ದೇವಃ ಸ್ವಕಂ ಪೃಷ್ಠಮವೈಕ್ಷತ ।
ತಾವದಾಪೂರ್ಣಧನುಷಮಪಶ್ಯತ ರತಿಪ್ರಿಯಂ ॥ ೩೬ ॥
ತನ್ನಾಶಕೃಪಯಾ ದೇವೋ ನಾನಾಸ್ಥಾನೇಷು ಸೋಽಗಮತ್ ।
ತಾವತ್ಪಶ್ಯತಿ ಪೃಷ್ಠಸ್ಥಮಾಕೃಷ್ಯ ಧನುಷಃ ಶರಂ ॥ ೩೭ ॥
ಸ ನದೀಃ ಪರ್ವತಾಂಶ್ಚೈವ ಆಶ್ರಮಾನ್ಸರಸೀಸ್ತಥಾ ।
ಪರಿಭ್ರಮನ್ಮಹಾದೇವಃ ಪೃಷ್ಠಸ್ಥಂ ತಮವೈಕ್ಷತ ॥ ೩೮ ॥
ಜಗತ್ತ್ರಯಂ ಪರಿಭ್ರಮ್ಯ ಪುನರಾಗಾತ್ಸ್ವಮಾಶ್ರಮಂ ।
ಪೃಷ್ಠಸ್ಥಮೇವ ತಂ ವೀಕ್ಷ್ಯ ನಿಃಶ್ವಾಸಂ ಮುಮುಚೇ ಹರಃ ॥ ೩೯ ॥
ತತಸ್ತೃತೀಯನೇತ್ರೋತ್ಥವಹ್ನಿನಾ ನಾಕವಾಸಿನಾಂ ।
ಕ್ರೋಶತಾಂ ಗಮಿತಃ ಕಾಮೋ ಭಸ್ಮತ್ವಂ ಪಾಂಡುನಂದನ ॥ ೪೦ ॥

---

೩೫. ಆ ಕಾಲದಲ್ಲಿಯೇ ವೀರಕನಿಂದ ನಿವೇದಿತಳಾಗಿ ಮಹಾತ್ಮಳಾದ ಗಿರಿಜೆಯೂ ಎಂದಿನಂತೆಯೇ ಆಶ್ರಮವನ್ನು ಪ್ರವೇಶಿಸಿದಳು.

೩೬. ಆಗ ಶಿವನು ಆಕೆಯಲ್ಲಿ ಅನುರಕ್ತವಾಗಿದ್ದ ತನ್ನ ಮನಸ್ಸನ್ನು ತಿಳಿದು ಅನಾಯಾಸವಾಗಿಯೇ ಅದನ್ನು ನಿಗ್ರಹಿಸಿ ತನ್ನ ಹಿಂದುಗಡೆ ನೋಡಿದನು. ಅಲ್ಲಿಯೇ ಕಾಮದೇವನು ಸಜ್ಜಿತವಾದ ಪುಷ್ಪಧನುಸ್ಸಿನಿಂದೊಡಗೂಡಿದವನಾಗಿ ನಿಂತಿದ್ದನು.

೩೭. ಆತನನ್ನು ನಾಶಮಾಡಬಾರದೆಂದು ಕೃಪಾಪೂರ್ಣನಾಗಿ ಈಶ್ವರನು ಅನೇಕ ಸ್ಥಳಗಳಲ್ಲಿ ಸಂಚರಿಸತೊಡಗಿದನು. ಎಲ್ಲೆಲ್ಲಿಯೂ ಪುಷ್ಪಧನುಸ್ಸಿನಲ್ಲಿ ಬಾಣವನ್ನು ತೊಟ್ಟಿರುವ ಮನ್ಮಥನೇ ಹಿಂಬಾಲಿಸುತ್ತಿರುವುದನ್ನು ಕಂಡನು.

೩೮. ಆಗ ಅನೇಕ ನದಿಗಳನ್ನೂ, ಪರ್ವತಗಳನ್ನೂ, ಆಶ್ರಮಗಳನ್ನೂ, ಸರೋವರಗಳನ್ನೂ ಸುತ್ತಿದರೂ ಮನ್ಮಥನು ಮಹಾದೇವನನ್ನು ಹಿಂಬಾಲಿಸುತ್ತಲೇ ಇದ್ದನು.

೩೯. ಇಂತು ಮೂರುಲೋಕಗಳನ್ನೂ ಸುತ್ತಿ ಸುತ್ತಿ ತನ್ನ ಆಶ್ರಮಕ್ಕೆ ಬರಲು ಅಲ್ಲಿಯೂ ಮನ್ಮಥನು ಹಿಂಬಾಲಿಸಿದುದನ್ನು ಕಂಡು ರುದ್ರನು ನಿಟ್ಟುಸಿರನ್ನು ಬಿಟ್ಟನು.

೪೦. ಎಲೈ ಅರ್ಜುನನೇ! ಆಗ ಶಿವನು ಕೋಪದಿಂದ ತನ್ನ ಫಾಲನೇತ್ರದ ಬೆಂಕಿಯಿಂದ ಕಾಮನನ್ನು ಕ್ಷಣಮಾತ್ರದಲ್ಲಿಯೇ ಭಸ್ಮೀಭೂತನನ್ನಾಗಿ ಮಾಡಲು ಸಕಲ ದೇವತೆಗಳೂ ಹಾಹಾಕಾರವನ್ನು ಮಾಡಿದರು.

ಸ ತು ತಂ ಭಸ್ಮಸಾತ್ಕೃತ್ವಾ ಹರನೇತ್ರೋದ್ಭವೋಽನಲಃ ।
ವ್ಯಜೃಂಭತ ಜಗದ್ದಗ್ಧುಂ ಜ್ವಾಲಾಪೂರಿತದಿಙ್ಮುಖಃ ॥ ೪೧ ॥
ತತೋ ಭವೋ ಜಗದ್ಧೇತೋರ್ವ್ಯಭಜಜ್ಜಾತವೇದಸಂ ।
ಸಾಹಂಕಾರೇ ಜನೇ ಚಂದ್ರೇ ಸುಮನಸ್ಸು ಚ ಗೀತಕೇ ॥ ೪೨ ॥
ಭೃಂಗೇಷು ಕೋಕಿಲಾಸ್ಯೇಷು ವಿಹಾರೇಷು ಸ್ಮರಾನಲಂ ।
ತತ್ಪ್ರಾಪ್ತೌ ಸ್ನೇಹಸಂಯುಕ್ತಂ ಕಾಮಿನಾಂ ಹೃದಯಂ ಕಿಲ ॥ ೪೩ ॥
ಜ್ವಾಲಯತ್ಯನಿಶಂ ಸೋಽಗ್ನಿರ್ದುಶ್ಚಿಕಿತ್ಸ್ಯೋಽಸುಖಾವಹಃ ।
ವಿಲೋಕ್ಯ ಹರನೇತ್ರಾಗ್ನಿಜ್ವಾಲಾಭಸ್ಮೀಕೃತಂ ಸ್ಮರಂ ॥ ೪೪ ॥
ವಿಲಲಾಪ ರತಿರ್ದೀನಾ ಮಧುನಾ ಬಂಧುನಾ ಸಹ ।
ವಿಲಪಂತೀ ಸುಬಹುಶೋ ಮಧುನಾ ಪರಿಸಾಂತ್ವಿತಾ ॥ ೪೫ ॥
ರತ್ಯಾಃ ಪ್ರಲಾಪಮಾಕರ್ಣ್ಯ ದೇವದೇವೋ ವೃಷಧ್ವಜಃ ।
ಕೃಪಯಾ ಪರಯಾ ಪ್ರಾಹ ಕಾಮಪತ್ನೀಂ ನಿರೀಕ್ಷ್ಯ ಚ ॥ ೪೬ ॥

---

೪೧. ಆ ಪರಮೇಶ್ವರನ ಫಾಲನೇತ್ರದಿಂದ ಹೊರಟ ಬೆಂಕಿಯು ಮನ್ಮಥನನ್ನು ಬೂದಿಮಾಡಿದುದಲ್ಲದೆ ತನ್ನ ಜ್ವಾಲೆಗಳಿಂದ ಅಷ್ಟದಿಕ್ಕುಗಳನ್ನೇ ಆವರಿಸಿ ಸಕಲ ಲೋಕಗಳನ್ನೂ ಸುಡಲು ಉದ್ಯುಕ್ತವಾಯಿತು.

೪೨–೪೩. ಆಗ ಮಹಾದೇವನು ಲೋಕಗಳನ್ನು ರಕ್ಷಿಸಲೆಳಸಿ ಆ ಮನ್ಮಥಾಗ್ನಿಯನ್ನು ವಿಭಾಗಮಾಡಿ ಅಹಂಕಾರಯುಕ್ತರು, ಚಂದ್ರ, ಪುಷ್ಪಗಳು, ಸಂಗೀತ, ದುಂಬಿಗಳು, ಕೋಗಿಲೆಗಳ ಕಂಠ, ಉದ್ಯಾನವನಗಳು ಮುಂತಾದುವುಗಳಲ್ಲಿ ನೆಲೆಗೊಳಿಸಿದನು. ಆದುದರಿಂದಲೇ ಇಂದಿಗೂ ಸಹ ಕಾಮುಕರಾದವರಿಗೆ ಮೇಲೆ ಹೇಳಿದ ವಸ್ತುಗಳನ್ನು ಕಂಡರೆ ಹೃದಯದಲ್ಲಿ ಕಾಮೋದ್ದೀಪನವಾಗುವುದು. (ಅವುಗಳಲ್ಲಿ ಮದನಾಗ್ನಿಯು ಎಲ್ಲ ಕಾಲಗಳಲ್ಲಿಯೂ ನೆಲಸಿಯೇ ಇರುತ್ತದೆಯಾಗಿ ವಿರಹಿಗಳಿಗೆ ಅವು ದುಃಖೋದ್ದೀಪಕಗಳಾಗಿರುತ್ತವೆ.)

೪೪–೪೬. ಆ ಅಗ್ನಿಯೇ ನಿತ್ಯದಲ್ಲಿಯೂ ಅವರನ್ನು ಸುಡುತ್ತ ಪರಿಹಾರೋಪಾಯವಿಲ್ಲದಂತೆ ಅತ್ಯಂತ ದುಃಖವನ್ನುಂಟುಮಾಡುತ್ತಿರುವುದು. ಇಂತು ಪರಮೇಶ್ವರನ ನೇತ್ರಾಗ್ನಿಯಿಂದ ಭಸ್ಮೀಭೂತನಾದ ಪತಿಯನ್ನು ಕಂಡು ಆತನ ಪತ್ನಿಯಾದ ರತಿಯು ದೀನಳಾಗಿ ಸ್ನೇಹಿತನಾದ ವಸಂತನೊಡನೆ ಪ್ರಲಾಪವನ್ನು ಮಾಡಿದಳು. ಆಕೆಯು ಅನೇಕ ವಿಧವಾಗಿ ಪ್ರಲಾಪಿಸುವುದನ್ನು ಕಂಡು ವಸಂತನು ಆಕೆಗೆ ಹಲವು ರೀತಿಗಳಿಂದ ಸಮಾಧಾನವನ್ನು ಹೇಳುತ್ತಿದ್ದನು. ಆದರೂ ಅವಳ ದುಃಖವು ಕಡಮೆಯಾಗಲಿಲ್ಲ. ಇಂತು ರತಿಯು ಪ್ರಲಾಪಮಾಡುವುದನ್ನು ಕೇಳಿ ದೇವದೇವನಾದ ಮಹಾದೇವನು ಅವಳಲ್ಲಿ ಅತ್ಯಂತ ಕನಿಕರಗೊಂಡು ಆಕೆಯನ್ನು ಕಂಡು ಹೇಳಿದನೆಂತೆನೆ.

ಅನಮೂರ್ತೋಽಪಿ ಹ್ಯಯಂ ಭದ್ರೇ ಕಾರ್ಯಂ ಸರ್ವಂ ಪತಿಸ್ತವ ।
ರತಿಕಾಲೇ ಧ್ರುವಂ ಬಾಲೇ ಕರಿಷ್ಯತಿ ನ ಸಂಶಯಃ ॥ ೪೭ ॥
ಯದಾ ವಿಷ್ಣುಶ್ಚ ಭವಿತಾ ವಸುದೇವಾತ್ಮಜೋ ವಿಭುಃ ।
ತದಾ ತಸ್ಯ ಸುತೋ ಯಃ ಸ್ಯಾತ್ಸಪತಿಸ್ತೇ ಭವಿಷ್ಯತಿ ॥ ೪೮ ॥
ಸಾ ಪ್ರಣಮ್ಯ ತತೋ ರುದ್ರಮಿತಿ ಪ್ರೋಕ್ತಾ ರತಿಸ್ತತಃ ।
ಜಗಾಮ ಸ್ವೇಚ್ಛಯಾ ಗತ್ವಾ ವಸಂತಾದಿಭಿರನ್ವಿತಾ ॥ ೪೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಕುಮಾರೇಶ ಮಾಹಾತ್ಮ್ಯೇ ಕಾಮದಹನೋ" ನಾಮ ಚತುರ್ವಿಂಶೋಽಧ್ಯಾಯಃ

---

೪೭. "ಎಲೌ ಮಂಗಳಾಂಗಿಯೆ! ಈ ನಿನ್ನ ಪತಿಯು ವಿಗ್ರಹರಹಿತನಾಗಿದ್ದರೂ ಕೂಡ ನಿನಗೆ ಮಾತ್ರ ಸಂಭೋಗ ಕಾಲದಲ್ಲಿ ಎಂದಿನಂತೆಯೇ ಸುಖದಾಯಕನಾಗಿರುತ್ತಾನೆ.

೪೮. ಮಹಾವಿಷ್ಣುವು ವಸುದೇವನಲ್ಲಿ ಯಾವಾಗ ಶ್ರೀಕೃಷ್ಣನೆಂಬ ನಾಮದಿಂದ ಭೂಮಿಯಲ್ಲಿ ಅವತಾರಮಾಡುವನೋ, ಆಗ ಈ ನಿನ್ನ ಪತಿಯು ಆತನಿಗೆ ಮಗನಾಗಿ ಪ್ರದ್ಯುಮ್ನನೆಂದು ಹೆಸರುಳ್ಳವನಾಗುವನು."

೪೯. ಮಹಾದೇವನ ಈ ಮಾತುಗಳನ್ನು ಕೇಳಿ ರತೀದೇವಿಯು ಆತನಿಗೆ ಪೊಡಮಟ್ಟು ವಸಂತನೇ ಮೊದಲಾದವರೊಡನೆ ಯಥಾಸುಖವಾಗಿ ಹೊರಟು ಹೋದಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾ ಖಂಡದಲ್ಲಿ
"ಕುಮಾರೇಶ ಮಹಾತ್ಮ್ಯ— ಕಾಮದಹನ"ವೆಂಬ
ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚವಿಂಶೋಽಧ್ಯಾಯಃ

## ಕುಮಾರೇಶಮಾಹಾತ್ಮ್ಯೇ ಶ್ರೀಮಹಾದೇವ ವೈವಾಹಿಕೋತ್ಸವ ವರ್ಣನಂ

ಅರ್ಜುನ ಉವಾಚ :—

**ದೇವರ್ಷೇ ವರ್ಣ್ಯತೇ ಚೇಯಂ ಕಥಾ ಪೀಯೂಷಸೋದರಾ ।**
**ಪುನರೇತನ್ಮುನೇ ಬ್ರೂಹಿ ಯದಾ ವೇತ್ತಿ ಮಹೇಶ್ವರಃ ॥ ೧ ॥**
**ಭಗವಾನ್ಸ್ವಾಂ ಸತೀಂ ಭಾರ್ಯಾಂ ವಧಾರ್ಥಂ ಚಾಪಿ ತಾರಕಂ ।**
**ತಸ್ಯಾಶ್ಚ ವಿರಹಾತ್ತಪ್ಯನ್ದಾಹ ಕಿಮಸೌ ಸ್ಮರಂ ॥ ೨ ॥**
**ತ್ವಯೈವೋಕ್ತಂ ಸ ವಿರಹಾತ್ತಸ್ಯಾಸ್ತಪ್ಯತಿ ವೈ ತಪಃ ।**
**ಹಿಮಾದ್ರಿಮಾಸ್ಥಿತೋ ದೇವಸ್ತಸ್ಯಾಃ ಸಂಗಮಕಾಂಕ್ಷಯಾ ॥ ೩ ॥**

ನಾರದ ಉವಾಚ :—

**ಸತ್ಯಮೇತತ್ಪುರಾ ಪಾರ್ಥ ಭವಸ್ಯೇದಂ ಮನೀಷಿತಂ ।**
**ಅತಪ್ತತಪಸಾ ಯೋಗೋ ನ ಕರ್ತವ್ಯೋ ಮಯಾನಯಾ ॥ ೪ ॥**
**ತಪೋ ವಿನಾ ಶುದ್ಧದೇಹೋ ನ ಕಥಂಚನ ಜಾಯತೇ ।**
**ಅಶುದ್ಧದೇಹೇನ ಸಮಂ ಸಂಯೋಗೋ ನೈವ ದೈಹಿಕಃ ॥ ೫ ॥**

---

### ಕನ್ನಡದ ಅನುವಾದ

#### ಕುಮಾರೇಶ ಮಾಹಾತ್ಮ್ಯ — ಶ್ರೀ ಮಹಾದೇವ ವೈವಾಹಿಕೋತ್ಸವ ವರ್ಣನ

೧–೨. ಅರ್ಜುನನು ಹೇಳುತ್ತಾನೆ:— ಎಲೈ ದೇವರ್ಷಿಯಾದ ನಾರದನೆ! ಈ ಚರಿತ್ರೆಯು ಅಮೃತಕ್ಕೆ ಸಮಾನವಾದ ರುಚಿಯುಳ್ಳದೆಂದು ಹೇಳುವರು. ಆದುದರಿಂದ ನನಗೆ ಮತ್ತೆ ವಿಸ್ತಾರವಾಗಿ ನಿರೂಪಿಸುವವನಾಗು. ತಾರಕಾಸುರನ ಸಂಹಾರಾರ್ಥವಾಗಿಯೇ ಷಡ್ಗುಣೈಶ್ವರ್ಯವಂತನಾದ ಮಹೇಶ್ವರನು ತನ್ನ ಸತಿಯಾದ ಸತೀದೇವಿಯನ್ನು ಸೇರಲೇಬೇಕೆಂದು ಹೇಳಿದೆಯಲ್ಲವೆ. ಆಕೆಯ ವಿರಹದಿಂದಲೇ ತಪಿಸುತ್ತಿರುವವನಾದರೂ ಈಶ್ವರನು ಕಾಮನನ್ನು ಸುಟ್ಟುದುದು ಎಂತು ?

೩. ಸತೀದೇವಿಯ ವಿರಹದಿಂದ ತಪಸ್ಸನ್ನು ಮಾಡುವವನಾಗಿ ಆಕೆಯ ಸಮಾಗಮವನ್ನು ನಿರೀಕ್ಷಿಸುತ್ತ ಹಿಮಾಚಲವನ್ನು ಆಶ್ರಯಿಸಿದನಲ್ಲವೆ ?

೪–೫. ನಾರದನು ಹೇಳುತ್ತಾನೆ:— ಎಲೈ ಅರ್ಜುನನೆ! ನೀನೆಂದುದೂ ಸತ್ಯವೇ. ಮೊದಲು ಪರಮೇಶ್ವರನು "ಅತಪ್ತವಾದ ಶರೀರದಿಂದ ನಾನು ಈಕೆಯ ಸಂಗವನ್ನು ಮಾಡಬಾರದು" ಎಂದು ಇಚ್ಛಿಸಿದನು. ತಪಸ್ಸಿನಿಂದಲ್ಲದೆ ಶರೀರಕ್ಕೆ ಶುದ್ಧಿಯುಂಟಾಗಲಾರದು. ಅಶುದ್ಧವಾದ ದೇಹದಿಂದ ಮತ್ತೊಂದು ದೇಹದ ಸಂಯೋಗವೆಂಬುದು ಎಂದಿಗೂ ಸರಿಹೋಗಲಾರದು.

ಮಹತ್ಕರ್ಮಾಣಿ ಯಾನೀಹ ತೇಷಾಂ ಮೂಲಂ ಸದಾ ತಪಃ ।
ನಾತಪ್ತತಪಸಾಂ ಸಿದ್ಧಿಂ ಮಹತ್ಕರ್ಮಾಣಿ ಯಾಂತಿ ವೈ ॥ ೬ ॥
ಏತಸ್ಮಾತ್ಕಾರಣಾದ್ದೇವೋ ದರ್ಪಿತಂ ತಂ ದದಾಹ ತು ।
ತತೋ ದಗ್ಧೇ ಸ್ಮರೇ ಚಾಪಿ ಪಾರ್ವತೀಮಪಿ ವ್ರೀಡಿತಾಂ ।
ವಿಹಾಯ ಸಗಣೋ ದೇವಃ ಕೈಲಾಸಂ ಸಮುಪದ್ಯತ ॥ ೭ ॥
ದೇವೀ ಚ ಪರಮೋದ್ವಿಗ್ನಾ ಪ್ರಸ್ಖಲಂತೀ ಪದೇ ಪದೇ ।
ಜೀವಿತಂ ಸ್ವಂ ವಿನಿಂದಂತೀ ಬಭ್ರಾಮೇತಸ್ತತಶ್ಚ ಸಾ ॥ ೮ ॥
ಹಿಮಾದ್ರಿರಪಿ ಸ್ವೇ ಶೃಂಗೇ ರುದತೀಂ ಪೃಷ್ಟವಾನ್ರತಿಂ ।
ಕಾಸಿ ಕಸ್ಯಾಸಿ ಕಲ್ಯಾಣಿ ಕಿಮರ್ಥಂ ಚಾಪಿ ರೋದಿಷಿ ॥ ೯ ॥
ಪೃಷ್ಟಾ ಸಾ ಚ ರತಿಃ ಸರ್ವಂ ಯಥಾ ವೃತ್ತಂ ನ್ಯವೇದಯತ್ ॥ ೧೦ ॥
ನಿವೇದಿತೇ ತಥಾ ರತ್ಯಾ ಶೈಲಃ ಸಂಭ್ರಾಂತಮಾನಸಃ ।
ಪ್ರಾಪ್ಯ ಸ್ವಾಂ ತನಯಾಂ ಪಾಣಾವಾದಾಯಾಗಾತ್ಸ್ವಕಂ ಪುರಂ ॥ ೧೧ ॥

---

೬. ಈ ಲೋಕದಲ್ಲಿ ಮಹಾಕಾರ್ಯಗಳೆಲ್ಲವೂ ಯಾವಾಗಲೂ ತಪೋಮೂಲಗಳಾಗಿಯೇ ಇರುವುವು. ತಪಸ್ತಪ್ತರಲ್ಲದವರು ಕೈಗೊಳ್ಳುವ ಮಹತ್ಕಾರ್ಯಗಳೆಲ್ಲವೂ ಸಿದ್ಧಿಯನ್ನು ಹೊಂದುವುದೇ ಇಲ್ಲವು.

೭. ಈ ಕಾರಣದಿಂದಲೇ ಮಹಾದೇವನು ಗರ್ವಿತನಾದ ಕಾಮನನ್ನು ಭಸ್ಮಮಾಡಿದನು. ಬಳಿಕ ಕಾಮದಹನದಿಂದ ತನ್ನ ಮನೋಭೀಷ್ಟವು ಭಗ್ನವಾಯಿತೆಂದು ಬಗೆದು ಲಜ್ಜೆಗೊಂಡ ಪಾರ್ವತಿಯನ್ನೂ ಸಹ ತ್ಯಜಿಸಿ ಈಶ್ವರನು ತನ್ನ ಗಣಗಳಿಂದೊಡಗೂಡಿ ಕೈಲಾಸವನ್ನು ಸೇರಿದನು.

೮. ಪಾರ್ವತಿಯೂ ಕೂಡ ಅತ್ಯಂತ ವ್ಯಾಕುಲಿತಳಾಗಿ ಹೆಜ್ಜೆ ಹೆಜ್ಜೆಗೂ ತೊಡರುತ್ತ ತನ್ನ ಬಾಳನ್ನು ನಿಂದಿಸುತ್ತ ಇಲ್ಲಿಂದಲ್ಲಿಗೆ ದಿಕ್ಕುತೋಚದೆ ತಿರುಗಾಡುತ್ತಿದ್ದಳು.

೯. ಆಗ ಹಿಮವಂತನೂ ಸಹ ತನ್ನ ಶೃಂಗದಲ್ಲಿ ನಿಂತು ರೋದಿಸುತ್ತಿರುವ ರತಿಯನ್ನು ಕಂಡು "ಎಲೌ ಮಂಗಳಕರಳೆ! ನೀನು ಯಾರು? ಯಾರ ಸಂಬಂಧಿಯು? (ನಿನ್ನ ಪತಿ ಯಾರು ?) ಇಲ್ಲಿ ಈ ರೀತಿಯಾಗಿ ಒಂಟಿಯಾಗಿ ನಿಂತು ಏಕೆ ದುಃಖಪಡುತ್ತಿರುವೆ?" ಎಂದು ಕೇಳಿದನು.

೧೦–೧೧. ಇಂತು ಕೇಳಲ್ಪಟ್ಟವಳಾಗಿ ರತಿಯು ನಡೆದ ವೃತ್ತಾಂತವನ್ನೆಲ್ಲ ಯಥಾವತ್ತಾಗಿ ತಿಳಿಸಿದಳು. ರತಿಯಿಂದ ಸಕಲ ವೃತ್ತಾಂತವನ್ನೂ ತಿಳಿದವನಾಗಿ ಹಿಮವದ್ರಾಜನು ಸಂಭ್ರಾಂತಚಿತ್ತನಾಗಿ ಅತ್ತಿತ್ತ ಸುತ್ತಿ ತನ್ನ ಮಗಳನ್ನು ಹುಡುಕುತ್ತ ಕಡೆಗೆ ಅವಳನ್ನು ಕಂಡು ಕರೆದುಕೊಂಡು ತನ್ನ ಪಟ್ಟಣವನ್ನು ಸೇರುವವನಾದನು.

ಸಾ ತತ್ರ ಪಿತರೌ ಪ್ರಾಹ ಸಖೀನಾಂ ವದನೇನ ಚ ।
ದುರ್ಭಗೇನ ಶರೀರೇಣ ಕಿಮನೇನ ಹಿ ಕಾರಣಂ ॥ ೧೨ ॥
ದೇಹವಾಸಂ ಪರಿತ್ಯಕ್ಷ್ಯೇ ಪ್ರಾಪ್ಸ್ಯೇ ವಾಭಿಮತಂ ಪತಿಂ ।
ಅಸಾಧ್ಯಂ ಚಾಪ್ಯಭೀಷ್ಟಂ ಚ ಕಥಂ ಪ್ರಾಪ್ಯಂ ತಪೋ ವಿನಾ ॥ ೧೩ ॥
ನಿಯಮೈರ್ವಿವಿಧೈಸ್ತಸ್ಮಾಚ್ಛೋಷಯಿಷ್ಯೇ ಕಲೇವರಂ ।
ಅನುಜಾನೀತ ಮಾಂ ತತ್ರ ಯದಿ ವಃ ಕರುಣಾ ಮಯಿ ॥ ೧೪ ॥
ಶ್ರುತ್ವೇತಿ ವಚನಂ ಮಾತಾ ಪಿತಾ ಚ ಪ್ರಾಹ ತಾಂ ಶುಭಾಂ ।
ಉಮೇತಿ ಚಪಲೇ ಪುತ್ರಿ ನಕ್ಷಮಂ ತಾವಕಂ ವಪುಃ ॥ ೧೫ ॥
ಸೋಢುಂ ಕ್ಲೇಶಾತ್ಮರೂಪಸ್ಯ ತಪಸಃ ಸೌಮ್ಯದರ್ಶನೇ ।
ಭಾವಿನ್ಯಪ್ಯನಿವಾರ್ಯಾಣಿ ವಸ್ತೂನಿ ಚ ಸದೈವ ತು ॥ ೧೬ ॥
ಭಾವಿನೋಽರ್ಥಾ ಭವಂತ್ಯೇವ ನರಸ್ಯಾನಿಚ್ಛತೋಽಪಿ ಹಿ ।
ತಸ್ಮಾನ್ನತಪಸಾ ತೇಽಸ್ತಿ ಬಾಲೇ ಕಿಂಚಿತ್ಪ್ರಯೋಜನಂ ॥ ೧೭ ॥

---

೧೨. ಆಗಲಾಕೆಯು ಸಖಿಯ ಮುಖದಿಂದ ತಾಯಿ ತಂದೆಗಳನ್ನು ಕುರಿತು ಹೇಳಿದಳೇನೆಂದರೆ :—"ಪಾಪಗಳಿಗೆಲ್ಲ ನೆಲೆಯಾಗಿ ಯಾವೊಂದು ಪ್ರಯೋಜನವೂ ಇಲ್ಲದಿರುವ ಈ ಶರೀರದಿಂದೇನು ? ದೇಹಿಯು ಅಭೀಷ್ಟವನ್ನು ಸಾಧಿಸದಿದ್ದರೆ ಅವನ ದೇಹವು ಭೂಮಿಗೆ ಭಾರವೇ.

೧೩. ಈ ದೇಹವನ್ನೇ ವಿಸರ್ಜಿಸುವೆನು. ಅಥವಾ ನನ್ನ ಅಭೀಷ್ಟನಾದ ಪತಿಯನ್ನಾದರೂ ಪಡೆಯುವೆನು. ಅತ್ಯಂತ ದುಸ್ಸಾಧ್ಯವಾದ ಇಷ್ಟಾರ್ಥವು ತಪಸ್ಸಿನಿಂದಲ್ಲದೆ ಹೇಗೆ ಕರಗತವಾಗುವುದು ?

೧೪. ಆದುದರಿಂದ ವಿಧ ವಿಧಗಳಾದ ವ್ರತನಿಯಮಗಳಿಂದ ಕೂಡಿ ತಪಸ್ಸು ಮಾಡಿ ಈ ಶರೀರವನ್ನು ಶೋಷಗೊಳಿಸುವೆನು. ನಿಮಗೆ ನನ್ನಲ್ಲಿ ವಿಶ್ವಾಸವಿದ್ದರೆ ಇದಕ್ಕಾಗಿ ನನಗೆ ಅನುಜ್ಞೆಯನ್ನು ಕೊಡಿರಿ."

೧೫. ಇಂತು ನುಡಿದ ಪಾರ್ವತಿಯ ವಚನಗಳನ್ನು ಕೇಳಿ ತಾಯಿ ತಂದೆಗಳು ಮಂಗಳಾಂಗಿಯಾದ ಆಕೆಯನ್ನು ಕುರಿತು "ಬೇಡ ಬೇಡ. ಎಲೌ ಮಗಳೆ! ನೀನು ಸ್ಥಿರಚಿತ್ತದವಳಲ್ಲ. ನಿನಗೀ ಚಪಲವೇಕೆ? ನಿನ್ನ ಸುಂದರ ಶರೀರವು ಅತ್ಯಂತ ಕಷ್ಟಗಳಿಂದೊಡಗೂಡಿದ ತಪಸ್ಸೆಂಬ ಕ್ಲೇಶವನ್ನು ತಡೆಯಲಾರದು.

೧೬–೧೭. ಆಗಬೇಕಾಗಿರುವ ಕಾರ್ಯಗಳು ಯಾವಾಗಲೂ ಖಂಡಿತವಾಗಿಯೂ ನಡೆಯಲೇ ನಡೆಯುವುವು. ಮನುಷ್ಯನ ಇಚ್ಛೆಯಿಲ್ಲದಿದ್ದರೂ ಮುಂದೆ ನಡೆಯಬೇಕಾದ ಕಾರ್ಯಗಳು ನಡೆಯದೆ ತಪ್ಪುವುದಿಲ್ಲ. ಆದುದರಿಂದ ನೀನು ತಪಸ್ಸನ್ನು ಮಾಡುವುದರಿಂದ ಸ್ವಲ್ಪವೂ ಪ್ರಯೋಜನವಾಗಲಾರದು."

ಶ್ರೀ ದೇವ್ಯುವಾಚ :—

ಯದಿದಂ ಭವತೋ ವಾಕ್ಯಂ ನ ಸಮ್ಯಗಿತಿ ಮೇ ಮತಿಃ ।
ಕೇವಲಂ ನ ಹಿ ದೈವೇನ ಪ್ರಾಪ್ತುಮರ್ಥೋ ಹಿ ಶಕ್ಯತೇ ॥ ೧೮ ॥
ಕಿಂಚಿದ್ದೈವಾದ್ಧಠಾತ್ಕಿಂಚಿತ್ಕಿಂಚಿದೇವ ಸ್ವಭಾವತಃ ।
ಪುರುಷಃ ಫಲಮಾಪ್ನೋತಿ ಚತುರ್ಥಂ ನಾತ್ರ ಕಾರಣಂ ॥ ೧೯ ॥
ಬ್ರಹ್ಮಣಾ ಚಾಪಿ ಬ್ರಹ್ಮತ್ವಂ ಪ್ರಾಪ್ತಂ ಕಿಲ ತಪೋಬಲಾತ್ ।
ಅನ್ಯೈರಪಿ ಚ ಯಲ್ಲಬ್ಧಂ ತನ್ನ ಸಂಖ್ಯಾತುಮುತ್ಸಹೇ ॥ ೨೦ ॥
ಅಧ್ರುವೇಣ ಶರೀರೇಣ ಯದ್ಯಭೀಷ್ಟಂ ನ ಸಾಧ್ಯತೇ ।
ಪಶ್ಚಾತ್ಸ ಶೋಚ್ಯತೇ ಮಂದಃ ಪತಿತೇಽಸ್ಮಿಞ್ಛರೀರಕೇ ॥ ೨೦ ॥
ಯಸ್ಯ ದೇಹಸ್ಯ ಧರ್ಮೋಽಯಂ ಕ್ವಚಿಜ್ಜಾಯೇತ್ಕ್ವಚಿನ್ಮ್ರಿಯೇತ್ ।
ಕ್ವಚಿದ್ಗರ್ಭಗತಂ ನಶ್ಯೇಜ್ಜಾತಮಾತ್ರಂ ಕ್ವಚಿತ್ತಥಾ ॥ ೨೨ ॥
ಬಾಲ್ಯೇ ಚ ಯೌವನೇ ಚಾಪಿ ವಾರ್ಧಕ್ಯೇಽಪಿ ವಿನಶ್ಯತಿ ।
ತೇನ ಚಂಚಲದೇಹೇನ ಕೋಽರ್ಥಃ ಸ್ಯಾದರ್ಥೋ ನ ಚೇದ್ಭವೇತ್ ॥ ೨೩ ॥

---

೧೮. ಪಾರ್ವತಿಯು ಹೇಳುತ್ತಾಳೆ:—"ಈಗ ನೀವು ಹೇಳಿದ ವಾಕ್ಯಗಳು ನನಗೆ ಯುಕ್ತಿ ಯುಕ್ತಗಳಾಗಿ ತೋರಲಿಲ್ಲವು. ಕೇವಲ ದೈವದಿಂದಲೇ ಕಾರ್ಯ ಸಮಾಪ್ತಿಯನ್ನು ಸಾಧಿಸಿ ಹೊಂದಲು ಶಕ್ಯವಾಗುವುದಿಲ್ಲವಷ್ಟೆ!

೧೯. ಸ್ವಲ್ಪ ಭಾಗವು ದೈವದಿಂದಲೂ, ಸ್ವಲ್ಪ ಭಾಗವು ಹಠದಿಂದಲೂ, ಸ್ವಲ್ಪ ಭಾಗವು ಕರ್ತೃವಿನ ಸ್ವಭಾವದಿಂದಲೂ ಮನುಷ್ಯನಿಗೆ ಫಲವನ್ನೀಯುವುದು. ಇವುಗಳಲ್ಲದೆ ಫಲಕಾರಿಯಾದ ನಾಲ್ಕನೆಯದು ಯಾವುದೂ ಇಲ್ಲ.

೨೦–೨೧. ಬ್ರಹ್ಮನಿಗೂ ಕೂಡ ತಪಸ್ಸಿನ ಬಲದಿಂದಲೇ ಬ್ರಹ್ಮತ್ವವು ಲಬ್ಧವಾಯಿತು. ಹಾಗೆಯೇ ಇತರರನೇಕರು ಪಡೆದ ಇಷ್ಟಾರ್ಥಗಳೆಲ್ಲವನ್ನೂ ಗಣನೆಮಾಡಲು ನಾನು ಶಕ್ಯಳಲ್ಲ. ಅನಿತ್ಯವಾದ ಶರೀರದಿಂದಲೇ ಯಾರು ಇಷ್ಟಾರ್ಥಗಳನ್ನು ಸಾಧಿಸಿಕೊಳ್ಳಲಾರರೊ, ಅವರು ದೇಹಪಾತಾನಂತರದಲ್ಲಿ ಮೂಢರಾಗಿ ಅತ್ಯಂತ ಶೋಕಕ್ಕೊಳಗಾಗುವರು.

೨೨. ದೇಹದ ಧರ್ಮವೇ ಇಂತಹುದಾಗಿರುವುದು. ಕೆಲವೆಡೆ ಹುಟ್ಟು ವುದು. ಕೆಲವೆಡೆ ನಾಶವನ್ನೈದುವುದು. ಹಲವೆಡೆ ಗರ್ಭದಲ್ಲಿರುವಂತೆಯೇ ಸಾಯುವುದು. ಹಾಗೂ ಕೆಲವು ಕಡೆಗಳಲ್ಲಿ ಹುಟ್ಟುತ್ತಲೇ ನಶಿಸುವುದು.

೨೩. ಬಾಲ್ಯ, ಯೌವನ, ವಾರ್ಧಕ್ಯಗಳೆಂಬ ಎಲ್ಲಾ ಅವಸ್ಥೆಗಳಲ್ಲಿಯೂ ದೇಹಕ್ಕೆ ವಿನಾಶವು ಸಂಭವಿಸುವುದು. ಪುರುಷಾರ್ಥವನ್ನು ಸಾಧಿಸದಿದ್ದರೆ ಇಂತಹ ಚಂಚಲ ದೇಹದಿಂದ ಮತ್ತಾವ ಪ್ರಯೋಜನವು ತಾನೆ ಆಗಬಹುದು?"

ಇತ್ಯುಕ್ತ್ವಾ ಸ್ವಸಖೀಯುಕ್ತಾ ಪಿತೃಭ್ಯಾಂ ಸಾಶ್ರುವೀಕ್ಷಿತಾ ।
ಶೃಂಗಂ ಹಿಮವತಃ ಪುಣ್ಯಂ ನಾನಾಶ್ಚರ್ಯಂ ಜಗಾಮ ಸಾ ॥ ೨೪ ॥
ತತ್ರಾಂಬರಾಣಿ ಸಂತ್ಯಜ್ಯ ಭೂಷಣಾನಿ ಚ ಶೈಲಜಾ ।
ಸಂವೀತಾ ವಲ್ಕಲೈರ್ದಿವ್ಯೈಸ್ತಪೋಽತಪ್ಯತ ಸಂಯುತಾ ॥ ೨೫ ॥
ಈಶ್ವರಂ ಹೃದಿ ಸಂಸ್ಥಾಪ್ಯ ಪ್ರಣವಾಭ್ಯಾಸನಾದೃತಾ ।
ಮುನೀನಾಮಪ್ಯಭೂನ್ಮಾನ್ಯಾ ತದಾನೀಂ ಪಾರ್ಥ ಪಾರ್ವತೀ ॥ ೨೬ ॥
ತ್ರಿಸ್ನಾತಾ ಪಾಟಲಾಪತ್ರಭಕ್ಷಕಾಭೂಚ್ಛತಂ ಸಮಾಃ ।
ಶತಂ ಚ ಬಿಲ್ವಪತ್ರೇಣ ಶೀರ್ಣೇನ ಕೃತಭೋಜನಾ ॥ ೨೭ ॥
ಜಲಭಕ್ಷಾ ಶತಂ ಚಾಭೂಚ್ಛತಂ ವೈ ವಾಯುಭೋಜನಾ ।
ತತೋ ನಿಯಮಮಾದಾಯ ಪಾದಾಂಗುಷ್ಠಸ್ಥಿತಾಭವತ್ ।
ನಿರಾಹಾರಾ ತತಸ್ತಾಪಂ ಪ್ರಾಪುಸ್ತತ್ತಪಸೋ ಜನಾಃ ॥ ೨೮ ॥

---

೨೪. ಇಂತೆಂದು ಹೇಳಿ ಆ ಗಿರಿನಂದಿನಿಯಾದ ಆ ಪಾರ್ವತಿಯು ತನ್ನ ಸಖಿಯೊಡನೆ ಕಂಬನಿದುಂಬಿದ ಕಣ್ಣುಗಳುಳ್ಳ ಮಾತಾಪಿತೃಗಳನ್ನು ಬಹು ಪ್ರಯಾಸದಿಂದ ಬೀಳ್ಕೊಂಡು, ಅನೇಕ ಆಶ್ಚರ್ಯಗಳಿಂದ ಕೂಡಿದ ಹಿಮವತ್ಪರ್ವತದ ಶಿಖರ ಪ್ರಾಂತಕ್ಕೆ ಹೊರಟಳು.

೨೫. ಅಲ್ಲಿ ತನ್ನ ವಸ್ತ್ರಗಳನ್ನು ತ್ಯಜಿಸಿ ಆ ಗಿರಿಜೆಯು ದಿವ್ಯಾಭರಣಗಳನ್ನೆಲ್ಲ ಕಳಚಿ ಬಿಸುಟು ನಾರುಡೆಗಳನ್ನುಟ್ಟು ನಿಯಮದಿಂದ ತಪಸ್ಸನ್ನು ಮಾಡಲು ಉದ್ಯುಕ್ತಳಾದಳು.

೨೬. ಪರಮೇಶ್ವರನನ್ನು ಹೃದಯದಲ್ಲಿ ಮೂರ್ತಿಗೊಳಿಸಿ ಪ್ರಣವದ ಪುರಶ್ಚರಣೆಯಲ್ಲಿಯೇ ಆದರವುಳ್ಳವಳಾಗಿ ಆಕೆಯು ಅಲ್ಲಿದ್ದ ಮುನಿಗಳಿಗೂ ಆದರಪಾತ್ರಳಾದಳು.

೨೭. ದಿನವೂ ತ್ರಿಷವಣ ಸ್ನಾನವನ್ನು ಮಾಡುತ್ತ ಕೇವಲ ರಕ್ತಲೋಧ್ರದ ಪತ್ರಗಳ ಸೇವನೆಯಿಂದಲೇ ಒಂದು ನೂರು ವರ್ಷಗಳನ್ನು ಕಳೆದಳು. ಆಮೇಲೆ ಒಂದು ನೂರು ವರ್ಷಗಳು ಗಿಡದಿಂದುದುರಿದ ಬಿಲ್ವದ ತರಗೆಲೆಗಳಿಂದ ಜೀವಿಸಿದಳು.

೨೮–೨೯. ಮತ್ತೆ ಒಂದು ನೂರು ಸಂವತ್ಸರಗಳು ಜಲಭಕ್ಷಣದಿಂದಲೂ, ಬಳಿಕ ಒಂದು ನೂರು ವರ್ಷಗಳ ಕಾಲ ವಾಯುಭಕ್ಷಕಳಾಗಿಯೂ ತಪಸ್ಸನ್ನು ಮಾಡಿದಳು. ಆಮೇಲೆ ಉಗ್ರವಾದ ನಿಯಮವನ್ನು ಕೈಕೊಂಡು ನಿರಾಹಾರಳಾಗಿ ಬಲಗಾಲಿನ ಹೆಬ್ಬೆರಳಿನ ಮೇಲೆ ನಿಂತು ತಪಸ್ಸನ್ನು ಮಾಡತೊಡಗಿದಳು. ಆಕೆಯ ಈ ಬಗೆಯ ಅತ್ಯುಗ್ರವಾದ ತಪಸ್ಸಿನಿಂದ ಅಲ್ಲಿಯ ನಿವಾಸಿಗಳೆಲ್ಲರೂ

ತತೋ ಜಗತ್ಸಮಾಲೋಕ್ಯ ತದೀಯತಪಸೋರ್ಜಿತಂ ।
ಹರಸ್ತತ್ರಾಯಯೌ ಸಾಕ್ಷಾದ್ಬ್ರಹ್ಮಚಾರಿವಪುರ್ಧರಃ ॥ ೨೯ ॥
ವಸಾನೋ ವಲ್ಕಲಂ ದಿವ್ಯಂ ತಾರವಾಜಿನಸಂವೃತಃ ।
ಸುಲಕ್ಷಣಾಷಾಢಧರಂ ಸದ್ವೃತ್ತಃ ಪ್ರತಿಭಾನವಾನ್ ॥ ೩೦ ॥
ತತಸ್ತಂ ಪೂಜಯಾಮಾಸುಸ್ತತ್ಸಖ್ಯೋ ಬಹುಮಾನತಃ ।
ವಕ್ತುಮಿಚ್ಛುಃ ಶೈಲಪುತ್ರೀಂ ಸಖೀಭಿರಿತಿ ಚೋದಿತಃ ॥ ೩೧ ॥
ಬ್ರಹ್ಮನ್ನಿಯಮಂ ಮಹಾಭಾಗಾ ಗೃಹೀತನಿಯಮಾ ಶುಭಾ ।
ಮುಹೂರ್ತಪಂಚಮಾತ್ರೇಣ ನಿಯಮೋಽಸ್ಯಾಃ ಸಮಾಪ್ಯತೇ ॥ ೩೨ ॥
ತತ್ಪ್ರತೀಕ್ಷಸ್ವ ತಂ ಕಾಲಂ ಪಶ್ಚಾದಸ್ಮತ್ಸಖೀಸಮಂ ।
ನಾನಾವಿಧಾ ಧರ್ಮವಾರ್ತಾಃ ಪ್ರಕರಿಷ್ಯಸಿ ಬ್ರಾಹ್ಮಣ ॥ ೩೩ ॥
ಇತ್ಯುಕ್ತ್ವಾ ವಿಜಯಾದ್ಯಾಸ್ತಾ ದೇವೀಚರಿತವರ್ಣನೈಃ ।
ಅಶ್ರುವಮುಖ್ಯೋದ್ವಿಜಸ್ಯಾಗ್ರೇ ನಿನ್ಯುಃ ಕಾಲಂ ಚ ತಂ ತದಾ ॥ ೩೪ ॥

---

ಅತ್ಯಂತ ತಾಪವನ್ನು ಹೊಂದುವವರಾದರು. ಯಾರಿಗೂ ಆಕೆಯ ತಪೋಜ್ವಾಲೆಯನ್ನು ಸಹಿಸಲಾಗಲಿಲ್ಲವು. ಆ ಸಮಯದಲ್ಲಿ ಆಕೆಯ ತಪಸ್ಸಿನಿಂದ ಸಕಲ ಲೋಕಗಳೂ ತಳಮಳಿಸುತ್ತಿದ್ದುದನ್ನು ಕಂಡು ಮಹಾದೇವನೇ ಸಾಕ್ಷಾತ್ತಾಗಿ ಬ್ರಹ್ಮಚಾರಿಯ ವೇಷದಿಂದ ಅಲ್ಲಿಗೆ ಬಂದನು.

೩೦. ಆಗಲಾತನು ದಿವ್ಯವಾದ ನಾರುಡೆಯನ್ನುಟ್ಟು, ರುರುವೆಂಬ ಜಿಂಕೆಯ ಚರ್ಮವನ್ನು ಹೊದ್ದುಕೊಂಡು, ಮನೋಹರವಾದ ಬ್ರಹ್ಮದಂಡವನ್ನು ಕೈಯಲ್ಲಿ ಹಿಡಿದು ಅತ್ಯಂತ ಸದ್ವ್ರತಿಯಂತೆ ಕಾಣುತ್ತಿದ್ದನು.

೩೧. ಆಗ ಪಾರ್ವತಿಯ ಸಖಿಯರು ಬಹುವಿಧಗಳಾದ ಉಪಚಾರಗಳಿಂದ ಆತನನ್ನು ಸತ್ಕರಿಸಿದರು. ಬಳಿಕ ಆಕೆಯೊಡನೆ ಮಾತನಾಡಲು ಇಚ್ಛಿಸುತ್ತಿರುವ ಆತನನ್ನು ಕಂಡು ಸಖಿಯರು ಇಂತೆಂದರು.

೩೨. "ಅಯ್ಯಾ ಬ್ರಹ್ಮಚಾರಿಯೆ! ಶುಭಾಂಗಿಯಾದ ಈ ಮಹಾತ್ಮಳು ಉಗ್ರವಾದ ನಿಯಮವನ್ನು ಕೈಗೊಂಡಿರುವಳು. ಇನ್ನು ಐದು ಮುಹೂರ್ತಗಳ ಕಾಲದಲ್ಲಿಯೇ ಈಕೆಯು ವ್ರತದಿಂದ ವಿಮುಖಳಾಗುವಳು.

೩೩. ಆದುದರಿಂದ ಆ ಕಾಲವನ್ನು ನಿರೀಕ್ಷಿಸುವವನಾಗು. ಆಗ ಸಖಿಯರಾದ ನಮ್ಮೊಡನೆ ನೀನೂ ಕೂಡ ಅನೇಕ ವಿಧಗಳಾದ ಧರ್ಮಗಳನ್ನು ಕುರಿತು ಆಕೆಯೊಡನೆ ಮಾತನಾಡಬಹುದು."

೩೪. ಇಂತೆಂದು ವಿಜಯೆಯೇ ಮೊದಲಾದ ಸಖಿಯರೆಲ್ಲರೂ ಬ್ರಾಹ್ಮಣನ ಮುಂದೆ ಕಂಬನಿಗರೆಯುತ್ತ, ಪಾರ್ವತಿಯ ನುಡಿ ನಡೆಗಳನ್ನು ವಿವರಿಸುತ್ತ, ಕಾಲವನ್ನು ಕಳೆಯುತ್ತಿದ್ದರು.

ತತಃ ಕಾಲೇ ಕಿಂಚಿದೂನೇ ಬ್ರಹ್ಮಚಾರೀ ಮಹಾಮತಿಃ ।
ವಿಲೋಕನ ಮಿಷೇಣಾಗಾದಾಶ್ರಮೋಪಸ್ಥಿತಂ ಹ್ರದಂ ॥ ೩೫ ॥
ನಿಪಪಾತ ಚ ತತ್ರಾಸೌ ಚುಕ್ರೋಶಾತಿತರಾಂ ತತಃ ।
ಅಹಮತ್ರ ನಿಮಜ್ಜಾಮಿ ಕೋಽಪಿ ಮಾಮುದ್ಧರೇತ ಭೋಃ ॥ ೩೬ ॥
ಇತಿ ತಾರೇಣ ಕ್ರೋಶಂತಂ ಶ್ರುತ್ವಾ ತಂ ವಿಜಯಾದಿಕಾಃ ।
ಆಜಗ್ಮುಸ್ತ್ವರಯಾ ಯುಕ್ತಾ ದದುಸ್ತಸ್ಮೈ ಕರಂ ಚ ತಾಃ ॥ ೩೭ ॥
ಸ ಚುಕ್ರೋಶ ತತೋ ಗಾಢಂ ದೂರೇ ದೂರೇ ಪುನಃಪುನಃ ।
ನಾಹಂ ಸ್ಪೃಶಾಮ್ಯಸಂಸಿದ್ಧಾಂ ಮ್ರಿಯೇ ವಾ ನಾನ್ಯಥಂ ತ್ವಿದಂ ॥ ೩೮ ॥
ತತಃ ಸಮಾಪ್ತನಿಯಮಾ ಪಾರ್ವತೀ ಸ್ವಯಮಾಯಯೌ ।
ಸವ್ಯಂ ಕರಂ ದದಾವಸ್ಯ ತಂ ಚಾಸೌ ನಾಭ್ಯನಂದತ ॥ ೩೯ ॥
ಭದ್ರೇ ಯಚ್ಛುಚಿನ್ನೈವ ಸ್ಯಾದ್ಯಚ್ಚೈವಾವಜ್ಞಯಾ ಕೃತಂ ।
ಸದೋಷೇಣ ಕೃತಂ ಯಚ್ಚ ತದಾದದ್ಯಾನ್ನ ಕರ್ಹಿಚಿತ್ ॥ ೪೦ ॥

---

೩೫. ಬಳಿಕ ನಿರೀಕ್ಷಿತಕಾಲಕ್ಕೆ ಸ್ವಲ್ಪ ಮುಂಚೆ ಬುದ್ಧಿವಂತನಾದ ಆ ಬ್ರಹ್ಮಚಾರಿಯು ಆಶ್ರಮವನ್ನು ನೋಡಬೇಕೆಂಬ ನೆವದಿಂದ ಅಲ್ಲಿದ್ದ ಸರೋವರದ ಸಮೀಪಕ್ಕೆ ಬಂದನು.

೩೬. ಆಗ ನೀರಿನಲ್ಲಿ ಬಿದ್ದವನಾಗಿ ಗಟ್ಟಿಯಾಗಿ "ಅಯ್ಯೋ! ನಾನು ಇಲ್ಲಿ ಮುಳುಗುತ್ತಿರುವೆನು. ಯಾರಾದರೂ ನನ್ನನ್ನು ಮೇಲಕ್ಕೆತ್ತಿರಿ" ಎಂದು ಕೂಗಿಕೊಂಡನು.

೩೭. ಇಂತು ಕೂಗಿಕೊಳ್ಳುತ್ತಿರುವ ಆ ಬ್ರಾಹ್ಮಣನ ಸಮೀಪಕ್ಕೆ ವಿಜಯೆಯೇ ಮೊದಲಾದ ಸಖಿಯರೆಲ್ಲರೂ ಓಡಿಬಂದು ಅವನನ್ನೆತ್ತಲು ತಮ್ಮ ಕೈಗಳನ್ನು ನೀಡಿದರು.

೩೮. ಆ ಬಾಹ್ಮಣನಾದರೊ ಕೂಗಾಡುತ್ತಲೆ ಮತ್ತೂ ಆಳವಾದ ನೀರಿಗೆ ಜಾರುತ್ತ "ನಾನು ಅಶುಚಿಯಾದ ಸ್ತ್ರೀಯನ್ನು ಮುಟ್ಟಲೊಲ್ಲೆ. ಅಥವಾ ಇಲ್ಲಿಯೇ ಸಾಯುವೆನು" ಎಂದು ಹೇಳಿದನು.

೩೯. ಅಷ್ಟರಲ್ಲಿಯೇ ವ್ರತವನ್ನು ಮುಗಿಸಿಕೊಂಡ ಪಾರ್ವತಿಯೂ ಅಲ್ಲಿಗೆ ಬಂದಳು. ಆ ಬ್ರಾಹ್ಮಣನ ಕಡೆಗೆ ತನ್ನ ಎಡಗೈಯನ್ನು ನೀಡಲು ಅವನು ಅದನ್ನೂ ಒಪ್ಪಲಿಲ್ಲ.

೪೦–೪೧. "ಎಲೌ ಮಂಗಳೆಯೆ! ಯಾವುದು ಶುಚಿಯಾದುದಲ್ಲವೊ, ಯಾವುದು ಅಶ್ರದ್ಧೆಯಿಂದ ಮಾಡಲ್ಪಟ್ಟುದೊ, ಅಥವಾ ಯಾವುದು ದೋಷ ಸಹಿತವಾದುದೊ ಅದನ್ನು ಯಾವಾಗಲೂ ಇತರರಿಗೆ ಕೊಡಕೂಡದು

ಸವ್ಯಂ ಚಾಶುಚಿ ತೇ ಹಸ್ತಂ ನಾವಲಂಬಾಮಿ ಕರ್ಹಿಚಿತ್ ॥ ೪೦ ॥
ಇತ್ಯುಕ್ತಾ ಪಾರ್ವತೀ ಪ್ರಾಹ ನಾಹಂ ದತ್ತಂಚ ದಕ್ಷಿಣಂ ।
ದದಾಮಿ ಕಸ್ಯಚಿದ್ವಿಪ್ರ ದೇವದೇವಾಯ ಕಲ್ಪಿತಂ ॥ ೪೧ ॥
ದಕ್ಷಿಣಂ ಮೇ ಕರಂ ದೇವೋ ಗೃಹೀತಾ ಭವ ಏವ ಚ ।
ಶೀರ್ಯತೇ ಚೋಗ್ರ ತಪಸಾ ಸತ್ಯಮೇತನ್ಮಯೋದಿತಂ ॥ ೪೨ ॥

ವಿಪ್ರ ಉವಾಚ:—

ಯದ್ಯೇವಮವಲೇಪಸ್ತೇ ಗಮನಂ ಕೇನ ವಾರ್ಯತೇ ।
ಯಥಾ ತವ ಪ್ರತಿಜ್ಞೇಯಂ ಮಮಾಪೀಯಂ ತಥಾಚಲಾ ॥ ೪೪ ॥
ರುದ್ರಸ್ಯಾಪಿ ವಯಂ ಮಾನ್ಯಾಃ ಕೀದೃಶಂ ತೇ ತಪೋ ವದ ।
ವಿಷಮಸ್ಥಂ ಯತ್ರ ವಿಪ್ರಂ ಮ್ರಿಯಮಾಣಮುಪೇಕ್ಷಸಿ ॥ ೪೫ ॥
ಅವಜಾನಾಸಿ ವಿಪ್ರಾಂಸ್ತ್ವಂ ತಚ್ಛೀಘ್ರಂ ವ್ರಜ ದರ್ಶನಾತ್ ।
ಯದಿ ವಾ ಮನ್ಯಸೇ ಪೂಜ್ಯಾಂಸ್ತತೋಽಭ್ಯುದ್ಧರ ನಾನ್ಯಥಾ ॥ ೪೬ ॥

---

ನಿನ್ನ ಎಡಗೈಯು ಅಶುಚಿಯಾದುದರಿಂದ ನಾನೆಂದಿಗೂ ಅವಲಂಬನವನ್ನಾಗಿ ಸ್ವೀಕರಿಸಲಾರೆನು” ಎಂದನು.

೪೧. ಇಂತೆಂದ ವಿಪ್ರನಿಗೆ ಪಾರ್ವತಿಯು ಉತ್ತರವನ್ನು ಕೊಟ್ಟಳೇನೆಂದರೆ:— “ಅಯ್ಯಾ ಬ್ರಾಹ್ಮಣನೆ! ನನ್ನ ಬಲಗೈಯು ಮೊದಲೇ ಮಹದೇವನ ಪಾಣಿ ಗ್ರಹಣಕ್ಕಾಗಿ ಮೀಸಲಾಗಿರುವುದು. ಅದನ್ನು ಈಗ ಮತ್ತೆ ನಿನಗೆ ನೀಡಲು ಸಾಧ್ಯವಿಲ್ಲ.

೪೨. ಈ ನನ್ನ ಬಲಗೈಯನ್ನು ಸಾಕ್ಷಾತ್ಪರಮೇಶ್ವರನೇ ಹಿಡಿಯಬೇಕು. ಅಥವಾ ಉಗ್ರವಾದ ತಪಸ್ಸಿನಿಂದ ಹೀಗೆಯೇ ಶೋಷವನ್ನು ಹೊಂದಬೇಕು. ಈ ಮಾತು ಸತ್ಯವು.”

೪೪. ಬ್ರಾಹ್ಮಣನು ಹೇಳುತ್ತಾನೆ:—“ದೇವಿ! ನಿನಗೆ ಇಂತಹ ಪ್ರತಿಜ್ಞೆ ಯಿದ್ದರೆ ನನಗೆ ಮರಣವು ಅವಶ್ಯವಾಗಿಯೇ ಪ್ರಾಪ್ತವಾಗುವುದು. ನಿನ್ನ ಪ್ರತಿಜ್ಞೆಯು ಹೇಗೆ ಸ್ಥಿರವೊ, ಹಾಗೆಯೇ ನನ್ನ ಪ್ರತಿಜ್ಞೆಯೂ ನಿಶ್ಚಲ ವಾಗಿರುವುದು.

೪೫. ನಾವು ಸಾಕ್ಷಾನ್ಮಹೇಶ್ವರನಿಗೂ ಮಾನ್ಯರಾದವರೇ! ಇಂತಹ ಸಂಕಟದಲ್ಲಿ ಸಿಕ್ಕಿರುವ ಮರಣೋನ್ಮುಖನಾದ ಬ್ರಾಹ್ಮಣನನ್ನೂ ಉಪೇಕ್ಷೆ ಮಾಡುವಂಥ ನಿನ್ನ ತಪಸ್ಸಾದರೂ ಎಂಥಾದ್ದು?

೪೬. ನಿನಗೆ ಬ್ರಾಹ್ಮಣರಲ್ಲಿ ಭಕ್ತಿಯಿಲ್ಲದಿದ್ದರೆ ಶೀಘ್ರವಾಗಿ ಇಲ್ಲಿಂದ ಹೊರಡು. ಅಥವಾ ನೀನು ಬ್ರಾಹ್ಮಣರನ್ನು ಪೂಜ್ಯರೆಂದೆಣಿಸಿದ್ದರೆ ನನ್ನನ್ನು ಮೇಲಕ್ಕೆತ್ತು. ಮೂರನೆಯ ದಾರಿಯಿಲ್ಲ.”

ತತೋ ವಿಚಾರ್ಯ ಬಹುಧಾ ಇತಿ ಚೇತಿ ಚ ಸಾ ಶುಭಾ ।
ವಿಪ್ರಸ್ಯೋದ್ಧರಣಂ ಸರ್ವಧರ್ಮೇಭ್ಯೋಽಮನ್ಯತಾಧಿಕಂ ॥ ೪೭ ॥
ತತಃ ಸಾ ದಕ್ಷಿಣಂ ದತ್ವಾ ಕರಂ ತಂ ಪ್ರೋಜ್ಜಹಾರ ಚ ।
ನರಂ ನಾರೀ ಪ್ರೋದ್ಧರತಿ ಸಜ್ಜನ್ತಂ ಭವವಾರಿಧೌ ।
ಏತತ್ಸಂದರ್ಶನಾರ್ಥಾಯ ತಥಾ ಚಕ್ರೇ ಭವೋದ್ಭವಃ ॥ ೪೮ ॥
ಪ್ರೋದ್ಧೃತ್ಯ ಚ ತತಃ ಸ್ನಾತ್ವಾ ಬದ್ಧ್ವಾ ಯೋಗಾಸನಂ ಸ್ಥಿತಾ ॥ ೪೯ ॥
ಬ್ರಹ್ಮಚಾರೀ ತತಃ ಪ್ರಾಹ ಪ್ರಹಸನ್ನಿದಂ ಶುಭೇ ।
ಕರ್ತುಕಾಮಾಸಿ ತನ್ವಂಗಿ ದೃಢಯೋಗಾಸನಸ್ಥಿತಾ ॥ ೫೦ ॥
ದೇವೀ ಪ್ರಾಹ ಜ್ವಾಲಯಿಷ್ಯೇ ಶರೀರಂ ಯೋಗವಹ್ನಿನಾ ।
ಮಹಾದೇವ ಕೃತಮಿತಿರುಚ್ಛಿಷ್ಟಾಹಂ ಯತೋಽಭವಂ ॥ ೫೧ ॥
ಬ್ರಹ್ಮಚಾರೀ ತತಃ ಪ್ರಾಹ ಕಾಶ್ಚಿದ್ಬ್ರಾಹ್ಮಣಕಾಮ್ಯಯಾ
ಕೃತ್ವಾ ವಾರ್ತಾಸ್ತತಃ ಸ್ವೀಯಮಭೀಷ್ಟಂ ಕುರು ಪಾರ್ವತಿ ॥ ೫೨ ॥

---

೪೭. ಬಳಿಕ ಪಾರ್ವತಿಯು ಬಹಳ ಹೊತ್ತು ಪೂರ್ವಾಪರಗಳನ್ನು ಯೋಚಿಸಿ ಕಡೆಗೆ ಆಪದ್ಗ್ರಸ್ತನಾದ ಬ್ರಾಹ್ಮಣನ ಪ್ರಾಣರಕ್ಷಣವೇ ತನ್ನ ಮುಖ್ಯ ಧರ್ಮವೆಂದು ತೀರ್ಮಾನಿಸಿದಳು.

೪೮. ಬಳಿಕ ತನ್ನ ಬಲಗೈಯನ್ನು ಕೊಟ್ಟು ಬ್ರಾಹ್ಮಣನನ್ನು ಆ ಸರೋವರದಿಂದ ಮೇಲಕ್ಕೆತ್ತಿದಳು. ಎಲೈ ಅರ್ಜುನನೇ! ಸಂಸಾರ ಸಮುದ್ರದಲ್ಲಿ ಮುಳುಗಿ ಒದ್ದಾಡುತ್ತಿರುವ ಮನುಷ್ಯನನ್ನು ಸ್ತ್ರೀಯೇ ಉದ್ಧರಿಸಲು ಶಕ್ತಳೆಂಬುದನ್ನು ಲೋಕಕ್ಕೆ ನಿದರ್ಶನದಿಂದ ತೋರಿಸಬೇಕೆಂದು ಮಹೇಶ್ವರನು ಈ ಲೀಲೆಯನ್ನು ನಡೆಸಿದನು.

೪೯–೫೦. ಇಂತು ಆತನನ್ನು ಮೇಲಕ್ಕೆಬಿಟ್ಟು ಮತ್ತೆ ಸ್ನಾನಮಾಡಿ ಪಾರ್ವತಿಯು ಯೋಗಾಸನವನ್ನು ಹಾಕಿಕೊಂಡು ಕುಳಿತುಕೊಳ್ಳಲು ಆ ಬ್ರಾಹ್ಮಣನು "ಎಲೌ ಸುಕುಮಾರಿಯೆ! ಮತ್ತೆ ಯೋಗಾಸನವನ್ನು ಹಾಕಿ ಕುಳಿತು ಏನನ್ನು ಮಾಡಲೆಳಸುವೆ?" ಎಂದು ನಗುತ್ತ ಕೇಳಿದನು.

೫೧. ಆಕೆಯು ಹೇಳುತ್ತಾಳೆ:—"ನೀನು ನನ್ನ ಕೈಹಿಡಿದುದರಿಂದ ನಾನು ಉಚ್ಛಿಷ್ಟಳಾದೆ. ಆದುದರಿಂದ ಮಹಾದೇವನಲ್ಲಿಯೇ ಮನಸ್ಸನ್ನಿಟ್ಟು ಈಗ ಈ ಶರೀರವನ್ನು ಯೋಗಾಗ್ನಿಯಿಂದ ಸುಟ್ಟುಬಿಡುವೆನು."

೫೨. ಅದನ್ನು ಕೇಳಿ ಆ ಬ್ರಹ್ಮಚಾರಿಯು ಹೇಳಿದನು:—"ಬ್ರಾಹ್ಮಣನಾದ ನನಗೋಸ್ಕರವಾಗಿ ನೀನು ಹಲ ಕೆಲವು ಮಾತುಗಳನ್ನಾಡಿ ಬಳಿಕ ನಿನ್ನಿಷ್ಟದಂತೆ ಮಾಡಬಹುದು.

ನೋಪಹನ್ಯಾ ಕದಾಚಿದ್ಧಿ ಸಾಧುಭಿರ್ವಿಪ್ರಕಾಮನಾ ।
ಧರ್ಮಮೇನಂ ಮನ್ಯಸೇ ಚೇನ್ಮುಹೂರ್ತಂ ಬ್ರೂಹಿ ಪಾರ್ವತಿ ॥ ೫೩ ॥
ದೇವೀ ಪ್ರಾಹ ಬ್ರೂಹಿ ವಿಪ್ರ ಮುಹೂರ್ತಂ ಸಂಸ್ಥಿತಾ ತ್ವಯಾ ।
ತತಃ ಸ್ವಯಂ ವ್ರತೀ ಪ್ರಾಹ ದೇವೀಂ ತಾಂ ಸ್ವಸಖೀಯುತಾಂ ॥ ೫೪ ॥
ಕಿಮರ್ಥಮಿತಿ ರಂಭೋರು ನವೇ ವಯಸಿ ದುಷ್ಕರಂ ।
ತಪಸ್ತ್ವಯಾ ಸಮಾರಬ್ಧಂ ನಾನುರೂಪಂ ವಿಭಾತಿ ಮೇ ॥ ೫೫ ॥
ದುರ್ಲಭಂ ಪ್ರಾಪ್ಯ ಮಾನುಷ್ಯಂ ಗಿರಿರಾಜಗೃಹೇಽಧುನಾ ।
ಭೋಗಾಂಶ್ಚ ದುರ್ಲಭಾನ್ದೇವಿ ತ್ಯಕ್ತ್ವಾ ಕಿಂ ಕ್ಲಿಶ್ಯತೇ ವಪುಃ ॥ ೫೬ ॥
ಅತೀವ ದೂಯೇ ವೀಕ್ಷ್ಯ ತ್ವಾಂ ಸುಕುಮಾರತರಾಕೃತಿಂ ।
ಅತ್ಯುಗ್ರತಪಸಾ ಕ್ಲಿಷ್ಟಾ ಪದ್ಮಿನೀವ ಹಿಮಾರ್ದಿತಾ ॥ ೫೭ ॥
ಇದಂ ಚಾನ್ಯತ್ತ್ವ ಶುಭೇ ಶಿರಸೋ ರೋಗದಂ ಮಮ ।
ಯದ್ದೇಹಂ ತ್ಯಕ್ತುಕಾಮಾ ತ್ವಂ ಪ್ರಬುದ್ಧಾ ನಾಸಿ ಬಾಲಿಕೇ ॥ ೫೮ ॥

---

೫೩. ಸಾಧುಗಳು ಯಾವಾಗಲೂ ಬ್ರಾಹ್ಮಣರ ಇಷ್ಟಾರ್ಥಗಳನ್ನು ವಿಫಲಗೊಳಿಸುವುದಿಲ್ಲವಷ್ಟೆ. ಈ ಧರ್ಮವೇ ನಿನಗೆ ಸಮ್ಮತವಾಗಿದ್ದರೆ ಒಂದು ಮುಹೂರ್ತಕಾಲ ನನ್ನೊಡನೆ ಮಾತನಾಡು."

೫೪. ಆಗ ದೇವಿಯು "ಎಲೈ ಬ್ರಾಹ್ಮಣನೆ! ನೀನು ಹೇಳಬೇಕಾದುದನ್ನು ಹೇಳು. ನಿನಗಾಗಿ ಒಂದು ಮುಹೂರ್ತಕಾಲ ನಾನು ನಿಂತಿರುವೆನು" ಎನ್ನಲು ಸಖೀಪರಿವಾರಿತೆಯಾದ ಆಕೆಯನ್ನು ಕುರಿತು ಬ್ರಾಹ್ಮಣನು ಹೇಳತೊಡಗಿದನು.

೫೫. "ಎಲೌ ರಂಭೋರುವೆ! ಈ ನಿನ್ನ ಎಳೆಯ ಪ್ರಾಯದಲ್ಲಿ ಅತ್ಯಂತ ದುಸ್ಸಾಧ್ಯವಾದ ತಪಸ್ಸು ಏತಕ್ಕಾಗಿ ಪ್ರಾರಂಭಿಸಲ್ಪಟ್ಟಿತು? ಇದು ನಿನ್ನ ರೂಪಕ್ಕೆ ತಕ್ಕುದೆಂದು ನನಗೆ ತೋರುವುದಿಲ್ಲ.

೫೬–೫೭. ದುರ್ಲಭವಾದ ಮನುಷ್ಯಜನ್ಮವನ್ನು ಪಡೆದು, ಅದರಲ್ಲಿಯೂ ಪರ್ವತರಾಜನ ಅರಮನೆಯಲ್ಲಿ ಜನ್ಮವನ್ನೆತ್ತಿ ಇತರರಿಗೆ ದುರ್ಲಭವಾದ ಭೋಗಗಳನ್ನೆಲ್ಲ ಅನುಭವಿಸುವ ಅನುಕೂಲಗಳಿದ್ದರೂ ಏತಕ್ಕಾಗಿ ಶರೀರವನ್ನು ಕಷ್ಟಗೊಳಿಸಬೇಕು? ಸುಕುಮಾರವಾದ ನಿನ್ನ ಮೃದುದೇಹವನ್ನು ಕಂಡು ನಾನು ಬಹಳವಾಗಿ ಮನಸ್ಸಿನಲ್ಲಿ ಚಿಂತಿಸುತ್ತಿರುವೆನು. ಹಿಮದಿಂದ ಕಳೆಗುಂದಿದ ಕಮಲದಂತೆ ನಿನ್ನ ಶರೀರವು ಉಗ್ರವಾದ ತಪಸ್ಸಿನಿಂದ ಕ್ಲೇಶಗೊಂಡಿರುವುದು.

೫೮. ನಿನ್ನ ಸಂಬಂಧವಾಗಿ ಮತ್ತೊಂದು ವಿಷಯವೂ ಸಹ ನನಗೆ ಶಿರೋವೇದನೆಯನ್ನುಂಟುಮಾಡುತ್ತಿರುವುದು. ಬಾಲಿಕೆಯಾದ ನೀನು ಅಪ್ರಾಪ್ತವಯಸ್ಕಳಾದರೂ ಕೂಡ ಆಗಲೇ ದೇಹವನ್ನು ವಿಸರ್ಜಿಸುವ ಬುದ್ಧಿಯು ನಿನಗೇಕುಂಟಾಯಿತು?

ವಾಮಃ ಕಾಮೋ ಮನುಷ್ಯೇಷು ಸತ್ಯಮೇತದ್ವಚೋ ಯತಃ ।
ಸ್ಪೃಹಣೀಯಾಸಿ ಸರ್ವೇಷಾಮೇಮಂ ಪೀಡಯಸೇ ವಪುಃ ॥ ೫೯ ॥
ಅವಿಜ್ಞಾತಾನ್ವಯೋ ನಗ್ನಃ ಶೂಲೀ ಭೂತಗಣಾಧಿಪಃ ।
ಶ್ಮಶಾನನಿಲಯೋ ಭಸ್ಮೋದ್ಧೂಳನೋ ವೃಷವಾಹನಃ ॥ ೬೦ ॥
ಗಜಾಜಿನೋ ದ್ವಿಜಿಹ್ವಾದ್ಯಲಂಕೃತಾಂಗೋ ಜಟಾಧರಃ ।
ವಿರೂಪಾಕ್ಷಃ ಕಥಂಕಾರಂ ನಿರ್ಗುಣಃ ಸ್ಯಾತ್ತ್ವಮೋಚಿತಃ ॥ ೬೧ ॥
ಗುಣಾ ಯೇ ತದಶೀಲಾದ್ಯಾ ವರಾಣಾಮುದಿತಾ ಬುಧೈಃ ।
ತೇಷಾಮೇಕೋಽಪಿ ನೈವಾಸ್ತಿ ತಸ್ಮಿನ್ ತನ್ನೋಚಿತಃ ಸ ತೇ ॥ ೬೨ ॥
ಶೋಚನೀಯತಮಾ ಪೂರ್ವಮಾಸೀತ್ಪಾರ್ವತಿ ಕೌಮುದೀ ।
ತ್ವಂ ಸಂವೃತ್ತಾ ದ್ವಿತೀಯಾಸಿ ತಸ್ಯಾಸ್ತತ್ಸಂಗಮಾಶಯಾ ॥ ೬೩ ॥
ತಪೋಧನಾಃ ಸರ್ವಸಮಾ ವಯಂ ಯದ್ಯಪಿ ಪಾರ್ವತಿ ।
ಮನೋತ್ಯೇವ ತವಾರಂಭಃ ಶೂಲಾಯಾಂ ಯೂಪಸತ್ಕ್ರಿಯಾ ॥ ೬೪ ॥

---

೫೯. ಮನುಷ್ಯರಲ್ಲಿ ಕಾಮವೆಂಬುದು ವಕ್ರಮಾರ್ಗವುಳ್ಳುದೆಂದು ಹೇಳುವವರ ಮಾತು ಸತ್ಯವೆಂದೆನ್ನಬೇಕು. ಏಕೆಂದರೆ ಸಕಲರಿಗೂ ಚಿತ್ತಾಕರ್ಷಕವಾದ ನಿನ್ನ ಶರೀರವನ್ನು ನೀನು ಈ ರೀತಿಯಾಗಿ ಶೋಷಿಸುತ್ತಿರುವೆ.

೬೦. ನಿನ್ನ ಪ್ರೀತಿಪಾತ್ರನಾದರೊ ಕುಲಗೋತ್ರಗಳು ತಿಳಿಯದವನು. ದಿಗಂಬರನು. ಶೂಲಾಯುಧವುಳ್ಳವನು. ಭಯಂಕರಗಳಾದ ಭೂತಗಣಗಳಿಗೊಡೆಯನು. ಸ್ಮಶಾನವೇ ಆತನ ವಾಸಸ್ಥಾನವು. ಮೈಯೆಲ್ಲವೂ ವಿಭೂತಿಮಯವಾಗಿರುವುದು. ಮುದಿಯಾದ ಎತ್ತೇ ಆತನಿಗೆ ವಾಹನವು.

೬೧. ಆನೆಯ ಚರ್ಮವೇ ಹೊದಿಕೆಯಾಗುಳ್ಳವನು. ಕಾಳಸರ್ಪಗಳೇ ಆತನ ಮೈಗೆ ಅಲಂಕಾರಗಳು. ತಲೆಯಲ್ಲಿ ಜಡೆಗಳನ್ನು ಧರಿಸಿರುವನು. ವಿಕಾರವಾದ ಮೂರನೆಯ ಕಣ್ಣುಳ್ಳವನು. ಗುಣಹೀನನು. ಇಂತಹ ವ್ಯಕ್ತಿಯು ಹೇಗೆ ತಾನೆ ನಿನಗೆ ಉಚಿತನಾದ ಪತಿಯಾದಾನು?

೬೨. ಜ್ಞಾನಿಗಳಾದವರು ವರರಲ್ಲಿ, ಗುಣಗಳು, ಕುಲಶೀಲಗಳು ಮುಂತಾದುವುಗಳನ್ನು ಅಪೇಕ್ಷಿಸುವರು. ಅವುಗಳಲ್ಲಿ ಒಂದಾದರೂ ಈತನಲ್ಲಿ ಕಾಣುವುದಿಲ್ಲ. ಆದುದರಿಂದ ಶಿವನು ಸರ್ವಥಾ ನಿನಗೆ ತಕ್ಕ ವರನಲ್ಲ.

೬೩–೬೪. ಎಲೌ ಪಾರ್ವತಿಯೆ! ಪೂರ್ವದಲ್ಲಿ ಕೌಮುದಿಯು ಶಿವನನ್ನು ವಿವಾಹ ಮಾಡಿಕೊಂಡು ಅತ್ಯಂತ ಶೋಚನೀಯಳಾದಳು. ಈಗ ನೀನು ಆಕೆಯನ್ನು ಸವತಿಯಾಗಿ ಸ್ವೀಕರಿಸಲು ಆತನಿಗೆ ಎರಡನೆಯ ಹೆಂಡತಿಯಾಗಲೆಳಸುವೆ. ತಪೋಧನರಾದ ನಾವು ಸರ್ವಸಮರಾಗಿರುವುದು ದಿಟವೆ. ಆದರೂ ಈ ನಿನ್ನ ಪ್ರಯತ್ನವು ಚೋರರನ್ನು ಶಿಕ್ಷಿಸುವ ಶೂಲವನ್ನೇ ಯೂಪಸ್ತಂಭ

ವೃಷಭಾರೋಹಣಂ ವಾಸಃ ಶ್ಮಶಾನೇ ಪಾಣಿಸಂಗ್ರಹಃ ।
ಸವ್ಯಾಲಪಾಣಿನಾ ಶ್ಯಾಮಗಜತ್ವಗ್ಬಂಧನಂ ಕಥಂ ॥ ೬೫ ॥
ಜನಹಾಸ್ಯಕರಂ ಸರ್ವಂ ತ್ವಯಾರಬ್ಧಮಸಾಂಪ್ರತಂ ।
ಸ್ತ್ರೀಭಾವಾದ್ಭೂತಿಸಂಪರ್ಕಃ ಕಥಂ ಚಾಭಿಮತಸ್ತವ ॥ ೬೬ ॥
ನಿವರ್ತಯ ಮನಸ್ತಸ್ಮಾದೇತತ್ಸರ್ವವಿರೋಧಿನಃ ।
ಮೃಗಾಕ್ಷಿ ಮದನಾರಾತೇರ್ಮರ್ಕಟಾಕ್ಷಸ್ಯ ಪ್ರಾರ್ಥನಾತ್ ॥ ೬೭ ॥
ವಿರುದ್ಧವಾದಿನಂ ಚೈವಂ ಬ್ರಹ್ಮಚಾರಿಣಮಾತ್ಮನಃ ।
ನಿಶಮ್ಯ ಕುಪಿತಾ ದೇವೀ ಪ್ರಾಹ ವಾಚಾ ಸಗದ್ಗದಂ ॥ ೬೮ ॥
ಮಾ ಮಾ ಬ್ರಾಹ್ಮಣ ಭಾಷಿಷ್ಠಾ ವಿರುದ್ಧಮಿತಿ ಶಂಕರೇ ।
ಮಹತ್ತಮೋ ಯಾತಿ ಪುಮಾನ್ದೇವದೇವಸ್ಯ ನಿಂದಯಾ ॥ ೬೯ ॥
ನ ಸಮ್ಯಗಭಿಜಾನಾಸಿ ತಸ್ಯ ದೇವಸ್ಯ ಚೇಷ್ಟಿತಂ ।
ಶೃಣು ಬ್ರಾಹ್ಮಣ ತ್ವಂ ಪಾಪಾದ್ಯಥಾಸ್ಮಾತ್ಪರಿಮುಚ್ಯಸೇ ॥ ೭೦ ॥

---

ವನ್ನಾಗಿಟ್ಟುಕೊಂಡು ಮಾಡಿದ ಯಜ್ಞದಂತೆ ನನ್ನ ಮನಸ್ಸಿಗೆ ಅತ್ಯಂತ ಖೇದ ವನ್ನುಂಟುಮಾಡುತ್ತಿರುವುದು.

೬೫. ಸುಕುಮಾರಿಯಾದ ನಿನಗೆ ವೃಷಭವನ್ನು ಆರೋಹಿಸುವುದೂ, ಸ್ಮಶಾನದಲ್ಲಿ ವಾಸಮಾಡುವುದೂ, ಸರ್ಪಗಳಿಂದ ಕೂಡಿರುವ ಶಿವನ ಕೈಗಳನ್ನು ಹಿಡಿಯುವುದೂ, ಶುದ್ಧವಾದ ಆನೆಯ ಹಸಿಯ ಚರ್ಮವನ್ನು ಹೊದೆಯುವುದೂ ಹೇಗೆ ಒಪ್ಪುವುವು?

೬೬. ನೀನು ಮಾಡುತ್ತಿರುವ ಕಾರ್ಯವು ಅತ್ಯಂತ ಅಯುಕ್ತವಾದುದೂ ಜನರಿಗೆ ಹಾಸ್ಯಕರವಾದುದೂ ಅಲ್ಲದೆ ಸ್ತ್ರೀಸ್ವಭಾವಳಾದ ನಿನಗೆ ವಿಭೂತಿ ಸಂಪರ್ಕವೆಂಬುದು ಹೇಗೆ ಉಂಟಾಗುವುದು?

೬೭. ಎಲೌ ಮೃಗನೇತ್ರೆಯೆ! ಆ ಶಿವನು ಲೋಕವಿಪರೀತನೂ, ಮನ್ಮಥ ಶತ್ರುವೂ, ವಿರೂಪನೇತ್ರನೂ ಆಗಿರುವನು. ಆದುದರಿಂದ ನಿನ್ನ ಮನಸ್ಸನ್ನು ಆತನನ್ನು ಹೊಂದುವ ಇಚ್ಛೆಯಿಂದ ಹಿಂದಿರುಗಿಸುವುದುಚಿತವು."

೬೮. ಈ ರೀತಿಯಾಗಿ ತನ್ನನ್ನು ಮೋಹಗೊಳಿಸುವಂತಹ ಮಾತುಗಳನ್ನು ಬ್ರಹ್ಮಚಾರಿಯ ರೂಪದಿಂದ ಶಿವನು ಆಡುತ್ತಿರಲು, ಪಾರ್ವತಿಯು ಕೇಳಿ ಕುಪಿತಳಾಗಿ ಗದ್ಗದಿತವಾದ ಕಂಠದಿಂದ ಆತನನ್ನು ಕುರಿತು ಇಂತೆಂದಳು.

೬೯–೭೧. "ಅಯ್ಯಾ ಬ್ರಾಹ್ಮಣನೆ! ಸಾಕು ಸಾಕು. ಸಾಕ್ಷಾತ್ಪರಮೇಶ್ವರ ನಿಗೆ ವಿರುದ್ಧಗಳಾದ ಮಾತುಗಳನ್ನಿಲ್ಲಿ ಆಡಬೇಡ. ಮಹಾದೇವನನ್ನು ನಿಂದಿಸು ವುದರಿಂದ ಮನುಷ್ಯನು ಮಹತ್ತರವಾದ ಅಂಧತಮಸ್ಸನ್ನು ಪಡೆಯುವನು. ಆ ಪರಮೇಶ್ವರನ ಲೀಲೆಗಳನ್ನು ನೀನು ಚೆನ್ನಾಗಿ ಅರಿತಿರುವುದಿಲ್ಲ. ಆ ಶಿವನಿಂದಾ

ಸ ಆದಿಃ ಸರ್ವಜಗತಾಂ ಕೋಽಸ್ಯ ವೇದಾನ್ವಯಂ ತತಃ ।
ಸರ್ವಂ ಜಗದ್ಯಸ್ಯ ರೂಪಂ ದಿಗ್ವಾಸಾಃ ಕೀರ್ತ್ಯತೇ ತತಃ ॥ ೨೦ ॥
ಗುಣತ್ರಯಮಯಂ ಶೂಲಂ ಶೂಲೀ ಯಸ್ಮಾದ್ಬಿಭರ್ತಿ ಸಃ ।
ಅಬದ್ಧಾಃ ಸರ್ವತೋ ಮುಕ್ತಾಃ ಭೂತಾ ಏವ ಚ ತತ್ಪತಿಃ ॥ ೨೧ ॥
ಶ್ಮಶಾನಂ ಚಾಪಿ ಸಂಸಾರಸ್ತದ್ವಾಸೀ ಕೃಪಯಾರ್ಥಿನಾಂ ।
ಭೂತಯಃ ಕಥಿತಾ ಭೂತಿಸ್ತಾಂ ಬಿಭರ್ತಿ ಸ ಭೂತಿಭೃತ್ ॥ ೨೨ ॥
ವೃಷೋ ಧರ್ಮ ಇತಿ ಪ್ರೋಕ್ತಸ್ತಮಾರೂಢಸ್ತತೋ ವೃಷೀ ।
ಸರ್ಪಾಶ್ಚ ದೋಷಾಃ ಕ್ರೋಧಾದ್ಯಾ ಸ್ತಾನ್ಬಿಭರ್ತಿ ಜಗನ್ಮಯಃ ॥ ೨೩ ॥
ನಾನಾವಿಧಾಃ ಕರ್ಮಯೋಗಾ ಜಟಾರೂಪಾ ಬಿಭರ್ತಿ ಸಃ ।
ವೇದತ್ರಯೀ ತ್ರಿನೇತ್ರಾಣಿ ತ್ರಿಪುರಂ ತ್ರಿಗುಣಂ ವಪುಃ ॥ ೨೪ ॥
ಭಸ್ಮೀಕರೋತಿ ತದ್ದೇವಸ್ತ್ರಿಪುರಘ್ನಸ್ತತಃ ಸ್ಮೃತಃ ।
ಏವಂ ವಿಧಂ ಮಹಾದೇವಂ ವಿದುರ್ಯೇ ಸೂಕ್ಷ್ಮದರ್ಶಿನಃ ॥ ೨೫ ॥

---

ರೂಪವಾದ ಪಾಪದಿಂದ ನೀನು ಮುಕ್ತನಾಗುವ ಉಪಾಯವನ್ನು ಹೇಳುವೆನು, ಕೇಳು. ಆತನೇ ಸಕಲ ಜಗತ್ತಿಗೂ ಆದಿಪುರುಷನಾದುದರಿಂದ ಆತನ ಕುಲಕ್ರಮವನ್ನು ಯಾರು ತಾನೆ ತಿಳಿಯಬಲ್ಲರು? ಸಕಲ ಪ್ರಪಂಚವೂ ಯಾರಿಗೆ ಶರೀರವಾಗಿದೆಯೊ ಆತನು ದಿಗಂಬರನೇ ಆಗಿರಬೇಕು.

೨೧. ತ್ರಿಗುಣಾತ್ಮಕವಾದ ಶೂಲವನ್ನು ಧರಿಸುತ್ತಿರುವುದರಿಂದ ಆತನಿಗೆ ತ್ರಿಶೂಲಿಯೆಂದು ಹೆಸರು. ಸಕಲ ಭೂತಗಳೂ ಆತನ ಶರೀರದಿಂದ ನಾನಾವಿಧವಾಗಿ ಉದ್ಭವಿಸಿರುವುವಾದುದರಿಂದ ಆತನೇ ಭೂತಪತಿಯು.

೨೨. ರುದ್ರಭೂಮಿಯೇ ಆತನ ಸಂಸಾರವು. ಜೀವರಲ್ಲಿ ಕೃಪೆದೋರುವವನಾಗಿ ಆತನು ಅಲ್ಲಿಯೇ ವಾಸಮಾಡುತ್ತಾನೆ. ಅಣಿಮಾದಿ ಅಷ್ಟಸಿದ್ಧಿಗಳಿಗೆ ಭೂತಿಗಳೆಂದು ಹೆಸರಲ್ಲವೆ! ಅವುಗಳನ್ನು ಧರಿಸಿರುವುದರಿಂದ ಆತನಿಗೆ ಭೂತಿಭೂಷಿತನೆಂದೂ ನಾಮವಿರುವುದು.

೨೩. ಧರ್ಮವೇ ವೃಷಭವೆಂದು ಹೇಳಲ್ಪಟ್ಟಿರುವುದು. ಅದರಲ್ಲಿ ಪ್ರತಿಷ್ಠಿತನಾಗಿರುವುದರಿಂದ ಆತನು ವೃಷಭವಾಹನನಾಗಿರುವನು. ಕಾಮಕ್ರೋಧಾದಿ ಅರಿವರ್ಗಗಳೇ ಸರ್ಪಗಳು. ಅವುಗಳನ್ನು ಜಗನ್ಮಯನಾದ ಪರಮೇಶ್ವರನು ಧರಿಸಿರುವುದರಿಂದ ಸರ್ಪಭೂಷಣನೂ ಆಗಿರುವನು.

೨೪. ಆತನೇ ಜಟಾರೂಪಗಳಾದ ನಾನಾ ವಿಧಗಳಾದ ಕರ್ಮಯೋಗಗಳನ್ನು ವಹಿಸಿರುವನು. ಋಗ್ಯಜುಸ್ಸಾಮವೇದಗಳೇ ಆತನ ನೇತ್ರಗಳು. ತ್ರಿಗುಣಾತ್ಮಕವಾದ ತ್ರಿಪುರವೇ ಆತನ ಶರೀರವು.

೨೫. ಅದನ್ನು ನಾಶಮಾಡುವುದರಿಂದ ಆತನಿಗೆ ತ್ರಿಪುರ ಧ್ವಂಸಕನೆಂದು

ಕಥಂಕಾರಂ ಹಿ ತೇ ನಾಮ ಭಜಂತೇ ನೈವ ತಂ ಹರಂ ।
ಅಥವಾ ಭೀತಸಂಸಾರಾಃ ಸರ್ವೇ ವಿಪ್ರ ಯತೋ ಜನಾಃ ॥ ೭೭ ॥
ವಿಮೃಶ್ಯ ಕುರ್ವತೇ ಸರ್ವಂ ವಿಮೃಶ್ಯೈತನ್ಮಯಾ ಕೃತಂ ।
ಶುಭಂ ವಾಪ್ಯಶುಭಂ ವಾಸ್ತು ತ್ವಮಪ್ಯೇನಂ ಪ್ರಪೂಜಯ ॥ ೭೮ ॥
ಇತಿ ಬ್ರುವಂತ್ಯಾಂ ತಸ್ಯಾಂ ತು ಕಿಂಚಿತ್ಪ್ರಸ್ಫುರಿತಾಧರಂ ।
ವಿಜ್ಞಾಯ ತಂ ಸಖೀಮಾಹ ಕಿಮಪ್ಯೇಷ ವಿವಕ್ಷುಕಃ ॥ ೭೯ ॥
ವಾರ್ಯತಾಮಿತಿ ವಿಪ್ರೋಽಯಂ ಮಹದ್ನಿಂದಾಭಾಷಕಃ ।
ನ ಕೇವಲಂ ಪಾಪಭಾಗೀ ಶ್ರೋತಾ ವೈ ಸ್ಯಾನ್ನ ಸಂಶಯಃ ॥ ೮೦ ॥
ಅಥವಾ ಕಿಂ ಚ ನಃ ಕಾರ್ಯಂ ವಾದೇನ ಸಹ ಬ್ರಾಹ್ಮಣೈಃ ।
ಕರ್ಣೌ ಪಿಧಾಯ ಯಾಸ್ಯಾಮೋ ಯಥಾ ಯಸ್ಮಾತ್ಪ್ರಥಾಸ್ತು ಸಃ ॥ ೮೧ ॥
ಇತ್ಯುಕ್ತ್ವೋತ್ಥಾಯ ಗಚ್ಛಂತ್ಯಾಂ ಪಿಧಾಯ ಶ್ರವಣಾವುಭೌ ।
ಸ್ವರೂಪಂ ಸಮುಪಾಶ್ರಿತ್ಯ ಜಗೃಹೇ ವಸನಂ ಹರಃ ॥ ೮೨ ॥

---

ಹೆಸರು. ಇಂತಹ ಮಹಾದೇವನನ್ನು ಯಾವ ಸೂಕ್ಷ್ಮದರ್ಶಿಗಳು ತಿಳಿದಿರುತ್ತಾರೆಯೊ, ಅವರೆಲ್ಲರೂ ಭಗವಂತನನ್ನು ಹೇಗೆ ತಾನೆ ಪೂಜಿಸದೆ ಇರುವರು?

೭೭–೭೯. ಅಲ್ಲದೆ ಸಂಸಾರದಿಂದ ಭಯಗೊಂಡವರಾಗಿ ಸಕಲ ಜನರೂ ಯುಕ್ತಾಯುಕ್ತ ವಿವೇಚನೆಯಿಂದಲೇ ಸರ್ವಕಾರ್ಯಗಳನ್ನೂ ಮಾಡುವರಲ್ಲವೆ. ಅಂತೆಯೇ ನಾನೂ ಈ ಕಾರ್ಯವನ್ನು ಬುದ್ಧಿಪೂರ್ವಕವಾಗಿಯೇ ಮಾಡಿರುವೆನು. ಪರಂತು ಈ ಕಾರ್ಯವು ಶುಭವಾಗಲಿ ಅಶುಭವಾಗಲಿ, ನೀನೂ ಸಹ ಆ ಪರಮೇಶ್ವರನನ್ನು ಪೂಜಿಸು.'' ಇಂತೆಂದು ಹೇಳಿದ ಆಕೆಯನ್ನು ಕಂಡು ಬ್ರಾಹ್ಮಣನು ಮಾತನಾಡುವವನಂತೆ ತುಟಿಗಳನ್ನಲ್ಲಾಡಿಸಲು ಪಾರ್ವತಿಯು ತನ್ನ ಸಖಿಯನ್ನು ಕುರಿತು ಹೇಳತೊಡಗಿದಳು :—"ಎಲೌ ಸಖಿಯೆ! ಈತನು ಮತ್ತೂ ಏನನ್ನೋ ಮಾತನಾಡಲಿಚ್ಛಿಸುವನು.

೮೦. ಇವನನ್ನು ತಡೆ. ಈ ಬ್ರಾಹ್ಮಣನು ಮಹಾತ್ಮರನ್ನು ದೂಷಿಸುವ ಭಾಷಣೆಗಳನ್ನಾಡುತ್ತಿರುವನು. ಈತನೊಬ್ಬನೇ ಅಲ್ಲದೆ ಈತನ ಮಾತುಗಳನ್ನು ಕೇಳುವವರೂ ಕೂಡ ಪಾಪಕ್ಕೆ ಭಾಗಿಗಳಾಗುವರು. ಇದರಲ್ಲಿ ಸಂಶಯವಿಲ್ಲ.

೮೧. ಅಲ್ಲದೆ ಈ ಬ್ರಾಹ್ಮಣರೊಡನೆ ವಾದಮಾಡುವುದರಿಂದ ನಮಗೇನು ಪ್ರಯೋಜನವು? ನಾವು ಕಿವಿಗಳನ್ನು ಮುಚ್ಚಿಕೊಂಡು ಹೊರಟು ಹೋಗೋಣ. ಈತನು ತನಗಿಷ್ಟಬಂದಂತೆ ನಡೆದುಕೊಳ್ಳಲಿ.''

೮೨. ಹೀಗೆಂದು ಎದ್ದು ಕಿವಿಗಳೆರಡನ್ನೂ ಮುಚ್ಚಿಕೊಂಡು ಹೊರಡುತ್ತಿರುವ ಪಾರ್ವತಿಯನ್ನು ಕಂಡು ಶಿವನು ತನ್ನ ನಿಜರೂಪವನ್ನು ಸ್ವೀಕರಿಸಿ ಆಕೆಯ ವಸ್ತ್ರವನ್ನು ಹಿಡಿದುಕೊಂಡನು.

ತತೋ ನಿರೀಕ್ಷ್ಯ ತಂ ದೇವಂ ಸಂಭ್ರಾಂತಾ ಪರಮೇಶ್ವರೀ ।
ಪ್ರಣಿಪತ್ಯ ಮಹೇಶಾನಂ ತುಷ್ಟಾವಾವನತಾ ಉಮಾ ॥ ೮೩ ॥
ಪ್ರಾಹ ತಾಂ ಚ ಮಹಾ ದೇವೋ ದಾಸೋಽಸ್ಮಿ ತವ ಶೋಭನೇ ।
ತಪೋದ್ರವ್ಯೇಣ ಕ್ರೀತಶ್ಚ ಸಮಾದಿಶ ಯಥೇಪ್ಸಿತಂ ॥ ೮೪ ॥

ದೇವ್ಯುವಾಚ :—

ಮನಸಸ್ತ್ವಂ ಪ್ರಭುಃ ಶಂಭೋ ದತ್ತಂ ತಚ್ಚ ಮಯಾ ತವ ।
ವಪುಷಃ ಪಿತರಾವೀಶೌ ತೌ ಸಂಮಾನಯಿತುಮರ್ಹಸಿ ॥ ೮೫ ॥

ಮಹಾದೇವ ಉವಾಚ :—

ಪಿತ್ರಾ ಹಿ ತೇ ಪರಿಜ್ಞಾತಂ ದೃಷ್ಟ್ವಾ ತ್ವಾಂ ರೂಪಶಾಲಿನೀಂ ।
ಬಾಲಾಂ ಸ್ವಯಂವರಂ ಪುತ್ರೀಮಹಂ ದಾಸ್ಯಾಮಿ ನಾನ್ಯಥಾ ॥ ೮೬ ॥
ತತ್ತಸ್ಯ ಸರ್ವಮೇವಾಸ್ತು ವಚನಂ ತ್ವಂ ಹಿಮಾಚಲಂ ।
ಸ್ವಯಂವರಾರ್ಥಂ ಸುಶ್ರೋಣಿ ಪ್ರೇರಯ ತ್ವಾಂ ವೃಣೇ ತತಃ ॥ ೮೭ ॥

---

೮೩. ಆಗ ಆತನನ್ನು ಕಂಡು ಸಂಭ್ರಮಯುಕ್ತಳಾಗಿ ದೇವಿಯು ಮಹಾದೇವನಿಗೆ ನಮಸ್ಕರಿಸಿ ಬಹು ವಿಧವಾಗಿ ಸ್ತೋತ್ರಮಾಡಿ ತಲೆಯನ್ನು ಬಾಗಿ ನಿಂತುಕೊಂಡಳು.

೮೪. ಆಗ ಮಹೇಶ್ವರನು "ಎಲೌ ಪಾರ್ವತಿಯೆ! ನಿನಗೆ ನಾನು ದಾಸನಾಗಿರುವೆನು. ನಿನ್ನ ತಪಸ್ಸೆಂಬ ದ್ರವ್ಯದಿಂದ ವಿಕ್ರೀತನಾಗಿರುವೆನು. ಈಗ ನಿನಗೆ ಬೇಕಾಗಿರುವ ಇಷ್ಟಾರ್ಥಗಳನ್ನು ಕೇಳಿಕೊ" ಎಂದು ಹೇಳಿದನು.

೮೫. ದೇವಿಯು ಹೇಳುತ್ತಾಳೆ:—"ಎಲೈ ಶಂಭುವೆ! ನೀನೇ ನನ್ನ ಮನಃಪೂರ್ವಕವಾಗಿ ಪತಿಯೆಂದು ಸ್ವೀಕರಿಸಲ್ಪಟ್ಟಿರುವೆ. ಆ ಮನಸ್ಸನ್ನೇ ನಾನು ನಿನಗೆ ಧಾರೆಯೆರೆದಿರುವೆನು. ಆದರೆ ಈ ಶರೀರವು ಮಾತ್ರ ನನ್ನ ತಾಯಿ ತಂದೆಗಳ ಅಧೀನವಾಗಿರುವುದು. ಅವರನ್ನು ನೀನು ಒಪ್ಪಿಸಬೇಕು."

೮೬. ಮಹಾದೇವನು ಹೇಳುತ್ತಾನೆ:—"ಎಲೌ ಶುಭಾಂಗಿಯೆ! ನೀನು ಇಷ್ಟು ರೂಪವಂತೆಯಾಗಿರುವುದನ್ನು ಕಂಡು ನಿನ್ನ ತಂದೆಯು ಪೂರ್ವದಲ್ಲಿಯೇ 'ಈ ನನ್ನ ಎಳಗುವರಿಯನ್ನು ಕೇವಲ ಸ್ವಯಂವರ ವಿಧಿಯಿಂದಲೇ ಮದುವೆಯಲ್ಲಿ ಕೊಡುವೆನೇ ಹೊರತು ಅನ್ಯಥಾ ಆಗಲಾರದು' ಎಂದು ಪ್ರತಿಜ್ಞೆಯನ್ನು ಮಾಡಿರುವನು.

೮೭. ಆದುದರಿಂದ ಆತನ ಮಾತುಗಳೇ ಸತ್ಯವಾಗಲಿ. ನೀನೂ ತಂದೆಯನ್ನು ಸ್ವಯಂವರಕ್ಕಾಗಿ ಪ್ರೇರೇಪಿಸುವಳಾಗು. ಅಲ್ಲಿಯೇ ನಾನು ನಿನ್ನನ್ನು ವರಿಸುತ್ತೇನೆ."

ಇತ್ಯುಕ್ತ್ವಾ ತಾಂ ಮಹಾದೇವಃ ಶುಚಿಃ ಶುಚಿಪದೋ ವಿಭುಃ ।
ಜಗಾಮೇಷ್ಟಂ ತದಾ ದೇಶಂ ಸ್ವಪುರಂ ಪ್ರಯಯೌ ಚ ಸಾ ॥ ೮೮ ॥
ದೃಷ್ಟ್ವಾ ದೇವೀಂ ತದಾ ಹೃಷ್ಟೋ ಮೇನಯಾ ಸಹಿತೋಽಚಲಃ ॥ ೮೯ ॥
ಆಲಿಂಗ್ಯಾಘ್ರಾಯ ಪಪ್ರಚ್ಛ ಸರ್ವಂ ಸಾ ಚ ನ್ಯವೇದಯತ್ ॥ ೯೦ ॥
ದುಹಿತುರ್ದೇವದೇವೇನ ಆಜ್ಞಪ್ತಂ ತು ಹಿಮಾಚಲಃ ।
ಸ್ವಯಂವರಂ ಪ್ರಮುದಿತಃ ಸರ್ವಲೋಕೇಷ್ವಘೋಷಯತ್ ॥ ೯೧ ॥
ಅಶ್ವಿನೌ ದ್ವಾದಶಾದಿತ್ಯಾ ಗಂಧರ್ವಗರುಡೋರಗಾಃ ।
ಯಕ್ಷಾ ಸಿದ್ಧಾಸ್ತಥಾ ಸಾಧ್ಯಾ ದೈತ್ಯಾಃ ಕಿಂಪುರುಷಾ ನಗಾಃ ॥
ಸಮುದ್ರಾದ್ಯಾಶ್ಚ ಯೇ ಕೇಚಿತ್ತ್ರೈಲೋಕ್ಯಪ್ರವರಾಶ್ಚ ಯೇ ॥ ೯೨ ॥
ತ್ರಯಸ್ತ್ರಿಂಶತ್ಸಹಸ್ರಾಣಿ ತ್ರಯಸ್ತ್ರಿಂಶಚ್ಛತಾನಿ ಚ ।
ತ್ರಯಸ್ತ್ರಿಂಶಚ್ಚ ಯೇ ದೇವಾಸ್ತ್ರಯಸ್ತ್ರಿಂಶಚ್ಚ ಕೋಟಯಃ ॥ ೯೩ ॥
ಜಗ್ಮುರ್ಗಿರೀಂದ್ರ ಪುತ್ರ್ಯಾಸ್ತು ಸ್ವಯಂವರಮನುತ್ತಮಂ ।
ಆಮಂತ್ರಿತಸ್ತಥಾ ವಿಷ್ಣುರ್ಮೇರುಮಾಹ ಹಸನ್ನಿವ ॥ ೯೪ ॥

---

೮೮. ಇಂತೆಂದು ಆಕೆಗೆ ಹೇಳಿ ಶುಚಿಯೂ ಶುಚಿನಿಲಯನೂ ಆದ ಮಹೇಶ್ವರನು ಯಥೇಷ್ಟವಾಗಿ ಹೊರಟು ಹೋದನು. ಪಾರ್ವತಿಯೂ ತನ್ನ ತಂದೆಯ ನಗರವನ್ನು ಸೇರಿದಳು.

೮೯-೯೦. ಆಕೆಯು ಹಿಂದಿರುಗಿದುದನ್ನು ಕಂಡು ಮೇನಾದೇವಿಯೊಡನೆ ಹಿಮವದ್ರಾಜನು ಹರ್ಷದಿಂದ ಆಲಿಂಗಿಸಿ ತಲೆಯನ್ನಾಘ್ರಾಣಿಸುತ್ತ ವೃತ್ತಾಂತ ವನ್ನು ಕೇಳುತ್ತಿರಲು ಆಕೆಯು ನಡೆದುದೆಲ್ಲವನ್ನೂ ನಿರೂಪಿಸಿದಳು.

೯೧. ಬಳಿಕ ಹಿಮವಂತನು ಸಂತೋಷದಿಂದ ಪರಮೇಶ್ವರನ ಆಜ್ಞಾನು ಸಾರವಾಗಿಯೇ ಪಾರ್ವತಿಯ ಸ್ವಯಂವರವು ನಡೆಯುವುದೆಂದು ಮೂರು ಲೋಕಗಳಲ್ಲಿಯೂ ಡಂಗುರ ಹಾಕಿಸಿದನು.

೯೨-೯೪. ಆಗ ಅಶ್ವಿನೀ ದೇವತೆಗಳೂ, ದ್ವಾದಶಾದಿತ್ಯರೂ, ಗಂಧರ್ವರೂ, ಗರುಡರೂ, ಉರಗರೂ, ಯಕ್ಷರೂ, ಸಿದ್ಧರೂ, ಸಾಧ್ಯರೂ, ರಾಕ್ಷಸರೂ, ಕಿಂಪುರುಷರೂ, ಇತರ ಪರ್ವತರಾಜರೂ, ಸಮುದ್ರಾಧಿಪತಿಗಳೂ, ಮೂರು ಲೋಕಗಳಲ್ಲಿಯೂ ಪ್ರಸಿದ್ಧರಾದ ಇತರ ಮಹನೀಯರೂ, ಮೂವತ್ತುಮೂರು ಕೋಟಿ, ಮೂವತ್ತುಮೂರು ಸಾವಿರದ, ಮೂವತ್ತುಮೂರು ನೂರು, ಮೂವತ್ತು ಮೂರು ದೇವತೆಗಳೂ ಕೂಡ ಅತ್ಯುತ್ತಮವಾದ ಪಾರ್ವತೀ ಸ್ವಯಂವರಕ್ಕಾಗಿ ನೆರೆದರು. ಹಾಗೆಯೇ ವಿವಾಹಕ್ಕೆ ಆಮಂತ್ರಿತನಾದ ಮಹಾವಿಷ್ಣುವೂ ಕೂಡ ಮೇರುವನ್ನು ಕುರಿತು "ಅಪ್ಪಾ ! ಪಾರ್ವತಿಯು ನಮಗೂ ದೇವಿಯೇ ಆಹುದು. ನಾನು ಆಕೆಗೆ ನಮಸ್ಕರಿಸುವೆನು" ಎಂದು ನಗುತ್ತಲೇ ಹೇಳಿದನು.........

ಮಾತಾಸ್ಮಾಕಂ ಚ ಸಾ ದೇವೀ ಮೇರೋ ಗಚ್ಛ ನಮಾಮಿ ತಾಂ ।
ಅಥ ಶೈಲಸುತಾ ದೇವೀ ಹೈಮಮಾರುಹ್ಯ ಶೋಭನಂ ॥ ೯೫ ॥
ವಿಮಾನಂ ಸರ್ವತೋಭದ್ರಂ ಸರ್ವರತ್ನೈರಲಂಕೃತಂ ।
ಅಪ್ಸರೋಭಿಃ ಪ್ರನೃತ್ಯದ್ಭಿಃ ಸರ್ವಾಭರಣಭೂಷಿತಾ ॥ ೯೬ ॥
ಗಂಧರ್ವಸಂಘೈರ್ವಿವಿಧೈಃ ಕಿನ್ನರೈಶ್ಚ ಸುಶೋಭನೈಃ ।
ಬಂದಿಭಿಃ ಸ್ತೂಯಮಾನಾ ಚ ವೀರಕಾಂಸ್ಯಧರಾ ಸ್ಥಿತಾ ॥ ೯೭ ॥
ಸಿತಾತಪತ್ರಂ ರತ್ನಾಂಶುಮಿಶ್ರಿತಂ ಚಾವಹತ್ತದಾ ।
ಶಾಲಿನೀ ನಾಮ ಪಾರ್ವತ್ಯಾಃ ಸಂಧ್ಯಾಪೂರ್ಣೇಂದುಮಂಡಲಾ ॥ ೯೮ ॥
ಚಾಮರಾಸಕ್ತಹಸ್ತಾಭಿರ್ದಿವ್ಯಸ್ತ್ರೀಭಿಶ್ಚ ಸಂವೃತಾ ।
ಮಾಲಾಂ ಪ್ರಗೃಹ್ಯ ಸಾ ತಸ್ಥೌ ಸುರದ್ರುಮಸಮುದ್ಭವಾಂ ॥ ೯೯ ॥
ಏವಂ ತಸ್ಯಾಂ ಸ್ಥಿತಾಯಾಂ ತು ಸ್ಥಿತೇ ಲೋಕತ್ರಯೇ ತದಾ ।
ಶಿಶುರ್ಭೂತ್ವಾ ಮಹಾದೇವಃ ಕ್ರೀಡಾರ್ಥಂ ವೃಷಭಧ್ವಜಃ ॥ ೧೦೦ ॥

---

೯೫–೯೬. ಆಗ ಗಿರಿಪುತ್ರಿಯು ಮಂಗಳಕರವಾದುದೂ, ಚಿನ್ನದಿಂದ ನಿರ್ಮಿತವಾದುದೂ, ಸರ್ವತೋಭದ್ರವಾದುದೂ, ಸಕಲ ರತ್ನಗಳಿಂದಲಂಕೃತವಾದುದೂ, ನರ್ತನ ಮಾಡುತ್ತಿರುವ ಅಪ್ಸರಸ್ತ್ರೀಯರಿಂದೊಡಗೂಡಿದುದೂ ಆದ ವಿಮಾನವನ್ನು ಏರಿ ಸಕಲಾಭರಣಸಂಯುತೆಯಾಗಿ ನಿಂತಳು.

೯೭. ವಿಧವಿಧಗಳಾದ ಗಂಧರ್ವ ಸಮೂಹಗಳಿಂದಲೂ, ಮಂಗಳಗಾಯಕರಾದ ಕಿನ್ನರರಿಂದಲೂ, ವಂದಿಮಾಗಧರಿಂದಲೂ ಹೊಗಳಲ್ಪಟ್ಟವಳಾಗಿ ಆಕೆಯು ವೀರಮುದ್ರಿಕೆಯನ್ನು ಧರಿಸಿ ನಿಂತಳು.

೯೮. ಸಂಧ್ಯಾಕಾಲದ ಪೂರ್ಣಚಂದ್ರನಂತೆ ಮನೋಹರವಾದ ಮುಖಮಂಡಲವುಳ್ಳ ಶಾಲಿನಿಯೆಂಬ ಸಖಿಯು ಪಾರ್ವತಿಗೆ ನವರತ್ನಗಳ ಕಾಂತಿಯಿಂದುಜ್ಜ್ವಲವಾದ ಶ್ವೇತಚ್ಛತ್ರವನ್ನು ಹಿಡಿದಳು.

೯೯. ಚಾಮರಗಳನ್ನು ಕೈಗಳಲ್ಲಿ ಹಿಡಿದು ಸುತ್ತುವರೆದಿರುವ ದಿವ್ಯಸ್ತ್ರೀಯರ ಮಧ್ಯದಲ್ಲಿ ಪಾರ್ವತಿಯು ದೇವಲೋಕದ ಪಾರಿಜಾತದ ಪುಷ್ಪಗಳಿಂದ ಮಾಡಿದ ಒಂದು ಮಾಲೆಯನ್ನು ಕೈಯಲ್ಲಿ ಹಿಡಿದು ನಿಂತಳು.

೧೦೦. ಇಂತು ದೇವಿಯು ಒಂದೆಡೆ ನಿಲ್ಲಲು ಆಕೆಯನ್ನು ನೋಡಲು ಬಂದ ಮೂರು ಲೋಕಗಳ ನಿವಾಸಿಗಳೆಲ್ಲರೂ ವಿವಾಹಮಂಟಪದ ಮತ್ತೊಂದೆಡೆಯಲ್ಲಿ ನಿಂತರು. ಆಗ ವೃಷಭವಾಹನನೂ, ಮಹಾದೇವನೂ ಆದ ಶಿವನು ಒಂದು ವಿನೋದವನ್ನು ನಡೆಸುವನಾಗಿ ಮಡಿಲಲ್ಲಿ ಎತ್ತಿಕೊಳ್ಳಲು ಅನುವಾದ ಕೇವಲ ಎಳೆಗೂಸಾಗಿ ವೇಷವನ್ನು ತಾಳಿದನು.

ಉತ್ಸಂಗತಲಸಂಗುಪ್ತೋ ಬಭೂವ ಭಗವಾನ್ಛಿವಃ ।
ಜಯೇತಿ ಯತ್ಪದಂ ಖ್ಯಾತಂ ತಸ್ಯ ಸತ್ಯಾರ್ಥಮೀಶ್ವರಂ ॥ ೧೧೧ ॥
ಅಥ ದೃಷ್ಟ್ವಾ ಶಿಶುಂ ದೇವಾಸ್ತಸ್ಯಾ ಉತ್ಸಂಗವರ್ತಿನಃ ।
ಕೋಽಯಮಿತ್ಯೇತಿ ಸಂಮಂತ್ರ್ಯ ಚುಕ್ರುಶುರ್ಭೃಶರೋಷಿತಾಃ ॥ ೧೧೨ ॥
ವಜ್ರಮಾಹಾರಯತ್ತಸ್ಯ ಬಾಹುಮುದ್ಯಮ್ಯ ವೃತ್ರಹಾ ।
ಸ ಬಾಹುರುದ್ಯತಸ್ತಸ್ಯ ತಥೈವ ಸಮತಿಷ್ಠತ ॥ ೧೧೩ ॥
ಸ್ತಂಭಿತಃ ಶಿಶುರೂಪೇಣ ದೇವದೇವೇನ ಲೀಲಯಾ ।
ವಜ್ರಂ ಕ್ಷೇಪ್ತುಂ ನ ಶಕ್ನೋತಿ ಬಾಹುಂ ಚಾಲಯಿತುಂ ತದಾ ॥ ೧೧೪ ॥
ವಹ್ನಿಃ ಶಕ್ತಿಂ ತದಾ ಕ್ಷೇಪ್ತುಂ ನ ಶಶಾಕ ತಥೋತ್ಥಿತಃ ।
ಯಮೋಽಪಿ ದಂಡಂ ಖಡ್ಗಂ ಚ ನಿರ್ಋತಿಸ್ತಂ ಶಿಶುಂ ಪ್ರತಿ ॥ ೧೧೫ ॥
ಪಾಶಂ ಚ ವರುಣೋ ರಾಜಾ ಧ್ವಜಯಷ್ಟಿಂ ಸಮೀರಣಃ ।
ಸೋಮೋ ಗುಡಂ ಧನೇಶಶ್ಚ ಗದಾಂ ಸುಮಹತೀಂ ದೃಢಾಂ ॥ ೧೧೬ ॥
ನಾನಾಯುಧಾನಿ ಚಾದಿತ್ಯಾ ಮುಸಲಂ ವಸವಸ್ತಥಾ ।
ಮಹಾಘೋರಾಣಿ ಶಸ್ತ್ರಾಣಿ ತಾರಕಾದ್ಯಾಶ್ಚ ದಾನವಾಃ ॥ ೧೧೭ ॥

---

೧೧೧–೧೧೨. ಯಾವುದಕ್ಕೆ ಜಯಸ್ಥಾನವೆಂಬ ಹೆಸರಿರುವುದೋ ಅದರ ಸತ್ಯಾರ್ಥವಾದ ಈಶ್ವರನ ಈ ಶಿಶುರೂಪವನ್ನು ಕಂಡು ತಮ್ಮ ತಮ್ಮೊಳಗೆಯೇ ಇವನು ಯಾರೆಂದು ದೇವತೆಗಳು ಅತ್ಯಂತ ರೋಷಗೊಂಡರು.

೧೧೩. ಮಹೇಂದ್ರನು ಶಿಶುವನ್ನು ನಿಗ್ರಹಿಸಲು ವಜ್ರಾಯುಧ ಸಹಿತವಾದ ತನ್ನ ಬಲಗೈಯನ್ನೆತ್ತಿದನು. ಆ ಕೈಯು ಎತ್ತಿದ್ದಂತೆಯೇ ನಿಶ್ಚೇಷ್ಟವಾಗಿ ನಿಂತು ಹೋಯಿತು.

೧೧೪. ಈ ರೀತಿಯಾಗಿ ಶಿಶುರೂಪಿಯಾದ ಮಹೇಶ್ವರನಿಂದ ನಿಶ್ಚೇಷ್ಟನಾಗಿ ಮಾಡಲ್ಪಟ್ಟ ಇಂದ್ರನು ತನ್ನ ವಜ್ರಾಯುಧವನ್ನು ಬೀಸಲೂ ಶಕ್ತನಾಗಲಿಲ್ಲ.

೧೧೫. ಅಂತೆಯೇ ಅಗ್ನಿದೇವನೂ ತನ್ನ ಶಕ್ತ್ಯಾಯುಧವನ್ನು ಪ್ರಯೋಗಿಸಲಾರದಾದನು. ಯಮನು ದಂಡದಿಂದಲೂ ನಿರ್ಋತಿಯು ಖಡ್ಗದಿಂದಲೂ ಆ ಶಿಶುವನ್ನು ನಿಗ್ರಹಿಸಲಾರದೆ ಹೋದರು.

೧೧೬–೧೧೭. ಸಮುದ್ರರಾಜನಾದ ವರುಣನು ತನ್ನ ಪಾಶವನ್ನೂ ವಾಯುವು ತನ್ನ ಕೇತುದಂಡವನ್ನೂ, ಚಂದ್ರನು ತನ್ನ ಗುಡಾಯುಧವನ್ನೂ ಕುಬೇರನು ದೃಢವೂ ಭಾರಸಮನ್ವಿತವೂ ಆದ ಗದೆಯನ್ನೂ, ದ್ವಾದಶಾದಿತ್ಯರು ನಾನಾ ವಿಧಗಳಾದ ಆಯುಧಗಳನ್ನೂ, ಅಷ್ಟವಸುಗಳು ಮುಸಲಾಯುಧವನ್ನೂ, ತಾರಕನೇ ಮೊದಲಾದ ರಾಕ್ಷಸೋತ್ತಮರು ಭಯಂಕರಗಳಾದ ಅನೇಕ ಶಸ್ತ್ರಗಳನ್ನೂ ಉಪಯೋಗಿಸಲೆಳಸಿ ನಿಶ್ಶಕ್ತರಾದರು.

ಸ್ತಂಭಿತಾ ದೇವದೇವೇನ ತಥಾನ್ಯೇ ಭುವನೇಷು ಯೇ ।
ಪೂಷಾ ದಂತಾನ್ದಶನ್ದಂತೈರ್ಬಾಲಮೈಕ್ಷತ ಮೋಹಿತಃ ॥ ೧೦೮ ॥
ತಸ್ಯಾಪಿ ದಶನಾಃ ಪೇತುರ್ದೃಷ್ಟಮಾತ್ರಸ್ಯ ಶಂಭುನಾ ।
ಭಗಶ್ಚ ನೇತ್ರೇ ವಿಕೃತೇ ಚಕಾರ ಸ್ಫುಟಿತೇಡತೇ ॥ ೧೦೯ ॥
ಬಲಂ ತೇಜಶ್ಚ ಯೋಗಾಂಶ್ಚ ಸರ್ವೇಷಾಂ ಜಗೃಹೇ ಪ್ರಭುಃ ।
ಅಥ ತೇಷು ಸ್ಥಿತೇಷ್ವೇವ ಮನ್ಯುಮತ್ಸು ಸುರೇಷ್ವಪಿ ॥ ೧೧೦ ॥
ಬ್ರಹ್ಮಾ ಧ್ಯಾನಮುಪಾಶ್ರಿತ್ಯ ಬುಬೋಧ ಹರಚೇಷ್ಟಿತಂ ।
ಸೋಽಭಿಗಮ್ಯ ಮಹಾದೇವಂ ತುಷ್ಟಾವ ಪ್ರಯತೋ ವಿಧಿಃ ।
ಪೌರಾಣೈಃ ಸಾಮಸಂಗೀತೈರ್ವೈದಿಕೈರ್ಗುಹ್ಯನಾಮಭಿಃ ॥ ೧೧೧ ॥
ನಮಸ್ತುಭ್ಯಂ ಮಹಾದೇವ ಮಹಾದೇವ್ಯೈ ನಮೋನಮಃ ।
ಪ್ರಸಾದಾತ್ತವ ಬುದ್ಧ್ಯಾದಿ ಜಗದೇತತ್ಪ್ರವರ್ತತೇ ॥ ೧೧೨ ॥
ಮೂಢಾಶ್ಚ ದೇವತಾಃ ಸರ್ವಾ ನೈನಂ ಬುಧ್ಯತ ಶಂಕರಂ ॥ ೧೧೩ ॥

---

೧೦೮. ಇವರಂತೆಯೇ ಲೋಕಗಳಲ್ಲಿದ್ದ ಇತರರೂ ಮಹಾದೇವನಿಂದ ನಿಶ್ಚೇಷ್ಟರಾಗಿ ಮಾಡಲ್ಪಟ್ಟರು. ಸೂರ್ಯನು ಆಶ್ಚರ್ಯಯುಕ್ತನಾಗಿ ಹಲ್ಲುಗಳನ್ನು ಕಡಿಯುತ್ತ ಆ ಬಾಲಕನನ್ನು ನೋಡುತ್ತಿದ್ದನು.

೧೦೯. ಆದರೆ ಪರಮೇಶ್ವರನು ಆತನ ಕಡೆಗೆ ನೋಡಿದ ಮಾತ್ರದಿಂದಲೇ ಆತನ ಹಲ್ಲುಗಳೆಲ್ಲವೂ ಉದುರಿಹೋದವು. ಆದಿತ್ಯನು ಶಿಶುವನ್ನು ನೋಡಿ ತನ್ನ ಕಣ್ಣುಗಳನ್ನು ವಿಕಾರಗೊಳಿಸಲು ಆತನ ಕಣ್ಣುಗಳೆರಡೂ ಒಡೆದುಹೋದವು.

೧೧೦. ಸ್ವಾಮಿಯಾದ ಶಿವನು ಅಲ್ಲಿ ನೆರೆದಿದ್ದ ಸಕಲರ ಶಕ್ತಿ, ತೇಜಸ್ಸು ಮತ್ತು ಯೋಗಮಹಿಮೆಗಳನ್ನೂ ಆಕರ್ಷಿಸಿದನು. ಆಗ ದೇವತೆಗಳೆಲ್ಲರೂ ಅತ್ಯಂತ ರೋಷಾವಿಷ್ಟರಾದರೂ ನಿಶ್ಚೇಷ್ಟರಾಗಿ ನಿಂತಿರಲು, ಬ್ರಹ್ಮನು ಧ್ಯಾನಾಸಕ್ತನಾಗಿ ಇದೆಲ್ಲವೂ ಪರಮೇಶ್ವರನ ಲೀಲೆಯೆಂಬುದನ್ನು ತಿಳಿದನು.

೧೧೧. ಆಗ ಚತುರ್ಮುಖನು ಶಿವನಲ್ಲಿಗೆ ಹೋಗಿ ಆತನನ್ನು ಪುರಾಣೋಕ್ತ ಸ್ತೋತ್ರಗಳಿಂದಲೂ, ಸಾಮವೇದದ ಉದ್ಗೀಥಗಳಿಂದಲೂ, ಅನೇಕ ಗುಹ್ಯ ನಾಮಗಳಿಂದಲೂ ಬಹು ವಿಧವಾಗಿ ಸ್ತುತಿಸತೊಡಗಿದನು.

೧೧೨. "ಎಲೈ ಮಹಾದೇವನೆ! ದೇವಿಯಿಂದೊಡಗೂಡಿದ ನಿನಗೆ ನಮಸ್ಕಾರವು. ಜನರ ಬುದ್ಧಿಯೇ ಮೊದಲಾದ ಸಕಲ ಪ್ರಪಂಚವೂ ನಿನ್ನ ಅನುಗ್ರಹ ಬಲದಿಂದಲೇ ನಡೆದುಬರುತ್ತಿರುವುದು.

೧೧೩-೧೧೪. ದೇವತೆಗಳಿರಾ! ನೀವೆಲ್ಲರೂ ಕೇವಲ ಅಜ್ಞಾನಿಗಳು. ಸಾಕ್ಷಾಚ್ಛಂಕರನೇ ಶಿಶುರೂಪಿಯೆಂಬುದನ್ನು ತಿಳಿಯಲಾರದಾದಿರಿ. ಸಕಲ ದೇವತೆಗಳ ನಮಸ್ಕಾರಗಳಿಗೆ ಪಾತ್ರನಾದ ಮಹಾದೇವನೇ ಇಲ್ಲಿಗೆ

ಮಹಾದೇವಮಿಹಾಯಾತಂ ಸರ್ವದೇವನಮಸ್ಕೃತಂ ।
ಗಚ್ಛಧ್ವಂ ಶರಣಂ ಶೀಘ್ರಂ ಯದಿ ಜೀವಿತುಮಿಚ್ಛಥ ॥ ೧೧೪ ॥
ತತಃ ಸಂಭ್ರಮಸಂಪನ್ನಾಸ್ತುಷ್ಟುವುಃ ಪ್ರಣತಾಃ ಸುರಾಃ ।
ನಮೋ ನಮೋ ಮಹಾದೇವ ಪಾಹಿ ಪಾಹಿ ಜಗತ್ಪತೇ ।
ದುರಾಚಾರಾನ್ಛವಾನಸ್ಮಾನಾತ್ಮದ್ರೋಹಪರಾಯಣಾನ್ ॥ ೧೧೫ ॥
ಅಹೋ ಪಶ್ಯತ ನೋ ಮೌಢ್ಯಂ ಜಾನಂತಸ್ತ್ವ ಭಾವಿನೀಂ ।
ಭಾರ್ಯಾಮುಮಾಂ ಮಹಾದೇವೀಂ ತಥಾಪ್ಯತ್ರ ಸಮಾಗತಾಃ ॥ ೧೧೬ ॥
ಯುಕ್ತಮೇತದ್ಯದಸ್ಮಾಕಂ ರಾಜ್ಯಂ ಗೃಹ್ಯೇತ ಚಾಸುರೈಃ ।
ಯೇಷಾಮೇವಂ ವಿಧಾ ಬುದ್ಧಿರಸ್ಮಾಭಿಃ ಕಿಂ ಕೃತಂ ತ್ವಿದಂ ॥ ೧೧೭ ॥
ಅಥವಾ ನೋ ನ ದೋಷೋಽಸ್ತಿ ಪಶವೋ ಹಿ ವಯಂ ಯತಃ ।
ತ್ವಯೈವ ಪತಿನಾ ಸರ್ವೇ ಪ್ರೇರಿತಾಃ ಕುರ್ಮಹೇ ವಿಭೋ ॥ ೧೧೮ ॥
ಈಶ್ವರಂ ಸರ್ವಭೂತಾನಾಂ ಪತಿಸ್ತ್ವಂ ಪರಮೇಶ್ವರಃ ।
ಭ್ರಾಮಯಸ್ಯಖಿಲಂ ವಿಶ್ವಂ ಯಂತ್ರಾರೂಢಂ ಸ್ವಮಾಯಯಾ ॥ ೧೧೯ ॥

---

ಬಂದಿರುವನು. ನಿಮಗೆ ಜೀವಿಸಬೇಕೆಂಬ ಇಚ್ಛೆಯಿದ್ದರೆ ಶೀಘ್ರವಾಗಿ ಆತನನ್ನು ಶರಣುಹೊಗಿರಿ."

೧೧೫. ಈ ಮಾತುಗಳನ್ನು ಕೇಳಿ ದೇವತೆಗಳೆಲ್ಲರೂ ಸಂಭ್ರಮಯುಕ್ತರಾಗಿ ಶರಣಾಗತರಾಗಿ ಸ್ತೋತ್ರಮಾಡತೊಡಗಿದರು. "ಮಹಾದೇವನೆ! ನಿನಗೆ ನಮಸ್ಕಾರವು. ಲೋಕಪಾಲಕನಾದ ನೀನೇ ದುರಾಚಾರಿಗಳೂ, ಆತ್ಮದ್ರೋಹ ನಿರತರೂ ಆದ ನಮ್ಮನ್ನೆಲ್ಲ ಕಾಪಾಡಬೇಕು.

೧೧೬. ಅಹೊ! ನಮ್ಮ ಬುದ್ಧಿಹೀನತೆಯನ್ನೇನೆಂದು ಹೇಳೋಣ! ಮಹಾದೇವಿಯಾದ ಉಮೆಯು ನಿನಗೆ ಪತ್ನಿಯೇ ಆಗುವಳೆಂಬುದನ್ನು ತಿಳಿದೂ ಕೂಡ ಆಕೆಯ ಮೇಲಿನ ಅಭಿಲಾಷೆಯಿಂದ ಇಲ್ಲಿಗೆ ಬಂದಿರುವೆವು.

೧೧೭. ಇಂತಹ ಬುದ್ಧಿಯುಳ್ಳ ನಮ್ಮ ಸ್ವರ್ಗಲೋಕವು ರಾಕ್ಷಸರಿಂದ ಅಪಹರಿಸಲ್ಪಟ್ಟಿರುವುದು ನಮಗೆ ಯುಕ್ತವಾದ ಶಿಕ್ಷೆಯೇ ಆಗಿರುವುದು. ನಾವೆಂತಹ ಕೆಲಸವನ್ನು ಮಾಡಿದೆವು!

೧೧೮. ಒಂದು ದೃಷ್ಟಿಯಿಂದ ನಮ್ಮಲ್ಲಿ ದೋಷವೇ ಇಲ್ಲವೆಂದು ಹೇಳಬೇಕು. ನಾವೆಲ್ಲರೂ ಪಶುಗಳೇ ಅಲ್ಲವೆ? ಪಶುಪತಿಯಾದ ನಿನ್ನಿಂದ ಪ್ರೇರಿತರಾಗಿಯೇ ಸಕಲ ಕಾರ್ಯಗಳನ್ನೂ ಮಾಡುತ್ತಿರುವೆವು.

೧೧೯. ಸಕಲ ಚರಾಚರ ಭೂತಗಳಿಗೂ ನೀನೇ ಸ್ವಾಮಿಯು. ನಿಯಾಮಕನು. ಪರಮೇಶ್ವರನು. ಯಂತ್ರದಲ್ಲಿ ಸಿಲುಕಿದಂತಿರುವ ಈ ಬ್ರಹ್ಮಾಂಡವನ್ನೆಲ್ಲ ನಿನ್ನ ಮಾಯೆಯಿಂದ ಭ್ರಮೆಗೊಳಿಸುತ್ತಿರುವೆ.

ಯೇನ ವಿಭ್ರಾಮಿತಾ ಮೂಢಾಃ ಸಮಾಯಾತಾಃ ಸ್ವಯಂವರಂ ।
ತಸ್ಮೈ ಪಶೂನಾಂ ಪತಯೇ ನಮಸ್ತುಭ್ಯಂ ಪ್ರಸೀದ ನಃ ॥ ೧೨೦ ॥
ಅಥ ತೇಷಾಂ ಪ್ರಸನ್ನೋಽಭೂದ್ದೇವದೇವಸ್ತ್ರಿಯಂಬಕಃ ।
ಯಥಾ ಪೂರ್ವಂ ಚಕಾರೈತಾನ್ಸಂಸ್ತವಾದ್ಬ್ರಹ್ಮಣಃ ಪ್ರಭುಃ ॥ ೧೨೧ ॥
ತಾರಕಪ್ರಮುಖಾ ದೈತ್ಯಾಃ ಸಂಕ್ರುದ್ಧಾಸ್ತತ್ರ ಪ್ರೋಚಿರೇ ।
ಕೋಽಯಮಂಗ ಮಹಾದೇವೋ ನ ಮನ್ಯಾಮೋ ವಯಂ ಚ ತಂ ॥
ತತಃ ಪ್ರಹಸ್ಯ ಬಾಲೋಽಸೌ ಹುಂಕಾರಂ ಲೀಲಯಾ ವ್ಯಧಾತ್ ।
ಹುಂಕಾರೇಣೈವ ತೇ ದೈತ್ಯಾಃ ಸ್ವಮೇವ ನಗರಂ ಗತಾಃ ॥ ೧೨೩ ॥
ವಿಸ್ಮೃತಂ ಸಕಲಂ ತೇಷಾಂ ಸ್ವಯಂವರಮುಖಂ ಚ ತತ್ ।
ಮಹಾದೇವ ಪ್ರಭಾವೇನ ದೈತ್ಯಾನಾಂ ಘೋರಕರ್ಮಣಾಂ ॥ ೧೨೪ ॥
ಏವಂ ಯಸ್ಯ ಪ್ರಭಾವೋ ಹಿ ದೇವದೈತ್ಯೇಷು ಫಾಲ್ಗುನ ।
ಕಥಮೀಶ್ವರವಾಕ್ಯಾರ್ಥಸ್ತಸ್ಮಾದನ್ಯತ್ರ ಮುಚ್ಯತೇ ॥ ೧೨೫ ॥

---

೧೨೦. ಬ್ರಹ್ಮಾಂಡಕ್ಕೆಲ್ಲ ಪ್ರಭುವಾಗಿ, ಸಮಸ್ತರನ್ನೂ ನಿನ್ನ ಮಾಯೆಯಿಂದಲೇ ಪುತ್ಥಳಿಗಳಂತೆ ಕುಣಿಸುವವನು ನೀನು. ಆ ನಿನ್ನ ಮಾಯೆಯಿಂದಲೇ ಭ್ರಮೆಗೊಂಡು ಮೂಢರಾಗಿ ಈ ಸ್ವಯಂವರಕ್ಕೆ ಬಂದ ಈ ನಾವು ಅಂತಹ ಪಶುಪತಿಯಾದ ನಿನ್ನನ್ನು ನಮಸ್ಕರಿಸುವೆವು. ಎಲೈ ಸ್ವಾಮಿಯೇ ! ನಮ್ಮನ್ನು ಪ್ರಸನ್ನನಾಗಿ ನೋಡು."

೧೨೧–೧೨೨. ಎಲೈ ಅರ್ಜುನನೆ! ಬ್ರಹ್ಮನು ಈ ರೀತಿ ಸ್ತೋತ್ರಮಾಡಲು ದೇವದೇವನಾದ ತ್ರಿನೇತ್ರನು ಸುಪ್ರಸನ್ನನಾದನು. ಬ್ರಹ್ಮನ ಈ ಸ್ತೋತ್ರದಿಂದಲೇ ಸಂತುಷ್ಟನಾಗಿ ಆ ಪರಮೇಶ್ವರನು ದೇವತೆಗಳೆಲ್ಲರನ್ನೂ ಮುನ್ನಿನಂತೆಯೇ ಸಚೇತನರನ್ನಾಗಿ ಮಾಡಿದನು. ಆದರೆ ತಾರಕನೇ ಮೊದಲಾದ ದೈತ್ಯರು ಅತ್ಯಂತ ಕ್ರುದ್ಧರಾಗಿ "ಮಹಾದೇವನೆಂಬುವನು ಯಾವನು? ಅವನನ್ನು ನಾವು ಲಕ್ಷ್ಯದಲ್ಲಿಯೇ ಇಟ್ಟಿಲ್ಲ" ಎಂದು ಕೂಗಾಡಿದರು.

೧೨೩. ಆಗ ಆ ಶಿಶುವು ನಗುತ್ತಲೇ ಲೀಲೆಯಿಂದ ಹುಂಕಾರವನ್ನು ಮಾಡಲು ಅದರ ಶ್ವಾಸದಿಂದಲೇ ರಾಕ್ಷಸರೆಲ್ಲರೂ ಸ್ವಯಂವರ ಮಂಟಪದಿಂದ ಒಮ್ಮೆಲೆ ತಮ್ಮ ನಗರಿಯಲ್ಲಿ ಬಂದು ಬಿದ್ದರು.

೧೨೪. ಆ ಮಹಾದೇವನ ಪ್ರಭಾವದಿಂದ ಕ್ರೂರಕರ್ಮಿಗಳಾದ ಆ ರಾಕ್ಷಸರಿಗೆ ಸ್ವಯಂವರ ಸಂಬಂಧವಾದ ಸಕಲ ವೃತ್ತಾಂತವೂ ಮರೆತೇ ಹೋಯಿತು.

೧೨೫. ಅಯ್ಯಾ ಫಾಲ್ಗುನನೆ! ಸಮಸ್ತ ದೇವದಾನವರಲ್ಲಿ ಇಂತಹ ವೈಭವವನ್ನು ತೋರಿಸಿದ ಮಹಾದೇವನಿಗಲ್ಲದೆ ಮತ್ತೆ ಯಾರಿಗೆ ತಾನೆ ಈಶ್ವರನೆಂಬ ಶಬ್ದವು ಸಾರ್ಥಕವಾದ ನಾಮವಾಗಬಹುದು?

ಅಸಂಶಯಂ ವಿಮೂಢಾಸ್ತೇ ಪಶ್ಚಾತ್ತಾಪಃ ಪುರಾ ಮಹಾನ್ ॥ ೧೨೬ ॥
ಈಶ್ವರಂ ಭುವನಸ್ಯಾಸ್ಯ ಯೇ ಭಜಂತೇ ನ ತ್ರ್ಯಂಬಕಂ ।
ತತಃ ಸಂಸ್ತೂಯಮಾನಃ ಸ ಸುರೈಃ ಪದ್ಮಭುವಾದಿಭಿಃ ॥ ೧೨೭ ॥
ವಪುಶ್ಚಕಾರ ದೇವೇಶಸ್ತ್ರ್ಯಂಬಕಃ ಪರಮಾದ್ಭುತಂ ।
ತೇಜಸಾ ತಸ್ಯ ದೇವಾಸ್ತೇ ಸೇಂದ್ರ ಚಂದ್ರ ದಿವಾಕರಾಃ ॥ ೧೨೮ ॥
ಸಬ್ರಹ್ಮಕಾಃ ಸಸಾಧ್ಯಾಶ್ಚ ವಸುರ್ವಿಶ್ವೇ ಚ ದೇವತಾಃ ।
ಸಯಮಾಶ್ಚ ಸರುದ್ರಾಶ್ಚ ಚಕ್ಷುರಪ್ರಾರ್ಥಯನ್ಪ್ರಭುಂ ॥ ೧೨೯ ॥
ತೇಭ್ಯಃ ಪರತಮಂ ಚಕ್ಷುಃ ಸ್ವವಪುರ್ದ್ರಷ್ಟುಮುತ್ತಮಂ ।
ದದಾವಂಬಾಪತಿಃ ಶರ್ವೋ ಭವಾನ್ಯಾಶ್ಚಾಚಲಸ್ಯ ಚ ॥ ೧೩೦ ॥
ಲಬ್ಧ್ವಾ ರುದ್ರಪ್ರಸಾದೇನ ದಿವ್ಯಂ ಚಕ್ಷುರನುತ್ತಮಂ ।
ಸಬ್ರಹ್ಮಕಾಸ್ತದಾ ದೇವಾಸ್ತಮಪಶ್ಯನ್ಮಹೇಶ್ವರಂ ॥ ೧೩೧ ॥
ತತೋ ಜಗ್ಮುಶ್ಚ ಮುನಯಃ ಪುಷ್ಪವೃಷ್ಟಿಂ ಚ ಖೇಚರಾಃ ।
ಮುಮುಚುಶ್ಚ ತದಾ ನೇದುರ್ದೇವದುಂದುಭಯೋ ಭೃಶಂ ॥ ೧೩೨ ॥

---

೧೨೬. ಸಕಲ ಲೋಕಕ್ಕೂ ನಿಯಾಮಕನಾದ ತ್ರಿನೇತ್ರನನ್ನು ಈಶ್ವರನೆಂದು ಯಾರು ತಿಳಿಯುವುದಿಲ್ಲವೊ ಅವರೆಲ್ಲರೂ ಶುದ್ಧ ಮೂಢರೇ ಸರಿ. ಅವರ ಪಾಶ್ಚಾತ್ತಾಪವು ಅತ್ಯಂತ ಹೆಚ್ಚಿನದಾಗುವುದು.

೧೨೭–೧೨೯. ಬಳಿಕ ಬ್ರಹ್ಮಾದಿ ದೇವತೆಗಳಿಂದ ಹೊಗಳಿಸಿಕೊಂಡವನಾಗಿ ದೇವಾಧಿದೇವನಾದ ಮಹೇಶ್ವರನು ತನ್ನ ಶರೀರವನ್ನು ಪರಮಾದ್ಭುತವನ್ನಾಗಿ ಮಾಡಿದನು. ಆ ತೇಜಸ್ಸಿನಿಂದ ಕಣ್ಣು ಕಾಣದೆ ಸಕಲ ದೇವತೆಗಳೂ, ಇಂದ್ರ, ಚಂದ್ರ, ಸೂರ್ಯ, ಬ್ರಹ್ಮ, ಸಾಧ್ಯರು, ಅಷ್ಟವಸುಗಳು, ವಿಶ್ವೇದೇವರು, ಯಮನು, ಏಕಾದಶರುದ್ರರು ಮುಂತಾದವರೆಲ್ಲರೂ ಆ ರೂಪವನ್ನು ನೋಡುವುದಕ್ಕೆ ತಕ್ಕ ನೇತ್ರಗಳನ್ನು ಕೇಳಿಕೊಂಡರು.

೧೩೦. ಆಗ ಅಂಬಿಕಾಪತಿಯಾದ ಶಿವನು ತನ್ನ ಉತ್ತಮವಾದ ಶರೀರವನ್ನು ನೋಡುವುದಕ್ಕಾಗಿ ಸಕಲ ದೇವತೆಗಳಿಗೂ, ಪಾರ್ವತಿಗೂ, ಹಿಮವಂತನಿಗೂ ದಿವ್ಯವಾದ ಚಕ್ಷುಸ್ಸನ್ನು ದಯೆಪಾಲಿಸಿದನು.

೧೩೧. ಇಂತು ಪರಮೇಶ್ವರನ ಪ್ರಸಾದದಿಂದ ಉತ್ತಮವಾದ ದಿವ್ಯದೃಷ್ಟಿಯನ್ನು ಪಡೆದು ಬ್ರಹ್ಮಾದಿ ದೇವತೆಗಳೆಲ್ಲರೂ ಆ ಪರಮಾತ್ಮನ ದಿವ್ಯ ರೂಪವನ್ನು ನೋಡಿದರು.

೧೩೨. ಆಗ ಮುನಿಗಳೆಲ್ಲರೂ ಸ್ತುತಿಸತೊಡಗಿದರು. ದೇವತೆಗಳು ಹೂಮಳೆಗರೆದರು. ದೇವದುಂದುಭಿಗಳು ಮೊಳಗತೊಡಗಿದುವು.

ಜಗುರ್ಗಂಧರ್ವಮುಖ್ಯಾಶ್ಚ ನನೃತುಶ್ಚಾಪ್ಸರೋಗಣಾಃ ।
ಮುಮುದುರ್ಗಣಪಾಸ್ಸರ್ವೇ ಮುಮೋದಾಂಬಾ ಚ ಪಾರ್ವತೀ ॥೧೩೩॥
ಬ್ರಹ್ಮಾದ್ಯಾ ಮೇನಿರೇ ಪೂರ್ಣಾಂ ಭವಾನೀಂ ಚ ಗಿರೀಶ್ವರಂ ।
ತಸ್ಯ ದೇವೀ ತತೋ ಹೃಷ್ಟಾ ಸಮಕ್ಷಂ ತ್ರಿದಿವೌಕಸಾಂ ।
ಪಾದಯೋಃ ಸ್ಥಾಪಯಾಮಾಸ ಮಾಲಾಂ ದಿವ್ಯಾಂ ಸುಗಂಧಿನೀಂ॥೧೩೪॥
ಸಾಧುಸಾಧ್ವಿತಿ ಸಂಪ್ರೋಚ್ಯ ತಯಾ ತಂ ತತ್ರ ಚರ್ಚಿತಂ ॥ ೧೩೫ ॥
ಸಹ ದೇವ್ಯಾ ನಮಶ್ಚಕ್ರುಃ ಶಿರೋಭಿರ್ಭೂತಲಾಶ್ರಿತೈಃ ।
ಸರ್ವೇ ಸಬ್ರಹ್ಮಕಾ ದೇವಾ ಜಯೇತಿ ಚ ಮುದಾ ಜಗುಃ ॥ ೧೩೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಕುಮಾರೇಶಮಾಹಾತ್ಮ್ಯೇ ಶ್ರೀ ಮಹಾದೇವ ವೈವಾಹಿಕೋತ್ಸಾಹ ವರ್ಣನಂ"
ನಾಮ ಪಂಚವಿಂಶೋಽಧ್ಯಾಯಃ

---

೧೩೩. ಗಂಧರ್ವನಾಯಕರು ಸಂಗೀತವನ್ನು ಪ್ರಾರಂಭಿಸಿದರು. ಅಪ್ಸರ ಸ್ತ್ರೀಯರು ನರ್ತನಮಾಡತೊಡಗಿದರು. ಪ್ರಮಥಗಣಗಳೆಲ್ಲವೂ ಸಂತೋಷ ಗೊಂಡುವು. ಪಾರ್ವತೀದೇವಿಯೂ ಅತ್ಯಂತ ಹರ್ಷಯುಕ್ತಳಾದಳು.

೧೩೪. ಬ್ರಹ್ಮಾದಿಗಳೆಲ್ಲರೂ ಪಾರ್ವತಿಯನ್ನೂ ಪರ್ವತರಾಜನನ್ನೂ ಸಂಪೂರ್ಣಕಾಮರೆಂದು ತಿಳಿದರು. ಆಗ ದೇವಿಯು ಪರಮ ಸಂತೋಷದಿಂದ ದೇವತೆಗಳೆಲ್ಲರ ಸಮಕ್ಷಮದಲ್ಲಿಯೇ ತನ್ನ ಕೈಗಳಲ್ಲಿದ್ದ ಸುಗಂಧಯುಕ್ತವಾದ ದಿವ್ಯಪುಷ್ಪಮಾಲಿಕೆಯನ್ನು ಪರಮೇಶ್ವರನ ಪಾದಗಳಲ್ಲಿ ಅರ್ಪಿಸಿದಳು.

೧೩೫–೧೩೬. ಇಂತು ಪೂಜೆಗೊಂಡ ಮಹಾದೇವನನ್ನೂ ಪಾರ್ವತೀದೇವಿ ಯನ್ನೂ ಬ್ರಹ್ಮಾದಿ ದೇವತೆಗಳು ಸಾಧುಕಾರಗಳಿಂದಲೂ ಜಯಕಾರಗಳಿಂದಲೂ ಕೊಂಡಾಡುತ್ತ ಸಂತೋಷದಿಂದ ಭೂಮಿಯಲ್ಲಿ ತಮ್ಮ ತಲೆಗಳನ್ನೀಡಾಡುತ್ತ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಕುಮಾರೇಶ ಮಾಹಾತ್ಮ್ಯ – ಶ್ರೀ ಮಹಾದೇವ ವೈವಾಹಿಕೋತ್ಸವ ವರ್ಣನ"ವೆಂಬ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ತ್ರಿಂಶೋಽಧ್ಯಾಯಃ

### ಕುಮಾರೇಶ ಮಾಹಾತ್ಮ್ಯೇ ಹರಗೌರೀವಿವಾಹವರ್ಣನಂ

ನಾರದ ಉವಾಚ :—

ಅಥ ಬ್ರಹ್ಮಾ ಮಹಾದೇವಮಭಿವಾದ್ಯ ಕೃತಾಂಜಲಿಃ ।
ಉದ್ವಾಹಃ ಕ್ರಿಯತಾಂ ದೇವ ಇತ್ಯುವಾಚ ಮಹೇಶ್ವರಂ ॥ ೧ ॥
ತಸ್ಯ ತದ್ವಚನಂ ಶ್ರುತ್ವಾ ಪ್ರಾಹೇದಂ ಭಗವಾನ್ ಹರಃ ।
ಪರಾಧೀನಾ ವಯಂ ಬ್ರಹ್ಮನ್ ಹಿಮಾದ್ರೇಸ್ತವ ಚಾಪಿ ಯತ್ ।
ಯದ್ಯುಕ್ತಂ ಕ್ರಿಯತಾಂ ತದ್ಧಿ ವಯಂ ಯುಷ್ಮದ್ವಶೇಽಧುನಾ ॥ ೨ ॥
ತತೋ ಬ್ರಹ್ಮಾ ಸ್ವಯಂ ದಿವ್ಯಂ ಪುರಂ ರತ್ನಮಯಂ ಶುಭಂ ॥ ೩ ॥
ಉದ್ವಾಹಾರ್ಥಂ ಮಹೇಶಸ್ಯ ತತ್ಕ್ಷಣಾತ್ಸಮಕಲ್ಪಯತ್ ।
ಶತಯೋಜನವಿಸ್ತೀರ್ಣಂ ಪ್ರಾಸಾದಶತಶೋಭಿತಂ ॥ ೪ ॥
ಪುರೇ ತಸ್ಮಿನ್ಮಹಾದೇವಃ ಸ್ವಯಮೇವ ವ್ಯತಿಷ್ಠತ ।
ತತಃ ಸಪ್ತಮುನೀನ್ದೇವಶ್ಚಿಂತಿತಾಭ್ಯಾಗತಾನ್ಪುರಃ ।
ಪ್ರಾಹಿಣೋದಂಬಿಕಾಯಾಶ್ಚ ಸ್ಥಿರಪತ್ರಾರ್ಥಮೀಶ್ವರಃ ॥ ೫ ॥

---

## ಕನ್ನಡದ ಅನುವಾದ

### ಕುಮಾರೇಶಮಹಾತ್ಮ್ಯ—ಹರಗೌರೀ ವಿವಾಹ ವರ್ಣನ

೧. ನಾರದನು ಹೇಳುತ್ತಾನೆ:—ಬಳಿಕ ಬ್ರಹ್ಮನು ಮಹಾದೇವನಿಗೆ ನಮಸ್ಕರಿಸಿ ಅಂಜಲಿಬಂಧವನ್ನು ಮಾಡಿ "ದೇವದೇವನೆ! ನೀನು ಮದುವೆಯನ್ನು ಮಾಡಿಕೊಳ್ಳಬೇಕು" ಎಂದು ಬಿನ್ನವಿಸಿದನು.

೨. ಆತನ ಮಾತನ್ನು ಕೇಳಿ ಮಹೇಶ್ವರನು "ಎಲೈ ಬ್ರಹ್ಮನೆ! ಈಗ ನಾನು ನಿನ್ನ ಕೈಗೆ ಸಿಕ್ಕಿ ಪರಾಧೀನನಾಗಿರುವೆನು. ಆದುದರಿಂದ ನಿಮಗೆ ಯುಕ್ತವಾದುದನ್ನೆಲ್ಲ ಮಾಡಿರಿ. ನಾನು ಈಗ ಸಂಪೂರ್ಣವಾಗಿ ನಿಮ್ಮ ವಶದಲ್ಲಿರುವೆನು" ಎಂದು ಹೇಳಿದನು.

೩–೪. ಆಗ ಬ್ರಹ್ಮನು ಶಿವನ ಮದುವೆಯ ಉತ್ಸವಕ್ಕಾಗಿ ನೂರು ಯೋಜನ ವಿಸ್ತಾರವೂ ನೂರಾರು ಉಪ್ಪರಿಗೆಗಳಿಂದ ಕೂಡಿ ನವರತ್ನಗಳಿಂದ ತುಂಬಿದುದೂ ಆದ ಶುಭ ನಗರವೊಂದನ್ನು ದಿವ್ಯರೀತಿಯಿಂದ ಕ್ಷಣಮಾತ್ರದಲ್ಲಿ ಸೃಷ್ಟಿಸಿದನು.

೪–೫. ಆ ಪಟ್ಟಣದಲ್ಲಿ ಮಹಾದೇವನು ತಾನೇ ಬಿಡಾರವನ್ನುಮಾಡಿಕೊಂಡನು. ಬಳಿಕ ಸಪ್ತರ್ಷಿಗಳನ್ನು ಸ್ಮರಿಸಲು ಅವರೆಲ್ಲರೂ ಸಮ್ಮುಖದಲ್ಲಿ ಬಂದು ನಿಂತರು. ಶಿವನು ಅವರನ್ನು ಪಾರ್ವತೀಕಲ್ಯಾಣ ಸಂಬಂಧವಾಗಿ ನಿಶ್ಚಿತಾರ್ಥ ಪತ್ರಗಳನ್ನು ಮಾಡಿಕೊಂಡುಬರುವಂತೆ ಹೇಳಿಕಳುಹಿಸಿದನು.

ಸಾರುಂಧತೀಕಾಸ್ತೇ ತತ್ರ ಹ್ಲಾದಯಂತೋ ಹಿಮಾಚಲಂ ।
ಸಭಾರ್ಯಮೀಶ್ವರಗುಣೈಃ ಸ್ಥಿರಪತ್ರಾಣಿ ಚಾದದುಃ ॥ ೬ ॥
ತತಃ ಸಂಪೂಜಿತಾಸ್ತೇನ ಪುನರಾಗಮ್ಯ ತೇಽಚಲಾತ್ ।
ನ್ಯವೇದಯನ್ಸ್ತ್ರ್ಯಂಬಕಾಯ ಸ ಚ ತಾನಭ್ಯನಂದತ ॥ ೭ ॥
ಉದ್ವಾಹಾರ್ಥಂ ತತೋ ದೇವೋ ವಿಶ್ವಂ ಸರ್ವಂ ನ್ಯಮಂತ್ರಯತ್ ।
ಸಮಾಗತಂ ಚ ತತ್ಸರ್ವಂ ವಿನಾ ದೈತ್ಯೈರ್ದುರಾತ್ಮಭಿಃ ॥ ೮ ॥
ಸ್ಥಾವರಂ ಜಂಗಮಂ ಯಚ್ಚ ವಿಶ್ವಂ ವಿಷ್ಣುಪುರೋಗಮಂ ।
ಸ ಬ್ರಹ್ಮಕಂ ಪುರಾರಾತೇರ್ಮಹಿಮಾನಮವರ್ಧಯತ್ ॥ ೯ ॥
ತತಸ್ತಂ ವಿಧಿರಾಹೇದಂ ಗಂಧಮಾದನಪರ್ವತೇ ।
ಪುರೇ ಸ್ಥಿತಂ ವಿವಾಹಸ್ಯ ದೇವ ಕಾಲಃ ಪ್ರವರ್ತತೇ ॥ ೧೦ ॥
ತತಸ್ತಸ್ಯ ಜಟಾಜೂಟೇ ಚಂದ್ರಖಂಡಂ ಪಿತಾಮಹಃ ।
ಬಬಂಧ ಪ್ರಣಯೋದಾರವಿಸ್ಫಾರಿತವಿಲೋಚನಃ ॥ ೧೧ ॥
ಕಪರ್ದಂ ಶೋಭನಂ ವಿಷ್ಣುಃ ಸ್ವಯಂ ಚಕ್ರೇಽಸ್ಯ ಹರ್ಷತಃ ।
ಕಪಾಲಮಾಲಾಂ ವಿಪುಲಾಂ ಚಾಮುಂಡಾ ಮೂರ್ಧ್ನ್ಯಬಂಧತ ॥ ೧೨ ॥

---

೬. ಅವರೆಲ್ಲರೂ ಅರುಂಧತೀದೇವಿಯೊಡನೆ ಹೊರಟು ಈಶ್ವರಗಣಗಳಿಂದ ಮೇನಾಸಮೇತನಾದ ಪರ್ವತರಾಜನಿಗೆ ಸಂತೋಷಪಡಿಸುವವರಾಗಿ ತಮ್ಮ ನಿಶ್ಚಿತಾರ್ಥಪತ್ರಗಳನ್ನು ಕೊಟ್ಟರು.

೭. ಬಳಿಕ ಆತನಿಂದ ಉಚಿತೋಪಚಾರಗಳನ್ನು ಹೊಂದಿ ಹಿಮಾಚಲದಿಂದ ಹೊರಟು ಹಿಂದಿರುಗಿ ಪರಮಶಿವನಿಗೆ ನಡೆದುದೆಲ್ಲವನ್ನೂ ಬಿನ್ನವಿಸಲು ಆತನೂ ಅವರ ಕಾರ್ಯದಕ್ಷತೆಯನ್ನು ಕೊಂಡಾಡಿದನು.

೮. ತನ್ನ ವಿವಾಹ ಸಮಾರಂಭಕ್ಕಾಗಿ ದೇವದೇವನು ದುರಾತ್ಮರಾದ ದೈತ್ಯರೊಬ್ಬರನ್ನು ಬಿಟ್ಟು ಸಕಲ ಭೂಮಂಡಲವನ್ನೂ ಕರೆದನು. ಸಮಸ್ತ ಭೂತನಿಕಾಯವೂ ಸಿದ್ಧವಾಗಿ ನಿಂತಿತು.

೯. ಮಹಾ ವಿಷ್ಣುವೇ ಮೊದಲಾಗಿ ಸಕಲ ಸ್ಥಾವರ ಜಂಗಮಾತ್ಮಕವಾದ ವಿಶ್ವವೂ ಬ್ರಹ್ಮನೊಡನೆ ಮಹಾದೇವನ ಮಹಿಮೆಯನ್ನು ಹೆಚ್ಚಿಸುವಂತಿದ್ದಿತು.

೧೦. ಬ್ರಹ್ಮನು "ಈ ಸಮೂಹವೆಲ್ಲವೂ ಗಂಧಮಾದನ ಪರ್ವತದ ಪಟ್ಟಣದಲ್ಲಿ ನಿಲ್ಲಲಿ. ವಿವಾಹ ಮುಹೂರ್ತದ ಕಾಲವು ಸಮಿಾಪಿಸುತ್ತಿರುವುದು" ಎಂದನು.

೧೧. ಬಳಿಕ ಬ್ರಹ್ಮನು ಪ್ರೀತಿಯಿಂದಲೂ ಔದಾರ್ಯದಿಂದಲೂ ಅರಳಿದ ಕಂಗಳುಳ್ಳವನಾಗಿ ಮಹೇಶ್ವರನ ಜಡೆಗಳಲ್ಲಿ ಬಾಲಚಂದ್ರನನ್ನು ಸಿಂಗರಿಸಿದನು.

೧೨-೧೩. ವಿಷ್ಣುವು ತಾನೇ ಸಂತೋಷದಿಂದ ಆತನ ಜಡೆಗಳನ್ನು ಸೇರಿಸಿ ಕಪರ್ದವನ್ನು ಕಟ್ಟಿದನು. ಚಾಮುಂಡಿಯು ವಿಶಾಲವಾದ ಕಪಾಲಮಾಲೆಯನ್ನು

ಉವಾಚ ಚಾಪಿ ಗಿರಿಶಂ ಪುತ್ರಂ ಜನಯ ಶಂಕರ ।
ಯೋ ದೈತ್ಯೇಂದ್ರಕುಲಂ ಹತ್ವಾ ಮಾಂ ರಕ್ತೈಸ್ತರ್ಪಯಿಷ್ಯತಿ ॥ ೧೩ ॥
ಸೂರ್ಯೋ ಜ್ವಲಚ್ಛಿಖಾರಕ್ತಂ ಭಾಭಾಸಿತಜಗತ್ತ್ರಯಂ ।
ಬಬಂಧ ದೇವದೇವಸ್ಯ ಸ್ವಯಮೇವ ಪ್ರಮೋದತಃ ॥ ೧೪ ॥
ಶೇಷವಾಸುಕಿಮುಖ್ಯಾಶ್ಚ ಜ್ವಲಂತಸ್ತೇಜಸಾ ಶುಭಾಃ ।
ಆತ್ಮಾನಂ ಭೂಷಣಸ್ಥಾನೇ ಸ್ವಯಂ ತೇ ಚಕ್ರಿರೀಶ್ವರೇ ॥ ೧೫ ॥
ವಾಯವಶ್ಚ ತತಸ್ತೀಕ್ಷ್ಣಶೃಂಗಂ ಹಿಮಗಿರಿಪ್ರಭಂ ॥ ೧೬ ॥
ವೃಷಂ ವಿಭೂಷಯಾಮಾಸುರ್ನಾನಾರತ್ನೋಪಪತ್ತಿಭಿಃ ।
ಶಕ್ರೋ ಗಜಾಜಿನಂ ಗೃಹ್ಯ ಸ್ವಯಮಗ್ರೇ ವ್ಯವಸ್ಥಿತಃ ॥ ೧೭ ॥
ವಿನಾ ಭಸ್ಮ ಸಮಾಧಾಯ ಕಪಾಲೇ ರಜತಪ್ರಭಂ ।
ಮನುಜಾಸ್ಥಿಮಯೀಂ ಮಾಲಾಂ ಪ್ರೇತನಾಥಶ್ಚ ವಂದನಂ ॥ ೧೮ ॥
ವಹ್ನಿಸ್ತೇಜೋಮಯಂ ದಿವ್ಯಮಜಿನಂ ಪ್ರದದೌ ಸ್ಥಿತಃ ।
ಏವಂ ವಿಭೂಷಿತಃ ಸರ್ವೈರ್ಭೃತ್ಯೈರೀಶೋ ಬಭೌ ಭೃಶಂ ॥ ೧೯ ॥

---

ತಲೆಗೆ ಅಲಂಕರಿಸುತ್ತ ಮಹೇಶನನ್ನು ಕುರಿತು "ಶಂಕರಾ! ಸಮಸ್ತ ರಾಕ್ಷಸರ ಕುಲವನ್ನೂ ನಿರ್ಮೂಲಮಾಡಿ ಅವರ ರಕ್ತದಿಂದ ನನಗೆ ತೃಪ್ತಿಯನ್ನುಂಟು ಮಾಡುವಂತಹ ಮಗನನ್ನು ಪಡೆ" ಎಂದು ಹೇಳಿದಳು.

೧೪. ಸೂರ್ಯನು ದೇವದೇವನಿಗೆ ತಾನೇ ಸಂತೋಷದಿಂದ ಮೂರು ಲೋಕಗಳನ್ನು ಬೆಳಗಿಸುತ್ತಿರುವ ಕಾಂತಿಯುಕ್ತವಾದ ಶಿಖಾಲಂಕಾರವನ್ನು ಕಟ್ಟಿದನು.

೧೫. ಆದಿಶೇಷ, ವಾಸುಕಿ ಮುಂತಾದ ಸರ್ಪಶ್ರೇಷ್ಠರೆಲ್ಲರೂ ತಮ್ಮ ತೇಜಸ್ಸಿನಿಂದ ಜ್ವಲಿಸುತ್ತಿರುವರಾಗಿ ತಾವಾಗಿಯೇ ಪರಮಾತ್ಮನ ಅಂಗಾಂಗಗಳಲ್ಲಿ ಭೂಷಣಪ್ರಾಯರಾಗಿ ನಿಂತರು.

೧೬–೧೮. ಮರುದ್ಗಣಗಳೆಲ್ಲರೂ ತೀಕ್ಷ್ಣ ಶೃಂಗಗಳುಳ್ಳ ಹಿಮಗಿರಿಯಂತೆ ಶುಭ್ರಾಕಾರವುಳ್ಳ ನಂದೀಶ್ವರನನ್ನು ನಾನಾವಿಧಗಳಾದ ವೇಷ ಭೂಷಣಗಳಿಂದ ಅಲಂಕರಿಸಿದರು. ಮಹೇಂದ್ರನು ಗಜಚರ್ಮವನ್ನು ಹಿಡಿದು ಮುಂದೆ ನಿಂತನು. ಕಪಾಲದಲ್ಲಿ ರಜತಮಯವಾದ ಭಸ್ಮವಿಲ್ಲದೆಯೇ ಮನುಷ್ಯರ ಅಸ್ಥಿಗಳಿಂದ ಮಾಡಿದ ಮಾಲೆಯನ್ನು ಹಾಕಿ ಯಮರಾಜನು ನಮಸ್ಕರಿಸಿದನು.

೧೯. ಅಗ್ನಿದೇವನು ತೇಜೋಯುಕ್ತವಾದ ದಿವ್ಯ ಚರ್ಮವನ್ನೊಪ್ಪಿಸಿ ನಿಂತನು. ಇಂತು ಸಕಲ ಭೃತ್ಯರಿಂದಲಂಕೃತನಾಗಿ ಪರಮಶಿವನು ಅತ್ಯಂತ ವಾಗಿ ಕಾಂತಿಯಿಂದ ಶೋಭಿಸುತ್ತಿದ್ದನು.

ತತೋ ಹಿಮಾದ್ರೇಃ ಪುರುಷಾ ವೀರಕಂ ಪ್ರೋಚಿರೇ ವಚಃ ।
ಮಾಭೂತ್ಕಾಲಾತ್ಯಯಃ ಶೀಘ್ರಂ ಭವಸ್ಯೈತನ್ನಿವೇದ್ಯತಾಂ ॥ ೨೦ ॥
ತತೋ ದೇವಂ ಪ್ರಣಮ್ಯಾಹ ವೀರಕಃ ಕರಸಂಪುಟೀ ।
ತ್ವರಯಂತಿ ಮಹೇಶಾನಂ ಹಿಮಾದ್ರೇಃ ಪುರುಷಾಸ್ತ್ವಮೀ ॥ ೨೧ ॥
ಇತಿ ಶ್ರುತ್ವಾ ವಚೋ ದೇವಃ ಶೀಘ್ರಮಿತ್ಯೇವ ಚಾಬ್ರವೀತ್ ।
ಸಪ್ತ ವಾರಿಧಯಸ್ತಸ್ಯ ಚಕ್ರುರ್ದರ್ಪಣದರ್ಶನಂ ॥ ೨೨ ॥
ತತ್ರೈಕ್ಷತ ಮಹಾದೇವಃ ಸ್ವರೂಪಂ ಸ ಜಗನ್ಮಯಂ ।
ತತೋ ಬದ್ಧಾಂಜಲಿರ್ಧೀಮಾನ್ಸ್ಥಾಣುಂ ಪ್ರೋವಾಚ ಕೇಶವಃ ॥ ೨೩ ॥
ದೇವದೇವ ಮಹಾದೇವ ತ್ರಿಪುರಾಂತಕ ಶಂಕರ ।
ಶೋಭಸೇಽನೇನ ರೂಪೇಣ ಜಗದಾನಂದದಾಯಿನಾ ॥ ೨೪ ॥
ಮಹೇಶ್ವರ ಯಥಾ ಸಾಕ್ಷಾದಪರಸ್ತ್ವಂ ಮಹೇಶ್ವರಃ ।
ತತಃ ಸ್ಮಯನ್ಮಹಾದೇವೋ ಜಯೇತಿ ಭುವನೇ ಶ್ರುತಃ ॥ ೨೫ ॥

---

೨೦. ಆಗ ಹಿಮವಂತನ ಕಡೆಯ ಪುರುಷರು ಶಿವನ ದ್ವಾರಪಾಲಕನಾದ ವೀರಕನನ್ನು ಕುರಿತು "ಅಯ್ಯಾ! ಇನ್ನು ಕಾಲವಿಳಂಬವಾಗಬಾರದು. ಈ ಮಾತನ್ನು ಸ್ವಾಮಿಗೆ ತಿಳಿಸು" ಎಂದು ಹೇಳಿದರು.

೨೧. ವೀರಕನಾದರೂ ಮಹಾದೇವನಿಗೆ ನಮಸ್ಕರಿಸಿ ಕೈಗಳನ್ನು ಜೋಡಿಸಿ "ಮಹಾದೇವಾ! ಹಿಮವಂತನ ದೂತರಾದ ಈ ಜನರು ನಿನ್ನನ್ನು ಕಲ್ಯಾಣಕ್ಕಾಗಿ ತ್ವರೆಗೊಳಿಸುತ್ತಿರುವರು" ಎಂದು ಅರಿಕೆಮಾಡಿಕೊಂಡನು.

೨೨. ಮಹಾದೇವನು ಇದನ್ನು ಕೇಳಿ ಎಲ್ಲರನ್ನೂ ಜಾಗ್ರತೆಮಾಡುವಂತೆ ನಿಯಮಿಸಿದನು. ಆಗ ಸಪ್ತ ಸಮುದ್ರಪತ್ನಿಯರು ಆತನಿಗೆ ಶುಭಕರವಾದ ದರ್ಪಣವನ್ನು ತೋರಿಸಿದರು.

೨೩–೨೪. ಅದರಲ್ಲಿ ಪರಮೇಶ್ವರನು ತನ್ನ ಜಗನ್ಮಯವಾದ ರೂಪವನ್ನು ನೋಡಿಕೊಂಡನು. ಆಗ ಬುದ್ಧಿವಂತನಾದ ನಾರಾಯಣನು ಶಿವನನ್ನು ಕುರಿತು ಅಂಜಲಿಬದ್ಧನಾಗಿ "ಎಲೈ ದೇವೇಶ್ವರನೆ! ಮಹಾದೇವನೆ! ತ್ರಿಪುರಧ್ವಂಸಿಯೆ! ಶಂಕರಾ! ನೀನು ಸಕಲಲೋಕಕ್ಕೂ ಆನಂದದಾಯಕವಾಗಿರತಕ್ಕ ಈ ರೂಪದಿಂದ ಬಹಳವಾಗಿ ಶೋಭಿಸುತ್ತಿರುವೆ. ಈ ದರ್ಪಣದಲ್ಲಿ ಪ್ರತಿಬಿಂಬದಿಂದಂತು ಮತ್ತೊಬ್ಬ ಮಹೇಶ್ವರನೇ ಆಗಿರುವಂತೆ ಕಾಣುತ್ತಿರುವೆ" ಎಂದು ಹೇಳುತ್ತಿದ್ದನು.

೨೫. ಬಳಿಕ ಮಹಾದೇವನು ಮುಗುಳ್ನಗೆಯಿಂದ ಕೂಡಿ ಲೋಕವೆಲ್ಲವೂ ಜಯಕಾರವನ್ನು ಮಾಡುತ್ತಿರಲು ವಿಷ್ಣುವಿನ ಕರಾವಲಂಬನವನ್ನುಮಾಡಿ ಮೆಲ್ಲಗೆ ವೃಷಭಾರೂಢನಾದನು.

ಕರಮಾಲಂಬ್ಯ ವಿಷ್ಣೋಶ್ಚ ವೃಷಭಂ ರುರುಹೇ ಶನೈಃ ।
ತತಶ್ಚ ವಸವೋ ದೇವಾಃ ಶೂಲಂ ತಸ್ಯ ನ್ಯವೇದಯನ್ ॥ ೨೬ ॥
ಧನದೋ ನಿಧಿಭಿರ್ಯುಕ್ತಃ ಸಮೀಪಸ್ಥಸ್ತತೋಽಭವತ್ ।
ಸ ಶೂಲಪಾಣಿರ್ವಿಶ್ವಾತ್ಮಾ ಸಂಚಚಾಲ ತತೋ ಹರಃ ॥ ೨೭ ॥
ದೇವದುಂದುಭಿನಾದೈಶ್ಚ ಪುಷ್ಪಾಸಾರೈಶ್ಚ ಗೀತಕೈಃ ।
ನೃತ್ಯದ್ಭಿರಪ್ಸರೋಭಿಶ್ಚ ಜಯೇತಿ ಚ ಮಹಾಸ್ವನೈಃ ॥ ೨೮ ॥
ಸವ್ಯದಕ್ಷಿಣಸಂಸ್ಥಾನೌ ಬ್ರಹ್ಮವಿಷ್ಣೂ ತು ಜಗ್ಮತುಃ ।
ಹಂಸಂ ಚ ಗರುಡಂ ಚೈವ ಸಮಾರುಹ್ಯ ಮಹಾಪ್ರಭೌ ॥ ೨೯ ॥
ಅಥಾದಿತಿರ್ದಿತಿಃ ಸಾ ಚ ದನುಃ ಕದ್ರೂಃ ಸುಪರ್ಣಜಾ ।
ಪೌಲೋಮೀ ಸುರಸಾ ಚೈವ ಸಿಂಹಿಕಾ ಸುರಭಿರ್ಮುನಿಃ ॥ ೩೦ ॥
ಸಿದ್ಧಿರ್ಮಾಯಾ ಕ್ಷಮಾ ದುರ್ಗಾ ದೇವೀ ಸ್ವಾಹಾ ಸ್ವಧಾ ಸುಧಾ ।
ಸಾವಿತ್ರೀ ಚೈವ ಗಾಯತ್ರೀ ಲಕ್ಷ್ಮೀಃ ಸಾ ದಕ್ಷಿಣಾದ್ಯುತಿಃ ॥ ೩೧ ॥
ಸ್ಪೃಹಾ ಮತಿರ್ಧೃತಿರ್ಬುದ್ಧಿರ್ಮಂಥೀಋದ್ಧಿಃ ಸರಸ್ವತೀ ।
ರಾಕಾ ಕುಹೂಃ ಸಿನೀವಾಲೀ ದೇವೀ ಭಾನುಮತೀ ತಥಾ ॥ ೩೨ ॥
ಧರಣೀ ಧಾರಣೀ ವೇಲಾ ರಾಜ್ಞೀ ಚಾಪಿ ಚ ರೋಹಿಣೀ ।
ಇತ್ಯೇತಾಶ್ಚಾನ್ಯದೇವಾನಾಂ ಮಾತರಃ ಪತ್ನಯಸ್ತಥಾ ॥ ೩೩ ॥

---

೨೬–೨೭. ಆಗ ಅಷ್ಟವಸುಗಳೂ ದೇವತೆಗಳೂ ಆತನಿಗೆ ತ್ರಿಶೂಲವನ್ನು ಒಪ್ಪಿಸಿದರು. ಕುಬೇರನು ನವನಿಧಿಗಳೊಡನೆ ಸಮೀಪದಲ್ಲಿಯೇ ಇದ್ದನು. ವಿಶ್ವಾತ್ಮನಾದ ಶಿವನು ಆಗ ತ್ರಿಶೂಲಪಾಣಿಯಾಗಿ ಹೊರಟನು.

೨೮–೨೯. ದೇವಲೋಕದ ದುಂದುಭಿಗಳ ಮೊಳಗಿನಿಂದಲೂ, ಪುಷ್ಪವೃಷ್ಟಿಯಿಂದಲೂ ಸಂಗೀತದಿಂದಲೂ, ನರ್ತನಮಾಡುತ್ತಿರುವ ಅಪ್ಸರಸ್ತ್ರೀಯರಿಂದಲೂ, ಜಯಜಯವೆಂಬ ಮಹಾ ಧ್ವನಿಗಳಿಂದಲೂ, ಎಡಬಲ ಪಾರ್ಶ್ವಗಳಲ್ಲಿ ಬ್ರಹ್ಮ ವಿಷ್ಣುಗಳು ತಮ್ಮ ವಾಹನಗಳಾದ ಹಂಸ ಗರುಡರನ್ನೇರಿ ಮಹಾಪ್ರಭಾಶಾಲಿಗಳಾಗಿ ಹೊರಟರು.

೩೦–೩೩. ಇವರಾದ ಬಳಿಕ ಅದಿತಿ, ದಿತಿ, ದನು, ಕದ್ರು, ಸುಪರ್ಣಜೆ, ಪೌಲೋಮಿ, ಸುರಸಾ, ಸಿಂಹಿಕಾ, ಸುರಭಿ, ಮುನಿ, ಸಿದ್ಧಿ, ಮಾಯಾ, ಕ್ಷಮಾ, ದುರ್ಗಾದೇವಿ, ಸ್ವಾಹಾ, ಸ್ವಧಾ, ಸುದಾ, ಸಾವಿತ್ರಿ, ಗಾಯತ್ರಿ, ಲಕ್ಷ್ಮಿ, ದಕ್ಷಿಣಾ, ದ್ಯುತಿ, ಸ್ಪೃಹಾ, ಮತಿ, ಧೃತಿ, ಬುದ್ಧಿ, ಮಂಥಿಋದ್ಧಿ, ಸರಸ್ವತಿ, ರಾಕಾ, ಕುಹೂ, ಸಿನೀವಾಲೀ, ಭಾನುಮತಿ, ಧರಣಿ, ಧಾರಣಿ, ವೇಲಾ, ರಾಜ್ಞಿ, ರೋಹಿಣಿ, ಈ ಎಲ್ಲರೂ, ಇತರ ದೇವಮಾತೃಕೆಯರೂ, ದೇವಪತ್ನಿಯರೂ, ಪರಮೇಶ್ವರನ ಮದುವೆಗಾಗಿ ಸಂತೋಷದಿಂದ ಹೊರಡುವವರಾದರು.

ಉದ್ವಾಹಂ ದೇವದೇವಸ್ಯ ಜಗ್ಮುಃ ಸರ್ವಾ ಮುದಾನ್ವಿತಾಃ ।
ಉರಗಾ ಗರುಡಾ ಯಕ್ಷಾ ಗಂಧರ್ವಾಃ ಕಿನ್ನರಾ ನರಾಃ ॥ ೩೪ ॥
ಸಾಗರಾ ಗಿರಯೋ ಮೇಘಾ ಮಾಸಾಃ ಸಂವತ್ಸರಾಸ್ತಥಾ ।
ವೇದಾ ಮಂತ್ರಾಸ್ತಥಾ ಯಜ್ಞಾಃ ಶ್ರೌತಾ ಧರ್ಮಾಶ್ಚ ಸರ್ವಶಃ ॥ ೩೫ ॥
ಹುಂಕಾರಾಃ ಪ್ರಣವಾಶ್ಚೈವ ಇತಿಹಾಸಾಃ ಸಹಸ್ರಶಃ ।
ಕೋಟಿಶಶ್ಚ ತಥಾ ದೇವಾ ಮಹೇಂದ್ರಾದ್ಯಾಃ ಸವಾಹನಾಃ ॥ ೩೬ ॥
ಅನುಜಗ್ಮುರ್ಮಹಾದೇವಂ ಕೋಟಿಶೋಽರ್ಬುದಶಶ್ಚ ಹಿ ।
ಗಣಾಶ್ಚ ಪೃಷ್ಠತೋ ಜಗ್ಮುಃ ಶಂಖವರ್ಣಾಶ್ಚ ಕೋಟಿಶಃ ॥ ೩೭ ॥
ದಶಭಿಃ ಕೇಕರಾಖ್ಯಾಶ್ಚ ವಿದ್ಯುತೋಽಷ್ಟಾಭಿರೇವ ಚ ।
ಚತುಃಷಷ್ಟ್ಯಾ ವಿಶಾಖಾಶ್ಚ ನವಭಿಃ ಪಾರಿಯಾತ್ರಿಕಾಃ ॥ ೩೮ ॥
ಷಡ್ಭಿಃ ಸರ್ವಾಂತಕಃ ಶ್ರೀಮಾನ್ಸ್ತಥೈವ ವಿಕೃತಾನನಃ ।
ಜ್ವಾಲಾಕೇಶೋ ದ್ವಾದಶಭಿಃ ಕೋಟಿಭಿಃ ಸಂವೃತೋ ಯಯೌ ॥ ೩೯ ॥
ಸಪ್ತಭಿಃ ಸಮದಃ ಶ್ರೀಮಾನ್ದುಂದುಭೋಽಷ್ಟಾಭಿರೇವ ಚ ।
ಪಂಚಭಿಶ್ಚ ಕಪಾಲೀಶಃ ಷಡ್ಭಿಃ ಸಂಹ್ರಾದಕಃ ಶುಭಃ ॥ ೪೦ ॥
ಕೋಟಿಕೋಟಿಭಿರೇವೈಕಃ ಕುಂಡಕಃ ಕುಂಭಕಸ್ತಥಾ ।
ವಿಷ್ಟಂಭೋಽಷ್ಟಾಭಿರೇವೇಹ ಗಣಪಃ ಸರ್ವಸತ್ತಮಃ ॥ ೪೧ ॥
ಪಿಪ್ಪಲಶ್ಚ ಸಹಸ್ರೇಣ ಸನ್ನಾದಶ್ಚ ತಥಾಬಲೀ ।
ಅವೇಶನಸ್ತಥಾಷ್ಟಾಭಿಃ ಸಪ್ತಭಿಶ್ಚಂದ್ರತಾಪನಃ ॥ ೪೨ ॥
ಮಹಾಕೇಶಃ ಸಹಸ್ರೇಣ ನಂದಿದ್ವಾದಶಭಿಸ್ತಥಾ ।
ನಗಃ ಕಾಲಃ ಕರಾಳಶ್ಚ ಮಹಾಕಾಲಃ ಶತೇನ ಚ ॥ ೪೩ ॥
ಅಗ್ನಿಕಃ ಶತಕೋಟ್ಯಾ ವೈ ಕೋಟ್ಯಾಗ್ನಿಮುಖ ಏವ ಚ ।
ಆದಿತ್ಯಮೂರ್ಧಾ ಕೋಟ್ಯಾ ಚ ಕೋಟ್ಯಾ ಚೈವ ಧನಾವಹಃ ॥ ೪೪ ॥
ಸನ್ನಾಗಶ್ಚ ಶತೇನೈವ ಕುಮುದಃ ಕೋಟಿಭಿಸ್ತ್ರಿಭಿಃ ।
ಅಮೋಘಃ ಕೋಕಿಲಶ್ಚೈವ ಕೋಟಿಕೋಟ್ಯಾ ಸುಮಂತ್ರಕಃ ॥ ೪೫ ॥
ಕಾಕಪಾದಸ್ತಥಾ ಷಷ್ಟ್ಯಾ ಷಷ್ಟ್ಯಾ ಸಂತಾನಕೋ ಗಣಃ ।
ಮಹಾಬಲಶ್ಚ ನವಭಿರ್ಮಧುಪಿಂಗಶ್ಚ ಪಿಂಗಲಃ ॥ ೪೬ ॥
ನೀಲೋ ನವತ್ಯಾ ಸಪ್ತತ್ಯಾ ಚತುರ್ವಕ್ತ್ರಶ್ಚ ಪೂರ್ವಪಾತ್ ।
ವೀರಭದ್ರಶ್ಚತುಷ್ಷಷ್ಟ್ಯಾ ಕರಣೋ ಬಾಲಕಸ್ತಥಾ ॥ ೪೭ ॥

---

೩೪–೫೧. (ಇಲ್ಲಿಂದ ಮುಂದೆ ೫೧ನೆ ಶ್ಲೋಕದ ಪೂರ್ತಿಯವರೆಗೆ ಪರಿವಾರಕರ ಮತ್ತು ಪ್ರಮಥಗಣಗಳ ನಾಮಗಳೂ ಪರಿವಾರ ಸಂಖ್ಯೆಗಳೂ ಕೊಟ್ಟಿವೆ. ಅನ್ವಯ ಕ್ಲೇಶವಿಲ್ಲದುದರಿಂದ ಅರ್ಥದ ಅವಶ್ಯಕತೆಯಿಲ್ಲ.) ಇವರೂ, ಇನ್ನೂ

ಪಂಚಾಕ್ಷಃ ಶತಮನ್ಯುಶ್ಚ ಮೇಘಮನ್ಯುಶ್ಚ ವಿಂಶತಿಃ ।
ಕಾಷ್ಠಕೋಟಿಶ್ಚತುಷ್ಷಷ್ಟ್ಯಾ ಸುಕೇಶೋ ವೃಷಭಸ್ತಥಾ ॥ ೪೮ ॥
ವಿಶ್ವರೂಪಸ್ತಾಲಕೇತುಃ ಪಂಚಾಶಚ್ಚ ಸಿತಾನನಃ ।
ಈಶಾನೋ ವೃದ್ಧದೇವಶ್ಚ ದೀಪ್ತಾತ್ಮಾ ಮೃತ್ಯುಹಾ ತಥಾ ॥ ೪೯ ॥
ವಿಷಾದೋಯಮಹಾ ಚೈವ ಗಣೋಭೃಂಗಿರಿಟಿಸ್ತಥಾ ।
ಅಶನೀ ಹಾಸಕಶ್ಚೈವ ಚತುಷ್ಷಷ್ಟ್ಯಾ ಸಹಸ್ರಪಾತ್ ॥ ೫೦ ॥
ಏತೇ ಚಾನ್ಯೇ ಚ ಗಣಪಾ ಅಸಂಖ್ಯಾತಾ ಮಹಾಬಲಾಃ ।
ಸರ್ವೇ ಸಹಸ್ರಹಸ್ತಾಶ್ಚ ಜಟಾಮುಕುಟಧಾರಿಣಃ ॥ ೫೧ ॥
ಚಂದ್ರಲೇಖಾವತಂಸಾಶ್ಚ ನೀಲಕಂಠಾಸ್ತ್ರಿಲೋಚನಾಃ ।
ಹಾರಕುಂಡಲಕೇಯೂರಮುಕುಟಾದ್ಯೈರಲಂಕೃತಾಃ ॥ ೫೨ ॥
ಅಣಿಮಾದಿಗುಣೈರ್ಯುಕ್ತಾಃ ಶಕ್ತಾಃ ಶಾಪಪ್ರಸಾದಯೋಃ ।
ಸೂರ್ಯಕೋಟಿ ಪ್ರತೀಕಾಶಾಸ್ತತ್ರಾಜಗ್ಮುರ್ಗಣೇಶ್ವರಾಃ ॥ ೫೩ ॥
ಪಾತಾಲಾಂಬರಭೂಮಿಸ್ಥಾಃ ಸರ್ವಲೋಕನಿವಾಸಿನಃ ।
ತುಂಬುರುರ್ನಾರದೋ ಹಾಹಾಹೂಹೂಶ್ಚೈವ ತು ಸಾಮಗಾಃ ॥ ೫೪ ॥
ತಂತ್ರೀಮಾದಾಯ ವಾದ್ಯಾಂಶ್ಚಾವಾದಯನ್ಶಂಕರೋತ್ಸವೇ ।
ಋಷಯಃ ಕೃತ್ಸ್ನಶ್ಚೈವ ವೇದಗೀತಾನ್ತಪೋಧನಾಃ ॥ ೫೫ ॥

---

ಇತರ ಗಣಾಧಿಪತಿಗಳೂ ಗಣನೆಗೆ ಬಾರದೆ ಮಹಾ ಬಲಾಢ್ಯರಾಗಿದ್ದರು. ಎಲ್ಲರೂ ಸಾವಿರಕೈಗಳಿಂದ ಕೂಡಿ ಜಡೆಗಳನ್ನೇ ಮಕುಟಗಳಂತೆ ಧರಿಸಿದ್ದರು.

೫೨–೫೩. ಎಲ್ಲರೂ ಚಂದ್ರಶೇಖರರೂ, ನೀಲಕಂಠರೂ, ತ್ರಿನೇತ್ರಗಳುಳ್ಳವರೂ, ರತ್ನಹಾರಗಳು, ಕುಂಡಲಗಳು, ಭಾಪುರಿ, ಕಿರೀಟ ಮುಂತಾದುವುಗಳಿಂದಲಂಕೃತರೂ ಅಣಿಮಾದಿ ಅಷ್ಟ ಸಿದ್ಧಿಗಳಿಂದೊಡಗೂಡಿದವರೂ ನಿಗ್ರಹಾನುಗ್ರಹ ಸಾಮರ್ಥ್ಯವುಳ್ಳವರೂ ಕೋಟಿ ಸೂರ್ಯರ ತೇಜಸ್ಸಿನಿಂದ ಮೆರೆಯುವವರೂ ಆದ ಗಣನಾಯಕರೆಲ್ಲರೂ ಹೊರಟರು.

೫೪. ಸ್ವರ್ಗ, ಮರ್ತ್ಯ, ಪಾತಾಳಲೋಕಗಳಲ್ಲಿ ವಾಸಿಸುವವರೂ, ಇತರ ಲೋಕಗಳ ನಿವಾಸಿಗಳೂ, ತುಂಬುರು, ನಾರದ, ಹಾಹಾ, ಹೂಹೂ, ಸಾಮವೇದಜ್ಞರು, ಮುಂತಾದವರೆಲ್ಲರೂ ಶಂಕರನ ವಿವಾಹೋತ್ಸವದಲ್ಲಿ ವೀಣಾದಿ ವಾದ್ಯಗಳನ್ನು ನುಡಿಸುತ್ತಿದ್ದರು.

೫೫. ತಪೋಧನರಾದ ಸಕಲ ಮಹರ್ಷಿಗಳೂ ಸಂತುಷ್ಟಾಂತರಂಗರಾಗಿ ಪುಣ್ಯಕರಗಳಾದ ವೈವಾಹಿಕ ಮಂತ್ರಗಳನ್ನು ವೇದಗೀತೆಗಳೊಡನೆ ಪಠಿಸುತ್ತಿದ್ದರು.

ಪುಣ್ಯಾನ್ಸ್ವೈವಾಹಿಕಾನ್ಮಂತ್ರಾನ್ಜೇಪುಃ ಸಂಹೃಷ್ಟಮಾನಸಾಃ ।
ಏವಂ ಪ್ರತಸ್ಥೇ ಗಿರಿಶೋ ವೀಜ್ಯಮಾನಶ್ಚ ಗಂಗಯಾ ।
ತಥಾ ಯಮುನಯಾ ಚಾಪಾಂಪತಿನಾ ಛತ್ರಧಾರಿಣಾ ॥ ೫೬ ॥
ಸ್ತ್ರೀಭಿರ್ನಾನಾವಿಧಾಲಾಪೈರ್ಲಾಜಾಭಿಶ್ಚಾನುಮೋದಿತಃ ।
ಮಹೋತ್ಸವೇನ ದೇವೇಶೋ ಗಿರಿಸ್ಥಾನಂ ವಿವೇಶ ಸಃ ॥ ೫೭ ॥
ಪ್ರಭಾಸತ್ಸ್ವರ್ಣಕಲಶಂ ತೋರಣಾನಾಂ ಶತೈರ್ಯುತಂ ।
ವೈಡೂರ್ಯಬದ್ಧಭೂಮಿಸ್ಥಂ ರತ್ನಜೈಶ್ಚ ಗೃಹೈರ್ಯುತಂ ॥ ೫೮ ॥
ತತ್ಪ್ರವಿಶ್ಯ ಸ್ತೂಯಮಾನೋ ದ್ವಾರಮಭ್ಯಾಸಸಾದ ಹ ॥ ೫೯ ॥
ತತೋ ಹಿಮಾಚಲಸ್ತತ್ರ ದೃಶ್ಯತೇ ವ್ಯಾಕುಲಾಕುಲಃ ।
ಆದಿಶದಾತ್ಮ ಭೃತ್ಯಾನಾಂ ಮಹಾದೇವ ಉಪಸ್ಥಿತೇ ॥ ೬೦ ॥
ತತೋ ಬ್ರಹ್ಮಾಣಮಚಲೋ ಗುರುತ್ವೇ ಪ್ರಾರ್ಥಯತ್ತದಾ ।
ಕೃತ್ಯಾನಾಂ ಸರ್ವಭಾರೇಷು ವಾಸುದೇವಂ ಚ ಬುದ್ಧಿಮಾನ್ ॥ ೬೧ ॥
ಪ್ರತ್ಯಾಹ ಚ ವಿವಾಹೇಽಸ್ಮಿನ್ಕುಮಾರೀಭ್ರಾತರಂ ವಿನಾ ।
ಭವಿಷ್ಯತಿ ಕಥಂ ವಿಷ್ಣೋ ಲಾಜಹೋಮಾದಿಕರ್ಮಸು ॥ ೬೨ ॥

---

೫೬. ಇಂತು ಮಹೇಶ್ವರನು ಎರಡು ಪಕ್ಕಗಳಲ್ಲಿ ಗಂಗೆ, ಯಮುನೆಯರು ಚಾಮರಗಳನ್ನು ಬೀಸುತ್ತಿರಲು ಸಮುದ್ರರಾಜನು ಹಿಡಿದ ಶ್ವೇತಛತ್ರದ ನೆರಳಿನಲ್ಲಿ ಹೊರಟನು.

೫೭–೫೮. ಬಹು ವಿಧಗಳಾದ ಮಾತುಗಳನ್ನಾಡುತ್ತಿರುವ ಸ್ತ್ರೀಯರು ಲಾಜಾಕ್ಷತೆಗಳಿಂದ ಪೂಜಿಸುತ್ತಿರಲು, ಮಹೇಶ್ವರನು ಅತ್ಯಂತ ಸಂಭ್ರಮದಿಂದ ಹಿಮಾಚಲದ ಪ್ರದೇಶಕ್ಕೆ ಬಂದನು. ಆ ಪ್ರದೇಶವು ಮಿರುಮಿರುಗುತ್ತಿರುವ ಚಿನ್ನದ ಕಲಶಗಳಿಂದಲೂ, ನೂರಾರು ತೋರಣಗಳಿಂದಲೂ, ವೈಡೂರ್ಯಗಳಿಂದ ನಿರ್ಮಿಸಿದ ಜಗುಲಿಗಳಿಂದಲೂ, ನವರತ್ನಗಳಿಂದ ಅಲಂಕರಿಸಲ್ಪಟ್ಟ ಗೃಹಗಳಿಂದಲೂ ಮನೋಹರವಾಗಿದ್ದಿತು.

೫೯–೬೦. ಅಲ್ಲಿ ಹೊಕ್ಕು ವಂದಿಮಾಗಧರಿಂದ ಹೊಗಳಿಸಿಕೊಳ್ಳುತ್ತ ಪರ್ವತರಾಜನ ಅರಮನೆಯ ಬಾಗಿಲನ್ನು ಸಮೀಪಿಸಿದನು. ಅಲ್ಲಿ ಹಿಮವಂತನು ವ್ಯಾಕುಲಚಿತ್ತನಾಗಿ ಈತನನ್ನೇ ಎದುರುನೋಡುತ್ತ, ಮಹಾದೇವನು ಬಂದುದನ್ನು ತನ್ನ ಸೇವಕರಿಗೆಲ್ಲ ತಿಳಿಸುವವನಾದನು.

೬೧–೬೨. ಪರ್ವತರಾಜನು ಬ್ರಹ್ಮನನ್ನೇ ಗುರುಪೀಠದಲ್ಲಿ ಕುಳ್ಳಿರುವಂತೆ ಪ್ರಾರ್ಥಿಸಿದನು. ಬುದ್ಧಿವಂತನಾದ ಆತನು ಸಕಲಕಾರ್ಯಗಳ ಮೇಲ್ವಿಚಾರಣೆಗಾಗಿ ಮಹಾವಿಷ್ಣುವನ್ನು ಕೇಳಿಕೊಂಡನು. ಮತ್ತು ಆತನನ್ನು ಕುರಿತು ಕೇಳತೊಡಗಿದನು:—“ಎಲೈ ನಾರಾಯಣನೆ! ಕನ್ಯೆಯ ಭ್ರಾತೃವಿಲ್ಲದೆ ಈ ವಿವಾಹ

ಸುತೋ ಹಿ ಮಮ ಮೈನಾಕಃ ಸ ಪ್ರವಿಷ್ಟೋಽರ್ಣವೇ ಸ್ಥಿತಃ ।
ಇತಿ ಚಿಂತಾವಿಷಣ್ಣಂ ತಂ ವಿಷ್ಣುರಾಹ ಮಹಾಮತಿಃ ॥ ೬೩ ॥
ಅತ್ರ ಚಿಂತಾ ನ ಕರ್ತವ್ಯಾ ಗಿರಿರಾಜ ಕಥಂಚನ ।
ಅಹಂ ಭ್ರಾತಾ ಜಗನ್ಮಾತುರೇತದೇವಂ ಚ ನಾನ್ಯಥಾ ॥ ೬೪ ॥
ತತಃ ಪ್ರಮುದಿತಃ ಶೈಲಃ ಪಾರ್ವತೀಂ ಚ ಸ್ವಲಂಕೃತಾಂ ।
ಸಖೀಭಿಃ ಕೋಟಿಸಂಖ್ಯಾಭಿರ್ವೃತಾಂ ಪ್ರಾವೇಶಯತ್ಸದಃ ॥ ೬೫ ॥
ತತೋ ನೀಲಮಯಸ್ತಂಭಂ ಜ್ವಲತ್ಕಾಂಚನಕುಟ್ಟಿಮಂ ।
ಮುಕ್ತಾಜಾಲ ಪರಿಷ್ಕಾರಂ ಜ್ವಲಿತೌಷಧಿದೀಪಿತಂ ॥ ೬೬ ॥
ರತ್ನಾಸನಸಹಸ್ರಾಢ್ಯಂ ಶತಯೋಜನವಿಸ್ತೃತಂ ।
ವಿವಾಹಮಂಡಪಂ ಶರ್ವೋ ವಿವೇಶಾನುಚರಾವೃತಃ ॥ ೬೭ ॥
ತತಃ ಶೈಲಃ ಸಪತ್ನೀಕಃ ಪಾದೌ ಪ್ರಕ್ಷಾಲ್ಯ ಹರ್ಷಿತಃ ।
ಭವಸ್ಯ ತೇನ ತೋಯೇನ ಸಿಷಿಚೇ ಸ್ವಂ ಜಗತ್ತಥಾ ॥ ೬೮ ॥
ಪಾದ್ಯಮಾಚಮನಂ ದತ್ವಾ ಮಧುಪರ್ಕಂ ಚ ಗಾಂ ತಥಾ ।
ಪ್ರದಾನಸ್ಯ ಪ್ರಯೋಗಂ ಚ ಚಿಂತಯಂತಿ ಚ ಬ್ರಾಹ್ಮಣಾಃ ॥ ೬೯ ॥

---

ಕಾರ್ಯದಲ್ಲಿ ಲಾಜಾಹೋಮಾದಿ ಕರ್ಮಗಳು ನಡೆಯುವುದೆಂತು? ನನ್ನ ಮಗನಾದ ಮೈನಾಕನು ಸಮುದ್ರದಲ್ಲಿ ಅಡಗಿಕೊಂಡಿರುವನು.'' ಇಂತು ವಿಷಾದ ಪಡುತ್ತಿರುವ ಹಿಮವಂತನನ್ನು ಕುರಿತು ನಾರಾಯಣನು ನುಡಿದನೆಂತೆನೆ:

೬೪–೬೫. ''ಅಯ್ಯಾ ಪರ್ವತರಾಜನೆ! ಈ ವಿಷಯವಾಗಿ ನೀನು ಚಿಂತೆಯನ್ನು ಮಾಡಬಾರದು. ನಾನೇ ಜಗನ್ಮಾತೆಯಾದ ಗಿರಿಜೆಗೆ ಭ್ರಾತೃವಾಗುವೆನು. ಇದು ಸತ್ಯವು.'' ಆಗ ಸಂತೋಷಗೊಂಡು ಪರ್ವತರಾಜನು ಸರ್ವಾಲಂಕಾರಭೂಷಿತೆಯೂ ಕೋಟಿ ಸಖಿಯರಿಂದ ಸುತ್ತುವರೆಯಲ್ಪಟ್ಟವಳೂ ಆದ ಉಮಾದೇವಿಯನ್ನು ವಿವಾಹ ಮಂಟಪಕ್ಕೆ ಕರೆದುಕೊಂಡುಬಂದನು.

೬೬–೬೭. ಬಳಿಕ ಶಿವನು ತನ್ನ ಅನುಯಾಯಿಗಳೊಡನೆ ನೀಲಮಣಿಗಳ ಸ್ತಂಭಗಳಿಂದಲೂ, ಚಿನ್ನದ ಹಾಸುಗಲ್ಲುಗಳಿಂದಲೂ, ಮುತ್ತುಗಳ ಸರಗಳಿಂದೊಡಗೂಡಿದ ಅಲಂಕಾರಗಳಿಂದಲೂ, ಕಾಂತಿಯುಕ್ತಗಳಾದ ಓಷಧಿಗಳಿಂದಲೂ, ಸಾವಿರಾರು ರತ್ನ ಸಿಂಹಾಸನಗಳಿಂದಲೂ ಹೊಳೆಯುತ್ತಿರುವುದಾಗಿ ನೂರು ಯೋಜನದ ವಿಸ್ತಾರವುಳ್ಳ ಆ ಮಂಟಪವನ್ನು ಪ್ರವೇಶಿಸಿದನು.

೬೮–೬೯. ಬಳಿಕ ಪರ್ವತೇಶ್ವರನು ಹರ್ಷಗೊಂಡವನಾಗಿ ಪತ್ನಿಯೊಡಗೂಡಿ ಶಿವನ ಪಾದಗಳನ್ನು ತೊಳೆದು ಆ ಪಾದೋದಕದಿಂದ ತನ್ನ ಶರೀರವನ್ನೂ ಸಕಲ ಜಗತ್ತನ್ನೂ ಪ್ರೋಕ್ಷಣೆಮಾಡಿಕೊಂಡನು. ಮತ್ತು ಶಿವನಿಗೆ ಪಾದ್ಯ, ಆಚಮನ, ಮಧುಪರ್ಕಗಳನ್ನೂ ಗೋವುಗಳನ್ನೂ ನಿವೇದಿಸಿರಲು ಅಲ್ಲಿ ನೆರೆದಿದ್ದ ಬ್ರಾಹ್ಮಣರೆಲ್ಲರೂ ಕನ್ಯಾಪ್ರದಾನದ ಕ್ರಮವನ್ನು ಕುರಿತು ಚಿಂತಿಸುತ್ತಿದ್ದರು.

ದೌಹಿತ್ರೀಂ ಕವ್ಯವಾಹಾನಾಂ ದದ್ಮಿ ಪುತ್ರೀಂ ಸ್ವಕಾಮಹಂ ।
ಇತ್ಯುಕ್ತ್ವಾ ತಸ್ಥಿವಾನ್ಶೈಲೋ ನಜಾನಾತಿ ಹರಸ್ಯ ಸಃ ॥ ೭೦ ॥
ತತಃ ಸರ್ವಾನಪೃಚ್ಛತ್ಸ ಕುಲಂ ಕೋಽಪಿ ನ ವೇದ ತತ್ ।
ತತೋ ವಿಷ್ಣುರಿದಂ ಪ್ರಾಹ ಪೃಚ್ಛ್ಯಂತೇಽನ್ಯೇ ಕಿಮರ್ಥತಃ ॥ ೭೧ ॥
ಅಜ್ಞಾತಕುಲತಾಂ ತಸ್ಯ ಪೃಚ್ಛ್ಯತಾಮಯಮೇವ ಚ ।
ಅಹಿರೇವ ಅಹೇಃ ಪಾದಾನ್ವೇತ್ತಿ ನಾನ್ಯೋ ಹಿಮಾಚಲ ॥ ೭೨ ॥
ಸ್ವಗೋತ್ರಂ ಯದಿ ನ ಬ್ರೂತೇ ನ ದೇಯಂ ಭಗಿನೀ ಮಮ ।
ತತೋ ಹಾಸಸ್ತದಾ ಜಜ್ಞೇ ಸರ್ವೇಷಾಂ ಸುಮಹಾಸ್ವನಃ ॥ ೭೩ ॥
ನಿವೃತ್ತಶ್ಚ ಕ್ಷಣಾದ್ಭೂಯಃ ಕಿಂ ವಕ್ಷ್ಯತಿ ಹರಸ್ತ್ವಿತಿ ।
ತತೋ ವಿಮೃಶ್ಯ ಬಹುಧಾ ಕಿಂಚಿದ್ಭೀತಾನನೋ ಯಥಾ ॥ ೭೪ ॥
ಲಜ್ಜಾಜಡಃ ಸ್ಮಿತಂ ಚಕ್ರೇ ತತಃ ಪಾರ್ಥ ಸ ವೈ ಹರಃ ।
ತತೋ ವಿಶಿಷ್ಟಾ ಬ್ರುವತಿ ಶೀಘ್ರಂ ಕಾಲೋಽತಿವರ್ತತೇ ॥ ೭೫ ॥
ಹರಿಃ ಪ್ರಾಹ ಮಹೇಶಾನಂ ಬಿಭ್ಯದಾವೇದ್ಮ್ಯಹಂ ತವ ।
ಮಾತಾಮಹಂ ಚ ಪಿತರಂ ಪ್ರಯೋಗಂ ಶೃಣು ಭೂದರ ॥ ೭೬ ॥

---

೭೦. ಆಗ ಶೈಲರಾಜನು "ಅಗ್ನಿಗಳ ದೌಹಿತ್ರಿಯೂ ನನಗೆ ಮಗಳೂ ಆದ ಈ ಕನ್ಯೆಯನ್ನು ನಿನಗೆ ಕೊಡುತ್ತೇನೆ" ಎಂದು ಹೇಳಿ ಶಿವನ ಕುಲಗೋತ್ರಗಳನ್ನು ತಿಳಿಯದೆ ಸುಮ್ಮನಾದನು.

೭೧–೭೨. ಬಳಿಕ ಎಲ್ಲರನ್ನು ಕೇಳಿದರೂ ಯಾರೂ ಹೇಳಲಾರದಾದರು. ಆಗ ವಿಷ್ಣುವು ಹಿಮವಂತನನ್ನು ಕುರಿತು, "ಇತರರನ್ನು ಕೇಳುವುದರಿಂದೇನು ಪ್ರಯೋಜನ? ಆತನ ಕುಲಗೋತ್ರಗಳು ಯಾರಿಗೂ ತಿಳಿದಿಲ್ಲವಾದುದರಿಂದ ಆತನನ್ನೇ ಕೇಳಿಬಿಡೋಣ. ಹಾವಿನ ಕಾಲುಗಳನ್ನು ಹಾವು ಬಲ್ಲುದೇ ಹೊರತು ಇತರರು ತಿಳಿಯಲಾರರು.

೭೩. ಈತನು ತನ್ನ ಗೋತ್ರವನ್ನು ಹೇಳದಿದ್ದರೆ ನಾನು ಖಂಡಿತವಾಗಿಯೂ ನನ್ನ ತಂಗಿಯನ್ನು ಈತನಿಗೆ ಕೊಡುವುದಿಲ್ಲ." ಈ ಮಾತುಗಳನ್ನು ಕೇಳಿ ಅಲ್ಲಿ ನೆರೆದಿದ್ದ ಜನರೆಲ್ಲರೂ ಗಟ್ಟಿಯಾಗಿ ಗದ್ದಲಮಾಡಿಕೊಂಡು ನಕ್ಕರು.

೭೪. ತಕ್ಷಣದಲ್ಲಿಯೇ ಈತನು ಏನನ್ನೋ ಹೇಳುವನೆಂಬ ಕುತೂಹಲದಿಂದ ಗಲಭೆಯು ಕಡಿಮೆಯಾಯಿತು. ಆಗ ಪರಮೇಶ್ವರನು ಬಹುವಿಧವಾಗಿ ವಿಮರ್ಶೆಮಾಡಿ, ಸ್ವಲ್ಪ ಭಯಗೊಂಡವನಂತೆ ತೋರುತ್ತ, ಮತ್ತೆ ಲಜ್ಜೆಯಿಂದ ನಿಶ್ಚೇಷ್ಟವಾಗಿ ಮುಗುಳ್ನಗೆಯನ್ನು ನಕ್ಕನು.

೭೫–೭೬. ಆಗ ಅಲ್ಲಿ ನೆರೆದಿದ್ದ ಸಭಾಸದರೆಲ್ಲರೂ ಮುಹೂರ್ತವು ಕಳೆದು ಹೋಗುವುದೆಂದು ಕೂಗಿಕೊಂಡರು. ಆಗ ಹರಿಯು ಮಹೇಶ್ವರನನ್ನು ಕುರಿತು

ಆತ್ಮಪುತ್ರಾಯ ತೇ ಶಂಭೋ ಆತ್ಮದೌಹಿತ್ರಕಾಯ ತೇ ।
ಇತ್ಯುಕ್ತೇ ವಿಷ್ಣುನಾ ಸರ್ವೇ ಸಾಧುಸಾಧ್ವಿತಿ ತೇ ಜಗುಃ ॥ ೭೭ ॥
ದೇವೋಽಪ್ಯುದಾಹರದ್ಬುದ್ಧಿಂ ಸರ್ವೇಭ್ಯೋಽಪ್ಯಧಿಕಾಂ ವರಾಂ ।
ತತಃ ಶೈಲಸ್ತಥಾಚೋಕ್ತ್ವಾ ದತ್ವಾ ದೇವೀಂ ಚ ಸೋದಕಂ ॥ ೭೮ ॥
ಆತ್ಮಾನಂ ಚಾಪಿ ದೇವಾಯ ಪ್ರದದೌ ಸೋದಕಂ ನಗಃ ।
ತತಃ ಸರ್ವೇ ತುಷ್ಟುವುಸ್ತಂ ವಿವಾಹಂ ವಿಸ್ಮಯಾನ್ವಿತಾಃ ॥ ೭೯ ॥
ದಾತಾ ಮಹೀಭೃತಾಂ ನಾಥೋ ಹೋತಾ ದೇವಶ್ಚತುರ್ಮುಖಃ ।
ವರಃ ಪಶುಪತಿಃ ಸಾಕ್ಷಾತ್ಕನ್ಯಾ ವಿಶ್ವಾರಣಿಸ್ತಥಾ ॥ ೮೦ ॥
ತತಃ ಸ್ತುವತ್ಸು ಮುನಿಷು ಪುಷ್ಪವರ್ಷೇ ಮಹತ್ಯಪಿ ।
ನದತ್ಸು ದೇವತೂರ್ಯೇಷು ಕರಂ ಜಗ್ರಾಹ ತ್ರ್ಯಂಬಕಃ ॥ ೮೧ ॥
ದೇವೋ ದೇವೀಂ ಸಮಾಲೋಕ್ಯ ಸಲಜ್ಜಾಂ ಹಿಮಶೈಲಜಾಂ ।
ನ ತೃಪ್ಯತಿ ನ ಚಾಹ್ಲಾದತ್ಸಾ ಚ ದೇವಂ ವೃಷಧ್ವಜಂ ॥ ೮೨ ॥

---

ಭಯದಿಂದ "ನಾನು ನಿನ್ನ ಮಾತಾಮಹನನ್ನೂ ತಂದೆಯನ್ನೂ ಬಲ್ಲೆನು. ಎಲೈ ಪರ್ವತರಾಜನೆ! ಈತನ ಕುಲಗೋತ್ರಗಳನ್ನು ಹೇಳುವೆನು. ಕೇಳು.

೭೭. ನೀನು "ಆತ್ಮದೌಹಿತ್ರನೂ ಆತ್ಮಪುತ್ರನೂ ಆದ ನಿನಗೆ ಕೊಡುವೆನೆಂದು ಹೇಳು" ಎಂದನು. ವಿಷ್ಣುವಿನ ಈ ಮಾತುಗಳನ್ನು ಕೇಳಿ ಸಕಲ ಜನರೂ ಸಾಧುಕಾರಗಳನ್ನು ಮಾಡಿದರು.

೭೮–೭೯. ಮಹಾದೇವನೂ ಕೂಡ ಸಂತೋಷಗೊಂಡು ಎಲ್ಲರಿಗೂ ಉತ್ತಮವಾದ ಶುಭ ಬುದ್ಧಿಯನ್ನು ದಯಪಾಲಿಸಿದನು. ಬಳಿಕ ಪರ್ವತ ರಾಜನು ಹಾಗೆಯೇ ಸಂಕಲ್ಪವನ್ನುಮಾಡಿ ಉದಕಪೂರ್ವಕವಾಗಿ ಕನ್ಯಾದಾನವನ್ನು ಮಾಡಿ ತನ್ನನ್ನೂಕೂಡ ಮಹಾದೇವನಿಗೆ ಅರ್ಪಿಸಿಕೊಂಡನು. ಆಗ ಅಲ್ಲಿ ನೆರೆದಿದ್ದವರೆಲ್ಲರೂ ವಿಸ್ಮಯಗೊಂಡವರಾಗಿ ಆ ವಿವಾಹ ಮಹೋತ್ಸವವನ್ನು ತಮ್ಮ ತಮ್ಮಲ್ಲಿಯೇ ಹೊಗಳಿಕೊಂಡರು.

೮೦. ಪರ್ವತರಾಜನೇ ಕನ್ಯಾದಾನವನ್ನು ಮಾಡುವವನು. ಚತುರ್ಮುಖನೇ ಹೋತೃವು. ಸಾಕ್ಷಾಚ್ಛಿವನೇ ವರನು ಮತ್ತು ಜಗನ್ಮಾತೆಯೇ ವಧುವಾಗಿರುವಳು.

೮೧. ಆಗ ಮಹರ್ಷಿಗಳೆಲ್ಲರೂ ಹೊಗಳುತ್ತಿರಲು, ದೇವತೆಗಳು ಸ್ವರ್ಗ ಲೋಕದಿಂದ ಪುಷ್ಪವೃಷ್ಟಿಯನ್ನು ಕರೆಯುತ್ತಿರಲು, ದೇವದುಂದುಭಿಗಳ ನಾದದೊಡನೆ ಪರಮೇಶ್ವರನು ಪಾರ್ವತಿಯ ಕೈಯನ್ನು ಹಿಡಿದನು.

೮೨. ಲಜ್ಜಾಯುಕ್ತಳಾದ ಹಿಮವಂತನ ಪುತ್ರಿಯನ್ನು ಕಂಡು ಮಹಾದೇವನು ತೃಪ್ತನಾಗಲಿಲ್ಲ. ಅಂತೆಯೇ ಆಕೆಯೂ ವೃಷಭಧ್ವಜನಾದ ಆತನನ್ನು ಕಂಡು ಸಂತೋಷದ ಕೊನೆಯನ್ನು ಮುಟ್ಟಲಿಲ್ಲವು.

ತತ್ರ ಬ್ರಹ್ಮಾದಿ ಮುನಯೋ ದೇವೀಮದ್ಭುತರೂಪಿಣೀಂ ।
ಪಶ್ಯಂತಃ ಶರಣಂ ಜಗ್ಮುರ್ಮನಸಾ ಪರಮೇಶ್ವರಂ ॥ ೮೩ ॥
ಮಾ ಮುಹ್ಯಾಮ ಪಾರ್ವತೀಂ ಚ ಯಥಾ ನಾರದಪರ್ವತೌ ।
ತತಸ್ತಥೈವ ತಚ್ಚಕ್ರೇ ಸರ್ವೇಷಾಮೀಪ್ಸಿತಂ ವಚಃ ॥ ೮೪ ॥
ತತೋ ದೇವೈಶ್ಚ ಮುನಿಭಿಃ ಸಂಸ್ತುತಃ ಪರಮೇಶ್ವರಃ ।
ಪ್ರವಿವೇಶ ಶುಭಾಂ ವೇದಿಂ ಮೂರ್ತಿಮುಜ್ಜ್ವಲನಾಶ್ರಿತಾಂ ॥ ೮೫ ॥
ವೇಧಾಃ ಶ್ರುತೀರಿತೈರ್ಮಂತ್ರೈರ್ಮೂರ್ತಿಮದ್ಭಿರುಪಸ್ಥಿತೈಃ ।
ಮೂರ್ತಮಗ್ನಿಂ ಜುಹಾವ ತ್ರಿಃ ಪರಿಕ್ರಮ್ಯ ಚ ತು ಹರಃ ॥ ೮೬ ॥
ಲಾಜಾಹೋಮ ಉಮಾಭ್ರಾತಾ ಪ್ರಾಹ ತಂ ಸಸ್ಮಿತಂ ಹರಿಃ ।
ಬಹವೋ ಮಿಲಿತಾಃ ಸಂತಿ ಲೋಕಾಃ ಸಮ್ಯಗ್ದರ್ಶ ಈಶ್ವರ ॥ ೮೭ ॥
ಸಾವಧಾನೇನ ರಕ್ಷ್ಯಾಣಿ ಭೂಷಣಾನಿ ತ್ವಯಾ ಹರ ।
ತತೋ ಹರಶ್ಚ ತಂ ಪ್ರಾಹ ಸ್ವಜನೇ ಮಾತಿಗೋಪಯ ॥ ೮೮ ॥

---

೮೩. ಅಲ್ಲಿ ಬ್ರಹ್ಮಾದಿ ಮುನಿಗಳೆಲ್ಲರೂ ಅದ್ಭುತರೂಪಳಾದ ದೇವಿಯನ್ನೂ ಮಹಾದೇವನನ್ನೂ ಕಂಡು ಅವರಿಗೆ ಶರಣಾಗತರಾದರು.

೮೪. "ಪೂರ್ವದಲ್ಲಿ ನಾರದ ಪರ್ವತರು ಶ್ರೀಮತಿಯನ್ನು ಕಂಡು ಮೋಹಿತರಾದಂತೆ ನಮಗೆ ಪಾರ್ವತಿಯಲ್ಲಿ ಮೋಹವುಂಟಾಗದಿರಲಿ" ಎಂದು ಪ್ರಾರ್ಥಿಸುತ್ತಿದ್ದರು. ಅಲ್ಲಿ ಅವರ ಅಭೀಷ್ಟದಂತೆಯೇ ಪರಮೇಶ್ವರನು ಅವರ ಮಾತುಗಳನ್ನು ಯಥಾರ್ಥಗಳನ್ನಾಗಿ ಮಾಡಿದನು.

೮೫. ಬಳಿಕ ಪರಮೇಶ್ವರನು ಸಕಲ ದೇವತೆಗಳಿಂದಲೂ ಮಹರ್ಷಿಗಳಿಂದಲೂ ಸ್ತುತಿಗಳನ್ನು ಕೇಳುತ್ತ ಮೂರ್ತಿಗೊಂಡ ಅಗ್ನಿದೇವನಿಂದ ಅಧಿಷ್ಠಿತವಾದ ಶುಭವೇದಿಕೆಯನ್ನು ಪ್ರವೇಶಿಸಿದನು.

೮೬. ಬ್ರಹ್ಮನು ಮೂರ್ತಗಳಾದ ವೇದಮಂತ್ರಗಳಿಂದ ಪ್ರತ್ಯಕ್ಷನಾದ ಅಗ್ನಿಗೆ ಹೋಮವನ್ನುಮಾಡಲು ಶಿವನು ಮೂರುಸಲ ಪ್ರದಕ್ಷಿಣೆಯನ್ನು ಮಾಡಿದನು.

೮೭. ಲಾಜಾಹೋಮದ ಸಮಯದಲ್ಲಿ ವಧುವಿನ ಅಣ್ಣನಾದ ನಾರಾಯಣನು ಮಂದಹಸಿತನಾದ ಪರಮೇಶ್ವರನನ್ನು ಕುರಿತು "ಈಶ್ವರನೆ! ಇಲ್ಲಿ ಅನೇಕ ಲೋಕನಿವಾಸಿಗಳು ಬಂದು ನೆರೆದಿರುವರು.

೮೮. ಆದುದರಿಂದ ನಿನ್ನ ಭೂಷಣಗಳನ್ನು (ಸರ್ಪಗಳನ್ನು) ಜಾಗರೂಕನಾಗಿ ರಕ್ಷಿಸಿಕೊಳ್ಳಬೇಕು" ಎಂದನು. ಅದಕ್ಕೆ ಹರನೂ ಆತನನ್ನು ಕುರಿತು "ನಿನ್ನ ಸಂಬಂಧಿಯಾದ ಪಾರ್ವತಿಯ ರೂಪದಲ್ಲಿ ನನ್ನನ್ನು ಬಚ್ಚಿಡು.

ಕಿಂಚಿತ್ಪ್ರಾರ್ಥಯ ದಾಸ್ಯಾಮಿ ಪ್ರಾಹ ವಿಷ್ಣುಸ್ತತೋ ವರಂ ।
ತ್ವಯಿ ಭಕ್ತಿರ್ದೃಢಾ ಮೇಽಸ್ತು ಸ ಚ ತದ್ದುರ್ಲಭಂ ದದೌ ॥ ೮೯ ॥
ದದತುಃ ಸೃಷ್ಟಿಸಂರಕ್ಷಾಂ ಬ್ರಹ್ಮಣೇ ದಕ್ಷಿಣಾಮುಭೌ ।
ಅಗ್ನಯೇ ಯಜ್ಞಭಾಗಾಂಶ್ಚ ಪ್ರೀತೌ ಹರಜನಾರ್ದನೌ ॥ ೯೦ ॥
ಭೃಗ್ವಾದೀನಾಂ ತತೋ ದತ್ವಾ ಶ್ರುತಿರಕ್ಷಣದಕ್ಷಿಣಾಂ ।
ತತೋ ಗೀತೈಶ್ಚ ನೃತ್ಯೈಶ್ಚ ಭೋಜನೈಶ್ಚ ಯಥೇಪ್ಸಿತೈಃ ॥ ೯೧ ॥
ಮಹೋತ್ಸವೈರನೇಕೈಶ್ಚ ವಿಸ್ಮಯಂ ಸಮುಪದ್ಯತ ।
ವಿಸೃಜ್ಯ ಲೋಕಂ ತಂ ಸರ್ವಂ ಕಿಮಿಚ್ಛಾದಾನಕೈರ್ಭವಃ ॥ ೯೨ ॥
ಸರಸ್ವತ್ಯಾ ಚ ಪಿತರೌ ದೇವ್ಯಾಶ್ಚಾಶ್ವಾಸ್ಯ ದುಃಖಿತೌ ।
ಆಮಂತ್ರ್ಯ ಹಿಮಶೈಲೇಂದ್ರಂ ಬ್ರಹ್ಮಾಣಂ ಚ ಸ ಕೇಶವಂ । ॥ ೯೩ ॥
ಜಗಾಮ ಮಂದರಗಿರಿಂ ಗಿರಿಶಾ ಸಾನುಗೋಽರ್ಚಿತಃ ॥ ೯೪ ॥

---

೮೯. ಇದಕ್ಕಾಗಿ ನೀನು ಏನನ್ನು ಕೇಳಿದರೂ ಕೊಡುತ್ತೇನೆ'' ಎಂದು ಹೇಳಿದನು. ಮಹಾವಿಷ್ಣುವು ಆತನನ್ನು ಕುರಿತು ''ಎಲೈ ಪ್ರಭುವೆ! ನಿನ್ನಲ್ಲಿ ನನಗೆ ದೃಢವಾದ ಭಕ್ತಿಯುಂಟಾಗುವಂತೆ ಅನುಗ್ರಹಿಸು'' ಎಂದು ವರವನ್ನು ಬೇಡಲು ಮಹಾದೇವನು ಯಾರಿಂದಲೂ ಪಡೆಯಲು ಅತ್ಯಂತ ದುರ್ಲಭವಾದ ಆ ವರವನ್ನೇ ಆತನಿಗೆ ದಯೆಪಾಲಿಸಿದನು.

೯೦. ಬಳಿಕ ಶಿವನಾರಾಯಣರು ಬ್ರಹ್ಮದೇವನಿಗೆ ಲೋಕರಕ್ಷಣರೂಪವಾದ ದಕ್ಷಿಣೆಯನ್ನೂ ಅಗ್ನಿದೇವನಿಗೆ ಯಜ್ಞಗಳಲ್ಲಿ ಹವಿರ್ಭಾಗವನ್ನೂ ಸಂತೋಷದಿಂದ ಒಪ್ಪಿಸಿದರು.

೯೧–೯೨. ಭೃಗುವೇ ಮೊದಲಾದ ಮಹರ್ಷಿಗಳಿಗೆ ವೇದರಕ್ಷಣರೂಪವಾದ ದಕ್ಷಿಣೆಗಳನ್ನು ಕೊಟ್ಟು ಕಳುಹಿಸಲು ಸಂಗೀತಗಳಿಂದಲೂ, ನೃತ್ಯಗಳಿಂದಲೂ, ಯಥೇಷ್ಟಗಳಾದ ಊಟ ಉಪಚಾರಗಳಿಂದಲೂ, ಅನೇಕ ವಿಧಗಳಾದ ಉತ್ಸವ ವಿಶೇಷಗಳಿಂದಲೂ ವಿವಾಹ ಶಾಲೆಯು ಸಂಭ್ರಮಯುಕ್ತವಾಯಿತು. ಶಿವನು ತನ್ನ ವಿವಾಹ ಸಂಭ್ರಮದ ಆ ಸಂತೋಷ ಸಮಯದಲ್ಲಿ ತನ್ನೊಡನೆ ಬಂದಿದ್ದ ಸಕಲ ಪರಿವಾರವನ್ನೂ ಅವರವರು ಬಯಸಿ ಕೇಳಿದ ವರ ದಾನಗಳಿಂದ ತೃಪ್ತಿಬಡಿಸಿ ಕಳುಹಿಸಿಕೊಟ್ಟನು.

೯೩–೯೪. ಮೃದುಭಾಷಿಣಿಯಾದ ದೇವಿಯನ್ನು ಕೂಡಿ ಆಕೆಯ ಅಗಲಿಕೆಯಿಂದ ದುಃಖಪಡುತ್ತಿರುವ ತಾಯಿತಂದೆಗಳಿಗೆ ಸಮಾಧಾನವನ್ನು ಹೇಳುತ್ತ ಹಿಮವಂತನನ್ನೂ ಬ್ರಹ್ಮನನ್ನೂ ನಾರಾಯಣನನ್ನೂ ಬೀಳ್ಕೊಟ್ಟು ಪರ್ವತರಾಜನಿಂದ ಸಪರಿವಾರನಾಗಿ ಸೇವೆಯನ್ನು ಸ್ವೀಕರಿಸಿ ಪರಶಿವನು ಮಂದರ ಪರ್ವತವನ್ನು ಕುರಿತು ಪ್ರಯಾಣಮಾಡಿದನು.

ತತೋ ಗತೇ ಭಗವತಿ ನೀಲಲೋಹಿತೇ
ಸಹೋಮಯಾ ಗಿರಿಮಮಲಂ ಹಿ ಭೂಧರಃ ।
ಸಬಾಂಧವೋ ರುದಿತಿ ಹಿ ಕಸ್ಯ ನೋ ಮನೋ
ವಿಸಂಷ್ಠುಲಂ ಜಗತಿ ಹಿ ಕನ್ಯಕಾಪಿತುಃ ॥ ೯೫ ॥
ಇಮಂ ವಿವಾಹಂ ಗಿರಿರಾಜಪುತ್ರ್ಯಾಃ
ಶೃಣೋತಿ ಚಾಧ್ಯೇತಿ ಚ ಯೋ ನರಃ ಶುಚಿಃ ।
ವಿಶೇಷತಶ್ಚಾಪಿ ವಿವಾಹಮಂಗಲೇ
ಸ ಮಂಗಲಂ ವೃದ್ಧಿಮವಾಪ್ನುತೇ ಚಿರಂ ॥ ೯೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ
"ಕುಮಾರೇಶ ಮಾಹಾತ್ಮ್ಯೇ — ಹರ ಗೌರೀ ವಿವಾಹ ವರ್ಣನಂ"
ನಾಮ ಷಡ್ವಿಂಶೋಽಧ್ಯಾಯಃ

---

೯೫. ಬಳಿಕ ಮಹೇಶ್ವರನು ಪಾರ್ವತಿಯೊಡನೆ ಮಂದರಪರ್ವತಕ್ಕೆ ಹೊರಟುಹೋಗಲು ಇತ್ತ ಹಿಮಾಚಲೇಶ್ವರನು ಬಂಧುಸಹಿತನಾಗಿ ಬಹಳವಾಗಿ ದುಃಖಿಸುತ್ತಿದ್ದನು. ಲೋಕದಲ್ಲಿ ಯಾವ ಕನ್ಯಾಪಿತೃವಿಗೆ ತಾನೆ ಮಗಳ ಆಗಲಿಕೆಯಿಂದ ಮನಸ್ಸು ವಿಹ್ವಲಿತವಾಗುವುದಿಲ್ಲ?

೯೬. ಅರ್ಜುನಾ ! ಯಾರು ಈ ಪಾರ್ವತೀದೇವಿಯ ವಿವಾಹವೃತ್ತಾಂತವನ್ನು ಕೇಳುತ್ತಾರೆಯೊ, ವಿಶೇಷವಾಗಿ ವಿವಾಹಾದಿ ಶುಭಕಾರ್ಯದಲ್ಲಿ ಪಠನ ಮಾಡುತ್ತಾರೆಯೊ ಅವರು ಸಮಸ್ತ ಕಲ್ಯಾಣಗಳನ್ನೂ ಉತ್ತರೋತ್ತರಾಭಿವೃದ್ಧಿಯನ್ನೂ ಶಾಶ್ವತವಾಗಿ ಪಡೆದು ಸುಖಿಗಳಾಗುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ
"ಕುಮಾರೇಶಮಾಹಾತ್ಮ್ಯ—ಹರಗೌರೀ ವಿವಾಹ ವರ್ಣನ" ಎಂಬ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತವಿಂಶೋಽಧ್ಯಾಯಃ

### ಕುಮಾರೇಶ ಮಾಹಾತ್ಮ್ಯೇ — ಗಣೇಶಪ್ರಾದುರ್ಭಾವಃ, ಪಾರ್ವತೀ ಪ್ರಕೋಪ ವರ್ಣನಂ

ನಾರದ ಉವಾಚ :—

ತತೋ ನಿರುಪಮಂ ದಿವ್ಯಂ ಸರ್ವರತ್ನಮಯಂ ಶುಭಂ ।
ಈಶಾನನಿರ್ಮಿತಂ ಸಾಕ್ಷಾತ್ಸಹದೇವ್ಯಾವಿಶದ್ಗೃಹಂ ॥ ೧ ॥
ತತ್ರಾಸೌ ಮಂದರ ಗಿರೌ ಸಹ ದೇವ್ಯಾ ಭಗಾಕ್ಷಹಾ ।
ಪ್ರಾಸಾದೇ ತತ್ರ ಚೋದ್ಯಾನೇ ರೇಮೇ ಸಂಹೃಷ್ಟಮಾನಸಃ ॥ ೨ ॥
ಏತಸ್ಮಿನ್ನಂತರೇ ದೇವಾಸ್ತಾರಕೇಣಾತಿಪೀಡಿತಾಃ ।
ಪ್ರೋತ್ಸಾಹಿತೇನ ಚಾತ್ಯರ್ಥಂ ಮಹಾಕಲಿಚಿಕೀರ್ಷುಣಾ ॥ ೩ ॥
ಆಸಾದ್ಯ ತೇ ಭವಂ ದೇವಂ ತುಷ್ಟುವುರ್ಬಹುಧಾ ಸ್ತವೈಃ ।
ಏತಸ್ಮಿನ್ನಂತರೇ ದೇವಿ ಪ್ರೋದ್ವರ್ತಯುತ ಗಾತ್ರಕಂ ॥ ೪ ॥
ಉದ್ವರ್ತನ ಮಲೇನಾಥ ನರಂ ಚಕ್ರೇ ಗಜಾನನಂ ।
ದೇವಾನಾಂ ಸಂಸ್ತವೈಃ ಪುಣ್ಯೈಃ ಕೃಪಯಾಭಿಪರಿಪ್ಲುತಾ ।
ಪುತ್ರೇತ್ಯುವಾಚ ತಂ ದೇವೀ ತತಃ ಸಂಹೃಷ್ಟಮಾನಸಾ ॥ ೫ ॥

---

## ಕನ್ನಡದ ಅನುವಾದ

### ಕುಮಾರೇಶ ಮಾಹಾತ್ಮ್ಯ — ಗಣೇಶಪ್ರಾದುರ್ಭಾವ, ಪಾರ್ವತೀ ಪ್ರಕೋಪ ವರ್ಣನ

೧. ನಾರದನು ಹೇಳುತ್ತಾನೆ:—ಬಳಿಕ ಉತ್ತಮೋತ್ತಮವೂ ನವರತ್ನ ಖಚಿತವೂ ಆದ ಮಂಗಳಗೃಹವನ್ನು ಮಹೇಶ್ವರನು ನಿರ್ಮಿಸಿ ದೇವಿಯೊಡನೆ ಅದನ್ನು ಪ್ರವೇಶಿಸಿದನು.

೨. ಆ ಮಂದರಪರ್ವತದಲ್ಲಿ ಉಪ್ಪರಿಗೆಗಳಲ್ಲಿಯೂ, ಉದ್ಯಾನವನಗಳಲ್ಲಿಯೂ ಮಹಾದೇವನು ಪಾರ್ವತಿಯೊಡನೆ ಕ್ರೀಡಿಸುತ್ತಿದ್ದನು.

೩–೪. ಇಷ್ಟರಲ್ಲಿಯೇ ತಾರಕಾಸುರನಿಂದ ಬಹಳ ತ್ರಾಸಗೊಂಡ ದೇವತೆಗಳೆಲ್ಲರೂ ಕಲಹಪ್ರಿಯನಾದ ನನ್ನಿಂದ ಪ್ರೇರೇಪಿಸಲ್ಪಟ್ಟವರಾಗಿ, ಅಲ್ಲಿಗೆ ಬಂದು ಮಹೇಶ್ವರನನ್ನು ಬಹು ವಿಧಾನಗಳಾದ ಸ್ತೋತ್ರಗಳಿಂದ ಹೊಗಳಿದರು. ಆಗಲೇ ಪಾರ್ವತಿಯೂ ತನ್ನ ದೇಹವನ್ನು ಶುದ್ಧಿಮಾಡಿಕೊಂಡಳು.

೫. ಆಕೆಯು ದೇಹದ ಮಲದಿಂದ ಗಜಮುಖನಾದ ಮನುಷ್ಯನನ್ನು ಮಾಡಿದಳು. ಬಳಿಕ ದೇವತೆಗಳ ಸ್ತೋತ್ರಗಳಿಂದ ದಯೆಯಿಂದೊಡಗೂಡಿದವಳಾಗಿ ಸಂತುಷ್ಟವಾದ ಮನಸ್ಸಿನಿಂದ ಆತನನ್ನು ಮಗನೆಂದು ಕರೆದಳು.

ಏತಸ್ಮಿನ್ನಂತರೇ ಶರ್ವಸ್ತತ್ರಾಗತ್ಯ ವಚೋಽಬ್ರವೀತ್ ।
ಪುತ್ರಸ್ತವಾಯಂ ಗಿರಿಜೇ ಶೃಣು ಯಾದೃಗ್ಭವಿಷ್ಯತಿ ॥ ೬ ॥
ವಿಕ್ರಮೇಣ ಚ ವೀರ್ಯೇಣ ಕೃಪಯಾ ಸದೃಶೋ ಮಯಾ ।
ಯಥಾಹಂ ತಾದೃಶಶ್ಚಾಸೌ ಪುತ್ರಸ್ತೇ ಭವಿತಾ ಗುಣೈಃ ॥ ೭ ॥
ಯೇ ಚ ಪಾಪಾ ದುರಾಚಾರಾ ವೇದಾನ್ಧರ್ಮಂ ದ್ವಿಷಂತಿ ಚ ।
ತೇಷಾಮಾಮರಣಾಂತಾನಿ ವಿಘ್ನಾನ್ಯೇವ ಕರಿಷ್ಯತಿ ॥ ೮ ॥
ಯೇ ಚ ಮಾಂ ನೈವ ಮನ್ಯಂತೇ ವಿಷ್ಣುಂ ವಾಪಿ ಜಗದ್ಗುರುಂ ।
ವಿಘ್ನಿತಾ ವಿಘ್ನರಾಜೇನ ತೇ ಯಾಸ್ಯಂತಿ ಮಹತ್ತಮಃ ॥ ೯ ॥
ತೇಷಾಂ ಗೃಹೇಷು ಕಲಹಃ ಸದಾ ನೈವೋಪಶಾಮ್ಯತಿ ।
ಪುತ್ರಸ್ಯ ತವ ವಿಘ್ನೇನ ಸಮೂಲಂ ತಸ್ಯ ನಶ್ಯತಿ ॥ ೧೦ ॥
ಯೇಷಾಂ ನ ಪೂಜ್ಯಾಃ ಪೂಜ್ಯಂತೇ ಕ್ರೋಧಾಃ ಸತ್ಯಪರಾಙ್ಮುಖಾಃ ಯೇ ।
ರೌದ್ರಸಾಹಸಿಕಾ ಯೇ ಚ ತೇಷಾಂ ವಿಘ್ನಂ ಕರಿಷ್ಯತಿ ॥ ೧೧ ॥

---

೬. ಅದೇ ಸಮಯದಲ್ಲಿಯೇ ಪರಮೇಶ್ವರನು ಅಲ್ಲಿಗೆ ಬಂದು ಆ ದೇವಿಯನ್ನು ಕುರಿತು ಹೇಳಿದನು :—"ಎಲೌ ಗಿರಿಜೇ! ನಿನ್ನ ಮಗನಾದ ಈತನು ಎಂತಹವನಾಗುವನೆಂಬುದನ್ನು ಹೇಳುವೆನು ; ಕೇಳು.

೭. ಇವನು ಪರಾಕ್ರಮದಿಂದಲೂ, ದೇಹಬಲದಿಂದಲೂ, ದಯೆಯಿಂದಲೂ ನನಗೆ ಸಮಾನನಾಗುವನು. ನನ್ನಂತೆಯೇ ಈ ನಿನ್ನ ಪುತ್ರನೂ ಸಕಲಗುಣಗಳಿಂದ ಸಂಪೂರ್ಣನಾಗಿರುವನು.

೮. ಲೋಕದಲ್ಲಿ ಯಾರು ಪಾಪಿಷ್ಠರಾಗಿ ದುರಾಚಾರನಿರತರಾಗಿ ವೇದಗಳನ್ನೂ ಸನಾತನ ಧರ್ಮವನ್ನೂ ನಿಂದಿಸುವರೊ, ಅವರಿಗೆ ಇವನು ಸಾಯುವವರೆಗೂ ಕಷ್ಟಗಳನ್ನೇ ಕೊಡುತ್ತಿರುವನು.

೯. ಯಾರು ನನ್ನನ್ನಾಗಲಿ ಜಗನ್ನಾಥನಾದ ಮಹಾವಿಷ್ಣುವನ್ನಾಗಲಿ ಪೂಜೆ ಮಾಡುವುದಿಲ್ಲವೊ ಅವರೆಲ್ಲರೂ ಈ ವಿಘ್ನೇಶ್ವರನಿಂದ ಅನೇಕ ವಿಘ್ನಗಳನ್ನನುಭವಿಸಿ ಕೊನೆಗೆ ಘೋರವಾದ ಅಂಧಂತಮಸ್ಸು ಎಂಬ ಸಹಿಸಲಸದಳವಾದ ಘೋರ ನರಕವನ್ನು ಪಡೆಯುವರು.

೧೦–೧೧. ಅವರ ಮನೆಗಳಲ್ಲಿ ನಿತ್ಯವೂ ಕಲಹವು ತಪ್ಪುವುದೇ ಇಲ್ಲ. ಈ ನಿನ್ನ ಮಗನು ಮಾಡುವ ವಿಘ್ನದಿಂದ ಆ ಪಾಪಿಗಳ ವಂಶವೇ ಸಮೂಲವಾಗಿ ನಾಶವನ್ನು ಹೊಂದುವುದು. ಯಾರು ಪೂಜಾನರ್ಹರನ್ನು ಪೂಜಿಸುವರೊ, ಯಾರು ಕೋಪ ಮತ್ತು ಅಸತ್ಯಗಳನ್ನೇ ಸಾಧಿಸುವರೊ, ಕ್ರೌರ್ಯವನ್ನೂ, ಬಲ ಸಾಹಸಗಳನ್ನೂ ನಿಷ್ಕಾರಣವಾಗಿ ತೋರಿಸುವರೊ ಅವರಿಗೆ ವಿನಾಯಕನು ವಿಘ್ನಗಳನ್ನುಂಟುಮಾಡುವನು.

ಶ್ರುತಿಧರ್ಮಾನ್ಜಾತಿಧರ್ಮಾನ್ಪಾಲಯಂತಿ ಗುರೂಂಶ್ಚ ಯೇ।
ಕೃಪಾಲವೋ ಗತಕ್ರೋಧಾಸ್ತೇಷಾಂ ವಿಘ್ನಂ ಹರಿಷ್ಯತಿ ॥ ೧೨ ॥
ಸರ್ವೇ ಧರ್ಮಾಶ್ಚ ಕರ್ಮಾಣಿ ತಥಾ ನಾನಾವಿಧಾನಿ ಚ।
ಸ ವಿಘ್ನಾನಿ ಭವಿಷ್ಯಂತಿ ಪೂಜಯಾಸ್ಯ ವಿನಾ ಶುಭೇ ॥ ೧೩ ॥
ಏವಂ ಶ್ರುತ್ವಾ ಉಮಾ ಪ್ರಾಹ ಏವಮಸ್ತ್ವಿತಿ ಶಂಕರಂ।
ತತೋ ಬೃಹತ್ತನುಃ ಸೋಽಭೂತ್ತೇಜಸಾ ದ್ಯೋತಯಂದ್ದಿಶಃ ॥ ೧೪ ॥
ತತೋ ಗಣೈಃ ಸಮಂ ಶರ್ವಂ ಸುರಾಣಾಂ ಪ್ರದದೌ ಚ ತಂ।
ಯಾವತ್ತಾರಕಹಂತಾ ವೋ ಭವೇತ್ತಾವದಯಂ ಪ್ರಭುಃ ॥ ೧೫ ॥
ತತೋ ವಿಘ್ನಪತಿರ್ದೇವೈಃ ಸಂಸ್ತುತಃ ಪ್ರಣತಾರ್ತಿಹಾ।
ಚಕಾರ ತೇಷಾಂ ಕೃತ್ಯಾನಿ ವಿಘ್ನಾನಿ ದಿತಿಜನ್ಮನಾಂ ॥ ೧೬ ॥
ಪಾರ್ವತೀ ಚ ಪುನರ್ದೇವೀ ಪುತ್ರತ್ವೇ ಪರಿಕಲ್ಪ್ಯ ಚ।
ಅಶೋಕಸ್ಯಾಂಕುರಂ ವಾರ್ಭಿರವರ್ಧಯತ ಸ್ವಹಸ್ತೈಃ ॥ ೧೭ ॥

---

೧೨. ವೈದಿಕ ಧರ್ಮಗಳನ್ನೂ ಜಾತಿ ಧರ್ಮಗಳನ್ನೂ ಗುರುಹಿರಿಯರನ್ನೂ ಪಾಲನೆ ಮಾಡಿಕೊಂಡು ಯಾರು ಕೃಪಾಮಯರಾಗಿಯೂ ಜಿತಕ್ರೋಧರಾಗಿಯೂ ಇರುವರೊ ಅವರ ಸಕಲ ವಿಘ್ನಗಳನ್ನೂ ಈತನು ನಾಶಮಾಡುವನು.

೧೩–೧೪. ಈತನನ್ನು ಮೊದಲು ಪೂಜಿಸದೆ ಮಾಡಿದ ಸಕಲ ಧರ್ಮಾಚರಣೆಗಳೂ, ನಾನಾ ವಿಧಗಳಾದ ಲೌಕಿಕ ವೈದಿಕ ಕರ್ಮಗಳೂ ಕೇವಲ ವಿಘ್ನಭೂಯಿಷ್ಠಗಳಾಗುವುವು.'' ಈ ಮಾತುಗಳನ್ನು ಕೇಳಿ ಪಾರ್ವತಿಯು ಶಿವನನ್ನು ಕುರಿತು, ''ಅಂತೆಯೇ ಆಗಲಿ'' ಎಂದು ಹೇಳಿದಳು. ಆಗ ವಿಘ್ನೇಶ್ವರನು ಅತ್ಯಂತ ಹಿರಿದಾದ ಶರೀರವನ್ನು ಕೈಕೊಂಡು ತನ್ನ ತೇಜಸ್ಸಿನಿಂದ ನಾಲ್ಕು ದಿಕ್ಕುಗಳನ್ನೂ ಬೆಳಗುತ್ತಿದ್ದನು.

೧೫. ಬಳಿಕ ಮಹೇಶ್ವರನು ಅನೇಕ ಪ್ರಮಥಗಣಗಳೊಡನೆ ಆ ವಿಘ್ನೇಶ್ವರನನ್ನು ದೇವತೆಗಳಿಗೊಪ್ಪಿಸಿ '' ತಾರಕಾಸುರನನ್ನು ಸಂಹರಿಸುವ ಕುಮಾರನು ಹುಟ್ಟುವವರೆಗೂ ಈತನೇ ನಿಮಗೆ ನಾಯಕನಾಗಿರುವನು '' ಎಂದನು.

೧೬–೧೭. ಬಳಿಕ ಆಶ್ರಿತರ ದುಃಖಗಳನ್ನು ಕಳೆಯುವ ವಿಘ್ನೇಶ್ವರನು ದೇವತೆಗಳಿಂದ ಹೊಗಳಿಸಿಕೊಳ್ಳುತ್ತ ಅವರ ಕಾರ್ಯಗಳೆಲ್ಲವನ್ನೂ ಸಫಲಗೊಳಿಸಿ ವಿರೋಧಿಗಳಾದ ರಾಕ್ಷಸರ ಪ್ರಯತ್ನಗಳನ್ನೆಲ್ಲ ವಿಘ್ನಗಳಿಂದ ವಿಫಲಗೊಳಿಸುತ್ತಿದ್ದನು. ಪಾರ್ವತೀದೇವಿಯೂ ಒಂದಾನೊಂದು ಅಶೋಕವೃಕ್ಷದ ಮೊಳಕೆಯನ್ನೇ ಪುತ್ರತ್ವೇನ ಸ್ವೀಕರಿಸಿಕೊಂಡು ತನ್ನ ಕೈಯಿಂದಲೇ ಅದಕ್ಕೆ ನೀರೆರೆದು ದಿನೇ ದಿನೇ ಅಭಿವೃದ್ಧಿಪಡಿಸುತ್ತಿದ್ದಳು.

ಸಪ್ತರ್ಷೀನಥ ಆಹೂಯ ಸಂಸ್ಕಾರಮಂಗಲಂ ತರೋಃ ।
ಕಾರಯಾಮಾಸ ತನ್ವಂಗೀ ತತಸ್ತಾಂ ಮುನಯೋಽಬ್ರುವನ್ ॥ ೧೮ ॥
ತ್ವಯೈವ ದರ್ಶಿತೇ ಮಾರ್ಗೇ ಮರ್ಯಾದಾಂ ಕರ್ತುಮರ್ಹಸಿ ।
ಕಿಂ ಫಲಂ ಭವಿತಾ ದೇವಿ ಕಲ್ಪಿತೈಸ್ತರುಪುತ್ರಕೈಃ ॥ ೧೯ ॥

ದೇವ್ಯುವಾಚ :—

ಯೋ ವೈ ನಿರುದಕೇ ಗ್ರಾಮೇ ಕೂಪಂ ಕಾರಯತೇ ಬುಧಃ ।
ಯಾವತ್ತೋಯಂ ಭವೇತ್ಕೂಪೇ ತಾವತ್ಸ್ವರ್ಗೇ ಸ ಮೋದತೇ ॥ ೨೦ ॥
ದಶಕೂಪಸಮಾ ವಾಪೀ ದಶವಾಪೀಸಮಂ ಸರಃ ।
ದಶಸರಃ ಸಮಾ ಕನ್ಯಾ ದಶಕನ್ಯಾಸಮಃ ಕ್ರತುಃ ॥ ೨೧ ॥
ದಶಕ್ರತುಸಮಃ ಪುತ್ರೋ ದಶಪುತ್ರಸಮೋ ದ್ರುಮಃ ॥ ೨೨ ॥
ಏಷೈವ ಮಮ ಮರ್ಯಾದಾ ನಿಯತಾ ಲೋಕಭಾವಿನೀ ।
ಜೀರ್ಣೋದ್ಧಾರೇ ಕೃತೇ ವಾಪಿ ಫಲಂ ತದ್ದ್ವಿಗುಣಂ ಮತಂ ॥ ೨೩ ॥

---

೧೮. ಮತ್ತು ಸಪ್ತರ್ಷಿಗಳನ್ನು ಬರಮಾಡಿಕೊಂಡು ಆ ಸುಕುಮಾರಿಯು ವೃಕ್ಷಕ್ಕೆ ಸಕಲ ಸಂಸ್ಕಾರಗಳನ್ನೂ ಮಾಡಿಸಲು ಅವರು ಆಕೆಯನ್ನು ಕುರಿತು ಹೇಳಿದರೇನೆಂದರೆ :—

೧೯. "ಅಂಬೆ! ನಿನ್ನಿಂದ ತೋರಿಸಲ್ಪಟ್ಟಿರುವ ಮಾರ್ಗದಲ್ಲಿ ನೀನೇ ನಡೆದು ಮೇಲ್ಪಙ್ತಿಯಾಗಬೇಕು. ಈ ವೃಕ್ಷವನ್ನು ಪುತ್ರಸ್ಥಾನದಲ್ಲಿ ಕಲ್ಪಿಸಿ ಕೊಂಡುದರಿಂದ ಏನು ಫಲವು?"

೨೦. ದೇವಿಯು ಹೇಳುತ್ತಾಳೆ :—"ಯಾವನು ಜಲವಸತಿಯಿಲ್ಲದ ಗ್ರಾಮದಲ್ಲಿ ಬುದ್ಧಿವಂತನಾಗಿ ಭಾವಿಯನ್ನು ತೋಡಿಸುತ್ತಾನೆಯೋ, ಅವನು ಆ ಭಾವಿಯಲ್ಲಿ ನೀರಿರುವ ಪರ್ಯಂತವೂ ಸ್ವರ್ಗಲೋಕದಲ್ಲಿ ಪೂಜೆಗೊಳ್ಳುವನು.

೨೧. ಸೋಪಾನಗಳಿಂದೊಡಗೂಡಿದ ಕೊಳವು ಹತ್ತು ಭಾವಿಗಳಿಗೆ ಸಮಾನವು. ತಟಾಕವು ಹತ್ತು ಕೊಳಗಳಿಗೆ ಸಮಾನ; ಹತ್ತು ಕೆರೆಗಳನ್ನು ಕಟ್ಟಿಸಿದ ಪುಣ್ಯವು ಒಂದು ಕನ್ಯಾದಾನದಿಂದೊದಗುವುದು. ಯಜ್ಞವೊಂದನ್ನು ಮಾಡಲು ಹತ್ತು ಕನ್ಯಾದಾನಗಳ ಪುಣ್ಯವು ಲಭಿಸುವುದು.

೨೨—೨೩. ಹತ್ತು ಯಜ್ಞಗಳ ಪುಣ್ಯವನ್ನು ಒಬ್ಬ ಸತ್ಪುತ್ರನು ಸಂಪಾದಿಸಿ ಕೊಡುವನು. ಇಂತಹ ಹತ್ತು ಗಂಡು ಮಕ್ಕಳ ಪುಣ್ಯವನ್ನು ಒಂದು ಮರವನ್ನು ನೆಟ್ಟಿದ್ದರಿಂದ ಸಂಪಾದಿಸಬಹುದು. ಇದೇ ನನ್ನ ಆಜ್ಞಾರೂಪವಾದ ಕಟ್ಟಳೆಯು. ಇದನ್ನು ಲೋಕವಾಸಿಗಳೆಲ್ಲರೂ ನಡೆಸಬೇಕು. ವಾಪೀಕೂಪ ತಟಾಕಾದಿಗಳು ಶಿಥಿಲಗಳಾಗಿದ್ದರೆ ಅವುಗಳನ್ನು ಪುನರ್ನಿರ್ಮಾಣಮಾಡುವುದರಿಂದ ಹೊಸ ಕಟ್ಟಡಗಳ ಫಲದ ದ್ವಿಗುಣತೆಯು ಲಭಿಸುವುದು."

ತತಃ ಕದಾಚಿದ್ಭಗವಾನುಮಯಾ ಸಹ ಮಂದರೇ ।
ಮಂದಿರೇ ಹರ್ಷಜನನೇ ಕಲಧೌತಮಹೇ ಶುಭೇ ॥ ೨೪ ॥
ಪ್ರಕೀರ್ಣಕುಸುಮಾಮೋದಮಹಾಳಿಕುಲಕೂಜಿತೇ ।
ಕಿನ್ನರೋದ್ಗೀತಸಂಗೀತ ಪ್ರತಿಶಬ್ದಿತಮಧ್ಯಕೇ ॥ ೨೫ ॥
ಕ್ರೀಡಾಮಯೂರೈರ್ಹಂಸೈಶ್ಚ ಶ್ರುತ್ಯೈಶ್ಚೈವಾಭಿನಾದಿತೇ ।
ಮೌಕ್ತಿಕೈರ್ವಿವಿಧೈ ರತ್ನೈರ್ವಿನಿರ್ಮಿತಗವಾಕ್ಷಕೇ ॥ ೨೬ ॥
ತತ್ರ ಪುಣ್ಯಕಥಾಭಿಶ್ಚ ಕ್ರೀಡತೋರುಭಯೋಸ್ತಯೋಃ ।
ಪ್ರಾದುರಾಸೀನ್ಮಹಾನ್ಶಬ್ದಃ ಪೂರಿತಾಂಬರಗೋಚರಃ ॥ ೨೭ ॥
ತಂ ಶ್ರುತ್ವಾ ಕೌತುಕಾದ್ದೇವೀ ಕಿಮೇತದಿತಿ ಶಂಕರಂ ।
ಪರ್ಯಪೃಚ್ಛಚ್ಛುಭತನುರ್ಹರಂ ವಿಸ್ಮಯಪೂರ್ವಕಂ ॥ ೨೮ ॥
ತಾಮಾಹ ದೇವೀಂ ಗಿರಿಶೋ ದೃಷ್ಟಪೂರ್ವಾಸ್ತು ತೇ ತ್ವಯಾ ।
ಏತೇ ಗಣಾ ಮೇ ಕ್ರೀಡಂತಿ ಶೈಲೇಽಸ್ಮಿನ್ ತ್ವತ್ಪ್ರಿಯಾಃ ಶುಭೇ ॥ ೨೯ ॥

---

೨೪. ಬಳಿಕ ಕೆಲವು ಕಾಲ ಮಹೇಶ್ವರನು ಪಾರ್ವತಿಯೊಡನೆ ಮಂದರ ಪರ್ವತದಲ್ಲಿ ಕ್ರೀಡಿಸುತ್ತಿದ್ದನು. ಆತನ ಅರಮನೆಯು ಶುಭ್ರವಾಗಿಯೂ ಹರ್ಷಜನಕವಾಗಿಯೂ ಸುಣ್ಣಬಣ್ಣಗಳಿಂದ ಕೂಡಿದುದಾಗಿಯೂ ಇದ್ದಿತು.

೨೫. ಎಲ್ಲೆಲ್ಲಿಯೂ ಘಮಘಮಿಸುತ್ತಿರುವ ನಾನಾ ವಿಧ ಪುಷ್ಪಗಳ ಸೌರಭಕ್ಕೆ ಮೋಹಗೊಂಡು ದುಂಬಿಗಳು ಝೇಂಕರಿಸುತ್ತಿದ್ದುವು. ಕಿನ್ನರಿಯರು ಉಚ್ಚಧ್ವನಿಯಿಂದ ಸಂಗೀತಗಳನ್ನು ಹಾಡುತ್ತಿರಲು ಅವರ ಧ್ವನಿಯು ಗೃಹ ಮಧ್ಯದಲ್ಲಿ ಮಾರುದನಿಯನ್ನು ಕೊಡುತ್ತಿತ್ತು.

೨೬. ನರ್ತನ ಮಾಡುತ್ತಿರುವ ನವಿಲುಗಳ ಮತ್ತು ಹಂಸಗಳ ಶಬ್ದಗಳಿಂದ ಕೂಡಿತ್ತು. ಮುತ್ತುಗಳಿಂದಲೂ ವಿಧವಿಧಗಳಾದ ರತ್ನಗಳಿಂದಲೂ ರಚಿತ ಗಳಾದ ಗವಾಕ್ಷಿಗಳು ಆ ಅರಮನೆಯಲ್ಲಿ ಕಂಗೊಳಿಸುತ್ತಿದ್ದುವು.

೨೭. ಅಲ್ಲಿ ಶಿವಪಾರ್ವತಿಯರು ನಾನಾ ವಿಧ ಕಥೆಗಳಿಂದ ಒಬ್ಬರನ್ನೊಬ್ಬರು ಸಂತೋಷಗೊಳಿಸುತ್ತಿರಲು ಭೂವ್ಯಾಕಾಶಗಳನ್ನು ತುಂಬಿದಂತೆ ಮಹತ್ತರವಾದ ಒಂದು ಘೋಷವು ಕೇಳಿಬಂದಿತು.

೨೮. ಅದನ್ನು ಕೇಳಿ ಕುತೂಹಲ ಸಮನ್ವಿತಳಾಗಿ ಮಂಗಳಾಂಗಿಯಾದ ದೇವಿಯು ಮಹಾದೇವನನ್ನು ಈ ಶಬ್ದವೇನೆಂದು ಕೇಳಿದಳು.

೨೯. ಆಗ ಗಿರೀಶನು ಆಕೆಗೆ "ಎಲೌ ಶುಭಾಂಗಿಯೆ! ನೀನು ಪೂರ್ವದಲ್ಲಿ ನೋಡಿದ ಗಣಗಳೇ ನಿನ್ನ ಪ್ರೀತಿಗೆ ಪಾತ್ರರಾಗಿ ಈ ಪರ್ವತದಲ್ಲಿ ಕ್ರೀಡಿಸುತ್ತಿರುವರು" ಎಂದನು.

ತಪಸಾ ಬ್ರಹ್ಮಚರ್ಯೇಣ ಕ್ಲೇಶೇನ ಕ್ಷೇತ್ರಸಾಧನೈಃ ।
ಯೈರಹಂ ತೋಷಿತಃ ಪೃಥ್ವ್ಯಾಂ ತ ಏತೇ ಮನುಜೋತ್ತಮಾಃ ॥ ೩೦ ॥
ಮತ್ಸಮೀಪಮನುಪ್ರಾಪ್ತಾ ಮಮ ಲೋಕಂ ವರಾನನೇ ।
ಚರಾಚರಸ್ಯ ಜಗತಃ ಸೃಷ್ಟಿಸಂಹಾರಣಕ್ಷಮಾಃ ॥ ೩೧ ॥
ವಿನೈತಾನ್ನೈವ ಮೇ ಪ್ರೀತಿರ್ನೈಭಿರ್ವಿರಹಿತೋ ರಮೇ ।
ಏತೇ ಅಹಮಹಂ ಚೈತೇ ತಾನೇತಾನ್ಪಶ್ಯ ಪಾರ್ವತಿ ॥ ೩೨ ॥
ಇತ್ಯುಕ್ತ್ವಾ ವಿಸ್ಮಿತಾ ದೇವೀ ದದೃಶೇ ತಾನ್ಗವಾಕ್ಷಕೇ ।
ಸ್ಥಿತಾ ಪದ್ಮಪಲಾಶಾಕ್ಷೀ ಮಹಾದೇವೇನ ಭಾಷಿತಾ ॥ ೩೩ ॥
ಕೇಚಿತ್ಕೃಶಾ ಹ್ರಸ್ವದೀರ್ಘಾಃ ಕೇಚಿತ್ಸ್ಥೂಲಮಹೋದರಾಃ ।
ವ್ಯಾಘ್ರೇಭವೇಷಾಜಮುಖಾ ನಾನಾಪ್ರಾಣಿಮಹಾಮುಖಾಃ ॥ ೩೪ ॥
ವ್ಯಾಘ್ರಚರ್ಮಪರೀಧಾನಾ ನಗ್ನಾ ಜ್ವಾಲಾಮುಖಾಃ ಪರೇ ।
ಗೋಕರ್ಣಾ ಗಜಕರ್ಣಾಶ್ಚ ಬಹುಪಾದಮುಖೇಕ್ಷಣಾಃ ॥ ೩೫ ॥

---

೩೦. "ಇವರೆಲ್ಲರೂ ಭೂಲೋಕದಲ್ಲಿ ತಪಸ್ಸಿನಿಂದಲೂ, ಬ್ರಹ್ಮಚರ್ಯ ದಿಂದಲೂ, ಬಹು ವಿಧಗಳಾದ ಶೀತವಾತಸಹನರೂಪವಾದ ಕಾಯಕ್ಲೇಶ ದಿಂದಲೂ ಅನೇಕ ತೀರ್ಥಕ್ಷೇತ್ರಗಳಲ್ಲಿ ಮಾಡಿದ ಸಾಧನೆಗಳಿಂದಲೂ ನನ್ನನ್ನು ಸಂತೋಷಗೊಳಿಸಿ ಇಲ್ಲಿಗೆ ಬಂದಿರುವರು.

೩೧-೩೨. ನನ್ನ ಸಾಮೀಪ್ಯವನ್ನೂ, ಸಾಲೋಕ್ಯವನ್ನೂ ಪಡೆದಿರುವರು. ಇವರೆಲ್ಲರೂ ಚರಾಚರಾತ್ಮಕವಾದ ಈ ಪ್ರಪಂಚವನ್ನೆಲ್ಲ ಸೃಷ್ಟಿ ಅಥವ ಲಯ ಗೊಳಿಸಲು ಸಮರ್ಥರು. ಅವರಿಲ್ಲದಿದ್ದರೆ ನನಗೆ ಸಂತೋಷವೇ ಇಲ್ಲ. ಅವರೊಡ ನಲ್ಲದೆ ನಾನೆಲ್ಲಿಯೂ ಕ್ರೀಡಿಸುವುದಿಲ್ಲ. ಇವರೇ ನಾನು. ನಾನೇ ಇವರು. ಇವರನ್ನು ನೋಡು."

೩೩. ಹರನ ಈ ಮಾತುಗಳನ್ನು ಕೇಳಿ ಪಾರ್ವತಿಯು ಒಂದು ಕಿಟಕಿಯಲ್ಲಿ ನಿಂತು ವಿಸ್ಮಯದಿಂದ ಅವರನ್ನು ನೋಡತೊಡಗಿದಳು. ಅಲ್ಲಿಯೇ ಕಮಲಪತ್ರ ದಂತೆ ನೇತ್ರಗಳುಳ್ಳ ದೇವಿಯು ಕುಳಿತು ಶಿವನೊಡನೆ ಮಾತನಾಡುತ್ತಿದ್ದಳು.

೩೪. ಕೆಲವರು ಅತ್ಯಂತ ಕೃಶರಾಗಿಯೂ, ಕೆಲವರು ಕುಳ್ಳರಾಗಿಯೂ, ಕೆಲವರು ಎತ್ತರದವರಾಗಿಯೂ, ಕೆಲವರು ದಪ್ಪನಾಗಿ ದೊಡ್ಡದಾದ ಹೊಟ್ಟೆ ಯುಳ್ಳವರಾಗಿಯೂ, ಅಂತೆಯೇ, ಹುಲಿ, ಆನೆ, ಎಮ್ಮೆ, ಮೇಕೆ ಮುಂತಾದ ಮೃಗಗಳ ಮುಖಗಳುಳ್ಳವರೂ, ಇತರ ಪ್ರಾಣಿಗಳನ್ನನುಕರಿಸುವ ಮುಖ ಗಳಿಂದಲೂ ಇದ್ದರು.

೩೫. ಕೆಲವರು ಹುಲಿಯ ಚರ್ಮವನ್ನು ಹೊದ್ದಿದ್ದರು. ಇತರರು ದಿಗಂಬರರಾಗಿ ಜ್ವಲಿಸುತ್ತಿರುವ ಮುಖಗಳುಳ್ಳವರಾಗಿದ್ದರು. ಹಸುವಿನ ಕಿವಿ

ವಿಚಿತ್ರವಾಹನಾಶ್ಚೈವ ನಾನಾಯುಧಧರಾಸ್ತಥಾ ।
ಗೀತವಾದಿತ್ರ ತತ್ತ್ವಜ್ಞಾಃ ಸತ್ತ್ವಗೀತರಸಪ್ರಿಯಾಃ ॥ ೩೬ ॥
ತಾನ್ದೃಷ್ಟ್ವಾ ಪಾರ್ವತೀ ಪ್ರಾಹ ಕತಿಸಂಖ್ಯಾಭಿಧಾಸ್ತ್ವಿಮಾ ॥ ೩೭ ॥
ಶ್ರೀ ಶಂಕರ ಉವಾಚ :—
ಅಸಂಖ್ಯೇಯಾಸ್ತ್ವಿಮಾ ದೇವಿ ಅಸಂಖ್ಯೇಯಾಭಿಧಾಸ್ತಥಾ ।
ಜಗದಾಪೂರಿತಂ ಸರ್ವಮೇತೈರ್ಭೀಮೈರ್ಮಹಾ ಬಲೈಃ ॥ ೩೮ ॥
ಸಿದ್ಧಕ್ಷೇತ್ರೇಷು ರಥ್ಯಾಸು ಜೀರ್ಣೋದ್ಯಾನೇಷು ವೇಶ್ಮಸು ।
ದಾನವಾನಾಂ ಶರೀರೇಷು ಬಾಲೇಷೂನ್ಮತ್ತಕೇಷು ಚ ॥ ೩೯ ॥
ಏತೇ ವಿಶಂತಿ ಮುದಿತಾ ನಾನಾಹಾರವಿಹಾರಿಣಃ ।
ಊಷ್ಮಪಾಃ ಫೇನಪಾಶ್ಚೈವ ಧೂಮ್ರಪಾ ಮಧುಪಾಯಿನಃ ।
ಮದಾಹಾರಾಃ ಸರ್ವಭಕ್ಷ್ಯಾಸ್ತಥಾನ್ಯೇ ಚಾಪ್ಯಭೋಜನಾಃ ॥ ೪೦ ॥

---

ಗಳಂತೆ ಕಿವಿಗಳಿಂದಲೂ, ಗಜದ ಕರ್ಣಗಳಿಂದಲೂ, ಅನೇಕ ಪಾದಗಳು, ಮುಖಗಳು ಮತ್ತು ನೇತ್ರಗಳಿಂದಲೂ ಒಪ್ಪುತ್ತಿದ್ದರು.

೩೬. ಎಲ್ಲರೂ ವಿಚಿತ್ರಗಳಾದ ವಾಹನಗಳನ್ನೇರಿದ್ದರು. ನಾನಾ ವಿಧಗಳಾದ ಅಸ್ತ್ರಶಸ್ತ್ರಗಳನ್ನು ಧರಿಸಿದ್ದರು. ಸಂಗೀತ ಮತ್ತು ವಾದ್ಯಗಳಲ್ಲಿ ನಿಪುಣರಾಗಿದ್ದರು. ಮತ್ತು ಸತ್ವಗುಣವರ್ಧಕಗಳಾದ ಸಂಗೀತರಸಗಳನ್ನು ಪ್ರೀತಿಸುತ್ತಿದ್ದರು.

೩೭. ಇವರೆಲ್ಲರನ್ನೂ ಕಂಡು ಪಾರ್ವತಿಯು ಶಿವನನ್ನು ಕುರಿತು "ಇವರೆಷ್ಟು ಮಂದಿ ಇರುವರು? ಇವರ ಹೆಸರುಗಳೇನು?" ಎಂದು ಕೇಳಿದಳು.

೩೮. ಶಂಕರನು ಹೇಳುತ್ತಾನೆ:—"ಎಲೌ ಪಾರ್ವತಿಯೆ! ಇವರ ಸಂಖ್ಯೆಯನ್ನೆಣಿಸಲಳವಲ್ಲ. ಅಂತೆಯೇ ಇವರ ಹೆಸರುಗಳೂ ಅಸಂಖ್ಯಾತಗಳಾಗಿರುವುವು. ಭಯಂಕರರೂ ಮಹಾ ಪರಾಕ್ರಮಶಾಲಿಗಳೂ ಆದ ಇವರಿಂದ ಪ್ರಪಂಚವೆಲ್ಲವೂ ತುಂಬಿ ತುಳುಕುತ್ತಿರುವುದು.

೩೯–೪೦. ಸಿದ್ಧಕ್ಷೇತ್ರಗಳಲ್ಲಿಯೂ, ಹೆದ್ದಾರಿಗಳಲ್ಲಿಯೂ, ಶೂನ್ಯಗಳಾದ ಉದ್ಯಾನಗಳಲ್ಲಿಯೂ, ಮನೆಗಳಲ್ಲಿಯೂ, ದಾನವರ ಶರೀರಗಳಲ್ಲಿಯೂ, ಬಾಲಕರಲ್ಲಿಯೂ, ಹುಚ್ಚರಲ್ಲಿಯೂ ಇವರು ಸಂತೋಷದಿಂದ ಪ್ರವೇಶಮಾಡುವರು. ನಾನಾವಿಧಗಳಾದ ಆಹಾರಗಳನ್ನು ಸೇವಿಸುವರು. ಉಷ್ಣೋದಕವನ್ನೂ, ಜಲದ ನೊರೆಯನ್ನೂ, ಹೊಗೆಯನ್ನೂ, ಜೇನುತುಪ್ಪವನ್ನೂ ಪಾನಮಾಡುವರು. ಕೆಲವರು ಬಹುವಾಗಿ ಊಟಮಾಡುವರು. ಕೆಲವರು ಸರ್ವಭಕ್ಷಕರು. ಮತ್ತೆ ಕೆಲವರು ಆಹಾರವನ್ನೇ ತೆಗೆದುಕೊಳ್ಳುವುದಿಲ್ಲ.

ಗೀತನೃತ್ಯೋಪಹಾರಾಶ್ಚ ನಾನಾವಾದ್ಯರವಪ್ರಿಯಾಃ ।
ಅನಂತತ್ವಾದಮೀಷಾಂ ಚ ವಕ್ತುಂ ಶಕ್ಯಾ ನ ವೈ ಗುಣಾಃ ॥ ೪೧ ॥
ಶ್ರೀದೇವ್ಯುವಾಚ:—
ಮನಃಶಿಲೇನ ಕಲ್ಕೇನ ಯ ಏಷ ಛುರಿತಾನನಃ ।
ತೇಜಸಾ ಭಾಸ್ಕರಾಕಾರೋ ರೂಪೇಣ ಸದೃಶಸ್ತ್ವವ ॥ ೪೨ ॥
ಆಕರ್ಣ್ಯಾಕರ್ಣ್ಯ ತೇ ದೇವ ಗಣೈರ್ಗೀತಾನ್ಮಹಾಗುಣಾನ್ ।
ಮುಹುರ್ನೃತ್ಯತಿ ಹಾಸ್ಯಂ ಚ ವಿದಧಾತಿ ಮುಹುರ್ಮುಹುಃ ॥ ೪೩ ॥
ಸದಾಶಿವ ಶಿವೇತ್ಯೇವಂ ವಿಹ್ವಲೋ ವಕ್ತಿ ಯೋ ಮುಹುಃ ।
ಧನ್ಯೋಽಯಮೀದೃಶೀ ಯಸ್ಯ ಭಕ್ತಿಸ್ತ್ವಯಿ ಮಹೇಶ್ವರೇ ॥ ೪೪ ॥
ಏನಂ ವಿಜ್ಞಾತುಮಿಚ್ಛಾಮಿ ಕಿಂ ನಾಮಾಸೌ ಗಣಸ್ತ್ವವ ।
ಶ್ರೀ ಶಂಕರ ಉವಾಚ:—
ಸ ಏಷ ವೀರಕೋ ದೇವಿ ಸದಾ ಮೇಽದ್ರಿಸುತೇ ಪ್ರಿಯಃ ॥ ೪೫ ॥
ನಾನಾಶ್ಚರ್ಯಗುಣಾಧಾರಃ ಪ್ರತೀಹಾರೋ ಮತೋಽಂಬಿಕೇ ।
ದೇವ್ಯುವಾಚ:—
ಈದೃಶಸ್ಯ ಸುತಸ್ಯಾಪಿ ಮಮೋತ್ಕಂಠಾ ಪುರಾಂತಕ ॥ ೪೬ ॥

---

೪೧–೪೪. ಕೆಲವರು ಸಂಗೀತ ನೃತ್ಯಗಳಲ್ಲಿಯೇ ನಿರತರಾಗಿರುವರು. ಹಲವರು ಬಹು ವಿಧಗಳಾದ ವಾದ್ಯಗಳಲ್ಲಿಯೇ ಆಸಕ್ತಿಯುಳ್ಳವರು. ಇಂತು ಇವರು ಅಸಂಖ್ಯಾತರಾಗಿರುವುದರಿಂದ ಇವರ ಗುಣಗಳನ್ನು ವಿಸ್ತಾರವಾಗಿ ತಿಳಿಸಲು ಸಾಧ್ಯವೇ ಇಲ್ಲವು.'' ದೇವಿಯು ಕೇಳುತ್ತಾಳೆ:—''ಕೆಂಪಾದ ಮನಃ ಶಿಲೆಯ ಕರ್ದಮದಿಂದ ರಂಜಿತವಾದ ಮುಖವುಳ್ಳವನಾಗಿ, ತೇಜಸ್ಸಿನಿಂದ ಸೂರ್ಯನಂತೆ ಬೆಳಗುತ್ತ, ರೂಪದಲ್ಲಿ ನಿನ್ನನ್ನು ಹೋಲಿ ನಿನ್ನ ಗಣಗಳ ಮುಖ ಗಳಿಂದ ನಿನ್ನ ಉತ್ತಮ ಗುಣಗಳನ್ನು ಮತ್ತೆ ಮತ್ತೆ ಕೇಳುತ್ತ, ಮಧ್ಯೆ ಮಧ್ಯೆ ನಾಟ್ಯವನ್ನಾಡುತ್ತ, ಒಮ್ಮೊಮ್ಮೆ ಹಾಸ್ಯಗಳನ್ನು ಮಾಡುತ್ತ ಮನಸ್ಸಿನ ವಿಹ್ವಲತೆಯಿಂದ ಆಗಿಂದಾಗ್ಗೆ ''ಶಿವ ಸದಾಶಿವ!'' ಎಂದು ಭಜಿಸುತ್ತಲಿರುವ ಈತನಲ್ಲಿರುವ ಭಕ್ತಿಯು ಯಾವನಲ್ಲಿ ಉಂಟಾಗುವುದೊ ಅವನು ಧನ್ಯನು.

೪೫. ಈತನನ್ನು ತಿಳಿಯಲಿಚ್ಛಿಸುತ್ತೇನೆ. ಈ ನಿನ್ನ ಗಣನಾಯಕನ ಹೆಸರೇನು?'' ಶಂಕರನು ಹೇಳುತ್ತಾನೆ:—''ಎಲೌ ಪರ್ವತರಾಜ ಪುತ್ರಿಯೆ! ಇವನೇ ನನಗೆ ಪರಮಪ್ರಿಯನಾದ ವೀರಕನು.

೪೬. ಈತನು ಬಹು ವಿಧಗಳಾದ ಸುಗುಣಗಳಿಂದ ಕೂಡಿ ನನಗೆ ದ್ವಾರ ಪಾಲಕನಾಗಿ ನಿಂತಿರುವನು.'' ದೇವಿಯು ಹೇಳುತ್ತಾಳೆ:—''ಎಲೈ ಶಿವನೆ! ಇಂತಹ ಮಗನನ್ನು ಪಡೆಯಬೇಕೆಂದು ನನಗೆ ಉತ್ಕಟವಾದ ಇಚ್ಛೆಯಿರುವುದ.

ಕದಾಹಮೀದೃಶಂ ಪುತ್ರಂ ಲಪ್ಸ್ಯಾಮ್ಯಾನಂದದಾಯಕಂ ।
ಶರ್ವ ಉವಾಚ:—
ಏಷ ಏವ ಸುತಸ್ತೇಽಸ್ತು ಯಾವದೀದೃಕ್ಪರೋ ಭವೇತ್ ॥ ೪೭ ॥
ಇತ್ಯುಕ್ತ್ವಾ ವಿಜಯಾಂ ಪ್ರಾಹ ಶೀಘ್ರಮಾನಯ ವೀರಕಂ ।
ವಿಜಯಾ ಚ ತತೋ ಗತ್ವಾ ವೀರಕಂ ವಾಕ್ಯಮಬ್ರವೀತ್ ॥ ೪೮ ॥
ಏಹಿ ವೀರಕ ತೇ ದೇವೀ ಗಿರಿಜಾ ತೋಷಿತಾ ಶುಭಾ ।
ತ್ವಾಮಾಹ್ವಯತಿ ಸಾ ದೇವೀ ಭವಸ್ಯಾನುಮತೇ ಸ್ವಯಂ ॥ ೪೯ ॥
ಇತ್ಯುಕ್ತಃ ಸಂಭ್ರಮಯುತೋ ಮುಖಂ ಸಮ್ಮಾರ್ಜ್ಯ ಪಾಣಿನಾ ।
ದೇವ್ಯಾಃ ಸಮೀಪಮಾಗಚ್ಛದ್ವಿಜಯಯಾನುಗತಃ ಶನೈಃ ॥ ೫೦ ॥
ತಂ ದೃಷ್ಟ್ವಾ ಗಿರಿಜಾಪ್ರಾಹ ಗಿರಾ ಮಧುರವರ್ಣಯಾ ।
ಏಹ್ಯೇಹಿ ಪುತ್ರ ದತ್ತಸ್ತ್ವಂ ಭವೇನ ಮಮ ಪುತ್ರಕಃ ॥ ೫೧ ॥
ಇತ್ಯುಕ್ತೋ ದಂಡವದ್ದೇವೀಂ ಪ್ರಣಮ್ಯಾವಸ್ಥಿತಃ ಪುರಃ ।
ಮಾತಾ ತತಸ್ತಮಾಲಿಂಗ್ಯ ಕೃತ್ವೋತ್ಸಂಗೇ ಚ ವೀರಕಂ ॥ ೫೨ ॥

---

೪೭. ಇಂತಹ ಸುಖವನ್ನುಂಟುಮಾಡುವ ಸುಪುತ್ರನನ್ನು ನಾನು ಎಂದಿಗೆ ಪಡೆಯುವೆನೊ!" ಶಿವನು ಆಕೆಯನ್ನು ಕುರಿತು "ನಿನಗೆ ಇಂತಹ ಮಗನೊಬ್ಬನು ಹುಟ್ಟುವವರೆಗೆ ಇವನೇ ನಿನಗೆ ಮಗನಾಗಿರಲಿ" ಎಂದನು.

೪೮. ಆಗ ದೇವಿಯು ವಿಜಯೆಯೆಂಬ ಸಖಿಯನ್ನು ಕುರಿತು ವೀರಕನನ್ನು ಬೇಗ ಕರೆದು ತರುವಂತೆ ಆಜ್ಞಾಪಿಸಿದಳು. ವಿಜಯೆಯೂ ಆತನ ಬಳಿಗೆ ಹೋಗಿ ಇಂತೆಂದಳು:—

೪೯. "ಎಲೈ ವೀರಕನೆ! ಹೊರಡುವವನಾಗು. ದೇವಿಯಾದ ಗಿರಿಜೆಯು ನಿನ್ನಲ್ಲಿ ಅತ್ಯಂತ ಸಂತೋಷಗೊಂಡವಳಾಗಿ ಶಿವನ ಅನುಮತಿಯಿಂದ ನಿನ್ನನ್ನು ಕರೆಯುತ್ತಿರುವಳು."

೫೦. ಈ ಮಾತುಗಳನ್ನು ಕೇಳಿ ಸಂಭ್ರಮಗೊಂಡು ಕೈಗಳಿಂದ ಮುಖವನ್ನೊರಸಿಕೊಳ್ಳುತ್ತ ಮೆಲ್ಲಗೆ ವಿಜಯೆಯು ಹಿಂಬಾಲಿಸುತ್ತಿರಲು ಪಾರ್ವತಿಯ ಸಮೀಪವನ್ನು ಸೇರಿದನು.

೫೧. ಅವನನ್ನು ಕಂಡು ದೇವಿಯು ಮೃದುಮಧುರಗಳಾದ ಮಾತುಗಳಿಂದ "ಅಪ್ಪಾ! ಇಲ್ಲಿ ಬಾ. ನೀನು ನನಗೆ ಮಗನಾಗಿ ಶಂಕರನಿಂದ ಕೊಡಲ್ಪಟ್ಟಿರುವೆ" ಎಂದಳು.

೫೨–೫೩. ಇದನ್ನು ಕೇಳಿ ವೀರಕನು ಆಕೆಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ಜಗನ್ಮಾತೆಯೂ ಅವನನ್ನು ಆಲಿಂಗಿಸಿಕೊಂಡು ತನ್ನ ತೊಡೆಯ ಮೇಲೆ ಕುಳ್ಳಿರಿಸಿ, ಅವನ ಕೆನ್ನೆಗಳನ್ನು ಮುದ್ದಿಟ್ಟುಕೊಳ್ಳುತ್ತ ಮೈಯನ್ನೆಲ್ಲ

ಚುಚುಂಬ ಚ ಕಪೋಲೇ ತಂ ಗಾತ್ರಾಣಿ ಚ ಪ್ರಮಾರ್ಜಯತ್ ।
ಭೂಷಯಾಮಾಸ ದಿವ್ಯೈಸ್ತಂ ಸ್ವಯಂ ನಾನಾವಿಭೂಷಣೈಃ ॥ ೫೩ ॥
ಏವಂ ಸಂಕಲ್ಪ್ಯ ತಂ ಪುತ್ರಂ ಲಾಲಯಿತ್ವಾ ಉಮಾ ಚಿರಂ ।
ಉವಾಚ ಪುತ್ರ ಕ್ರೀಡೇತಿ ಗಚ್ಛ ಸಾರ್ಧಂ ಗಣೈರಿತಿ ॥ ೫೪ ॥
ತತಶ್ಚಿಕ್ರೀಡ ಮಧ್ಯೇ ಸ ಗಣಾನಾಂ ಪಾರ್ವತೀ ಸುತಃ ।
ಮುಹುರ್ಮುಹುಃ ಸ್ವಮನಸಿ ಸ್ತುವನ್ಭಕ್ತಿಂ ಸ ಶಾಂಕರೀಂ ॥ ೫೫ ॥
ಪ್ರಣಮ್ಯ ಸರ್ವಭೂತಾನಿ ಪ್ರಾರ್ಥಯಾಮ್ಯಸ್ಮಿ ದುಷ್ಕರಂ ।
ಭಕ್ತ್ಯಾ ಭಜಧ್ವಮೀಶಾನಂ ಯಸ್ಯಾ ಭಕ್ತೇರಿದಂ ಫಲಂ ॥ ೫೬ ॥
ಕ್ರೀಡಿತುಂ ವೀರಕೇ ಯಾತೇ ತತೋ ದೇವೀ ಚ ಪಾರ್ವತೀ ।
ನಾನಾಕಥಾಭಿಶ್ಚಿಕ್ರೀಡ ಪುನರೇವ ಜಟಾಭೃತಾ ॥ ೫೭ ॥
ತತೋ ಗಿರಿಸುತಾಕಂಠೇ ಕ್ಷಿಪ್ತಬಾಹುರ್ಮಹೇಶ್ವರಃ ।
ತಪಸಸ್ತು ವಿಶೇಷಾರ್ಥಂ ನರ್ಮ ದೇವೀಂ ಕಿಲಾಬ್ರವೀತ್ ॥ ೫೮ ॥

---

ತಡವಿದಳು. ಇಷ್ಟೆಯಲ್ಲದೆ ಆ ದೇವಿಯು ಅಪರಿಮಿತವಾದ ಪುತ್ರಪ್ರೇಮದಿಂದ ಉತ್ಸಾಹಪೂರಿತಳಾಗಿ ನಾನಾ ವಿಧಗಳಾದ ದಿವ್ಯಾಭರಣಗಳಿಂದ ಅವನ ಶರೀರ ವನ್ನು ಅಲಂಕರಿಸಿ ಆನಂದಿಸಿದಳು.

೫೪. ಇಂತು ಅವನನ್ನು ಪುತ್ರನನ್ನಾಗಿ ಸ್ವೀಕರಿಸಿ ಆ ಮಹಾದೇವಿಯು ಕೆಲವು ಕಾಲ ಅವನನ್ನು ಲಾಲಿಸಿ "ಎಲೈ ಪುತ್ರನೆ! ನೀನಿನ್ನು ಹೊರಡು. ನಿನ್ನ ಗಣಗಳೊಡನೆ ಆಡಿಕೊಂಡಿರು" ಎಂದು ಕಳುಹಿಸಿಕೊಟ್ಟಳು.

೫೫. ಆ ಪಾರ್ವತೀಸುತನು ಮನಸ್ಸಿನಲ್ಲಿ ಮತ್ತೆ ಮತ್ತೆ ಈಶ್ವರಭಕ್ತಿಯನ್ನು ಹೊಗಳುತ್ತ ಗಣಗಳ ಮಧ್ಯದಲ್ಲಿ ಆಡಿಕೊಳ್ಳುತ್ತಿದ್ದನು.

೫೬. "ಎಲೈ ಗಣಗಳಿರಾ! ನಾನು ಸಕಲ ಭೂತಗಳಿಗೂ ನಮಸ್ಕರಿಸಿ ಒಂದು ದುಸ್ಸಾಧ್ಯವಾದುದನ್ನು ಕೇಳಿಕೊಳ್ಳುತ್ತೇನೆ. ಯಾವುದರಿಂದ ಇಂತಹ ಉತ್ತಮ ಜನ್ಮವು ನಿಮಗುಂಟಾಯಿತೊ ಅಂತಹ ಭಕ್ತಿಯಿಂದ ನೀವೆಲ್ಲರೂ ಪರಮೇಶ್ವರನನ್ನು ಭಜಿಸಿರಿ."

೫೭. ವೀರಕನು ಗಣಗಳೊಡನೆ ಆಟವಾಡಲು ಹೊರಟುಹೋದ ಮೇಲೆ ಪಾರ್ವತಿಯು ಶಂಕರನೊಡನೆ ಮತ್ತೆ ವಿನೋದದ ಮಾತುಗಳಿಂದ ಕಾಲವನ್ನು ಕಳೆಯುತ್ತಿದ್ದಳು.

೫೮. ಆಗ ಮಹೇಶ್ವರನಾದರೊ ಆಕೆಯನ್ನು ಕಂಠದಲ್ಲಿ ಆಲಿಂಗಿಸುತ್ತ ಆಕೆಯೊಡನೆ ವಿಶೇಷವಾದ ತಪಸ್ಸನ್ನು ಮಾಡಿಸಬೇಕೆಂಬ ಇಚ್ಛೆಯುಳ್ಳವನಾಗಿ ದೇವಿಯನ್ನು ಕುರಿತು, ವಿನೋದಕ್ಕಾಗಿಯೇ ಆಕೆಗೆ ಕೋಪಬರುವಂತಹ ನರ್ಮವಚನಗಳನ್ನಾಡುವವನಾಗಿ ಆಕೆಯನ್ನು ಕುರಿತು ಇಂತೆಂದನು.

ಸಹಿ ಗೌರತನುಃ ಶರ್ವೋ ವಿಶೇಷಾಚ್ಛಶಿಶೋಭಿತಃ ।
ರಂಜಿತಾ ಚ ವಿಭಾವರ್ಯಾ ದೇವೀ ನೀಲೋತ್ಪಲಚ್ಛವಿಃ ॥ ೫೯ ॥

ಶರ್ವ ಉವಾಚ :—

ಶರೀರೇ ಮಮ ತನ್ವಂಗಿ ಸಿತೇ ಭಾಸ್ಯಸಿತದ್ಯುತಿಃ ।
ಭುಜಂಗೀವಾಸಿತಾ ಶುಭ್ರೇ ಸಂಶ್ಲಿಷ್ಟಾ ಚಂದನೇ ತಥಾ ॥ ೬೦ ॥
ಚಂದ್ರಜ್ಯೋತ್ಸ್ನಾಭಿಸಂಪೃಕ್ತಾ ತಾಮಸೀ ರಜನೀ ಯಥಾ ।
ರಜನೀ ವಾ ಸಿತೇ ಪಕ್ಷೇ ದೃಷ್ಟಿದೋಷಂ ದದಾಸಿ ಮೇ ॥ ೬೧ ॥
ಇತ್ಯುಕ್ತಾ ಗಿರಿಜಾ ತೇನ ಕಂಠಂ ಶರ್ವಾದ್ವಿಮುಚ್ಯ ಸಾ ।
ಉವಾಚ ಕೋಪರಕ್ತಾಕ್ಷೀ ಭೃಕುಟೀ ವಿಕೃತಾನನಾ ॥ ೬೨ ॥
ಸ್ವಕೃತೇನ ಜನಃ ಸರ್ವೋ ಜನೇನ ಪರಿಭೂಯತೇ ।
ಅವಶ್ಯಮರ್ಥೀ ಪ್ರಾಪ್ನೋತಿ ಖಂಡನಾಂ ಶಶಿಖಂಡಭೃತ್ ॥ ೬೩ ॥
ತಪೋಭಿರ್ದೀಪ್ತಚರಿತೈರ್ಯತ್ತ್ವಾಂ ಪ್ರಾರ್ಥಿತವತ್ಯಹಂ ।
ತಸ್ಯ ಮೇ ನಿಯಮಸ್ಯೈವಮವಮಾನಃ ಪದೇ ಪದೇ ॥ ೬೪ ॥

---

೫೯. ಪರಮಶಿವನು ಚಿನ್ನದ ಬಣ್ಣದ ಶರೀರವುಳ್ಳವನೂ, ಚಂದ್ರನ ಕಾಂತಿಯಿಂದ ಶೋಭಿಸುವವನೂ ಆಗಿದ್ದನು. ದೇವಿಯಾದರೊ ಕಾಳಿಯ ಪ್ರಸಾದದಿಂದ ನೀಲೋತ್ಪಲದಂತೆ ಶ್ಯಾಮಲವರ್ಣದಿಂದ ರಂಜಿಸುತ್ತಿದ್ದಳು.

೬೦. ಶಿವನು ಹೇಳುತ್ತಾನೆ:—ಎಲೌ ಸುಕುಮಾರಿಯೆ! ಶುಭ್ರವಾದ ನನ್ನ ಶರೀರದಲ್ಲಿ ಶ್ಯಾಮಲೆಯಾದ ನೀನು ಚಂದನವೃಕ್ಷವನ್ನು ಸುತ್ತುವರೆದ ಕಾಳಸರ್ಪದಂತೆ ಕಾಣುತ್ತಿರುವೆ.

೬೧. ಚಂದ್ರನ ಕಾಂತಿಯಿಂದ ಕೂಡಿದ ರಾತ್ರಿಯು ಸ್ವಲ್ಪ ಕತ್ತಲೆಯಿಂದೊಡಗೂಡಿದಂತೆಯೂ ಶುಕ್ಲಪಕ್ಷದಲ್ಲಿನ ರಾತ್ರಿಯಂತೆಯೂ ನೀನು ನನಗೆ ದೃಷ್ಟಿದೋಷವನ್ನು ಕೊಡುವಂತಿದೆ.”

೬೨. ಈ ಮಾತುಗಳನ್ನು ಕೇಳಿ ಗಿರಿಜೆಯು ತಕ್ಷಣದಲ್ಲಿಯೇ ಶಿವನ ಆಲಿಂಗನದಿಂದ ಹೊರಬಿದ್ದು ಕೋಪದಿಂದ ಹುಬ್ಬುಗಂಟನ್ನು ಹಾಕಿ ಕೆಂಪಾದ ಕಣ್ಣುಗಳಿಂದ ಶಿವನನ್ನು ಕುರಿತು ಹೇಳಿದಳೆಂತೆಂದರೆ :—

೬೩. “ಲೋಕದಲ್ಲಿ ಜನರೆಲ್ಲರೂ ತಮ್ಮ ತಮ್ಮ ನಡೆನುಡಿಗಳಿಂದಲೇ ಇತರರ ಪರಿಹಾಸ್ಯಕ್ಕೆ ಕಾರಣರಾಗುವರು. ಎಲೈ ಚಂದ್ರಶೇಖರನೆ! ನಿಜವಾಗಿಯೂ ಯಾಚನೆಮಾಡುವವನು ಪರಿಭವವನ್ನು ಹೊಂದುವನು.

೬೪. ತಪಗಳಿಂದಲೂ ಉಜ್ಜ್ವಲವಾದ ಜೀವನದಿಂದಲೂ ನಾನು ನಿನ್ನನ್ನೇ ಪ್ರಾರ್ಥಿಸಿದುದರಿಂದ, ಆ ನನ್ನ ನಿಯಮದ ಫಲವಾಗಿ ಈಗ ನನಗೆ ಮತ್ತೆ ಮತ್ತೆ ಅವಮಾನವಾಗುತ್ತಿರುವುದು.

ನೈವಾಹಂ ಕುಟಿಲಾ ಶರ್ವ ವಿಷಮಾ ನ ಚ ಧೂರ್ಜಟೇ ।
ಸ್ವದೋಷೈಸ್ತ್ವಂ ಗತಃ ಕ್ಷಾಂತಿಂ ತಥಾ ದೋಷಾಕರಾಃ ಶ್ರಿಯಃ ॥ ೬೫ ॥
ನಾಹಂ ಮುಷ್ಣಾಮಿ ನಯನೇ ನೇತ್ರಹಂತಾ ಭವಾನ್ಭವ ।
ಭಗಸ್ತತ್ತ್ವೇ ವಿಜಾನಾತಿ ತಥೈವೇದಂ ಜಗತ್ತ್ರಯಂ ॥ ೬೬ ॥
ಮೂರ್ಧ್ನಿ ಶೂಲಂ ಜನಯಸೇ ಸ್ವೈರ್ದೋಷೈರ್ಮಾಮಧಿಕ್ಷಿಪನ್ ।
ಯತ್ತ್ವಂ ಮಾಮಾಹ ಕೃಷ್ಣೇತಿ ಮಹಾಕಾಲೋಽಸಿ ವಿಶ್ರುತಃ ॥ ೬೭ ॥
ಯಾಸ್ಯಾಮ್ಯಹಂ ಪರಿತ್ಯಕ್ತುಮಾತ್ಮಾನಂ ತಪಸಾ ಗಿರಿಂ ।
ಜೀವಂತ್ಯಾ ನಾಸ್ತಿ ಮೇ ಕೃತ್ಯಂ ಧೂರ್ತೇನ ಪರಿಭೂತಯಾ ॥ ೬೮ ॥
ನಿಶಮ್ಯ ತಸ್ಯಾ ವಚನಂ ಕೋಪತೀಕ್ಷ್ಣಾಕ್ಷರಂ ಭವಃ ।
ಉವಾಚಾಥ ಚ ಸಂಭ್ರಾಂತೋ ದುಜ್ಞೇಯಚರಿತೋ ಹರಃ ॥ ೬೯ ॥
ನ ತತ್ತ್ವಜ್ಞಾಸಿ ಗಿರಿಜೇ ನಾಹಂ ನಿಂದಾಪರಸ್ತವ ।
ಚಾಟೂಕ್ತಬುದ್ಧ್ಯಾ ಕೃತವಾನ್ಸ್ತ್ವಾಹಂ ನರ್ಮಕೀರ್ತನಂ ॥ ೭೦ ॥

---

೬೫. ಎಲೈ ಧೂರ್ಜಟಿಯೆ! ನಾನು ಚಂಚಲೆಯೂ ಅಲ್ಲ. ವಿಷಮ ಸ್ವಭಾವದವಳೂ ಅಲ್ಲ. ಮೊದಲು ನಿನ್ನ ದೋಷಗಳನ್ನೇ ಹೋಗಲಾಡಿಸಿಕೊಳ್ಳುವ ಪ್ರಯತ್ನವನ್ನು ಮಾಡು. ಐಶ್ವರ್ಯವೆಂಬುದು ದೋಷಗಳ ನೆಲೆವನೆಯಲ್ಲವೆ!

೬೬. ನಾನು ಕಣ್ಣುಗಳನ್ನು ಮುಚ್ಚುವವಳಲ್ಲ. ನೀನಾದರೊ ಕಣ್ಣುಗಳನ್ನು ತೆರೆದಮಾತ್ರದಿಂದಲೇ ನಾಶಮಾಡುವೆ. ಈ ನಿನ್ನ ಪ್ರಭಾವವನ್ನು ಮೂರು ಲೋಕಗಳೆಲ್ಲವೂ ಕಂಡಿರುವುವು.

೬೭. ನಿನ್ನ ದೋಷಗಳನ್ನೇ ನನ್ನಲ್ಲಿ ಆರೋಪಿಸುತ್ತ ನನ್ನ ತಲೆಯಲ್ಲಿ ಶೂಲೆಯನ್ನು ಉಂಟುಮಾಡುತ್ತಿರುವೆ. ನನ್ನನ್ನೇ ಕೃಷ್ಣೆ ಎಂದು ಕರೆಯುತ್ತಿರುವ ನೀನು ಮಹಾಕಾಳನೆಂದೇ ಹೆಸರನ್ನು ಪಡೆದಿರುವೆ.

೬೮. ಈಗ ನಾನು ಈ ಜೀವನವನ್ನು ತಪಸ್ಸಿನಿಂದ ಬಿಡುವವಳಾಗಿ ಪರ್ವತಕ್ಕೆ ಹೊರಟುಹೋಗುತ್ತೇನೆ. ಧೂರ್ತನಾದ ನಿನ್ನಿಂದ ಈ ಪರಿಭವವನ್ನು ಹೊಂದಿ ನಾನು ಜೀವದಿಂದಿದ್ದು ಮಾಡಬೇಕಾದ ಕಾರ್ಯವುತಾನೆ ಏನು?"

೬೯. ಇಂತು ಕೋಪದಿಂದ ಆಡಿದ ತೀಕ್ಷ್ಣಗಳಾದ ಆಕೆಯ ಮಾತುಗಳನ್ನು ಕೇಳಿ ಪರಮೇಶ್ವರನು ಸಂಭ್ರಮಗೊಂಡು ತಿಳಿಯಲಳವಲ್ಲದ ವ್ಯವಹಾರವುಳ್ಳವನಾಗಿ ಆಕೆಯನ್ನು ಕುರಿತು ಇಂತೆಂದನು.

೭೦. "ಎಲೌ ಗಿರಿಜೆಯೆ! ನೀನು ನಿಜವನ್ನರಿಯೆ. ನಾನೆಂದಿಗೂ ನಿನ್ನನ್ನು ನಿಂದಿಸಿದವನಲ್ಲ. ಈ ನಿನ್ನ ಸ್ವರೂಪದ ಕಥನವನ್ನು ಕೇವಲ ಕುಚೋದ್ಯದಿಂದಲೇ ಮಾಡಿದೆನು.

ವಿಕಲ್ಪೈಃ ಸ್ವಚ್ಛಚಿತ್ತೇತಿ ಗಿರಿಜೈಷಾ ಮಮ ಪ್ರಿಯಾ ।
ಪ್ರಾಯೇಣ ಭೂತಿಲಿಪ್ತಾನಾಮನ್ಯಥಾ ಚಿಂತಿತಾ ಹೃದಿ ॥ ೭೧ ॥
ಅಸ್ಮಾದೃಶಾನಾಂ ಕೃಷ್ಣಾಂಗಿ ಪ್ರವರ್ತಂತೇಽನ್ಯಥಾಗಿರಃ ।
ಯದ್ಯೇವಂ ಕುಪಿತಾ ಭೀರು ನ ತೇ ವಕ್ಷ್ಯಾಮ್ಯಹಂ ಪುನಃ ॥ ೭೨ ॥
ನರ್ಮವಾದೀ ಭವಿಷ್ಯಾಮಿ ಜಹಿ ಕೋಪಂ ಶುಚಿಸ್ಮಿತೇ ।
ಶಿರಸಾ ಪ್ರಣತಸ್ತೇಽಹಂ ರಚಿತಸ್ತೇ ಮಯಾಂಜಲಿಃ ॥ ೭೩ ॥
ದೀನೇನಾಪ್ಯಪಮಾನೇನ ನಿಂದಿತೋ ನೈಮಿ ವಿಕ್ರಿಯಾಂ ।
ವರಮಸ್ಮಿ ವಿನಮ್ರೋಽಸ್ಮಿ ನತ್ವಂ ದೇವಿ ಗುಣಾನ್ವಿತಾ ॥ ೭೪ ॥
ಇತ್ಯನೇಕೈಶ್ಚಾಟುವಾಕ್ಯೈಃ ಸೂಕ್ತೈರ್ದೇವೇನ ಬೋಧಿತಾ ।
ಕೋಪಂ ತೀವ್ರಂ ನ ತತ್ಯಾಜ ಸತೀ ಮರ್ಮಣಿ ಘಟ್ಟಿತಾ ॥ ೭೫ ॥
ಅವಷ್ಟಬ್ಧಾವಥ ಕ್ಷಿಪ್ತ್ವಾ ಪಾದೌ ಶಂಕರಪಾಣಿನಾ ।
ವಿಪರ್ಯಸ್ತಾಲಕಾ ವೇಗಾದ್ಗಂತುಮೈಚ್ಛತ ಶೈಲಜಾ ॥ ೭೬ ॥

---

೭೧–೭೨. ನನ್ನ ಪ್ರಿಯೆಯಾದ ಗಿರಿಜೆಯು ಶುದ್ಧವಾದ ಅಂತರಂಗವುಳ್ಳವಳೆಂದು ವಿಕಲ್ಪದಿಂದ ನನ್ನ ಮಾತುಗಳಿಗೆ ಅರ್ಥವು. ಎಲೌ ಕೃಷ್ಣಾಂಗಿಯೆ! ಪ್ರಾಯಶಃ ನನ್ನಂತೆ ವಿಭೂತಿಭೂಷಿತರಾದವರ ಮನಸ್ಸಿನಲ್ಲಿರುವ ಯೋಚನೆಯೇ ಒಂದು. ಮಾತುಗಳು ಮಾತ್ರ ಕೇವಲ ವಿರುದ್ಧಗಳಾಗಿಯೇ ಹೊರಡುವುವು.

೭೩. ಇಷ್ಟರಿಂದಲೇ ನೀನು ಇಷ್ಟು ಕೋಪಗೊಳ್ಳುವಳಾದರೆ ಇನ್ನುಮೇಲೆ ನಾನು ನಿನ್ನೊಡನೆ ಮಾತುಗಳನ್ನೇ ಆಡುವುದಿಲ್ಲವು. ನಾನು ಕೇವಲ ಕುಚೋದ್ಯದ ಮಾತುಗಳನ್ನೇ ಆಡಿದೆನು. ಎಲೌ ಶುಚಿಸ್ಮಿತೆಯೆ! ನಿನಗೆ ನಾನು ಶಿರಸಾ ನಮಸ್ಕರಿಸುತ್ತೇನೆ. ನಿನಗೆ ಅಂಜಲಿಬಂಧವನ್ನೂ ಮಾಡುತ್ತಿರುವೆನು.

೭೪. ಎಂತಹ ದೀನನು ಅವಮಾನವನ್ನು ಮಾಡಿದರೂ ನಾನು ಮನಸ್ಸಿನ ವಿಕಾರವನ್ನು ಹೊಂದುವುದಿಲ್ಲ. ಉತ್ತಮನಾದ ನಾನು ನಮ್ರನಾಗಿದ್ದರೂ ಕೂಡ ನೀನು ದಯಾಗುಣವುಳ್ಳವಳಾಗಲಿಲ್ಲ."

೭೫. ಇಂತು ಅನೇಕ ವಿಧಗಳಾದ ಸಮಾಧಾನದ ನುಡಿಗಳಿಂದ ಪರಮೇಶ್ವರನು ತಿಳಿಯಹೇಳಿದರೂ ದೇವಿಯು ಮರ್ಮಘಾತಕಗಳಾದ ಮೊದಲಿನ ನುಡಿಗಳನ್ನು ನೆನಸಿ ತನ್ನ ತೀವ್ರವಾದ ಕೋಪವನ್ನು ತ್ಯಜಿಸಲಿಲ್ಲವು.

೭೬. ಶಿವನ ಕೈಗಳಿಂದ ಹಿಡಿಯಲ್ಪಟ್ಟ ತನ್ನ ಕಾಲುಗಳನ್ನು ಕೊಡವಿ ಬಿಡಿಸಿಕೊಂಡು ಕೆದರಿದ ಕೂದಲುಗಳುಳ್ಳವಳಾಗಿ ವೇಗದಿಂದ ಪಾರ್ವತಿಯು ಹೊರಡಲನುವಾದಳು.

ತಸ್ಯಾಂ ವ್ರಜಂತ್ಯಾಂ ಕೋಪೇನ ಪುನರಾಹ ಪುರಾಂತಕಃ ।
ಸತ್ಯಂ ಸರ್ವೈರವಯವೈಃ ಸುತೇತಿ ಸದೃಶೀ ಪಿತುಃ ॥ ೭೭ ॥
ಹಿಮಾಚಲಸ್ಯ ಶೃಂಗೈಸ್ತ್ರೈರ್ಮೇಘಮಾಲಾಕುಲೈರ್ನಃ ।
ತಥಾ ದುರವಗಾಹ್ಯೋಽಸೌ ಹೃದಯೋಭ್ಯಸ್ತವಾಶಯಃ ॥ ೭೮ ॥
ಕಾಠಿನ್ಯಂ ಕಷ್ಟಮಸ್ಮಿಂಸ್ತೇ ವನೇಭ್ಯೋ ಬಹುಧಾ ಗತಂ ।
ಕುಟಿಲತ್ವಂ ನದೀಭ್ಯಸ್ತೇ ದುಸ್ಸೇವ್ಯತ್ವಂ ಹಿಮಾದಪಿ ॥ ೭೯ ॥
ಸಂಕ್ರಾಂತಂ ಸರ್ವಮೇವೈತತ್ತವ ದೇವಿ ಹಿಮಾಚಲಾತ್ ।
ಇತ್ಯುಕ್ತಾ ಸಾ ಪುನಃ ಪ್ರಾಹ ಗಿರಿಶಂ ಶೈಲಜಾ ತದಾ ॥ ೮೦ ॥
ಕೋಪಕಂಪಿತಧೂಮ್ರಾಸ್ಯಾ ಸಸ್ಫುರದ್ದಶನಚ್ಛದಾ ।
ಮಾ ಶರ್ವಾತ್ಮೋಪಮಾನೇನ ನಿಂದ ತ್ವಂ ಗುಣಿನೋ ಜನಾನ್ ॥ ೮೧ ॥
ತವಾಪಿ ದುಷ್ಟಸಂಪರ್ಕಾತ್ಸಂಕ್ರಾಂತಂ ಸರ್ವಮೇವ ಹಿ ।
ವ್ಯಾಲೇಭ್ಯೋಽನೇಕ ಜಿಹ್ವತ್ವಂ ಭಸ್ಮನಃ ಸ್ನೇಹವರ್ಜ್ಯತಾ ॥ ೮೨ ॥
ಹೃತ್ಕಾಲುಷ್ಯಂ ಶಶಾಂಕಾತ್ತೇ ದುರ್ಬೋಧತ್ವಂ ವೃಷಾದಪಿ ।
ಅಥವಾ ಬಹುನೋಕ್ತೇನ ಅಲಂ ವಾಚಾ ಶ್ರಮೇಣ ಮೇ ॥ ೮೩ ॥

---

೭೭. ಇಂತು ಕೋಪದಿಂದ ಹೊರಡುತ್ತಿರುವ ಆಕೆಯನ್ನು ಕುರಿತು ಮಹಾದೇವನು ಮತ್ತೆ ಹೇಳತೊಡಗಿದನು :—" ನಿಜವಾಗಿಯೂ ನೀನು ಸರ್ವ ಭಾವದಿಂದಲೂ ಆ ತಂದೆಗೆ ಸಮಳಾದ ಮಗಳೇ ಸರಿ.

೭೮. ಮೇಘಜಾಲಗಳಿಂದ ಕಣ್ಣಿಗೆ ಕಾಣದೆ ಹಿಮಾಚಲದ ಶೃಂಗಗಳೆಂತು ಮನಸ್ಸಿಗೆ ತಿಳಿಯಲಸಾಧ್ಯವೋ, ಹಾಗೆಯೇ ನಿನ್ನ ಮನೋಭಾವವೂ ಇತರರ ಹೃದಯಗಳಿಗೆ ತಿಳಿಯಲಸಾಧ್ಯವು.

೭೯–೮೦. ಆ ಹಿಮಾಚಲದ ವನಪ್ರದೇಶಗಳಿಂದಲೇ ನಿನಗೆ ಪ್ರಾಯಶಃ ದುಸ್ಸಹವಾದ ಈ ಕಾಠಿನ್ಯವು ಬಂದಿರುವುದು. ನದಿಗಳಿಂದ ಚಂಚಲತ್ವವೂ ಹಿಮದಿಂದ ದುರ್ಗಮತ್ವವೂ ಮುಂತಾದ ಎಲ್ಲವೂ ನಿನಗೆ ಹಿಮಾಚಲದಿಂದಲೇ ಉಂಟಾಗಿರುವುದು."

೮೧–೮೨. ಈ ಮಾತುಗಳನ್ನು ಕೇಳಿ ಕೋಪದಿಂದ ನಡುಗುತ್ತಿರುವ ಕರಾಳ ಮುಖದಿಂದಲೂ ಅದುರುತ್ತಿರುವ ತುಟಿಗಳಿಂದಲೂ ಪಾರ್ವತಿಯು ಮತ್ತೆ ಪರಮೇಶ್ವರನನ್ನು ಕುರಿತು ಇಂತೆಂದಳು. " ಎಲೈ ಶಿವನೆ! ಗುಣವಂತರಾದ ಇತರ ಜನರನ್ನು ನಿನ್ನ ಸಮಾನರೆಂದೆಣಿಸಿ ಸುಮ್ಮನೆ ನಿಂದಿಸಬೇಡ. ನಿನಗೂ ದುಷ್ಟ ಸಹವಾಸದಿಂದ ಸಕಲ ದುರ್ಗುಣಗಳೂ ಉಂಟಾಗಿರುವುವಲ್ಲವೆ.

೮೩. ಹಾವುಗಳಿಂದ ಹಲವು ನಾಲಿಗೆಗಳೂ, ಭಸ್ಮದಿಂದ ಸ್ನೇಹರಾಹಿತ್ಯವೂ, ಚಂದ್ರನಿಂದ ಕಳಂಕಿತ ಹೃದಯವೂ, ವೃಷಭದಿಂದ ದುರ್ಬೋಧತ್ವವೂ

**ಶ್ಮಶಾನವಾಸ ಆಸೀಸ್ತ್ವಂ ನಗ್ನತ್ವಾನ್ನ ತಪತ್ರಪಾ ।**
**ನಿರ್ಘೃಣತ್ವಂ ಕಪಾಲಿತ್ವಾದೇವಂ ಕಃ ಶಕ್ನುಯಾತ್ತ್ವ ॥ ೮೪ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ಕುಮಾರೇಶಮಹಾತ್ಮ್ಯೇ ಪಾರ್ವತೀಪ್ರಕೋಪವರ್ಣನಂ"ನಾಮ ಸಪ್ತವಿಂಶೋಽಧ್ಯಾಯಃ**

---

ಉಂಟಾಗಿರುವುವು. ಅಲ್ಲದೆ ಸುಮ್ಮನೆ ನಿನ್ನೊಡನೆ ಹೆಚ್ಚು ಮಾತುಗಳನ್ನಾಡುವ ಶ್ರಮವು ನನಗೇಕೆ?

೮೪. ನೀನು ಎಷ್ಟಾದರೂ ಸ್ಮಶಾನವಾಸಿಯಾದವನು. ದಿಗಂಬರನಾದ ನಿನಗೆ ಲಜ್ಜೆಯೆಂಬುದೇ ತಿಳಿಯದು; ಬ್ರಹ್ಮನ ಕಪಾಲವನ್ನು ಕೈಯಲ್ಲಿ ಹಿಡಿದು ಕೇವಲ ನಿಷ್ಕರುಣಿಯಾಗಿರುವೆ. ನಿನ್ನ ಅನಂತ ದೋಷಗಳನ್ನು ಎಣಿಸಲು ಯಾರಿಗೆತಾನೆ ಶಕ್ಯವು?"

**ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ಕುಮಾರೇಶ ಮಾಹಾತ್ಮ್ಯ—ಪಾರ್ವತೀ ಪ್ರಕೋಪ ವರ್ಣನ" ಎಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥ ಅಷ್ಟಾವಿಂಶೋಽಧ್ಯಾಯಃ

## ಕುಮಾರೇಶ ಮಹಾತ್ಮ್ಯೇ ಪಾರ್ವತ್ಯಾಸ್ತಪೋರ್ಥಂ ಗಮನ ವರ್ಣನಂ

ನಾರದ ಉವಾಚ :—

ಇತ್ಯುಕ್ತ್ವಾ ಮಂದಿರಾತ್ತಸ್ಮಾನ್ನಿರ್ಜಗಾಮ ಹಿಮಾದ್ರಿಜಾ ।
ತಸ್ಯಾಂ ವ್ರಜಂತ್ಯಾಂ ಚಕ್ರುಶ್ಚ ಗಣಾಃ ಕಿಲಕಿಲಧ್ವನಿಂ ॥ ೧ ॥
ಕ್ವಮಾತರ್ಗಚ್ಛಸೀತ್ಯುಕ್ತ್ವಾ ರುದಂತೋ ಧಾವಿತಾಃ ಪುರಂ ।
ವಿಷ್ಟಭ್ಯ ಚರಣೌ ದೇವ್ಯಾ ವೀರಕೋ ಬಾಷ್ಪಗದ್ಗದಂ ॥ ೨ ॥
ಪ್ರೋವಾಚ ಮಾತಃ ಕಿಂ ನ್ವೇತತ್ಕ್ವ ಯಾಸಿ ಕುಪಿತಾ ತ್ವರಾ ।
ಅಹಂ ತ್ವಾಮನುಯಾಸ್ಯಾಮಿ ಮಾತರಂ ಸ್ನೇಹವತ್ಸಲಾಂ ॥ ೩ ॥
ನಾಹಂ ಸಹಿಷ್ಯೇ ಪರುಷಂ ಗಿರೀಶಸ್ಯ ತ್ವಯೋಽಚಿತಃ ।
ಪುತ್ರಃ ಪಾರುಷ್ಯಪಾತ್ರಂ ಹಿ ಭವೇನ್ಮಾತ್ರಾ ವಿನಾ ಪಿತುಃ ॥ ೪ ॥
ಉನ್ನಾಮ್ಯ ವದನಂ ಪಶ್ಚಾದ್ದಕ್ಷಿಣೇನ ತು ಪಾಣಿನಾ ।
ಉವಾಚ ವೀರಕಂ ಮಾತಾ ಮಾ ಶೋಕಂ ಪುತ್ರ ಭಾವಯ ॥ ೫ ॥

---

## ಕನ್ನಡದ ಅನುವಾದ

### ಕುಮಾರೇಶ ಮಾಹಾತ್ಮ್ಯ—ಪಾರ್ವತಿಯು ತಪೋಽಭಿಗಮನ ವರ್ಣನ

೧. ಇಂತೆಂದು ನುಡಿದು, ಗಿರಿಜೆಯು ಅರಮನೆಯನ್ನು ಬಿಟ್ಟು ಹೊರಡಲು ಪ್ರಮಥಗಣಗಳೆಲ್ಲರೂ ಕಿಲಕಿಲಾಶಬ್ದವನ್ನು ಮಾಡುತ್ತಿದ್ದರು.

೨-೩. ಅವರು, "ತಾಯೆ ! ಎಲ್ಲಿ ಹೋಗುವೆ ?" ಎಂದು ಕೇಳಿ ರೋದನ ಮಾಡುತ್ತ ಆಕೆಯ ಮುಂದೆ ಓಡುತ್ತಿದ್ದರು. ವೀರಕನಂತು ಆಕೆಯ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಕಣ್ಣೀರನ್ನು ಸುರಿಸುತ್ತ ಗದ್ಗದ ಕಂಠದಿಂದ ಹೇಳತೊಡಗಿದನು :—"ತಾಯೆ ! ಇದೇನು ? ಕೋಪಗೊಂಡು ಈ ರೀತಿ ವೇಗದಿಂದೆಲ್ಲಿಗೆ ಹೋಗುವೆ ? ಸ್ನೇಹವಾತ್ಸಲ್ಯಗಳಿಂದ ಕೂಡಿದ ಮಾತೆಯಾದ ನಿನ್ನನ್ನೇ ನಾನೂ ಹಿಂಬಾಲಿಸುವೆನು.

೪. ನಿನ್ನಿಂದ ಪರಿತ್ಯಕ್ತನಾಗಿ ನಾನು ಮಹೇಶ್ವರನ ಕಠಿನ ವಾಕ್ಯಗಳನ್ನು ಸಹಿಸಲಾರೆ. ತಾಯಿಲ್ಲದ ಮಕ್ಕಳಿಂದರೆ ತಂದೆಗೆ ಕೇವಲ ಕಠಿನಹೃದಯವೇ ಇರುವುದು."

೫. ಆಗ ಪಾರ್ವತಿಯು ಆತನ ಮುಖವನ್ನು ತನ್ನ ಬಲಗೈಯಿಂದ ಹಿಡಿದೆತ್ತಿ ಆತನಿಗೆ ಹೇಳಿದುದೇನೆಂದರೆ :—"ಮಗನೆ ! ವೀರಕ !! ನೀನು ದುಃಖಪಡಬೇಡ.

ಶೈಲಾಗ್ರಾತ್ಪತಿತುಂ ನೈವ ನ್ಯಾಯ್ಯಂ ಗಂತುಂ ಮಯಾ ಸಹ ।
ವಕ್ಷ್ಯಾಮಿ ಪುತ್ರ ತೇ ಯೋಗ್ಯಂ ತತ್ತು ಕಾರ್ಯಂ ತ್ವಯಾ ಶೃಣು ॥೬॥
ಕೃಷ್ಣೇತ್ಯುಕ್ತಾ ಹರೇಣಾಹಂ ನಿಂದಿತಾ ಚ ತೃಣಾಯಿತಾ ।
ಸಾಹಂ ತಪಃ ಕರಿಷ್ಯಾಮಿ ಯಥಾ ಗೌರೀತ್ವಮಾಪ್ನುಯಾಂ ॥ ೭ ॥
ಗೌರಾಂಗೀಲಂಪಟೋಽಹ್ಯೇಷ ಯಾತಾಯಾಂ ಮಯ್ಯನಂತರಂ ।
ದ್ವಾರರಕ್ಷಾ ತ್ವಯಾಕಾರ್ಯಾ ನಿತ್ಯಂ ರಂಧ್ರಾನ್ವವೇಕ್ಷಿಣಾ ॥ ೮ ॥
ಯಥಾ ನ ಕಾಚಿತ್ಪ್ರವಿಶೇದ್ಯೋಷಿದತ್ರ ಹರಾಂತಿಕೇ ।
ದೃಷ್ಟ್ವಾ ಪರಾಂ ಸ್ತ್ರಿಯಂ ಚಾತ್ರ ವದೇಥಾ ಮಮ ಪುತ್ರಕ ॥ ೯ ॥
ಶೀಘ್ರಮೇವ ಕರಿಷ್ಯಾಮಿ ತತೋ ಯುಕ್ತಮನಂತರಂ ।
ಏವಮಸ್ತ್ವಿತಿ ತಾಂ ದೇವೀಂ ವೀರಕಃ ಪ್ರಾಹ ಸಾಂಪ್ರತಂ ॥ ೧೦ ॥
ಮಾತುರಾಜ್ಞಾಂ ಸುತೋ ಹ್ಲಾದಪ್ಲಾವಿತಾಂಗೋ ಗತಜ್ವರಃ ।
ಜಗಾಮ ತ್ರ್ಯಕ್ಷಂ ಸಂದ್ರಷ್ಟುಂ ಪ್ರಣಿಪತ್ಯ ಚ ಮಾತರಂ ॥ ೧೧ ॥
ಗಜವಕ್ತ್ರಂ ತತಃ ಪ್ರಾಹ ಪ್ರಣಮ್ಯ ಸಮುಪಸ್ಥಿತಂ ।
ಸಾಶ್ರುಕಂಠಂ ಪಯಾಚಂತಂ ನಯ ಮಾಮಪಿ ಪಾರ್ವತಿ ॥ ೧೨ ॥

---

೬–೭. ನೀನು ಪರ್ವತದಿಂದ ಬಿದ್ದು ಪ್ರಾಣವನ್ನು ಬಿಡುವುದೂ, ನನ್ನೊಡನೆ ಬರುವುದೂ ನ್ಯಾಯವಲ್ಲ. ನಿನಗೆ ಯುಕ್ತವಾದ ಕಾರ್ಯವನ್ನು ತಿಳಿಸುತ್ತೇನೆ. ಕೇಳುವವನಾಗು. ಶಿವನಿಂದ ನಾನು ಕೃಷ್ಣೆಯೆಂದು ನಿಂದಿತಳಾಗಿ ತೃಣದಂತೆ ಕಾಣಲ್ಪಟ್ಟುದರಿಂದ ಸ್ವರ್ಣವರ್ಣದ ಶರೀರವನ್ನು ಸಂಪಾದಿಸುವುದಕ್ಕಾಗಿ ತಪಸ್ಸನ್ನು ಮಾಡಲು ಹೋಗುತ್ತೇನೆ.

೮. ಈ ಶಿವನು ಗೌರಸ್ತ್ರೀಯರಲ್ಲಿ ಅಭಿಲಾಷೆಯುಳ್ಳವನು. ಆದುದರಿಂದ ನೀನು ಈತನ ಹುಳುಕುಗಳನ್ನೇ ನೋಡುತ್ತ ನಾನು ಹೋದ ಮೇಲೆ ಈತನ ದ್ವಾರವನ್ನು ಜಾಗರೂಕನಾಗಿ ಸರ್ವಕಾಲದಲ್ಲಿಯೂ ಕಾಯುತ್ತಿರು.

೯–೧೦. ಯಾವೊಬ್ಬ ಹೆಂಗಸೂ ಶಿವನ ಸಮೀಪಕ್ಕೆ ಪ್ರವೇಶಮಾಡದಂತೆ ನೋಡಿಕೊ. ಮತ್ತು ಇತರ ಸ್ತ್ರೀಯನ್ನೇನಾದರೂ ನೋಡಿದರೆ ತಕ್ಷಣವೇ ನನಗೆ ತಿಳಿಸಬೇಕು. ಬಳಿಕ ಮಾಡಬೇಕಾದುದನ್ನು ನಾನೇ ಬೇಗನೆ ಮಾಡುತ್ತೇನೆ."

೧೧. ಹಾಗೆಯೇ ಆಗಲೆಂದು ಹೇಳಿ ವೀರಕನು ತಾಯಿಯಾಣತಿಯು ಯುಕ್ತವೆಂದು ಚಿಂತಿಸುತ್ತ ಸಂತುಷ್ಟಾಂತರಂಗನಾಗಿ ಚಿಂತೆಯನ್ನು ಬಿಟ್ಟು ತಾಯಿಗೆ ನಮಸ್ಕರಿಸಿ ತಂದೆಯನ್ನು ನೋಡಲು ಹೊರಟುಹೋದನು.

೧೨. ಬಳಿಕ ವಿನಾಯಕನು ನಮಸ್ಕರಿಸಿ ಕಣ್ಣೀರಿನಿಂದ ಕೂಡಿ "ನನ್ನನ್ನು ಕರೆದುಕೊಂಡು ಹೋಗು" ಎಂದು ಯಾಚನೆಮಾಡುತ್ತ ನಿಂತಿರುವುದನ್ನು ಕಂಡು ಪಾರ್ವತಿಯು ಹೇಳಿದಳು.

**ಗಜವಕ್ತ್ರಂ ಹಿ ತ್ವಾಂ ಬಾಲ ಮಾಮಿವೋಪಹಸಿಷ್ಯತಿ ।**
**ತದಾಗಚ್ಛ ಮಯಾ ಸಾರ್ಧಂ ಯಾ ಗತಿರ್ಮೇ ತವಾಪಿ ಸಾ ॥ ೧೩ ॥**
**ಪರಾಭವಾದ್ಧಿ ಧೂರ್ತಾನಾಂ ಮರಣಂ ಸಾಧು ಪುತ್ರಕ ।**
**ಏವಮುಕ್ತ್ವಾ ಸಮಾದಾಯ ಹಿಮಾದ್ರಿಂ ಪ್ರತಿ ಸಾ ಯಯೌ ॥ ೧೪ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ಕುಮಾರೇಶ ಮಹಾತ್ಮ್ಯೇ ಪಾರ್ವತ್ಯಾಸ್ತಪೋಽರ್ಥಂ ಗಮನ ವರ್ಣನಂ" ನಾಮ ಅಷ್ಟಾವಿಂಶೋಽಧ್ಯಾಯಃ**

---

೧೩. "ಅಪ್ಪಾ, ಮಗನೆ! ಆನೆಯ ಮುಖವುಳ್ಳ ನೀನೂ ನನ್ನಂತೆಯೇ ಇವರ ಅಪಹಾಸ್ಯಕ್ಕೆ ಈಡಾಗಬೇಕಾಗುವುದು. ಆದುದರಿಂದ ನನ್ನೊಡನೆ ಬಾ. ನನ್ನ ಗತಿಯೇ ನಿನಗೂ ಆಗುವುದು.

೧೪. ಧೂರ್ತರ ಕೈಯಲ್ಲಿ ಪರಾಭವವನ್ನು ಹೊಂದುವುದಕ್ಕಿಂತ ಮರಣವೇ ಶ್ರೇಯಸ್ಕರವು." ಇಂತೆಂದು ಆತನನ್ನು ಕರೆದುಕೊಂಡು ಪಾರ್ವತಿಯು ಹಿಮಾಲಯದ ಕಡೆಗೆ ತೆರಳಿದಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ಕುಮಾರೇಶ ಮಾಹಾತ್ಮ್ಯ—ಪಾರ್ವತಿಯ ತಪೋಭಿಗಮನ ವರ್ಣನ" ಎಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನತ್ರಿಂಶೋಽಧ್ಯಾಯಃ

**ಕುಮಾರೇಶ ಮಾಹಾತ್ಮ್ಯೇ ಸ್ಕಂದಕುಮಾರಸ್ಯ ಸರ್ವದೇವ ಸೈನ್ಯಾಧಿಪತ್ಯಾಭಿಷೇಕೋತ್ಸವ ವರ್ಣನಂ**

ನಾರದ ಉವಾಚ :—

ವ್ರಜಂತೀ ಗಿರಿಜಾಪಶ್ಯತ್ಸಖೀಂ ಮಾತುರ್ಮಹಾಪ್ರಭಾಂ ।
ಕುಸುಮಾಮೋದಿನೀಂ ನಾಮ ತಸ್ಯ ಶೈಲಸ್ಯ ದೇವತಾಂ ॥ ೧ ॥
ಸಾಪಿ ದೃಷ್ಟ್ವಾ ಗಿರಿಸುತಾ ಸ್ನೇಹವಿಕ್ಲವಮಾನಸಾ ।
ಕ್ವ ಪುನರ್ಗಚ್ಛಸೀತ್ಯುಚ್ಚೈರಾಲಿಂಗ್ಯೋವಾಚ ದೇವತಾ ॥ ೨ ॥
ಸಾ ಚಾಸ್ಯೈ ಸರ್ವಮಾಚಖ್ಯೌ ಶಂಕರಾತ್ಕೋಪಕಾರಣಂ ।
ಪುನಶ್ಚೋವಾಚ ಗಿರಿಜಾ ದೇವತಾಂ ಮಾತೃಸಮ್ಮತಾಂ ॥ ೩ ॥
ನಿತ್ಯಂ ಶೈಲಾಧಿರಾಜಸ್ಯ ದೇವತಾ ತ್ವಮನಿಂದಿತೇ ।
ಸರ್ವಂ ಚ ಸನ್ನಿಧಾನಂ ಚ ಮಯಿ ಚಾತೀವ ವತ್ಸಲಾ ॥ ೪ ॥
ತದಹಂ ಸಂಪ್ರವಕ್ಷ್ಯಾಮಿ ಯದ್ವಿಧೇಯಂ ತವಾಧುನಾ ।
ಅಥಾನ್ಯಸ್ತ್ರೀಪ್ರವೇಶೇ ತು ಸಮೀಪೇ ತು ಪಿನಾಕಿನಃ ॥ ೫ ॥

---

## ಕನ್ನಡದ ಅನುವಾದ

**ಕುಮಾರೇಶ ಮಾಹಾತ್ಮ್ಯ—ಸ್ಕಂದಕುಮಾರನ ಸರ್ವದೇವ ಸೈನ್ಯಾಧಿಪತ್ಯಾಭಿಷೇಕ ವರ್ಣನ**

೧. ನಾರದರು ಹೇಳುತ್ತಾರೆ:—ಇಂತು ಹೊರಟ ಗಿರಿಜೆಯು ಅತ್ಯಂತ ಕಾಂತಿಮತಿಯೂ, ತನ್ನ ತಾಯಿಯಾದ ಮೇನೆಯ ಸಖಿಯೂ ಆದ ಕುಸುಮಾಮೋದಿನಿಯೆಂಬ ಆ ಮಂದರ ಪರ್ವತದ ಅಧಿದೇವತೆಯನ್ನು ಕಂಡಳು.

೨. ಆಕೆಯೂ ಕೂಡ ಪಾರ್ವತಿಯನ್ನು ಕಂಡು ಸ್ನೇಹದಿಂದ ಕರಗಿದ ಮನಸ್ಸುಳ್ಳವಳಾಗಿ ಆಲಿಂಗನವನ್ನು ಮಾಡಿಕೊಂಡು "ಮತ್ತೆ ಎಲ್ಲಿಗೆ ಹೊರಡುವೆ" ಎಂದು ಕೇಳಿದಳು.

೩. ಆಗ ಗಿರಿಜೆಯು ಶಂಕರನಿಂದ ತನ್ನ ಕೋಪಕ್ಕೆ ಉದ್ರೇಕ ಉಂಟಾದುದನ್ನೆಲ್ಲ ವಿಸ್ತಾರವಾಗಿ ಹೇಳಿ ಮಾತೃಕೆಯರಿಗೆ ಸಮ್ಮತಳಾದ ಆಕೆಯನ್ನು ಕುರಿತು ಮತ್ತೆ ಹೇಳತೊಡಗಿದಳು.

೪. "ಎಲೈ ಪಾಪರಹಿತಳೆ! ನೀನು ಈ ಪರ್ವತಕ್ಕೆ ಅಧಿದೇವತೆಯಾಗಿರುವೆ. ನಿನ್ನ ಸನ್ನಿಧಾನವೇ ಎಲ್ಲೆಲ್ಲಿಯೂ ಇರುವುದು. ನನ್ನಲ್ಲಿಯೂ ನೀನು ಅತ್ಯಂತ ಪ್ರೀತಿಯನ್ನಿಟ್ಟಿರುವೆ.

೫–೬. ಆದುದರಿಂದ ನೀನೀಗ ಮಾಡಬೇಕಾಗಿರುವ ಕೆಲಸವನ್ನು ಹೇಳುತ್ತೇನೆ. ಶಿವನ ಸಮೀಪಕ್ಕೆ ಮತ್ತೆ ಯಾವ ಸ್ತ್ರೀಯಾದರೂ ಪ್ರವೇಶ

ತ್ವಯಾಖ್ಯೇಯಂ ಮಮ ಶುಭೇ ಯುಕ್ತಂ ಪಶ್ಚಾತ್ಕರೋಮ್ಯಹಂ ।
ತಥೇತ್ಯುಕ್ತೇ ತಯಾ ದೇವ್ಯಾ ಯಯೌ ದೇವೀ ಗಿರಿಂ ಪ್ರತಿ ॥ ೬ ॥
ರಮ್ಯೇ ತತ್ರ ಮಹಾಶೃಂಗೇ ನಾನಾಶ್ಚರ್ಯೋಪಶೋಭಿತೇ ।
ವಿಭೂಷಣಾದಿ ಸನ್ನ್ಯಸ್ಯ ವೃಷವಲ್ಕಲಧಾರಿಣೀ ॥ ೭ ॥
ತಪಸ್ತೇಪೇ ಗಿರಿಸುತಾ ಪುತ್ರೇಣ ಪರಿಪಾಲಿತಾ ।
ಗ್ರೀಷ್ಮೇ ಪಂಚಾಗ್ನಿಸಂತಪ್ತಾ ವರ್ಷಾಸು ಚ ಜಲೋಷಿತಾ ॥ ೮ ॥
ಸ್ಥಂಡಿಲಸ್ಥಾ ಚ ಹೇಮಂತೇ ನಿರಾಹಾರಾ ತತಾಪ ಸಾ ।
ಏತಸ್ಮಿನ್ನಂತರೇ ದೈತ್ಯೋ ಹ್ಯಂಧಕಸ್ಯ ಸುತೋ ಬಲೀ ॥ ೯ ॥
ಜ್ಞಾತ್ವಾ ಗತಾಂ ಗಿರಿಸುತಾಂ ಪಿತುರ್ವೈರಮನುಸ್ಮರನ್ ।
ಆಡಿರ್ನಾಮ ಬಕಭ್ರಾತಾ ರಹಸ್ಯಾಂತರಪ್ರೇಕ್ಷಕಃ ॥ ೧೦ ॥
ಜಿತೇ ಕಿಲಾಂಧಕೇ ದೈತ್ಯೇ ಗಿರಿಶೇನಾಮರದ್ವಿಷಿ ।
ಆಡಿಶ್ಚಕಾರ ವಿಪುಲಂ ತಪೋ ಹರಜಿಗೀಷಯಾ ॥ ೧೧ ॥
ತಮಾಗತ್ಯಾಬ್ರವೀದ್ಬ್ರಹ್ಮಾ ತಪಸಾ ಪರಿತೋಷಿತಃ ।
ಬ್ರೂಹಿ ಕಿಂ ವಾಸುರಶ್ರೇಷ್ಠ ತಪಸಾ ಪ್ರಾಪ್ತುಮಿಚ್ಛಸಿ ॥ ೧೨ ॥

---

ಮಾಡಿದರೆ ನೀನು ನನಗೆ ಕೂಡಲೆ ತಿಳಿಸಬೇಕು. ಬಳಿಕ ನಾನು ತಕ್ಕುದನ್ನು ಮಾಡುವೆನು.''

೬–೧೦. ಕುಸುಮಾಮೋದಿನಿಯು ಹಾಗೆಯೇ ಆಗಲೆಂದು ಒಪ್ಪಿಕೊಳ್ಳಲು ಪಾರ್ವತಿಯು ಹಿಮಾದ್ರಿಗೆ ಹೊರಟಳು. ನಾನಾಶ್ಚರ್ಯಗಳಿಂದ ಶೋಭಿತವಾದ ಮನೋಹರ ಶೃಂಗದಲ್ಲಿ ತನ್ನ ವಸ್ತ್ರಭೂಷಣಗಳನ್ನೆಲ್ಲ ತೆಗೆದಿಟ್ಟು ಗಿಡಗಳ ನಾರುಡೆಯನ್ನುಟ್ಟು ಗಿರಿಜೆಯು ವಿನಾಯಕನಿಂದ ರಕ್ಷಿಸಲ್ಪಟ್ಟವಳಾಗಿ ತಪಸ್ಸನ್ನು ಮಾಡಿದಳು. ಗ್ರೀಷ್ಮರ್ತುವಿನಲ್ಲಿ ಪಂಚಾಗ್ನಿ ಮಧ್ಯದಲ್ಲಿಯೂ, ವರ್ಷಾಕಾಲದಲ್ಲಿ ನಡುವಿನವರೆಗಣ ನೀರಿನಲ್ಲಿಯೂ, ಹೇಮಂತರ್ತುವಿನಲ್ಲಿ ಬರಿಯ ನೆಲದಮೇಲೂ ಆಕೆಯು ನಿರಶನವ್ರತದಿಂದ ತಪಸ್ಸನ್ನು ಮಾಡಿದಳು. ಆ ಸಮಯದಲ್ಲಿಯೇ ಅಂಧಕನ ಮಗನೂ ಬಕಾಸುರನ ತಮ್ಮನೂ ಆದ ಆಡಿಯೆಂಬ ಬಲಿಷ್ಠನಾದ ರಾಕ್ಷಸನು ಗಿರಿಜೆಯು ಹೊರಟುಹೋದುದನ್ನು ತಿಳಿದು ತಂದೆಯ ವೈರವನ್ನು ಸ್ಮರಿಸುತ್ತ ಇಂತಹ ಗೃಹಚ್ಛಿದ್ರಕ್ಕೇ ಹೊಂಚುಹಾಕುತ್ತಿದ್ದನು.

೧೧–೧೨. ದೇವತೆಗಳ ದ್ವೇಷಿಯಾದ ಅಂಧಕಾಸುರನು ಪರಮೇಶ್ವರನಿಂದ ನಿಗ್ರಹವನ್ನು ಹೊಂದಲು, ಈಶ್ವರನನ್ನು ಗೆಲ್ಲಬೇಕೆಂಬ ಬಯಕೆಯಿಂದ ಆಡಿಯು ಬಹುವಾದ ತಪಸ್ಸನ್ನು ಮಾಡಿದನು. ಆತನ ತಪಸ್ಸಿನಿಂದ ಸಂತೋಷಗೊಂಡ ಬ್ರಹ್ಮನು ಪ್ರತ್ಯಕ್ಷನಾಗಿ "ಎಲೈ ರಾಕ್ಷಸೋತ್ತಮನೆ! ಈ ಘೋರವಾದ ತಪಸ್ಸಿನಿಂದ ಏನನ್ನು ಹೊಂದಲು ಇಚ್ಛಿಸುತ್ತಿರುವೆ?'' ಎಂದು ಕೇಳಿದನು.

ಬ್ರಹ್ಮಾಣಮಾಹ ದೈತ್ಯಸ್ತು ನಿರ್ಮೃತ್ಯುತ್ವಮಹಂ ವೃಣೇ ।
ಬ್ರಹ್ಮೋವಾಚ :—
ನಕಶ್ಚಿಚ್ಚ ವಿನಾ ಮೃತ್ಯುಂ ಜಂತುರಾಸುರ ವಿದ್ಯತೇ ॥ ೧೩ ॥
ಯತಸ್ತತೋಽಪಿ ದೈತ್ಯೇಂದ್ರ ಮೃತ್ಯುಃ ಪ್ರಾಪ್ಯಃ ಶರೀರಿಣಾ ।
ಇತ್ಯುಕ್ತೋ ದೈತ್ಯಸಿಂಹಸ್ತು ಪ್ರೋವಾಚಾಂಬುಜಸಂಭವಂ ॥ ೧೪ ॥
ರೂಪಸ್ಯ ಪರಿವರ್ತೋ ಮೇ ಯದಾ ಸ್ಯಾತ್ಪದ್ಮಸಂಭವ ।
ತದಾಮೃತ್ಯುರ್ಮಮ ಭವೇದನ್ಯಥಾ ತ್ವಮರೋ ಹ್ಯಹಂ ॥ ೧೫ ॥
ಇತ್ಯುಕ್ತಸ್ತಂ ತಥೇತ್ಯಾಹ ತುಷ್ಟಃ ಕಮಲಸಂಭವಃ ।
ಇತ್ಯುಕ್ತೋಽಮರತಾಂ ಮೇನೇ ದೈತ್ಯರಾಜ್ಯಸ್ಥಿತೋಽಸುರಃ ॥ ೧೬ ॥
ಆಜಗಾಮ ಸ ಚ ಸ್ಥಾನಂ ತದಾ ತ್ರಿಪುರಘಾತಿನಃ ।
ಆಗತೋ ದದೃಶೇ ತಂ ಚ ವೀರಕಂ ದ್ವಾರ್ಯವಸ್ಥಿತಂ ॥ ೧೭ ॥
ತಂ ಚಾಸೌ ವಂಚಯಿತ್ವಾ ಚ ಆಡಿಃ ಸರ್ಪ ಶರೀರಭೃತ್ ।
ಅವಾರಿತೋ ವೀರಕೇಣ ಪ್ರವಿವೇಶ ಹರಾಂತಿಕಂ ॥ ೧೮ ॥

---

೧೩. ಆ ರಾಕ್ಷಸನಾದರೊ ತನಗೆ ಮರಣವೆಂಬುದೇ ಇರಬಾರದೆಂದು ವರವನ್ನು ಕೇಳಿದನು. ಅದನ್ನು ಕೇಳಿ ಬ್ರಹ್ಮನು "ಎಲೈ ದೈತ್ಯನೆ! ಮೃತ್ಯುವಿಲ್ಲದ ಜಂತುವೆಂಬುದು ಈ ಜಗತ್ತಿನಲ್ಲಿಯೇ ಯಾವುದೂ ಎಲ್ಲಿಯೂ ಕಾಣುವುದಿಲ್ಲವೆಂಬುದನ್ನು ತಿಳಿ.

೧೪. ಆದುದರಿಂದ ಶರೀರವನ್ನು ಹೊಂದಿದವರೆಲ್ಲರೂ ಮರಣವನ್ನು ಹೊಂದಲೇಬೇಕು" ಎಂದು ಹೇಳಲು ಆ ರಾಕ್ಷಸಶ್ರೇಷ್ಠನು ಚತುರ್ಮುಖನನ್ನು ಕುರಿತು ಇಂತೆಂದನು.

೧೫. "ಎಲೈ ಪದ್ಮಸಂಭವನಾದ ಬ್ರಹ್ಮದೇವನೇ! ಯಾವಾಗ ನನ್ನ ರೂಪವು ಬದಲಾವಣೆಯನ್ನು ಹೊಂದುವುದೊ ಆಗಲೇ ನನಗೆ ಮರಣವುಂಟಾಗಬೇಕು. ಇಲ್ಲದಿದ್ದಲ್ಲಿ ನಾನು ಅಮರನಾಗಿಯೇ ನಿಲ್ಲಬೇಕು" ಎಂದು ವರವನ್ನು ಕೇಳಿಕೊಂಡನು.

೧೬. ಬ್ರಹ್ಮನು ಸಂತೋಷದಿಂದ ಹಾಗೆಯೇ ಆಗಬಹುದೆಂದು ಒಪ್ಪಿಕೊಂಡನು. ಬಳಿಕ ರಾಕ್ಷಸ ರಾಜ್ಯದಲ್ಲಿ ಸ್ಥಿರನಾದ ಆ ದೈತ್ಯನು ತಾನು ಅಮರನೆಂದೇ ತಿಳಿದನು.

೧೭. ಮತ್ತು ತ್ರಿಪುರಾಂತಕನಾದ ಮಹೇಶ್ವರನಿದ್ದ ಪರ್ವತಕ್ಕೆ ಬಂದು ಮಂದಿರದ ದ್ವಾರದಲ್ಲಿ ಕಾವಲಾಗಿ ನಿಂತಿದ್ದ ವೀರಕನನ್ನು ಕಂಡನು.

೧೮. ಆಡಿಯು ಅವನನ್ನು ವಂಚಿಸಿ ಸರ್ಪದ ಆಕಾರವನ್ನು ಕೈಕೊಂಡು ವೀರಕನಿಂದ ತಡೆಯಲ್ಪಡದೆಯೇ ಶಿವನ ಅಂತಃಪುರವನ್ನು ಪ್ರವೇಶಿಸಿದನು.

ಭುಜಂಗರೂಪಂ ಸಂತ್ಯಜ್ಯ ಬಭೂವಾಥ ಮಹಾಸುರಃ ।
ಉಮಾರೂಪೀ ಛಲಯಿತುಂ ಗಿರಿಶಂ ಮೂಢಚೇತನಃ ॥ ೧೯ ॥
ಕೃತ್ವೋಮಾಯಾಸ್ತತೋ ರೂಪಮಪ್ರತರ್ಕ್ಯಂ ಮನೋಹರಂ ।
ಸರ್ವಾವಯವಸಂಪೂರ್ಣಂ ಸರ್ವಾಭಿಜ್ಞಾನಸಂಕುಲಂ ॥ ೨೦ ॥
ಚಕ್ರೇ ಭಗಾಂತರೇ ದೈತ್ಯೋ ದಂತಾನ್ವಜ್ರೋಪಮಾನ್ದೃಢಾನ್ ।
ತೀಕ್ಷ್ಣಾಗ್ರಾನ್ಬುದ್ಧಿಮೋಹೇನ ಗಿರಿಶಂ ಹಂತುಮುದ್ಯತಃ ॥ ೨೧ ॥
ಕೃತ್ವೋಮಾರೂಪಮೇವಂ ಸ ಸ್ಥಿತೋ ದೈತ್ಯೋ ಹರಾಂತಿಕೇ ।
ತಾಂ ದೃಷ್ಟ್ವಾ ಗಿರಿಶಸ್ತುಷ್ಟಃ ಸಮಾಲಿಂಗ್ಯ ಮಹಾಸುರಂ ॥ ೨೨ ॥
ಮನ್ಯಮಾನೋ ಗಿರಿಸುತಾಂ ಸರ್ವೈರವಯವಾಂತರೈಃ ।
ಅಪೃಚ್ಛತ್ಸಾಧು ತೇ ಭಾವೋ ಗಿರಿಪುತ್ರಿ ಹ್ಯಕೃತ್ರಿಮಾ ॥ ೨೩ ॥
ಯಾ ತ್ವಂ ಮದಾಶಯಂ ಜ್ಞಾತ್ವಾ ಪ್ರಾಪ್ತೇಹ ವರವರ್ಣಿನಿ ।
ತ್ವಯಾ ವಿರಹಿತಃ ಶೂನ್ಯಂ ಮನ್ಯೇಽಸ್ಮಿನ್ಭುವನತ್ರಯೇ ॥ ೨೪ ॥
ಪ್ರಾಪ್ತಾ ಪ್ರಸನ್ನಾ ಯಾ ತ್ವಂ ಮಾಂ ಯುಕ್ತಮೇವಂ ವಿಧಂ ತ್ವಯಿ ।
ಇತ್ಯುಕ್ತೇ ಗುಂಹಯಂಶ್ಚೇಷ್ಟಾಮುಮಾರೂಪ್ಯಸುರೋಽಬ್ರವೀತ್ ॥೨೫॥

---

೧೯–೨೧. ಅಲ್ಲಿ ತನ್ನ ಸರ್ಪರೂಪವನ್ನು ತ್ಯಜಿಸಿ ಮೂಢಬುದ್ಧಿಯುಳ್ಳವನಾದುದರಿಂದ ಮಹೇಶ್ವರನನ್ನು ವಂಚಿಸಬೇಕೆಂದು ಪಾರ್ವತಿಯ ರೂಪವನ್ನು ಸ್ವೀಕರಿಸಿದನು. ಊಹಿಸಲಸಾಧ್ಯವಾದ ಮನೋಹರವೂ ಸರ್ವಾಂಗಸುಂದರವೂ ಸಕಲ ಚಿಹ್ನೆಗಳಿಂದೊಡಗೂಡಿದುದೂ ಆದ ಪಾರ್ವತಿಯ ರೂಪವನ್ನು ತಳೆದು ಮೋಹಿತ ಬುದ್ಧಿಯುಳ್ಳವನಾಗಿ ಪರಮೇಶ್ವರನನ್ನು ಕೊಲ್ಲಲು ಪ್ರಯತ್ನಿಸಿ ಆ ರಾಕ್ಷಸನು ಭಗದಲ್ಲಿ ವಜ್ರಗಳಿಗೆ ಸಮಾನಗಳಾದುವೂ, ದೃಢಗಳೂ, ಹರಿತವಾದ ಕೊನೆಗಳುಳ್ಳವುಗಳೂ ಆದ ದಂತಗಳನ್ನು ತಳೆದಿದ್ದನು.

೨೨–೨೪. ಇಂತು ಪಾರ್ವತಿಯ ರೂಪವನ್ನು ತಳೆದು ದೈತ್ಯನು ಶಿವನ ಸಮೀಪದಲ್ಲಿ ನಿಂತಿರಲು ಆ ರಾಕ್ಷಸನನ್ನು ಶಿವನು ಕಂಡು ಸಂತೋಷದಿಂದ ಆಲಿಂಗಿಸಿ ಅವಯವಗಳ ಆಕಾರಗಳಿಂದ ಪಾರ್ವತಿಯೆಂದೇ ತಿಳಿದವನಾಗಿ ಕೇಳಿದನು :—"ಎಲೈ ಗಿರಿಜೆಯೆ! ನಿನ್ನ ಸಾಧುಭಾವವು ಸಹಜವೂ ಕೃತ್ರಿಮರಹಿತವೂ ಆಗಿರುವುದು. ನನ್ನ ಮನಸ್ಸಿನ ಭಾವವನ್ನು ತಿಳಿದು ಇಲ್ಲಿಗೆ ಬಂದಿರುವೆ. ಎಲೌ ಸುಂದರಾಂಗಿಯೆ! ನಿನ್ನಿಂದ ವಿರಹಿತನಾದ ನನಗೆ ಮೂರುಲೋಕಗಳೂ ಶೂನ್ಯಗಳಾಗಿಯೇ ತೋರುತ್ತಿರುವುವು.

೨೫. ನೀನು ಪ್ರಸನ್ನಳಾಗಿ ನನ್ನನ್ನು ಸೇರಿದುದು ನಿನಗೆ ಯೋಗ್ಯವಾಗಿಯೇ ಇರುವುದು." ಇಂತೆಂದ ಮಹೇಶ್ವರನನ್ನು ಕುರಿತು ತನ್ನ ಕೃತ್ಯವನ್ನು ಮರೆಸುವ ಉದ್ದೇಶದಿಂದ ಪಾರ್ವತೀರೂಪಿಯಾದ ರಾಕ್ಷಸನು ಹೇಳಿದನು.

ಯಾತಾಸ್ಮಿ ತಪಸಶ್ಚರ್ತುಂ ಕಾಲೀವಾಕ್ಯಾತ್ತ್ವಾತುಲಂ ।
ರತಿಶ್ಚ ತತ್ರನೋ ನಾಭೂತ್ತತಃ ಪ್ರಾಪ್ತಾ ತವಾಂತಿಕಂ ॥ ೨೬ ॥
ಇತ್ಯುಕ್ತಃ ಶಂಕರಃ ಶಂಕಾಂ ಕಿಂಚಿತ್ಪ್ರಾಪ್ಯಾವಧಾರಯತ್ ।
ಕುಪಿತಾ ಮಯಿ ತನ್ವಂಗೀ ಪ್ರತ್ಯಕ್ಷಾ ಚ ದೃಢವ್ರತಾ ॥ ೨೭ ॥
ಅಪ್ರಾಪ್ತಕಾಮಾ ಸಂಪ್ರಾಪ್ತಾ ಕಿಮೇತತ್ಸಂಶಯೋ ಮಮ ।
ರಹಸೀತಿ ವಿಚಿಂತ್ಯಾಥ ಅಭಿಜ್ಞಾನಾದ್ವಿಚಾರಯನ್ ॥ ೨೮ ॥
ನಾಪಶ್ಯದ್ವಾಮಪಾರ್ಶ್ವೇ ತು ತಸ್ಯಾಂಕಂ ಪದ್ಮಲಕ್ಷಣಂ ।
ಲೋಮ್ನಾಮಾವರ್ತಚರಿತಂ ತತೋ ದೇವಃ ಪಿನಾಕಧೃಕ್ ॥ ೨೯ ॥
ಬುದ್ಧ್ವಾ ತಾಂ ದಾನವೀಂ ಮಾಯಾಂ ಕಿಂಚಿತ್ಪ್ರಹಸಿತಾನನಃ ।
ಮೇಢ್ರೇ ರೌದ್ರಾಸ್ತ್ರಮಾಧಾಯ ಚಕ್ರೇ ದೈತ್ಯಮನೋರಥಂ ॥ ೩೦ ॥
ಸ ರುದನ್ಭೈರವಾನ್ಪ್ರಾಣಾನವಸಾದಂ ಗತೋಽಸುರಃ ।
ಅಬುದ್ಧ್ಯದ್ವೀರಕೋ ನೈತದಸುರೇಂದ್ರನಿಷೂದನಂ ॥ ೩೧ ॥

---

೨೬. "ಎಲೈ ಶಿವನೆ! ನೀನು ಕಾಳಿಯೆಂದು ಕರೆದು ಹಾಸ್ಯಮಾಡಿದುದರಿಂದ ಅತಿಯಾಗಿ ರೋಷಗೊಂಡ ನಾನು ತಪಸ್ಸನ್ನು ಮಾಡಲು ಹೊರಟು ಹೋದೆನು. ಆದರೆ ಅದರಲ್ಲಿ ನನಗೆ ಯಾವ ಬಗೆಯ ಉತ್ಸಾಹವೂ ಉಂಟಾಗಲಿಲ್ಲವಾದುದರಿಂದ ಮತ್ತೆ ನಿನ್ನ ಸಮೀಪವನ್ನೇ ಸೇರಿದೆನು."

೨೭. ಈ ಮಾತುಗಳನ್ನು ಕೇಳಿ ಶಂಕರನು ಸ್ವಲ್ಪ ಸಂದೇಹಗೊಂಡು ಯೋಚಿಸತೊಡಗಿದನು. "ಪಾರ್ವತಿಯು ಸುಕುಮಾರಿಯಾದರೂ ನನ್ನಲ್ಲಿ ಸಾಕ್ಷಾತ್ತಾಗಿಯೇ ಕೋಪಗೊಂಡುಹೋದುದರಿಂದ ನಿಜವಾಗಿಯೂ ದೃಢವ್ರತವುಳ್ಳವಳಾಗಿಯೇ ಇರುತ್ತಾಳೆ.

೨೮–೩೦. ಅವಳು ಇಷ್ಟಾರ್ಥವನ್ನು ಪಡೆಯದೆ ಹಿಂದಿರುಗಿದಳೆಂಬುದು ನನಗೆ ಸಂಶಯವಾಗಿದೆ." ಇಂತು ಏಕಾಂತದಲ್ಲಿ ವಿಚಾರಮಾಡುತ್ತ ಶರೀರದ ಗುರುತುಗಳನ್ನು ಶೋಧಿಸುತ್ತಿರಲು ಆಕೆಯ ಎಡಪಾರ್ಶ್ವದಲ್ಲಿ ಪದ್ಮಾಕಾರವಾದ ಮಚ್ಚೆಯನ್ನೂ ಕಾಣಲಿಲ್ಲವು. ಕೂದಲುಗಳ ಸುಳಿಯನ್ನು ಕಾಣದೆ ಪಿನಾಕಿಯಾದ ಮಹಾದೇವನು ಇದೆಲ್ಲವೂ ಕೇವಲ ರಾಕ್ಷಸಮಾಯೆಯೆಂದು ತಿಳಿದು ಸ್ವಲ್ಪ ಮಂದಹಾಸವನ್ನು ಬೀರುತ್ತ ತನ್ನ ಮೇಢ್ರದಲ್ಲಿ ರೌದ್ರಾಸ್ತ್ರವನ್ನು ಆವಾಹನೆ ಮಾಡಿಕೊಂಡು ಆ ಮಾಯಾಪಾರ್ವತಿಯೊಡನೆ ಸಂಭೋಗವನ್ನು ಮಾಡಿದನು.

೩೧. ಆಗಲಾ ರಾಕ್ಷಸನು ಭಯಂಕರವಾದ ಧ್ವನಿಯನ್ನು ಮಾಡುತ್ತ ಪ್ರಾಣವನ್ನು ನೀಗಿದನು. ಇಷ್ಟಾದರೂ ದ್ವಾರದಲ್ಲಿದ್ದ ವೀರಕನು ಈ ರೀತಿಯಾದ ರಾಕ್ಷಸನ ಸಂಹಾರವನ್ನು ತಿಳಿಯಲೇ ಇಲ್ಲ.

ಹತೇ ಚ ಮಾರುತೇನಾಶುಗಾಮಿನಾ ನಗದೇವತಾ ।
ಅಪರಿಚ್ಛಿನ್ನತತ್ತ್ವಾರ್ಥಾ ಶೈಲಪುತ್ರ್ಯೈ ನ್ಯವೇದಯತ್ ॥ ೩೨ ॥
ಶ್ರುತ್ವಾ ವಾಯುಮುಖಾದ್ದೇವೀ ಕ್ರೋಧರಕ್ತಾತಿಲೋಚನಾ ।
ಅಪಶ್ಯದ್ವೀರಕಂ ಪುತ್ರಂ ಹೃದಯೇನ ವಿದೂಯತಾ ॥ ೩೩ ॥
ಮಾತರಂ ಮಾಂ ಪರಿತ್ಯಜ್ಯ ಯಸ್ಮಾತ್ತ್ವಂ ಸ್ನೇಹವಿಹ್ವಲಾಂ ।
ವಿಹಿತಾವಸರಃ ಸ್ತ್ರೀಣಾಂ ಶಂಕರಸ್ಯ ರಹೋವಿಧೌ ॥ ೩೪ ॥
ತಸ್ಮಾತ್ತೇ ಪರುಷಾ ರೂಕ್ಷಾ ಜಡಾ ಹೃದಯವರ್ಜಿತಾ ।
ಗಣೇಶಾಕ್ಷರಸದೃಶಾ ಶಿಲಾ ಮಾತಾ ಭವಿಷ್ಯತಿ ॥ ೩೫ ॥
ಏವಮುತ್ಸೃಷ್ಟಶಾಪಾಯಾ ಗಿರಿಪುತ್ರ್ಯಾಸ್ತ್ವನಂತರಂ ।
ನಿರ್ಜಗಾಮ ಮುಖಾತ್ಕ್ರೋಧಃ ಸಿಂಹರೂಪೀ ಮಹಾಬಲಃ ॥ ೩೬ ॥
ಪಶ್ಚಾತ್ತಾಪಂ ಸಮಾಶ್ರಿತ್ಯ ತಯಾ ದೇವ್ಯಾ ವಿಸರ್ಜಿತಃ ।
ಸ ತು ಸಿಂಹಃ ಕರಾಲಾಸ್ಯೋ ಮಹಾಕೇಸರಕಂಧರಂ ॥ ೩೭ ॥
ಪ್ರೋದ್ಧೂತಬಲಲಾಂಗೂಲದಂಷ್ಟ್ರೋತ್ಕಟಗುಹಾಮುಖಃ ।
ವ್ಯಾವೃತ್ತಾಸ್ಯೋ ಲಲಜ್ಜಿಹ್ವಃ ಕ್ಷಾಮಕುಕ್ಷಿಶ್ಚಿಖಾದಿಷುಃ ॥ ೩೮ ॥

---

೩೨. ಇಂತು ಆ ರಾಕ್ಷಸನು ನಿಹತನಾಗಲು ಪರ್ವತದ ಅಧಿದೇವತೆಯಾದ ಕುಸುಮಾಮೋದಿನಿಯು ಶೀಘ್ರಗಾಮಿಯಾದ ವಾಯುವಿನ ಮೂಲಕವಾಗಿ ನಡೆದ ಸಮಾಚಾರವೆಲ್ಲವನ್ನೂ ಚಾಚೂ ತಪ್ಪದಂತೆ ಪಾರ್ವತಿಗೆ ತಿಳಿಸಿದಳು.

೩೩–೩೫. ವಾಯುವಿನ ಮೂಲಕವಾಗಿ ವೃತಾಂತವನ್ನು ತಿಳಿದು ಕ್ರೋಧದಿಂದ ಕೆಂಪೇರಿದ ಕಣ್ಣುಗಳುಳ್ಳವಳಾಗಿ ಬಂದು ಕಂಪಿಸುತ್ತಿರುವ ಹೃದಯವುಳ್ಳ ಮಗನಾದ ವೀರಕನನ್ನು ಕಂಡಳು. '' ಸ್ನೇಹದಿಂದ ವಿಹ್ವಲಳಾದ ತಾಯಿಯಾದ ನನ್ನನ್ನು ಬಿಟ್ಟು ಶಂಕರನ ಏಕಾಂತದಲ್ಲಿ ಸ್ತ್ರೀಯನ್ನು ಬಿಟ್ಟುದುದರಿಂದ ನಿನಗೆ ಕಠಿನವೂ, ರೂಕ್ಷವೂ, ಜಡವೂ, ಹೃದಯವಿಲ್ಲದುದೂ, ಗಣೇಶಾಕ್ಷರ ಸಮವೂ ಆದ ಶಿಲೆಯೇ ನಿನಗೆ ಮಾತೃವಾಗುವುದು '' ಎಂದು ಶಪಿಸಿದಳು.

೩೬. ಇಂತು ಶಾಪವನ್ನು ಕೊಟ್ಟ ಗಿರಿಜೆಯ ಮುಖದಿಂದ ಅನಂತರದಲ್ಲಿ ಕ್ರೋಧವು ಮಹಾ ಬಲಿಷ್ಠವಾದ ಸಿಂಹದ ರೂಪದಿಂದ ಹೊರಹೊರಟಿತು.

೩೭–೩೮. ಬಳಿಕ ಪಶ್ಚಾತ್ತಾಪವನ್ನು ಹೊಂದಿ ದೇವಿಯೇ ವಿಸರ್ಜಿಸಿದ ಆ ಸಿಂಹವು ಭಯಂಕರವಾದ ಮುಖವೂ, ನಿಡಿದಾದ ಕೇಸರಗಳಿಂದ ಕೂಡಿದ ಕತ್ತೂ, ಅತ್ಯಂತ ಬಲಸಮನ್ವಿತಗಳಾದ ಬಾಲ, ಹಲ್ಲುಗಳು, ಉತ್ಕಟವಾದ ಗುಹೆಯಂತಿರುವ ಮುಖವೂ, ವಿಶಾಲವಾಗಿ ತೆರೆದು ಜೊಲ್ಲನ್ನು ಸುರಿಸುತ್ತಿರುವ ಬಾಯಿಯೂ, ಬಡವಾದ ನಡುವೂ ಉಳ್ಳದ್ದಾಗಿ ಹಸಿವಿನಿಂದ ಆಹಾರವನ್ನು ಹುಡುಕುತ್ತಿತ್ತು.

ತಸ್ಯಾಸ್ಯೇ ವರ್ತಿತುಂ ದೇವೀ ವ್ಯವಸ್ಯತ ಸತೀ ತದಾ ।
ಜ್ಞಾತ್ವಾ ಮನೋಗತಂ ತಸ್ಯಾ ಭಗವಾಂಶ್ಚತುರಾನನಃ ॥ ೩೯ ॥
ಅಜಗಾಮಾಶ್ರಮಪದಂ ಸಂಪದಾಮಾಶ್ರಯಂ ತತಃ ।
ಅಗಮ್ಯೋವಾಚ ತಾಂ ಬ್ರಹ್ಮಾ ಗಿರಿಜಾಂ ಹೃಷ್ಟಯಾ ಗಿರಾ ।
ಕಿಂ ದೇವಿ ಪ್ರಾಪ್ತುಕಾಮಾಸಿ ಕಿಮಲಭ್ಯಂ ದದಾಮಿ ತೇ ॥ ೪೦ ॥
ತಚ್ಛ್ರುತ್ವೋವಾಚ ಗಿರಿಜಾ ಗುರುಗೌರವಗರ್ಭಿತಂ ॥ ೪೧ ॥
ತಪಸಾ ದುಷ್ಕರೇಣಾಪ್ತಃ ಪತಿತ್ವೇ ಶಂಕರೋ ಮಯಾ ।
ಸ ಮಾಂ ಶ್ಯಾಮಲವರ್ಣೇತಿ ಬಹುಶಃ ಪ್ರೋಕ್ತವಾನ್ಭವಃ ॥ ೪೨ ॥
ಸ್ಯಾಮಹಂ ಕಾಂಚನಾಕಾರಾವಲ್ಲಭ್ಯೇನ ಚ ಸಂಯುತಾ ।
ಭರ್ತುರ್ಭೂತಪತೇರಂಗೇ ಹ್ಯೇಕತೋ ನಿರ್ವಿಶಂಕಿತಾ ॥ ೪೩ ॥
ತಸ್ಯಾಸ್ತದ್ಭಾಷಿತಂ ಶ್ರುತ್ವಾ ಪ್ರೋವಾಚ ಜಲಜಾಸನಃ ।
ಏವಂ ಭವತು ಭೂಯಸ್ತ್ವಂ ಭರ್ತುರ್ದೇಹಾರ್ಧಧಾರಿಣೀ ॥ ೪೪ ॥
ತತಸ್ತಸ್ಯಾಃ ಶರೀರಾತ್ತು ಸ್ತ್ರೀ ಸುನೀಲಾಂಬುಜತ್ವಿಷಾ ।
ನಿರ್ಗತಾ ಸಾಭವದ್ಭೀಮಾ ಘಂಟಾಹಸ್ತಾ ತ್ರಿಲೋಚನಾ ॥ ೪೫ ॥

---

೩೯. ಪಶ್ಚಾತ್ತಾಪತಪ್ತಳಾದ ದೇವಿಯಾದರೊ ತಾನೇ ಆ ಸಿಂಹದ ಬಾಯಿಗೆ ಆಹಾರವಾಗಬೇಕೆಂಬ ಪ್ರಯತ್ನದಲ್ಲಿದ್ದಳು. ಅಷ್ಟರಲ್ಲಿಯೇ ಆಕೆಯ ಮನೋಗತವನ್ನು ತಿಳಿದು ಚತುರ್ಮುಖನಾದ ಬ್ರಹ್ಮನು ಸಕಲ ಸಂಪತ್ತುಗಳಿಗೂ ನೆಲೆಮನೆಯಾದ ಆ ಆಶ್ರಮವನ್ನು ಕುರಿತು ಬಂದನು.

೪೦. ಇಂತು ಬಂದು ದೇವಿಯನ್ನು ಕುರಿತು ಮಧುರಗಳಾದ ಮಾತುಗಳಿಂದ ಬ್ರಹ್ಮನು "ಎಲೌ ದೇವಿಯೇ! ನೀನೇನನ್ನು ಹೊಂದಲೆಳಸುವೆ? ಯಾವ ಅಲಭ್ಯವಾದ ವರವನ್ನು ನಿನಗೆ ಕೊಡಲಿ?" ಎಂದು ಕೇಳಿದನು.

೪೧—೪೩. ಅದನ್ನು ಕೇಳಿ ಗಿರಿಜೆಯು ಗುರುಗಳಲ್ಲಿನ ಗೌರವದಿಂದ ತುಂಬಿದ ನುಡಿಗಳನ್ನು ನುಡಿದಳೆಂತೆಂದರೆ:—"ಎಲೈ ಪಿತಾಮಹನೇ! ನಾನು ಅತ್ಯಂತ ಕಷ್ಟತರವಾದ ತಪಸ್ಸಿನಿಂದ ಶಂಕರನನ್ನು ಪತಿಯನ್ನಾಗಿ ವರಿಸಿದೆನು. ಅವನೇ ನನ್ನನ್ನು ಶ್ಯಾಮಲರೂಪಿಯೆಂದು ಅನೇಕವೇಳೆ ನಿಂದಿಸಿರುವನು. ಆದುದರಿಂದ ನಾನು ಹೊಂಬಣ್ಣದ ಮೈಯುಳ್ಳವಳೂ, ನಾಥನೊಡನೆ ಸೇರಿದವಳೂ ಆಗಬೇಕು. ಪತಿಯಾದ ಭೂತನಾಥನ ಶರೀರದಲ್ಲಿಯೇ ನಾನು ಸಂಶಯಾದಿಗಳಿಗವಕಾಶವಿಲ್ಲದಂತೆ ಐಕ್ಯವನ್ನು ಹೊಂದಬೇಕು."

೪೪—೪೬. ಪಾರ್ವತಿಯ ಈ ಮಾತುಗಳನ್ನು ಕೇಳಿ ಬ್ರಹ್ಮನು "ಅಂತೆಯೇ ಆಗಲಿ; ಮತ್ತೆ ನೀನು ಪತಿಯ ದೇಹದಲ್ಲಿ ಅರ್ಧವನ್ನು ಧರಿಸುವವಳಾಗು" ಎಂದನು. ಆಗ ಆಕೆಯ ಶರೀರದಿಂದ ನೀಲವರ್ಣವಿಶಿಷ್ಟಳಾದ ಓರ್ವ ಸ್ತ್ರೀಯು

ನಾನಾಭರಣಪೂರ್ಣಾಂಗೀ ಪೀತಕೌಶೇಯವಾಸಿನೀ ।
ತಾಮುಬ್ರವೀತ್ತತೋ ಬ್ರಹ್ಮಾ ದೇವೀಂ ನೀಲಾಂಬುಜತ್ವಿಷಂ ॥ ೪೬ ॥
ಅಸ್ಮಾದ್ಭೂಧರಜಾದೇಹಸಂಪರ್ಕಾತ್ತ್ವಂ ಮಮಾಜ್ಞಯಾ ।
ಸಂಪ್ರಾಪ್ತಾ ಕೃತಕೃತ್ಯತ್ವಮೇಕಾನಂತಾ ಪುರಾಕೃತಿಃ ॥ ೪೭ ॥
ಯ ಏಷ ಸಿಂಹಃ ಪ್ರೋದ್ಭೂತೋ ದೇವ್ಯಾಃ ಕ್ರೋಧಾದ್ವರಾನನೇ ।
ಸ ತೇಽಸ್ತು ವಾಹನೋ ದೇವಿ ಕೇತೌ ಚಾಸ್ತು ಮಹಾಬಲಃ ॥ ೪೮ ॥
ಗಚ್ಛ ವಿಂಧ್ಯಾಚಲೇ ತತ್ರ ಸುರಕಾರ್ಯಂ ಕರಿಷ್ಯತಿ ।
ಅತ್ರ ಶುಂಭ ನಿಶುಂಭೌ ಚ ಹತ್ವಾ ತಾರಕಸೈನ್ಯಪೌ ॥ ೪೯ ॥
ಪಾಂಚಾಲೋ ನಾಮ ಯಕ್ಷೋಽಯಂ ಯಕ್ಷಲಕ್ಷಪದಾನುಗಃ ।
ದತ್ತಸ್ತೇ ಕಿಂಕರೋ ದೇವಿ ಮಹಾಮಾಯಾಶತೈರ್ಯುತಃ ॥ ೫೦ ॥
ಇತ್ಯುಕ್ತಾ ಕೌಶಿಕೀ ದೇವೀ ತಥೇತ್ಯಾಹ ಪಿತಾಮಹಂ ।
ನಿರ್ಗತಾಯಾಂ ಚ ಕೌಶಿಕ್ಯಾಂ ಜಾತಾ ಸ್ವೈರಾಶ್ರಿತೈರ್ಗುಣೈಃ ॥ ೫೧ ॥

---

ಹೊರಟು ಬಂದಳು. ಆಕೆಯು ನೀಲೋತ್ಪಲದಂತೆ ಕಾಂತಿಯುಕ್ತಳೂ, ಭಯಂಕರಳೂ, ಕೈಯಲ್ಲಿ ಘಂಟೆಯನ್ನು ಹಿಡಿದು ತ್ರಿನೇತ್ರಗಳುಳ್ಳವಳೂ, ಬಹು ವಿಧಗಳಾದ ಭೂಷಣಗಳಿಂದ ಅಲಂಕೃತವಾದ ಶರೀರವುಳ್ಳವಳೂ, ಹಳದಿ ಬಣ್ಣದ ರೇಷ್ಮೆಯ ವಸ್ತ್ರವನ್ನುಟ್ಟಿರುವವಳೂ ಆಗಿದ್ದಳು. ಕನ್ನೈದಿಲೆಯಂತೆ ಕಾಂತಿಯುಳ್ಳ ಆ ದೇವಿಯನ್ನು ಕುರಿತು ಬ್ರಹ್ಮನು ಹೇಳಿದನೆಂತೆಂದರೆ:—

೪೭. "ನೀನು ಈ ಪರ್ವತರಾಜಕನ್ಯೆಯ ದೇಹದ ಸಂಪರ್ಕದಿಂದ ನನ್ನ ಆಜ್ಞಾನುಸಾರವಾಗಿ ಹುಟ್ಟಿದವಳು. ನೀನೊಬ್ಬಳೇ ಪೂರ್ಣಳಾಗಿಯೂ ಪಾರ್ವತಿಯ ಪೂರ್ವರೂಪಸಹಿತಳೂ ಆಗಿ ಕೃತಕೃತ್ಯತೆಯನ್ನು ಪಡೆದಿರುವೆ.

೪೮–೪೯. ಎಲೌ! ಶುಚಿಸ್ಮಿತೆಯೇ! ದೇವಿಯ ಕೋಪದಿಂದ ಹುಟ್ಟಿದ ಈ ಸಿಂಹವೇ ನಿನಗೆ ವಾಹನವೂ ನಿನ್ನ ಧ್ವಜದಲ್ಲಿ ಚಿಹ್ನವೂ ಆಗಿ ಮಹಾ ಬಲದಿಂದೊಡಗೂಡಿರುವುದು. ನೀನು ವಿಂಧ್ಯಾಚಲಕ್ಕೆ ಹೊರಡು. ಈ ಸಿಂಹವು ಅಲ್ಲಿ ದೇವತೆಗಳ ಕಾರ್ಯಕ್ಕೆ ಅನುಕೂಲವನ್ನು ಮಾಡುವುದು. ಶುಂಭ, ನಿಶುಂಭರೆಂಬ ತಾರಕಾಸುರನ ಸೇನಾಪತಿಗಳನ್ನು ಸಂಹರಿಸುವುದು.

೫೦. ಪಾಂಚಾಲನೆಂದು ಹೆಸರುಳ್ಳ ಈ ಯಕ್ಷೇಶ್ವರನು ಒಂದು ಲಕ್ಷ ಪದಾತಿಗಳ ಸೈನ್ಯದೊಡನೆ ನಿನಗೆ ಸಹಾಯಕ್ಕೆ ಕೊಡಲ್ಪಟ್ಟಿರುವನು. ಈತನು ಮಹಾಮಾಯೆಗಳಲ್ಲಿ ಪ್ರವೀಣನಾದವನು."

೫೧. ಈ ಮಾತುಗಳನ್ನು ಕೇಳಿ ಕೌಶಿಕೀದೇವಿಯು ಬ್ರಹ್ಮನಿಗೆ ಅಂಗೀಕಾರವನ್ನು ಸೂಚಿಸಿದಳು. ಆಕೆಯು ಹೊರಟುಹೋಗಲು ಪಾರ್ವತಿಗೆ ಮೊದಲಿನ ಗುಣಗಳೆಲ್ಲವೂ ಕೂಡಿ ಬಂದುವು.

ಸರ್ವೈಃ ಪೂರ್ವಭವೋಪಾತ್ತೈಃ ತದಾ ಸ್ವಯಮುಪಸ್ಥಿತೈಃ ।
ಉಮಾಪಿ ಪ್ರಾಪ್ತಸಂಕಲ್ಪಾ ಪಶ್ಚಾತ್ತಾಪಪರಾಯಣಾ ॥ ೫೩ ॥
ಮುಹುಃ ಸ್ವಂ ಪರಿನಿಂದಂತೀ ಜಗಾಮ ಗಿರಿಶಾಂತಿಕಂ ।
ಸಂಪ್ರಯಾಂತೀ ಚ ತಾಂ ದ್ವಾರಿ ಅಪವಾರ್ಯ ಸಮಾಹಿತಃ ॥ ೫೪ ॥
ರುರೋಧ ವೀರಕೋ ದೇವೀಂ ಹೇಮವೇತ್ರಲತಾಧರಃ ।
ತಾಮುವಾಚ ಚ ಕೋಪೇನ ತಿಷ್ಠ ತಿಷ್ಠ ಕ್ವ ಯಾಸಿ ಚ ।
ಪ್ರಯೋಜನಂ ನ ತೇಽಸ್ತೀಹ ಗಚ್ಛ ಯಾವನ್ನ ಭರ್ತ್ಸ್ಯಸೇ ॥ ೫೪ ॥
ದೇವ್ಯಾ ರೂಪಧರೋ ದೈತ್ಯೋ ದೇವಂ ವಂಚಯಿತುಂ ತ್ವಿಹ ।
ಪ್ರವಿಷ್ಟೋ ನ ಚ ದೃಷ್ಟೋಽಸೌ ಸ ಚ ದೇವೇನ ಘಾತಿತಃ ॥ ೫೫ ॥
ಘಾತಿತೇ ಚಾಹಮಾಕ್ಷಿಪ್ತೋ ನೀಲಕಂಠೇನ ಧೀಮತಾ ।
ಕಾಪಿ ಸ್ತ್ರೀ ನಾಪಿ ಮೋಕ್ತವ್ಯಾ ತ್ವಯಾ ಪುತ್ರೇತಿ ಸಾದರಂ ॥ ೫೬ ॥
ತಸ್ಮಾತ್ತ್ವಮತ್ರ ದ್ವಾರಿಸ್ಥಾ ವರ್ಷಪೂಗಾನ್ಯನೇಕಶಃ ।
ಭವಿಷ್ಯತಿ ನ ಚಾಪ್ಯತ್ರ ಪ್ರವೇಶಂ ಲಪ್ಸ್ಯಸೇ ವ್ರಜ ॥ ೫೭ ॥

---

೫೩–೫೪. ಪೂರ್ವಜನ್ಮದಲ್ಲಿ ಸಂಪಾದಿಸಿದ ಸಕಲಗುಣಗಳೂ ತಾವೇ ಆಕೆಯಲ್ಲಿ ನೆಲಸಿದುವು. ಪಾರ್ವತಿಯೂ ಸಹ ತನ್ನ ಇಷ್ಟಾರ್ಥವನ್ನು ಪಡೆದು ಪಶ್ಚಾತ್ತಾಪದಿಂದೊಡಗೂಡಿ ಮತ್ತೆ ಮತ್ತೆ ತನ್ನನ್ನೇ ನಿಂದಿಸುತ್ತ ಪರಮೇಶ್ವರನ ಸಾನ್ನಿಧ್ಯಕ್ಕೆ ಹೊರಟಳು. ಇಂತು ಬರುತ್ತಿರುವ ಆಕೆಯನ್ನು ವೀರಕನು ಸಾವಧಾನಮನಸ್ಸಿನಿಂದ ತಡೆದು ತಾನು ಧರಿಸಿದ್ದ ಚಿನ್ನದ ಬೆತ್ತದಿಂದ ಆಕೆಯನ್ನು ಅಡ್ಡಗಟ್ಟಿದನು. ಮತ್ತು ಆಕೆಯನ್ನು ಕುರಿತು ಕೋಪದಿಂದ ನುಡಿದನೆಂತೆನೆ:— "ನಿಲ್ಲು, ನಿಲ್ಲು. ಎಲ್ಲಿಗೆ ಹೋಗುತ್ತಿರುವೆ? ಇಲ್ಲಿ ನಿನಗೇನೂ ಪ್ರಯೋಜನವಿಲ್ಲವಾದುದರಿಂದ ಹೆಚ್ಚಾಗಿ ನಿಂದಿತಳಾಗುವುದರೊಳಗೆಯೇ ಇಲ್ಲಿಂದ ಹೊರಟು ಹೋಗು.

೫೫. ದೇವಿಯ ರೂಪದಿಂದ ದೈತ್ಯನೊಬ್ಬನು ಪರಮೇಶ್ವರನನ್ನು ವಂಚಿಸಲೆಳಸಿ ಒಳಹೊಕ್ಕನು. ಅವನನ್ನು ನಾನು ನೋಡಲೇ ಇಲ್ಲವು. ಆತನೂ ಶಿವನಿಂದ ನಿಗ್ರಹಿಸಲ್ಪಟ್ಟನು.

೫೬–೫೭. ಆ ರಾಕ್ಷಸನ ವಧೆಯಾದ ಮೇಲೆ ಬುದ್ಧಿವಂತನಾದ ನೀಲಕಂಠನು ನನ್ನನ್ನು ಬಹುವಾಗಿ ಆಕ್ಷೇಪಿಸಿದನು. 'ಎಲೈ ಪುತ್ರನೆ! ನೀನು ಇನ್ನುಮೇಲೆ ಯಾವ ಸ್ತ್ರೀಯನ್ನೂ ಖಂಡಿತವಾಗಿಯೂ ಒಳಕ್ಕೆ ಬಿಡಬೇಡ' ಎಂದು ನಿಷ್ಠುರವಾಗಿ ಆತನು ನನಗೆ ಆಜ್ಞಾಪಿಸಿರುವನು. ಆದುದರಿಂದ ನೀನೂ ಅನೇಕ ವರ್ಷಗಳ ಕಾಲ ಈ ಬಾಗಿಲಿನಲ್ಲಿ ಕಾಯುವಂತಾಗುವುದೇ ಹೊರತು ಖಂಡಿತವಾಗಿಯೂ ನಿನಗೆ ಪ್ರವೇಶವು ದೊರೆಯಲಾರದು.

ಏಕಾ ಮೇ ಪ್ರವಿಶೇದತ್ರ ಮಾತಾ ಯಾ ಸ್ನೇಹವತ್ಸಲಾ ।
ನಗಾಧಿರಾಜತನಯಾ ಪಾರ್ವತೀ ರುದ್ರವಲ್ಲಭಾ ॥ ೫೮ ॥
ಇತ್ಯುಕ್ತ್ವಾ ತು ತತೋ ದೇವೀ ಚಿಂತಯಾಮಾಸ ಚೇತಸಾ ॥ ೫೯ ॥
ನ ಸಾ ನಾರೀ ತು ದೈತ್ಯೋಽಸೌ ವಾಯೋರ್ನ್ಯಾವಭಾಸತ ।
ವೃಥೈವ ವೀರಕಃ ಶಪ್ತೋ ಮಯಾ ಕ್ರೋಧಪರೀತಯಾ ॥ ೬೦ ॥
ಅಕಾರ್ಯಂ ಕ್ರಿಯತೇ ಮೂಢೈಃ ಪ್ರಾಯಃ ಕ್ರೋಧಸಮನ್ವಿತೈಃ ।
ಕ್ರೋಧೇನ ನಶ್ಯತೇ ಕೀರ್ತಿಃ ಕ್ರೋಧೋ ಹಂತಿ ಸ್ಥಿರಾಂ ಶ್ರಿಯಂ ॥ ೬೧ ॥
ಅಪರಿಚ್ಛಿನ್ನಸರ್ವಾರ್ಥಾ ಪುತ್ರಂ ಶಾಪಿತವತ್ಯಹಂ ।
ವಿಪರೀತಾರ್ಥಬೋದ್ಧೄಣಾಂ ಸುಲಭಾ ವಿಪದೋ ಯತಃ ॥ ೬೨ ॥
ಸಂಚಿಂತ್ಯೈವಮುವಾಚೇದಂ ವೀರಕಂ ಪ್ರತಿ ಶೈಲಜಾ ।
ಅಧೋ ಲಜ್ಜಾವಿಕಾರೇಣ ವದನೇನಾಂಬುಜತ್ವಿಷಾ ॥ ೬೩ ॥
ಅಹಂ ವೀರಕ ತೇ ಮಾತಾ ಮಾ ತೇಽಸ್ತು ಮನಸೋ ಭ್ರಮಃ ।
ಶಂಕರಸ್ಯಾಸ್ಮಿ ದಯಿತಾ ಸುತಾ ತು ಹಿಮಭೂಭೃತಃ ॥ ೬೪ ॥

---

೫೮. ಪರ್ವತರಾಜನ ಮಗಳೂ, ಮಹಾದೇವನ ಪತ್ನಿಯೂ, ನನ್ನ ತಾಯಿಯೂ, ಸ್ನೇಹಪೂರಿತೆಯೂ ಆದ ಪಾರ್ವತಿಯೊಬ್ಬಳು ಮಾತ್ರ ಇಲ್ಲಿಗೆ ಪ್ರವೇಶಮಾಡಬಹುದು.''

೫೯–೬೦. ಈ ಮಾತುಗಳನ್ನು ಕೇಳಿ ಗೌರಿಯು ತನ್ನ ಮನಸ್ಸಿನಲ್ಲಿಯೇ ಹೀಗೆ ಚಿಂತಿಸಿದಳು :—''ಬಂದವಳು ಸ್ತ್ರೀಯಲ್ಲ; ನಿಜವಾಗಿಯೂ ರಾಕ್ಷಸನು. ವಾಯುವಿಗೆ ಈ ವಿಷಯವು ತಿಳಿಯದು. ಕೋಪಗೊಂಡ ನನ್ನಿಂದ ನಿಷ್ಕಾರಣವಾಗಿಯೇ ವೀರಕನಿಗೆ ಶಾಪವನ್ನು ಕೊಟ್ಟೆನು.

೬೧. ಕ್ರೋಧಗೊಂಡ ಮೂಢರು ಪ್ರಾಯಿಕವಾಗಿ ಮಾಡಬಾರದುದನ್ನೇ ಮಾಡುವರು. ಕ್ರೋಧದಿಂದ ಕೀರ್ತಿಯು ನಾಶವನ್ನೈದುವುದು. ಕ್ರೋಧವು ಸ್ಥಿರವಾದ ಐಶ್ವರ್ಯವನ್ನೂ ನೆಲೆಗೆಡಿಸುವುದು.

೬೨. ವಿಚ್ಛಿತ್ತಿಯಿಲ್ಲದ ಸಕಲ ಪುರುಷಾರ್ಥಗಳನ್ನು ಪಡೆದಿದ್ದರೂ ನಾನು ಮಗನನ್ನೇ ಶಪಿಸಿದೆನು. ವಿಪರೀತಗಳಾಗಿ ವಿಷಯಗಳನ್ನು ತಿಳಿಯುವವರಿಗೆ ಆಪತ್ತುಗಳು ಬಹಳ ಸುಲಭವಾಗಿ ಒದಗುವುವು.''

೬೩–೬೪. ಇಂತು ಯೋಚಿಸಿ ಪಾರ್ವತಿಯು ವೀರಕನನ್ನು ಕುರಿತು ಲಜ್ಜೆಯಿಂದ ವಿಕಾರಗೊಂಡ ಕಮಲದಂತಿರುವ ಮುಖವನ್ನು ತಗ್ಗಿಸಿ ಮಾತನಾಡತೊಡಗಿದಳು:—'' ಎಲೈ ವೀರಕನೆ! ನಾನೇ ನಿನಗೆ ತಾಯಿಯು. ಶಂಕರನ ಪ್ರಿಯ ಪತ್ನಿಯು. ಹಿಮವಂತನ ಮಗಳು. ಈ ವಿಷಯದಲ್ಲಿ ನಿನಗೆ ಸಂಶಯವು ಬೇಡ.

ಮಮ ಗಾತ್ರಸ್ಥಿತಿಭ್ರಾಂತ್ಯಾ ಮಾ ಶಂಕಾಂ ಪುತ್ರ ಭಾವಯ ।
ತುಷ್ಟೇನ ಗೌರತಾ ದತ್ತಾ ಮಮೇಯಂ ಪದ್ಮಯೋನಿನಾ ॥ ೬೫ ॥
ಮಯಾ ಶಪ್ತೋಽಸ್ಯವಿದಿತೇ ವೃತ್ತಾಂತೇ ದೈತ್ಯನಿರ್ಮಿತೇ ।
ಜ್ಞಾತ್ವಾ ನಾರೀಪ್ರವೇಶಂ ತು ಶಂಕರೇ ರಹಸಿ ಸ್ಥಿತೇ ॥ ೬೬ ॥
ನ ನಿವರ್ತಯಿತುಂ ಶಕ್ಯಃ ಶಾಪಃ ಕಿಂತು ಬ್ರವೀಮಿ ತೇ ।
ಮಾನುಷ್ಯಂ ತು ಶಿಲಾಯಾಂ ತ್ವಂ ಶಿಲಾದಾತ್ಸಂಭವಿಷ್ಯಸಿ ॥ ೬೭ ॥
ಪುಣ್ಯೇ ಚಾಪ್ಯರ್ಬುದಾರಣ್ಯೇ ಸ್ವರ್ಗಮೋಕ್ಷಪ್ರದೇ ನೃಣಾಂ ।
ಅಚಲೇಶ್ವರಲಿಂಗಂ ತು ವರ್ತತೇ ಯತ್ರ ವೀರಕ ॥ ೬೮ ॥
ವಾರಾಣಸ್ಯಾಂ ವಿಶ್ವನಾಥಸಮಂ ತತ್ಫಲದಂ ನೃಣಾಂ ।
ಪ್ರಭಾಸಸ್ಯ ಚ ಯಾತ್ರಾಭಿರ್ದಶಭಿರ್ಯತ್ಫಲಂ ನೃಣಾಂ ॥ ೬೯ ॥
ತದೇಕಯಾತ್ರಯಾ ಪ್ರೋಕ್ತಮರ್ಬುದಸ್ಯ ಮಹಾಗಿರೇಃ ।
ಯತ್ರ ತಪ್ತ್ವಾ ತಪೋ ಮರ್ತ್ಯಾ ದೇಹಧಾತೂನ್ವಿಹಾಯ ಚ ॥ ೭೦ ॥

---

೬೫. ನನ್ನ ಶರೀರವನ್ನು ನೋಡಿ ನೀನು ಅನುಮಾನಪಡಬೇಡ. ಮಗನೆ! ತಪಸ್ಸಿನಿಂದ ಸಂತೋಷಗೊಂಡ ಚತುರ್ಮುಖನು ನನ್ನ ಶರೀರಕ್ಕೆ ಈ ಹೊಂಬಣ್ಣವನ್ನು ಕೊಟ್ಟನು.

೬೬. ರಾಕ್ಷಸನಿಂದ ನಿರ್ಮಿತವಾದ ಮಾಯೆಯೆಂಬ ಯಥಾರ್ಥವನ್ನು ತಿಳಿಯದೆ, ಶಿವನ ಏಕಾಂತದಲ್ಲಿ ಸ್ತ್ರೀಯನ್ನು ಹೋಗಗೊಡಿಸಿದೆಯೆಂದು ಶಾಪವನ್ನು ನನ್ನಿಂದ ಪಡೆದಿರುವೆ.

೬೭. ಆ ಶಾಪವನ್ನು ಹಿಂದಕ್ಕೆ ತೆಗೆದುಕೊಳ್ಳಲು ನನ್ನಿಂದ ಶಕ್ಯವಲ್ಲ. ಆದರೆ ನಿನಗೀಮಾತನ್ನು ಹೇಳುತ್ತೇನೆ. ನೀನು ಶಿಲಾದನ ದೆಸೆಯಿಂದ ಮನುಷ್ಯ ರೂಪವಾದ ಶಿಲೆಯಲ್ಲಿ ಹುಟ್ಟುವೆ.

೬೮. ಎಲೈ ವೀರಕನೆ! ಅಚಲೇಶ್ವರ ಲಿಂಗವು ಸ್ಥಾಪಿತವಾಗಿರುವ ಪರಮ ಪಾವನವಾದುದೂ, ಸಕಲ ಜನರಿಗೂ ಸ್ವರ್ಗಮೋಕ್ಷಗಳನ್ನು ಕೊಡುವುದೂ ಆದ ಅರ್ಬುದಾರಣ್ಯದಲ್ಲಿ ನೀನು ಜನಿಸುವೆ.

೬೯. ಕಾಶಿಯಲ್ಲಿ ವಿಶ್ವನಾಥನ ದರ್ಶನದಿಂದಲೂ, ಪ್ರಭಾಸಕ್ಷೇತ್ರಕ್ಕೆ ಯಾತ್ರೆಗಳನ್ನು ಮಾಡುವುದರಿಂದಲೂ ನರರಿಗೆ ಯಾವ ಫಲವು ದೊರಕುವುದೊ ಅದನ್ನೇ ಈ ಕ್ಷೇತ್ರವೂ ಕೊಡುವುದು.

೭೦. ಅರ್ಬುದೇಶ್ವರ ಪರ್ವತದ ಒಂದು ಯಾತ್ರೆಯೂ ಇಷ್ಟು ಉತ್ತಮವಾದುದು. ಅಲ್ಲಿ ತಪಸ್ಸನ್ನು ಮಾಡಿ ಮನುಷ್ಯರು ದೇಹವನ್ನು ಬಿಟ್ಟರೆ ಮತ್ತೆ ಸಂಸಾರದಲ್ಲಿ ಬೀಳುವುದಿಲ್ಲವೆಂದು ಮಹೇಶ್ವರನೇ ಸಾಕ್ಷಾತ್ತಾಗಿ ಹೇಳಿರುವನು.

ಸಂಸಾರೀ ನ ಪುನರ್ಭೂಯಾನ್ಮಹೇಶ್ವರವಚೋ ಯಥಾ ।
ಅರ್ಬುದೋ ಯದಿ ಲಭ್ಯೇತ ಸೇವಿತುಂ ಜನ್ಮದುಃಖಿತೈಃ ।
ವಾರಾಣಸೀಂ ಚ ಕೇದಾರಂ ಕಿಂ ಸ್ಮರಂತಿ ವೃಥೈವ ತೇ ॥ ೭೧ ॥
ತತ್ರಾರಾಧ್ಯ ಭವಂ ದೇವಂ ಭವಾನ್ನಂದೀತಿ ನಾಮಭೃತ್ ।
ಶೀಘ್ರಮೇಷ್ಯಸಿ ಚಾತ್ರೈವ ಪ್ರತೀಹಾರತ್ವಮಾಪ್ಸ್ಯಸಿ ॥ ೭೨ ॥
ಏವಮುಕ್ತೋ ಹೃಷ್ಟರೋಮಾ ವೀರಕಃ ಪ್ರಣಿಪತ್ಯ ತಾಂ ।
ಸಂಸ್ತೂಯ ವಿವಿಧೈರ್ವಾಕ್ಯೈರ್ಮಾತರಂ ಸಮಭಾಷತ ॥ ೭೩ ॥
ಧನ್ಯೋಽಹಂ ದೇವಿ ಯೋ ಲಪ್ಸ್ಯೇ ಮಾನುಷ್ಯಮತಿದುರ್ಲಭಂ ।
ಶಾಪೋಽನುಗ್ರಹರೂಪೋಽಯಂ ವಿಶೇಷಾದರ್ಬುದಾಚಲೇ ॥ ೭೪ ॥
ಸಮೀಪೇ ಯಸ್ಯ ಪುಣ್ಯೋಽಸ್ತಿ ಮಹೀಸಾಗರಸಂಗಮಃ ।
ಊಧಃ ಪೃಥಿವ್ಯಾ ದೇಶೋಽಯಂ ಯೋ ಗಿರೇಶ್ಚಾರ್ಣವಾಂತರೇ ॥ ೭೫ ॥
ತತ್ರ ಗತ್ವಾ ಮಹತ್ಪುಣ್ಯಮವಾಪ್ಯ ಭವಭಕ್ತಿತಃ ॥ ೭೬ ॥

---

೭೧. ಜನನಮರಣರೂಪವಾದ ಸಂಸಾರದಿಂದ ದುಃಖಗೊಂಡ ಜನರಿಗೆ ಅರ್ಬುದೇಶ್ವರನ ಸೇವೆಯು ಲಭಿಸುವಂತಾದರೆ ಅವರು ಕಾಶಿಯನ್ನೂ ಕೇದಾರವನ್ನೂ ಸುಮ್ಮನೆ ಏಕೆ ಸ್ಮರಿಸಬೇಕು ?

೭೨. ಅಲ್ಲಿ ನೀನು ಮಹಾದೇವನನ್ನು ಪೂಜಿಸಿ ನಂದಿಯೆಂದು ಹೆಸರನ್ನು ಪಡೆದು ಶೀಘ್ರದಲ್ಲಿಯೇ ಇಲ್ಲಿಗೇ ಬಂದು ಮತ್ತೆ ಪ್ರತೀಹಾರಿಯಾಗುವೆ.''

೭೩. ಇಂತೆಂದು ಹೇಳಲು ವೀರಕನು ಆನಂದದಿಂದ ರೋಮಾಂಚವುಳ್ಳವನಾಗಿ ಆಕೆಗೆ ನಮಸ್ಕಾರವನ್ನು ಮಾಡಿ ನಾನಾವಿಧಗಳಾದ ಸ್ತುತಿವಾಕ್ಯಗಳಿಂದ ಸ್ತೋತ್ರಮಾಡಿ ಆ ತಾಯಿಯನ್ನು ಕುರಿತು ನುಡಿದನು.

೭೪. " ಎಲೌ ದೇವಿಯೆ ! ನಾನೇ ಧನ್ಯನು. ಅಂತೆಯೇ ಅತ್ಯಂತ ದುರ್ಲಭವಾದ ಮನುಷ್ಯ ಜನ್ಮವನ್ನು ಪಡೆಯುವೆನು. ಅದರಲ್ಲಿಯೂ ಅರ್ಬುದಾಚಲ ಕ್ಷೇತ್ರದಲ್ಲಿ ಜನ್ಮವೆತ್ತುವುದರಿಂದ ಈ ಶಾಪವು ಅನುಗ್ರಹರೂಪವಾಗಿಯೇ ಪರಿಣಮಿಸಿತು.

೭೫. ಇದರ ಸಮೀಪದಲ್ಲಿಯೇ ಪುಣ್ಯಾಕರವಾದ ಮಹೀಸಾಗರಸಂಗಮವೆಂಬ ಕ್ಷೇತ್ರವಿರುವುದು. ಪರ್ವತದ ಮತ್ತು ಸಮುದ್ರದ ಮಧ್ಯೆ ಇರುವ ಈ ಪ್ರದೇಶವು ಗೋರೂಪಳಾದ ಪೃಥ್ವಿಯ ಕೆಚ್ಚಲಿನಂತೆ ಸಕಲ ಇಷ್ಟಾರ್ಥಗಳನ್ನೂ ಕೊಡುವುದಾಗಿರುವುದು.

೭೬–೭೭. ಅಲ್ಲಿಗೆ ಹೋಗಿ ಶಿವಭಕ್ತಿಯಿಂದ ಹೆಚ್ಚಾದ ಪುಣ್ಯವನ್ನು ಸಂಪಾದಿಸಿ ಮತ್ತೆ ಇಲ್ಲಿಗೆ ಬರುತ್ತೇನೆ'' ಎಂದು ವೀರಕನು ಶಿಲಾದನ

ಪುನರೇಷ್ಯಾಮಿ ಭೋ ಮಾತರಿತ್ಯುಕ್ತ್ವಾ ಭೂಚ್ಛಿಲಾಸುತಃ ।
ದೇವೀ ಚ ಪ್ರವಿವೇಶಾಥ ಭವನಂ ಶಶಿಮೌಳಿನಃ ॥ ೭೭ ॥
ತತೋ ದೃಷ್ಟ್ವಾ ಚ ತಾಂ ಪ್ರಾಹ ಧಿಙ್ನಾರ್ಯ ಇತಿ ತ್ರ್ಯಂಬಕಃ ॥ ೭೮ ॥
ಸಾಚ ಪ್ರಣಮ್ಯ ತಂ ಪ್ರಾಹ ಸತ್ಯಮೇತನ್ನ ಮಿಥ್ಯಯಾ ।
ಜಡಃ ಪ್ರಕೃತಿಭಾಗೋಽಯಂ ನಾರ್ಯಶ್ಚಾರ್ಹಂತಿ ನಿಂದನಾಂ ।
ಪುರುಷಾಣಾಂ ಪ್ರಸಾದೇನ ಮುಚ್ಯಂತೇ ಭವಸಾಗರಾತ್ ॥ ೭೯ ॥
ತತಃ ಪ್ರಹೃಷ್ಟಸ್ತಾಮಾಹ ಹರೋ ಯೋಗ್ಯಾಧುನಾ ಶುಭೇ ।
ಪುತ್ರಂ ದಾಸ್ಯಾಮಿ ಯೇನ ತ್ವಂ ಖ್ಯಾತಿಮಾಪ್ಸ್ಯಸಿ ಶೋಭನೇ ॥ ೮೦ ॥
ತತೋ ರೇಮೇ ಹಿ ದೇವ್ಯಾ ಸ ನಾನಾಶ್ಚರ್ಯಾಲಯೋ ಹರಃ ॥ ೮೧ ॥
ತತೋ ವರ್ಷಸಹಸ್ರೇಷು ದೇವಾಸ್ತ್ವರಿತ ಮಾನಸಾಃ ।
ಜ್ವಲನಂ ನೋದಯಾಮಾಸುರ್ಜ್ಞಾತುಂ ಶಂಕರಚೇಷ್ಟಿತಂ ॥ ೮೨ ॥
ದ್ವಾರಿ ಸ್ಥಿತಂ ಪ್ರತೀಹಾರಂ ವಂಚಯಿತ್ವಾ ಚ ಪಾವಕಃ ।
ಪಾರಾವತಸ್ಯ ರೂಪೇಣ ಪ್ರವಿವೇಶ ಹರಾಂತಿಕಂ ॥ ೮೩ ॥

---

ಸುತನಾದನು. ಬಳಿಕ ದೇವಿಯೂ ಸಹ ಚಂದ್ರಶೇಖರನ ಮಂದಿರವನ್ನು ಪ್ರವೇಶಮಾಡಿದಳು.

೭೮–೭೯. ಆಗ ಆಕೆಯನ್ನು ಕಂಡು ಮಹೇಶ್ವರನು "ಹೆಂಗಸರಿಗೆ ಧಿಕ್ಕಾರ ವಿರಲಿ" ಎಂದನು. ಆಕೆಯೂ ನಮಸ್ಕರಿಸಿ, "ಇದು ನಿಜವೇ ಹೊರತು ಎಂದಿಗೂ ಸುಳ್ಳಲ್ಲ. ಪರಮತತ್ತ್ವದ ಜಡವಾದ ಪ್ರಕೃತಿಯೆಂಬ ಭಾಗವೇ ಆಗಿರುವ ಸ್ತ್ರೀಯರು ನಿಂದೆಗೆ ಅರ್ಹರೇ ಅಹುದು. ಪುರುಷರ ಪ್ರಸಾದದಿಂದಲೇ ಅವರಿಗೆ ಸಂಸಾರದಿಂದ ಬಿಡುಗಡೆಯಾಗುವುದು" ಎಂದಳು.

೮೦. ಇದರಿಂದ ಸಂತೋಷಗೊಂಡು ಶಿವನು ಆಕೆಯನ್ನು ಕುರಿತು "ಎಲೌ ಪಾರ್ವತಿಯೆ! ಇಂದು ನೀನು ಯೋಗ್ಯಳಾದೆ. ಶುಭಾಂಗಿಯೆ! ನಿನಗೆ ಲೋಕಗಳಲ್ಲಿ ಪ್ರಖ್ಯಾತಿಯನ್ನುಂಟುಮಾಡುವಂತಹ ಪುತ್ರನನ್ನು ಕೊಡುತ್ತೇನೆ" ಎಂದು ಹೇಳಿದನು.

೮೧–೮೩. ಬಳಿಕ ಬಹಳ ವಿಧಗಳಾದ ಆಶ್ಚರ್ಯಗಳಿಗೆ ಆಕರನಾದ ಮಹೇಶ್ವರನು ಪಾರ್ವತಿಯೊಡನೆ ರಮಿಸುತ್ತಿದ್ದನು. ಇಂತು ಅನೇಕ ಸಾವಿರ ವರ್ಷಗಳು ಕಳೆದುಹೋಗಲು ದೇವತೆಗಳು ಬಹಳವಾದ ಕುತೂಹಲವುಳ್ಳವರಾಗಿ ಪರಮೇಶ್ವರನು ಏನುಮಾಡುತ್ತಿರುವನೆಂದು ತಿಳಿದುಬರುವಂತೆ ಅಗ್ನಿದೇವನನ್ನು ಪ್ರೋತ್ಸಾಹಿಸಿದರು. ದ್ವಾರದಲ್ಲಿ ನಿಂತಿದ್ದ ಪ್ರತೀಹಾರಿಯನ್ನು ವಂಚಿಸಿ ಪಾರಿವಾಳದ ಹಕ್ಕಿಯ ರೂಪವನ್ನು ತಳೆದು ಅಗ್ನಿಯು ಶಿವನ ಅಂತಃಪುರವನ್ನು ಪ್ರವೇಶ ಮಾಡಿದನು.

ದದೃಶೇ ತಂಚ ದೇವೇಶೋ ವಿನತಾಂ ಪ್ರೇಕ್ಷ್ಯ ಪಾರ್ವತೀಂ ।
ತತಸ್ತಂ ಜ್ವಲನಂ ಪ್ರಾಹ ನೈತದ್ಯೋಗ್ಯಂ ತ್ವಯಾ ಕೃತಂ ॥ ೮೪ ॥
ಯದಿದಂ ಕ್ಷುಭಿತಂ ಸ್ಥಾನಾನ್ಮಮತೇಜೋ ಹ್ಯನುತ್ತಮಂ ।
ಗೃಹಾಣ ತ್ವಂ ಸುದುರ್ಬುದ್ಧೇ ನೋ ವಾ ಧಕ್ಷ್ಯಾಮಿ ತ್ವಾಂ ರುಷಾ॥೮೫॥
ಭೀತಸ್ತತೋಽಸೌ ಜಗ್ರಾಹ ಸರ್ವದೇವಮುಖಂ ಚ ಸಃ ।
ತೇನ ತೇ ವಹ್ನಿಸಹಿತಾ ವಿಹ್ವಲಾಶ್ಚ ಸುರಾಃ ಕೃತಾಃ ॥ ೮೬ ॥
ವಿಪಾಟ್ಯ ಜಠರಾಣ್ಯೇಷಾಂ ವೀರ್ಯಂ ಮಾಹೇಶ್ವರಂ ತತಃ ।
ನಿಷ್ಕ್ರಾಂತಂ ತತ್ಸರೋ ಜಾತಂ ಪಾರದಂ ಶತಯೋಜನಂ ॥ ೮೭ ॥
ವಹ್ನಿಶ್ಚ ವ್ಯಾಕುಲೀಭೂತೋ ಗಂಗಾಯಾಂ ಮುಮುಚೇ ಸಕೃತ್ ।
ದಹ್ಯಮಾನಾ ಚ ಸಾ ದೇವೀ ತರಂಗೈರ್ಬಹಿರುತ್ಸೃಜತ್ ॥ ೮೮ ॥
ಜಾತಸ್ತ್ರಿಭುವನಖ್ಯಾತಸ್ತೇನ ಚ ಶ್ವೇತಪರ್ವತಃ ।
ಏತಸ್ಮಿನ್ನಂತರೇ ವಹ್ನಿರಾಹೂತಶ್ಚ ಹಿಮಾಲಯೇ ॥ ೮೯ ॥
ಸಪ್ತರ್ಷಿಭಿರ್ವಹ್ನಿಹೋಮಂ ಕುರ್ವದ್ಭಿರ್ಮಂತ್ರವೀರ್ಯತಃ ।
ಆಗತ್ಯ ತತ್ರ ಜಗ್ರಾಹ ವಹ್ನಿರ್ಭಾಗಂ ಚ ತಂ ಹುತಂ ॥ ೯೦ ॥

---

೮೪. ಪರಪುರುಷನ ಪ್ರವೇಶದಿಂದ ಲಜ್ಜೆಗೊಂಡ ಪಾರ್ವತಿಯನ್ನು ಕಂಡು ಪರಮೇಶ್ವರನು ಆಮೇಲೆ ಅಗ್ನಿಯನ್ನೂ ಕಂಡನು. ಮತ್ತು ಆತನನ್ನು ಕುರಿತು ಹೇಳಿದನು:—"ನೀನು ಮಾಡಿದ ಈ ಕಾರ್ಯವು ಸರ್ವಥಾ ಯೋಗ್ಯವಲ್ಲ.

೮೫. ಈಗ ನನ್ನ ಶರೀರದಿಂದ ಹೊರಟಿರುವ ನನ್ನ ವೀರ್ಯವನ್ನು ವ್ಯರ್ಥವಾಗದಂತೆ ನೀನು ಸ್ವೀಕರಿಸು. ಎಲೈ ದುರ್ಬುದ್ಧಿಯೆ! ಹಾಗಲ್ಲದೆ ನಿನ್ನನ್ನು ಕೋಪದಿಂದ ಈಗಲೇ ಸುಟ್ಟುಬಿಡುವೆನು.

೮೬. ಬಳಿಕ ಅಗ್ನಿಯು ಭಯಗೊಂಡು ಅದನ್ನು ತೆಗೆದುಕೊಂಡನು. ಅದರಿಂದ ಅಗ್ನಿಮುಖರಾದ ಸಕಲ ದೇವತೆಗಳೂ ಅದನ್ನು ಧರಿಸಬೇಕಾಯಿತು. ಆ ವೀರ್ಯದಿಂದ ಅಗ್ನಿಸಹಿತರಾದ ದೇವತೆಗಳೆಲ್ಲರೂ ಅತ್ಯಂತ ವಿಹ್ವಲರಾದರು.

೮೭. ಪರಮೇಶ್ವರನ ಆ ವೀರ್ಯವು ದೇವತೆಗಳ ಶರೀರಗಳನ್ನು ಸೀಳಿಕೊಂಡು ಹೊರಡಲು ಅದರ ಕಣಗಳಿಂದ ನೂರುಗಾವುದ ವಿಸ್ತಾರವುಳ್ಳ ಪಾದರಸದ ಸರೋವರವೊಂದುಂಟಾಯಿತು.

೮೮. ಅಗ್ನಿದೇವನೂ ವ್ಯಾಕುಲಗೊಂಡವನಾಗಿ ತನ್ನ ಭಾಗದಲ್ಲಿ ಸ್ವಲ್ಪವನ್ನು ಗಂಗೆಯಲ್ಲಿ ವಿಸರ್ಜಿಸಿದನು. ಆಕೆಯೂ ಅದರ ತೇಜಸ್ಸನ್ನು ಸಹಿಸಲಾರದೆ ತನ್ನ ಅಲೆಗಳಿಂದ ಅದನ್ನು ದಡಕ್ಕೆ ತಳ್ಳಿದಳು.

೮೯–೯೦. ಅದರಿಂದಲೇ ಮೂರು ಲೋಕಗಳಲ್ಲಿಯೂ ವಿಖ್ಯಾತವಾದ ಶ್ವೇತಪರ್ವತವುಂಟಾಯಿತು. ಆ ಕಾಲದಲ್ಲಿಯೇ ಹಿಮಾಲಯದಲ್ಲಿ ಅಗ್ನಿಷ್ಟೋಮ

ಗತೇ ತ್ವಸ್ಮಿಂಶ್ಚ ತತ್ರಸ್ಥಃ ಪತ್ನೀಸ್ತೇಷಾಮುಪಶ್ಯತ ।
ಸುವರ್ಣಕದಲೀಸ್ತಂಭ ನಿಭಾಸ್ತಾಶ್ಚಂದ್ರಲೇಖಯಾ ॥ ೯೧ ॥
ಪಶ್ಯಮಾನಃ ಪ್ರಫುಲ್ಲಾಕ್ಷೋ ವಹ್ನಿಃ ಕಾಮವಶಂಗತಃ ।
ಸ ಭೂಯಶ್ಚಿಂತಯಾಮಾಸ ನ ನ್ಯಾಯ್ಯಂ ಕ್ಷುಭಿತೋಽಸ್ಮಿ ಯತ್ ॥ ೯೨ ॥
ಸಾಧ್ವೀಃ ಪತ್ನೀರ್ದ್ವಿಜೇಂದ್ರಾಣಾಮಕಾಮಾಃ ಕಾಮಯಾಮ್ಯಹಂ ।
ಪಾಪಮೇತತ್ಕರ್ಮ ಚೋಗ್ರಂ ನಶ್ಯಾಮಿ ತೃಣವತ್ಸ್ಫುಟಂ ॥ ೯೩ ॥
ಕೃತ್ವೈತನ್ನಶ್ಯತೇ ಕೀರ್ತಿರ್ಯಾವದಾಚಂದ್ರತಾರಕಂ ।
ಏವಂ ಸಂಚಿಂತ್ಯ ಬಹುಧಾ ಗತ್ವಾ ಚೈವ ವನಾಂತರಂ ॥ ೯೪ ॥
ಸಂಯಂತುಂ ನಾಭವಚ್ಛಕ್ತ ಉಪಾಯೈರ್ಬಹುಭಿರ್ಮನಃ ।
ತತಃ ಸ ಕಾಮಸಂತಪ್ತೋ ಮೂರ್ಛಿತಃ ಸಮುಪದ್ಯತ ॥ ೯೫ ॥

---

ವನ್ನು ಮಾಡುತ್ತಿದ್ದ ಸಪ್ತರ್ಷಿಗಳ ಮಂತ್ರದ ಬಲದಿಂದ ಅಗ್ನಿದೇವನು ಅಲ್ಲಿಗೆ ಕರೆಯಲ್ಪಟ್ಟನು. ಅಲ್ಲಿಗೆ ಬಂದು ಹುತವಾದ-ತನ್ನ ಹವಿರ್ಭಾಗವನ್ನು ಸ್ವೀಕರಿಸಿದನು.

೯೧. ಆ ಕಾರ್ಯವು ಸಂಪೂರ್ಣವಾಗಲು ಆ ಯಜ್ಞವಾಟದಲ್ಲಿ ಚಂದ್ರ ಬಿಂಬದಂತೆ ಮನೋಹರೆಯರೂ, ಹೊಂಬಾಳೆಯ ದಿಂಡುಗಳಂತೆ ದುಂಡಾದ ಅವಯವಗಳುಳ್ಳವರೂ ಆದ ಸಪ್ತರ್ಷಿಗಳ ಪತ್ನಿಯರನ್ನು ಅಗ್ನಿಯು ನೋಡಿದನು.

೯೨. ಇಂತು ನಟ್ಟಕಣ್ಣುಗಳಿಂದಲೇ ನೋಡನೋಡುತ್ತ ಅಗ್ನಿದೇವನು ಕಾಮಪರವಶನಾಗಿ ತನ್ನಲ್ಲಿಯೇ ಇಂತು ಯೋಚಿಸತೊಡಗಿದನು. "ಈಗಾಗಲೇ ಕ್ಷೋಭಗೊಂಡಿರುವ ನನಗೆ ಈ ಕಾರ್ಯವು ನ್ಯಾಯವಲ್ಲ.

೯೩. ಬ್ರಾಹ್ಮಣೋತ್ತಮರ ಪತ್ನಿಯರೂ, ಪತಿವ್ರತೆಯರೂ, ಪರಪುರುಷ ರನ್ನು ಕಾಮಿಸದವರೂ ಆದ ಈ ಸ್ತ್ರೀಯರನ್ನು ಕಾಮಿಸುತ್ತಿರುವೆನು. ಇದು ಪಾಪಭೂಯಿಷ್ಠವಾದುದೂ ಉಗ್ರಪರಿಣಾಮವುಳ್ಳುದೂ ಆಗಿರುವುದು. ಇದರಿಂದ ನಾನು ಹುಲ್ಲುಕಡ್ಡಿಯಂತೆ ಕ್ಷಣಮಾತ್ರದಲ್ಲಿ ನಾಶವನ್ನೈದುವೆನೆಂಬುದು ದಿಟವು.

೯೪. ಇಂತಹ ಕರ್ಮವನ್ನು ಮಾಡಿದರೆ ಆಚಂದ್ರತಾರಕವೂ ಮನುಷ್ಯನ ಕೀರ್ತಿಯು ನಶಿಸುವುದು." ಇಂತೆಂದು ಯೋಚಿಸಿ ಅಗ್ನಿಯು ಅರಣ್ಯಕ್ಕೆ ಹೋಗಿ ಅನೇಕ ಉಪಾಯಗಳನ್ನು ಮಾಡಿದರೂ ಕೂಡ ತನ್ನ ಮನಸ್ಸನ್ನು ನಿಗ್ರಹಿಸಲು ಶಕ್ತನಾಗಲಿಲ್ಲ.

೯೫. ಇಂತು ಕಾಮಜ್ವರದಿಂದ ಸಂತಪ್ತನಾಗಿ ಅಗ್ನಿಯು ಮೂರ್ಛೆ ಯನ್ನು ಹೊಂದಿದುದನ್ನು ಕಂಡು ಆತನ ಹೆಂಡತಿಯಾದ ಸ್ವಾಹಾದೇವಿಯು ಅವನ ಮನಸ್ಥಿತಿಯನ್ನು ತಿಳಿದುಕೊಂಡಳು.

ತತಃ ಸ್ವಾಹಾ ಚ ಭಾರ್ಯಾಽಸ್ಯ ಬುಬುಧೇ ತದ್ವಿಚೇಷ್ಟಿತಂ ।
ಜ್ಞಾತ್ವಾ ಚ ಚಿಂತಯಾಮಾಸ ಪ್ರಹೃಷ್ಟಾ ಮನಸಿ ಸ್ವಯಂ ॥ ೯೬ ॥
ಸ್ವಾಂ ಭಾರ್ಯಾಮಥ ಮಾಂ ತ್ಯಕ್ತ್ವಾ ಬಹುವಾಸಾದವಜ್ಞಯಾ ।
ಭಾರ್ಯಾಃ ಕಾಮಯತೇ ನೂನಂ ಸಪ್ತರ್ಷೀಣಾಂ ಮಹಾತ್ಮನಾಂ ।
ತದಾಸಾಂ ರೂಪಮಾಶ್ರಿತ್ಯ ರಮಿಷ್ಯೇ ತೇನ ಚಾಪ್ಯಹಂ ॥ ೯೭ ॥
ತತಸ್ತ್ವಂಗಿರಸೋ ಭಾರ್ಯಾ ಶಿವಾನಾಮೇತಿ ಶೋಭನಾ ।
ತಸ್ಯಾ ರೂಪಂ ಸಮಾಧಾಯ ಪಾವಕಂ ಪ್ರಾಪ್ಯ ಸಾಬ್ರವೀತ್ ॥ ೯೮ ॥
ಮಾಮಗ್ನೇ ಕಾಮಸಂತಪ್ತಾಂ ತ್ವಂ ಕಾಮಯಿತುಮರ್ಹಸಿ ।
ನ ಚೇತ್ಕರಿಷ್ಯಸೇ ದೇವ ಮೃತಾಂ ಮಾಮುಪಧಾರಯ ॥ ೯೯ ॥
ಅಹಮಂಗಿರಸೋ ಭಾರ್ಯಾ ಶಿವಾ ನಾಮ ಹುತಾಶನ ।
ಸರ್ವಾಭಿಃ ಸಹಿತಾ ಪ್ರಾಪ್ತಾ ತಾಶ್ಚ ಯಾಸ್ಯಂತ್ಯನುಕ್ರಮಾತ್ ॥ ೧೦೦ ॥
ಅಸ್ಮಾಕಂ ತ್ವಂ ಪ್ರಿಯೋ ನಿತ್ಯಂ ತ್ವಚ್ಚಿತ್ತಾಶ್ಚ ವಯಂ ತಥಾ ॥ ೧೦೧ ॥
ತತಃ ಸ ಕಾಮಸಂತಪ್ತಃ ಸಂಬಭೂವ ತಯಾ ಸಹ ।
ಪ್ರೀತೇ ಪ್ರೀತಾ ಚ ಸಾ ದೇವಿ ನಿರ್ಜಗಾಮ ವನಾಂತರಾತ್ ॥ ೧೦೨ ॥

---

೯೬–೯೭. ಬಳಿಕ ಮನಸ್ಸಿನಲ್ಲಿಯೇ ಸಂತೋಷದಿಂದ ಯೋಚಿಸತೊಡಗಿದಳು:—"ಬಹುಕಾಲದ ಸಹವಾಸದಿಂದ ನನ್ನಲ್ಲಿ ಉದಾಸೀನನಾಗಿ ಭಾರ್ಯೆಯಾದ ನನ್ನನ್ನು ಬಿಟ್ಟು ಈತನು ಮಹಾತ್ಮರಾದ ಸಪ್ತರ್ಷಿಗಳ ಪತ್ನಿಯರನ್ನು ಇಚ್ಛಿಸುತ್ತಿರುವನಲ್ಲವೆ! ಆದುದರಿಂದ ನಾನೇ ಆ ಸ್ತ್ರೀಯರ ರೂಪಗಳನ್ನು ಕೈಕೊಂಡು ಈತನೊಡನೆ ಸುಖಪಡುವೆನು."

೯೮. ಇಂತು ಯೋಚಿಸಿದ ಬಳಿಕ ಆಕೆಯು ಅಂಗಿರಸನ ಭಾರ್ಯೆಯೂ, ಶೋಭನೆಯೂ ಆದ ಶಿವೆಯೆಂಬ ಪತ್ನಿಯ ರೂಪವನ್ನು ಸ್ವೀಕರಿಸಿ ಅಗ್ನಿಯ ಸಮೀಪಕ್ಕೆ ಬಂದು ಇಂತೆಂದಳು:—

೯೯–೧೦೦. "ಎಲೈ ಅಗ್ನಿಯೆ! ಕಾಮಜ್ವರದಿಂದ ಪೀಡಿತಳಾದ ನನ್ನನ್ನು ನೀನು ಕಾಮಿಸಲು ಅರ್ಹನಾಗಿರುವೆ. ನೀನು ಪ್ರೀತಿಸದಿದ್ದರೆ ನಾನು ಖಂಡಿತವಾಗಿಯೂ ಸಾಯುವೆನೆಂಬುದನ್ನು ತಿಳಿ. ಹುತಾಶನಾ! ನಾನು ಶಿವೆಯೆಂಬ ಹೆಸರುಳ್ಳ ಅಂಗಿರಸ ಮಹರ್ಷಿಯ ಭಾರ್ಯೆಯು. ಇತರ ಋಷಿಪತ್ನಿಯರೊಡನೆ ನಿನ್ನಲ್ಲಿಗೆ ಬಂದಿರುವೆನು. ಅವರೂ ಸಹ ಅನುಕ್ರಮವಾಗಿ ಬರುವರು.

೧೦೧–೧೦೨. ನಮಗೆ ನೀನೇ ಪ್ರೀತಿಪಾತ್ರನು. ನಾವು ಯಾವಾಗಲೂ ನಿನ್ನನ್ನೇ ಧ್ಯಾನಿಸುತ್ತಿರುವೆವು." ಬಳಿಕ ಅಗ್ನಿಯು ಆಕೆಯೊಡನೆ ಕಾಮಕ್ರೀಡೆಯನ್ನು ಅನುಭವಿಸಿದನು. ಅನಂತರ ಅಗ್ನಿಯನ್ನು ತೃಪ್ತಿಪಡಿಸಿ ತಾನೂ ಸಂತುಷ್ಟಳಾಗಿ ಆ ವನದಿಂದ ಹೊರಟಳು.

ಚಿಂತಯಂತೀ ಮಮೇದಂ ಚೇದ್ರೂಪಂ ದ್ರಕ್ಷ್ಯಂತಿ ಕಾನನೇ ।
ತೇ ಬ್ರಾಹ್ಮಣೀನಾಮನೃತಂ ದೋಷಂ ವಕ್ಷ್ಯಂತಿ ಪಾವಕಾತ್ ॥ ೧೦೩ ॥
ತಸ್ಮಾದೇತದ್ರಕ್ಷಮಾಣಾ ಗಾರುಡೀ ಸಂಭವಾಮ್ಯಹಂ ।
ಸುಪರ್ಣಾ ಸಾ ತತೋ ಭೂತ್ವಾ ದದೃಶೇ ಶ್ವೇತಪರ್ವತಂ ।
ಶರಸ್ತಂಬೈಃ ಸುಸಂಪೃಕ್ತಂ ರಕ್ಷೋಭಿಶ್ಚ ಪಿಶಾಚಕೈಃ ॥ ೧೦೪ ॥
ಸಾ ತತ್ರ ಸಹಸಾ ಗತ್ವಾ ಶೈಲಪೃಷ್ಠಂ ಸುದುರ್ಗಮಂ ।
ಪ್ರಾಕ್ಷಿಪತ್ಕಾಂಚನೇ ಕುಂಡೇ ಶುಕ್ರಂ ತದ್ಧಾರಣೇಽಕ್ಷಮಾ ॥ ೧೦೫ ॥
ಶಿಷ್ಟಾನಾಮಪಿ ದೇವೀನಾಂ ಸಪ್ತರ್ಷೀಣಾಂ ಮಹಾತ್ಮನಾಂ ।
ಪತ್ನೀ ಸರೂಪತಾಂ ಕೃತ್ವಾ ಕಾಮಯಾಮಾಸ ಪಾವಕಂ ॥ ೧೦೬ ॥
ದಿವ್ಯಂ ರೂಪಮರುಂಧತ್ಯಾಃ ಕರ್ತುಂ ನ ಶಕಿತಂ ತಯಾ ।
ತಸ್ಯಾಸ್ತಪಃಪ್ರಭಾವೇಣ ಭರ್ತುಃ ಶುಶ್ರೂಷಣೇನ ಚ ॥ ೧೦೭ ॥
ಷಟ್ಕೃತ್ವಸ್ತತ್ತು ನಿಕ್ಷಿಪ್ತಮಗ್ನಿರೇತಃ ಕುರೂದ್ವಹ ।
ಕುಂಡೇಽಸ್ಮಿಂಶ್ಚೈತ್ರಬಹುಲೇ ಪ್ರತಿಪದ್ಯೇವ ಸ್ವಾಹಯಾ ॥ ೧೦೮ ॥

---

೧೦೩. ಆಗಲಾಕೆಯು ಇಂತೆಂದು ಯೋಚಿಸಿದಳು :—"ಈ ಕಾನನದಲ್ಲಿ ನನ್ನ ಈ ರೂಪವನ್ನು ಯಾರಾದರೂ ಕಂಡರೆ ಅಗ್ನಿಯಿಂದ ಋಷಿಪತ್ನಿಯರು ದೂಷಿತರಾದರೆಂದು ವದಂತಿಯನ್ನು ಹರಡುವರು.

೧೦೪. ಆದುದರಿಂದ ಈ ರಹಸ್ಯವನ್ನು ಕಾಪಾಡುವ ಸಲುವಾಗಿ ನಾನು ಗರುಡಪಕ್ಷಿಯ ರೂಪವನ್ನು ತಾಳುವೆನು." ಇಂತು ಗರುಡರೂಪಳಾಗಿ ಹಾರಾಡುತ್ತ ಕೆಳಗೆ ಜೊಂಡುಹುಲ್ಲುಗಳಿಂದ ಸುತ್ತುವರೆಯಲ್ಪಟ್ಟಿದ್ದೂ, ರಾಕ್ಷಸ ಪಿಶಾಚಾದಿಗಳಿಗೆ ನಿವಾಸವಾದುದೂ ಆದ ಶ್ವೇತಪರ್ವತವನ್ನು ಕಂಡಳು.

೧೦೫. ಸ್ವಾಹಾದೇವಿಯು ಅತ್ಯಂತ ದುರ್ಗಮವಾದ ಆ ಪರ್ವತದ ತಪ್ಪಲಿಗೆ ಹೋಗಿ ಅಗ್ನಿದೇವನ ರೇತಸ್ಸನ್ನು ಧರಿಸಲಾರದೆ ತಕ್ಷಣದಲ್ಲಿಯೇ ಒಂದು ಚಿನ್ನದ ಪಾತ್ರೆಯಲ್ಲಿ ಅದನ್ನು ವಿಸರ್ಜಿಸಿದಳು.

೧೦೬. ಇಂತು ಆ ದೇವಿಯು ಆಚಾರಪರರೂ, ಮಹಾತ್ಮರೂ ಆದ ಸಪ್ತರ್ಷಿ ಪತ್ನಿಯರ ರೂಪಗಳನ್ನು ಪಡೆದು ಅಗ್ನಿಯನ್ನು ಕಾಮಿಸುತ್ತಿದ್ದಳು.

೧೦೭. ಆದರೆ ಅರುಂಧತೀ ದೇವಿಯ ತಪಃಪ್ರಭಾವದಿಂದಲೂ ಪತಿ ಶುಶ್ರೂಷೆಯರೂಪವಾದ ಆಕೆಯ ಪಾತಿವ್ರತ್ಯಮಹಿಮೆಯಿಂದಲೂ, ಆಕೆಯ ರೂಪವನ್ನು ಧರಿಸಲು ಸ್ವಾಹಾದೇವಿಗೆ ಶಕ್ಯವಾಗಲಿಲ್ಲ.

೧೦೮. ಎಲೈ ಅರ್ಜುನನೆ! ಇಂತು ಮಿಕ್ಕ ಆರು ಮಂದಿ ಋಷಿಪತ್ನಿಯರ ರೂಪಗಳನ್ನೂ ಧರಿಸಿ ಅಗ್ನಿಯಿಂದ ಪಡೆದ ರೇತಸ್ಸನ್ನು ಸ್ವಾಹಾದೇವಿಯು ಚೈತ್ರಮಾಸದ ಬಹುಳ ಪಕ್ಷದ ಪಾಡ್ಯಮಿ ದಿನ ಹೇಮಕುಂಡದಲ್ಲಿರಿಸಿದಳು.

ತತಶ್ಚ ಪಾವಕೋ ದುಃಖಾಚ್ಛುಶೋಚ ಚ ಮುಮೋಹ ಚ ।
ಅಃ ಪಾಪಂ ಕೃತಮಿತ್ಯೇವ ದೇಹನ್ಯಾಸೇಽಕರೋನ್ಮತಿಂ ॥ ೧೦೯ ॥
ತತಸ್ತಂ ಖೇಚರೀ ವಾಣೀ ಪ್ರಾಹ ಮಾ ಮರಣಂ ಕುರು ।
ಭಾವ್ಯಮೇತಚ್ಚ ಭಾವ್ಯರ್ಥಾತ್ಕೋ ಹಿ ಪಾವಕ ಮುಚ್ಯತೇ ॥ ೧೧೦ ॥
ಭಾವ್ಯರ್ಥೇನಾಪಿ ಯತ್ತ್ವೇ ಚ ಪರದಾರೋಪಸೇವನಂ ।
ಕೃತಂ ತಚ್ಚೇತಸಾ ತೇನ ತ್ವಾಮಜೀರ್ಣಂ ಪ್ರವೇಕ್ಷ್ಯತಿ ॥ ೧೧೧ ॥
ಶ್ವೇತಕೇತೋರ್ಮಹಾಯಜ್ಞೇ ಘೃತಧಾರಾಭಿತರ್ಪಿತಂ ॥ ೧೧೨ ॥
ಶೋಕಂ ಚ ತ್ಯಜ ನೈತಾಸ್ತಾಃ ಸ್ವಾಹೈವೇಯಂ ತವ ಪ್ರಿಯಾ ।
ಶ್ವೇತಪರ್ವತಕುಂಡಸ್ಥಂ ಪುತ್ರಂ ತ್ವಂ ದ್ರಷ್ಟುಮರ್ಹಸಿ ॥ ೧೧೩ ॥
ತತೋ ವಹ್ನಿಸ್ತತ್ರ ಗತ್ವಾ ದದೃಶೇ ತನಯಂ ಪ್ರಭುಂ ।

ಅರ್ಜುನ ಉವಾಚ :—

ಕಸ್ಮಾತ್ಸ್ವಾಹಾಕರೋದ್ರೂಪಂ ಷಣ್ಣಾಂ ತಾಸಾಂ ಮಹಾಮುನೇ ॥೧೧೪॥

---

೧೦೯. ಬಳಿಕ ಅಗ್ನಿಯು ತಾನು ಋಷಿಪತ್ನಿಯರನ್ನು ದೂಷಿಸಿದನೆಂಬ ಭಾವನೆಯಿಂದ ಆ ತನ್ನ ಕಾರ್ಯಕ್ಕೆ ತಾನೇ ಪಶ್ಚಾತ್ತಾಪಗೊಂಡು ಮೂರ್ಛೆಯನ್ನು ಹೊಂದುತ್ತ ತನ್ನಿಂದ ಮಹಾಪರಾಧವಾಯಿತೆಂದು ತಿಳಿದು ಪ್ರಾಣತ್ಯಾಗವನ್ನು ಮಾಡಲು ಉದ್ಯುಕ್ತನಾದನು.

೧೧೦. ಆಗ ಅಶರೀರವಾಣಿಯು ಆತನನ್ನು ಕುರಿತು ಹೇಳಿತೇನೆಂದರೆ:— "ಎಲೈ ಅಗ್ನಿದೇವನೇ ! ನೀನು ಈ ರೀತಿಯಾಗಿ ಮರಣ ಪ್ರಯತ್ನವನ್ನು ಮಾಡಬೇಡ. ಇಂತೆಯೇ ಈ ಕಾರ್ಯವಾಗಬೇಕಾಗಿದ್ದಿತು. ಎಲೈ ಅಗ್ನಿಯೆ ! ಅವಶ್ಯವಾಗಿ ಸಂಭವಿಸಲೇಬೇಕಾಗಿರುವ ಕಾರ್ಯಗಳನ್ನು ತಾನೆ ಬಿಡಿಸಿಕೊಳ್ಳಲು ಸಾಧ್ಯವಾದೀತು ?

೧೧೧–೧೧೩. ಅಂತಾದರೂ ಕೂಡ ನೀನು ಪರಸ್ತ್ರೀಯರನ್ನು ಅಪೇಕ್ಷಿಸಿದ ಪಾಪದ ಫಲವಾಗಿ ಶ್ವೇತಕೇತುವಿನ ಯಜ್ಞದಲ್ಲಿ ಸುರಿಯುವ ಆಜ್ಯಧಾರೆಗಳಿಂದ ನಿನಗೆ ಅಜೀರ್ಣರೋಗವುಂಟಾಗುವುದು. ನೀನು ಶೋಕವನ್ನು ತ್ಯಜಿಸು. ಇವರು ಋಷಿಪತ್ನಿಯರಲ್ಲ. ನಿನ್ನ ಪ್ರಿಯಪತ್ನಿಯಾದ ಸ್ವಾಹಾದೇವಿಯೇ ಇಂತೆಸಗಿರುವಳು. ಶ್ವೇತಪರ್ವತದ ತಪ್ಪಲಲ್ಲಿರುವ ಹೇಮಕುಂಡದಲ್ಲಿ ನಿನ್ನ ಮಗನನ್ನು ಕಾಣು ಹೋಗು."

೧೧೪. ಆಗ ಅಗ್ನಿದೇವನು ಅಲ್ಲಿಗೆ ಹೋಗಿ ಲೋಕನಾಯಕನಾದ ಮಗನನ್ನು ಕಂಡನು. ಅರ್ಜುನನು ಕೇಳುತ್ತಾನೆ:—" ಮುನಿಶ್ರೇಷ್ಠನಾದ ನಾರದನೆ ! ಸ್ವಾಹಾದೇವಿಯು ಆ ಋಷಿಪತ್ನಿಯರ ರೂಪಗಳನ್ನು ಹೇಗೆ ಧರಿಸಿದಳು ?

ಯುತಾ್ತ ಭರ್ತೃಪರಾಃ ಸಾಧ್ವ್ಯಸ್ತಪಸ್ವಿನ್ಯೋಽಗ್ನಿಸನ್ನಿಭಾಃ ।
ನ ಬಿಭೇತಿ ಚ ಕಿಂ ತಾಭ್ಯಃ ಷಡ್ಭ್ಯಃ ಸ್ವಾಹಾಪರಾಧಿನೀ ।
ಭರ್ತೃಭಕ್ತ್ಯಾ ಜಗದ್ದಗ್ಧುಂ ಯುತಃ ಶಕ್ತಾಶ್ಚ ತಾ ಮುನೇ । ॥ ೧೧೫ ॥

ನಾರದ ಉವಾಚ :—

ಸತ್ಯಮೇತತ್ಕುರುಶ್ರೇಷ್ಠ ಶ್ರುಣು ತಚ್ಚಾಪಿ ಕಾರಣಂ ।
ಯೇನ ತಾಸಾಂ ಕೃತಂ ರೂಪಂ ನ ವಾ ಶಾಪಂ ದದುಶ್ಚ ತಾಃ ॥ ೧೧೬ ॥
ಯತ್ರ ತದ್ವಹ್ನಿನಾ ಕ್ಷಿಪ್ತಂ ರುದ್ರತೇಜಃ ಸಕೃತ್ಪುರಾ ।
ಗಂಗಾಯಾಂ ತತ್ರ ಸಸ್ನುಸ್ತಾಃ ಷಟ್ಪತ್ನ್ಯೋಽಜ್ಞಾನಭಾವತಃ ॥ ೧೧೭ ॥
ತತಸ್ತಾ ವಿಹ್ವಲೀಭೂತಾಸ್ತೇಜಸಾ ತೇನ ಮೋಹಿತಾಃ ।
ಲಜ್ಜಯಾ ಚ ಸ್ವಭರ್ತೄಣಾಂ ಗಂಗಾತೀರಸ್ಥಿತಾ ರಹಃ ॥ ೧೧೮ ॥
ಏತದಂತರಮಾಲೋಕ್ಯ ಚಿಕೀರ್ಷಂತೀ ಮನೀಷಿತಂ ।
ಸ್ವಾಹಾ ಶರೀರಮಾವಿಶ್ಯ ತಾಸಾಂ ತೇಜೋ ಜಹಾರ ತತ್ ॥ ೧೧೯ ॥
ಚಿಕ್ರೀಡ ವಹ್ನಿಜಾಯಾಪಿ ಯಥಾ ತೇ ಕಥಿತಂ ಮಯಾ ॥ ೧೨೦ ॥

---

೧೧೫. ಅವರೆಲ್ಲರೂ ಪತಿಭಕ್ತಿಪರಾಯಣೆಯರೂ, ಸಾಧ್ವಿಯರೂ, ತಪಸ್ಸಂಪನ್ನೆಯರೂ, ಅಗ್ನಿಯಂತೆ ತೇಜೋವಂತರೂ ಆಗಿರುವರಲ್ಲವೆ. ಇಂತಹ ಅಪರಾಧವನ್ನು ಮಾಡಿದ ಆ ಸ್ವಾಹಾದೇವಿಯು ಆ ಆರು ಜನ ಸ್ತ್ರೀಯರಿಗೆ ಹೆದರಲಿಲ್ಲವೆ ? ಅವರೆಲ್ಲರೂ ಆ ತಮ್ಮ ಪತಿಭಕ್ತಿಯ ಪ್ರಭಾವದಿಂದ ಲೋಕವನ್ನೇ ದಹಿಸಲು ಶಕ್ತರಲ್ಲವೆ ?”

೧೧೬. ನಾರದನು ಹೇಳುತ್ತಾನೆ:—ಎಲೈ ಅರ್ಜುನನೆ! ನೀನೆಂದುದೂ ನಿಜವೆ. ಆದರೆ ಸ್ವಾಹಾದೇವಿಯು ಅವರ ರೂಪಗಳನ್ನು ಧರಿಸಿದುದಕ್ಕೂ ಅವರು ಆಕೆಗೆ ಶಾಪವನ್ನು ಕೊಡದಿದ್ದುದಕ್ಕೂ ಕಾರಣವನ್ನು ಹೇಳುವೆನು ಕೇಳು.

೧೧೭. ಒಮ್ಮೆ ಇವರೆಲ್ಲರೂ ಸ್ನಾನಕ್ಕಾಗಿ ಗಂಗಾತೀರಕ್ಕೆ ಹೋಗಿ ಮುನ್ನ ಅಗ್ನಿಯು ರುದ್ರವೀರ್ಯವನ್ನು ಎಲ್ಲಿ ಚೆಲ್ಲಿದ್ದನೊ ಅಲ್ಲಿ ಮಿಂದರು.

೧೧೮. ಅಲ್ಲಿ ಆ ವೀರ್ಯವು ಇವರ ದೇಹಗಳನ್ನು ಹೊಗಲು, ವಿಹ್ವಲರಾಗಿ ಮೋಹಗೊಂಡು ತಮ್ಮ ಗಂಡಂದಿರನ್ನು ಕಾಣಲು ಲಜ್ಜಾಯುಕ್ತರಾಗಿ ಗಂಗಾ ತೀರದಲ್ಲಿಯೇ ನಿಂತುಬಿಟ್ಟರು.

೧೧೯. ಈ ಸಮಯವನ್ನು ತಿಳಿದು ತನ್ನ ಮನಸ್ಸಿನಲ್ಲಿದ್ದ ಕಾರ್ಯವನ್ನು ಸಾಧಿಸುವುದಕ್ಕಾಗಿ ಸ್ವಾಹಾದೇವಿಯು ಅವರ ಶರೀರಗಳಲ್ಲಿ ಹೊಕ್ಕು ಆ ವೀರ್ಯ ವನ್ನು ಸೆಳೆದುಕೊಂಡಳು.

೧೨೦. ನಾನು ಮೊದಲೇ ತಿಳಿಸಿದಂತೆ ಆಕೆಯು ತನ್ನ ಗಂಡನೊಡನೆ ರಮಿಸುತ್ತಿದ್ದಳು.

ಉಪಕಾರಮಿಮಂ ತಾಭಿಃ ಸ್ಮರಂತೀಭಿಶ್ಚ ಭಾರತ ।
ನ ಶಪ್ತಾ ಸಾ ಯತಃ ಶಾಪೋ ನ ದೇಯಶ್ಚೋಪಕಾರಿಣಿ ॥ ೧೨೧ ॥
ತತಃ ಸಪ್ತರ್ಷಯೋ ಜ್ಞಾತ್ವಾ ಚ್ಞಾನೇನಾಶುಚಿತಾಂ ಗತಾಃ ।
ತತ್ಯಜುಃ ಷಟ್ ತದಾ ಪತ್ನೀರ್ವಿನಾ ದೇವೀಮರುಂಧತೀಂ ॥ ೧೨೨ ॥
ವಿಶ್ವಾಮಿತ್ರಸ್ತು ಭಗವಾನ್ಕುಮಾರಂ ಶರಣಂ ಗತಃ ।
ಸ್ತವಂ ದಿವ್ಯಂ ಸಂಪ್ರಚಕ್ರೇ ಮಹಾಸೇನಸ್ಯ ಚಾಪಿ ಸಃ ॥ ೧೨೩ ॥
ಅಷ್ಟೋತ್ತರಶತಂ ನಾಮ್ನಾಂ ಶ್ರುಣು ತ್ವಂ ತಾನಿ ಫಾಲ್ಗುನ ।
ಜಪೇನ ಯೇಷಾಂ ಪಾಪಾನಿ ಯಾಂತಿ ಜ್ಞಾನಮವಾಪ್ನುಯಾತ್॥ ೧೨೪ ॥
ತ್ವಂ ಬ್ರಹ್ಮವಾದೀ ತ್ವಂ ಬ್ರಹ್ಮಾ ಬ್ರಹ್ಮ ಬ್ರಾಹ್ಮಣವತ್ಸಲಃ ।
ಬ್ರಹ್ಮಣ್ಯೋ ಬ್ರಹ್ಮದೇವಶ್ಚ ಬ್ರಹ್ಮದೋ ಬ್ರಹ್ಮಸಂಗ್ರಹಃ ॥ ೧೨೫ ॥
ತ್ವಂ ಪರಂ ಪರಮಂ ತೇಜೋ ಮಂಗಲಾನಾಂ ಚ ಮಂಗಲಂ ।
ಅಪ್ರಮೇಯಗುಣಶ್ಚೈವ ಮಂತ್ರಾಣಾಂ ಮಂತ್ರಗೋ ಭವಾನ್ ॥ ೧೨೬ ॥

---

೧೨೧. ಈ ಉಪಕಾರವನ್ನು ಸ್ಮರಿಸಿಕೊಂಡೇ ಆ ಆರುಮಂದಿ ಋಷಿಪತ್ನಿಯರು ಆಕೆಗೆ ಶಾಪವನ್ನು ಕೊಡಲಿಲ್ಲ. ಉಪಕಾರವನ್ನು ಮಾಡುವವರಿಗೆ ಶಾಪವನ್ನು ಕೊಡಬಹುದೆ?

೧೨೨. ಆದರೂ ಸಪ್ತರ್ಷಿಗಳು ತಮ್ಮ ಜ್ಞಾನದೃಷ್ಟಿಯಿಂದ ನಡೆದುದೆಲ್ಲವನ್ನೂ ತಿಳಿದುಕೊಂಡು ಅಶುಚಿಗಳಾದ ಆರು ಜನರನ್ನೂ ವಿಸರ್ಜಿಸಿದರು. ಅರುಂಧತಿಯೊಬ್ಬಳು ಮಾತ್ರ ತನ್ನ ಗಂಡನೊಡನೆ ನಿಂತಳು.

೧೨೩. ಮಹಾಮುನಿಯಾದ ವಿಶ್ವಾಮಿತ್ರನು ಬಂದು ಕುಮಾರಸ್ವಾಮಿಗೆ ಶರಣಾಗತನಾಗಿ ಮಹಾ ಸೇನಾಪತಿಯಾದ ಆತನ ವಿಷಯವಾಗಿ ಉತ್ತಮವಾದ ಸ್ತೋತ್ರವನ್ನು ಮಾಡಿದನು.

೧೨೪. ಎಲೈ ಅರ್ಜುನನೆ! ಆ ಅಷ್ಟೋತ್ತರ ಶತನಾಮಗಳನ್ನು ಹೇಳುವೆನು ಕೇಳು. ಅವುಗಳ ಜಪದಿಂದ ಜನರ ಪಾಪಗಳೆಲ್ಲವೂ ದೂರವಾಗಿ ಶುದ್ಧ ಜ್ಞಾನವನ್ನು ಪಡೆಯುವರು.

೧೨೫–೧೪೧. ಎಲೈ ಷಣ್ಮುಖಸ್ವಾಮಿಯೇ! ನೀನು ಬ್ರಹ್ಮವಾದಿಯೂ (ವೇದವೇದಾಂತ ಪ್ರತಿಪಾದ್ಯವಾದ ಪರಬ್ರಹ್ಮಸ್ವರೂಪವನ್ನು ಭಕ್ತರಿಗೆ ಉಪದೇಶ ಮಾಡುವವನು), ಬ್ರಹ್ಮನೂ, ಬ್ರಹ್ಮವೂ, ಬ್ರಾಹ್ಮಣವತ್ಸಲನೂ, ಬ್ರಹ್ಮಣ್ಯನೂ, ಬ್ರಹ್ಮದೇವನೂ, ಬ್ರಹ್ಮದನೂ (ಬ್ರಹ್ಮಸ್ವರೂಪವನ್ನು ದಯೆಗೈಯುವವನೂ), ಬ್ರಹ್ಮಸಂಗ್ರಹನೂ, ಪರಮ ತೇಜಸ್ವಿಯೂ, ಮಂಗಲಗಳೆಲ್ಲಕ್ಕೂ ಮಂಗಲ ಸ್ವರೂಪಿಯೂ, ಅಪ್ರಮೇಯವಾದ ಗುಣಗಳನ್ನುಳ್ಳವನೂ, ಮಂತ್ರಗಳಲ್ಲೆಲ್ಲ ಅಂತರ್ಯಾಮಿಯಾಗಿ ಮಂತ್ರಗನೆನಿಸಿರುವವನೂ ಆಗಿರುವೆ. ಎಲೈ ಸ್ವಾಮಿಯೇ!

ತ್ವಂ ಸಾವಿತ್ರೀಮಯೋ ದೇವ ಸರ್ವತ್ರೈವಾಪರಾಜಿತಃ ।
ಮಂತ್ರಃ ಶರ್ವಾತ್ಮಕೋ ದೇವಃ ಷಡಕ್ಷರವತಾಂ ವರಃ ॥ ೧೨೭ ॥
ಮಾಲೀ ಮೌಲೀ ಪತಾಕೀ ಚ ಜಟೀ ಮುಂಡೀ ಶಿಖಂಡ್ಯಪಿ ।
ಕುಂಡಲೀ ಲಾಂಗಲೀ ಬಾಲಃ ಕುಮಾರಃ ಪ್ರವರೋ ವರಃ ॥ ೧೨೮ ॥
ಗವಾಂಪುತ್ರಃ ಸುರಾರಿಘ್ನಃ ಸಂಭವೋ ಭವಭಾವನಃ ।
ಪಿನಾಕೀ ಶತ್ರುಹಾ ಶ್ವೇತೋ ಗೂಢಃ ಸ್ಕಂದಃ ಕರಾಗ್ರಣೀಃ ॥ ೧೨೯ ॥
ದ್ವಾದಶೋ ಭೂರ್ಭುವೋ ಭಾವೀ ಭವಪುತ್ರೋ ನಮಸ್ಕೃತಃ ।
ನಾಗರಾಜಃ ಸುಧರ್ಮಾತ್ಮಾ ನಾಕಪೃಷ್ಠಃ ಸನಾತನಃ ॥ ೧೩೦ ॥
ತ್ವಂ ಭರ್ತಾ ಸರ್ವಭೂತಾತ್ಮಾ ತ್ವಂ ತ್ರಾತಾ ತ್ವಂ ಸುಖಾವಹಃ ।
ಶರದಕ್ಷಃ ಶಿಖೀ ಜೇತಾ ಷಡ್ವಕ್ತ್ರೋ ಭಯನಾಶನಃ ॥ ೧೩೧ ॥
ಹೇಮಗರ್ಭೋ ಮಹಾಗರ್ಭೋ ಜಯಶ್ಚ ವಿಜಯೇಶ್ವರಃ ।
ತ್ವಂ ಕರ್ತಾ ತ್ವಂ ವಿಧಾತಾ ಚ ನಿತ್ಯೋ ನಿತ್ಯಾರಿಮರ್ದನಃ ॥ ೧೩೨ ॥
ಮಹಾಸೇನೋ ಮಹಾತೇಜಾ ವೀರಸೇನಶ್ಚ ಭೂಪತಿಃ ।
ಸಿದ್ಧಾಸನಃ ಸುರಾಧ್ಯಕ್ಷೋ ಭೀಮಸೇನೋ ನಿರಾಮಯಃ ॥ ೧೩೩ ॥

---

ನೀನು ಎಲ್ಲೆಡೆಗಳಲ್ಲಿಯೂ ಪರಾಜಯವನ್ನು ಪಡೆಯದವನಾಗಿರುವೆ. ಮಂತ್ರ ಸ್ವರೂಪಿಯೂ, ಸರ್ವಾತ್ಮಕನಾದ ಸ್ವಾಮಿಯೂ, ಷಡಕ್ಷರ ಮಂತ್ರವನ್ನು ಜಪಿಸುವವರಲ್ಲಿ ಶ್ರೇಷ್ಠನೂ, ಮಾಲಿಯೂ, ಮೌಲಿಯೂ, ಪತಾಕಿಯೂ, ಜಟಿಯೂ, ಮುಂಡಿಯೂ, ಶಿಖಂಡಿಯೂ, ಕುಂಡಲಿಯೂ, ಲಾಂಗಲಿಯೂ, ಬಾಲನೂ, ಕುಮಾರನೂ, ಪ್ರವರನೂ, ವರನೂ ಆಗಿರುವೆ. ಗೋಪುತ್ರನೂ, ರಾಕ್ಷಸನಾಶಕನೂ, ಸಂಭವನೂ, ಭವಭಾವನನೂ, ಪಿನಾಕಿಯೂ, ಶತ್ರು ಸಂಹಾರಕನೂ, ಶ್ವೇತನೂ, ಗೂಢಸ್ಕಂದನೂ, ಕರಾಗ್ರಣಿಯೂ, ದ್ವಾದಶನೂ, ಭೂರ್ಭುವನೂ, ಭಾವಿಯೂ, ಭವಪುತ್ರನೂ, ಎಲ್ಲರಿಂದಲೂ ನಮಸ್ಕೃತನೂ, ನಾಗರಾಜನೂ, ಮಹಾಧರ್ಮಾತ್ಮನೂ, ನಾಕಪೃಷ್ಠನೂ, ಸನಾತನನೂ ಆಗಿರುವೆ. ಎಲೈ ಪ್ರಭುವೆ! ನೀನೇ ಎಲ್ಲರಿಗೂ ಎಲ್ಲಕ್ಕೂ ಒಡೆಯನು. ಸರ್ವ ಭೂತಾಂತರ್ಯಾಮಿಯೂ ನೀನೆ! ನೀನೇ ಎಲ್ಲರನ್ನೂ ಸಂರಕ್ಷಿಸುವಾತನು. ಎಲ್ಲರಿಗೂ ಸುಖ ಸಂತೋಷಗಳನ್ನುಂಟುಮಾಡುವವನೂ ನೀನೇ! ಶರದಕ್ಷನೂ, ಶಿಖಿಯೂ, ಜೇತೃವೂ, ಷಡಾನನೂ, ಭಯನಾಶಕನೂ, ಸ್ವರ್ಣಗರ್ಭನೂ, ಮಹಾಗರ್ಭನೂ, ಜಯನೂ, ವಿಜಯಗಳಿಗೆಲ್ಲ ಸ್ವಾಮಿಯೂ ನೀನೇ. ಕರ್ತನೂ, ವಿಧಾತೃವೂ, ನಿತ್ಯನೂ, ನಿತ್ಯಶತ್ರುಗಳನ್ನು ನಾಶಗೊಳಿಸುವವನೂ ನೀನೇ ಆಗಿರುವೆ. ಎಲೈ ದೇವೇಶ್ವರನೇ! ಮಹಾಸೇನನೂ, ಮಹಾತೇಜಸ್ವಿಯೂ, ವೀರಸೇನನೂ, ಭೂಪತಿಯೂ, ಸಿದ್ಧಾಸನನೂ, ಸುರಾಧ್ಯಕ್ಷನೂ, ಭೀಮ

ಶೌರಿರ್ಯದುರ್ಮಹಾತೇಜಾ ವೀರ್ಯವಾನ್ಸತ್ಯವಿಕ್ರಮಃ ।
ತೇಜೋಗರ್ಭೋಽಸುರರಿಪುಃ ಸುರಮೂರ್ತಿಸ್ಸುರೋರ್ಜಿತಃ ॥ ೧೩೪ ॥
ಕೃತಜ್ಞೋ ವರದಃ ಸತ್ಯಃ ಶರಣ್ಯಃ ಸಾಧುವತ್ಸಲಃ ।
ಸುವ್ರತಃ ಸೂರ್ಯಸಂಕಾಶೋ ವಹ್ನಿಗರ್ಭಃ ಕಣೋಭುವಃ ॥ ೧೩೫ ॥
ಪಿಪ್ಪಲೀ ಶೀಘ್ರಗೋ ರೌದ್ರೀ ಗಾಂಗೇಯೋ ರಿಪುದಾರಣಃ ।
ಕಾರ್ತಿಕೇಯಃ ಪ್ರಭುಃ ಕ್ಷಂತಾ ನೀಲದಂಷ್ಟ್ರೋ ಮಹಾಮನಾಃ ॥ ೧೩೬ ॥
ನಿಗ್ರಹೋ ನಿಗ್ರಹಾಣಾಂ ಚ ನೇತಾ ತ್ವಂ ಸುರನಂದನಃ ।
ಪ್ರಗ್ರಹಃ ಪರಮಾನಂದಃ ಕ್ರೋಧಘ್ನಸ್ತಾರ ಉಚ್ಛ್ರಿತಃ ॥ ೧೩೭ ॥
ಕುಕ್ಕುಟೀ ಬಹುಲೀ ದಿವ್ಯಃ ಕಾಮದೋ ಭೂರಿವರ್ಧನಃ ।
ಅಮೋಘೋಽಮೃತದೋ ಹ್ಯಗ್ನಿಃ ಶತ್ರುಘ್ನಃ ಸರ್ವಮೋದನಃ ॥ ೧೩೮ ॥
ಅವ್ಯಯೋ ಹ್ಯಮರಃ ಶ್ರೀಮಾನುನ್ನತೋ ಹ್ಯಗ್ನಿಸಂಭವಃ ।
ಪಿಶಾಚರಾಜಃ ಸೂರ್ಯಾಭಃ ಶಿವಾತ್ಮಾ ಶಿವನಂದನಃ ॥ ೧೩೯ ॥

---

ಸೇನನೂ, ನಿರಾಮಯನೂ ನೀನೇ! ಶೌರಿಯೂ, ಯದುವೂ, ಮಹಾತೇಜನೂ, ವೀರ್ಯಶಾಲಿಯೂ, ಸ್ಥಿರವಾದ ಪರಾಕ್ರಮವುಳ್ಳವನೂ, ತೇಜೋಗರ್ಭನೂ, ಅಸುರಶತ್ರುವೂ, ಸುರಮೂರ್ತಿಯೂ, ಊರ್ಜಿತನೂ, ಕೃತಜ್ಞನೂ, ವರದಾಯಕನೂ, ಸತ್ಯಸ್ವರೂಪನೂ, ಶರಣ್ಯನೂ, ಸತ್ಪುರುಷರಲ್ಲಿ ಅತ್ಯಂತ ವಾತ್ಸಲ್ಯವುಳ್ಳವನೂ, ಒಳ್ಳೆಯ ವ್ರತನಿಷ್ಠೆಯುಳ್ಳವನೂ, ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳವನೂ, ವಹ್ನಿಗರ್ಭನೂ, ಶಿವನ ವೀರ್ಯಕಣಗಳಿಂದುಂಟಾದವನೂ ನೀನೇ! ಪಿಪ್ಪಲಿಯೂ, ಶೀಘ್ರಗಾಮಿಯೂ, ರುದ್ರಸಂಭೂತನೂ, ಗಂಗಾಪುತ್ರನೂ, ಶತ್ರುಭಯಂಕರನೂ, ಕಾರ್ತಿಕೇಯನೂ, ಪ್ರಭುವೂ, ಭಕ್ತರ ಅಪರಾಧಗಳನ್ನು ಕ್ಷಮಿಸುವವನೂ, ನೀಲದಂಷ್ಟ್ರನೂ, ಮಹಾಮನಸ್ವಿಯೂ, ನಿಗ್ರಹಗಳೆಲ್ಲಕ್ಕೂ ನಿಗ್ರಹಸ್ವರೂಪನೂ, ನೇತೃವೂ, ದೇವತೆಗಳಿಗೆ ಆನಂದದಾಯಕನೂ, ಪ್ರಗ್ರಹನೂ, ಪರಮಾನಂದಸ್ವರೂಪನೂ, ಕ್ರೋಧವನ್ನು ಶಮನಮಾಡುವವನೂ, ಭಕ್ತರನ್ನು ಉದ್ಧರಿಸುವವನೂ, ಉಚ್ಛ್ರಿತನೂ (ಪರಮಾಶ್ರಯನೂ) ನೀನೇ ಆಗಿರುವೆ. ಕುಕ್ಕುಟ (ಕೋಳಿಯ) ವಾಹನವುಳ್ಳವನೂ, ಬಹುಲಿಯೂ, ದಿವ್ಯನೂ, ಸರ್ವಾಭೀಷ್ಟಗಳನ್ನೂ ಸಲ್ಲಿಸುವವನೂ, ಅಖಂಡೈಶ್ವರ್ಯವನ್ನು ವೃದ್ಧಿಗೊಳಿಸುವವನೂ, ಅಮೋಘನೂ, ಅಮೃತ (ಮೋಕ್ಷ) ಪ್ರದಾಯಕನೂ, ಅಗ್ನಿಸ್ವರೂಪನೂ, ಶತ್ರುಘ್ನನೂ, ಸಮಸ್ತರನ್ನೂ ಆನಂದಗೊಳಿಸುವವನೂ ನೀನೇ! ಅವ್ಯಯನೂ, ಅಮರನೂ, ಶ್ರೀಮಂತನೂ, ಉನ್ನತನೂ, ಅಗ್ನಿಸಂಭವನೂ, ಪಿಶಾಚರಾಜನೂ, ಸೂರ್ಯಸಮಾನತೇಜನೂ, ಶಿವಾತ್ಮಕನೂ, ಶಿವನಂದನನೂ, ಅಪಾರಪಾರನೂ, ತಿಳಿಯಲಸದಳನಾದವನೂ,

ಅಪಾರಪಾರೋ ದುರ್ಜ್ಞೇಯಃ ಸರ್ವಭೂತಹಿತೇ ರತಃ ।
ಅಗ್ರಾಹ್ಯಃ ಕಾರಣಂ ಕರ್ತಾ ಪರಮೇಷ್ಠೀ ಪರಂ ಪದಂ ॥ ೧೪೦ ॥
ಅಚಿಂತ್ಯಃ ಸರ್ವಭೂತಾತ್ಮಾ ಸರ್ವಾತ್ಮಾ ತ್ವಂ ಸನಾತನಃ ।
ಏವಂ ಸ ಸರ್ವಭೂತಾನಾಂ ಸಂಸ್ತುತಃ ಪರಮೇಶ್ವರಃ ॥ ೧೪೧ ॥
ನಾಮ್ನಾಮಷ್ಟಶತೇನಾಯಂ ವಿಶ್ವಾಮಿತ್ರಮಹರ್ಷಿಣಾ ।
ಪ್ರಸನ್ನಮೂರ್ತಿರಾಹೇದಂ ಮುನೀಂದ್ರಂ ವ್ರಿಯತಾಮಿತಿ ॥ ೧೪೨ ॥
ಮಮ ತ್ವಯಾ ದ್ವಿಜಶ್ರೇಷ್ಠ ಸ್ತುತಿರೇಷಾ ನಿರೂಪಿತಾ ।
ಭವಿಷ್ಯತಿ ಮನೋಽಭೀಷ್ಟಪ್ರಾಪ್ತಯೇ ಪ್ರಾಣಿನಾಂ ಭುವಿ ॥ ೧೪೩ ॥
ವಿವರ್ಧತೇ ಕುಲೇ ಲಕ್ಷ್ಮೀಸ್ತಸ್ಯ ಯಃ ಪ್ರಪಠೇದಿಮಂ ।
ನ ರಾಕ್ಷಸಾಃ ಪಿಶಾಚಾ ವಾ ನ ಭೂತಾನಿ ನ ಚಾಪದಃ ॥ ೧೪೪ ॥
ವಿಘ್ನಕಾರೀಣಿ ತದ್ಗೇಹೇ ಯತ್ರೈವ ಸಂಸ್ತುವಂತಿ ಮಾಂ ।
ದುಃಸ್ವಪ್ನಂ ಚ ನ ಪಶ್ಯೇತ್ಸ ಬದ್ಧೋ ಮುಚ್ಯೇತ ಬಂಧನಾತ್ ॥ ೧೪೫ ॥

---

ಸಮಸ್ತ ಭೂತಗಳಿಗೆ ಹಿತವನ್ನುಂಟುಮಾಡುವುದರಲ್ಲಿಯೇ ಆಸಕ್ತನಾದವನೂ, ಅಗ್ರಾಹ್ಯನೂ, ಜಗತ್ಕಾರಣನೂ, ಕರ್ತನೂ, ಪರಮೇಷ್ಠಿಯೂ, ಪರಮಪದ ಸ್ವರೂಪನೂ, ಚಿಂತಿಸಲಸದಳನಾದವನೂ, ಸರ್ವಭೂತಾತ್ಮನೂ, ಸರ್ವಾತ್ಮನೂ, ಸನಾತನನೂ ನೀನೇ! ಎಲೈ ಭಾರತನೇ! ಈ ಪ್ರಕಾರ ಸಮಸ್ತ ಭೂತಗಳಿಗೂ ಪರಮೇಶ್ವರನಾದ ಆ ಷಣ್ಮುಖಸ್ವಾಮಿಯು ನೂರೆಂಟು ದಿವ್ಯನಾಮಗಳಿಂದ ಸಂಸ್ತುತನಾದನು.

೧೪೨–೧೪೩. ಇಂತು ಮಹರ್ಷಿಯಾದ ವಿಶ್ವಾಮಿತ್ರನಿಂದ ನೂರೆಂಟು ನಾಮಗಳಿಂದ ಸ್ತೋತ್ರವನ್ನು ಕೇಳಿ ಸಕಲ ಜೀವರಿಗೂ ಪ್ರಭುವಾದ ಕುಮಾರ ಸ್ವಾಮಿಯು ಪ್ರಸನ್ನನಾಗಿ ಆತನನ್ನು ಕುರಿತು ಇಂತೆಂದನು:—"ಎಲೈ ಮುನಿ ಶ್ರೇಷ್ಠನೆ! ನಿನಗೆ ಬೇಕಾದ ವರಗಳನ್ನು ಕೇಳಿಕೊ. ಎಲೈ ಬ್ರಾಹ್ಮಣೋತ್ತಮನೆ? ನಿನ್ನಿಂದ ನಿರೂಪಿತವಾದ ಈ ನನ್ನ ಸ್ತೋತ್ರವು ಭೂಲೋಕದಲ್ಲಿ ಸಕಲ ಪ್ರಾಣಿಗಳಿಗೂ ಮನಸ್ಸಿನ ಅಭೀಷ್ಟಗಳೆಲ್ಲವನ್ನೂ ಉಂಟುಮಾಡಿಕೊಡುವುದು.

೧೪೪–೧೪೫. ಯಾವನು ಈ ಸ್ತೋತ್ರವನ್ನುಪಠಿಸುವನೋ ಅವನ ವಂಶದಲ್ಲಿ ಐಶ್ವರ್ಯವು ವೃದ್ಧಿಯಾಗುವುದು. ಯಾವ ಮನೆಯಲ್ಲಿ ನನ್ನ ಈ ಸ್ತೋತ್ರವು ನಿತ್ಯವೂ ಪಠಿಸಲ್ಪಡುತ್ತದೆಯೋ ಅಲ್ಲಿ ರಾಕ್ಷಸರು, ಪಿಶಾಚಿಗಳು, ಭೂತಗಳು ಮುಂತಾದುವುಗಳ ಆಧಿಭೌತಿಕ ಆಧಿದೈವಿಕಗಳಾದ ಸಂಕಟಗಳೊಂದೂ ಉಂಟಾಗುವುದಿಲ್ಲ. ಈ ಸ್ತೋತ್ರದ ಮಾಹಾತ್ಮ್ಯೆಯಿಂದ ಮನುಷ್ಯನು ದುಸ್ಸ್ವಪ್ನಗಳನ್ನು ಕಾಣುವುದಿಲ್ಲ. ರಾಜಾದಿಗಳ ಬಂಧನದಿಂದ ಮುಕ್ತನಾಗುವನು ಮತ್ತು ದಿವ್ಯವಾದ ಜನ್ಮವನ್ನು ಪಡೆಯುವನು.

ಸ್ತ್ವವಸ್ಯಾಸ್ಯ ಪ್ರಭಾವೇಣ ದಿವ್ಯಭಾವಃ ಪುಮಾನ್ಭವೇತ್ ।
ತ್ವಂ ಚ ಮಾಂ ಶ್ರುತಿಸಂಸ್ಕಾರೈಃ ಸರ್ವೈಃ ಸಂಸ್ಕರ್ತುಮರ್ಹಸಿ ॥ ೧೪೬ ॥
ಸಂಸ್ಕಾರರಹಿತಂ ಜನ್ಮ ಯತಶ್ಚ ಪಶುವತ್ಸ್ಮೃತಂ ।
ತ್ವಂ ಚ ಮದ್ವರದಾನೇನ ಬ್ರಹ್ಮರ್ಷಿಶ್ಚ ಭವಿಷ್ಯಸಿ ॥ ೧೪೭ ॥
ತತೋ ಮುನಿಸ್ತಸ್ಯ ಚಕ್ರೇ ಜಾತಕರ್ಮಾದಿಕಾಃಕ್ರಿಯಾಃ ।
ಪೌರೋಹಿತ್ಯಂ ತಥಾ ಭೇಜೇ ಸ್ಕಂದಸ್ಯೈವಾಜ್ಞಯಾ ಪ್ರಭುಃ ॥ ೧೪೮ ॥
ತತಸ್ತಂ ವಹ್ನಿರಭ್ಯಾಗಾದ್ದದರ್ಶ ಚ ಸುತಂ ಗುಹಂ ।
ಷಟ್ಛೀರ್ಷಂ ದ್ವಿಗುಣಶ್ರೋತ್ರಂ ದ್ವಾದಶಾಕ್ಷಿಭುಜಕ್ರಮಂ ॥ ೧೪೯ ॥
ಏಕಗ್ರೀವಂ ಚೈಕಕಾಯಂ ಕುಮಾರಂ ಸ ವ್ಯಲೋಕಯತ್ ।
ಕಲಿಲಂ ಪ್ರಥಮೇಽಹ್ನಿ ದ್ವಿತೀಯೇ ವ್ಯಕ್ತತಾಂ ಗತಂ ॥ ೧೫೦ ॥
ತೃತೀಯಾಯಾಂ ಶಿಶುರ್ಜಾತಶ್ಚತುರ್ಥ್ಯಾಂ ಪೂರ್ಣ ಏವ ಚ ।
ಪಂಚಮ್ಯಾಂ ಸಂಸ್ಕೃತಃ ಸೋಽಭೂತ್ಪಾವಕಂ ಚಾಪ್ಯಪಶ್ಯತ ॥ ೧೫೧ ॥
ತತಸ್ತಂ ಪಾವಕಃ ಪಾರ್ಥ ಆಲಿಲಿಂಗ ಚುಚುಂಬ ಚ ।
ಪುತ್ರೇತಿ ಚೋಕ್ತ್ವಾ ತಸ್ಮೈ ಸ ಶಕ್ತ್ಯಸ್ತ್ರಮುದದಾತ್ಸ್ವಯಂ ॥ ೧೫೨ ॥

---

೧೪೬–೧೪೮. ನೀನೂ ಕೂಡ ನನಗೆ ವೇದವಿಹಿತಗಳಾದ ಸಂಸ್ಕಾರಗಳನ್ನು ಮಾಡಬೇಕು. ಷೋಡಶಸಂಸ್ಕಾರಗಳಿಂದ ರಹಿತವಾದ ಮನುಷ್ಯನ ಜನ್ಮವು ಪಶುಜನ್ಮವೆಂದು ಗಣಿಸಲ್ಪಟ್ಟಿದೆ. ನೀನೂ ನನ್ನ ವರಪ್ರಭಾವದಿಂದ ಬ್ರಹ್ಮರ್ಷಿಯಾಗುವೆ.'' ಬಳಿಕ ವಿಶ್ವಾಮಿತ್ರನು ಆತನಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿದನು. ಮತ್ತು ಮಂತ್ರಜ್ಞನಾದ ಆತನೇ ಸ್ಕಂದನ ಆಜ್ಞಾನುಸಾರವಾಗಿ ಪುರೋಹಿತನಾಗಿ ನಿಂತನು.

೧೪೯. ಬಳಿಕ ಅಗ್ನಿದೇವನು ಅಲ್ಲಿಗೆ ಬಂದು ತನ್ನ ಮಗನನ್ನು ಕಂಡನು. ಗುಹೇಶ್ವರನು ಆರು ತಲೆಗಳುಳ್ಳವನೂ, ಹನ್ನೆರಡು ಕಿವಿಗಳು, ಕಣ್ಣುಗಳು, ತೋಳುಗಳುಳ್ಳವನೂ ಆಗಿ ರಂಜಿಸುತ್ತಿದ್ದನು.

೧೫೦–೧೫೨. ಒಂದೇ ಕಂಠವೂ, ಒಂದೇ ಶರೀರವೂ ಇದ್ದ ಪುತ್ರನನ್ನು ಅಗ್ನಿಯು ಸಂತೋಷದಿಂದ ನೋಡಿದನು. ಮೊದಲನೆಯ ದಿನದಲ್ಲಿ ಕಲಿಲವೆಂಬ ಮಾಂಸಪಿಂಡವಾಗಿಯೂ, ಎರಡನೆಯ ದಿನ ಮನುಷ್ಯಾಕಾರನಾಗಿಯೂ, ಮೂರನೆಯ ದಿನ ಸಂಪೂರ್ಣ ಶಿಶುವಾಗಿಯೂ ಬೆಳೆದು, ನಾಲ್ಕನೆಯ ದಿನದಲ್ಲಿ ಸಂಪೂರ್ಣಾಕಾರವನ್ನು ಹೊಂದಿದನು. ಐದನೆಯ ದಿನದಲ್ಲಿಯೇ ಜಾತಕರ್ಮಾದಿ ಸಂಸ್ಕಾರಗಳನ್ನು ಪಡೆದು ತಂದೆಯಾದ ಅಗ್ನಿದೇವನನ್ನು ನೋಡಿದನು. ಆಗ ಅಗ್ನಿಯು ಮಗುವನ್ನು ಅಪ್ಪಿಕೊಂಡು ಮುದ್ದಿಟ್ಟುಕೊಳ್ಳುತ್ತ ಮಗನೆಂದು ಪ್ರೀತಿಯಿಂದ ಕರೆದು ತಾನೇ ಅವನಿಗೆ ಶಕ್ತ್ಯಸ್ತ್ರವನ್ನು ಉಪದೇಶಿಸಿಕೊಟ್ಟನು.

ಸ ಚ ಶಕ್ತಿಂ ಸಮಾದಾಯ ನಮಸ್ಕೃತ್ಯ ಚ ಪಾವಕಂ ।
ಶ್ವೇತಶೃಂಗಂ ಸಮಾರೂಢೋ ಮುಖೈಃ ಪಶ್ಯನ್ ದಿಶೋ ದಶ ।
ವ್ಯನದದ್ಭೈರವಂ ನಾದಂ ತ್ರಾಸಯನ್ಸಾಸುರಂ ಜಗತ್ ॥ ೧೫೩ ॥
ತತಃ ಶ್ವೇತಗಿರೇಃ ಶೃಂಗಂ ರಕ್ಷಃ ಪದ್ಮದಶಾವೃತಂ ।
ಬಿಭೇದ ತರಸಾ ಶಕ್ತ್ಯಾ ಶತಯೋಜನ ವಿಸ್ತೃತಂ ॥ ೧೫೪ ॥
ತದೇಕೇನ ಪ್ರಹಾರೇಣ ಖಂಡಶಃ ಪತಿತಂ ಭುವಿ ।
ಚೂರ್ಣೀಕೃತಾ ರಾಕ್ಷಸಾಸ್ತೇ ಸತತಂ ಧರ್ಮಶತ್ರವಃ ॥ ೧೫೫ ॥
ತತಃ ಪ್ರವ್ಯಥಿತಾ ಭೂಮಿರ್ವ್ಯಶೀರ್ಯತ ಸಮಂತತಃ ।
ಭೀತಾಶ್ಚ ಪರ್ವತಾಃ ಸರ್ವೇ ಚುಕ್ರುಶುಃ ಪ್ರಲಯಾದ್ಯಥಾ ॥ ೧೫೬ ॥
ಭೂತಾನಿ ತತ್ರ ಸುಭೃಶಂ ತ್ರಾಹಿತ್ರಾಹೀತಿ ಚೋಜ್ಜಗುಃ ।
ಏವಂ ಶ್ರುತ್ವಾ ತತೋ ದೇವಾ ವಾಸವಂ ಸಹ ತೇಽಬ್ರುವನ್ ॥ ೧೫೭ ॥
ಯೇನೈಕೇಣ ಪ್ರಹಾರೇಣ ತ್ರೈಲೋಕ್ಯಂ ವ್ಯಾಕುಲೀಕೃತಂ ।
ಸ ಸಂಕ್ರುದ್ಧಃ ಕ್ಷಣಾದ್ವಿಶ್ವಂ ಸಂಹರಿಷ್ಯತಿ ವಾಸವ ॥ ೧೫೮ ॥

---

೧೫೩. ಗುಹೇಶ್ವರನಾದರೋ ಶಕ್ತ್ಯಾಯುಧವನ್ನು ಸ್ವೀಕರಿಸಿ ತಂದೆಯಾದ ಅಗ್ನಿದೇವನಿಗೆ ನಮಸ್ಕಾರಮಾಡಿ ಶ್ವೇತಪರ್ವತದ ತುದಿಯನ್ನೇರಿ ತನ್ನ ಆರು ಮುಖಗಳಿಂದ ಹತ್ತು ದಿಕ್ಕುಗಳಿಗೂ ನೋಡುತ್ತ ರಾಕ್ಷಸಮಯವಾದ ಜಗತ್ತನ್ನೆಲ್ಲ ನಡುಗಿಸುವಂತೆ ಭಯಂಕರವಾದ ಸಿಂಹಘರ್ಜನೆಯನ್ನು ಮಾಡಿದನು.

೧೫೪. ಬಳಿಕ ವೇಗದಿಂದ ಹತ್ತು ಪದ್ಮಗಳ ಸಂಖ್ಯೆಗಳ ರಾಕ್ಷಸರ ನಿವಾಸವೂ, ನೂರುಯೋಜನ ವಿಸ್ತಾರವೂ ಆದ ಶ್ವೇತಪರ್ವತದ ಶಿಖರವನ್ನು ಶಕ್ತ್ಯಾಯುಧದಿಂದ ಭೇದಿಸಿದನು.

೧೫೫. ಒಂದು ಪ್ರಹಾರದಿಂದಲೇ ಪರ್ವತದ ಕೋಡುಗಲ್ಲು ಚೂರ್ಣಿತವಾಗಿ ಭೂಮಿಯಲ್ಲಿ ಬಿದ್ದಿತು. ನಿತ್ಯವೂ ಧರ್ಮಕ್ಕೆ ದ್ರೋಹಿಗಳಾದ ರಾಕ್ಷಸರೆಲ್ಲರೂ ನಾಶವನ್ನೈದಿದರು.

೧೫೬. ಆ ಶಕ್ತಿಘಾತದಿಂದ ಭೂಮಿಯು ವ್ಯಥೆಗೊಂಡು ಎಲ್ಲೆಡೆಯಲ್ಲೂ ಬಿರುಕುಬಿಟ್ಟಿತು. ಪರ್ವತಗಳೆಲ್ಲವೂ ಪ್ರಳಯಕಾಲವು ಬಂದಿತೆಂದು ಹೆದರಿ ಕೂಗಾಡಲಾರಂಭಿಸಿದುವು.

೧೫೭. ಮೂರು ಲೋಕಗಳ ನಿವಾಸಿಗಳೂ ಕೂಡ ಮೇಲಿಂದ ಮೇಲೆ "ಕಾಪಾಡು, ಕಾಪಾಡು" ಎಂದು ಬೇಡಿಕೊಂಡರು. ಇದನ್ನು ಕೇಳಿ ದೇವತೆಗಳೆಲ್ಲರೂ ಮಹೇಂದ್ರನನ್ನು ಕುರಿತು ಹೇಳತೊಡಗಿದರು.

೧೫೮–೧೫೯. "ಎಲೈ ಇಂದ್ರನೇ! ಯಾವನ ಒಂದು ಪ್ರಹಾರದಿಂದಲೇ ಮೂರು ಲೋಕಗಳೂ ತಳಮಳಗೊಂಡುವೊ, ಅವನು ಕೋಪಗೊಂಡರೆ

ಮಯಾ ಚ ಪಾಲನಾರ್ಥಾಯ ಸೃಷ್ಟಾ ದೇವೇನ ವೇಧಸಾ ।
ತಚ್ಚ ತ್ರಾಣಂ ಸದಾ ಕಾರ್ಯಂ ಪ್ರಾಣೈಃ ಕಂಠಗತೈರಪಿ ॥ ೧೫೯ ॥
ಅಸ್ಮಾಕಂ ಪಶ್ಯತಾಮೇವಂ ಯದಿ ಸಂಕ್ಷೀಯತೇ ಜಗತ್ ॥ ೧೬೦ ॥
ಧಿಕ್ತತೋ ಜನ್ಮ ವೀರಾಣಾಂ ಶ್ಲಾಘ್ಯಂ ಹಿ ಮರಣಂ ಕ್ಷಣಾತ್ ।
ತದಸ್ಮಾಭಿಃ ಸಹೈನಂ ತ್ವಂ ಕ್ಷಂತುಮರ್ಹಸಿ ವಾಸವ ॥ ೧೬೧ ॥
ಏವಮುಕ್ತಸ್ತಥೇತ್ಯುಕ್ತ್ವಾ ದೇವೈಃ ಸಾರ್ಧಂ ತಮಭ್ಯಯಾತ್ ।
ವಿಧಿತ್ಸುಸ್ತಸ್ಯ ವೀರ್ಯಂ ಸ ಶಕ್ರಸ್ತೂರ್ಣತರಂ ತದಾ ॥ ೧೬೨ ॥
ಉಗ್ರಂ ತಚ್ಚ ಮಹಾವೇಗಂ ದೇವಾನೀಕಂ ದುರಾಸದಂ ।
ನರ್ದಮಾನಂ ಗುಹಃ ಪ್ರೇಕ್ಷ್ಯ ನನಾದ ಜಲಧಿರ್ಯಥಾ ॥ ೧೬೩ ॥
ತಸ್ಯ ನಾದೇನ ಮಹತಾ ಸಮುದ್ಧೂತೋದಧಿಪ್ರಭಂ ।
ಬಭ್ರಾಮ ತತ್ರ ತತ್ರೈವ ದೇವಸೈನ್ಯಮಚೇತನಂ ॥ ೧೬೪ ॥
ಜಿಘಾಂಸೂನುಪಸಂಪ್ರಾಪ್ತಾನ್ದೇವಾನ್ದೃಷ್ಟ್ವಾ ಸ ಪಾವಕಿಃ ।
ವಿಸಸರ್ಜ ಮುಖಾತ್ತತ್ರ ಪ್ರವೃದ್ಧಾಃ ಪಾವಕಾರ್ಚಿಷಃ ॥ ೧೬೫ ॥

---

ನಿಮಿಷಮಾತ್ರದಲ್ಲಿಯೇ ಬ್ರಹ್ಮಾಂಡವನ್ನು ನಾಶಗೊಳಿಸಬಲ್ಲನು. ನಾವಾದರೋ ತ್ರಿಲೋಕಗಳ ರಕ್ಷಣಾರ್ಥವಾಗಿಯೇ ದೇವನಾದ ಬ್ರಹ್ಮನಿಂದ ಸೃಜಿಸಲ್ಪಟ್ಟವರು. ಆದುದರಿಂದ ಕಂಠಗತಪ್ರಾಣರಾದರೂ ಕೂಡ ಲೋಕಸಂರಕ್ಷಣೆಯನ್ನು ಮಾಡಲೇಬೇಕು.

೧೬೦-೧೬೧. ವೀರರಾದ ನಾವೆಲ್ಲರೂ ನೋಡುತ್ತಿರುವಂತೆಯೇ ಲೋಕವು ಸಂಕ್ಷಯವನ್ನು ಹೊಂದಿದಮೇಲೆ ನಮ್ಮ ಜನ್ಮಕ್ಕೆ ಧಿಕ್ಕಾರವಿರಲಿ. ಆ ಕ್ಷಣದಲ್ಲಿಯೇ ನಾವೆಲ್ಲರೂ ಸಾಯುವುದು ಲೇಸು. ಆದುದರಿಂದ ನಮ್ಮಂತೆಯೇ ಆತನನ್ನೂ ವಶಗೊಳಿಸಿಕೊಳ್ಳುವುದು ನಿನಗೆ ಯುಕ್ತವು.'' ಈ ಮಾತುಗಳನ್ನು ಅಂಗೀಕರಿಸಿ ಇಂದ್ರನು ದೇವತೆಗಳೊಡನೆ ಸ್ಕಂದನಿದ್ದಲ್ಲಿಗೆ ಹೋದನು.

೧೬೨-೧೬೩. ಶೀಘ್ರವಾಗಿಯೇ ಆತನ ಬಲವನ್ನು ಕರಗಿಸುವೆನೆಂಬ ಇಚ್ಛೆಯುಳ್ಳವನಾದನು. ಉಗ್ರವೂ, ವೇಗಯುಕ್ತವೂ, ದುರ್ಜಯವೂ, ಜಯಘೋಷವನ್ನು ಮಾಡುತ್ತಿರುವುದೂ ಆದ ದೇವತೆಗಳ ಸೈನ್ಯವನ್ನು ಕಂಡು ಷಣ್ಮುಖಸ್ವಾಮಿಯೂ ಸಮುದ್ರದಂತೆ ಗಂಭೀರವಾದ ಸಿಂಹನಾದವನ್ನು ಮಾಡಿದನು.

೧೬೪-೧೬೫. ಸಮುದ್ರದಂತೆ ವಿಶಾಲವೂ, ದುರ್ಜ್ಞೇಯವೂ ಆದ ದೇವತೆಗಳ ಸೈನ್ಯವೆಲ್ಲವೂ ಷಣ್ಮುಖನ ಆ ಗಂಭೀರನಾದವನ್ನು ಕೇಳಿ ನಿಂತಲ್ಲಿಯೇ ಭ್ರಮೆಗೊಂಡು ನಿಶ್ಚೇಷ್ಟವಾಗಿ ಬಿದ್ದುಬಿಟ್ಟಿತು. ತನ್ನನ್ನು ಕೊಲ್ಲಲೆಳಸುತ್ತ ಮೇಲೆರಗುತ್ತಿರುವ ದೇವತೆಗಳನ್ನು ಕಂಡು ಅಗ್ನಿಪುತ್ರನಾದ ತನ್ನ ಮುಖದಿಂದ ಭಯಂಕರವಾದ ಬೆಂಕಿಯ ಜ್ವಾಲೆಗಳನ್ನುಗುಳುತ್ತಿದ್ದನು.

ಅದಹದ್ದೇವಸೈನ್ಯಾನಿ ಚೇಷ್ಟಮಾನಾನಿ ಭೂತಲೇ ।
ತೇ ಪ್ರದೀಪ್ತಶಿರೋದೇಹಾಃ ಪ್ರದೀಪ್ತಾಯುಧವಾಹನಾಃ ।
ಪ್ರಚ್ಯುತಾಃ ಸಹಸಾ ಭಾಂತಿ ದಿವಸ್ತಾರಾಗಣಾ ಇವ ॥ ೧೬೬ ॥
ದಹ್ಯಮಾನಾಃ ಪ್ರಪನ್ನಾಸ್ತೇ ಶರಣಂ ಪಾವಕಾತ್ಮಜಂ ।
ದೇವಾ ವಜ್ರಧರಂ ಪ್ರೋಚುಸ್ತ್ಯಜ ವಜ್ರಂ ಶತಕ್ರತೋ ॥ ೧೬೭ ॥
ಉಕ್ತೋ ದೇವೈಸ್ತದಾ ಶಕ್ರಃ ಸ್ಕಂದೇ ವಜ್ರಮವಾಸೃಜತ್ ।
ತದ್ವಿಸೃಷ್ಟಂ ಜಘಾನಾಶು ಪಾರ್ಶ್ವಂ ಸ್ಕಂದಸ್ಯ ದಕ್ಷಿಣಂ ॥ ೧೬೮ ॥
ಬಿಭೇದ ಚ ಕುರುಶ್ರೇಷ್ಠ ತದಾ ತಸ್ಯ ಮಹಾತ್ಮನಃ ।
ವಜ್ರಪ್ರಹಾರಾತ್ಸ್ಕಂದಸ್ಯ ಸಂಜಾತಃ ಪುರುಷೋಽಪರಃ ॥ ೧೬೯ ॥
ಯುವಾ ಕಾಂಚನಸನ್ನಾಹಃ ಶಕ್ತಿಧೃಗ್ದಿವ್ಯಕುಂಡಲಃ ।
ಶಾಖ ಇತ್ಯಭಿವಿಖ್ಯಾತಃ ಸೋಽಪಿ ವ್ಯನದದದ್ಭುತಂ ॥ ೧೭೦ ॥
ತತಶ್ಚೇಂದ್ರಃ ಪುನಃ ಕ್ರುದ್ಧೋ ಹೃದಿ ಸ್ಕಂದಂ ವ್ಯದಾರಯತ್ ।
ತತ್ರಾಪಿ ತಾದೃಶೋ ಜಜ್ಞೇ ನೈಗಮೇಯ ಇತಿ ಶ್ರುತಃ ॥ ೧೭೧ ॥

---

೧೬೬. ಮತ್ತು ಭೂಮಿಯಲ್ಲಿ ಬಿದ್ದು ಒದ್ದಾಡುತ್ತಿದ್ದ ದೇವಸೈನ್ಯಗಳನ್ನೆಲ್ಲ ಸುಡುತ್ತಿದ್ದನು. ಬೆಂಕಿಯಿಂದುರಿಯುತ್ತಿರುವ ತಲೆಗಳೂ, ದೇಹಗಳೂ, ಆಯುಧಗಳೂ, ವಾಹನಗಳೂ ಉಳ್ಳವರಾಗಿ ಸುರರೆಲ್ಲರೂ ಆಕಾಶದಿಂದ ಉದುರಿದ ನಕ್ಷತ್ರಗಳಂತೆ ಕಾಣುತ್ತಿದ್ದರು.

೧೬೭. ಇಂತು ಸುಡಲ್ಪಡುತ್ತ ದೇವತೆಗಳೆಲ್ಲರೂ ಅಗ್ನಿಪುತ್ರನಾದ ಸ್ಕಂದನನ್ನೇ ಶರಣುಹೊಗಬೇಕಾಯಿತು. ಹಾಗೂ ಅವರೆಲ್ಲರೂ ಮಹೇಂದ್ರನನ್ನು ಕುರಿತು, "ಎಲೈ ದೇವನಾಯಕನೆ! ನಿನ್ನ ವಜ್ರಾಯುಧವನ್ನು ಈತನ ಮೇಲೆ ಪ್ರಯೋಗಿಸು" ಎಂದು ಪ್ರೇರಿಸಿದರು.

೧೬೮. ಇಂತು ದೇವತೆಗಳಿಂದ ಪ್ರೇರಿತನಾಗಿ ಇಂದ್ರನು ತನ್ನ ವಜ್ರವನ್ನು ಗುರಿಯಿಟ್ಟು ಹೊಡೆಯಲು ಅದು ಸ್ಕಂದನ ಬಲಭಾಗವನ್ನು ತಗುಲಿತು.

೧೬೯. ಇಂತು ತಗುಲಿದುದರಿಂದ ಆತನ ಶರೀರವು ಗಾಯಗೊಂಡು ಮಹಾತ್ಮನಾದ ಆತನ ಶರೀರದಿಂದ ಮತ್ತೊಬ್ಬ ಪುರುಷನು ಉದ್ಭವಿಸಿದನು.

೧೭೦. ಅವನು ಯುವಕನೂ, ಕಾಂಚನವರ್ಣದವನೂ, ಶಕ್ತ್ಯಾಯುಧಧಾರಿಯೂ, ದಿವ್ಯಕುಂಡಲಗಳುಳ್ಳವನೂ ಆಗಿದ್ದನು. ಅವನಿಗೆ ಶಾಖನೆಂಬ ವಿಖ್ಯಾತವಾದ ಹೆಸರಿದ್ದಿತು. ಅವನೂ ಸಿಂಹಗರ್ಜನೆ ಮಾಡಲುಪಕ್ರಮಿಸಿದನು.

೧೭೧. ಬಳಿಕ ಮಹೇಂದ್ರನು ಮತ್ತಷ್ಟು ಕೋಪಗೊಂಡು ಷಣ್ಮುಖನನ್ನು ಹೃದಯದಲ್ಲಿ ಹೊಡೆಯಲು ಪುನಃ ಅಲ್ಲಿಂದ ನೈಗಮೇಯನೆಂಬ ಮತ್ತೊಬ್ಬನು ಉದ್ಭವಿಸಿದನು.

ತತೋ ವಿನದ್ಯ ಸ್ಕಂದಾದ್ಯಾಶ್ಚತ್ವಾರಸ್ತಂ ತದಾಭ್ಯಯುಃ ।
ತದೇಂದ್ರೋ ವಜ್ರಮುತ್ಸೃಜ್ಯ ಪ್ರಾಂಜಲಿಃ ಶರಣಂ ಯಯೌ ॥ ೧೭೨ ॥
ತಸ್ಯಾಭಯಂ ದದೌ ಸ್ಕಂದಃ ಸಹಸೈನ್ಯಸ್ಯ ಸತ್ತಮಃ ।
ತತಃ ಪ್ರಹೃಷ್ಟಾಸ್ತ್ರಿದಶಾ ವಾದಿತ್ರಾಣ್ಯಭ್ಯವಾದಯನ್ ॥ ೧೭೩ ॥
ವಜ್ರಪ್ರಹಾರಾತ್ಕನ್ಯಾಶ್ಚ ಜಜ್ಞಿರೇಽಸ್ಯ ಮಹಾಬಲಾಃ ।
ಯಾ ಹರಂತಿ ಶಿಶೂನ್ಜಾತಾನ್ಗರ್ಭಸ್ಥಾಂಶ್ಚೈವ ದಾರುಣಾಃ ॥ ೧೭೪ ॥
ಕಾಕೀ ಚ ಹಿಲಿಮಾ ಚೈವ ರುದ್ರಾ ಚ ವೃಷಭಾ ತಥಾ ।
ಆಯಾ ಪಲಾಲಾ ಮಿತ್ರಾ ಚ ಸಪ್ತೈತಾಃ ಶಿಶುಮಾತರಃ ॥ ೧೭೫ ॥
ಏತಾಸಾಂ ವೀರ್ಯಸಂಪನ್ನಃ ಶಿಶುಶ್ಚಾಭೂತ್ಸುದಾರುಣಃ ।
ಸ್ಕಂದಪ್ರಸಾದಜಃ ಪುತ್ರೋ ಲೋಹಿತಾಕ್ಷೋ ಭಯಂಕರಃ ॥ ೧೭೬ ॥
ಏಷ ವೀರಾಷ್ಟಕಃ ಪ್ರೋಕ್ತಃ ಸ್ಕಂದಮಾತೃಗಣೋಽದ್ಭುತಃ।
ಪೂಜನೀಯಃ ಸದಾ ಭಕ್ತ್ಯಾ ಸರ್ವಾಪಸ್ಮಾರ ಶಾಂತಿದಃ ॥ ೧೭೭ ॥
ಉಪಾತಿಷ್ಠತ್ತತೋ ಸ್ಕಂದಂ ಹಿರಣ್ಯಕವಚಸ್ರಜಂ ।
ಲೋಹಿತಾಂಬರಸಂವೀತಂ ತ್ರೈಲೋಕ್ಯಸ್ಯಾಪಿ ಸುಪ್ರಭಂ ॥ ೧೭೮ ॥

---

೧೭೨–೧೭೩. ಆಗ ಸ್ಕಂದನೇ ಮೊದಲಾದ ನಾಲ್ವರೂ ಸಿಂಹನಾದವನ್ನು ಮಾಡುತ್ತ ದೇವೇಂದ್ರನಮೇಲೆ ರೇಗಿಬೀಳಲು ಆತನು ವಜ್ರಾಯುಧವನ್ನು ಬಿಸುಟು ಕೈಗಳನ್ನು ಮುಗಿದುಕೊಂಡು ಶರಣಾಗತನಾದನು. ಸತ್ಪುರುಷನಾದ ಸ್ಕಂದನು ಸೈನ್ಯಸಹಿತನಾದ ಮಹೇಂದ್ರನಿಗೆ ಅಭಯವನ್ನು ಕೊಟ್ಟನು. ಆಗ ದೇವತೆಗಳೆಲ್ಲರೂ ತಮ್ಮತಮ್ಮ ವಾದ್ಯಗಳನ್ನು ಬಾಜಿಸಿದರು.

೧೭೪–೧೭೫. ಇಂದ್ರನ ವಜ್ರಪ್ರಹಾರದ ದೆಸೆಯಿಂದಲೇ ಸ್ಕಂದನಿಗೆ ಮಹಾ ಬಲಿಷ್ಠೆಯರೂ, ಕ್ರೂರೆಯರೂ, ಹುಟ್ಟಿದ ಮತ್ತು ಗರ್ಭಗತಗಳಾದ ಮಕ್ಕಳನ್ನು ಹರಣಮಾಡುವವರೂ ಆದ ಕನ್ಯೆಯರು ಹುಟ್ಟಿದರು. ಕಾಕಿ, ಹಿಲಿಮಾ, ರುದ್ರಾ, ವೃಷಭಾ, ಅಯಾ, ಪಲಾಲಾ, ಮಿತ್ರಾ ಎಂಬ ಏಳು ಜನರೇ ಶಿಶುಮಾತೆಯರು.

೧೭೬. ಇವರಿಗೆ ಸ್ಕಂದನ ಪ್ರಸಾದದಿಂದ ಬಲಶಾಲಿಯೂ, ದುಸ್ಸಾಧ್ಯನೂ, ಕೆಂಪೇರಿದ ಕಣ್ಣುಗಳುಳ್ಳವನೂ, ಭಯಂಕರನೂ ಆದ ಒಬ್ಬ ಮಗನುಂಟಾದನು.

೧೭೭. ಇದಕ್ಕೇ ಅದ್ಭುತವಾದ ಸ್ಕಂದಮಾತೃಗಣವೆಂದೂ, ವೀರಾಷ್ಟಕ ವೆಂದೂ ಹೆಸರು. ಇದನ್ನು ಭಕ್ತಿಯಿಂದ ನಿತ್ಯವೂ ಪೂಜಿಸಲು ಸಕಲ ವಿಧಗಳಾದ ಅಪಸ್ಮಾರಾದಿ ರೋಗಗಳು ಸಂಭವಿಸುವುದಿಲ್ಲ.

೧೭೮. ಈ ಗಣವು ಸ್ಕಂದನ ಸಮೀಪದಲ್ಲಿಯೇ ನಿಂತಿತು. ಷಣ್ಮುಖ ಸ್ವಾಮಿಯು ಆಗ ಬಂಗಾರದ ಕವಚ, ಮಾಲೆಗಳನ್ನು ಧರಿಸಿ, ಪೀತಾಂಬರ ವನ್ನುಟ್ಟು ಮೂರು ಲೋಕಗಳನ್ನೂ ಬೆಳಗುತ್ತಿದ್ದನು.

ಯುವಾನಂ ಶ್ರೀಸ್ಸ್ವಯಂ ಭೇಜೇ ತಂ ಪ್ರಣಮ್ಯ ಶರೀರಿಣೀ ॥ ೧೭೯ ॥
ಶ್ರಿಯಾ ಜುಷ್ಟಂ ಚ ತಂ ಪ್ರಾಹುಃ ಸರ್ವೇ ದೇವಾಃ ಪ್ರಣಮ್ಯ ವೈ ।
ಹಿರಣ್ಯವರ್ಣ ಭದ್ರಂ ತೇ ಲೋಕಾನಾಂ ಶಂಕರೋ ಭವ ॥ ೧೮೦ ॥
ಭವಾನಿಂದ್ರೋಽಸ್ತು ನೋ ನಾಥ ತ್ರೈಲೋಕ್ಯಸ್ಯ ಹಿತಾಯ ವೈ ॥ ೧೮೧ ॥

ಸ್ಕಂದ ಉವಾಚ:—

ಕಿಮಿಂದ್ರಃ ಸರ್ವಲೋಕಾನಾಂ ಕರೋತೀಹ ಸುರೋತ್ತಮಾಃ ।
ಕಥಂ ದೇವಗಣಾಂಶ್ಚೈವ ಪಾತಿ ನಿತ್ಯಂ ಸುರೇಶ್ವರಃ ॥ ೧೮೨ ॥

ದೇವಾ ಊಚುಃ:—

ಇಂದ್ರೋ ದಿಶತಿ ಭೂತಾನಾಂ ಬಲಂ ತೇಜಃ ಪ್ರಜಾಃ ಸುಖಂ ।
ಪ್ರಜ್ಞಾಂ ಪ್ರಯಚ್ಛತಿ ತಥಾ ಸರ್ವಾನ್ದಾಯಾನ್ಸುರೇಶ್ವರಃ ॥ ೧೮೩ ॥
ದುರ್ವೃತ್ತಾನಾಂ ಸ ಹರತಿ ವೃತ್ತಸ್ಥಾನಾಂ ಪ್ರಯಚ್ಛತಿ ।
ಅನುಶಾಸ್ತಿ ಚ ಭೂತಾನಿ ಕಾರ್ಯೇಷು ಬಲವತ್ತರಃ ॥ ೧೮೪ ॥
ಅಸೂರ್ಯೇ ಚ ಭವೇತ್ಸೂರ್ಯಸ್ತಥಾಚಂದ್ರೇ ಚ ಚಂದ್ರಮಾಃ ।
ಭವತ್ಯಗ್ನಿಶ್ಚ ವಾಯುಶ್ಚ ಪೃಥಿವ್ಯಾಂ ಜೀವಕಾರಣಂ ॥ ೧೮೫ ॥

---

೧೭೯–೧೮೧. ಲಕ್ಷ್ಮಿಯು ತಾನೇ ಸಶರೀರಿಣಿಯಾಗಿ ಯುವಕನಾದ ಆತನನ್ನು ಸೇರಿದಳು. ಇಂತು ಶ್ರೀಸಹಿತನಾದ ಆತನನ್ನು ಕುರಿತು ಸಕಲ ದೇವತೆಗಳು ನಮಸ್ಕರಿಸಿ ಹೇಳತೊಡಗಿದರು. "ಎಲೈ ಹೇಮವರ್ಣನೆ! ನಿನಗೆ ಮಂಗಳವಾಗಲಿ. ಸಕಲ ಲೋಕಗಳಿಗೂ ಸುಖವನ್ನುಂಟುಮಾಡು. ತ್ರಿಲೋಕಗಳ ಹಿತಕ್ಕೋಸ್ಕರ ನೀನು ನಮಗೆಲ್ಲರಿಗೂ ನಾಯಕನಾಗು."

೧೮೨. ಸ್ಕಂದನು ಹೇಳುತ್ತಾನೆ:—"ಎಲೈ ದೇವತೆಗಳಿರಾ! ಸಕಲ ಲೋಕಗಳಿಗೂ ಒಡೆಯನಾದ ಮಹೇಂದ್ರನು ಈಗ ಏನನ್ನು ಮಾಡುತ್ತಿರುವನು? ನಿತ್ಯದಲ್ಲಿಯೂ ದೇವಗಣಗಳನ್ನು ಹೇಗೆ ಪಾಲಿಸುತ್ತಿರುವನು?"

೧೮೩–೧೮೫. ದೇವತೆಗಳು ಹೇಳುತ್ತಾರೆ:—"ಮಹೇಂದ್ರನೇ! ಸರ್ವ ಭೂತಗಳಿಗೂ ಬಲ, ತೇಜಸ್ಸು, ಸಂತಾನ, ಸುಖ, ಬುದ್ಧಿಶಕ್ತಿ, ಐಶ್ವರ್ಯ ಮುಂತಾದುವುಗಳನ್ನು ಕೊಡುತ್ತಾನೆ. ದುರ್ವಿನೀತರಾದವರಿಗೆ ಇವುಗಳೆಲ್ಲವನ್ನೂ ಕಳೆಯುತ್ತಾನೆ. ಸ್ವಧರ್ಮನಿರತರಾದವರಿಗೆ ಇವುಗಳನ್ನುಂಟುಮಾಡುತ್ತಾನೆ. ಬಲವಂತನಾಗಿ ಸಕಲ ಪ್ರಾಣಿಗಳನ್ನೂ ಅವವುಗಳ ಕಾರ್ಯಗಳಲ್ಲಿ ನೆಲೆಗೊಳಿಸುತ್ತಾನೆ. ಸೂರ್ಯನಿಲ್ಲದಾಗ ಸೂರ್ಯನೂ, ಚಂದ್ರನಿಲ್ಲದ ಸಮಯದಲ್ಲಿ ಚಂದ್ರನೂ, ಅಂತೆಯೇ ಅಗ್ನಿಯೂ, ವಾಯುವೂ ಆಗಿ ಭೂಲೋಕದಲ್ಲಿ ಜೀವನಕ್ಕೆ ಕಾರಣಭೂತನಾಗಿರುವನು.

ಏತದಿಂದ್ರೇಣ ಕರ್ತವ್ಯಮಿಂದ್ರೋ ಹಿ ವಿಪುಲಂ ಬಲಂ ।
ತ್ವಂ ಚೇಂದ್ರೋ ಭವ ನೋ ವೀರ ತಾರಕಂ ಜಹಿ ತೇ ನಮಃ ॥ ೧೮೬ ॥

ಇಂದ್ರ ಉವಾಚ :—

ತ್ವಂ ಭವೇಂದ್ರೋ ಮಹಾಬಾಹೋ ಸರ್ವೇಷಾಂ ನಃ ಸುಖಾವಹಃ ।
ಪ್ರಣಮ್ಯ ಪ್ರಾರ್ಥಯೇ ಸ್ಕಂದ ತಾರಕಂ ಜಹಿ ರಕ್ಷ ನಃ ॥ ೧೮೭ ॥

ಸ್ಕಂದ ಉವಾಚ :—

ಶಾಧಿ ತ್ವಮೇವ ತ್ರೈಲೋಕ್ಯಂ ಭವಾನಿಂದ್ರೋಽಸ್ತು ಸರ್ವದಾ ।
ಕರಿಷ್ಯೇ ಚೇಂದ್ರಕರ್ಮಾಣಿ ನ ಮಮೇಂದ್ರತ್ವಮೀಪ್ಸಿತಂ ॥ ೧೮೮ ॥
ತ್ವಮೇವ ರಾಜಾ ಭದ್ರಂ ತೇ ತ್ರೈಲೋಕ್ಯಸ್ಯ ಮಮೈವ ಚ ।
ಕರೋಮಿ ಕಿಂ ಚ ತೇ ಶಕ್ರ ಶಾಸನಂ ಬ್ರೂಹಿ ತನ್ಮಮ ॥ ೧೮೯ ॥

ಇಂದ್ರ ಉವಾಚ :—

ಯದಿ ಸತ್ಯಮಿದಂ ವಾಕ್ಯಂ ನಿಶ್ಚಯಾದ್ಭಾಷಿತಂ ತ್ವಯಾ ।
ಅಭಿಷಿಚ್ಯಸ್ವ ದೇವಾನಾಂ ಸೈನಾಪತ್ಯೇ ಮಹಾಬಲ ।
ಅಹಮಿಂದ್ರೋ ಭವಿಷ್ಯಾಮಿ ತವ ವಾಕ್ಯಾದ್ಯಶೋಽಸ್ತು ತೇ ॥ ೧೯೦ ॥

---

೧೮೬. ಇವೆಲ್ಲವೂ ಇಂದ್ರನ ಕರ್ತವ್ಯಗಳು. ಇಂದ್ರನೇ ನಮಗೆಲ್ಲ ಬಲವು. ಎಲೈ ವೀರನೆ! ನೀನೇ ನಮಗೆ ಇಂದ್ರನಾಗಿ ತಾರಕಾಸುರನನ್ನು ಸಂಹರಿಸು. ನಿನಗೆ ನಮಸ್ಕರಿಸುವೆವು.''

೧೮೭. ಇಂದ್ರನು ಹೇಳುತ್ತಾನೆ:—'' ಎಲೈ ಪರಾಕ್ರಮಿಯೆ! ನೀನೇ ನಮಗೆ ಇಂದ್ರನಾಗಿ ನಮ್ಮೆಲ್ಲರಿಗೂ ಸುಖವನ್ನುಂಟುಮಾಡು. ನಮಸ್ಕಾರ ಪೂರ್ವಕವಾಗಿ ಪ್ರಾರ್ಥಿಸುವೆನು. ತಾರಕಾಸುರನನ್ನು ವಧಿಸಿ ನಮ್ಮನ್ನು ಕಾಪಾಡು.''

೧೮೮–೧೮೯. ಸ್ಕಂದನು ಹೇಳುತ್ತಾನೆ:—'' ಎಲೈ ಮಹೇಂದ್ರನೆ! ನೀನೇ ತ್ರಿಲೋಕಗಳನ್ನೂ ಆಳುತ್ತಿರು. ಸರ್ವಕಾಲಕ್ಕೂ ನೀನೇ ಇಂದ್ರನಾಗಿ ಸ್ಥಿರವಾಗಿ ನೆಲಸಿರು. ನಾನು ಮಹೇಂದ್ರನ ಕೆಲಸಗಳೆಲ್ಲವನ್ನೂ ಮಾಡುವೆನಾದರೂ ನನಗೆ ಇಂದ್ರಪದವಿಯಲ್ಲಿ ಅಭಿಲಾಷೆಯಿಲ್ಲ. ನೀನೇ ರಾಜನಾಗಿರು. ನಿನಗೆ ಮಂಗಳ ವುಂಟಾಗಲಿ. ಈಗ ನೀನು ತ್ರಿಲೋಕಗಳಿಗೂ ನನಗೂ ಒಡೆಯನು. ನಿನ್ನ ಅಪ್ಪಣೆಯಂತೆ ನಡೆಸುತ್ತೇನೆ. ನನಗೆ ಆಜ್ಞೆಯನ್ನು ಮಾಡು.''

೧೯೦. ಇಂದ್ರನು ಹೇಳುತ್ತಾನೆ:—'' ಎಲೈ ಮಹಾ ಬಲಿಷ್ಠನಾದ ಷಣ್ಮುಖನೇ! ನೀನು ದೃಢಮನಸ್ಸಿನಿಂದ ನುಡಿದ ಈ ವಾಕ್ಯವು ಸತ್ಯವೇ ಆಗಿದ್ದರೆ ಸಕಲದೇವತೆಗಳ ಸೈನ್ಯಗಳಿಗೂ ಸೇನಾಪತಿಯ ಸ್ಥಾನದಲ್ಲಿ ನಿನಗೆ ಅಭಿಷೇಕ ವಾಗಲಿ. ನಿನ್ನ ವಾಕ್ಯದಂತೆ ನಾನೇ ಇಂದ್ರನಾಗಿರುತ್ತೇನೆ. ನಿನ್ನ ಕೀರ್ತಿಯು ಲೋಕಗಳಲ್ಲಿ ಬೆಳಗಲಿ.''

ಸ್ಕಂದ ಉವಾಚ :—

**ದಾನವಾನಾಂ ವಿನಾಶಾಯ ದೇವಾನಾಮರ್ಥಸಿದ್ಧಯೇ ।**
**ಗೋಬ್ರಾಹ್ಮಣಸ್ಯ ಚಾರ್ಥಾಯ ಏವಮಸ್ತು ವಚಸ್ತವ ॥ ೧೯೧ ॥**
**ಇತ್ಯುಕ್ತೇ ಸುಮಹಾನಾದಃ ಸುರಾಣಾಮಭ್ಯಜಾಯತ ।**
**ಭೂತಾನಾಂ ಚಾಪಿ ಸರ್ವೇಷಾಂ ತ್ರೈಲೋಕ್ಯಾಕಂಪಕಾರಕಃ ॥ ೧೯೨ ॥**
**ಜಯೇತಿ ತುಷ್ಟುವುಶ್ಚೈನಂ ವಾದಿತ್ರಾಣ್ಯಭ್ಯವಾದಯನ್ ।**
**ನನೃತುಸ್ತುಷ್ಟುವುಶ್ಚೈನಂ ಕರಾಘಾತಾಂಶ್ಚ ಚಕ್ರಿರೇ ॥ ೧೯೩ ॥**
**ತೇನ ಶಬ್ದೇನ ಮಹತಾ ವಿಸ್ಮಿತಾ ನಗನಂದಿನೀ ।**
**ಶಂಕರಂ ಪ್ರಾಹ ಕೋ ದೇವ ನಾದೋಽಯಮತಿವರ್ತತೇ ॥ ೧೯೪ ॥**

ರುದ್ರ ಉವಾಚ :—

**ಅದ್ಯ ನೂನಂ ಪ್ರಹೃಷ್ಟಾನಾಂ ಸುರಾಣಾಂ ವಿವಿಧಾ ಗಿರಃ ।**
**ಶ್ರೂಯಂತೇ ಚ ತಥಾ ದೇವಿ ಯಥಾ ಜಾತಃ ಸುತಸ್ತವ ॥ ೧೯೫ ॥**
**ಗವಾಂ ಚ ಬ್ರಾಹ್ಮಣಾನಾಂ ಚ ಸಾಧ್ವೀನಾಂ ಚ ದಿವೌಕಸಾಂ ।**
**ಮಾರ್ಜಯಿಷ್ಯತಿ ಚಾಶ್ರೂಣಿ ಪುತ್ರಸ್ತೇ ಪುಣ್ಯವತ್ಯಪಿ ॥ ೧೯೬ ॥**

---

೧೯೧. ಸ್ಕಂದನು ಹೇಳುತ್ತಾನೆ:—"ಸಮಸ್ತ ರಾಕ್ಷಸವಿನಾಶವನ್ನು ಮಾಡುವುದಕ್ಕೂ, ದೇವತೆಗಳ ಅಭೀಷ್ಟಗಳನ್ನು ನೆರವೇರಿಸುವುದಕ್ಕೂ, ಗೋಬ್ರಾಹ್ಮಣರ ಸಂರಕ್ಷಣಾರ್ಥವಾಗಿಯೂ ನಿನ್ನ ವಾಕ್ಯದಂತೆಯೇ ನಡೆಯಲಿ."

೧೯೨. ಇಂತು ಮಹೇಂದ್ರನ ಆಜ್ಞೆಯನ್ನು ಸ್ಕಂದನು ಅಂಗೀಕರಿಸಲು ದೇವತೆಗಳಿಂದಲೂ ಇತರ ಪ್ರಾಣಿಗಳಿಂದಲೂ ಮೂರು ಲೋಕಗಳನ್ನೂ ನಡುಗಿಸುವಂತಹ ಭಯಂಕರವಾದ ಜಯಘೋಷವು ಮಾಡಲ್ಪಟ್ಟಿತು.

೧೯೩. ದೇವತೆಗಳೆಲ್ಲರೂ ಜಯಜಯಕಾರಗಳನ್ನು ಮಾಡಿದರು. ಸ್ತೋತ್ರಗಳನ್ನು ಪಠಿಸಿದರು. ದುಂದುಭಿಗಳೇ ಮೊದಲಾದ ವಾದ್ಯಗಳನ್ನು ಬಾಜಿಸಿದರು. ನರ್ತನಗಳನ್ನು ಮಾಡಿದರು. ಕೈಗಳಿಂದ ಚಪ್ಪಾಳೆಗಳನ್ನು ಹೊಡೆದರು.

೧೯೪. ಆ ಮಹಾ ಶಬ್ದದಿಂದ ವಿಸ್ಮಯಗೊಂಡ ಪಾರ್ವತಿಯು ಪರಮೇಶ್ವರನನ್ನು ಕುರಿತು, "ಎಲೈ ದೇವನೆ! ಇಂತು ಮೂರು ಲೋಕಗಳನ್ನೂ ತುಂಬುತ್ತಿರುವ ಈ ಶಬ್ದವೇನು?" ಎಂದು ಕೇಳಿದಳು.

೧೯೫. ಶಂಕರನು ಹೇಳುತ್ತಾನೆ:—"ಎಲೌ ದೇವಿಯೆ! ಈಗ ನಮಗೆ ಸಂತೋಷಗೊಂಡು ಕುಣಿಯುತ್ತಿರುವ ದೇವತೆಗಳ ನಾನಾ ವಿಧಗಳಾದ ಹರ್ಷಧ್ವನಿಗಳೇ ನಿಜವಾಗಿ ಕೇಳುತ್ತಿರುವುವು. ನಿನಗೆ ಪುತ್ರನುಂಟಾಗಿರುವನೆಂದು ತಿಳಿ.

೧೯೬. ಗೋವುಗಳಿಗೂ, ಬ್ರಾಹ್ಮಣರಿಗೂ, ಪತಿವ್ರತೆಯರಿಗೂ, ದೇವತೆಗಳಿಗೂ, ನಿನ್ನ ಪುತ್ರನು ರಾಕ್ಷಸಬಾಧೆಯಿಂದುಂಟಾದ ಕಣ್ಣೀರುಗಳನ್ನೊರಸುವನು. ನೀನೇ ಪುಣ್ಯವತಿಯು."

ಏವಂ ವದತಿ ಸಾ ದೇವೀ ದ್ರಷ್ಟುಂ ತಮುತ್ಸುಕಾಭವತ್ ।
ಶಂಕರಶ್ಚ ಮಹಾತೇಜಾ ಪುತ್ರಸ್ನೇಹಾಧಿಕೋ ಯತಃ ॥ ೧೯೭ ॥
ವೃಷಭಂ ತತ ಆರುಹ್ಯ ದೇವ್ಯಾ ಸಹ ಸಮುತ್ಸುಕಃ ।
ಸಗಣೋ ಭವ ಆಗಚ್ಛತ್ಪುತ್ರದರ್ಶನಲಾಲಸಃ ॥ ೧೯೮ ॥
ತತೋ ಬ್ರಹ್ಮಾ ಮಹಾಸೇನಂ ಪ್ರಜಾಪತಿರಥಾಬ್ರವೀತ್ ।
ಅಭಿಗಚ್ಛ ಮಹಾದೇವಂ ಪಿತರಂ ಮಾತರಂ ಪ್ರಭೋ ।
ಅನಯೋರ್ವೀರ್ಯಸಂಯೋಗಾತ್ತವೋತ್ಪತ್ತಿಸ್ತು ಪ್ರಾಥಮೀ ॥ ೧೯೯ ॥
ಏವಮಸ್ತ್ವಿತಿ ಚಾಪ್ಯುಕ್ತ್ವಾ ಮಹಾಸೇನೋ ಮಹೇಶ್ವರಂ ।
ಅಪೂಜಯದಮೇಯಾತ್ಮಾ ಪಿತರಂ ಮಾತರಂ ಚ ತಾಂ ॥ ೨೦೦ ॥
ತತಸ್ತಮಾಲಿಂಗ್ಯ ಸುತಂ ಚಿರಂ ಸಂಯೋಜ್ಯ ಚಾಶಿಷಃ ।
ಚಿರಂ ಜಹೃಷತುರ್ಶ್ಚೋಭೌ ಪಾರ್ವತೀಪರಮೇಶ್ವರೌ ॥ ೨೦೧ ॥
ಸಿದ್ಧಸಾರಸ್ಯ ತತ್ತ್ವಂ ಚ ದದೌ ತುಷ್ಟೋಽಸ್ಯ ಶಂಕರಃ ।
ದೇವೀ ಪ್ರಕೃತಿ ಮೋಕ್ಷಂ ಚ ತುಷ್ಟಾ ಹರ್ಷಪರಿಪ್ಲುತಾ ॥ ೨೦೨ ॥

---

೧೯೭. ಶಂಕರನ ಈ ಮಾತುಗಳನ್ನು ಕೇಳಿ ದೇವಿಯು ಮಗನನ್ನು ನೋಡಲು ಕುತೂಹಲವುಳ್ಳವಳಾದಳು. ಶಂಕರನೂ ಸಹ ಪುತ್ರವಾತ್ಸಲ್ಯದಿಂದ ಕೂಡಿದವನಾದನು.

೧೯೮. ಆಗ ಮಹಾದೇವನು ಪಾರ್ವತಿಯೊಡನೆ ವೃಷಭವನ್ನೇರಿ ತನ್ನ ಗಣಗಳಿಂದ ಪರಿವೃತನಾಗಿ ಮಗನನ್ನು ನೋಡುವ ಔತ್ಸುಕ್ಯದಿಂದ ನಡೆತಂದನು.

೧೯೯. ಆಗ ಪ್ರಜೇಶ್ವರನಾದ ಬ್ರಹ್ಮನು ಮಹಾಸೇನನಾದ ಷಣ್ಮುಖನನ್ನು ಕುರಿತು "ಎಲೈ ಸ್ಕಂದನೆ! ನಿನ್ನ ತಂದೆಯಾದ ಮಹಾದೇವನಿಗೂ ತಾಯಿಯಾದ ಪಾರ್ವತೀ ದೇವಿಗೂ ನಮಸ್ಕರಿಸು. ಪ್ರಥಮದಲ್ಲಿ ಇವರಿಬ್ಬರ ವೀರ್ಯಗಳ ಸಂಯೋಗದಿಂದಲೇ ನಿನ್ನ ಜನನವುಂಟಾಯಿತು" ಎಂದನು.

೨೦೦. ಹಾಗೆಯೇ ಆಗಲೆಂದು ಬ್ರಹ್ಮನಿಗೆ ಹೇಳಿ ಆತನು ಅಪ್ರಮೇಯ ಚರಿತನಾಗಿ ತಂದೆಯಾದ ಮಹೇಶ್ವರನನ್ನೂ ತಾಯಿಯಾದ ದೇವಿಯನ್ನೂ ವಿಧ್ಯುಕ್ತರೀತಿಯಿಂದ ಪೂಜಿಸಿದನು.

೨೦೧. ಆಗ ಪಾರ್ವತೀ ಪರಮೇಶ್ವರರಿಬ್ಬರೂ ಮಗನನ್ನು ಅಪ್ಪಿಕೊಂಡು ಬಹುಕಾಲ ಆಶೀರ್ವಾದಗಳನ್ನು ಮಾಡುತ್ತ ಅತ್ಯಂತ ಸಂತೋಷಗೊಂಡರು.

೨೦೨. ಶಂಕರನು ಸಂತೋಷದಿಂದ ಆತನಿಗೆ ಪುರುಷಾರ್ಥಪ್ರದವಾದ ತತ್ತ್ವಜ್ಞಾನವನ್ನುಪದೇಶಿಸಿದನು. ಪಾರ್ವತಿಯೂ ಹರ್ಷದಿಂದ ತುಂಬಿದವಳಾಗಿ ಪ್ರಕೃತಿಯ ಬಂಧದಿಂದ ಮೋಕ್ಷವನ್ನು ಅನುಗ್ರಹಿಸಿದಳು.

ಏತಸ್ಮಿನ್ನೇವ ಕಾಲೇ ತು ಷಡ್ದೇವ್ಯಸ್ತಂ ಸಮಾಗಮನ್ ।
ಋಷಿಭಿಸ್ತಾಃ ಪರಿತ್ಯಕ್ತಾಸ್ತಂ ಪುತ್ರೇತಿ ಜಗುಸ್ತದಾ ॥ ೨೦೩ ॥
ಪಾರ್ವತೀ ಚ ತತಃ ಪ್ರಾಹ ಮಮ ಪುತ್ರೋ ನ ವಸ್ತ್ವಯಂ ॥ ೨೦೪ ॥
ಸ್ವಾಹಾ ಮಮೇತಿ ಚ ಪ್ರಾಹ ಪಾವಕಶ್ಚ ಮಮೇತಿ ಚ ।
ರುದ್ರೋ ಮಮೇತಿ ಚ ಪ್ರಾಹ ಮಮ ದೇವನದೀತಿ ಚ ॥ ೨೦೫ ॥
ಚಕ್ರುಸ್ತೇ ಕಲಹಂ ಘೋರಂ ವಿವದಂತಃ ಪರಸ್ಪರಂ ।
ಪುತ್ರಸ್ನೇಹೋ ಹಿ ಬಲವಾನ್ಪಾರ್ಥ ಕಿಂ ಕಿಂ ನ ಕಾರಯೇತ್ ॥ ೨೦೬ ॥
ತತಸ್ತಾನ್ಪ್ರಹಸನ್ನಾಹ ವಿವಾದೋ ಯುಜ್ಯತೇ ನ ಚ ।
ಸರ್ವೇಷಾಂ ವೋ ಗುಹಃ ಪುತ್ರಃ ಮತ್ತೋ ವೈ ವ್ರಿಯತಾಂ ವರಃ ॥೨೦೭॥
ತತಃ ಪ್ರಾಹುಶ್ಚ ಷಡ್ದೇವ್ಯಃ ಸ್ವರ್ಗೋ ನೋ ಹ್ಯಕ್ಷಯೋ ಭವೇತ್ ।
ತಥೇತಿ ತಾ ಗುಹಃ ಪ್ರಾಹ ಶಕ್ರಸ್ತತ್ರಾಂತರೇಽಬ್ರವೀತ್ ॥ ೨೦೮ ॥
ರೋಹಿಣ್ಯಾಶ್ಚಾನುಜಾ ಸ್ಕಂದಸ್ಪರ್ಧಮಾನಾಭಿಜಿತ್ಫಲಾ ।
ಇಚ್ಛಂತೀ ಜ್ಯೇಷ್ಠತಾಂ ದೇವೀ ಪೃಥಕ್ತ್ವಂ ಚ ತಪೋರತಾ ।
ತತಃ ಪ್ರಭೃತಿ ಮೂಢೋಽಸ್ಮಿ ತತ್ಸ್ಥಾನೇ ಸ್ಥಾಪಯ ಪ್ರಭೋ ॥ ೨೦೯ ॥

---

೨೦೩. ಅದೇ ಸಮಯಕ್ಕೆ ಸರಿಯಾಗಿ ಗಂಡಂದಿರಿಂದ ಪರಿತ್ಯಕ್ತರಾದ ಆರುಜನ ಋಷಿಪತ್ನಿಯರೂ ಅಲ್ಲಿಗೆ ಬಂದು ಷಣ್ಮುಖನನ್ನು ಮಗನೆಂದು ಕರೆಯ ತೊಡಗಿದರು.

೨೦೪–೨೦೫. ಪಾರ್ವತಿಯು "ಇವನು ನನ್ನ ಮಗನೇ ಹೊರತು ನಿಮ್ಮ ಮಗನಲ್ಲ" ಎಂದಳು. ಸ್ವಾಹಾದೇವಿಯು ತನ್ನ ಮಗನೆಂದಳು. ಅಗ್ನಿಯು ತನ್ನ ಮಗನೆಂದನು. ಶಂಕರನು ತನ್ನ ಮಗನೆಂದು ಹೇಳಿಕೊಂಡನು. ದೇವ ನದಿಯಾದ ಗಂಗೆಯು ತನ್ನ ಮಗನೆಂದು ವಾದಿಸಿದಳು.

೨೦೬. ಇಂತು ಪರಸ್ಪರ ವಿವಾದಗಳನ್ನು ಮಾಡುತ್ತ ಘೋರವಾದ ಕಲಹ ದಲ್ಲಿ ಪ್ರವೃತ್ತರಾದರು. ಎಲೈ ಪಾರ್ಥನೆ! ಬಲವತ್ತರವಾದ ಪುತ್ರಸ್ನೇಹ ವೆಂಬುದು ಏನನ್ನು ತಾನೆ ಮಾಡಿಸಲಾರದು?

೨೦೭. ಆಗ ಗುಹನು ಗಟ್ಟಿಯಾಗಿ ನಗುತ್ತ ಅವರೆಲ್ಲರನ್ನೂ ಕುರಿತು "ನಿಮ್ಮ ನಿಮ್ಮಲ್ಲಿ ವಿವಾದವು ಯುಕ್ತವಾದುದಲ್ಲ. ನಾನು ನಿಮ್ಮೆಲ್ಲರ ಮಗನೂ ಅಹುದು. ನಿಮಗೆ ಬೇಕಾದ ವರಗಳನ್ನು ನನ್ನಲ್ಲಿ ಕೇಳಿರಿ" ಎಂದನು.

೨೦೮–೨೦೯. ಆಗ ಋಷಿಪತ್ನಿಯರು ತಮಗೆ ಶಾಶ್ವತವಾದ ಸ್ವರ್ಗ ಲೋಕವು ಬೇಕೆಂದು ಬಯಸಲು ಸ್ಕಂದನು ಹಾಗೆಯೇ ಆಗಲೆಂದನು. ಅಷ್ಟ ರಲ್ಲಿಯೇ ಇಂದ್ರನು "ಎಲೈ ಸ್ಕಂದನೆ! ರೋಹಿಣಿಯ ತಂಗಿಯಾದ ಅಭಿಜಿತಳು ಇತರ ನಕ್ಷತ್ರಗಳೊಡನೆ ಸ್ಪರ್ಧೆಯಿಂದ ಹಟಮಾಡಿಕೊಂಡು ತನಗೆ ಜ್ಯೇಷ್ಠತ್ವವೂ

ತತಸ್ತಥೇತಿ ಚ ಪ್ರೋಕ್ತೇ ಕೃತ್ತಿಕಾಸ್ತಾ ದಿವಂ ಗತಾಃ ।
ನಕ್ಷತ್ರಂ ಸಪ್ತಶೀರ್ಷಾಭಂ ಭಾತಿ ತದ್ವಹ್ನಿದೈವತಂ ॥ ೨೧೦ ॥
ಅಥೈನಮಬ್ರವೀತ್ಸ್ವಾಹಾ ಪ್ರಿಯಾ ನಾಹಂ ಮಹಾರ್ಚಿಷಃ ।
ತದಗ್ನೇಃ ಪ್ರಿಯತಾಂ ದೇಹಿ ಸಹವಾಸಂ ಸದೈವ ಚ ॥ ೨೧೧ ॥

ಸ್ಕಂದ ಉವಾಚ :—

ಹವ್ಯಂ ಕವ್ಯಂ ಚ ಯತ್ಕಿಂಚಿದ್ದ್ವಿಜಾ ಹೋಷ್ಯಂತಿ ಪಾವಕೇ ।
ತತ್ತೇ ನಾಮ್ನಾ ಪ್ರದಾಸ್ಯಂತಿ ವಾಸಃ ಸಾರ್ಧಂ ಭವೇತ್ತವ ॥ ೨೧೨ ॥
ಪಾವಕಃ ಪ್ರಾರ್ಥಯಾಮಾಸ ಯಜ್ಞಭಾಗಾನ್ಪುನಃ ಸುತಾನ್ ॥ ೨೧೩ ॥
ಸ ಚಾಪ್ಯಾಹಾದ್ಯಪ್ರಭೃತಿ ಯಜ್ಞಭಾಗಾನವಾಪ್ನುಹಿ ।
ಇತರೇ ಪ್ರಾರ್ಥಯಾಮಾಸುಃ ಖ್ಯಾತೋ ನಸ್ತ್ವಂ ಸುತೋ ಭವ ।
ಏವಮೇವೇತಿ ತಾನಾಹ ಸ್ಕಂದಸ್ತದ್ಧಿ ಸುದುರ್ಲಭಂ ॥ ೨೧೪ ॥
ತತಸ್ತಂ ಯೋಗಿನಃ ಸರ್ವೇ ಸಂಭೂಯ ಸನಕಾದಯಃ ।
ಅಭ್ಯಷಿಂಚಂತ ತಂ ತಸ್ಮಿನ್ಯೋಗಿನಾಮಾಧಿಪತ್ಯಕೇ ॥ ೨೧೫ ॥

---

ಬೇರೆ ಸ್ಥಾನವೂ ಬೇಕೆಂದು ತಪಸ್ಸನ್ನು ಮಾಡುತ್ತಿರುವಳು. ಅಂದಿನಿಂದ ನಾನು ಮೂಢವಾಗಿರುತ್ತೇನೆ. ಆ ಸ್ಥಾನದಲ್ಲಿ ಇವರನ್ನು ನಿಲ್ಲಿಸು" ಎಂದು ಹೇಳಿದನು.

೨೧೦. ಅಂತೆಯೇ ಆಗಬಹುದೆಂದು ಸ್ಕಂದನು ಒಪ್ಪಲು ಅವರು ಕೃತ್ತಿಕೆಯರಾಗಿ ಆಕಾಶಕ್ಕೇರಿದರು. ಏಳು ತಲೆಗಳುಳ್ಳದಂತೆ ಕಾಣುತ್ತ ಅಗ್ನಿದೇವತ್ಮಾಕವಾದ ಆ ನಕ್ಷತ್ರವು ಇಂದಿಗೂ ಗಗನದಲ್ಲಿ ಮಿರುಗುತ್ತಿರುವುದು.

೨೧೧. ಬಳಿಕ ಸ್ವಾಹಾದೇವಿಯು ಬಳಿಸಾರ್ದು "ನಾನು ನನ್ನ ಪತಿಯಾದ ಅಗ್ನಿದೇವನಿಗೆ ಪ್ರೀತಿಪಾತ್ರಳಲ್ಲ. ಆದುದರಿಂದ ನನಗೆ ಅಗ್ನಿಯ ಪ್ರೀತಿಯನ್ನೂ ಸತ್ಯಸಹವಾಸವನ್ನೂ ಕೊಡು" ಎಂದು ಬೇಡಿದಳು.

೨೧೨. ಸ್ಕಂದನು ಹೇಳುತ್ತಾನೆ:—"ಎಲೌ ದೇವಿಯೆ! ಬ್ರಾಹ್ಮಣರು ಅಗ್ನಿಯಲ್ಲಿ ಯಾವ ಹವ್ಯಕವ್ಯಗಳನ್ನು ಆಹುತಿಕೊಟ್ಟರೂ ನಿನ್ನ ಹೆಸರಿನಿಂದಲೇ ಕೊಡಲ್ಪಡುವುದು. ನಿನಗೆ ಪತಿಯೊಡನೆ ಸಹವಾಸವೂ ಲಭಿಸುವುದು."

೨೧೩–೨೧೪. ಅಗ್ನಿದೇವನು ಯಜ್ಞಗಳಲ್ಲಿ ಹವಿರ್ಭಾಗವನ್ನೂ ಮಕ್ಕಳನ್ನೂ ಪ್ರಾರ್ಥಿಸಲು ಸ್ಕಂದನು "ಇಂದಿನಿಂದ ನಿನಗೆ ಯಜ್ಞಭಾಗವು ಸಲ್ಲುವಂತಾಗಲಿ" ಎಂದನುಗ್ರಹಿಸಿದನು. ಮಿಕ್ಕವರು "ನೀನು ನಮ್ಮೆಲ್ಲರಿಗೂ ಪ್ರಖ್ಯಾತನಾದ ಮಗನಾಗಿರು" ಎಂದು ಬೇಡಿಕೊಂಡರು. ಅಂತೆಯೇ ಆಗಬಹುದೆಂದು ಆತನೂ ಒಪ್ಪಿಕೊಂಡನು. ಇದೇ ಅತ್ಯಂತ ದುರ್ಲಭವಾದ ವರವು.

೨೧೫. ಬಳಿಕ ಸನಕಾದಿ ಮಹರ್ಷಿಗಳೆಲ್ಲರೂ ಒಟ್ಟುಗೂಡಿ ಆ ಪರ್ವತದಲ್ಲಿಯೇ ಸ್ಕಂದನಿಗೆ ಯೋಗರಾಜ್ಯದ ಪಟ್ಟಾಭಿಷೇಕವನ್ನು ಮಾಡಿದರು.

ಯೋಗೀಶ್ವರಮಿತಿ ಪ್ರಾಹುಸ್ತತಸ್ತಂ ಯೋಗಿನಸ್ತಥಾ ।
ಜಹೃಷುರ್ದೇವತಾಶ್ಚೈವ ನಾನಾವಾದ್ಯಾನ್ಯವಾದಯನ್ ॥ ೨೧೬ ॥
ಅಭಿಷಿಕ್ತೇನ ತೇನಾಸೌ ಶುಶುಭೇ ಶ್ವೇತಪರ್ವತಃ ।
ಆದಿತ್ಯೇನೇವಾಂಶುಮತಾ ಸುರಮ್ಯ ಉದಯಾಚಲಃ ॥ ೨೧೭ ॥
ತತೋ ದೇವಾಃ ಸಗಂಧರ್ವಾ ನೃತ್ಯಂತ್ಯಪ್ಸರಸಸ್ತಥಾ ।
ಹೃಷ್ಟಾನಾಂ ಸರ್ವಭೂತಾನಾಂ ಶ್ರೂಯತೇ ನಿನದೋ ಮಹಾನ್ ॥ ೨೧೮ ॥
ಏವಂ ಸೇಂದ್ರಂ ಜಗತ್ಸರ್ವಂ ಶ್ವೇತಪರ್ವತಸಂಸ್ಥಿತಂ ।
ಪ್ರಹೃಷ್ಟಂ ಪ್ರೇಕ್ಷ್ಯ ತಂ ಸ್ಕಂದಂ ನ ಚ ತೃಪ್ಯತಿ ದರ್ಶನಾತ್ ॥ ೨೧೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ಕುಮಾರೇಶಮಾಹಾತ್ಮ್ಯೇ ಸ್ಕಂದಕುಮಾರಸ್ಯ ಸರ್ವದೇವಸೈನ್ಯಾಧಿಪತ್ಯಾಭಿಷೇಕೋತ್ಸವವರ್ಣನಂ" ನಾಮ ಏಕೋನತ್ರಿಂಶೋಽಧ್ಯಾಯಃ

---

೨೧೬. ಬಳಿಕ ಯೋಗಿಗಳೆಲ್ಲರೂ ಆತನನ್ನು ಯೋಗೀಶ್ವರನೆಂದು ಕರೆದರು. ದೇವತೆಗಳೆಲ್ಲರೂ ಸಂತೋಷಗೊಂಡು ವಾದ್ಯಗಳನ್ನು ಮೊಳಗಿಸಿದರು.

೨೧೭. ಕಾಂತಿಯುಕ್ತನಾದ ಸೂರ್ಯನಿಂದಲಂಕೃತವಾಗಿ ಮನೋಹರವಾದ ಉದಯಾಚಲದಂತೆ ಅಭಿಷಿಕ್ತನಾದ ಷಣ್ಮುಖಸ್ವಾಮಿಯಿಂದ ಆ ಶ್ವೇತ ಪರ್ವತವು ಕಂಗೊಳಿಸುತ್ತಿದ್ದಿತು.

೨೧೮. ಆಗ ದೇವತೆಗಳೂ, ಗಂಧರ್ವರೂ, ಅಪ್ಸರಸ್ತ್ರೀಯರೂ ನರ್ತನ ಮಾಡತೊಡಗಿದರು. ಸಂತೋಷದಿಂದ ಕೂಡಿದ ಸಕಲ ಪ್ರಾಣಿಗಳ ಗರ್ಜನೆಗಳು ದೊಡ್ಡದಾಗಿ ಕೇಳುತ್ತಿದ್ದುವು.

೨೧೯. ಇಂತು ಇಂದ್ರನೊಡನೆ ಶ್ವೇತಪರ್ವತದಲ್ಲಿ ನಿಂತು ಸಂತುಷ್ಟಾಂತರಂಗನಾದ ಸ್ಕಂದನನ್ನು ಕಂಡು ಸಕಲ ಜಗತ್ತೂ ತೃಪ್ತಿಯನ್ನು ಹೊಂದಲಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ಕುಮಾರೇಶ ಮಾಹಾತ್ಮ್ಯ–ಸ್ಕಂದಕುಮಾರನ ಸರ್ವದೇವ ಸೈನ್ಯಾಧಿಪತ್ಯಾಭಿಷೇಕ ವರ್ಣನ"ವೆಂಬ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಂಶೋಽಧ್ಯಾಯಃ

## ಕುಮಾರೇಶ ಮಹಾತ್ಮ್ಯೇ ಕಾರ್ತಿಕೇಯಸ್ಯ ಸೇನಾನಿತ್ವೇಽಭಿಷೇಕ ವರ್ಣನಂ

ನಾರದ ಉವಾಚ :—

ತತಃ ಸ್ಕಂದಃ ಸುರೈಃ ಸಾರ್ಧಂ ಶ್ವೇತಪರ್ವತಮುಸ್ತಕಾತ್ ।
ಉತ್ತೀರ್ಯ ತಾರಕಂ ಹಂತುಂ ದಕ್ಷಿಣಾಂ ಸ ದಿಶಂ ಯಯೌ ॥ ೧ ॥
ತತಃ ಸರಸ್ವತೀತೀರೇ ಯಾನಿ ಭೂತಾನಿ ನಾರದ ।
ಗ್ರಹಾಶ್ಚೋಪಗ್ರಹಾಶ್ಚೈವ ವೇತಾಲಾಃ ಶಾಕಿನೀಗಣಾಃ ॥ ೨ ॥
ಉನ್ಮಾದಾ ಯೇ ಹ್ಯಪಸ್ಮಾರಾಃ ಪಲಾದಾಶ್ಚ ಪಿಶಾಚಕಾಃ ।
ದೇವೈಸ್ತೇಷಾಮಾಧಿಪತ್ಯೇ ಸೋಽಭಷಿಚ್ಯತ ಪಾವಕಿಃ ॥ ೩ ॥
ಯಥಾ ತೇ ನೈವ ಮರ್ಯಾದಾಂ ಸಂತ್ಯಜಂತಿ ದುರಾಶಯಾಃ ।
ಏತೈಸ್ತಸ್ಮಾತ್ಸಮಾಕ್ರಾಂತಃ ಶರಣ್ಯಂ ಪಾವಕಿಂ ವ್ರಜೇತ್ ॥ ೪ ॥
ಅಪ್ರಕೀರ್ಣೇಂದ್ರಿಯಂ ದಾಂತಂ ಶುಚಿಂ ನಿತ್ಯಮತಂದ್ರಿತಂ ।
ಆಸ್ತಿಕಂ ಸ್ಕಂದಭಕ್ತಂ ಚ ವರ್ಜಯಂತಿ ಗ್ರಹಾದಿಕಾಃ ॥ ೫ ॥
ಮಹೇಶ್ವರಂ ಚ ಯೇ ಭಕ್ತಾ ಭಕ್ತಾ ನಾರಾಯಣಂ ಚ ಯೇ ।
ತೇಷಾಂ ದರ್ಶನಮಾತ್ರೇಣ ನಶ್ಯಂತೇ ತೇ ವಿದೂರತಃ ॥ ೬ ॥

---

## ಕನ್ನಡದ ಅನುವಾದ

### ಕುಮಾರೇಶ ಮಾಹಾತ್ಮ್ಯ—ಕಾರ್ತಿಕೇಯನು ಸೇನಾಧಿಪತಿಯಾಗಿ ಅಭಿಷಿಕ್ತನಾದುದರ ವರ್ಣನ

೧. ನಾರದನು ಹೇಳುತ್ತಾನೆ:— ಬಳಿಕ ಸ್ಕಂದನು ದೇವತೆಗಳೊಡನೆ ಶ್ವೇತಪರ್ವತದಿಂದಿಳಿದು ತಾರಕಾಸುರನನ್ನು ಕೊಲ್ಲಲು ದಕ್ಷಿಣದಿಕ್ಕಿಗೆ ಹೊರಟನು.

೨–೪. ಸರಸ್ವತೀ ನದಿಯ ತೀರದಲ್ಲಿ ಭೂತಗಣಗಳೂ, ಗ್ರಹಗಳೂ, ಉಪಗ್ರಹಗಳೂ, ವೇತಾಲರೂ, ಶಾಕಿನಿಯರೂ, ಉನ್ಮಾದೆಯರೂ, ಅಪಸ್ಮಾರ ಶಕ್ತಿಯೂ, ಪಲಾದರೂ, ಪಿಶಾಚಿಗಳೂ, ಮುಂತಾದುವುಗಳಿಗೆಲ್ಲ ಅಧಿಪತಿಯಾಗಿ ದೇವತೆಗಳಿಂದ ಅಭಿಷಿಕ್ತನಾದನು. ದುರ್ಬುದ್ಧಿಯುಳ್ಳ ಇವರೆಲ್ಲರೂ ತಮ್ಮ ನಿಯಮಗಳನ್ನು ಮೀರಿ ನಡೆಯದಿರುವಂತೆ ಇವುಗಳಿಂದ ಪೀಡಿತನಾದ ಮನುಷ್ಯನು ಷಣ್ಮುಖಸ್ವಾಮಿಗೆ ಶರಣಾಗತನಾಗಬೇಕು.

೫. ಇಂದ್ರಿಯಲೋಲುಪನಲ್ಲದವನೂ, ಜ್ಞಾನೇಂದ್ರಿಯಗಳನ್ನು ಸ್ವಾಧೀನ ಪಡಿಸಿಕೊಂಡವನೂ, ಶುಚಿಯೂ, ನಿತ್ಯದಲ್ಲಿಯೂ ಜಾಗರೂಕನೂ, ದೈವ ಭಕ್ತನೂ, ಸ್ಕಂದ ಶರಣಾಗತನೂ ಆದ ಮಾನವನನ್ನು ಇವುಗಳು ಬಾಧಿಸುವುದಿಲ್ಲ.

೬. ಯಾರು ಮಹೇಶ್ವರನ ಅಥವಾ ನಾರಾಯಣನ ಭಕ್ತರಾಗಿರುವರೋ ಅವರನ್ನು ದೂರದಿಂದ ನೋಡುತ್ತಲೇ ಇವರು ಓಡಿಹೋಗುವರು.

ತತಃ ಸರ್ವೈಃ ಸುರೈಃ ಸಾರ್ಧಂ ಮಹೀತೀರಂ ಯಯೌ ಗುಹಃ ।
ತತ್ರ ದೇವೈಃ ಪ್ರಕಥಿತಂ ಮಹೀಮಾಹಾತ್ಮ್ಯಮುತ್ತಮಂ ॥ ೭ ॥
ಶ್ರುಣ್ವನ್ವಿಸಿಷ್ಮಿಯೇ ಸ್ಕಂದಃ ಪ್ರಣನಾಮ ಚ ತಾಂ ನದೀಂ ।
ತತೋ ಮಹೀದಕ್ಷಿಣತಸ್ತೀರಮಾಶ್ರಿತ್ಯ ಧಿಷ್ಠಿತಂ ।
ಪ್ರಣಮ್ಯ ಶಕ್ರಪ್ರಮುಖಾ ಗುಹಂ ವಚನಮಬ್ರುವನ್ ॥ ೮ ॥
ಅಭಿಷಿಕ್ತಂ ವಿನಾ ಸ್ಕಂದ ಸೇನಾಪತಿಮಕಲ್ಮಷಂ ।
ನ ಶರ್ಮ ಲಭತೇ ಸೇನಾ ತಸ್ಮಾತ್ತ್ವಮಭಿಷೇಚಯ ॥ ೯ ॥
ಮಹೀಸಾಗರಸಂಭೂತೈಃ ಪುಣ್ಯೈಶ್ಚಾಪಿ ಶಿವೈರ್ಜಲೈಃ ।
ಅಭಿಷೇಕ್ಷ್ಯಾಮಹೇ ತ್ವಾಂ ಚ ತತ್ರ ನೋ ದ್ರಷ್ಟುಮರ್ಹಸಿ ॥ ೧೦ ॥
ಯಥಾ ಹಸ್ತಿಪದೇ ಸರ್ವಪದಾಂತರ್ಭಾವ ಇಷ್ಯತೇ ।
ಸರ್ವತೀರ್ಥಾಂತರಸ್ಥಾನಂ ತಥಾರ್ಣವಮಹೀಜಲೇ ॥ ೧೧ ॥
ಸರ್ವಭೂತಮಯೋ ಯದ್ವತ್ತ್ರ್ಯಂಬಕಃ ಪರಿಕೀರ್ತ್ಯತೇ ।
ಸರ್ವತೀರ್ಥಮಯಸ್ತದ್ವನ್ಮಹೀಸಾಗರಸಂಗಮಃ ॥ ೧೨ ॥

---

೭. ಸಕಲ ದೇವತೆಗಳಿಂದ ಪರಿವಾರಿತನಾಗಿ ಷಣ್ಮುಖನು ಮಹೀಸಾಗರ ಕ್ಷೇತ್ರಕ್ಕೆ ಬಂದನು. ಅಲ್ಲಿ ಆ ಕ್ಷೇತ್ರದ ಮಾಹಾತ್ಮ್ಯೆಯನ್ನು ಅವರು ಆತನಿಗೆ ತಿಳಿಸಿದರು.

೮. ಇದನ್ನು ಕೇಳಿ ಸ್ಕಂದನು ಬಹಳ ವಿಸ್ಮಯಗೊಂಡವನಾಗಿ ಆ ನದಿಗೆ ನಮಸ್ಕರಿಸಿದನು. ಮತ್ತು ಆ ನದಿಯ ದಕ್ಷಿಣತೀರದಲ್ಲಿ ಕುಳಿತಿರುವ ಆತನನ್ನು ಕುರಿತು ಇಂದ್ರಪ್ರಮುಖರಾದ ದೇವತೆಗಳು ಹೇಳಿದರೇನೆಂದರೆ:—

೯. "ಎಲೈ ಸ್ಕಂದನೆ! ನಿಷ್ಕಲ್ಮಷನಾದವನು ಸೇನಾಪತಿಯ ಸ್ಥಾನದಲ್ಲಿ ಅಭಿಷೇಕವನ್ನು ಹೊಂದಿದಲ್ಲದೆ ಅವರ ಸೇನೆಗೆ ಸುಖವುಂಟಾಗುವುದಿಲ್ಲ. ಆದುದರಿಂದ ನೀನು ಈಗ ಅಭಿಷಿಕ್ತನಾಗಬೇಕು.

೧೦. ಮಹೀಸಾಗರಸಂಗಮದಲ್ಲಿ ಹುಟ್ಟಿದ ಪುಣ್ಯಕರಗಳೂ ಮಂಗಳಕರಗಳೂ ಆದ ಜಲದಿಂದ ನಿನಗೆ ಅಭಿಷೇಕವನ್ನು ಮಾಡುವೆವು. ಅಲ್ಲಿ ನೀನು ನಮ್ಮನ್ನು ನೋಡಬೇಕು.

೧೧. ಆನೆಯ ಹೆಜ್ಜೆಯಲ್ಲಿ ಇತರ ಮೃಗಗಳ ಹೆಜ್ಜೆಗಳೆಲ್ಲವೂ ಹೇಗೆ ಅಂತರ್ಭಾವವನ್ನು ಹೊಂದುವುವೋ, ಅಂತೆಯೇ ಮಹೀಸಾಗರ ಕ್ಷೇತ್ರದಲ್ಲಿ ಸಕಲ ತೀರ್ಥಗಳ ಅಂತರ್ಭಾವವೂ ಉಂಟಾಗಿರುವುದು.

೧೨. ಮಹೇಶ್ವರನೆಂತು ಸಕಲ ಭೂತಮಯನೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವನೊ, ಅಂತೆಯೇ ಈ ಮಹೀಸಾಗರ ಕ್ಷೇತ್ರೋದಕವು ಭೂಲೋಕದ ಸಕಲ ಕ್ಷೇತ್ರೋದಕಮಯವೆಂದು ಹೇಳಲ್ಪಟ್ಟಿರುವುದು.

ಅರ್ಧನಾರೀಶ್ವರಂ ರೂಪಂ ಯಥಾ ರುದ್ರಸ್ಯ ಸರ್ವದಂ ।
ತಥಾ ಮಹೀಸಮುದ್ರಸ್ಯ ಸ್ನಾನಂ ಸರ್ವಫಲಪ್ರದಂ ॥ ೧೩ ॥
ಯೇನಾತ್ರ ಪಿತರಃ ಸ್ಕಂದ ತರ್ಪಿತಾ ಭಕ್ತಿಭಾವತಃ ।
ತೇನ ಸರ್ವೇಷು ತೀರ್ಥೇಷು ತರ್ಪಿತಾ ನಾತ್ರಸಂಶಯಃ ॥ ೧೪ ॥
ನ ಚೈತದ್ಧೃದಿ ಮಂತವ್ಯಂ ಕ್ಷಾರಮೇತಜ್ಜಲಂ ಹಿ ಯತ್ ॥ ೧೫ ॥
ಯಥಾ ಹಿ ಕಟುತಿಕ್ತಾದಿ ಗವಾಗ್ರಸ್ತಂ ಹಿ ಕ್ಷೀರದಂ ।
ಏವಮೇತಸ್ತ್ವಿದಂ ತೋಯಂ ಪಿತೄಣಾಂ ತೃಪ್ತಿದಾಯಕಂ ॥ ೧೬ ॥
ಏವಂ ಬ್ರುವತ್ಸು ದೇವೇಷು ಕಪಿಲೋಽಪಿ ಮುನಿರ್ಜಗೌ ।
ಸತ್ಯಮೇತದುಮಾಪುತ್ರ ಸರ್ವತೀರ್ಥಮಯೀ ಮಹೀ ॥ ೧೭ ॥
ಕರ್ದಮೋ ಯಸ್ತ್ವಹಮಪಿ ಜ್ಞಾತ್ವಾ ತೀರ್ಥಮಹಾಗುಣಾನ್ ।
ಸರ್ವಾಂ ಭುವಂ ಪರಿತ್ಯಜ್ಯ ಕೃತ್ವಾ ಹ್ಯಾಶ್ರಮಮಾಸ್ಥಿತಃ ॥ ೧೮ ॥

---

೧೩. ಮಹೇಶ್ವರನ ಅರ್ಧನಾರೀಶ್ವರ ರೂಪವು ಎಂತು ಸಕಲ ಇಷ್ಟಾರ್ಥಗಳನ್ನೂ ದೊರಕಿಸಿಕೊಡುವುದೋ, ಹಾಗೆಯೇ ಮಹೀಸಮುದ್ರದ ಸ್ನಾನವೂ ಜನರಿಗೆ ಸಕಲ ಕಾಮಗಳನ್ನೂ ಈಡೇರಿಸುವುದು.

೧೪. ಎಲೈ ಸ್ಕಂದನೆ! ಯಾವನ ಭಕ್ತಿ ಶ್ರದ್ಧೆಗಳಿಂದೊಡಗೂಡಿ ಈ ಕ್ಷೇತ್ರದಲ್ಲಿ ಪಿಂಡಪ್ರದಾನಾದಿಗಳಿಂದ ಪಿತೃಗಳನ್ನು ತೃಪ್ತಿಪಡಿಸುವನೊ, ಅವನಿಂದ ಸಕಲ ತೀರ್ಥಗಳಲ್ಲಿಯೂ ಪಿತೃತರ್ಪಣಗಳು ಮಾಡಲ್ಪಟ್ಟಂತೆ ತಿಳಿಯಬೇಕು. ಈ ವಿಷಯದಲ್ಲಿ ಸಂಶಯವಿಲ್ಲ.

೧೫–೧೬. ಈ ಕ್ಷೇತ್ರದ ಜಲವು ಲವಣಮಯವೆಂದು ಸ್ವಲ್ಪವೂ ಕಿಂಕೃತಿಯನ್ನು ಹೊಂದಬಾರದು. ಗೋವುಗಳಿಂದ ಭಕ್ಷಿಸಲ್ಪಟ್ಟ ಕಹಿ, ಒಗರು ಪದಾರ್ಥಗಳು ಹೇಗೆ ಕ್ಷೀರವಾಗಿಯೇ ಪರಿಣಮಿಸುವುವೊ, ಹಾಗೆಯೇ ಈ ಕ್ಷೇತ್ರೋದಕವು ಲವಣಮಯವಾದರೂ ಪಿತೃಗಳಿಗೆ ತೃಪ್ತಿಯನ್ನುಂಟು ಮಾಡುವುದು."

೧೭. ಇಂತು ದೇವತೆಗಳು ನಿರೂಪಿಸುತ್ತಿರಲು ಕಪಿಲಮಹರ್ಷಿಯೂ ಅಲ್ಲಿಗೆ ಬಂದು "ಎಲೈ ಪಾರ್ವತೀಪುತ್ರನೆ! ಈ ಮಾತುಗಳು ಸತ್ಯವು. ಈ ಮಹೀಸಾಗರಸಂಗಮವು ಸರ್ವತೀರ್ಥಮಯವಾಗಿರುವುದು.

೧೮. ನನ್ನ ತಂದೆಯಾದ ಕರ್ದಮಪ್ರಜಾಪತಿಯೂ, ನಾನೂ ಸಹ ಈ ತೀರ್ಥದ ಮಾಹಾತ್ಮ್ಯವನ್ನು ತಿಳಿದು ಭೂಲೋಕದ ಇತರ ಸ್ಥಳಗಳನ್ನೆಲ್ಲ ಬಿಟ್ಟು ಇಲ್ಲಿಯೇ ಆಶ್ರಮವನ್ನು ಕಲ್ಪಿಸಿಕೊಂಡು ನಿಂತಿರುವೆವು" ಎಂದು ಹೇಳಿದನು.

ತತೋ ಮಹೇಶ್ವರಃ ಪ್ರಾಹ ಸತ್ಯಮೇತತ್ಸುರೋದಿತಂ ।
ಬ್ರಹ್ಮಾದ್ಯಾಸ್ತಂ ತಥಾ ಪ್ರಾಹುರತ್ರ ಭೂಯೋಽಪ್ಯಥೋ ಗುರುಃ ।
ಅತ್ರಾಭಿಷೇಕಂ ತೇ ವೀರ ಕರಿಷ್ಯಾಮಃ ಸಮಾದಿಶ ॥೧೯॥
ತತಃ ಸುವಿಸ್ಮಿತಸ್ತತ್ರ ಸ್ನಾತ್ವಾ ಸ್ಕಂದೋ ಮಹಾಮನಾಃ ।
ಅಭಿಷಿಂಚಂತು ಮಾಂ ದೇವಾ ಇತಿ ತಾನಬ್ರವೀದ್ವಚಃ ॥ ೨೦ ॥
ತತೋಽಭಿಷೇಕಸಂಭಾರಾನ್ಸರ್ವಾನ್ಸಂಭೃತ್ಯ ಶಾಸ್ತ್ರತಃ ।
ಜುಹುವುರ್ಮಂತ್ರಪೂತೇಽಗ್ನೌ ಚತ್ವಾರೋ ಮುಖ್ಯಋತ್ವಿಜಃ ॥ ೨೧ ॥
ಬ್ರಹ್ಮಾ ಚ ಕಪಿಲೋ ಜೀವೋ ವಿಶ್ವಾಮಿತ್ರಶ್ಚತುರ್ಥಕಃ ।
ಅನ್ಯೇ ಚ ಶತಶಸ್ತತ್ರ ಮುನಯೋ ವೇದಪಾರಗಾಃ ॥ ೨೨ ॥
ತತ್ರಾದ್ಭುತಂ ಮಹಾದೇವೋ ದರ್ಶಯಾಮಾಸ ಭಾರತ ।
ಯದಗ್ನಿಕುಂಡಮಧ್ಯಸ್ಥೋ ಲಿಂಗಮೂರ್ತಿರ್ವ್ಯದೃಶ್ಯತ ॥ ೨೩ ॥
ಅಹಮೇವಾಗ್ನಿಮಧ್ಯಸ್ಥೋ ಹವಿರ್ಗೃಹ್ಣಾಮಿ ನಿತ್ಯಶಃ ।
ಏತತ್ಸಂದರ್ಶನಾರ್ಥಾಯ ಲಿಂಗಮೂರ್ತಿರಭೂದ್ವಿಭುಃ ॥ ೨೪ ॥

---

೧೯. ಬಳಿಕ ಮಹೇಶ್ವರನೂ ದೇವತೆಗಳ ವಾಕ್ಯಗಳನ್ನೇ ಅನುಮೋದಿಸಿದನು. ಆಗ ಬ್ರಹ್ಮಾದಿದೇವತೆಗಳು ಆತನನ್ನು ಕುರಿತು ಇಂತೆಂದರು:— "ಇಲ್ಲಿ ಮಹಾದೇವನೇ ಗುರುವಾಗಿರುವನು. ಎಲೈ ವೀರನೆ! ನಿನಗೆ ಇಲ್ಲಿಯೇ ಅಭಿಷೇಕವನ್ನು ಮಾಡುವೆವು. ನಮ್ಮನ್ನು ಆಜ್ಞೆಮಾಡು."

೨೦. ಮಹಾ ಬುದ್ಧಿಶಾಲಿಯಾದ ಸ್ಕಂದನು ಈ ಮಾತುಗಳನ್ನು ಕೇಳಿ ವಿಸ್ಮಿತನಾಗಿ ಅಲ್ಲಿ ಸ್ನಾನವನ್ನು ಮಾಡಿ "ಎಲೈ ದೇವತೆಗಳೆ! ನಿಮ್ಮಿಷ್ಟದಂತೆ ನನಗೆ ಅಭಿಷೇಕವನ್ನು ಮಾಡಿರಿ" ಎಂದಾಜ್ಞಾಪಿಸಿದನು.

೨೧. ಆಗ ಶಾಸ್ತ್ರೋಕ್ತ ವಿಧಿಯಿಂದ ಬೇಕಾದ ಸಕಲ ಪದಾರ್ಥಗಳನ್ನೂ ಸಂಗ್ರಹಿಸಲು ನಾಲ್ಕು ಜನ ಮುಖ್ಯ ಋತ್ವಿಜರು ಮಂತ್ರಗಳಿಂದ ಪವಿತ್ರಗೊಳಿಸಲ್ಪಟ್ಟ ಅಗ್ನಿಯಲ್ಲಿ ಹೋಮಗಳನ್ನು ಮಾಡತೊಡಗಿದರು.

೨೨. ಬ್ರಹ್ಮ, ಕಪಿಲ, ಜೀವ, ವಿಶ್ವಾಮಿತ್ರ—ಇವರೇ ನಾಲ್ವರು ಋತ್ವಿಜರು. ಇತರ ವೇದಜ್ಞರಾದ ನೂರಾರು ಜನ ಮುನಿಗಳೂ ಅಲ್ಲಿ ನೆರೆದಿದ್ದರು.

೨೩. ಎಲೈ ಅರ್ಜುನನೆ! ಅಲ್ಲಿ ಮಹಾದೇವನು ನೆರೆದವರಿಗೆ ಒಂದು ವಿಚಿತ್ರವನ್ನು ತೋರಿಸಿದನು. ಅಗ್ನಿಕುಂಡದ ಮಧ್ಯದಿಂದ ತಾನೇ ಲಿಂಗರೂಪಿಯಾಗಿ ಜನರಿಗೆ ಕಾಣಿಸಿಕೊಂಡನು.

೨೪. ತಾನೇ ಅಗ್ನಿಮಧ್ಯದಲ್ಲಿದ್ದು ನಿತ್ಯವೂ ಹವಿರ್ಭಾಗವನ್ನು ತೆಗೆದುಕೊಳ್ಳುವುದನ್ನು ತೋರಿಸುವುದಕ್ಕಾಗಿಯೇ ಮಹೇಶ್ವರನು ಲಿಂಗರೂಪಿಯಾದನು.

ತಲ್ಲಿಂಗಮತುಲಂ ದೇವಾ ನಮಶ್ಚಕ್ರುರ್ಮುದಾನ್ವಿತಾಃ ।
ಸರ್ವಪಾಪಾಪಹಂ ಪಾರ್ಥ ಸರ್ವಕಾಮಫಲಪ್ರದಂ ॥ ೨೫ ॥
ತತ್ರ ಹೋಮಾವಸಾನೇ ಚ ದತ್ತೇ ಹಿಮವತಾ ಶುಭೇ ।
ದಿವ್ಯರತ್ನಾನ್ವಿತೇ ಸ್ಕಂದೋ ನಿಷಣ್ಣಃ ಪರಮಾಸನೇ ॥ ೨೬ ॥
ಸರ್ವಮಂಗಳ ಸಂಭಾರೈರ್ವಿಧಿಮಂತ್ರಪುರಸ್ಕೃತಂ ।
ಅಭ್ಯಷಿಂಚಂಸ್ತತೋ ದೇವಾಃ ಕುಮಾರಂ ಶಂಕರಾತ್ಮಜಂ ॥ ೨೭ ॥
ಇಂದ್ರೋ ವಿಷ್ಣುರ್ಮಹಾವೀರ್ಯೋ ಬ್ರಹ್ಮರುದ್ರೌ ಚ ಫಾಲ್ಗುನ ॥೨೮॥
ಆದಿತ್ಯಾದ್ಯಾ ಗ್ರಹಾಃ ಸರ್ವೇ ತಥೋ ಭಾವನಿಲಾನಲೌ ।
ಆದಿತ್ಯಾ ವಸವೋ ರುದ್ರಾಃ ಸಾಧ್ಯಾಶ್ಚೈವಾಶ್ವಿನಾವುಭೌ ॥ ೨೯ ॥
ವಿಶ್ವೇದೇವಾಶ್ಚ ಮರುತೋ ಗಂಧರ್ವಾಪ್ಸರಸಸ್ತಥಾ ।
ದೇವಬ್ರಹ್ಮರ್ಷಯಶ್ಚೈವ ವಾಲಖಿಲ್ಯಾ ಮರೀಚಿಪಾಃ ॥ ೩೦ ॥
ವಿದ್ಯಾಧರಾ ಯೋಗಸಿದ್ಧಾಃ ಪುಲಸ್ತ್ಯಪುಲಹಾದಯಃ ।
ಪಿತರಃ ಕಶ್ಯಪೋಽತ್ರಿಶ್ಚ ಮರೀಚಿರ್ಭೃಗುರಂಗಿರಾಃ ॥ ೩೧ ॥
ದಕ್ಷೋಽಥ ಮನವೋ ಯೇ ಚ ಜ್ಯೋತೀಂಷಿ ಋತವಸ್ತಥಾ ।
ಮೂರ್ತಿಮತ್ಯಶ್ಚ ಸರಿತೋ ಮಹೀಪ್ರಭೃತಿಕಾಸ್ತಥಾ ॥ ೩೨ ॥

---

೨೫. ಎಲೈ ಪಾರ್ಥನೆ! ಸಕಲ ಪಾಪಹಾರಕವೂ, ಸರ್ವಕಾಮಫಲಪ್ರದವೂ, ಅಪ್ರಮೇಯವೂ ಆದ ಆ ಲಿಂಗವನ್ನು ದೇವತೆಗಳೆಲ್ಲರೂ ಸಂತೋಷದಿಂದ ನಮಸ್ಕರಿಸಿದರು.

೨೬. ಇಂತು ಹೋಮವು ಸಾಂಗವಾಗಿ ನಡೆಯಲು ಹಿಮವಂತನಿಂದ ಕೊಡಲ್ಪಟ್ಟ ನವರತ್ನಖಚಿತವಾದ ಉತ್ತಮಾಸನದಲ್ಲಿ ಸ್ಕಂದನು ಮಂಡಿಸಿದನು.

೨೭. ದೇವತೆಗಳು ಸಕಲ ಮಂಗಳದ್ರವ್ಯಗಳನ್ನೂ ಸಿದ್ಧಗೊಳಿಸಿ ವಿಧ್ಯನುಸಾರವಾಗಿ ಮಂತ್ರಗಳನ್ನುಚ್ಚರಿಸುತ್ತ ಶಿವಪುತ್ರನಾದ ಷಣ್ಮುಖಸ್ವಾಮಿಗೆ ಅಭಿಷೇಕವನ್ನು ಮಾಡಿಸಿದರು.

೨೮-೩೮. ಎಲೈ ಅರ್ಜುನನೆ! ಮಹೇಂದ್ರನೂ, ಶ್ರೀನಾರಾಯಣನೂ, ಬ್ರಹ್ಮನೂ, ಶಿವನೂ, ಸೂರ್ಯಾದಿ ನವಗ್ರಹಗಳೂ, ವಾಯು, ಅಗ್ನಿ, ದ್ವಾದಶಾದಿತ್ಯರೂ, ಅಷ್ಟವಸುಗಳೂ, ಏಕಾದಶರುದ್ರರೂ, ಸಾಧ್ಯರೂ, ಅಶ್ವಿನೀ ದೇವತೆಗಳೂ, ವಿಶ್ವೇದೇವತೆಗಳೂ, ಮರುತ್ತುಗಳೂ, ಗಂಧರ್ವರೂ, ಅಪ್ಸರಸರೂ, ದೇವರ್ಷಿಗಳೂ, ಬ್ರಹ್ಮರ್ಷಿಗಳೂ, ವಾಲಖಿಲ್ಯರೂ, ಮರೀಚಿಗಳೂ, ವಿದ್ಯಾಧರರೂ, ಯೋಗಸಿದ್ಧರೂ, ಪುಲಸ್ತ್ಯ, ಪುಲಹ, ಪಿತೃದೇವತೆಗಳೂ, ಕಶ್ಯಪ, ಅತ್ರಿ, ಮರೀಚಿ, ಭೃಗು, ಅಂಗಿರಸ್ಸು, ದಕ್ಷ, ಚತುರ್ದಶ ಮನುಗಳೂ,

ಲವಣಾದ್ಯಾಃ ಸಮುದ್ರಾಶ್ಚ ಪ್ರಭಾಸಾದ್ಯಾಶ್ಚ ತೀರ್ಥಕಾಃ ।
ಪೃಥಿವೀ ದ್ಯೌರ್ದಿಶಶ್ಚೈವ ಪಾದಪಾಃ ಪರ್ವತಾಸ್ತಥಾ ॥ ೩೩ ॥
ಅದಿತ್ಯಾದ್ಯಾ ಮಾತರಶ್ಚ ಕುರ್ವಂತ್ಯೋ ಗುಹಮಂಗಲಂ ।
ವಾಸುಕಿಪ್ರಮುಖಾ ನಾಗಾಸ್ತಥೋಭೌ ಗರುಡಾರುಣೌ ॥ ೩೪ ॥
ವರುಣೋ ಧನದಶ್ಚೈವ ಯಮಃ ಸಾನುಚರಸ್ತಥಾ ।
ರಾಕ್ಷಸಃ ನಿರ್ಋತಿಶ್ಚೈವ ಭೂತಾನಿ ಚ ಪಲಾಶನಾಃ ॥ ೩೫ ॥
ಧರ್ಮೋ ಬೃಹಸ್ಪತಿಶ್ಚೈವ ಕಪಿಲೋ ಗಾಧಿನಂದನಃ ।
ಬಹುಲತ್ವಾಚ್ಚ ಯೇ ನೋಕ್ತಾ ವಿವಿಧಾ ದೇವತಾಗಣಾಃ ॥ ೩೬ ॥
ತೇ ಚ ಸರ್ವೇ ಮಹೀಕೂಲೇ ಹ್ಯಭ್ಯಷಿಂಚನ್ಮುದಾ ಗುಹಂ ।
ತತೋ ಮಹಾಸ್ವನಾಮುಗ್ರಾಂ ದೇವದೈತ್ಯಾದಿದರ್ಪಹಾಂ ॥ ೩೭ ॥
ದದೌ ಪಶುಪತಿಸ್ತಸ್ಮೈ ಸರ್ವಭೂತಮಹಾಚಮೂಂ ।
ವಿಷ್ಣುರ್ದದೌ ವೈಜಯಂತೀಂ ಮಾಲಾಂ ಬಲವಿವರ್ಧಿನೀಂ ॥ ೩೮ ॥
ಉಮಾ ದದೌ ಚಾರಜಸೀ ವಾಸಸೀ ಸೂರ್ಯಸಪ್ರಭಾ ।
ಗಂಗಾ ಕಮಂಡಲುಂ ದಿವ್ಯಮಮೃತೋದ್ಭವಮುತ್ತಮಂ ॥ ೩೯ ॥

---

ಜ್ಯೋತಿರ್ಮಂಡಲಗಳೂ, ಷಡೃತುಗಳೂ, ರೂಪಗೊಂಡ ನದ್ಯಭಿಮಾನಿ ದೇವತೆಯರೂ, ಮಹೀಸಾಗರಾದಿ ಕ್ಷೇತ್ರಗಳೂ, ಲವಣಾದಿ ಸಪ್ತ ಸಮುದ್ರಗಳೂ, ಪ್ರಭಾಸಾದಿ ತೀರ್ಥಗಳೂ, ಭೂಮಿ, ಅಂತರಿಕ್ಷ, ದಶದಿಕ್ಕುಗಳೂ, ವೃಕ್ಷಗಳೂ, ಪರ್ವತಗಳೂ, ಅದಿತಿಯೇ ಮೊದಲಾದ ದೇವಮಾತೆಯರೂ, ವಾಸುಕಿ ಪ್ರಮುಖರಾದ ಸರ್ಪಶ್ರೇಷ್ಠರೂ, ಅಣ್ಣತಮ್ಮಂದಿರಾದ ಅರುಣ ಗರುಡರೂ, ವರುಣನೂ, ಕುಬೇರನೂ, ಪರಿವಾರಸಹಿತನಾದ ಯಮನೂ, ರಾಕ್ಷಸನಾದ ನಿರ್ಋತಿಯೂ, ಪಂಚಭೂತಗಳೂ, ಮಾಂಸಭಕ್ಷಕಗಳಾದ ಮೃಗಗಳೂ, ಧರ್ಮವೂ, ಬೃಹಸ್ಪತಿಯೂ, ಕಪಿಲನೂ, ವಿಶ್ವಾಮಿತ್ರನೂ, ಅಸಂಖ್ಯಾತರಾಗಿ ಇಲ್ಲಿ ಹೇಳದಿರುವ ವಿವಿಧ ದೇವಗಣಗಳೂ— ಇವರೆಲ್ಲರೂ ಮಹೀಸಾಗರಸಂಗಮದಲ್ಲಿ ಸಂಭ್ರಮದಿಂದ ಗುಹನಿಗೆ ಅಭಿಷೇಕವನ್ನು ಮಾಡಿದರು. ಆಗ ಪರಮೇಶ್ವರನು ಮಹಾಘೋಷಯುಕ್ತವೂ, ಭಯಂಕರವೂ, ದೇವದಾನವ ಸೈನ್ಯಗಳ ಸೊಕ್ಕನ್ನು ಮುರಿಯಬಲ್ಲುದೂ, ಸಮಸ್ತ ಭೂತಗಣಗಳಿಂದೊಡಗೂಡಿದುದೂ ಆದ ಮಹಾಸೇನೆಯನ್ನು ಕೊಟ್ಟನು. ಮಹಾವಿಷ್ಣುವು ಬಲವನ್ನು ಹೆಚ್ಚಿಸುವಂತಹ ವೈಜಯಂತಿಯೆಂಬ ಮಾಲೆಯನ್ನು ಕೊಟ್ಟನು.

೩೯–೪೦. ಪಾರ್ವತಿಯು ಶುಭ್ರವೂ ಸೂರ್ಯಸಂಕಾಶವೂ ಆದ ವಸ್ತ್ರಯುಗ್ಮವನ್ನು ಕೊಟ್ಟಳು. ಗಂಗೆಯು ನಿರಂತರವೂ ಅಮೃತೋದಕದಿಂದ ತುಂಬಿರುವ ಕಮಂಡಲುವನ್ನು ಕೊಟ್ಟಳು. ಸಾಗರಸಹಿತೆಯೂ ಮಹಾ ನದಿಯೂ

ಮಹೀ ಮಹಾನದೀ ತಸ್ಯ ಚಾಕ್ಷಮಾಲಾಂ ಸಸಾಗರಾ ।
ದದೌ ಮುದಾ ಕುಮಾರಾಯ ದಂಡಂ ಚೈವ ಬೃಹಸ್ಪತಿಃ ॥ ೪೦ ॥
ಗರುಡೋ ದಯಿತಂ ಪುತ್ರಂ ಮಯೂರಂ ಚಿತ್ರಬರ್ಹಿಣಂ ।
ಅರುಣಸ್ತಾಮ್ರಚೂಡಂ ಚ ಪ್ರದದೌ ಚರಣಾಯುಧಂ ॥ ೪೧ ॥
ಛಾಗಂ ಚ ವರುಣೋ ರಾಜಾ ಬಲವೀರ್ಯಸಮನ್ವಿತಂ ।
ಕೃಷ್ಣಾಜಿನಂ ತಥಾ ಬ್ರಹ್ಮಾ ಬ್ರಹ್ಮಣ್ಯಾಯ ದದೌ ಜಯಂ ॥ ೪೨ ॥
ಚತುರೋಽನುಚರಾಂಶ್ಚೈವ ಮಹಾವೀರ್ಯಾನ್ಬಲೋತ್ಕಟಾನ್ ।
ನಂದಿಸೇನಂ ಲೋಹಿತಾಕ್ಷಂ ಘಂಟಾಕರ್ಣಂ ಚ ಮಾನಸಾನ್ ॥ ೪೩ ॥
ಚತುರ್ಥಂ ಚಾಪ್ಯತಿಬಲಂ ಖ್ಯಾತಂ ಕುಸುಮಮಾಲಿನಂ ।
ತತಃ ಸ್ಥಾಣುರ್ದದೌ ದೇವೋ ಮಹಾಪಾರಿಷದಂ ಕ್ರತುಂ ॥ ೪೪ ॥
ಸಹಿ ದೇವಾಸುರೇ ಯುದ್ಧೇ ದೈತ್ಯಾನಾಂ ಭೀಮಕರ್ಮಣಾಂ ।
ಜಘಾನ ದೋರ್ಭ್ಯಾಂ ಸಂಕ್ರುದ್ಧಃ ಪ್ರಯುತಾನಿ ಚತುರ್ದಶ ॥ ೪೫ ॥
ಯಮಃ ಪ್ರಾದಾದನುಚರಾ ಯಮಕಾಲೋಪಮೌ ತದಾ ।
ಉನ್ಮಾಥಂ ಚ ಪ್ರಮಾಥಂ ಚ ಮಹಾವೀರ್ಯಮಹಾದ್ಯುತೀ ॥ ೪೬ ॥

---

ಆದ ಮಹಿಯು ರುದ್ರಾಕ್ಷಿಗಳ ಸರವನ್ನು ಕೊಟ್ಟಳು. ಬೃಹಸ್ಪತಿಯು ಕುಮಾರಸ್ವಾಮಿಗೆ ಸಂತೋಷದಿಂದ ದಂಡವನ್ನು ಕೊಟ್ಟನು.

೪೧. ಗರುಡನು ತನ್ನ ಪ್ರಿಯ ಪುತ್ರನಾದ ಮಯೂರವನ್ನೂ, ಅರುಣನು ಕೆಂಪುಮೂತಿಯುಳ್ಳ ಕುಕ್ಕುಟವನ್ನೂ ಕೊಟ್ಟರು.

೪೨. ಸಮುದ್ರರಾಜನಾದ ವರುಣನು ಬಲ ಪರಾಕ್ರಮಗಳಿಂದೊಡಗೂಡಿದ ಮೇಕೆಯನ್ನು ಕೊಟ್ಟನು. ಬ್ರಾಹ್ಮಣಪ್ರಿಯನಾದ ಷಣ್ಮುಖನಿಗೆ ಬ್ರಹ್ಮನು ಜಯಪ್ರದಾಯಕವಾದ ಕೃಷ್ಣಾಜಿನವನ್ನು ಕೊಟ್ಟನು.

೪೩–೪೪. ಮತ್ತು ಮಹಾ ಪರಾಕ್ರಮಶಾಲಿಗಳೂ ಬಲಿಷ್ಠರೂ ಆದ ನಂದಿಸೇನ, ಲೋಹಿತಾಕ್ಷ, ಘಂಟಾಕರ್ಣ ಎಂಬ ನಾಲ್ಕುಜನ ಅನುಚರರನ್ನೂ ಕಳುಹಿಸಿದನು. ಇವರೆಲ್ಲರೂ ಬ್ರಹ್ಮನ ಮಾನಸಪುತ್ರರು. ನಾಲ್ಕನೆಯವನೇ ಬಲಶಾಲಿಯೂ, ವಿಖ್ಯಾತನೂ ಆದ ಕುಸುಮಮಾಲಿಯು. ಬಳಿಕ ಮತ್ತೆ ಮಹೇಶ್ವರನು ಮಹಾಪಾರ್ಷದನಾದ ಕ್ರತುವೆಂಬುವನನ್ನು ಕಳುಹಿಸಿದನು.

೪೫–೪೬. ಅವನೇ ದೇವದಾನವರ ಯುದ್ಧದಲ್ಲಿ ಕೋಪಗೊಂಡು ತನ್ನ ಕೈಗಳಿಂದಲೇ ಹದಿನಾಲ್ಕು ಪ್ರಯುತಸಂಖ್ಯೆಯ ಕ್ರೂರಕರ್ಮಿಗಳಾದ ರಾಕ್ಷಸರನ್ನು ಕೊಂದನು. ಯಮನು ಯಮ ಮತ್ತು ಕಾಲರಿಗೆ ಸಮರಾಗಿಯೂ, ಮಹಾ ಪರಾಕ್ರಮಿಗಳೂ, ತೇಜೋವಂತರೂ ಆದ ಉನ್ಮಾಥ ಮತ್ತು ಪ್ರಮಾಥರೆಂಬ ಅನುಚರರನ್ನು ಕಳುಹಿಸಿದನು.

ಸುಭ್ರಾಜೌ ಭಾಸ್ಕರಸ್ಯೈವ ಯೌ ಸದಾ ಚಾನುಯಾಯಿನೌ ।
ತೌ ಸೂರ್ಯಃ ಕಾರ್ತಿಕೇಯಾಯ ದದೌ ಪಾರ್ಥ ಮುದಾನ್ವಿತಃ ॥ ೪೭ ॥
ಕೈಲಾಸಶೃಂಗಸಂಕಾಶೌ ಶ್ವೇತಮಾಲ್ಯಾನುಲೇಪನೌ ।
ಸೋಮೋಽಪ್ಯನುಚರಾನ್ಪ್ರಾದಾನ್ಮಣಿಂ ಸುಮಣಿಮೇವ ಚ ॥ ೪೮ ॥
ಜ್ವಾಲಾಜಿಹ್ವಂ ಜ್ಯೋತಿಷಂ ಚ ದದಾವಗ್ನಿರ್ಮಹಾಬಲೌ ।
ಪರಿಘಂ ಚ ಬಲಂ ಚೈವ ಭೀಮಂ ಚ ಸುಮಹಾಬಲಂ ।
ಸ್ಕಂದಾಯ ತ್ರೀನನುಚರಾನ್ದದೌ ವಿಷ್ಣುರುರುಕ್ರಮಃ ॥ ೪೯ ॥
ಉತ್ಕ್ರೋಶಂ ಪಂಚಜಂ ಚೈವ ವಜ್ರದಂಡಧರಾವುಭೌ ॥ ೫೦ ॥
ದದೌ ಮಹೇಶಪುತ್ರಾಯ ವಾಸವಃ ಪರವೀರಹಾ ।
ತೌ ಹಿ ಶತ್ರೂನ್ಮಹೇಂದ್ರಸ್ಯ ಜಘ್ನತುಃ ಸಮರೇ ಬಹೂನ್ ॥ ೫೧ ॥
ವರ್ಧನಂ ಬಂಧನಂ ಚೈವ ಆಯುರ್ವೇದವಿಶಾರದೌ ।
ಸ್ಕಂದಾಯ ದದತುಃ ಪ್ರೀತ್ಯಾವಶ್ವಿನೌ ಭರತರ್ಷಭ ॥ ೫೨ ॥
ಬಲಂ ಚಾತಿಬಲಂ ಚೈವ ಮಹಾವಕ್ತ್ರೌ ಮಹಾಬಲೌ ।
ಪ್ರದದೌ ಕಾರ್ತಿಕೇಯಾಯ ವಾಯುಶ್ಚಾನುಚರಾವುಭೌ ॥ ೫೩ ॥

---

೪೭. ಸೂರ್ಯನೂ ಸಹ ಸಂತೋಷದಿಂದ ಕಾರ್ತಿಕೇಯನಿಗೆ ತನ್ನ ನಿತ್ಯಾನುಯಾಯಿಗಳೂ, ಕಾಂತಿಸಂಪನ್ನರೂ ಆದ ಪರಿಚರರನ್ನು ಕಳುಹಿಸಿದನು.

೪೮. ಚಂದ್ರನಾದರೋ, ಕೈಲಾಸ ಶೃಂಗದಂತೆ ಶುಭ್ರವರ್ಣದವರೂ, ಬಿಳಿಯ ಹೂವುಗಳ ಮಾಲೆಗಳನ್ನು ಧರಿಸಿದವರೂ ಆದ ಮಣಿ ಮತ್ತು ಸುಮಣಿ ಯೆಂಬ ಅನುಚರರನ್ನು ಅರ್ಪಿಸಿದನು.

೪೯. ಅಗ್ನಿಯು ಜ್ವಾಲಾ, ಜಿಹ್ವ, ಜ್ಯೋತಿಗಳೆಂಬ ಮಹಾಬಲಿಷ್ಠರನ್ನು ಕೊಟ್ಟನು. ತ್ರಿವಿಕ್ರಮನಾದ ಮಹಾವಿಷ್ಣುವು ಸ್ಕಂದನಿಗೆ ಪರಿಘ, ಬಲ, ಮಹಾಬಲಶಾಲಿಯಾದ ಭೀಮ ಎಂಬ ಮೂರು ಅನುಚರರನ್ನು ಕೊಟ್ಟನು.

೫೦-೫೧. ಶತ್ರುಸಂಹಾರಕನಾದ ಮಹೇಂದ್ರನು ಶಿವಪುತ್ರನಿಗೆ ವಜ್ರದಂಡ ಧಾರಿಗಳಾದ ಉತ್ಕ್ರೋಶ ಮತ್ತು ಪಂಚಜರೆಂಬುವರನ್ನು ಕೊಟ್ಟನು. ಪೂರ್ವದ ಯುದ್ಧದಲ್ಲಿ ಅವರಿಬ್ಬರೇ ಮಹೇಂದ್ರನ ಶತ್ರುಗಳಲ್ಲಿ ಅನೇಕರನ್ನು ನಿಗ್ರಹಿ ಸಿದರು.

೫೨. ಎಲೈ ಪಾರ್ಥನೆ! ಆಯುರ್ವೇದದಲ್ಲಿ ನಿಷ್ಣಾತರಾದ ಅಶ್ವಿನೀ ದೇವತೆಗಳು ಸ್ಕಂದನಿಗೆ ಪ್ರೀತಿಯಿಂದ ವರ್ಧನ, ಬಂಧನರೆಂಬುವರನ್ನು ಕಳುಹಿಸಿದರು.

೫೩. ವಾಯುದೇವನು ಕಾರ್ತಿಕೇಯನಿಗೆ ವಿಶಾಲಮುಖರೂ, ಮಹಾ ಬಲರೂ ಆದ ಬಲ, ಅತಿಬಲರೆಂಬ ಇಬ್ಬರು ಅನುಚರರನ್ನು ಕೊಟ್ಟನು.

ಘಸಂ ಚಾತಿಘಸಂ ವೀತಾವರುಣಶ್ಚ ದದೌ ಪ್ರಭುಃ ।
ಸುವರ್ಚಸಂ ಮಹಾತ್ಮಾನಂ ತಥೈವಾಪ್ಯತಿವರ್ಚಸಂ ।
ಹಿಮವಾನ್ಪ್ರದದೌ ಪಾರ್ಥ ಸಾಕ್ನಾದ್ದೌಹಿತ್ರಕಾಯ ವೈ ॥ ೫೪ ॥
ಕಾಂಚನಂ ಚ ದದೌ ಮೇರುರ್ಮೇಘಮಾಲಿನಮೇವಚ ॥ ೫೫ ॥
ಉಚ್ಛ್ರಿತಂ ಚಾತಿಶೃಂಗಂ ಚ ಮಹಾಪಾಷಾಣಯೋಧಿನೌ ।
ಸ್ವಾಹೇಯಾಯ ದದೌ ಪ್ರೀತಃ ಸ ವಿಂಧ್ಯಃ ಪಾರ್ಷದೌ ಶುಭೌ ॥ ೫೬ ॥
ಸಂಗ್ರಹಂ ವಿಗ್ರಹಂ ಚೈವ ಸಮುದ್ರೋಽಪಿ ಗದಾಧರೌ ।
ಪ್ರದದೌ ಪಾರ್ಷದೌ ವೀತಾ ಮಹೀನದ್ಯಾ ಸಮನ್ವಿತಃ ॥ ೫೭ ॥
ಉನ್ಮಾದಂ ಪುಷ್ಪದಂತಂ ಚ ಶಂಕುಕರ್ಣಂ ತಥೈವ ಚ ।
ಪ್ರದದಾವಗ್ನಿಪುತ್ರಾಯ ಪಾರ್ವತೀ ಶುಭದರ್ಶನಾ ॥ ೫೮ ॥
ಜಯಂ ಮಹಾಜಯಂ ಚೈವ ನಾಗೌ ಜ್ವಲನಸೂನವೇ ।
ಪ್ರದದುರ್ಬಲಿನಾಂ ಶ್ರೇಷ್ಠೌ ಸುಪರ್ಣಃ ಪಾರ್ಷದಾ ವೃಭೌ ॥ ೫೯ ॥
ಏವಂ ಸಾಧ್ಯಾಶ್ಚ ರುದ್ರಾಶ್ಚ ವಸವಃ ಪಿತರಸ್ತಥಾ ।
ಸರ್ವೇ ಜಗತಿ ಯೇ ಮುಖ್ಯಾ ದದುಃ ಸ್ಕಂದಾಯ ಪಾರ್ಷದೌ ॥ ೬೦ ॥

---

೫೪. ವರುಣನು ವೀರರಾದ ಘಸ ಮತ್ತು ಅತಿಘಸರೆಂಬುವರನ್ನು ಕೊಟ್ಟನು. ಎಲೈ ಪಾರ್ಥನೆ! ಹಿಮವಂತನು ತನಗೆ ದೌಹಿತ್ರನಾದ ಕುಮಾರ ಸ್ವಾಮಿಗೆ ಮಹಾತ್ಮನಾದ ಸುವರ್ಚಸ್ಸು, ಅತಿವರ್ಚಸ್ಸು ಎಂಬುವರನ್ನು ಕಳುಹಿಸಿದನು.

೫೫–೫೬. ಮೇರುರಾಜನು ಕಾಂಚನ, ಮೇಘಮಾಲಿಯರನ್ನು ಕೊಟ್ಟನು. ವಿಂಧ್ಯನು ಸ್ವಾಹಾದೇವಿಯ ಪುತ್ರನಿಗೆ ಉತ್ತಮ ಪಾರ್ಷದರೂ, ಮಹಾಪಾಷಾಣಗಳಿಂದ ಯುದ್ಧಮಾಡುವವರೂ ಆದ ಉಚ್ಛ್ರಿತ ಮತ್ತು ಅತಿಶೃಂಗರನ್ನು ಕಳುಹಿಸಿದನು.

೫೭. ಮಹೀನದಿಯೊಡನೆ ಕೂಡಿದ ಸಮುದ್ರರಾಜನು ಗದಾಯುಧ ಧರರಾದ ಸಂಗ್ರಹ, ವಿಗ್ರಹರೆಂಬ ಪಾರ್ಷದಮುಖ್ಯರನ್ನು ಕೊಟ್ಟನು.

೫೮–೫೯. ಸುಂದರಮುಖಿಯಾದ ಪಾರ್ವತಿಯು ಸ್ಕಂದನಿಗೆ ಉನ್ಮಾದ, ಪುಷ್ಪದಂತ ಮತ್ತು ಶಂಕುಕರ್ಣರನ್ನು ಕೊಟ್ಟಳು. ಗರುಡನು ಅಗ್ನಿಪುತ್ರನಾದ ಷಣ್ಮುಖನಿಗೆ ಪಾರ್ಷದೋತ್ತಮರೂ ಬಲಶಾಲಿಗಳಲ್ಲಿ ಶ್ರೇಷ್ಠರೂ ಆದ ಜಯ, ಮಹಾಜಯರೆಂಬ ನಾಗರನ್ನು ಕೊಟ್ಟನು.

೬೦. ಇಂತು ಸಕಲ ಭೂಮಂಡಲದಲ್ಲಿದ್ದ ಸಾಧ್ಯರು, ರುದ್ರರು, ವಸುಗಳು, ಪಿತೃಗಳು, ಮುಂತಾದ ಮುಖ್ಯರೆಲ್ಲರೂ ಕುಮಾರಸ್ವಾಮಿಗೆ ಪಾರ್ಷದರನ್ನು ಕೊಟ್ಟರು.

ನಾನಾವೀರ್ಯಾನ್ಮಹಾವೀರ್ಯಾನ್ನಾನಾಯುಧ ವಿಭೂಷಣಾನ್ ।
ಬಹುಲತ್ವಾನ್ನ ಶಕ್ಯಂತೇ ಸಂಖ್ಯಾತುಂ ತೇ ಚ ಫಾಲ್ಗುನ ॥ ೬೧ ॥
ಮಾತರಶ್ಚ ದದುಸ್ತಸ್ಮೈ ತದಾ ಮಾತೃಗಣಾನ್ಪ್ರಭೋ ।
ಯಾಭಿರ್ವ್ಯಾಪ್ತಾಸ್ತ್ರಯೋ ಲೋಕಾಃ ಕಲ್ಯಾಣೀಭಿಶ್ಚರಾಚರಾಃ ॥ ೬೨ ॥
ಪ್ರಭಾವತೀ ವಿಶಾಲಾಕ್ಷೀ ಗೋಪಾಲಾ ಗೋನಸಾ ತಥಾ ।
ಅಪ್ಸುಜಾತಾ ಬೃಹದ್ದಂಡೀ ಕಾಲಿಕಾ ಬಹುಪುತ್ರಿಕಾ ॥ ೬೩ ॥
ಭಯಂಕರೀ ಚ ಚಕ್ರಾಂಗೀ ತೀರ್ಥನೇಮಿಶ್ಚ ಮಾಧವೀ ।
ಗೀತಪ್ರಿಯಾ ಅಲಾತಾಕ್ಷೀ ಚಟುಲಾ ಶಲಭಾಮುಖೀ । ॥ ೬೪ ॥
ವಿದ್ಯುಜ್ಜಿಹ್ವಾ ರುದ್ರಕಾಲೀ ತತೋಲೂಖಲಮೇಖಲಾ ।
ಶತಘಂಟಾ ಕಿಂಕಿಣಿಕಾ ಚಕ್ರಾಕ್ಷೀ ಚತ್ವರಾಲಯಾ ॥ ೬೫ ॥
ಪೂತನಾ ರೋದನಾ ತ್ವಾಮಾ ಕೋಟರಾ ಮೇಘವಾಹಿನೀ ।
ಊರ್ಧ್ವವೇಣೀಧರಾ ಚೈವ ಜರಾಯುರ್ಜರ್ಜರಾನನಾ ॥ ೬೬ ॥
ಖಟಖೇಟೀ ದಹದಹಾ ತಥಾ ಧಮಧಮಾ ಜಯಾ ।
ಬಹುವೇಣೀ ಬಹುಶಿರಾ ಬಹುಪಾದಾ ಬಹುಸ್ತನೀ ॥ ೬೭ ॥
ಶತೋಲೂಕಮುಖೀ ಕೃಷ್ಣಾ ಕರ್ಣಪ್ರಾವರಣಾ ತಥಾ ।
ಶೂನ್ಯಾಲಯಾ ಧಾನ್ಯವಾಸಾ ಪಶುದಾ ಧಾನ್ಯದಾ ಸದಾ ॥ ೬೮ ॥

---

೬೧-೬೨. ವಿವಿಧ ಪರಾಕ್ರಮವುಳ್ಳವರೂ, ಅಪ್ರಮೇಯ ಬಲವುಳ್ಳವರೂ, ನಾನಾ ವಿಧಗಳಾದ ಆಯುಧಗಳಿಂದಲಂಕೃತರೂ ಆದ ಇವರ ಬಹುಸಂಖ್ಯೆಯಿಂದ ನಿನಗೆ ಎಣಿಸಿಹೇಳಲು ಸಾಧ್ಯವಿಲ್ಲ. ಹಾಗೆಯೇ ಮಾತೃಕೆಯರೂ ಆತನಿಗೆ ಮಾತೃ ಗಣಗಳನ್ನು ಕೊಟ್ಟರು. ಮಂಗಳದಾಯಕಿಯರಾದ ಅವರಿಂದ ಚರಾಚರಾತ್ಮಕ ಗಳಾದ ತ್ರಿಲೋಕಗಳೂ ತುಂಬಿದುವು.

೬೩-೬೮. ಪ್ರಭಾವತಿ, ವಿಶಾಲಾಕ್ಷೀ, ಗೋಪಾಲಾ, ಗೋನಸಾ, ಅಪ್ಸು ಜಾತಾ, ಬೃಹದ್ದಂಡೀ, ಕಾಲಿಕಾ, ಬಹುಪುತ್ರಿಕಾ, ಭಯಂಕರೀ, ಚಕ್ರಾಂಗೀ, ತೀರ್ಥನೇಮಿ, ಮಾಧವೀ, ಗೀತಪ್ರಿಯಾ, ಅಲಾತಾಕ್ಷೀ, ಚಟುಲಾ, ಶಲಭಾ ಮುಖೀ, ವಿದ್ಯುಜ್ಜಿಹ್ವಾ, ರುದ್ರಕಾಲೀ, ಉಲೂಖಲಮೇಖಲಾ, ಶತಘಂಟಾ, ಕಿಂಕಿಣಿಕಾ, ಚಕ್ರಾಕ್ಷೀ, ಚತ್ವರಾಲಯಾ, ಪೂತನಾ, ರೋದನಾ, ಆಮಾ, ಕೋಟರಾ, ಮೇಘವಾಹಿನೀ, ಊರ್ಧ್ವವೇಣೀಧರಾ, ಜರಾಯು, ಜರ್ಜರಾ ನನಾ, ಖಟಖೇಟೀ, ದಹದಹಾ, ಧಮಧಮಾ, ಜಯಾ, ಬಹುವೇಣೀ, ಬಹುಶಿರಾ, ಬಹುಪಾದಾ, ಬಹುಸ್ತನೀ, ಶತೋಲೂಕಮುಖೀ, ಕೃಷ್ಣಾ, ಕರ್ಣಪ್ರಾವರಣಾ, ಶೂನ್ಯಾಲಯಾ, ಧಾನ್ಯವಾಸಾ, ಪಶುದಾ, ಧಾನ್ಯದಾ, ಸದಾ—ಇವರೆಲ್ಲರೂ ಮಾತೃದೇವತೆಯರು.

ಏತಾಶ್ಚಾನ್ಯಾಶ್ಚ ಬಹ್ವ್ಯಶ್ಚ ಮಾತರೋ ಭರತರ್ಷಭ ।
ಬಹುಲತ್ವಾದಹಂ ತಾಸಾಂ ನ ಸಂಖ್ಯಾತುಮಿಹೋತ್ಸಹೇ ॥ ೬೯ ॥
ವೃಕ್ಷಚತ್ವರವಾಸಿನ್ಯಶ್ಚತುಷ್ಪಥ ನಿವೇಶನಾಃ ।
ಗುಹಾಸ್ಮಶಾನವಾಸಿನ್ಯಃ ಶೈಲಪ್ರಸ್ರವಣಾಲಯಾಃ ॥ ೭೦ ॥
ನಾನಾಭರಣವೇಷಾಸ್ತಾ ನಾನಾಮೂರ್ತಿಧರಾಸ್ತಥಾ ।
ನಾನಾಭಾಷಾಯುಧಧರಾಃ ಪರಿವವ್ರುಸ್ತದಾ ಗುಹಂ ॥ ೭೧ ॥
ತತಃ ಸ ಶುಶುಭೇ ಶ್ರೀಮಾನ್ಗುಹೋ ಗುಹ ಇವಾಪರಃ ।
ಸೈನಾಪತ್ಯೇ ಚಾಭಿಷಿಕ್ತೋ ದೇವೈರ್ನಾನಾಮುನೀಶ್ವರೈಃ ॥ ೭೨ ॥
ತತಃ ಪ್ರಣಮ್ಯ ಸರ್ವಾಂಸ್ತಾನೇಕೈಕತ್ವೇನ ಪಾವಕಿಃ ।
ವ್ರಿಯತಾಂ ವರ ಇತ್ಯಾಹ ಭವಬ್ರಹ್ಮಪುರೋಗಮಾನ್ ॥ ೭೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ಕುಮಾರೇಶ ಮಾಹಾತ್ಮ್ಯೇ ಕಾರ್ತಿಕೇಯಸ್ಯ ಸೇನಾನಿತ್ವೇಽಭಿಷೇಕ ವರ್ಣನಂ" ನಾಮ ತ್ರಿಂಶೋಽಧ್ಯಾಯಃ

---

೬೯. ಎಲೈ ಭಾರತಶ್ರೇಷ್ಠನೆ! ಇವರೂ, ಇತರರೂ ಕೂಡ ಅನೇಕರಾಗಿ ಅಲ್ಲಿ ನೆರೆದರು. ಅವರು ಅಸಂಖ್ಯಾತರಾದುದರಿಂದ ಇಲ್ಲಿ ಲೆಕ್ಕಿಸಲು ಸಾಧ್ಯವಿಲ್ಲ.

೭೦–೭೧. ಕೆಲವರು ಮರಗಳ ಒಡಕುಗಳಲ್ಲಿ ವಾಸಿಸುತ್ತಿದ್ದರು. ಹಲವರು ಬೀದಿಗಳ ಚೌಕಗಳಲ್ಲಿರುತ್ತಿದ್ದರು. ಕೆಲವರು ಗುಹೆಗಳಲ್ಲಿಯೂ ಸ್ಮಶಾನಗಳಲ್ಲಿಯೂ ನೆಲಸಿದ್ದರು. ಕೆಲವರು ಬೆಟ್ಟಗಳ ತಪ್ಪಲುಗಳಲ್ಲಿ ಬಿಡಾರಗಳನ್ನು ಮಾಡಿದರು. ಅವರು ವಿಧವಿಧಗಳಾದ ಆಭರಣಗಳನ್ನು ಧರಿಸಿ, ವೇಷಗಳನ್ನು ತಳೆದು, ಬಹು ಪ್ರಕಾರದ ರೂಪಗಳನ್ನು ಸ್ವೀಕರಿಸಿ, ಅನೇಕ ಭಾಷೆಗಳನ್ನು ಮಾತನಾಡುತ್ತ, ವಿವಿಧಾಯುಧಗಳನ್ನು ಹೊಂದಿ ಕುಮಾರಸ್ವಾಮಿಯನ್ನು ಸುತ್ತುವರಿಸಿದರು.

೭೨–೭೩. ಇಂತು ದೇವತೆಗಳಿಂದಲೂ, ಮಹರ್ಷಿಗಳಿಂದಲೂ ಸೈನ್ಯಾಧಿಪತ್ಯದಲ್ಲಿ ಅಭಿಷಿಕ್ತನಾಗಿ ಐಶ್ವರ್ಯಯುಕ್ತನಾದ ಗುಹನು ಅಪ್ರತಿಮನಾಗಿ ಶೋಭಿಸುತ್ತಿದ್ದನು. ಬಳಿಕ ಷಣ್ಮುಖಸ್ವಾಮಿಯು ಬ್ರಹ್ಮನೇ ಮೊದಲಾದವರೆಲ್ಲರಿಗೂ ನಮಸ್ಕರಿಸಿ ಎಲ್ಲರನ್ನೂ ಒಬ್ಬೊಬ್ಬರನ್ನಾಗಿ "ನಿಮಗೆ ಬೇಕಾದ ವರಗಳನ್ನು ಕೇಳಿರಿ" ಎಂದು ಬೆಸಗೊಂಡನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ಕುಮಾರೇಶ ಮಾಹಾತ್ಮ್ಯ— ಕಾರ್ತಿಕೇಯನು ಸೇನಾಧಿಪತಿಯಾಗಿ ಅಭಿಷಿಕ್ತನಾದುದರ ವರ್ಣನ"ವೆಂಬ ಮೂವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಏಕತ್ರಿಂಶೋಽಧ್ಯಾಯಃ

### ಕುಮಾರೇಶ ಮಾಹಾತ್ಮ್ಯೇ ಕುಮಾರಸ್ಯ ತಾರಕಾಸುರ ನಗರಂ ಪ್ರತಿಗಮನ ವರ್ಣನಂ

ನಾರದ ಉವಾಚ :—

ತೇ ಚೈನು ಯೋಜ್ಯ ಚಾಶೀರ್ಭಿರಯಾಚಂತ ವರಂ ಗುಹಂ ।
ಏಷ ಏವ ವರೋಽಸ್ಮಾಕಂ ಯತ್ಪಾಪಂ ತಾರಕಂ ಜಹಿ ॥ ೧ ॥
ಏವಮಸ್ತ್ವಿತಿ ತಾನುಕ್ತ್ವಾ ಯೋಗೋಯೋಗ ಇತಿ ಬ್ರುವನ್ ।
ತಾರಕಾರಿರ್ಮಹಾತೇಜಾ ಮಯೂರಂ ಚಾಧ್ಯರೋಹತ ॥ ೨ ॥
ಶಕ್ತಿಹಸ್ತೋ ವಿನದ್ಯಾಥ ಗುಹೋ ದೇವಾಂಸ್ತದಾಬ್ರವೀತ್ ।
ಯದ್ಯದ್ಯ ತಾರಕಂ ಪಾಪಂ ನಾಹಂ ಹನ್ಮಿ ಸುರೋತ್ತಮಾಃ ॥ ೩ ॥
ಗೋಬ್ರಾಹ್ಮಣಾವಮಂತೄಣಾಂ ತತೋ ಯಾಮಿ ಗತಿಂ ಸ್ಫುಟಂ ।
ಏವಂ ತೇನ ಪ್ರತಿಜ್ಞಾನೇ ಶಬ್ದೋಽತಿಸುಮಹಾನಭೂತ್ ॥ ೪ ॥
ಯೋಗೋಯೋಗ ಇತಿಪ್ರಾಹುರಾಜ್ಞಯಾ ಶರಜನ್ಮನಃ ।
ಅರಜೋವಾಸಸೀ ರಕ್ತೇ ವಸಾನಃ ಪಾರ್ವತೀಸುತಃ ॥ ೫ ॥

---

## ಕನ್ನಡದ ಅನುವಾದ

### ಕುಮಾರೇಶ ಮಾಹಾತ್ಮ್ಯ—ಕುಮಾರಸ್ವಾಮಿಯು ತಾರಕಾಸುರ ನಗರವನ್ನು ಕುರಿತು ಹೋಗುವಿಕೆಯ ವರ್ಣನ

೧–೨. ನಾರದನು ಹೇಳುತ್ತಾನೆ:—ಬಳಿಕ ದೇವತೆಗಳೆಲ್ಲರೂ ಆ ಗುಹನಿಗೆ ಅನೇಕ ಆಶೀರ್ವಾದಗಳನ್ನುಮಾಡಿ "ಎಲೈ ಸ್ವಾಮಿಯೆ! ನೀನು ಪಾಪಿಯಾದ ತಾರಕಾಸುರನನ್ನು ಸಂಹರಿಸು ; ಇದೇ ನಮಗೆ ಉತ್ತಮವಾದ ವರವು" ಎಂದು ಹೇಳಿದರು. ಹಾಗೆಯೇ ಆಗಲೆಂದು ಅವರನ್ನು ಸಂತೈಸಿ ಯೋಗ ಯೋಗವೆನ್ನುತ್ತ ಮಹಾತೇಜಸ್ಸಿನಿಂದ ಮೆರೆಯುವ ಆ ಸ್ಕಂದಸ್ವಾಮಿಯು ತಾರಕಾಸುರನ ಸಂಹಾರಕ್ಕೆ ಹೊರಡುವನಾಗಿ ತನ್ನವಾಹನವಾದ ನವಿಲನ್ನು ಏರಿದನು.

೩–೫. ಸಿಂಹನಾದವನ್ನು ಮಾಡುತ್ತ ಶಕ್ತ್ಯಾಯುಧವನ್ನು ಕೈಯಲ್ಲಿ ಹಿಡಿದು ದೇವತೆಗಳನ್ನು ಕುರಿತು "ಎಲೈ ಸುರೋತ್ತಮರೆ! ಇಂದು ನಾನು ತಾರಕಾಸುರನನ್ನು ಸಂಹರಿಸದೆ ಹೋದರೆ, ನನಗೆ ಗೋಬ್ರಾಹ್ಮಣರನ್ನು ಅವಮಾನ ಪಡಿಸಿದವರಿಗಾಗುವ ದುರ್ಗತಿಯುಂಟಾಗಲಿ" ಎಂದು ಪ್ರತಿಜ್ಞೆಯನ್ನು ಮಾಡಿದನು. ಈ ಭೀಷಣ ಪ್ರತಿಜ್ಞೆಯನ್ನು ಕೇಳಿ ಎತ್ತೆತ್ತಲೂ ಮಹತ್ತರವಾದ ಜಯಘೋಷವುಂಟಾಯಿತು. ಆಗ ಕಾರ್ತಿಕೇಯನ ಆಜ್ಞಾನುಸಾರವಾಗಿ ನೆರೆದವರೆಲ್ಲರೂ ಯೋಗ–ಯೋಗವೆಂದು ಕೂಗಿದರು. ಬಳಿಕ ಸ್ಕಂದನು ಶುಭ್ರವಾದ ವಸ್ತ್ರ ಯುಗ್ಮವನ್ನು ಧರಿಸಿದನು.

ಅಥಾಗ್ರೇ ಸರ್ವದೇವಾನಾಂ ಸ್ಥಿತೋ ವೀರೋ ಯಯೌ ಮುದಾ ।
ತಸ್ಯ ಕೇತುರಲಂ ಭಾತಿ ಚರಣಾಯುಧಶೋಭಿತಃ ।
ಚರಣಾಭ್ಯಾಂ ಗಿರೀನ್ಸಕ್ತೋ ಯೋ ವಿದಾರಯಿತುಂ ರಣೇ ॥ ೬ ॥
ಯಾ ಚೇಷ್ಟಾ ಸರ್ವಭೂತಾನಾಂ ಪ್ರಭಾ ಶಾಂತಿರ್ಬಲಂ ಯಥಾ ।
ತನ್ಮಯಾ ಗುಹಶಕ್ತಿಃ ಸಾ ಭೃಶಂ ಹಸ್ತೇ ವ್ಯರೋಚತ ॥ ೭ ॥
ಯದ್ದಾರ್ಢ್ಯಂ ಸರ್ವಲೋಕೇಷು ತನ್ಮಯಂ ಕವಚಂ ತಥಾ ।
ಯೋತ್ಸ್ಯಮಾನಸ್ಯ ವೀರಸ್ಯ ದೇಹೇ ಪ್ರಾದುರಭೂತ್ಸ್ವಯಂ ॥ ೮ ॥
ಧರ್ಮಂ ಸತ್ಯಮಸಮ್ಮೋಹಸ್ತೇಜಃ ಕಾಂತತ್ವಮುಕ್ಸ್ಪತಿಃ ।
ಬಲಮೋಜಃ ಕೃಪಾ ಚೈವ ಬದ್ಧ್ವಾ ಕರಯುಗಂ ತಥಾ ॥ ೯ ॥
ಆದೇಶಕಾರಿಣ್ಯಗ್ರೇಽಸ್ಯ ಸ್ವಯಂ ತಸ್ಥುರ್ಮಹಾತ್ಮನಃ ॥ ೧೦ ॥
ತಮಗ್ರೇ ಚಾಪಿ ಗಚ್ಛಂತಂ ಪೃಷ್ಠತೋಽನುಯಯೌ ಹರಃ ।
ರಥೇನಾದಿತ್ಯವರ್ಣೇನ ಪಾರ್ವತ್ಯಾ ಸಹಿತಃ ಪ್ರಭುಃ ॥ ೧೧ ॥
ನಿರ್ಮಿತೇನ ಹರೇಣೈವ ಸ್ವಯಮೀಶೇನ ಲೀಲಯಾ ।
ಸಹಸ್ರಂ ತಸ್ಯ ಸಿಂಹಾನಾಂ ತಸ್ಮಿನ್ಯುಕ್ತಂ ರಥೋತ್ತಮೇ ॥ ೧೨ ॥

---

೬. ಆತನು ಸಮಸ್ತ ದೇವತೆಗಳ ಮುಂಗಡೆಯಲ್ಲಿ ನಿಂತು ವೀರನಾಗಿ ಸಂತೋಷದಿಂದ ಹೊರಟನು. ಆತನ ಧ್ವಜವು ಕುಕ್ಕುಟಾಲಂಕೃತವಾಗಿ ಬಹುವಾಗಿ ಶೋಭಿಸುತ್ತಿದ್ದಿತು. ಯುದ್ಧದಲ್ಲಿ ಬೆಟ್ಟಗಳನ್ನು ಸೀಳುವುದಕ್ಕೂ ಸಹ ಶಕ್ತಗಳಾದ ಕಾಲುಗಳು ಆ ಕುಕ್ಕುಟಕ್ಕಿದ್ದುವು.

೭. ಸಕಲಪ್ರಾಣಿಗಳಿಗೂ ಶಾಂತಿ, ಬಲಗಳಂತೆ ಅತ್ಯಂತ ಪ್ರಿಯವಾದ ಪ್ರಾಣಶಕ್ತಿಯಿಂದ ಕೂಡಿದ ಶಕ್ತ್ಯಾಯುಧವು ಆತನ ಕೈಯಲ್ಲಿ ಬಹಳವಾಗಿ ಶೋಭಿಸುತ್ತಿದ್ದಿತು.

೮. ಸಮಸ್ತ ಪ್ರಪಂಚಗಳ ದಾರ್ಢ್ಯವೂ ಆತನ ಕವಚದಲ್ಲಿ ಅಡಗಿದ್ದಿತು. ಯುದ್ಧಮಾಡಲೆಳಸುತ್ತಿರುವ ವೀರನಾದ ಆತನ ದೇಹದಲ್ಲಿಯೇ ಅದು ತಾನಾಗಿ ಉಂಟಾಯಿತು.

೯–೧೦. ಹಾಗೆಯೇ ಮಹಾತ್ಮನಾದ ಷಣ್ಮುಖನ ಆಜ್ಞಾನುವರ್ತಿಗಳಾಗಿ ಕೈಗಳನ್ನು ಜೋಡಿಸಿಕೊಂಡು ಧರ್ಮ, ಸತ್ಯ, ಜ್ಞಾನ, ತೇಜಸ್ಸು, ದೇಹಕಾಂತಿ, ದಾರ್ಢ್ಯ, ಬಲ, ವೀರ್ಯ, ಕೃಪೆ, ಮುಂತಾದ ಗುಣಗಳು ನಿಂತಿದ್ದುವು.

೧೧. ಮುಂದೆ ಹೋಗುತ್ತಿರುವ ಸ್ಕಂದನನ್ನು ಮಹೇಶ್ವರನು ಪಾರ್ವತಿಯೊಡನೆ ಸೂರ್ಯಸಂಕಾಶವಾದ ರಥದಲ್ಲಿ ಕುಳಿತು ಹಿಂಬಾಲಿಸಿ ಹೊರಟನು.

೧೨. ಆ ರಥವು ಮಹೇಶ್ವರನ ಇಚ್ಛಾಮಾತ್ರದಿಂದಲೇ ನಿರ್ಮಿತವಾಗಿ ಒಂದು ಸಾವಿರ ಸಿಂಹಗಳಿಂದ ಎಳೆಯಲ್ಪಟ್ಟುದಾಗಿದ್ದಿತು.

ಅಭೀಷೂನ್ಪುರುಷವ್ಯಾಘ್ರ ಬ್ರಹ್ಮಾ ಚ ಜಗೃಹೇ ಸ್ವಯಂ ।
ತೇ ಪಿಬಂತ ಇವಾಕಾಶಂ ತ್ರಾಸಯಂತಶ್ಚರಾಚರಂ ।
ಸಿಂಹಾ ರಥಸ್ಯ ಗಚ್ಛಂತೋ ನದಂತಶ್ಚಾರುಕೇಸರಾಃ ॥ ೧೩ ॥
ತಸ್ಮಿನ್ರಥೇ ಪಶುಪತಿಃ ಸ್ಥಿತೋ ಭಾತ್ಯುಮಯಾ ಸಹ ।
ವಿದ್ಯುತಾ ಮಂಡಿತಃ ಸೂರ್ಯಃ ಸೇಂದ್ರಚಾಪಘನೋ ಯಥಾ ॥ ೧೪ ॥
ಅಗ್ರತಸ್ತಸ್ಯ ಭಗವಾನ್ಧನೇಶೋ ಗುಹ್ಯಕೈಃ ಸಹ ।
ಆಸ್ಥಾಯ ರುಚಿರಂ ಯಾತಿ ಪುಷ್ಪಕಂ ನರವಾಹನಃ ॥ ೧೫ ॥
ಐರಾವಣಂ ಸಮಾಸ್ಥಾಯ ಶಕ್ರಶ್ಚಾಪಿ ಸುರೈಃ ಸಹ ।
ಪೃಷ್ಠತೋಽನುಯಯೌ ಯಾಂತಂ ವರದಂ ವೃಷಭಧ್ವಜಂ ॥ ೧೬ ॥
ತಸ್ಯ ದಕ್ಷಿಣತೋ ದೇವಾ ಮರುತಶ್ಚಿತ್ರಯೋಧಿನಃ ।
ಗಚ್ಛಂತಿ ವಸುಭಿಃ ಸಾರ್ಧಂ ರುದ್ರೈಶ್ಚ ಸಹ ಸಂಗತಾಃ ॥ ೧೭ ॥
ಯಮಶ್ಚ ಮೃತ್ಯುನಾ ಸಾರ್ಧಂ ಸರ್ವತಃ ಪರಿವಾರಿತಃ ।
ಘೋರೈರ್ವ್ಯಾಧಿಶತೈಶ್ಚಾಪಿ ಸವ್ಯತೋ ಯಾತಿ ಕೋಪಿತಃ ॥ ೧೮ ॥

---

೧೩. ಎಲೈ ಪಾರ್ಥನೆ! ಭಯರಹಿತಗಳಾದ ಆ ಸಿಂಹಗಳ ಕಡಿವಾಣಗಳನ್ನು ಬ್ರಹ್ಮನು ತಾನೇ ಹಿಡಿದು ಕುಳಿತಿದ್ದನು. ಆ ರಥಸಿಂಹಗಳು ಆಕಾಶವನ್ನೇ ನುಂಗುವಂತೆ ಕಾಣುತ್ತ, ಸಮಸ್ತ ಚರಾಚರಗಳನ್ನೂ ಭಯಗೊಳಿಸಿ, ಘರ್ಜಿಸುತ್ತ ಮನೋಹರಗಳಾದ ಕೇಸರಗಳಿಂದೊಡಗೂಡಿ ಶೋಭಿಸುತ್ತಿರುವವುಗಳಾಗಿ ನುಗ್ಗಿ ಹೊರಟುವು.

೧೪. ಆ ರಥದಲ್ಲಿ ಪರಮೇಶ್ವರನು ಪಾರ್ವತೀಸಹಿತನಾಗಿ ಮಿಂಚಿನಿಂದ ಹೊಳೆಯುವ ಸೂರ್ಯನಂತೆಯೂ, ಕಾಮನಬಿಲ್ಲಿನಿಂದ ಕಂಗೊಳಿಸುವ ಮೇಘ ಮಂಡಲದಂತೆಯೂ ಕಾಣುತ್ತಿದ್ದನು.

೧೫. ಆತನ ಮುಂದೆ ನರವಾಹನನಾದ ಕುಬೇರನು ಮನೋಹರವಾದ ಪುಷ್ಪಕ ವಿಮಾನವನ್ನು ಏರಿ ತನ್ನ ಪರಿವಾರಗಳಾದ ಗುಹ್ಯಕರೊಡನೆ ಪರಿವೃತ ನಾಗಿ ಹೊರಟನು.

೧೬–೧೭. ಮಹೇಂದ್ರನೂ ಸಹ ಐರಾವಣವೆಂಬ ಆನೆಯನ್ನೇರಿ ದೇವತೆ ಗಳೊಡನೆ ವರಪ್ರದನೂ, ವೃಷಭವಾಹನನೂ ಆದ ಪರಮೇಶ್ವರನನ್ನು ಹಿಂಬಾಲಿಸಿದನು. ಆತನ ಬಲಗಡೆಯಲ್ಲಿಯೇ ದೇವತೆಗಳೂ, ಮರುತ್ತುಗಳೂ ಅಷ್ಟವಸುಗಳೂ, ಏಕಾದಶರುದ್ರರೊಡನೆ ಕಲೆತು ಹೊರಟರು.

೧೮. ಯಮನೂ ಕೂಡ ರೋಷದಿಂದ ಮೃತ್ಯುವಿನೊಡನೆ ಸೇರಿ ಘೋರ ರಾದ ನೂರಾರು ವ್ಯಾಧಿಗಳಿಂದ ಸುತ್ತುವರೆಯಲ್ಪಟ್ಟು ಮಹಾದೇವನ ಎಡಗಡೆ ಯಲ್ಲಿ ಹೊರಟು ನಿಂತನು.

ಯಮಸ್ಯ ಪೃಷ್ಠತಶ್ಚಾಪಿ ಘೋರಸ್ತ್ರಿಶಿಖರಃ ಸಿತಃ ।
ವಿಜಯೋ ನಾಮ ರುದ್ರಸ್ಯ ಯಾತಿ ಶೂಲಃ ಸ್ವಯಂ ಕೃತಃ ॥ ೧೯ ॥
ತಮುಗ್ರಪಾಶೋ ಭಗವಾನ್ವರುಣಃ ಸಲಿಲೇಶ್ವರಃ ।
ಪರಿವಾರ್ಯ ಶತೈರ್ಯಾತಿ ಯಾದೋಭಿರ್ವಿವಿಧೈರ್ವೃತಃ ॥ ೨೦ ॥
ಪೃಷ್ಠತೋ ವಿಜಯಸ್ಯಾಪಿ ಯಾತಿ ರುದ್ರಸ್ಯ ಪಟ್ಟಿಶಃ ।
ಗದಾ ಮುಸಲ ಶಕ್ತ್ಯಾದ್ಯೈರ್ವರಪ್ರಹರಣೈರ್ವೃತಃ ॥ ೨೧ ॥
ಪಟ್ಟಿಶಂ ಚಾನ್ವಗಾತ್ಪಾರ್ಥ ಅಸ್ತ್ರಂ ಪಾಶುಪತಂ ಮಹತ್ ।
ಬಹುಶೀರ್ಷಂ ಮಹಾಘೋರಮನೇಕಪಾದಂ ಬಹೂದರಂ ॥ ೨೨ ॥
ಕಮಂಡಲುಶ್ಚಾಸ್ಯ ಪಶ್ಚಾನ್ಮಹರ್ಷಿಗಣ ಸೇವಿತಃ ।
ತಸ್ಯ ದಕ್ಷಿಣತೋ ಭಾತಿ ದಂಡೋ ಗಚ್ಛನ್ಶ್ರಿಯಾ ವೃತಃ ॥ ೨೩ ॥
ಭೃಗ್ವಂಗಿರೋಭಿಃ ಸಹಿತೋ ದೇವೈರಪ್ಯಭಿಪೂಜಿತಃ ॥ ೨೪ ॥
ರಾಕ್ಷಸಾಶ್ಚಾನ್ಯದೇವಾಶ್ಚ ಗಂಧರ್ವಾ ಭುಜಗಾಸ್ತಥಾ ।
ನದ್ಯೋ ನದಾಃ ಸಮುದ್ರಾಶ್ಚ ಮುನಯೋಽಪ್ಸರಸಾಂ ಗಣಾಃ ॥ ೨೫ ॥

---

೧೯. ಯಮದೇವನ ಹಿಂದೆಯೇ ಭಯಂಕರವೂ ಮೂರು ಮೊನೆಗಳುಳ್ಳದಾಗಿ ಶ್ವೇತವರ್ಣವಿಶಿಷ್ಟವೂ ಆದ ವಿಜಯವೆಂಬ ಹೆಸರುಳ್ಳ ತ್ರಿಶೂಲವು ತಾನೇ ಮೂರ್ತಿಗೂಡಿದ್ದಿತು.

೨೦. ಕ್ರೂರಪಾಶವನ್ನು ಹೊಂದಿದವನೂ, ಸಮುದ್ರಗಳಿಗೆ ಅಧಿಪತಿಯೂ ಆದ ವರುಣನು ವಿವಿಧರಾದ ನೂರಾರು ಜಲಚರರಿಂದೊಡಗೂಡಿ ಆ ಶೂಲವನ್ನು ರಕ್ಷಿಸುತ್ತಿದ್ದನು.

೨೧. ಆ ತ್ರಿಶೂಲದ ಹಿಂದೆಯೇ ಗದೆ, ಮುಸಲ, ಶಕ್ತಿ ಮುಂತಾದ ದಿವ್ಯಾಯುಧಗಳಿಂದ ಪರಿವೃತವಾದ ಪರಮೇಶ್ವರನ ಪಟ್ಟಿಶವು ಹೊರಟಿತು.

೨೨. ಅದರ ಹಿಂದೆ ಅನೇಕ ಶೀರ್ಷವೂ, ಮಹಾ ಘೋರವೂ, ಒಂದೇ ಪಾದವುಳ್ಳುದೂ, ವಿಶಾಲೋದರವುಳ್ಳುದೂ ಆದ ಪಾಶುಪತಾಸ್ತ್ರವು ಇದ್ದಿತು.

೨೩. ಪಾಶುಪತಾಸ್ತ್ರದ ಹಿಂದೆ ಮಹರ್ಷಿಗಳಿಂದ ಸೇವೆಗೊಳ್ಳುತ್ತಲಿರುವ ಕಮಂಡಲುವಿದ್ದಿತು. ಅದರ ಬಲಗಡೆಯಲ್ಲಿಯೇ ಸಂಪದ್ಯುಕ್ತವಾದ ಯೋಗ ದಂಡವು ಶೋಭಿಸುತ್ತಿತ್ತು.

೨೪–೨೬. ಆ ದಂಡವು ಭೃಗು, ಅಂಗಿರಸರೆಂಬ ಋಷಿಗಳಿಂದ ಸೇರಿಸಲ್ಪಟ್ಟು ದೇವತೆಗಳಿಗೂ ಪೂಜನೀಯವಾಗಿದ್ದಿತು. ಅಂತೆಯೇ ರಾಕ್ಷಸರೂ, ಇತರ ದೇವತೆಗಳೂ, ಗಂಧರ್ವರೂ, ಸರ್ಪಗಳೂ, ನದಿಗಳೂ, ನದಗಳೂ, ಸಮುದ್ರಗಳು, ಮುನಿಗಳು, ಅಪ್ಸರಸರು, ನಕ್ಷತ್ರಗಳು, ನವಗ್ರಹಗಳು, ಸ್ಥಾವರ

ನಕ್ಷತ್ರಾಣಿ ಗ್ರಹಾಶ್ಚೈವ ಜಂಗಮಂ ಸ್ಥಾವರಂ ತಥಾ ।
ಮಾತರಶ್ಚ ಮಹಾದೇವಮನುಜಗ್ಮುಃ ಕ್ಷುಧಾನ್ವಿತಾಃ ॥ ೨೬ ॥
ಸರ್ವೇಷಾಂ ಪೃಷ್ಠತಶ್ಚಾಸೀತ್ತಾರ್ಕ್ಷ್ಯಸ್ಥೋ ಬುದ್ಧಿಮಾನ್ಹರಿಃ ।
ಪಾಲಯನ್ಪೃತನಾಂ ಸರ್ವಾಂ ಸ್ವಪರೀವಾರಸಂವೃತಃ ॥ ೨೭ ॥
ಏವಂ ಸೈನ್ಯಸಮೋಪೇತ ಉತ್ತರಂ ತಟಿಮಾಗತಃ ।
ತಾಮ್ರಪ್ರಾಕಾರಮಾಶ್ರಿತ್ಯ ತಸ್ಥೌ ತ್ರ್ಯಂಬಕನಂದನಃ ॥ ೨೮ ॥
ಸ ತಾರಕಪುರಸ್ಯಾಪಿ ಪಶ್ಯನ್ನೃದ್ಧಿಮನುತ್ತಮಾಂ ।
ವಿಸಿಸ್ಮಯೇ ಮಹಾಸೇನಃ ಪ್ರಶಶಂಸ ತಪೋಽಸ್ಯ ಚ ॥ ೨೯ ॥
ಸ್ಥಿತಃ ಪಶ್ಯನ್ಸ ಶುಶುಭೇ ಮಯೂರಸ್ಥೋ ಗುಹಸ್ತದಾ ।
ಛತ್ರೇಣ ಧ್ರಿಯಮಾಣೇನ ಸ್ವಯಂ ಸೋಮಸಮತ್ವಿಷಾ ॥ ೩೦ ॥
ವೀಜ್ಯಮಾನಶ್ಚಾಮರಾಭ್ಯಾಂ ವಾಯ್ವಗ್ನಿಭ್ಯಾಂ ಮಹಾದ್ಯುತಿಃ ।
ಮಾತೃಭಿಶ್ಚ ಸುರೈರ್ದತ್ತೈಃ ಸ್ವೈರ್ಗಣೈರಪಿ ಸಂವೃತಃ ॥ ೩೧ ॥

---

ಜಂಗಮ ಪ್ರಾಣಿಗಳು, ಹಸಿವಿನಿಂದ ಹಾತೊರೆಯುತ್ತಿದ್ದ ಮಾತೃಗಣಗಳೂ ಸಹ ಮಹಾದೇವನನ್ನು ಹಿಂಬಾಲಿಸಿದರು.

೨೭. ಎಲ್ಲರಿಗೂ ಹಿಂಭಾಗದಲ್ಲಿ ಬುದ್ಧಿವಂತನಾದ ಮಹಾ ವಿಷ್ಣುವು ಗರುಡನನ್ನೇರಿ ತನ್ನ ಸೈನ್ಯಗಳಿಂದ ಈ ಮಹಾ ಸೇನೆಯೆಲ್ಲವನ್ನೂ ಕಾಪಾಡುತ್ತ ನಡೆದನು.

೨೮. ಇಂತು ಅಪಾರ ಸೇನೆಯೊಡನೆ ಪರಮೇಶ್ವರನ ಪುತ್ರನಾದ ಕಾರ್ತಿಕೇಯಸ್ವಾಮಿಯು ಉತ್ತರ ತೀರವನ್ನು ಸೇರಿ ತಾಮ್ರಪ್ರಾಕಾರದಲ್ಲಿ ಬೀಡನ್ನು ಬಿಟ್ಟನು.

೨೯. ಆತನು ತಾರಕಾಸುರನ ಪಟ್ಟಣದ ಸೌಭಾಗ್ಯದ ಮೇಲ್ಮೆಯನ್ನು ಕಂಡು ಅತ್ಯಂತ ವಿಸ್ಮಯಗೊಂಡು ಆ ರಾಕ್ಷಸೇಶ್ವರನ ತಪಸ್ಸಿನ ಮಹಿಮೆಯನ್ನು ಕೊಂಡಾಡಿದನು.

೩೦. ಇಂತು ನಿಂತು ಶತ್ರುಪಟ್ಟಣವನ್ನು ನೋಡುತ್ತಿರುವ ಷಣ್ಮುಖನು ಮಯೂರವನ್ನೇರಿ ತಲೆಯಮೇಲೆ ಹಿಡಿಯಲ್ಪಟ್ಟ ಶ್ವೇತಛತ್ರದಿಂದ ಕಾಂತಿಗೊಂಡು ಪರಮೇಶ್ವರನಂತೆಯೇ ಕಾಣುತ್ತಿದ್ದನು.

೩೧. ವಾಯುವೂ, ಅಗ್ನಿಯೂ ತೇಜೋವಂತನಾದ ಆತನಿಗೆ ಎರಡು ಕಡೆಗಳಲ್ಲಿಯೂ ಚಾಮರಗಳನ್ನಿಕ್ಕುತ್ತಿದ್ದರು. ಆ ಷಣ್ಮುಖನಾದರೋ ದೇವತೆಗಳಿಂದ ಕೊಡಲ್ಪಟ್ಟ ಮಾತೃಗಣಗಳಿಂದಲೂ, ತನ್ನ ಸ್ವಂತ ಪರಿಚಾರಕಗಣಗಳಿಂದಲೂ ಕೂಡಿದ್ದನು.

ತತಃ ಪ್ರಣಮ್ಯ ತಂ ಶಕ್ರೋ ದೇವಮಧ್ಯೇ ವಚೋಽಬ್ರವೀತ್ ।
ಪಶ್ಯ ಪಶ್ಯ ಮಹಾಸೇನ ದೈತ್ಯಾನಾಂ ಬಲಶಾಲಿನಾಂ ॥
ಯೇ ತ್ವಾಂ ಕಾಲಂ ನಜಾನಂತಿ ಮರ್ತ್ಯಾ ಗೃಹರತಾ ಇವ ॥ ೩೨ ॥
ಏತೇಷಾಂ ಚ ಗೃಹೇ ದೂತೋ ಯುಸ್ಮಾತ್ವಂ ಶಂಸತು ತಾರಕಂ ।
ವೀರಾಣಾಮುಚಿತಂ ತ್ವೇತತ್ಕೀರ್ತಿದಂ ಚ ಮಹಾಜನೇ ॥ ೩೩ ॥
ಅನುಜ್ಞಾಯಾ ತತಃ ಸ್ಕಂದಭಕ್ತಂ ಶಕ್ರೋ ಧನಂಜಯ ।
ಮಾಮಾದಿಶ್ಯಾಸುರೇಂದ್ರಾಯ ಪ್ರಾಹಿಣೋದ್ದೌತ್ಯಯೋಗ್ಯಕಂ ॥ ೩೪ ॥
ಅಹಂ ಸ್ವಯಂ ಗಂತುಕಾಮಃ ಶಕ್ರೇಣಾಪಿ ಚ ಪ್ರೇಷಿತಃ ।
ಪ್ರಾಸಾದೇ ಸ್ತ್ರೀ ಸಹಸ್ರಾಣಾಂ ಪ್ರಾವೋಚಂ ಮಧ್ಯತೋಽಸ್ಯಹಂ ॥ ೩೫ ॥
ಅಸುರಾಧಮ ದುರ್ಬುದ್ಧೇ ಶಕ್ರಸ್ತ್ವಾಮಾಹ ತಚ್ಛೃಣು ॥ ೩೬ ॥
ಯಜ್ಜಗದ್ದಲನಾದಾಪ್ತಂ ಕಿಲ್ಬಿಷಂ ದಾನವ ತ್ವಯಾ ।
ತಸ್ಯಾಹಂ ನಾಶಕಸ್ತೇಽದ್ಯ ಪುರುಷಶ್ಚೇದ್ಭವಿಷ್ಯಸಿ ॥ ೩೭ ॥

---

೩೨. ಆಗ ಇಂದ್ರನು ದೇವತೆಗಳೊಡನೆ ಆತನನ್ನು ನಮಸ್ಕರಿಸಿ ಇಂತೆಂದನು:—"ಎಲೈ ಮಹಾಸೇನನೆ! ನೋಡು. ಸಂಸಾರದಲ್ಲಿ ನಿರತರಾದ ಮೂಢರು ನಿತ್ಯಸನ್ನಿಹಿತವಾದ ಮೃತ್ಯುವನ್ನೆಂತು ತಿಳಿಯರೊ, ಅಂತೆಯೇ ಯಮಸ್ವರೂಪನಾದ ನಿನ್ನ ಆಗಮನವನ್ನು ತಿಳಿಯಲಾರದ ಬಲಿಷ್ಠರಾದ ಈ ರಾಕ್ಷಸರನ್ನು ನೋಡು.

೩೩. ನೀನು ಬಂದಿರುವ ವಿಷಯವನ್ನು ಈ ರಾಕ್ಷಸರ ನಿವಾಸದಲ್ಲಿರುವ ತಾರಕಾಸುರನಿಗೆ ನಮ್ಮಕಡೆಯ ದೂತನೊಬ್ಬನು ತಿಳಿಸಿ ಬರಲಿ. ಇದು ವೀರರಿಗೆ ಉಚಿತವಾದ ಸಂಪ್ರದಾಯವು. ಅಲ್ಲದೆ ಈ ದೂತಸಂಪ್ರೇಷಣವು ಮಹಾತ್ಮರಲ್ಲಿ ಕೀರ್ತಿಯನ್ನು ತರುವಂತಹುದು."

೩೪. ಎಲೈ ಅರ್ಜುನನೆ! ಬಳಿಕ ಸ್ಕಂದನಿಂದ ಆಜ್ಞಪ್ತನಾಗಿ ಮಹೇಂದ್ರನು ಭಕ್ತನಾದ ನಾನೇ ದೂತಕಾರ್ಯಕ್ಕೆ ಯೋಗ್ಯನೆಂದು ತಿಳಿದು ರಾಕ್ಷಸರಾಜನ ಕಡೆಗೆ ನನ್ನನ್ನು ಕಳಿಸಿಕೊಟ್ಟನು.

೩೫. ನಾನೂ ಕೂಡ ಹೋಗಲು ಕುತೂಹಲವುಳ್ಳವನಾಗಿದ್ದೆನು. ಮೇಲೆ ದೇವೇಂದ್ರನಿಂದಲೂ ಪ್ರೇಷಿತನಾಗಿ ಅಂತಃಪುರದ ಉಪ್ಪರಿಗೆಯಲ್ಲಿ ಸಾವಿರಾರು ಸ್ತ್ರೀಯರ ಮಧ್ಯದಲ್ಲಿದ್ದ ಆ ತಾರಕಾಸುರನನ್ನು ಕುರಿತು ಹೇಳತೊಡಗಿದೆನು.

೩೬–೩೭. "ಎಲೈ ಬುದ್ಧಿಹೀನನಾದ ರಾಕ್ಷಸಾಧಮನೆ! ಇಂದ್ರನು ನಿನಗೆ ಹೇಳಿಕಳುಹಿಸಿರುವ ಮಾತುಗಳನ್ನು ಕೇಳು. ನಿನ್ನಿಂದ ಪ್ರಪಂಚಹಿಂಸಾರೂಪವಾದ ಯಾವ ಪಾಪವು ಮಾಡಲ್ಪಟ್ಟಿರುವುದೊ ಅದರ ನಿರ್ಮೂಲವನ್ನುಮಾಡಲು ನಾನು ಪ್ರಾಪ್ತನಾಗಿರುವೆನು. ನೀನು ನಿಜವಾಗಿಯೂ ವೀರಪುರುಷನಾದರೆ

ಶೀಘ್ರಂ ನಿಃಸರ ಪಾಪಿಷ್ಠ ನಿಃಸರಿಷ್ಯಸಿ ಚೇನ್ನಹಿ ।
ಕ್ಷಣಾತ್ತ್ವವ ಪುರಂ ಕ್ಷೇಪ್ಸ್ಯೇ ಪಾವಿತ್ರ್ಯಾಯೈವ ಸಾಗರೇ ॥ ೩೮ ॥
ಇತಿ ಶ್ರುತ್ವಾ ಖರೂಕ್ಷವಾಚಂ ಕ್ರುದ್ಧಃ ಸ್ತ್ರೀಗಣಸಂವೃತಃ ।
ಮುಷ್ಟಿಮುದ್ಯಮ್ಯ ಮಾಂ ಧಾವದ್ಭೀತಶ್ಚಾಹಂ ಪಲಾಯಿತಃ ॥ ೩೯ ॥
ವ್ಯಾಕುಲಸ್ತತ್ರ ವೃತ್ತಾಂತಂ ಕುಮಾರಾಯ ನ್ಯವೇದಯಂ ।
ಮಯಿ ಚಾಪ್ಯಾಗತೇ ದೈತ್ಯಶ್ಚಿಂತಯಾಮಾಸ ಚೇತಸಿ ॥ ೪೦ ॥
ನಾಲಬ್ಧಸಂಶ್ರಯಃ ಶಕ್ರೋ ವಕ್ತುಮೇತದಿಹಾರ್ಹತಿ ।
ನಿಮಿತ್ತಾನಿ ಚ ಘೋರಾಣಿ ಸಂತ್ರಾಸಂ ಜನಯಂತಿ ಮೇ ॥ ೪೧ ॥
ಏವಂ ವಿಚಿಂತ್ಯ ಚೋತ್ಥಾಯ ಗವಾಕ್ಷಸ್ಯೋಽಧ್ಯರೋಹತ ।
ಸಹಸ್ರಭೌಮಿಕಾವಾಸಶೃಂಗವಾತಾಯನ ಸ್ಥಿತಃ ॥ ೪೨ ॥
ಅಪಶ್ಯದ್ದೇವಸೈನ್ಯಂ ಸ ದಿವಂ ಭೂಮಿಂ ಚ ಸಂವೃತಂ ।
ರಥೈರ್ಗಜೈರ್ಹಯೈಶ್ಚಾಪಿ ನಾದಿತಾಶ್ಚ ದಿಶೋ ದಶ ॥ ೪೩ ॥

---

ಯುದ್ಧಕ್ಕಾಗಿ ಜಾಗ್ರತೆಯಾಗಿ ಹೊರಡು. ಎಲೈ ಪಾಪಿಷ್ಠನೆ! ನೀನು ಯುದ್ಧಕ್ಕೆ ಬಾರದಿದ್ದರೆ ಭೂಮಿಯನ್ನು ಪವಿತ್ರಗೊಳಿಸಲು ನಿನ್ನ ರಾಜಧಾನಿಯನ್ನು ಸಮುದ್ರದಲ್ಲಿ ಮುಳುಗಿಸುತ್ತೇನೆ.''

೩೯. ಕಟುಗಳಾದ ಈ ಮಾತುಗಳನ್ನು ಕೇಳಿ ಸ್ತ್ರೀಸಹಸ್ರಪರಿವೃತನಾದ ತಾರಕಾಸುರನು ಕೋಪಗೊಂಡು ಮುಷ್ಟಿಯನ್ನು ಮೇಲಕ್ಕೆತ್ತಿ ನನ್ನ ಕಡೆಗೆ ಓಡಿ ಬಂದನು. ನಾನೂ ಕೂಡ ಭಯಗೊಂಡು ಓಡಿಹೋದೆನು.

೪೦. ಇಂತು ಬಂದ ನಾನು ವ್ಯಾಕುಲಚಿತ್ತನಾಗಿ ನಡೆದ ಸಮಾಚಾರವನ್ನೆಲ್ಲ ಕುಮಾರಸ್ವಾಮಿಗೆ ತಿಳಿಸಿದೆನು. ನಾನು ಹೊರಟು ಬಂದ ಬಳಿಕ ರಾಕ್ಷಸೇಶ್ವರನೂ ಕೂಡ ತನ್ನಲ್ಲಿಯೇ ಯೋಚಿಸತೊಡಗಿದನು.

೪೧. "ಮಹೇಂದ್ರನು ಬಲಿಷ್ಠವಾದ ಆಶ್ರಯದ ನೆರವಿಲ್ಲದೆ ಇಂತು ಮಾತನಾಡಲು ಶಕ್ತನಲ್ಲವು. ಘೋರಗಳಾದ ಶಕುನಗಳೂ ಕೂಡ ನನಗೆ ಶರೀರ ಕಂಪವನ್ನುಂಟುಮಾಡುತ್ತಿರುವುವು.''

೪೨. ಇಂತು ಯೋಚಿಸುತ್ತಲೇ ಎದ್ದು ಗವಾಕ್ಷದ ಬಳಿಗೆ ಹತ್ತಿ ನಡೆತಂದು ಸಹಸ್ರಾರು ರಾಕ್ಷಸರಿಗೆ ನಿವಾಸವಾದ ಅರಮನೆಯ ಎತ್ತರದ ಕಿಟಕಿಯಿಂದ ನೋಡುತ್ತಿದ್ದನು.

೪೩. ಆಗಲವನು ಭೂಮ್ಯಾಕಾಶಗಳನ್ನು ಒಂದುಮಾಡುವಂತೆ ಅಸಂಖ್ಯಾತವಾಗಿರುವ ದೇವತೆಗಳ ಸೈನ್ಯವನ್ನು ನೋಡಿದನು. ಅದರ ರಥಗಳಿಂದಲೂ, ಆನೆಗಳಿಂದಲೂ, ಕುದುರೆಗಳಿಂದಲೂ ಉಂಟಾದ ಘೋಷವು ಹತ್ತು ದಿಕ್ಕುಗಳನ್ನೂ ತುಂಬಿದ್ದಿತು.

ವಿಮಾನೈಶ್ಚಾದ್ಭುತಾಕಾರೈಃ ಕಿನ್ನರೋದ್ಗೀತನಾದಿತೈಃ ।
ದುಂದುಭಿಗೋಽವಿಷಾಣೈಸ್ತಾಲೈಃ ಶಂಖೈಶ್ಚ ನಾದಿತೈಃ ॥ ೪೪ ॥
ಅಕ್ಷೋಭ್ಯಮಿವ ತಾಂಸೇನಾಂ ದೃಷ್ಟ್ವಾ ಸೋಽಚಿಂತಯತ್ತದಾ ।
ಏತೇ ಮಯಾ ಜಿತಾಃ ಪೂರ್ವಂ ಕಸ್ಮಾದ್ಭೂಯಃ ಸಮಾಗತಾಃ ॥ ೪೫ ॥
ಇತಿ ಚಿಂತಾಪರೋ ದೈತ್ಯಃ ಶುಶ್ರಾವ ಕಟುಕಾಕ್ಷರಂ ।
ದೇವಬಂದಿಭಿರುದ್ಘುಷ್ಟಂ ಘೋರಂ ಹೃದಯದಾರಣಂ ॥ ೪೬ ॥

ಜಯಾತುಲಶಕ್ತಿದೀಧಿತಿ ಪಿಂಜರರುಚಾರುಣಮಂಡಲಭುಜೋದ್ಭಾಸಿತದೇವಸೈನ್ಯ, ಪುರವದನಕುಮುದಕಾನನವಿಕಾಸನೇಂದೋ, ಕುಮಾರನಾಥ, ಜಯ ದಿತಿಕುಲ ಮಹೋದಧಿವಡವಾನಲ, ಮಧುರರವಮಯೂರರವಾಸುರಮುಕುಟಕೂಟಕುಟ್ಟತಚರಣನಖಾಂಕುರ, ಮಹಾಸೇನ, ತಾರಕವಂಶಶುಷ್ಕತೃಣದಾವಾನಲ, ಯೋಗೀಶ್ವರ, ಯೋಗಿ

---

೪೪. ಅದ್ಭುತಾಕಾರಗಳುಳ್ಳ ವಿಮಾನಗಳಿಂದಲೂ, ಕಿನ್ನರರ ಸಂಗೀತದ ಧ್ವನಿಯಿಂದಲೂ, ರಣವಾದ್ಯಗಳಾದ ದುಂದುಭಿ, ಕೊಂಬುಗಳು, ತಾಳಗಳು, ಶಂಖಗಳು, ಇವುಗಳ ಘೋಷಗಳಿಂದಲೂ ಕೂಡಿ ಅದ್ಭುತವಾಗಿದ್ದಿತು.

೪೫. ಗೆಲ್ಲಲಸಾಧ್ಯವಾಗಿ ಕಾಣುತ್ತಿರುವ ಆ ಸೇನೆಯನ್ನು ಕಂಡು ತನ್ನಲ್ಲಿ ತಾನೇ "ಇವರೆಲ್ಲರೂ ಮೊದಲೇ ನನ್ನಿಂದ ಪರಾಜಿತರಾದರೂ ಮತ್ತೆ ಏತಕ್ಕೆ ಇಲ್ಲಿಗೆ ಬಂದಿರುವರು?" ಎಂದು ಚಿಂತಿಸುತ್ತಿದ್ದನು.

೪೬. ಇಂತು ಚಿಂತಾಪರನಾದ ದೈತ್ಯನು ತೀಕ್ಷ್ಣವೂ, ಭಯಂಕರವೂ, ಹೃದಯಭೇದಕವೂ ಆದ, ದೇವತೆಗಳ ವಂದಿಮಾಗಧರಿಂದ ಗಟ್ಟಿಯಾಗಿ ಕೂಗಲ್ಪಟ್ಟ ಮಾತುಗಳನ್ನು ಕೇಳಿದನು.

೪೭. "ಎಲೈ ಸ್ವಾಮಿಯೇ! ಭಕ್ತಜನರ ಅಭೀಷ್ಟಸಿದ್ಧಿಗಾಗಿಯೂ, ಈ ದೇವತೆಗಳೆಲ್ಲರ ಕಷ್ಟನಿವಾರಣೆಗಾಗಿಯೂ ಜಯಶೀಲನಾಗು. ಅತುಲವಾದ ಶಕ್ತ್ಯಾಯುಧದ ಕಾಂತಿಯ ಪಿಂಜರವರ್ಣದ ಕಿರಣಗಳಿಂದಲೂ ಅರುಣಮಂಡಲದಂತೆ ದೇವಸೈನ್ಯವೆಲ್ಲವನ್ನೂ ಕಂಗೊಳಿಸಿದವನು ನೀನು. ಎಲೈ ಪ್ರಭುವೇ! ಹರನ ಮುಖವೆಂಬ ಕನ್ನೈದಿಲೆಯ ತೋಟವನ್ನರಳಿಸುವ ಚಂದ್ರನೇ ನೀನಾಗಿರುವೆ. ಎಲೈ ಕುಮಾರನಾಥನೇ! ದಿತಿಕುಲವೆಂಬ ಮಹಾಸಮುದ್ರಕ್ಕೆ ಬಡಬಾಗ್ನಿಯೇ ನೀನು. ಕಿವಿಗಿಂಪಾದ ಧ್ವನಿಯುಳ್ಳವನಾಗಿ ನವಿಲಿನ ಧ್ವನಿಯೊಡಗೂಡಿದವನೂ, ಅಸುರರ ಕಿರೀಟಗಳ ಗುಂಪುಗಳನ್ನೂ ಚಿಮ್ಮಿಹೊಡೆವ ಕಾಲುಗುರುಗಳುಳ್ಳವನೂ, ಮಹಾಸೇನನೂ, ತಾರಕಾಸುರನ ವಂಶವೆಂಬ ಒಣಹುಲ್ಲಿಗೆ ದಳ್ಳುರಿಯಂತಿರುವವನೂ ಆದ ನೀನು ಜಯಶೀಲನಾಗು! ಎಲೈ ಯೋಗೀಶ್ವರನೇ! ಯೋಗಿಜನರ ಹೃದಯಾಕಾಶದಲ್ಲಿ ಸಂತತವೂ ಮೂಡಿ

ಜನಹೃದಯಗಗನವಿತತಚಿಂತಾಸಂತಾನ ಸಂತಮಸನೋದನಖರಕಿರಣ ಕಲ್ಪ ನಖನಿಕರವಿರಾಜಿತಚರಣಕಮಲ, ಸ್ಕಂದ, ಜಯಬಾಲ, ಸಪ್ತ ವಾಸರ, ಭುವನಾವಲೀಶೋಕಸಂದಹನ ॥ ೪೭ ॥

ನಮೋ ನಮಸ್ತೇಽಸ್ತು ಮನೋರಮಾಯ
ನಮೋಽಸ್ತು ತೇ ಸಾಧುಭಯಾಪಹಾಯ ।
ನಮೋಽಸ್ತು ತೇ ಬಾಲಕೃತಾಚಲಾಯ
ನಮೋ ನಮೋ ನಾಶಯ ದೇವಶತ್ರೂನ್ ॥ ೪೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ಕುಮಾರೇಶ ಮಾಹಾತ್ಮ್ಯೇ ಕುಮಾರಸ್ಯ ತಾರಕಾಸುರನಗರಂ ಪ್ರತಿ ಗಮನ ವರ್ಣನಂ" ನಾಮ ಏಕತ್ರಿಂಶೋಽಧ್ಯಾಯಃ

---

ಕಾಡಿಸುವ ಚಿಂತೆಗಳ ಪರಂಪರೆಗಳೆಂಬ ಕತ್ತಲೆಯನ್ನು ಹೋಗಲಾಡಿಸುವುದರಲ್ಲಿ ಸೂರ್ಯನಿಗೆ ಸಮಾನವಾದ ಕಿರಣ ಸಮೂಹಗಳಿಂದ ವಿರಾಜಿಸುತ್ತಿರುವ ಚರಣ ಕಮಲಗಳುಳ್ಳವನೇ! ಎಲೈ ಸ್ಕಂದ ಸ್ವಾಮಿಯೆ! ಏಳು ದಿನಗಳ ಬಾಲಕನೂ, ಚತುರ್ದಶ ಭುವನಗಳ ಶೋಕವನ್ನು ಕಳೆಯುವವನೂ ನೀನೇ!

೪೮. ದೇವತೆಗಳಿಗೆ ಅತ್ಯಂತ ಪ್ರಿಯಕರನಾದ ನಿನಗೆ ನಮಸ್ಕಾರವು. ಸಾಧು ಜನರ ಭಯಗಳನ್ನು ದೂರಗೊಳಿಸುವ ನಿನಗೆ ವಂದನೆಗಳು. ಬಾಲ್ಯ ದಲ್ಲಿಯೇ ಸ್ಥೈರ್ಯವುಳ್ಳವನಾಗಿ ಮಾಡಲ್ಪಟ್ಟ ನಿನಗೆ ನಮಸ್ಕಾರವು. ಎಲೈ ಸ್ವಾಮಿಯೇ! ದೇವತೆಗಳ ಶತ್ರುಗಳನ್ನು ನಾಶಗೊಳಿಸು. ನಿನಗೆ ಅನಂತ ನಮಸ್ಕಾರಗಳು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ "ಕುಮಾರೇಶ ಮಾಹಾತ್ಮ್ಯ– ಕುಮಾರಸ್ವಾಮಿಯು ತಾರಕಾಸುರ ನಗರವನ್ನು ಕುರಿತು ಹೋಗುವಿಕೆ" ಎಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ದ್ವಾತ್ರಿಂಶೋಽಧ್ಯಾಯಃ

### ಕುಮಾರೀಶ ಮಹಾತ್ಮ್ಯೇ ಕುಮಾರಕೃತ ತಾರಕವಧವರ್ಣನಂ

ನಾರದ ಉವಾಚ :—

**ಶ್ರುತ್ವೈತಂ ಸಂಸ್ತವಂ ದೈತ್ಯಃ ಸಂಘುಷ್ಟಂ ದೇವವಂದಿಭಿಃ ।**
**ಸಸ್ಮಾರ ಬ್ರಹ್ಮಣೋ ವಾಕ್ಯಂ ವಧಂ ಬಾಲಾದುಪಸ್ಥಿತಂ ॥ ೧ ॥**
**ಶ್ರುತ್ವಾ ಸ ಕ್ಲಿನ್ನಸರ್ವಾಂಗೋ ದ್ವಾಃಸ್ಥಂ ರಾಜಾ ವಚೋಽಬ್ರವೀತ್ ।**
**ಅಮಾತ್ಯಾನ್ ದ್ರಷ್ಟುಮಿಚ್ಛಾಮಿ ಶೀಘ್ರಮಾನಯ ಮಾ ಚಿರಂ ॥ ೨ ॥**
**ತತಸ್ತೇ ರಾಜವಚನಾತ್ಕಾಲನೇಮಿಮುಖಾಗತಾಃ ।**
**ಪ್ರಾಹ ತಾಂಸ್ತಾರಕೋ ದೈತ್ಯಃ ಕಿಮಿದಂ ವೋ ವಿಚೇಷ್ಟಿತಂ ।**
**ಯೈಃ ಶತ್ರುಸಂಭವಾ ವಾರ್ತಾ ಕಾಪಿ ನ ಶ್ರಾವಿತಸ್ತ್ವಹಂ ॥ ೩ ॥**
**ಮದಿರಾಕಾಮುಮತ್ತಾನಾಂ ಮಂತ್ರಿತ್ವಂ ವೋ ನ ಯುಜ್ಯತೇ ।**
**ಹಿತಂ ಮಂತ್ರಯತೇ ರಾಜ್ಞಸ್ತೇನ ಮಂತ್ರೀ ನಿಗದ್ಯತೇ ॥ ೪ ॥**

---

### ಕನ್ನಡದ ಅನುವಾದ

#### ಕುಮಾರೀಶ ಮಾಹಾತ್ಮ್ಯ—ತಾರಕವಧೆ

೧. ನಾರದನು ಹೇಳುತ್ತಾನೆ:— ದೇವತೆಗಳ ವಂದಿಮಾಗಧರಿಂದ ಮಾಡಲ್ಪಟ್ಟ ಈ ಸ್ತೋತ್ರವನ್ನು ಕೇಳಿ ತಾರಕಾಸುರನು ತನಗೆ ಬ್ರಹ್ಮನಿತ್ತ ವರವನ್ನೂ, ಅದರಂತೆ ಬಾಲಕನಿಂದ ಮರಣವಾಗಬೇಕಾದುದನ್ನೂ ಸ್ಮರಿಸಿಕೊಂಡನು.

೨. ಭಯದಿಂದ ಮೈಯೆಲ್ಲ ಬೆವರುತ್ತಿರಲು ದ್ವಾರಪಾಲಕನನ್ನು ಕರೆದು ಆ ರಾಕ್ಷಸ ರಾಜನು "ನನ್ನ ಮಂತ್ರಿಗಳನ್ನು ನೋಡಲೆಳಸುವೆನು; ಅವರನ್ನು ಜಾಗ್ರತೆಯಾಗಿ ಕರೆದುಕೊಂಡು ಬಾ; ತಡಮಾಡಬೇಡ" ಎಂದು ಆಜ್ಞಾಪಿಸಿದನು.

೩. ಆಗ ಕಾಲನೇಮಿಯೇ ಮೊದಲಾದ ಮಂತ್ರಿಗಳೆಲ್ಲರೂ ಬಂದರು. ಅವರನ್ನು ಕುರಿತು ತಾರಕಾಸುರನು ಹೇಳುತ್ತಾನೆ:—"ನೀವು ಮಾಡುತ್ತಿರುವುದಾದರೂ ಏನು? ಶತ್ರುಗಳ ಆಕ್ರಮಣದ ವಾರ್ತೆಯು ಸ್ವಲ್ಪವೂ ಕೂಡ ನನಗೆ ತಿಳಿಸಲೇ ಇಲ್ಲವಲ್ಲ.

೪. ಮಾದಕದ್ರವ್ಯಗಳಲ್ಲಿಯೂ ಸ್ತ್ರೀಯರಲ್ಲಿಯೂ ಮತ್ತರಾದ ನಿಮಗೆ ಮಂತ್ರಿಪದವಿಯು ಸರ್ವಥಾ ಉಚಿತವಲ್ಲ. ರಾಜನಿಗೆ ಸಕಾಲದಲ್ಲಿ ಹಿತವಾದವನ್ನು ಹೇಳುವುದರಿಂದಲೇ ಮಂತ್ರಿಪದವಿಯು ಸಾರ್ಥಕವಾಗುವುದು."

ಅಮಾತ್ಯಾ ಊಚುಃ:—

ಕೋ ಜಾನಾತಿ ಸುರಾನ್ದೀನಾನ್ದೈತ್ಯಾನಾಮಿತಿ ನೋ ಮತಿಃ ।
ಮಾ ವಿಷೀದ ಮಹಾರಾಜ ವಯಂ ಜೇಷ್ಯಾಮಹೇ ಸುರಾನ್ ॥ ೫ ॥
ಬಾಲಾದಪಿ ಭಯಂ ಕಿಂ ವಾ ಲಜ್ಜಾಯ್ಕೈ ಚಿಂತಿತಂ ತ್ವಿದಂ ।
ಸರ್ವಮೇತತ್ಸುಸಾಧ್ಯಂ ಚ ಭೇರೀ ಸಂತಾಡ್ಯತಾಂ ದೃಢಂ ॥ ೬ ॥
ತತೋ ದೈತ್ಯೇಂದ್ರವಚನಾತ್ಸನ್ನಾಹಜನನೀ ತದಾ ॥ ೭ ॥
ಭೃಶಂ ಸಂತಾಡಿತಾ ಭೇರೀ ಕಂಪಯಾಮಾಸ ಸಾ ಜಗತ್ ।
ಸ್ಮರಣಾದ್ದೈತ್ಯರಾಜಸ್ಯ ಪರ್ವತೇಭ್ಯೋ ಮಹಾಸುರಾಃ ॥ ೮ ॥
ನಿಮ್ನಗಾಭ್ಯಃ ಸಮುದ್ರೇಭ್ಯಃ ಪಾತಾಲೇಭ್ಯೋಽಂಬರಾದಪಿ ।
ಸಹಸಾ ಸಮನುಪ್ರಾಪ್ತಾ ಯುಗಾಂತಾನಲಸಪ್ರಭಾಃ ॥ ೯ ॥
ಕೋಟಿ ಕೋಟಿ ಸಹಸ್ರೈಸ್ತು ಪರಾರ್ಧೈರ್ದಶಭಿಃ ಶತೈಃ ।
ಸೇನಾಪತಿಃ ಕಾಲನೇಮಿಃ ಶೀಘ್ರಂ ದೇವಾನುಪಾಯಯೌ ॥ ೧೦ ॥
ಚತುರ್ಯೋಜನವಿಸ್ತೀರ್ಣೇ ನಾನಾಶ್ಚರ್ಯಸಮನ್ವಿತೇ ।
ರಥೇ ಸ್ಥಿತೋ ಮನಾಗ್ದೀನಸ್ತಾರಕಃ ಸಮದೃಶ್ಯತ ॥ ೧೧ ॥

---

೫–೬. ಮಂತ್ರಿಗಳು ಹೇಳುತ್ತಾರೆ:—"ರಾಕ್ಷಸರಲ್ಲಿ ಯಾರು ತಾನೆ ದೀನರಾದ ದೇವತೆಗಳನ್ನು ಗಣನೆಗೆ ತೆಗೆದುಕೊಳ್ಳುವರು? ಇದು ನಮಗೆ ನಿಶ್ಚಯವು. ಎಲೈ ಮಹಾರಾಜನೆ! ನೀನು ವಿಷಾದ ಪಡಬೇಡ. ನಾವೇ ಈ ದೇವತೆಗಳನ್ನು ಜಯಿಸುತ್ತೇವೆ. ಈ ಬಾಲಕನಿಂದ ತಾನೆ ನಮಗೇನು ಭಯವು? ಇದು ಕೇವಲ ಲಜ್ಜಾಸ್ಪದವೇ ಸರಿ. ಈ ಕಾರ್ಯವೆಲ್ಲವೂ ಬಹಳ ಸುಲಭವಾಗಿಯೇ ಸಾಧಿಸಬಹುದು. ರಣಭೇರಿಯು ತಕ್ಷಣವೇ ಬಾಜಿಸಲ್ಪಡಲಿ."

೭–೯. ಬಳಿಕ ರಾಕ್ಷಸೇಶ್ವರನ ಮಾತಿನಂತೆ ಸೈನ್ಯ ಸನ್ನಾಹದ ಸೂಚಕವಾದ ರಣಭೇರಿಯು ಬಾಜಿಸಲ್ಪಟ್ಟಿತು. ಅದರ ಶಬ್ದವು ಭೂಮಂಡಲವನ್ನೇ ನಡುಗಿಸುವಂತಿತ್ತು. ರಾಕ್ಷಸರಾಜನು ಸ್ಮರಿಸಿದಮಾತ್ರದಿಂದಲೇ ರಾಕ್ಷಸರೆಲ್ಲರೂ, ಪರ್ವತಗಳಿಂದಲೂ, ನದಿಗಳಿಂದಲೂ, ಸಮುದ್ರದಿಂದಲೂ, ಪಾತಾಲ ಲೋಕಗಳಿಂದಲೂ, ಆಕಾಶದಿಂದಲೂ, ಪ್ರಳಯಕಾಲದ ಅಗ್ನಿಯಂತೆ ಜ್ವಲಿಸುತ್ತ ತಕ್ಷಣದಲ್ಲಿಯೇ ಅಲ್ಲಿ ನೆರೆದರು.

೧೦–೧೧. ಸಾವಿರಾರು ಕೋಟಿಗಳಿಂದಲೂ, ಹತ್ತು, ನೂರಾರು ಪರಾರ್ಧಗಳಿಂದಲೂ ಕೂಡಿದವನಾಗಿ ಸೇನಾನಾಯಕನಾದ ಕಾಲನೇಮಿಯು ದೇವತೆಗಳ ಸೈನ್ಯವನ್ನು ಕುರಿತು ಹೊರಟನು. ನಾಲ್ಕುಯೋಜನ ವಿಸ್ತಾರವುಳ್ಳದೂ ಬಹು ವಿಚಿತ್ರಗಳಿಂದ ಕೂಡಿದುದೂ ಆದ ಉತ್ತಮ ರಥದಲ್ಲಿ ಕುಳಿತಿದ್ದರೂ ತಾರಕಾಸುರನು ಅತ್ಯಂತ ಖಿನ್ನನಾದವನಂತೆಯೇ ಕಾಣುತ್ತಿದ್ದನು.

ಏತಸ್ಮಿನ್ನಂತರೇ ಪಾರ್ಥ ಕ್ರುದ್ಧೈಃ ಸ್ಕಂದಸ್ಯ ಪಾರ್ಷದೈಃ ।
ಪ್ರಾಕಾರಃ ಪತಿತಃ ಸರ್ವೋ ಭಗ್ನಾನ್ಯುಪವನಾನಿ ಚ ॥ ೧೨ ॥
ತತಶ್ಚಚಾಲ ವಸುಧಾ ದೇವೀ ಸವನಕಾನನಾ ।
ಜಜ್ವಾಲ ಖಂ ಸನಕ್ಷತ್ರಂ ಪ್ರಮೂಢಂ ಭುವನಂ ಭೃಶಂ ।
ತಮೋಭೂತಂ ಜಗಚ್ಚಾಸೀದ್ಗೃಧ್ರೈರ್ವ್ಯಾಪ್ತಂ ನಭೋಽಭವತ್ ॥ ೧೩ ॥
ತತೋ ನಾನಾಪ್ರಹರಣಂ ಪ್ರಲಯಾಂಬುದ ಸನ್ನಿಭಂ ।
ಕಾಲನೇಮಿಮುಖಂ ಪಾರ್ಥ ಅದೃಶ್ಯತ ಮಹದ್ಬಲಂ ॥ ೧೪ ॥
ತದ್ಧಿ ಘೋರಮಸಂಖ್ಯೇಯಂ ಜಗರ್ಜ ವಿವಿಧಾ ಗಿರಃ ।
ಅಭ್ಯದ್ರವದ್ರಣೇ ದೇವಾನ್ಭಗವಂತಂ ಚ ಶಂಕರಂ ॥ ೧೫ ॥
ವಿನದದ್ಭಿಸ್ತತೋ ದೈತ್ಯೈರ್ದೇವಾನೀಕಂ ಮಹಾಯುಧೈಃ ॥ ೧೬ ॥
ಕುರ್ವತ್ಭೈಶ್ಚ ಶತಘ್ನೀಭಿರಾಯಸೈಃ ಪರಿಘೈರಪಿ ।
ಕ್ಷಣೇನ ದ್ರಾವಿತಂ ಸರ್ವಂ ವಿಮುಖಂ ಚಾಪ್ಯದೃಶ್ಯತ ॥ ೧೭ ॥

---

೧೨. ಎಲೈ ಪಾರ್ಥನೆ! ಈ ಅವಕಾಶದಲ್ಲಿಯೇ ಕೋಪಗೊಂಡ ಷಣ್ಮುಖ ಸ್ವಾಮಿಯ ಪಾರ್ಷದರು ಶತ್ರುನಗರದ ಕೋಟೆಗಳನ್ನು ಕಿತ್ತು ಕೆಡವಿ ಉಪವನ ಗಳೆಲ್ಲವನ್ನೂ ಧ್ವಂಸಗೊಳಿಸಿದರು.

೧೩. ಆಗ ಭೂಮಿಯು ನಡುಗಿತು. ನಕ್ಷತ್ರ ಗಣ ಸಹಿತವಾದ ಆಕಾಶವು ಉರಿಯುತ್ತಿರುವಂತೆ ಕಂಡಿತು. ಬ್ರಹ್ಮಾಂಡವೆಲ್ಲವೂ ಬಹಳವಾಗಿ ಮೂರ್ಛೆ ಗೊಂಡಂತೆ ಸ್ತಬ್ಧವಾಗಿದ್ದಿತು. ಭೂಮಂಡಲವೆಲ್ಲ ಎತ್ತೆತ್ತಲೂ ಅಂಧಕಾರದಿಂದ ಆವರಿಸಲ್ಪಟ್ಟಿತು. ಆಕಾಶದಲ್ಲಿ ಎಲ್ಲಿನೋಡಿದರೂ ಮಾಂಸಾಹಾರಿಗಳಾದ ಗೃಧ್ರಪಕ್ಷಿಗಳೇ ತುಂಬಿಹೋಗಿದ್ದುವು.

೧೪. ಆ ರಣಾಂಗಣದಲ್ಲಿ ನಾನಾ ವಿಧಗಳಾದ ಆಯುಧಗಳಿಂದ ಕೂಡಿ ದುದೂ, ಪ್ರಳಯಕಾಲದ ಸಮುದ್ರದಂತೆ ಮೇರೆಯಿಲ್ಲದುದೂ ಆದ ಅಪಾರ ಸೈನ್ಯವು ಕಾಲನೇಮಿಯ ನೇತೃತ್ವದಲ್ಲಿ ಹೊರಟಿತು.

೧೫. ಭಯಂಕರವೂ ಅಸಂಖ್ಯೇಯವೂ ಆದ ಆ ಮಹಾಸೈನ್ಯವು ವಿವಿಧ ಗರ್ಜನೆಗಳನ್ನು ಮಾಡುತ್ತ ದೇವತೆಗಳಿಗೂ, ಭಗವಂತನಾದ ಶಂಕರನಿಗೂ ಎದುರಾಗಿ ಓಡಿ ಬಂದಿತು.

೧೬–೧೭. ಹೀಗೆ ಬಹು ಭಯಂಕರವಾದ ಸಿಂಹನಾದವನ್ನು ಮಾಡುತ್ತ ಮಹಾಯುಧಗಳಿಂದಲೂ, ಪರ್ವತಗಳಿಂದಲೂ, ಶತಘ್ನಿಗಳಿಂದಲೂ, ಲೋಹ ಗಳಿಂದ ಮಾಡಿದ ಪರಿಘಾಯುಧಗಳಿಂದಲೂ ಸದೆಬಡಿಯುತ್ತಿರುವ ರಾಕ್ಷಸರಿಂದ ದೇವತೆಗಳ ಸೈನ್ಯವೆಲ್ಲವೂ ಓಡಿಸಲ್ಪಟ್ಟು ಪರಾಜಯವನ್ನು ಪಡೆದು ವಿಮುಖವಾಗಿ ಕಾಣುತ್ತಿದ್ದಿತು.

ಅಸುರೈರ್ವಧ್ಯಮಾನೇ ತು ಪಾವಕೈರಿವ ಕಾನನಂ ।
ಅಪತದ್ದಾನವಭೂಯಿಷ್ಠಂ ಮಹಾದ್ರುಮವನಂ ಯಥಾ ॥ ೧೮ ॥
ತೇ ಭಿನ್ನಾಸ್ಥಿಶಿರೋದೇಹಾಃ ಪ್ರಾದ್ರವಂತ ದಿವೌಕಸಃ ।
ನ ನಾಥಮಧ್ಯಗಚ್ಛಂತ ವಧ್ಯಮಾನಾ ಮಹಾಸುರೈಃ ॥ ೧೯ ॥
ಅಥ ತದ್ವಿದ್ರುತಂ ಸೈನ್ಯಂ ದೃಷ್ಟ್ವಾ ದೇವಃ ಪುರಂದರಃ ।
ಆಶ್ವಾಸಯನ್ನುವಾಚೇದಂ ಬಲವದ್ದಾನವಾರ್ದಿತಂ ॥ ೨೦ ॥
ಭಯಂ ತ್ಯಜತ ಭದ್ರಂ ವಃ ಶೂರಾಃ ಶಸ್ತ್ರಾಣಿ ಗೃಹ್ಣತ ।
ಕುರುಧ್ವಂ ವಿಕ್ರಮೇ ಬುದ್ಧಿಂ ಮಾ ಚ ಕಾಚಿದ್ವ್ಯಥಾಸ್ತು ವಃ ॥ ೨೧ ॥
ಏಷ ಕಾಲಾನಲಪ್ರಖ್ಯೋ ಮಯೂರಂ ಸಮುಪಸ್ಥಿತಃ ।
ರಕ್ಷಿತಾ ವೋ ಮಹಾಸೇನಃ ಕಥಂ ಭೀತಿಸ್ತಥಾಪಿ ವಃ ॥ ೨೨ ॥
ಶಕ್ರಸ್ಯ ವಚನಂ ಶ್ರುತ್ವಾ ಸಮಾಶ್ವಸ್ತಾ ದಿವೌಕಸಃ ।
ದಾನವಾನ್ಪ್ರತ್ಯಯುಧ್ಯಂತ ಶಕ್ರಂ ಕೃತ್ವಾ ವ್ಯಪಾಶ್ರಯಂ ॥ ೨೩ ॥

---

೧೮. ರಾಕ್ಷಸರಿಂದ ನಾಶಗೊಂಡು ಸುರಸೈನ್ಯವೆಲ್ಲವೂ ಕಾಡಿನಲ್ಲಿರುವ ಮಹಾವೃಕ್ಷಗಳ ಸಮೂಹಗಳು ದಾವಾಗ್ನಿಗೆ ತುತ್ತಾಗಿ ಬೀಳುವಂತೆ ನಿಶ್ಚೇಷ್ಟವಾಗುತ್ತಿದ್ದಿತು.

೧೯. ಆ ದೇವತೆಗಳು, ವಿಶೀರ್ಣಗಳಾದ ಮೂಳೆಗಳೂ, ತಲೆಗಳು, ದೇಹಗಳೂ ಉಳ್ಳವರಾಗಿ ರಾಕ್ಷಸರಿಂದ ಪೀಡಿತರಾಗಿ ಕಾಪಾಡುವವರನ್ನು ಕಾಣದೆ ದಿಕ್ಕುಪಾಲಾಗಿ ಓಡತೊಡಗಿದರು.

೨೦. ಇಂತು ಬಲಿಷ್ಠರಾದ ದಾನವರಿಂದ ಕ್ಷೋಭಗೊಳಿಸಲ್ಪಟ್ಟು ಹಿಂತೆಗೆಯುತ್ತಿರುವ ಸೈನ್ಯವನ್ನು ನೋಡಿ ಮಹೇಂದ್ರನು ಅವರನ್ನು ಕುರಿತು ಸಂತೈಸುವವನಾಗಿ ಈ ಮಾತುಗಳನ್ನಾಡಿದನು.

೨೧. "ಎಲೈ ದೇವತೆಗಳೆ! ಭಯವನ್ನು ತ್ಯಜಿಸಿರಿ. ನಿಮಗೆ ಮಂಗಳವಾಗುವುದು. ನೀವು ಪರಾಕ್ರಮಿಗಳಲ್ಲವೆ? ನಿಮ್ಮ ನಿಮ್ಮ ಶಸ್ತ್ರಗಳನ್ನು ಹಿಡಿಯಿರಿ. ಪರಾಕ್ರಮವನ್ನು ತೋರಿಸುವ ಬುದ್ಧಿಯನ್ನು ಮಾಡಿರಿ. ನಿಮಗೆ ಯಾವ ವಿಧವಾದ ಚಿಂತೆಯೂ ಉಂಟಾಗದಿರಲಿ.

೨೨. ಪ್ರಳಯಾಗ್ನಿಗೆ ಸಮಾನನೂ ಮಯೂರವನ್ನೇರಿದವನೂ ಆದ ಕಾರ್ತಿಕೇಯನೇ ನಿಮ್ಮ ಸೇನಾನಾಯಕನಲ್ಲವೆ? ಹಾಗಾದರೂ ನಿಮಗೆ ಈ ಭಯವು ಹೇಗೆ ಒಪ್ಪುವುದು?"

೨೩. ಇಂದ್ರನ ಈ ಮಾತುಗಳನ್ನು ಕೇಳಿ ದೇವತೆಗಳಿಗೆ ಸ್ವಲ್ಪ ಸಮಾಧಾನವಾಯಿತು. ಮತ್ತೆ ಇಂದ್ರನನ್ನೇ ಮುಂದಾಳಾಗಿಟ್ಟುಕೊಂಡು ರಾಕ್ಷಸರೊಡನೆ ಯುದ್ಧಮಾಡತೊಡಗಿದರು.

ಕಾಲನೇಮಿರ್ಮಹೇಂದ್ರೇಣ ಸಂಯುಗೇ ಸಮಯುಜ್ಯತ ।
ಸಹಸ್ರಾಕ್ಷೌಹಿಣೀಯುಕ್ತೋ ಜಂಭಕಃ ಶಂಕರೇಣ ಚ ॥ ೨೪ ॥
ಕುಜಂಭೋ ವಿಷ್ಣುನಾ ಚೈವ ತಾವತ್ಯಕ್ಷೌಹಿಣೀವೃತಃ ।
ಅನ್ಯೇ ಚ ತ್ರಿದಶಾಃ ಸರ್ವೇ ಮರುತಶ್ಚ ಮಹಾಬಲಾಃ ॥ ೨೫ ॥
ಪ್ರತ್ಯಯುಧ್ಯಂತ ದೈತ್ಯೇಂದ್ರೈಃ ಸಾಧ್ಯಾಶ್ಚ ವಸುಭಿಃ ಸಹ ।
ತತೋ ಬಹುವಿಧಂ ಯುದ್ಧಂ ಕಾಲನೇಮಿರ್ವಿಧಾಯ ಚ ॥ ೨೬ ॥
ಉತ್ಸೃಜ್ಯ ಸಹಸಾ ಸಾರ್ಥ ಐರಾವಣಶಿರಃ ಸ್ಥಿತಃ ।
ಸ ತು ಪಾದಪ್ರಹಾರೇಣ ಮುಷ್ಟಿನಾ ಚೈವ ತಂ ಗಜಂ ।
ಶಕ್ರಂ ಚ ಜಘ್ನೇ ವಿನದನ್ಪೇತತುಸ್ತಾವುಭೌ ಭುವಿ ॥ ೨೭ ॥
ತತಃ ಶಕ್ರಂ ಸಮಾದಾಯ ಕಾಲನೇಮಿರ್ವಿಚೇತಸಂ ।
ರಥಮಾಶ್ರಿತ್ಯ ಭೂಯೋಽಪಿ ತಾರಕಾಭಿಮುಖೋ ಯಯೌ ॥ ೨೮ ॥
ಅಥ ಕೃಷ್ಟಂ ತದಾ ದೇವೈಃ ಸಹಸಾ ಚಾಂತಕಾದಿಭಿಃ ।
ಹ್ರಿಯತೇ ಹ್ರಿಯತೇ ರಾಜಾ ತ್ರಾತಾ ಕೋಽಪಿ ನ ವಿದ್ಯತೇ ॥ ೨೯ ॥

---

೨೪. ಕಾಳಗದಲ್ಲಿ ಕಾಲನೇಮಿಯು ಮಹೇಂದ್ರನೊಡನೆ ಸಂಧಿಸಿದನು. ಒಂದು ಸಾವಿರ ಅಕ್ಷೌಹಿಣೀ ಸೇನೆಯೊಡನೆ ಜಂಭಕಾಸುರನು ಮಹೇಶ್ವರನೊಡನೆ ಯುದ್ಧವನ್ನು ಮಾಡಿದನು.

೨೫. ಕುಜಂಭನೆಂಬ ರಾಕ್ಷಸನು ಅಷ್ಟೇ ಸೈನ್ಯದೊಡನೆ ಶ್ರೀ ಮಹಾವಿಷ್ಣುವಿನೊಡನೆ ಸೆಣಸಿದನು. ಅಂತೆಯೇ ಸಕಲ ದೇವತೆಗಳೂ, ಮಹಾಬಲಿಷ್ಠರಾದ ಮರುತ್ತುಗಳೂ, ಸಾಧ್ಯರೂ, ಅಷ್ಟವಸುಗಳೂ ಇತರ ದೈತ್ಯರೊಡನೆ ಯುದ್ಧಮಾಡಿದರು.

೨೬–೨೭. ಬಳಿಕ ವಿಧವಿಧವಾದ ಯುದ್ಧವನ್ನು ಕಾಲನೇಮಿಯು ವಿಧಾಯಕಮಾಡಿ ಕ್ಷಣಾರ್ಧದಲ್ಲಿಯೇ ತನ್ನ ವಾಹನವನ್ನು ಬಿಟ್ಟು ಐರಾವಣದ ತಲೆಯ ಮೇಲಕ್ಕೆ ಹಾರಿ ಕುಳಿತು ಕಾಲಿನ ಒದೆಗಳಿಂದಲೂ, ಮುಷ್ಟಿಗಳಿಂದಲೂ ಆನೆಯನ್ನೂ ಮಹೇಂದ್ರನನ್ನೂ ಹೊಡೆಯಲು ಅವರಿಬ್ಬರೂ ಘೋರ ಶಬ್ದವನ್ನು ಮಾಡುತ್ತ ಭೂಮಿಯಲ್ಲಿ ಬಿದ್ದರು.

೨೮. ಬಳಿಕ ಕಾಲನೇಮಿಯು ಮೂರ್ಛೆಗೊಂಡ ಇಂದ್ರನನ್ನು ತೆಗೆದು ರಥದಲ್ಲಿ ಹಾಕಿ ಮತ್ತೆ ತಾರಕಾಸುರನ ಸಮೀಪಕ್ಕೆ ತೆರಳಿದನು.

೨೯. ತಕ್ಷಣದಲ್ಲಿಯೇ ಯಮನೇ ಮೊದಲಾದ ದೇವತೆಗಳು ಅವನನ್ನು ಯುದ್ಧಕ್ಕೆ ಆಹ್ವಾನಿಸಿದರು. ಆಗಲಾ ಯುದ್ಧದಲ್ಲಿ ದೇವತೆಗಳ ನಾಯಕರು ಒಬ್ಬೊಬ್ಬರೇ ತಾರಕನ ಕೈಗಳಿಗೆ ಸಿಕ್ಕಿಬಿದ್ದರೇ ಹೊರತು ಅವರನ್ನು ಕಾಪಾಡುವವರು ಯಾರೂ ಕಾಣದಾದರು.

ಏತಸ್ಮಿನ್ನಂತರೇ ಶರ್ವಃ ಪಿನಾಕಧನುಷಶ್ಚ್ಯುತೈಃ ।
ಬಾಣೈಃ ಸ ಸೈನ್ಯಂ ಕೃತ್ವಾ ಚ ಜಂಭಕಂ ಗೃಧ್ರಮೋದನಂ ॥ ೩೦ ॥
ಕಾಲನೇಮಿಂ ಸಮಾಗಮ್ಯ ರಥಸ್ಥೋ ವಾಕ್ಯಮಬ್ರವೀತ್ ॥ ೩೧ ॥
ಕಿಮೇತೇನ ಮಹೇಂದ್ರೇಣ ಮಯಾ ಯುಧ್ಯಸ್ವ ದಾನವ ।
ವೀರಂಮನ್ಯ ಸುದುರ್ಬುದ್ಧೇ ತತೋ ಜ್ಞಾಸ್ಯಸಿ ವೀರತಾಂ ॥ ೩೨ ॥

ಕಾಲನೇಮಿರುವಾಚ :—

ನಗ್ನೇನ ಸಹ ಕೋ ಯುದ್ಧ್ಯೇದ್ಧತೇನಾಪಿ ಚ ಯೇನ ವಾ ।
ಪಶ್ಯತ್ಸು ದೈತ್ಯವೀರಾಣಾಮುಪಹಾಸಃ ಪ್ರಜಾಯತೇ ॥ ೩೩ ॥
ಆತ್ಮನಸ್ತು ಸಮಂ ಕಿಂಚಿದ್ವಿಲೋಕಯ ಸುದುರ್ಮತೇ ।
ತದಾಕರ್ಣ್ಯ ಚ ಸಾವಜ್ಞಂ ವಚಃ ಶರ್ವೋ ವಿಸಿಸ್ಮಿಯೇ ॥ ೩೪ ॥
ತತಃ ಕುಮಾರಃ ಸಹಸಾ ಮಯೂರಸ್ಥೋಽಭ್ಯಧಾವತ ।
ಕುಜಂಭಂ ಸಾನುಗಂ ಹತ್ವಾ ವಾಸುದೇವೋಽಪ್ಯಧಾವತ ॥ ೩೫ ॥

---

೩೦–೩೨. ಇಷ್ಟರಲ್ಲಿಯೇ ಮಹಾದೇವನು ಪಿನಾಕವೆಂಬ ತನ್ನ ಧನುಸ್ಸಿನಿಂದ ಬಿಡಲ್ಪಟ್ಟ ತೀಕ್ಷ್ಣಗಳಾದ ಬಾಣಗಳಿಂದ ಸೈನ್ಯಸಹಿತನಾದ ಜಂಭಕಾಸುರನನ್ನು ಗೃಧ್ರಬಲಿಯನ್ನಾಗಿ ಮಾಡಿ ರಥದಲ್ಲಿಯೇ ಕುಳಿತು ಕಾಲನೇಮಿಯ ಎದುರಿಗೆ ಬಂದು ಹೇಳತೊಡಗಿದನು. "ಎಲೈ ದುರ್ಬುದ್ಧಿಯೆ! ನೀನೇ ವೀರನೆಂದು ತಿಳಿಯಬೇಡ. ಈ ಮಹೇಂದ್ರನನ್ನು ಗೆದ್ದುದರಿಂದೇನಾಯಿತು? ನನ್ನೊಡನೆ ಯುದ್ಧವನ್ನು ಮಾಡು. ಆಗ ನಿನಗೆ ನಿಜವಾದ ಪರಾಕ್ರಮವೇನೆಂಬುದು ತಿಳಿಯುವುದು."

೩೩. ಕಾಲನೇಮಿಯು ಹೇಳುತ್ತಾನೆ:—"ದಿಗಂಬರನೊಡನೆ ಯಾರು ಯುದ್ಧವನ್ನು ಮಾಡಲೆಳಸುವರು? ಹಾಗೆಯೇ ಕೆಳಗೆ ಬಿದ್ದವನೊಡನೆಯೂ ಷೆಣಸುವುದಿಲ್ಲ. ಇದರಿಂದ ವೀರರಲ್ಲಿ ರಾಕ್ಷಸವೀರರಾದ ನಮಗೆ ಕೇವಲ ಅಪಹಾಸ್ಯವೇ ಉಂಟಾಗುವುದು.

೩೪. ಎಲೈ ಬುದ್ಧಿಗೇಡಿಯೆ! ನಿನಗೆ ಸಮನಾದ ಶತ್ರುವನ್ನು ಯಾರನ್ನಾದರೂ ಕಂಡು ಯುದ್ಧಮಾಡಿಕೊ." ಇಂತು ನುಡಿದ ಉಪೇಕ್ಷಾಸಹಿತವಾದ ಮಾತುಗಳನ್ನು ಕೇಳಿ ಮಹಾದೇವನು ಅತ್ಯಂತ ವಿಸ್ಮಯಗೊಂಡನು.

೩೫. ಆಗ ಮಯೂರವಾಹನನಾಗಿ ಕುಮಾರಸ್ವಾಮಿಯೂ ಅಲ್ಲಿಗೆ ಓಡಿ ಬಂದನು. ಕುಜಂಭನನ್ನು ಸಕಲ ಸೈನ್ಯಗಳೊಡನೆ ನಿರ್ಮೂಲ ಮಾಡಿ ನಾರಾಯಣನೂ ಅಲ್ಲಿಗೆ ಬಂದನು.

ತತೋ ಹರಿಃ ಸ್ಕಂದಮಾಹ ಕಿಮೇತೇನ ತವ ಪ್ರಭೋ ।
ದೈತ್ಯಾಧಮೇನ ಪಾಪೇನ ಮುಹೂರ್ತಂ ಪಶ್ಯ ಮೇ ಬಲಂ ॥ ೩೬ ॥
ಏವಮುಕ್ತ್ವಾನನಿವಾರ್ಯೈ ಕೇಶವೋ ಗರುಡಸ್ಥಿತಃ ।
ಶಾರ್ಙ್ಗಕೋದಂಡನಿರ್ಮುಕ್ತೈರ್ಬಾಣೈರ್ದೈತ್ಯಮವಾಕಿರತ್ ॥ ೩೭ ॥
ಸ ತೈರ್ಬಾಣೈಸ್ತಾಡ್ಯಮಾನೋ ವಜ್ರೈರಿವ ಮಹಾಸುರಃ ।
ವಿಮುಚ್ಯ ವಾಹನಂ ಕ್ರುದ್ಧೋ ಬಾಣಾಂಸ್ತಾನ್ವ್ಯಧಮಚ್ಛರೈಃ ॥ ೩೮ ॥
ಯಾನ್ಯಾನ್ಬಾಣಾನ್ಹರಿರ್ದಿವ್ಯಾನಸ್ತ್ರಾಣಿ ಚ ಮುಮೋಚ ಹ ।
ನಿವಾರಯತಿ ದೈತ್ಯಸ್ತಾನ್ಪ್ರಹಸನ್ ಲೀಲಯೈವ ಚ ॥ ೩೯ ॥
ತತಃ ಕೌಮೋದಕೀಂ ಗೃಹ್ಯ ಕ್ಷಿಪ್ರಕಾರೀ ಜನಾರ್ದನಃ ।
ಮುಮೋಚ ಸೈನ್ಯನಾಥಾಯ ಸಾರಥಿಂ ಚ ವ್ಯಚೂರ್ಣಯತ್ ॥ ೪೦ ॥
ತತೋ ರಥಾದವಪ್ಲುತ್ಯ ವಿವೃತ್ಯ ವದನಂ ಮಹತ್ ।
ಗರುಡಂ ಚಂಚುನಾದಾಯ ಸ ವಿಷ್ಣುಂ ಕ್ಷಿಪ್ತವಾನ್ಮುಖೇ ॥ ೪೧ ॥

---

೩೬. ಆಗಲಾ ವಿಷ್ಣುವು ಸ್ಕಂದನನ್ನು ಕುರಿತು "ಎಲೈ ಸ್ವಾಮಿಯೆ! ನಿನಗೆ ಇವನಿಂದೇನಾಗಬೇಕು? ಇವನು ರಾಕ್ಷಸಾಧಮನು; ಪಾಪಿಷ್ಠನು. ಈಗ ನನ್ನ ಬಲವನ್ನು ನೋಡು."

೩೭. ಇಂತೆಂದು ಷಣ್ಮುಖನನ್ನು ತಡೆದು ಗರುಡವಾಹನನಾದ ಮಹಾ ವಿಷ್ಣುವು ತನ್ನ ಶಾರ್ಙವೆಂಬ ಬಿಲ್ಲಿನಲ್ಲಿ ತೀಕ್ಷ್ಣಬಾಣಗಳನ್ನು ಹೂಡಿ ರಾಕ್ಷಸನ ಮೇಲೆ ಅಂಬಿನ ಮಳೆಯನ್ನು ಸುರಿಸಿದನು.

೩೮. ವಜ್ರಗಳಂತೆ ಕಠಿನಗಳಾದ ಆ ಬಾಣಗಳಿಂದ ಏಟುಗಳನ್ನು ತಿಂದು, ಕೋಪದಿಂದ ಮಹೇಂದ್ರನನ್ನು ಬಿಟ್ಟು ಮೊದಲು ಆ ಬಾಣಗಳನ್ನು ತನ್ನ ಬಾಣ ಗಳಿಂದ ನಾಶಗೊಳಿಸಿದನು.

೩೯. ವಿಷ್ಣುವು ಯಾವ ಯಾವ ಬಾಣಗಳನ್ನೂ ಅಸ್ತ್ರಗಳನ್ನೂ ಪ್ರಯೋಗಿ ಸಿದನೋ, ಅವುಗಳನ್ನೆಲ್ಲ ರಾಕ್ಷಸನಾಯಕನು ನಗುತ್ತಲೇ ಲೀಲಾಜಾಲವಾಗಿ ತಡೆದು ನಾಶಗೊಳಿಸುತ್ತಿದ್ದನು.

೪೦. ಆಗ ವೇಗವಂತನಾದ ಜನಾರ್ದನನು ತನ್ನ ಗದೆಯಾದ ಕೌಮೋದಕಿಯನ್ನು ತೆಗೆದು ರಾಕ್ಷಸನ ಕಡೆಗೆ ಬೀಸಲು ಅದು ಕಾಲನೇಮಿಯ ರಥದ ಸಾರಥಿಯನ್ನು ಪುಡಿಗುಟ್ಟಿತು.

೪೧. ಆಗ ರಾಕ್ಷಸನು ರಥದಿಂದ ಕೆಳಕ್ಕೆ ಧುಮುಕಿ ಓಡಿಬಂದು ತನ್ನ ವಿಶಾಲವಾದ ಮುಖವನ್ನು ತೆರೆದು ಗರುಡನನ್ನು ಮೂಗಿನಿಂದ ಹಿಡಿದು ವಿಷ್ಣು ಸಹಿತವಾಗಿ ಅವನನ್ನು ನುಂಗಿಬಿಟ್ಟನು.

ತತೋಽಭೂತ್ಸರ್ವದೇವಾನಾಂ ವಿಮೋಹೋ ಜಗತಾಮಪಿ ।
ಚಚಾಲ ವಸುಧಾ ಚೇಲುಃ ಪರ್ವತಾಃ ಸಪ್ತ ಚಾರ್ಣವಾಃ ॥ ೪೨ ॥
ಕಾಲನೇಮಿರ್ನದಂಶ್ಚೈವ ಪ್ರಾನೃತ್ಯತ ಮಹಾರಣೇ ।
ಅಸಮ್ಮೂಢಸ್ತತೋ ವಿಷ್ಣುಸ್ತ್ವರಾಕಾಲ ಉಪಸ್ಥಿತೇ ।
ಕುಕ್ಷಿಂ ವಿದಾರ್ಯ ಚಕ್ರೇಣ ಭಾಸ್ಕರೋಽಭಾದಿವೋದಿತಃ ॥ ೪೩ ॥
ಬಹಿರ್ಭೂತೋ ಹರಿಶ್ಚೈನಂ ಮೋಹಯಿತ್ವಾ ಸ್ವನಿಂದಯಾ ।
ಪಾತಾಲಸ್ಯ ತಲಂ ನಿನ್ಯೇ ತತ್ರ ಶಿಶ್ಯೇ ಸ ಕಾಷ್ಠವತ್ ॥ ೪೪ ॥
ತತಶ್ಚಕ್ರೇಣ ದೈತ್ಯಾನಾಂ ನಿಹತಾ ದಶಕೋಟಯಃ ।
ಪ್ರಮೋದಿತಾಸ್ತಥಾ ದೇವಾ ವಿಮೋಹಾಸ್ತತ್ಕ್ಷಣಾದ್ಬಭುಃ ॥ ೪೫ ॥
ತತಃ ಶರ್ವಸ್ತಮಾಲಿಂಗ್ಯ ಸಾಧುಸಾಧು ಜನಾರ್ದನ ।
ತ್ವಯಾ ಯದ್ವಿಹಿತಂ ಕರ್ಮ ತತ್ಕರ್ತಾನ್ಯೋ ನ ವಿದ್ಯತೇ ॥ ೪೬ ॥
ಮಹಿಷಾದ್ಯಾಃ ಸುದುರ್ಜೇಯಾ ದೇವ್ಯಾ ಯೇ ವಿನಿಪಾತಿತಾಃ ।
ತೇಷಾಮತಿಬಲೋ ಹ್ಯೇಷ ತ್ವಯಾ ವಿಷ್ಣೋ ವಿನಿರ್ಜಿತಃ ॥ ೪೭ ॥

---

೪೨–೪೩. ಆಗ ಸಮಸ್ತ ದೇವತೆಗಳಿಗೂ, ಲೋಕಗಳಿಗೂ ದಿಗ್ಭ್ರಮೆ ಹಿಡಿಯಿತು. ಭೂಮಿಯು ಕಂಪಿಸಿತು. ಪರ್ವತಗಳು ಅಲ್ಲಾಡಿದುವು. ಸಪ್ತ ಸಮುದ್ರಗಳೂ ಕ್ಷೋಭಗೊಂಡುವು. ಕಾಲನೇಮಿಯು ಜಯಘೋಷವನ್ನು ಮಾಡುತ್ತ ರಣಭೂಮಿಯಲ್ಲಿ ಕುಣಿದಾಡುತ್ತಿದ್ದನು. ಆಗ ವಿಷ್ಣುವು ಮೋಹಗೊಳ್ಳದೆ, ಆಪತ್ಕಾಲವೊದಗಲು ತನ್ನ ಚಕ್ರಾಯುಧದಿಂದ ಆ ರಾಕ್ಷಸನ ಬಸಿರನ್ನು ಬಗೆದು ಪ್ರಾತಃಕಾಲದ ಸೂರ್ಯನಂತೆ ಹೊರ ಹೊರಟನು.

೪೪. ಇಂತು ಹೊರಗೆ ಬಂದ ಮಹಾವಿಷ್ಣುವು ತನ್ನ ಮಾಯೆಯಿಂದ ರಾಕ್ಷಸನನ್ನು ಮೋಹಗೊಳಿಸಿ ಅವನನ್ನು ಪಾತಾಲಕ್ಕೆ ತೆಗೆದುಕೊಂಡು ಹೋದನು. ಅಲ್ಲಿ ಆ ರಾಕ್ಷಸನು ಕಟ್ಟಿಗೆಯಂತೆ ನಿಶ್ಚೇಷ್ಟನಾಗಿ ಬಿದ್ದಿದ್ದನು.

೪೫. ಅದೇ ಸಮಯದಲ್ಲಿಯೇ ಆ ಸುದರ್ಶನ ಚಕ್ರದಿಂದ ಹತ್ತುಕೋಟಿ ರಾಕ್ಷಸರು ಹತರಾದರು. ಆಗ ದೇವತೆಗಳೆಲ್ಲರೂ ಹರ್ಷಗೊಂಡು ತಮ್ಮ ದಿಗ್ಭ್ರಾಂತಿಯನ್ನು ತಕ್ಷಣದಲ್ಲಿಯೇ ಕಳೆದು ಕೊಂಡರು.

೪೬–೪೭. ಮಹೇಶ್ವರನು ವಿಷ್ಣುವನ್ನು ಅಪ್ಪಿಕೊಂಡು ಹೇಳತೊಡಗಿದನು:—''ಎಲೈ ನಾರಾಯಣನೆ! ನೀನು ಬಹಳ ಒಳ್ಳೆಯ ಕಾರ್ಯವನ್ನು ಮಾಡಿದೆ. ನೀನು ಮಾಡಿದ ಈ ಕಾರ್ಯವನ್ನು ನಿರ್ವಹಿಸುವಂತಹ ವೀರನು ನಮ್ಮಲ್ಲಿ ಮತ್ತೊಬ್ಬನಿಲ್ಲ. ದೇವಿಯಾದ ಪಾರ್ವತಿಯಿಂದ ನಾಶವನ್ನೈದಿದ ದುರ್ಜಯರಾದ ಮಹಿಷಾದಿ ರಾಕ್ಷಸರಿಗಿಂತಲೂ ಅತ್ಯಂತ ಬಲಿಷ್ಠನಾದ ಈ ದೈತ್ಯನು ನಿನ್ನಿಂದ ನಿಗ್ರಹಿಸಲ್ಪಟ್ಟನು.

ತಾರಕಾಮಯಸಂಗ್ರಾಮೇ ವಧ್ಯಸ್ತೇಽಸೌ ಜನಾರ್ದನ ।
ಕಂಸರೂಪಃ ಪುನಸ್ತೇಽಯಂ ಹಂತವ್ಯೋಽಷ್ಟಮಜನ್ಮನಿ ॥ ೪೮ ॥
ಏವಂ ಪ್ರಶಂಸಮಾನಾಸ್ತೇ ವಾಸುದೇವಂ ಜಗದ್ಗುರುಂ ।
ಶಸ್ತ್ರಜಾಲೈರ್ಲಬ್ಧಸಂಜ್ಞಾನ್ದೈತ್ಯಸೈನ್ಯಾನನಾಶಯನ್ ॥ ೪೯ ॥
ತಾನಿ ದೈತ್ಯಶರೀರಾಣಿ ಜರ್ಜರಾಣಿ ಮಹಾಯುಧೈಃ ।
ಅಪತನ್ಭೂತಲೇ ಪಾರ್ಥ ಛಿನ್ನಾಭ್ರಾಣೀವ ಸರ್ವಶಃ ॥ ೫೦ ॥
ತತಸ್ತದ್ದಾನವಂ ಸೈನ್ಯಂ ಹತನಾಥಮಭೂತ್ತಥಾ ।
ದೇವೈಃ ಸ್ಕಂದಾನುಗೈಶ್ಚೈವ ಕೃತಂ ಶಸ್ತ್ರೈಃ ಪರಾಙ್ಮುಖಂ ॥ ೫೧ ॥
ಅಥೋ ದೃಷ್ಟಂ ತದಾ ಹೃಷ್ಟೈಃ ಸರ್ವೈರ್ದೇವೈರ್ಮುದಾಯುತೈಃ ।
ಸಂಹತಾನಿ ಚ ಸರ್ವಾಣಿ ತದಾ ತೂರ್ಯಾಣ್ಯವಾದಯನ್ ॥ ೫೨ ॥
ಅಥ ಭಗ್ನಂ ಬಲಂ ಪ್ರೇಕ್ಷ್ಯ ಹತವೀರಂ ಮಹಾರಣೇ ।
ದೇವಾನಾಂ ಚ ಮಹಾನೋದಂ ತಾರಕಃ ಪ್ರಾಹ ಸಾರಥಿಂ ॥ ೫೩ ॥
ಸಾರಥೇ ಪಶ್ಯ ಸೈನ್ಯಾನಿ ದ್ರಾವ್ಯಮಾಣಾನಿ ಮೇ ಸುರೈಃ ।
ಯೇಽಸ್ಮಾಭಿಸ್ತೃಣವದ್ದೃಷ್ಟಾಃ ಪಶ್ಯ ಕಾಲಸ್ಯ ಚಿತ್ರತಾಂ ॥ ೫೪ ॥

---

೪೮. ತಾರಕಾಸುರನೊಡನೆ ನಡೆದ ಈ ಯುದ್ಧದಲ್ಲಿ ನಿನ್ನಿಂದ ಹತನಾದ ಈ ರಾಕ್ಷಸನು ಮುಂದೆ ನಿನ್ನ ಎಂಟನೆಯ ಕೃಷ್ಣಾವತಾರದ ಕಾಲದಲ್ಲಿ ಕಂಸನಾಗಿ ಅವತರಿಸಿ ಮತ್ತೆ ನಿನ್ನಿಂದ ಕೊಲ್ಲಲ್ಪಡುವನು.''

೪೯. ಇಂತು ಜಗನ್ನಾಥನಾದ ನಾರಾಯಣನನ್ನು ಸ್ತೋತ್ರಮಾಡಿ ಆ ದೇವತೆಗಳೆಲ್ಲರೂ ಚೇತನಗೊಳ್ಳುತ್ತಿರುವ ರಾಕ್ಷಸರ ಸೈನ್ಯದ ಮೇಲೆ ಬಾಣವರ್ಷಗಳನ್ನು ಸುರಿದು ನಾಶಗೊಳಿಸಿದರು.

೫೦–೫೧. ಮಹಾಯುಧಗಳಿಂದ ಛಿನ್ನ ಭಿನ್ನಗಳಾದ ರಾಕ್ಷಸರ ಶರೀರಗಳು ನೆಲಕ್ಕೆ ಬಿದ್ದ ಮೇಘಗಳಂತೆ ರಣಭೂಮಿಯಲ್ಲೆಲ್ಲ ಈಡಾಡುತ್ತಿದ್ದುವು. ಆಗ ರಾಕ್ಷಸ ಸೈನ್ಯವು ನಾಯಕರಹಿತವಾಯಿತು. ಷಣ್ಮುಖನ ಅನುಯಾಯಿಗಳಾದ ದೇವತೆಗಳಿಂದ ಬಾಣದ ಮಳೆಯು ಸುರಿದು ಆ ಸೈನ್ಯವೆಲ್ಲವೂ ಹಿಂದಿರುಗಿತು.

೫೨. ಸಂತೋಷಗೊಂಡ ಸಕಲ ದೇವತೆಗಳೂ ಆಗ ಜಯಘೋಷವನ್ನು ಮಾಡಿದರು. ಭೇರಿ, ಪಟಹಾದಿ ಸಕಲ ವಾದ್ಯಗಳನ್ನೂ ಒಮ್ಮೆಲೇ ಬಾಜಿಸಿದರು.

೫೩. ಇಂತು ತನ್ನ ಸೈನ್ಯವು ನಾಶವಾದುದನ್ನೂ, ವೀರರೆಲ್ಲರೂ ಯುದ್ಧದಲ್ಲಿ ಮಡಿದುದನ್ನೂ, ದೇವತೆಗಳ ಹಿರಿದಾದ ಸಂತೋಷವನ್ನೂ ಕಂಡು ತಾರಕಾಸುರನು ತನ್ನ ಸಾರಥಿಯನ್ನು ಕುರಿತು ಹೇಳಿದನು.

೫೪. "ಎಲೈ ಸಾರಥಿಯೆ! ದೇವತೆಗಳಿಂದ ಹಿಂದಕ್ಕೆ ಓಡಿಸಲ್ಪಡುತ್ತಿರುವ ನನ್ನ ಸೈನ್ಯಗಳನ್ನು ನೋಡಿದೆಯಾ? ಈ ದೇವತೆಗಳೇ ಅಲ್ಲವೆ ನಮ್ಮಿಂದ

ತನ್ಮೇ ವಾಹಯ ಶೀಘ್ರಂ ತ್ವಂ ರಥಮೇನಂ ಸುರಾನ್ಪ್ರತಿ ।
ಪಶ್ಯಂತು ಮೇ ಬಲಂ ಬಾಹ್ವೋರ್ದ್ರವಂತು ಚ ಸುರಾಧಮಾಃ ॥ ೫೫ ॥
ಬ್ರುವನ್ನೇವಂ ಸಾರಥಿಂ ಸ ನಿಧುನ್ವನ್ಸುಮಹದ್ಧನುಃ ।
ಕ್ರೋಧರಕ್ತೇಕ್ಷಣೋ ರಾಜಾ ದೇವಸೈನ್ಯಂ ಸಮಾವಿಶತ್ ॥ ೫೬ ॥
ಆಗಚ್ಛಮಾನಂ ತಂ ದೃಷ್ಟ್ವಾ ಹರಿಃ ಸ್ಕಂದಮಥಾಬ್ರವೀತ್ ।
ಕುಮಾರ ಪಶ್ಯ ದೈತ್ಯೇಂದ್ರಂ ಕಾಲಂ ಯದ್ವದ್ಯುಗಾತ್ಯಯೇ ॥ ೫೭ ॥
ಅಯಾಸಯೇನ ತಪಸಾ ಘೋರೇಣಾರಾಧಿತಃ ಶಿವಃ ।
ಅಯಂ ಸ ಯೇನ ಶಕ್ರಾದ್ಯಾಃ ಕೃತಾ ಮರ್ಕಾಃ ಸಮಾರ್ಬುದಂ ॥ ೫೮ ॥
ಅಯಂ ಸ ಸರ್ವಶಸ್ತ್ರೌಘೈರ್ಯೋಽಸ್ಮಾಭಿರ್ನ ಜಿತೋ ರಣೇ ।
ನಾವಜ್ಞಯಾ ಪ್ರದ್ರಷ್ಟವ್ಯಸ್ತಾರಕೋಽಯಂ ಮಹಾಸುರಃ ॥ ೫೯ ॥
ಸಪ್ತಮಂ ಹಿ ದಿನಂ ತೇಽದ್ಯ ಮಧ್ಯಾಹ್ನೋಽಯಂ ಚ ವರ್ತತೇ ।
ಅರ್ವಾಗಸ್ತಮನಾದೇವಂ ಜಹಿ ವಧ್ಯೋಽನ್ಯಥಾ ನ ಹಿ ॥ ೬೦ ॥

---

ಮುನ್ನು ಹುಲ್ಲುಗಳಿಗಿಂತ ಕಡೆಯಾಗಿ ಒಡಿಸಲ್ಪಡುತ್ತಿದ್ದರು? ಕಾಲಗತಿಯ ವೈಚಿತ್ರ್ಯವನ್ನೇನೆಂದು ಹೇಳೋಣ!

೫೫. ಈಗ ನನ್ನ ರಥವನ್ನು ದೇವತೆಗಳೆದುರಿಗೆ ನಡೆಸುವವನಾಗು. ಅವರು ನನ್ನ ಬಾಹುಗಳ ಬಲವನ್ನು ತಿಳಿಯಲಿ. ಆ ಸುರಾಧಮರು ಹಿಂದಕ್ಕೆ ಓಡಿ ಹೋಗಲಿ.''

೫೬. ಇಂತು ಸಾರಥಿಗೆ ಹೇಳುತ್ತ ತನ್ನ ಧನುಸ್ಸನ್ನು ಟಂಕಾರಮಾಡುತ್ತಾ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಆ ರಾಕ್ಷಸರಾಜನು ದೇವತೆಗಳ ಸೈನ್ಯವನ್ನು ಹೊಕ್ಕನು.

೫೭. ಇಂತು ಬರುತ್ತಿರುವ ತಾರಕನನ್ನು ಕಂಡು ನಾರಾಯಣನು ಸ್ಕಂದನಿಗೆ ಹೇಳತೊಡಗಿದನು. ''ಎಲೈ ಕುಮಾರಸ್ವಾಮಿಯೆ! ಪ್ರಳಯಕಾಲದ ಯಮನಂತೆ ಎದುರಿಗೆ ಬರುತ್ತಿರುವ ಈ ರಾಕ್ಷಸೇಂದ್ರನನ್ನು ನೋಡು.

೫೮–೫೯. ಈತನೇ ಅತ್ಯುಗ್ರವಾದ ತಪಸ್ಸಿನಿಂದ ಶಿವನನ್ನು ಮೆಚ್ಚಿಸಿರುವವನು. ಇವನೇ ಇಂದ್ರಾದಿ ದೇವತೆಗಳನ್ನು ಬಹಳಕಾಲದಿಂದ ಕೋತಿಗಳಂತೆ ಕುಣಿಸುತ್ತಿರುವವನು. ಪೂರ್ವದಲ್ಲಿ ಸಕಲ ಶಸ್ತ್ರಾಸ್ತ್ರಗಳಿಂದಲೂ ನಮಗೆ ಗೆಲ್ಲಲು ಅಸಾಧ್ಯನಾದವನೂ ಇವನೇ. ಈ ತಾರಕನೆಂಬ ಮಹಾಸುರನು ಅಲಕ್ಷ್ಯದಿಂದ ಕಾಣಲ್ಪಡತಕ್ಕವನಲ್ಲ.

೬೦. ಇಂದು ನಿನಗೆ ಏಳನೆಯ ದಿನವಾಗಿರುವುದು. ಈಗ ಮಧ್ಯಾಹ್ನಕಾಲವು ನಡೆಯುತ್ತಿರುವುದು. ಇಂದು ಸೂರ್ಯಾಸ್ತಮಯಸಮಯದೊಳಗಾಗಿಯೇ ಇವನನ್ನು ಕೊಲ್ಲಬೇಕು. ಇಲ್ಲದಿದ್ದರೆ ಇವನು ಅವಧ್ಯನೇ ಸರಿ.''

ಏವಮುಕ್ತ್ವಾ ಸ ಶಕ್ರಾದೀಂಸ್ತ್ವರಿತಃ ಕೇಶವೋಽಬ್ರವೀತ್ ।
ಆಯಾಸಯತ ದೈತ್ಯೇಂದ್ರಂ ಸುಖವಧ್ಯೋ ಯಥಾ ಭವೇತ್ ॥ ೬೧ ॥
ತತಸ್ತೇ ವಿಷ್ಣುವಚನಾದ್ವಿನದಂತೋ ದಿವೌಕಸಃ ।
ತಮಾಸಾದ್ಯ ಶರವ್ರಾತೈಃ ಮುದಿತಾಃ ಸಮವಾಕಿರನ್।
ಪ್ರಹಸನ್ನಿವ ದೇವಾಂಸ್ತಾನ್ದ್ರಾವಯಾಮಾಸ ತಾರಕಃ ॥ ೬೨ ॥
ಯಥಾ ನಾಸ್ತಿಕದುರ್ವೃತ್ತೋ ನಾನಾಶಾಸ್ತ್ರೋಪದೇಶಕಾನ್ ॥ ೬೩ ॥
ಸೋಢುಂ ನ ಶಕ್ತಾ ನ ತೇ ವೀರಂ ಮಹತಿ ಸ್ಯಂದನೇ ಸ್ಥಿತಂ ॥ ೬೪ ॥
ಮಹಾಪಸ್ಮಾರಸಂಕ್ರಾಂತಂ ಯಥೈವಾಪ್ರಿಯವಾದಿನಂ ।
ವಿಧೂಯ ಸಕಲಾನ್‌ದೇವಾನ್‌ಕ್ಷಣಮಾತ್ರೇಣ ತಾರಕಃ ॥ ೬೫ ॥
ಆಜಗಾಮ ಕುಮಾರಾಯ ವಿಧುವನ್ಸ ಮಹಾಧನುಃ ।
ಆಗಚ್ಛಮಾನಂ ತಂ ದೃಷ್ಟ್ವಾ ಸ್ಕಂದಃ ಪ್ರತ್ಯುದ್ಯಯೌ ತತಃ ॥ ೬೬ ॥
ತಸ್ಯಾರಕ್ಷದ್ಭವಃ ಪಾರ್ಶ್ವಂ ದಕ್ಷಿಣಂ ಚೈವ ತಂ ಹರಿಃ ।
ಪೃಷ್ಠೇ ಚ ಪಾರ್ಷದಾಸ್ತಸ್ಯ ಕೋಟಿಶೋಽರ್ಬುದಶಸ್ತಥಾ ॥ ೬೭ ॥

---

೬೧. ಇಂತೆಂದು ಬೇಗ ಬೇಗನೆ ಇಂದ್ರಾದಿಗಳನ್ನು ಕರೆದು ನಾರಾಯಣನು "ನೀವೆಲ್ಲರೂ ಯುದ್ಧದಿಂದ ರಾಕ್ಷಸರಾಜನನ್ನು ಆಯಾಸಗೊಳಿಸಿರಿ; ಆಗ ಕುಮಾರಸ್ವಾಮಿಯು ಅವನನ್ನು ಸುಲಭವಾಗಿ ಗೆಲ್ಲಲು ಸಾಧ್ಯವಾಗುವುದು" ಎಂದು ಅಪ್ಪಣೆಮಾಡಿದನು.

೬೨. ಶ್ರೀಮಹಾವಿಷ್ಣುವಿನ ಈ ಮಾತುಗಳನ್ನು ಕೇಳಿ ದೇವತೆಗಳೆಲ್ಲರೂ ಸಿಂಹನಾದಗಳನ್ನು ಮಾಡುತ್ತ ಹರ್ಷಗೊಂಡವರಾಗಿ ಆ ರಾಕ್ಷಸೇಶ್ವರನನ್ನು ತಮ್ಮ ಬಾಣಗಳಿಂದ ಆಚ್ಛಾದಿಸಿದರು.

೬೩–೬೪. ನಾಸ್ತಿಕನಾದ ಆಚಾರಹೀನನು ಶಾಸ್ತ್ರಬೋಧಕರನ್ನು ಓಡಿಸುವಂತೆ ಆ ರಾಕ್ಷಸನು ನಗುತ್ತಲೇ ದೇವತೆಗಳನ್ನೆಲ್ಲ ಹಿಮ್ಮೆಟ್ಟಿಸಿದನು.

೬೫–೬೬. ಅಪಸ್ಮಾರದಿಂದ ಉಪದ್ರವಗೊಂಡು ಅಪ್ರಿಯಗಳನ್ನಾಡುತ್ತಿರುವವನನ್ನು ಪಾರ್ಶ್ವದಲ್ಲಿದ್ದವರು ಹೇಗೆ ಸಹಿಸಲಾರರೊ, ಹಾಗೆಯೇ ವಿಶಾಲವಾದ ರಥವನ್ನಾರೋಹಿಸಿ ಬರುತ್ತಿರುವ ಆ ರಾಕ್ಷಸವೀರನನ್ನು ದೇವತೆಗಳು ತಡೆಯಲಾರದಾದರು. ಇಂತು ಸಮಸ್ತ ದೇವತೆಗಳನ್ನೂ ನಿಮಿಷಮಾತ್ರದಲ್ಲಿ ಚೆದುರಿಸಿ ತನ್ನ ಮಹತ್ತಾದ ಧನುಸ್ಸನ್ನು ಕೈಯಲ್ಲಿ ತಿರುವುತ್ತ ಕುಮಾರಸ್ವಾಮಿಯ ಎದುರಿಗೆ ಬಂದು ನಿಂತನು. ಇಂತು ಬರುತ್ತಿರುವ ತಾರಕಾಸುರನನ್ನು ಕಂಡು ಸ್ಕಂದನೂ ಅವನನ್ನು ಎದುರಿಸಿ ನಿಂತನು.

೬೭. ಆತನ ಎಡಭಾಗವನ್ನು ಈಶ್ವರನೂ, ಬಲಭಾಗವನ್ನು ನಾರಾಯಣನೂ

ತತಸ್ತೌ ಸುಮಹಾಯುದ್ಧೇ ಸಂಸಕ್ತೌ ದೇವದೈತ್ಯಕೌ ।
ಧರ್ಮಾಧರ್ಮಾವಿವೋದಗ್ರೌ ಜಗದಾಶ್ಚರ್ಯಕಾರಕೌ ॥ ೭೮ ॥
ತತಃ ಕುಮಾರಮಾಸಾದ್ಯ ಲೀಲಯಾ ತಾರಕೋಽಬ್ರವೀತ್ ।
ಅಹೋ ಬಾಲಾತಿಬಾಲಸ್ತ್ವಂ ಯತ್ತ್ವಂ ಗೀರ್ವಾಣವಾಕ್ಯತಃ ।
ಆಸಾದಯಸಿ ಮಾಂ ಯುದ್ಧೇ ಪತಂಗ ಇವ ಪಾವಕಂ ॥ ೭೯ ॥
ವಧೇನ ತವ ಕೋ ಲಾಭೋ ಮಮ ಮುಕ್ತೋಽಸಿ ಬಾಲಕ ।
ಪಿಬ ಕ್ಷೀರಂ ಗೃಹಾಣೇಮಂ ಕಂದುಕಂ ಕ್ರೀಡ ಲೀಲಯಾ ॥ ೭೦ ॥
ಏವಮುಕ್ತಃ ಪ್ರಹಸ್ಯಾಹ ತಾರಕಂ ಯೋಗಿನಾಂ ಗುರುಃ ।
ಶಿಶುತ್ವಂ ಮಾವಮಂಸ್ಥಾ ಮೇ ಶಿಶುಃ ಕಷ್ಟೋ ಭುಜಂಗಮಃ ॥ ೭೧ ॥
ದುಷ್ಪ್ರೇಕ್ಷ್ಯೋ ಭಾಸ್ಕರೋ ಬಾಲೋ ದುಃಸ್ಪರ್ಶೋಽಲ್ಪೋಽಪಿ ಪಾವಕಃ ।
ಅಲ್ಪಾಕ್ಷರೋ ನ ಮಂತ್ರಃ ಕಿಂ ಸುಸ್ಫುರೋ ದೈತ್ಯ ದೃಶ್ಯತೇ ॥ ೭೨ ॥

---

ರಕ್ಷಿಸುತ್ತಿರಲು ಆತನ ಪಾರ್ಷದರೆಲ್ಲರೂ ಕೋಟಿಗಳಾಗಿಯೂ ಅರ್ಬುದಗಳಾಗಿಯೂ ಆತನನ್ನು ಹಿಂಬಾಲಿಸಿದರು.

೭೮. ಬಳಿಕ ದೇವದಾನವರೀರ್ವರೂ ಭೂಮಿಗೆ ಆಶ್ಚರ್ಯವನ್ನುಂಟುಮಾಡುವವರಾಗಿ ಧರ್ಮ, ಅಧರ್ಮಗಳೇ ಮೂರ್ತಿಗೊಂಡಂತೆ ಕಾಣುತ್ತ ಮಹತ್ತರವಾದ ಯುದ್ಧದಲ್ಲಿ ನಿರತರಾದರು.

೭೯. ಆಗ ತಾರಕಾಸುರನು ಕುಮಾರಸ್ವಾಮಿಯನ್ನು ಕುರಿತು ಇಂತೆಂದನು:—"ಅಯ್ಯೋ! ಬಾಲಕನೆ! ನೀನಿನ್ನೂ ಎಳೆಗೂಸು. ದೇವತೆಗಳ ಮಾತನ್ನನುಸರಿಸಿ ನನ್ನೊಡನೆ ಯುದ್ಧಕ್ಕೆ ನಿಂತಿರುವುದು ಪತಂಗವು ದಾವಾಗ್ನಿಯೊಡನೆ ಸೆಣಸಿದಂತೆಯೇ ಸರಿ.

೭೦. ನಿನ್ನ ಸಂಹಾರದಿಂದ ನನಗೇನೂ ಪ್ರಯೋಜನವಿಲ್ಲವು. ನಿನ್ನ ಪ್ರಾಣಗಳನ್ನುಳಿಸಿದ್ದೇನೆ. ಹಸುಗೂಸಾದ ನೀನು ತಾಯಿಯ ಹಾಲನ್ನು ಕುಡಿದು ನಾನು ಕೊಡುವ ಈ ಚೆಂಡಿನಿಂದ ಆಟವನ್ನು ಆಡಿಕೊ."

೭೧–೭೨. ಈ ಮಾತುಗಳನ್ನು ಕೇಳಿ ಗಟ್ಟಿಯಾಗಿ ನಗುತ್ತ ಯೋಗಿಗಳ ಗುರುವಾದ ಷಣ್ಮುಖನು ಆ ರಾಕ್ಷಸನನ್ನು ಕುರಿತು ಇಂತೆಂದನು:—"ಎಲೈ ರಾಕ್ಷಸನೆ! ನಾನು ಕೇವಲ ಬಾಲಕನೆಂದು ನೀನೆಂದಿಗೂ ನನ್ನನ್ನು ಕಡೆಗಣಿಸಬೇಡ. ಎಳೆಯ ಹಾವಿನ ಮರಿಯು ಕಷ್ಟದಾಯಕವಲ್ಲವೆ? ಅದರ ವಿಷವು ನೆತ್ತಿಗೇರಿ ಮಾನವನನ್ನು ಕೊಲ್ಲದಿದ್ದೀತೆ? ಎಳೆಯ ಸೂರ್ಯನಾದರೂ ಅವನನ್ನು ಕಣ್ಣೆತ್ತಿನೋಡಲು ಎಂದಿಗೂ ಅಶಕ್ಯವೇ ಅಲ್ಲವೆ. ಸಣ್ಣ ಕಿಡಿಯಾದರೂ ಅಗ್ನಿಯು ಮುಟ್ಟಲಳವಲ್ಲ. ಎಲೈ ದೈತ್ಯನೆ! ಕೆಲವಕ್ಷರಗಳುಳ್ಳ ಮಂತ್ರವಾದರೂ ಫಲದಾಯಕವಾಗಿ ಕಾಣುವು ದಿಲ್ಲವೆ?"

ಏವಮುಕ್ತ್ವಾ ದೈತ್ಯಮುಕ್ತಂ ಗೃಹೀತ್ವಾ ಕಂದುಕಂ ಚ ತಂ ।
ತಸ್ಮಿನ್ಶಕ್ತ್ಯಸ್ತ್ರಮಾದಾಯ ದೈತ್ಯಾಯ ಪ್ರಮುಮೋಚ ಹ ॥ ೭೩ ॥
ತಸ್ಯ ತೇನ ಪ್ರಹಾರೇಣ ರಥಶ್ಚೂರ್ಣೀಕೃತೋಽಭವತ್ ।
ಚತುರ್ಯೋಜನಮಾತ್ರೋ ಯೋ ನಾನಾಶ್ಚರ್ಯಸಮನ್ವಿತಃ ॥ ೭೪ ॥
ಗರುಡಸ್ಯ ಸುತಾ ಯೇ ಚ ತೀರ್ಯರ್ಮಾಣೇ ರಥೋತ್ತಮೇ ।
ಮುಕ್ತಾಃ ಕಥಂಚಿದುತ್ಪತ್ಯ ಸಾಗರಾಂತರಮಾವಿಶನ್ ॥ ೭೫ ॥
ತತಃ ಕ್ರುದ್ಧಸ್ತಾರಕಶ್ಚ ಮುದ್ಗರಂ ಕ್ಷಿಪ್ತವಾನ್ಗುಹೇ ।
ವಿಂಧ್ಯಾದ್ರಿಮಿವ ತಂ ಸ್ಕಂದೋ ಗೃಹೀತ್ವಾ ತಂ ವ್ಯತಾಡಯತ್ ॥ ೭೬ ॥
ಸ್ಥಿರೇ ತಸ್ಯೋರಸಿ ವ್ಯೂಢೇ ಮುದ್ಗರಃ ಶತಧಾಗಮತ್ ।
ಮೇನೇ ಚ ದುರ್ಜಯಂ ದೈತ್ಯಸ್ತದಾ ಷಣ್ಮುಖಂ ರಣೇ ॥ ೭೭ ॥
ಚಿಂತಯಾಮಾಸ ಬುದ್ಧ್ಯಾ ಚ ಪ್ರಾಪ್ತಂ ತದ್ಬ್ರಹ್ಮಣೋ ವಚಃ ॥ ೭೮ ॥
ತಂ ಭೀತಮಿವ ಚಾಲೋಕ್ಯ ದೈತ್ಯವೀರಾಶ್ಚ ಕೋಟಿಶಃ ।
ನದಂತೋತಿಮಹಾಸೇನಂ ನಾನಾಶಸ್ತ್ರೈರವಾಕಿರನ್ ॥ ೭೯ ॥

---

೭೩–೭೪. ಇಂತೆಂದು ಸ್ಕಂದನು ದೈತ್ಯನಿಂದ ಬೀಸಲ್ಪಟ್ಟ ಚೆಂಡನ್ನು ತೆಗೆದುಕೊಂಡು ಅದರಲ್ಲಿ ಶಕ್ತ್ಯಸ್ತ್ರವನ್ನು ಆವಾಹನೆಮಾಡಿ ರಾಕ್ಷಸನಿಗೆ ಗುರಿಯಿಟ್ಟೆಸೆದನು. ಅದರ ಪೆಟ್ಟಿನಿಂದಲೇ ನಾಲ್ಕು ಯೋಜನದಗಲವೂ ನಾನಾಶ್ಚರ್ಯಸಮನ್ವಿತವೂ ಆದ ತಾರಕಾಸುರನ ರಥವೆಲ್ಲವೂ ಪುಡಿಪುಡಿಯಾಯಿತು.

೭೫. ಇಂತು ರಥವು ಚೂರ್ಣಿತವಾಗಲು ಅದರಲ್ಲಿದ್ದ ಗರುಡಾತ್ಮಜರೆಲ್ಲರೂ ಬಹಳ ಕಷ್ಟದಿಂದ ತಪ್ಪಿಸಿಕೊಂಡು ಮೇಲಕ್ಕೆ ಹಾರಿ ಸಮುದ್ರಮಧ್ಯವನ್ನು ಸೇರಿದರು.

೭೬. ತಾರಕನು ಇದನ್ನು ಕಂಡು ಅತ್ಯಂತವಾಗಿ ಕೋಪಗೊಂಡು ತನ್ನ ಮುದ್ಗರವನ್ನು ಗುಹನಿಗೆ ಬೀಸಲು, ವಿಂಧ್ಯಪರ್ವತದಂತೆ ದೃಢವಾದ ಅದನ್ನು ಷಣ್ಮುಖನು ಕೈಯಲ್ಲಿ ಹಿಡಿದು ತಿರುಗಿಸಿ ಅದರಿಂದಲೇ ತಾರಕನನ್ನು ಹೊಡೆದನು.

೭೭. ಆ ಆಯುಧವು ನಿಶ್ಚಲವೂ, ವಿಶಾಲವೂ ಆದ ರಾಕ್ಷಸನ ಎದೆಗೆ ತಗುಲಿ ನೂರಾರು ಛಿದ್ರಗಳಾಗಿ ನೆಲಕ್ಕೆಬಿದ್ದಿತು. ಆಗಲಾ ದೈತ್ಯನು ಷಣ್ಮುಖನು ಯುದ್ಧದಲ್ಲಿ ಅಜೇಯನೆಂದು ತಿಳಿದನು.

೭೮–೭೯. ಅಲ್ಲದೆ ತನ್ನ ಮನಸ್ಸಿನಲ್ಲಿಯೇ ಅವನು ಬ್ರಹ್ಮನ ಮಾತುಗಳ ನಿಶ್ಚಯದ ಕಾಲವು ಸಮೀಪಿಸಿತೆಂದು ಚಿಂತಿಸಿದನು. ಆತನು ಭಯಗೊಂಡಿರುವನೆಂದು ಕಂಡು ಅನೇಕ ಕೋಟಿ ರಾಕ್ಷಸವೀರರು ಸಿಂಹನಾದಗಳನ್ನು ಮಾಡುತ್ತಾ ನಾನಾ ವಿಧಗಳಾದ ಶಸ್ತ್ರಗಳಿಂದ ಮಹಾಸೇನನನ್ನು ಪೀಡಿಸಿದರು.

ಕೃದ್ಧಸ್ತೇಷು ತತಃ ಸ್ಕಂದಃ ಶಕ್ತಿಂ ಘೋರಮುಥಾದದೇ ।
ಅಭ್ಯಸ್ಯಮಾನೇ ಶಕ್ತ್ಯಸ್ತ್ರೇ ಸ್ಕಂದೇನಾಮಿತತೇಜಸಾ ।
ಉಲ್ಕಾಜಾಲಂ ಮಹಾಘೋರಂ ಪಪಾತ ವಸುಧಾತಲೇ ॥ ೮೦ ॥
ಚಾಲ್ಯಮಾನಾ ತಥಾ ಶಕ್ತಿಃ ಸುಘೋರಾ ಭವಸೂನುನಾ ।
ತತಃ ಕೋಟ್ಯೋ ವಿನಿಷ್ಪೇತುಃ ಶಕ್ತೀನಾಂ ಭರತರ್ಷಭ ॥ ೮೧ ॥
ಸ ಶಕ್ತ್ಯಸ್ತ್ರೇಣ ಬಲವಾನ್ಕರಸ್ಥೇನಾಹನತ್ಪ್ರಭುಃ ।
ಅಷ್ಟೌ ಪದ್ಮಾನಿ ದೈತ್ಯಾನಾಂ ದಶಕೋಟಿಶತಾನಿ ಚ ॥ ೮೨ ॥
ತಥಾ ನಿಯುತ ಸಾಹಸ್ರಂ ವಾಹನಂ ಕೋಟಿರೇವ ಚ ।
ಹ್ರದೋದರಂ ಚ ದೈತ್ಯೇಂದ್ರಂ ನಿಖರ್ವೈರ್ದಶಭಿರ್ವೃತಂ ॥ ೮೩ ॥
ತತ್ರಾಕುರ್ವನ್ಸ್ಸುತುಮುಲಂ ನಾದಂ ವಧ್ಯೇಷು ಶತ್ರುಷು ।
ಕುಮಾರಾನುಚರಾಃ ಪಾರ್ಥ ಪೂರಯಂತೋ ದಿಶೋ ದಶ ॥ ೮೪ ॥
ಶಕ್ತ್ಯಸ್ತ್ರಸ್ಯಾರ್ಚಿಸಂಭೂತಶಕ್ತಿಭಿಃ ಕೋಽಪಿ ಸೂದಿತಾಃ ।
ಪತಾಕಯಾವಧೂತಾಶ್ಚ ಹತಾಃ ಕೇಚಿತ್ಸಹಸ್ರಶಃ ॥ ೮೫ ॥
ಕೇಚಿದ್ಘಂಟಾರವತ್ರಸ್ತಾಶ್ಛಿನ್ನಭಿನ್ನಹೃದೋಪತನ್ ॥ ೮೬ ॥

---

೮೦. ಅವರಲ್ಲಿ ಕೋಪಗೊಂಡವನಾಗಿ ಷಣ್ಮುಖನು ಆಗ ತನ್ನ ಶಕ್ತ್ಯಸ್ತ್ರವನ್ನು ಕೈಗೆ ತೆಗೆದುಕೊಂಡನು. ಅಮಿತಪ್ರಭಾವನಾದ ಷಣ್ಮುಖನು ಆ ಶಕ್ತಿಯನ್ನು ಕೈಯಲ್ಲಿ ತಿರುಗಿಸುತ್ತಿರಲು ಭೂಮಿಯಲ್ಲಿ ಘೋರವಾದ ಕೊಳ್ಳಿಗಳ ಸಮೂಹವು ಬಿದ್ದಿತು.

೮೧. ಇಂತು ರುದ್ರನ ಮಗನಿಂದ ಘೋರವಾದ ಆ ಶಕ್ತಿಯು ತಿರುಗಿಸಲ್ಪಡುತ್ತಿದ್ದಿತು. ಆದರಿಂದ ಇತರ ಶಕ್ತಿಗಳು ಕೋಟಿಗಟ್ಟಲೆ ಹೊರಟವು.

೮೨–೮೪. ಬಲಿಷ್ಠನೂ ಸ್ವಾಮಿಯೂ ಆದ ಕಾರ್ತಿಕೇಯನು ಆ ಶಕ್ತ್ಯಸ್ತ್ರದಿಂದ ರಾಕ್ಷಸರಲ್ಲಿ ಎಂಟು ಪದ್ಮಗಳನ್ನೂ, ಒಂದು ಸಾವಿರ ಕೋಟಿಗಳನ್ನೂ, ಒಂದುಸಾವಿರ ಲಕ್ಷಗಳನ್ನೂ, ಒಂದು ಕೋಟಿ ರಥಗಳನ್ನೂ, ಹತ್ತು ನಿಖರ್ವಸಂಖ್ಯೆಯ ಸೈನ್ಯಗಳೊಡನೆ ಹ್ರದೋದರನೆಂಬ ರಾಕ್ಷಸಶ್ರೇಷ್ಠನನ್ನೂ ನಿಗ್ರಹಿಸಿದನು. ಇಂತು ಶತ್ರುಗಳು ನಾಶವಾಗಲು ಕುಮಾರಾನುಚರರು ಹತ್ತು ದಿಕ್ಕುಗಳನ್ನೂ ತುಂಬುವಂತೆ ಒಟ್ಟಾಗಿ ಭಯಂಕರವಾದ ಸಿಂಹನಾದವನ್ನು ಮಾಡಿದರು.

೮೫–೮೬. ಶಕ್ತ್ಯಸ್ತ್ರದಿಂದ ಹುಟ್ಟಿದ ಶಕ್ತಿಗಳಿಂದ ಕೆಲವರು ಮಡಿದರು. ಆದರ ಜ್ವಾಲೆಗಳ ಧೂಮದಿಂದ ಸಾವಿರಾರು ರಾಕ್ಷಸರು ಉಸಿರಾಡದೆ ಸತ್ತರು. ಕೆಲವರು ಅಸ್ತ್ರದ ಘಂಟೆಗಳ ಶಬ್ದದಿಂದಲೇ ಭಗ್ನಹೃದಯರಾಗಿ ಭಯಗೊಂಡು ಬಿದ್ದರು.

ಕೇಚಿನ್ಮಯೂರಪಕ್ಷಾಭ್ಯಾಂ ಚರಣಾಭ್ಯಾಂ ಚ ಸೂದಿತಾಃ ।
ಕೋಟಿಶಸ್ತಾಮ್ರಚೂಡೇನ ವಿದಾರ್ಯೈವ ಚ ಭಕ್ಷಿತಾಃ ।
ಪಾರ್ಷದೈರ್ಮಾತೃಭಿಃ ಸಾರ್ಧಂ ಪದ್ಮಶೋ ನಿಹತಾಃ ಪರೇ ॥ ೮೭ ॥
ಏವಂ ನಿಹನ್ಯಮಾನೇಷು ದಾನವೇಷು ಗುಹಾದಿಭಿಃ ।
ಅಭಾಗ್ಯೈರಿವ ಲೋಕೇಷು ತಾರಕಃ ಸ್ಕಂದಮಾಯಯೌ ॥ ೮೮ ॥
ಜಗ್ರಾಹ ಚ ಗದಾಂ ದಿವ್ಯಾಂ ಲಕ್ಷಘಂಟಾದುರಾಸದಾಂ ।
ತಯಾ ಮಯೂರಮಾಜಘ್ನೇ ಮಯೂರೋ ವಿಮುಖೋಽಭವತ್ ॥
ದೃಷ್ಟ್ವಾ ಪರಾಙ್ಮುಖಂ ಸ್ಕಂದಂ ವಾಸುದೇವೋಽಬ್ರವೀತ್ತ್ವರನ್ ।
ದೇವಸೇನಾಪತೇ ಶೀಘ್ರಂ ಶಕ್ತಿಂ ಮುಂಚ ಮಹಾಸುರೇ ॥ ೯೦ ॥
ಪ್ರತಿಜ್ಞಾಮಾತ್ಮನಃ ಪಾಹಿ ಲಂಬತೇ ರವಿಮಂಡಲಂ ॥ ೯೧ ॥
ಸ್ಕಂದ ಉವಾಚ :—
ತ್ವಯೈವ ರುದ್ರಭಕ್ತೋಽಯಂ ಜನಾರ್ದನ ಮಮೇರಿತಂ ।
ವಧಾರ್ಥಂ ರುದ್ರಭಕ್ತಸ್ಯ ಬಾಹುಃ ಶಕ್ತಿಂ ನ ಮುಂಚತಿ ॥ ೯೨ ॥

---

೮೭. ಕೆಲವರು ಷಣ್ಮುಖನ ವಾಹನವಾದ ನವಿಲಿನ ರೆಕ್ಕೆಗಳಿಂದಲೂ, ಕಾಲುಗಳಿಂದಲೂ ನಿಹತರಾದರು. ಕೋಟಿಗಟ್ಟಲೆ ರಾಕ್ಷಸರು ಅದರ ಕೆಂಪು ಕೊಕ್ಕಿನಿಂದ ಸೀಳಲ್ಪಟ್ಟು ಭಕ್ಷಿತರಾದರು. ಮಾತೃಕೆಯರಿಂದೊಡಗೂಡಿದ ಪಾರ್ಷದರಿಂದ ಪದ್ಮಗಳಗಟ್ಟಲೆ ರಾಕ್ಷಸರು ಕೊಲ್ಲಲ್ಪಟ್ಟರು.

೮೮. ಸ್ಕಂದಾದಿ ದೇವತೆಗಳು ಇಂತು ರಾಕ್ಷಸರನ್ನೆಲ್ಲ ನಾಶಗೊಳಿಸುತ್ತಿರಲು ಭಾಗ್ಯಹೀನನು ದೇವರನ್ನು ನೋಡಲೆಳಸುವಂತೆ ತಾರಕಾಸುರನು ಗುಹನನ್ನೆದುರಿಸಲು ಬಂದನು.

೮೯. ಆಗಲವನು ಲಕ್ಷ ಘಂಟೆಗಳಿಂದ ಯುಕ್ತವಾದ ದಿವ್ಯ ಗದೆಯನ್ನು ಕೈಗೆ ತೆಗೆದುಕೊಂಡನು. ಅದರಿಂದ ಮಯೂರವನ್ನು ಹೊಡೆಯಲು ಆ ಪಕ್ಷಿಯು ಆ ಪೆಟ್ಟನ್ನು ತಾಳಲಾರದೆ ಹಿಂದಿರುಗಿತು.

೯೦–೯೧. ಇದರಿಂದ ಗುಹನು ಪರಾಙ್ಮುಖನಾದುದನ್ನು ಕಂಡು ತ್ವರೆ ಮಾಡುವವನಾಗಿ ನಾರಾಯಣನಿಂತೆಂದನು :—"ಎಲೈ ದೇವಸೇನಾಪತಿಯೇ! ಈ ರಾಕ್ಷಸನ ಮೇಲೆ ನಿನ್ನ ಮಹಾಶಕ್ತಿಯನ್ನು ಬೇಗ ಪ್ರಯೋಗಿಸು. ನಿನ್ನ ಪ್ರತಿಜ್ಞೆಯನ್ನು ನೆರವೇರಿಸು. ಸೂರ್ಯನು ಇಳಿಮುಖನಾಗುತ್ತಿರುವನು."

೯೨. ಸ್ಕಂದನು ಹೇಳುತ್ತಾನೆ:—"ಎಲೈ ಜನಾರ್ದನನೆ! ಈತನು ರುದ್ರಭಕ್ತನೆಂಬುದಾಗಿ ನೀನೇ ಹೇಳಿದೆ. ರುದ್ರಭಕ್ತನನ್ನು ವಧೆಮಾಡುವುದಕ್ಕಾಗಿ ನನ್ನ ಬಾಹುವು ಶಕ್ತಿಯನ್ನೆತ್ತಲಾರದು.

ನಾರುದ್ರಃ ಪೂಜಯೇದ್ರುದ್ರಂ ಭಕ್ತರೂಪಸ್ಸ ಯೋ ಹರಃ ।
ರುದ್ರರೂಪಮಯಂ ಹತ್ವಾ ಕೀದೃಶಂ ಜನ್ಮ ನೋ ಭವೇತ್ ॥ ೯೩ ॥
ತಿರಸ್ಕೃತಾ ವಿಪ್ರಲಬ್ಧಾಃ ಶಪ್ತಾಃ ಕ್ಷಿಪ್ತಾಃ ಪ್ರಪೀಡಿತಾಃ ।
ರುದ್ರಭಕ್ತಾಃ ಕುಲಂ ಸರ್ವಂ ನಿರ್ದಹಂತಿ ಹತಾಃ ಕಿಮು ॥ ೯೪ ॥
ಏಷ ಚೇದ್ಧಂತಿ ತದ್ವದ್ರುದ್ರಂ ಹನ್ಯತಾಮೇಷ ಮಾಂ ರಣೇ ।
ರುದ್ರಭಕ್ತೇ ಪುನರ್ವಿಷ್ಣೋ ನಾಹಂ ಶಸ್ತ್ರಮುಪಾದದೇ ॥ ೯೫ ॥

ಶ್ರೀ ಭಗವಾನುವಾಚ :—

ನೈತತ್ತ್ವೋಚಿತಂ ಸ್ಕಂದ ರುದ್ರಭಕ್ತೋ ಯಥಾ ಶೃಣು ।
ದ್ವೇ ತನೂ ಗಿರಿಜಾಭರ್ತುರ್ವೇದಜ್ಞಾ ಮುನಯೋ ವಿದುಃ ॥ ೯೬ ॥
ಏಕಾ ಜೀವಾತ್ಮಿಕಾ ತತ್ರ ಪ್ರತ್ಯಕ್ಷಾ ಚ ತಥಾಪರಾ ।
ದ್ರೋಗ್ಧಾ ಭೂತೇಷು ಭಕ್ತಶ್ಚ ರುದ್ರಭಕ್ತೋ ನ ಸ ಸ್ಮೃತಃ ।
ಭಕ್ತೋ ರುದ್ರೇ ಕೃಪಾವಾಂಶ್ಚ ಜಂತುಷ್ವೇವ ಹರವ್ರತಃ ॥ ೯೭ ॥

---

೯೩. ರುದ್ರನಲ್ಲದವನು (ರುದ್ರನಲ್ಲಿ ಅಪರಿಮಿತವಾದ ಭಕ್ತಿಯಿದ್ದು ತಾದಾತ್ಮ್ಯಭಾವವನ್ನೊಳಕೊಳ್ಳದವನು) ರುದ್ರನನ್ನು ಪೂಜಿಸಲಾರನು. ರುದ್ರನು ಭಕ್ತನ ರೂಪನೇ ಆಗಿರುವನು. ರುದ್ರ ರೂಪನಾದ ಈ ತಾರಕನನ್ನು ಕೊಂದು ನನಗೆ ಯಾವ ಕೀಳು ಜನ್ಮವುಂಟಾಗುವುದೊ?

೯೪. ತಿರಸ್ಕರಿಸಲ್ಪಟ್ಟರೂ, ಶಪ್ತರಾದರೂ, ಓಡಿಸಲ್ಪಟ್ಟರೂ, ಪೀಡಿಸಲ್ಪಟ್ಟರೂ ಶಿವಭಕ್ತರು ಕುಲವೆಲ್ಲವನ್ನೂ ಸುಡುವರೆಂದಮೇಲೆ ಕೊಲ್ಲಲ್ಪಟ್ಟವರ ವಿಷಯವನ್ನು ಹೇಳಬೇಕೆ?

೯೫. ಇವನೇ ನನ್ನನ್ನು ಕೊಂದರೆ ಒಳ್ಳೆಯದು. ಇವನೇ ಯುದ್ಧದಲ್ಲಿ ನನ್ನನ್ನು ಕೊಲ್ಲಲಿ. ಎಲೈ ನಾರಾಯಣನೆ! ನಾನು ಯಾವ ಶಿವಭಕ್ತನಮೇಲೂ ಶಸ್ತ್ರವನ್ನು ಪ್ರಯೋಗಮಾಡುವುದಿಲ್ಲ. ಶಿವಭಕ್ತನನ್ನು ಕೊಂದ ಪಾಪಕ್ಕೆ ನಾನೇಕೆ ಗುರಿಯಾಗಲಿ!"

೯೬. ಮಹಾವಿಷ್ಣುವು ಹೇಳುತ್ತಾನೆ:—"ಎಲೈ ಸ್ಕಂದನೆ! ನೀನೆನ್ನುವುದು ಶಾಸ್ತ್ರಸಮ್ಮತವಲ್ಲ. ಆ ಶಾಸ್ತ್ರಗಳಲ್ಲಿ ಹೇಳಿರುವ ರುದ್ರಭಕ್ತನ ಲಕ್ಷಣವನ್ನು ಹೇಳುವೆನು, ಕೇಳು. ವೇದಗಳನ್ನು ತಿಳಿದ ಮಹರ್ಷಿಗಳು ಮಹಾದೇವನಿಗೆ ಎರಡು ಶರೀರಗಳೆಂದು ಹೇಳುವರು.

೯೭–೯೮. ಒಂದು ಸಕಲ ಪ್ರಾಣಿಗಳ ಸ್ವರೂಪವಾದುದು. ಮತ್ತೊಂದು ಸಾಕ್ಷಾತ್ತಾಗಿ ಕಾಣುವುದು. ಯಾವನು ಶಿವನಲ್ಲಿ ಭಕ್ತಿಯನ್ನಿಟ್ಟಿದ್ದರೂ, ಸಕಲ ಭೂತಗಳಿಗೂ ದ್ರೋಹವನ್ನೆಣಿಸುವನೊ, ಅವನು ಶಿವಭಕ್ತನೆಂದೆನಿಸುವುದಿಲ್ಲ. ಶಿವನಿಗೆ ನಿಜವಾದ ಭಕ್ತನು ಸಕಲ ಜಂತುಗಳಲ್ಲಿಯೂ ಕೃಪೆ

ತದೇನಂ ಭೂತಮರ್ತ್ಯೇಷು ದ್ರೋಗ್ಧಾರಂ ತ್ವಂ ಪಿನಾಕಿನಃ ।
ಜಹಿ ನೈವಾತ್ರ ಪಶ್ಯಾಮಿ ದೋಷಂ ಕಂಚನ ತೇ ಪ್ರಭೋ ॥ ೯೮ ॥
ಶ್ರುತ್ವೇತಿ ವಾಚಂ ಗೋವಿಂದಾತ್ಸತ್ಯಾರ್ಥಾಮಪಿ ಭಾರತ ।
ಹಂತುಂ ನ ಕುರುತೇ ಬುದ್ಧಿಂ ರುದ್ರಭಕ್ತ ಇತಿ ಸ್ಮರನ್ ॥ ೯೯ ॥
ತಾರಕಸ್ತು ತತಃಕ್ರುದ್ಧೋ ಯಯೌ ವೇಗೇನ ಕೇಶವಂ ।
ಪ್ರಾಹ ಚೈನಂ ಸುದುರ್ಬುದ್ಧೇ ಹನ್ಮಿ ತ್ವಾಂ ಪಶ್ಯ ಮೇ ಬಲಂ ॥ ೧೦೦ ॥
ದೇವಾನಾಂ ಚಾಪಿ ಧರ್ಮಾಣಾಂ ಮೂಲಂ ಮತಿಮತಾಂ ತಥಾ ।
ಹತ್ವಾ ತ್ವಾಮದ್ಯ ಸರ್ವಾಂಸ್ತಾಂಶ್ಛೇತ್ಸ್ಯೇ ಪಶ್ಯಾದ್ಯ ಮೇ ಬಲಂ ॥೧೦೧॥

ವಿಷ್ಣುರುವಾಚ :—

ದೈತ್ಯೇಂದ್ರ ತವ ಚಾಸ್ಮಾಭಿಃ ಕಿಮಹೋ ಶ್ರುಣು ಸತ್ಯತಾಂ ।
ರಥೇ ಯ ಏಷ ಶರ್ವೋಽಯಂ ಹತೇಽಸ್ಮಿನ್ಸಕಲಂ ಹತಂ ॥ ೧೦೨ ॥
ಶ್ರುತ್ವೇತಿ ತಾರಕಃ ಕ್ರುದ್ಧಸ್ತೂರ್ಣಂ ರುದ್ರರಥಂ ಯಯೌ ।
ಅಭಿಸೃತ್ಯ ಸ ಜಗ್ರಾಹ ರುದ್ರಸ್ಯ ರಥಕೂಬರಂ ॥ ೧೦೩ ॥

---

ಯುಳ್ಳವನಾಗಿ ಶೈವವ್ರತಗಳಲ್ಲಿ ನಿರತನಾಗಿರುವನು. ಆದುದರಿಂದ ಪ್ರಾಣಿಗಳಲ್ಲಿಯೂ ಮನುಷ್ಯರಲ್ಲಿಯೂ ಅಂತರ್ಯಾಮಿಯಾದ ಮಹೇಶ್ವರನ ದ್ರೋಹಿಯಾದ ಇವನನ್ನು ಕೊಲ್ಲಬೇಕು. ಎಲೈ ಸ್ವಾಮಿಯೆ! ಇದರಲ್ಲಿ ಸ್ವಲ್ಪವಾದರೂ ನಿನಗೆ ದೋಷವುಂಟೆಂಬುದು ನನಗೆ ಕಾಣಲಿಲ್ಲ.''

೯೯. ಇಂತು ಯಥಾರ್ಥವಾದ ಮಾತನ್ನು ಮಹಾವಿಷ್ಣುವಿನಿಂದ ಕೇಳಿದ ಮೇಲೂ ಷಣ್ಮುಖನು "ಇವನು ಹೇಗಾದರೂ ರುದ್ರಭಕ್ತನಲ್ಲವೆ" ಎಂದು ನೆನೆದು ಆತನ ಸಂಹಾರದಲ್ಲಿ ಮನಸ್ಸನ್ನು ಮಾಡಲಿಲ್ಲವು.

೧೦೦–೧೦೧. ಆಗ ತಾರಕನು ಕೋಪಗೊಂಡು ವೇಗದಿಂದ ನಾರಾಯಣನನ್ನು ಎದುರಿಸಿ ನಿಂತು ಹೇಳತೊಡಗಿದನು:—"ಎಲೈ ಬುದ್ಧಿಹೀನನೆ! ಇಂದು ನನ್ನ ಬಲವನ್ನು ನೋಡು. ನಿನ್ನನ್ನು ಕೊಲ್ಲುತ್ತೇನೆ. ದೇವತೆಗಳಿಗೂ, ಧರ್ಮಗಳಿಗೂ, ಬುದ್ಧಿಶಾಲಿಗಳಿಗೂ ನೀನೇ ಮೂಲಾಧಾರನಲ್ಲವೆ. ಆದುದರಿಂದ ನಿನ್ನನ್ನು ಮೊದಲು ಕೊಂದು ಬಳಿಕ ಅವರನ್ನೆಲ್ಲ ಸಂಹರಿಸುತ್ತೇನೆ."

೧೦೨–೧೦೩. ವಿಷ್ಣುವು ಹೇಳುತ್ತಾನೆ:—"ಅಯ್ಯಾ, ರಾಕ್ಷಸೇಂದ್ರನೆ! ನಮ್ಮೊಡನೆ ಕಾಳಗ ಮಾಡಿದುದರಿಂದ ನಿನಗೇನು? ನಿಜವನ್ನು ಹೇಳುತ್ತೇನೆ. ಈ ರಥದಲ್ಲಿ ಕಾಣುತ್ತಿರುವವನೇ ಮಹಾದೇವನು. ಇವನನ್ನು ಕೊಂದರೆ ಸಕಲ ಲೋಕವೂ ನಾಶವಾದಂತೆಯೇ ಸರಿ.'' ಈ ಮಾತುಗಳನ್ನು ಕೇಳಿ ತಾರಕಾಸುರನು ಕೋಪದಿಂದ ತಕ್ಷಣದಲ್ಲಿಯೇ ಈಶ್ವರನ ರಥಕ್ಕೆರಗಿ ಸಮೀಪಕ್ಕೆ ಬಂದು ರಥದ ಮೂಕಿಮರವನ್ನು ಹಿಡಿದನು.

ಯದಾ ಸ ಕೂಬರಂ ಕ್ರುದ್ಧಸ್ತಾರಕಃ ಸಹಸಾಗ್ರಹೀತ್ ।
ಶೇಸತುಂ ರೋದಸೀ ತೂರ್ಣಂ ಮುಮುಹುಶ್ಚ ಮಹರ್ಷಯಃ ॥ ೧೦೪ ॥
ವ್ಯನದಂಶ್ಚ ಮಹಾಕಾಯಾ ದೈತ್ಯಾ ಜಲಧರೋಪಮಾಃ ।
ಆಸೀಚ್ಚ ನಿಶ್ಚಿತಂ ತೇಷಾಂ ಜಿತಮಸ್ಮಾಭಿರಿತ್ಯುತ ॥ ೧೦೫ ॥
ತಾರಕಸ್ಯಾಪ್ಯಭಿಪ್ರಾಯಂ ಭಗವಾನ್ವೀಕ್ಷ್ಯ ಶಂಕರಃ ।
ಉಮಯಾ ಸಹ ಸಂತ್ಯಕ್ತ್ವಾ ರಥಂ ವೃಷಭಮಾವಹತ್ ॥ ೧೦೬ ॥
ಓಮಿತ್ಯಥ ಜಪನ್ಬ್ರಹ್ಮಾ ಆಕಾಶಂ ಸಹಸಾಶ್ರಿತಃ ॥ ೧೦೭ ॥
ತತಸ್ತಂ ಶತಸಿಂಹಂ ಚ ರಥಂ ರುದ್ರೇಣ ನಿರ್ಮಿತಂ ।
ಉತ್ಕ್ಷಿಪ್ಯ ಪೃಥ್ವ್ಯಾಮಾಸ್ಫೋಟ್ಯ ಚೂರ್ಣಯಾಮಾಸ ತಾರಕಃ ॥೧೦೮॥
ಶೂಲಪಾಶುಪತಾದೀನಿ ಸಹಸೋಪಸ್ಥಿತಾನಿ ಚ ।
ವಾರಯಾಮಾಸ ಗಿರಿಶೋ ಭವಃ ಸಾಧ್ಯ ಇತಿ ಬ್ರುವನ್ ॥ ೧೦೯ ॥
ತತಃ ಸ್ವವಂಚಿತಂ ಜ್ಞಾತ್ವಾ ರುದ್ರೇಣಾತ್ಮಾನಮೀರ್ಷ್ಯಯಾ ।
ವಿನದನ್ಸಹಸಾಧಾವದ್ವೃಷಭಸ್ಥಂ ಮಹೇಶ್ವರಂ ॥ ೧೧೦ ॥

---

೧೦೪. ಇಂತು ಮಹಾದೇವನ ರಥದ ಕೂಬರವನ್ನು ಕೋಪಿಯಾದ ತಾರಕನು ಬಲದಿಂದ ಯಾವಾಗ ಹಿಡಿದನೊ, ಆಗ ಭೂಮ್ಯಾಕಾಶಗಳು ಕ್ಷೋಭೆಗೊಂಡುವು. ಮಹರ್ಷಿಗಳೆಲ್ಲರೂ ಭ್ರಾಂತರಾದರು.

೧೦೫–೧೦೬. ಮೇಘಗಳಂತೆ ದೊಡ್ಡ ಶರೀರಗಳುಳ್ಳ ರಾಕ್ಷಸರೆಲ್ಲರೂ ಸಿಂಹನಾದವನ್ನು ಮಾಡಿದರು. ಮತ್ತು ಇಂದು ತಮಗೇ ಜಯವಾಗುವುದೆಂಬ ದೃಢಬುದ್ಧಿಯು ಅವರಿಗೆ ಉಂಟಾಯಿತು. ಭಗವಂತನಾದ ಶಂಕರನು ತಾರಕಾಸುರನ ಅಭಿಪ್ರಾಯವನ್ನು ತಿಳಿದು ಪಾರ್ವತೀಸಹಿತನಾಗಿ ತನ್ನರಥವನ್ನು ಬಿಟ್ಟು ವೃಷಭವನ್ನೇರಿ ಕುಳಿತನು.

೧೦೭–೧೦೮. ಸಾರಥಿಯಾದ ಬ್ರಹ್ಮನೂ ಸಹ ಅನುಕರಿಸುವವನಾಗಿ ಪ್ರಣವವನ್ನು ಜಪಿಸುತ್ತ ಆಕಾಶಕ್ಕೆ ಹಾರಿದನು. ಬಳಿಕ ರುದ್ರನಿಂದ ಮಾಡಲ್ಪಟ್ಟುದೂ ನೂರು ಸಿಂಹಗಳಿಂದೆಳೆಯಲ್ಪಟ್ಟುದೂ ಆದ ಮಹಾರಥವನ್ನು ಮೇಲಕ್ಕೆ ಬೀಸಿ ತಾರಕಾಸುರನು ಭೂಮಿಯಲ್ಲಿ ಅಪ್ಪಳಿಸಿ ಪುಡಿಮಾಡಿದನು.

೧೦೯–೧೧೦. ಮತ್ತು ತಾರಕನ ವಧೆಗಾಗಿ ತನಗೆ ಸೇರಿದ ಶೂಲ, ಪಾಶುಪತ ಮೊದಲಾದ ಶಸ್ತ್ರಾಸ್ತ್ರಗಳನ್ನು ತಡೆದು "ಇವನನ್ನು ಕೊಲ್ಲಲು ಸಾಧ್ಯ"ವೆಂದು ಹೇಳಿದನು. ಆಗ ತಾರಕಾಸುರನು ತಾನು ರುದ್ರನಿಂದ ವಂಚಿತನಾದುದನ್ನು ತಿಳಿದು ಅಸೂಯೆಯಿಂದ ಕೂಗಾಡುತ್ತ ವೇಗವಾಗಿ ವೃಷಭವಾಹನನಾದ ಮಹೇಶ್ವರನನ್ನು ಕುರಿತು ಓಡಿದನು.

ತತೋ ಜನಾರ್ದನೋಽಧಾವಚ್ಚಕ್ರಮುದ್ಯಮ್ಯ ವೇಗತಃ ।
ವಜ್ರಮಿಂದ್ರಸ್ತಥೋದ್ಯಮ್ಯ ದಂಡಂ ಚಾಪಿ ಯಮೋ ನದನ್ ॥ ೧೧೧ ॥
ಗದಾಂ ಧನೇಶ್ವರಃ ಕ್ರುದ್ಧಃ ಪಾಶಂ ಚ ವರುಣೋ ನದನ್ ।
ವಾಯುರ್ಮಹಾಂಕುಶಂ ಘೋರಂ ಶಕ್ತಿಂ ವಹ್ನಿರ್ಮಹಾಪ್ರಭಾಂ ॥೧೧೨॥
ನಿರ್ಋತಿರ್ನಿಶಿತಂ ಖಡ್ಗಂ ರುದ್ರಾಃ ಶೂಲಾನಿ ಕೋಪಿತಾಃ ।
ಧನೂಂಷಿ ಸಾಧ್ಯಾ ದೇವಾಶ್ಚ ಪರಿಘಾನ್ವಸವಸ್ತಥಾ ॥ ೧೧೩ ॥
ವಿಶ್ವೇದೇವಾಶ್ಚ ಮುಸಲಂ ಚಂದ್ರಾರ್ಕಾನ್ ಸ್ವಪ್ರಭಾಮಪಿ ।
ಓಷಧೀಶ್ಚಾಶ್ವಿನೌ ದೇವೌ ನಾಗಾಶ್ಚ ಜ್ವಲಿತಂ ವಿಷಂ ॥ ೧೧೪ ॥
ಹಿಮಾದ್ರಿಪ್ರಮುಖಾಶ್ಚಾಪಿ ಸಮುದ್ಯಮ್ಯ ಮಹೀಧರಾನ್ ।
ಭೃಶಮುನ್ನದತೋ ದೇವಾನ್ಧಾವತೋ ವೀಕ್ಷ್ಯ ತಾರಕಃ ॥ ೧೧೫ ॥
ನಿವೃತ್ತಃ ಸಹಸಾ ಪಾರ್ಥ ಮಹಾಗಜ ಇವೋನ್ನದನ್ ।
ಸ ವಜ್ರಮುಷ್ಟಿನಾಹತ್ಯ ಭುಜೇ ಶಕ್ರಮಪಾತಯತ್ ॥ ೧೧೬ ॥
ದಂಡಂ ಯಮಾದುಪಾದಾಯ ಮೂರ್ಧ್ನ್ಯಾಹತ್ಯ ನ್ಯಪಾತಯತ್ ।
ಉರಸಾಹತ್ಯ ಸಗದಂ ಧನದಂ ಭುವ್ಯಪಾತಯತ್ ॥ ೧೧೭ ॥

---

೧೧೧. ಆಗ ಮಹಾವಿಷ್ಣುವು ಚಕ್ರವನ್ನು ತಿರುಗಿಸುತ್ತ ವೇಗದಿಂದ ಎದುರಿಗೆ ಬಂದನು. ಇಂದ್ರನು ವಜ್ರಾಯುಧವನ್ನೂ, ಯಮನು ಸಿಂಹನಾದ ವನ್ನು ಮಾಡುತ್ತ ತನ್ನ ದಂಡವನ್ನೂ ತೆಗೆದುಕೊಂಡು ಬಂದರು.

೧೧೨-೧೧೫. ಕ್ರುದ್ಧನಾದ ಕುಬೇರನು ಗದೆಯನ್ನೂ, ವರುಣನು ಕೂಗುತ್ತ ತನ್ನ ಪಾಶವನ್ನೂ, ವಾಯುವು ಭಯಂಕರವಾದ ಅಂಕುಶವನ್ನೂ, ಅಗ್ನಿಯು ಜ್ವಲಿಸುತ್ತಿರುವ ಶಕ್ತಿಯನ್ನೂ, ನಿರ್ಋತಿಯು ತೀಕ್ಷ್ಣವಾದ ಖಡ್ಗ ವನ್ನೂ, ಕೋಪಗೊಂಡ ಏಕಾದಶ ರುದ್ರರು ತಮ್ಮ ತ್ರಿಶೂಲಗಳನ್ನೂ, ಸಾಧ್ಯರೂ ದೇವತೆಗಳೂ ತಮ್ಮ ಧನುಸ್ಸುಗಳನ್ನೂ, ಅಷ್ಟವಸುಗಳು ತಮ್ಮ ಪರಿಘಾಯುಧಗಳನ್ನೂ ವಿಶ್ವೇದೇವತೆಗಳು ತಮ್ಮ ಮುಸಲವನ್ನೂ, ಸೂರ್ಯ ಚಂದ್ರರು ತಮ್ಮ ಪ್ರಭೆಗಳನ್ನೂ, ಅಶ್ವನೀದೇವತೆಗಳು ಓಷಧಿಗಳನ್ನೂ, ನಾಗರು ಜ್ವಲಿಸುತ್ತಿರುವ ವಿಷವನ್ನೂ, ಹಿಮವಂತನೇ ಮೊದಲಾದವರು ಪರ್ವತಗಳ ಕೋಡುಗಲ್ಲುಗಳನ್ನೂ ತೆಗೆದುಕೊಂಡು ಅಲ್ಲಿಗೆ ಪ್ರಾಪ್ತರಾದರು. ಇಂತು ಗಟ್ಟಿ ಯಾಗಿ ಸಿಂಹನಾದವನ್ನು ಮಾಡುತ್ತಿರುವ ದೇವತೆಗಳನ್ನು ಕಂಡು ತಾರಕಾ ಸುರನು ಮಹಾಗಜದಂತೆ ಘರ್ಜಿಸುತ್ತ ಮಹಾದೇವನನ್ನು ಬಿಟ್ಟು ಇವರಕಡೆಗೆ ತಿರುಗಿದನು.

೧೧೬-೧೧೮. ವಜ್ರದಂತೆ ದೃಢವಾದ ತನ್ನ ಮುಷ್ಟಿಯಿಂದ ಇಂದ್ರನ ಭುಜವನ್ನು ಹೊಡೆದು ಅವನನ್ನು ಕೆಡವಿದನು. ಯಮನ ದಂಡವನ್ನು ಕಿತ್ತು

ವರುಣಾತ್ಪಾಶಮಾದಾಯ ತೇನ ಬದ್ಧ್ವಾ ನ್ಯಪಾತಯತ್ ।
ಮಹಾಂಕುಶೇನ ವಾಯುಂ ಚ ಚಿರಂ ಮೂರ್ಧ್ನಿ ಜಘಾನ ಸಃ ॥ ೧೧೮ ॥
ಫೂತ್ಕಾರೈರುದ್ಧತಂ ವಹ್ನಿಂ ಶಮಯಾಮಾಸ ತಾರಕಃ ।
ನಿರ್ಋತಿಂ ಖಡ್ಗಮಾದಾಯ ಹತ್ವಾ ತೇನ ನ್ಯಪಾತಯತ್ ॥ ೧೧೯ ॥
ಶೂಲೈರೇವ ತಥಾ ರುದ್ರಾಃ ಸಾಧ್ಯಾಶ್ಚ ಧನುಷಾರ್ದಿತಾಃ ।
ಪರಿಘೈರೇವ ವಸವೋ ಮುಸಲೈರೇವ ವಿಶ್ವಕಾಃ ॥ ೧೨೦ ॥
ರೇಣುನಾಚ್ಛಾದ್ಯ ಚಂದ್ರಾರ್ಕೌ ವಲ್ಮೀಕಸ್ಥಾವಿವೇಕ್ಷಿತೌ ।
ಮಹೋಗ್ರಾಶ್ಚೌಷಧೀಸ್ತಾಲೈರಶ್ವಿಭ್ಯಾಂ ಸೋಽಭ್ಯವರ್ತಯತ್ ॥೧೨೧॥
ಸವಿಷಾಶ್ಚ ಕೃತಾ ನಾಗಾ ನಿರ್ವಿಷಾಃ ಪಾದಕುಟ್ಟನೈಃ ।
ಪರ್ವತಾಃ ಪರ್ವತೈರೇವ ನಿರುಚ್ಛ್ವಾಸಾ ಭೃಶಂ ಕೃತಾಃ ॥ ೧೨೨ ॥
ಏವಂ ತದ್ದೇವಸೈನ್ಯಂ ಚ ಹಾಹಾಭೂತಮಚೇತನಂ ।
ಕೃತ್ವಾ ಮುಹೂರ್ತಾದಾಧಾವಚ್ಚಕ್ರಪಾಣಿಂ ತಮುನ್ನದನ್ ॥ ೧೨೩ ॥

---

ಕೊಂಡು ಅದರಿಂದಲೇ ಅವನ ತಲೆಯ ಮೇಲೆ ಹೊಡೆದು ಮಲಗಿಸಿದನು. ಗದೆಯೊಡನಿದ್ದ ಕುಬೇರನನ್ನು ತನ್ನ ಎದೆಯ ಹೊಡೆತದಿಂದಲೇ ಭೂಮಿಗೆ ತಳ್ಳಿದನು. ವರುಣನಿಂದ ಪಾಶವನ್ನು ಕಿತ್ತು ಅದರಿಂದಲೇ ಅವನನ್ನು ಬಂಧಿಸಿ ಕೆಡವಿದನು. ವಾಯುವನ್ನು ಬಹಳ ಕಾಲ ಆತನ ಅಂಕುಶದಿಂದಲೇ ತಲೆಯ ಮೇಲೆ ಹೊಡೆದನು.

೧೧೯–೧೨೦. ಜ್ವಾಲೆಗಳನ್ನು ಕಾರುತ್ತ ಬಂದ ಅಗ್ನಿಯನ್ನು ತಾರಕಾಸುರನು ಕ್ಷಿಪ್ರದಲ್ಲಿಯೇ ಶಮನಮಾಡಿದನು. ನಿರ್ಋತಿಯನ್ನು ಆತನ ಖಡ್ಗದಿಂದಲೇ ಹೊಡೆದು ಬೀಳಿಸಿದನು. ಶೂಲಿಗಳಾದ ರುದ್ರರೂ, ಸಾಧ್ಯರೂ, ಪರಿಘಾಯುಧರಾದ ವಸುಗಳೂ, ಮುಸಲಾಯುಧರಾದ ವಿಶ್ವೇದೇವತೆಗಳೂ ಆತನ ಧನುಸ್ಸಿನ ಬಾಣಗಳಿಂದ ವ್ಯಥೆಗೊಂಡರು.

೧೨೧. ಚಂದ್ರ ಸೂರ್ಯರಂತೂ ತಾರಕನ ರಥದ ಧೂಳಿಯಿಂದ ಆಚ್ಛಾದಿತರಾಗಿ ಹುತ್ತಗಳಲ್ಲಡಗಿದ ಹಾವುಗಳಂತೆ ಕಾಣುತ್ತಿದ್ದರು. ಉಗ್ರಗಳಾದ ಔಷಧಿಗಳೊಡನೆ ಬಂದ ಅಶ್ವಿನೀದೇವತೆಗಳನ್ನು ತಾಲಗಳಿಂದ ಹಿಂದಿರುಗಿಸಿದನು.

೧೨೨. ವಿಷಭರಿತಗಳಾದ ನಾಗಗಳೆಲ್ಲವೂ ಅವನ ಕಾಲುಗಳ ತುಳಿತದಿಂದ ವಿಷಗಳನ್ನು ಕಾರಿ ಸೌಮ್ಯವಾದುವು. ಪರ್ವತರಾಜರನ್ನೆಲ್ಲ ಮೂರು ಪರ್ವತಗಳ ಹೊಡೆತದಿಂದಲೇ ಉಸಿರಿಲ್ಲದೆ ನಿಶ್ಚೇಷ್ಟರನ್ನಾಗಿ ಮಾಡಿದನು.

೧೨೩. ಇಂತು ತಾರಕಾಸುರನು ಆ ದೇವತೆಗಳ ಸೈನ್ಯವನ್ನೆಲ್ಲ ಕ್ಷಣಮಾತ್ರದಲ್ಲಿ ಕೋಲಾಹಲಯುಕ್ತವೂ, ನಿಶ್ಶಕ್ತವೂ ಆಗುವಂತೆ ಮಾಡಿ ಘರ್ಜಿಸುತ್ತ ವಿಷ್ಣುವಿನ ಕಡೆಗೆ ಓಡಿದನು.

ತತಶ್ಚಾಂತರ್ದಧೇ ಸದ್ಯಃ ಪ್ರಹಸನ್ನಿವ ಕೇಶವಃ ।
ಕುಯೋಗಿನ ಇವ ಸ್ವಾಮಿ ಸದಾ ಬುದ್ಧಿಮತಾಂ ವರಃ ॥ ೧೨೪ ॥
ಅಪಶ್ಯಂಸ್ತಾರಕೋ ವಿಷ್ಣುಂ ಪುನರ್ವೃಷಭವಾಹನಂ ।
ಅಧಾವತ್ಕುಪಿತೋ ದೈತ್ಯೋ ಮುಷ್ಟಿಮುದ್ಯಮ್ಯ ವೇಗತಃ ॥ ೧೨೫ ॥
ಅಚಿರಾಂಶುರಿವಾಲಕ್ಷ್ಯೋ ಲಕ್ಷ್ಯೋಽಥ ಭಗವಾನ್ಹರಿಃ ।
ಆಬಭಾಷೇ ತತೋ ದೇವಾನ್ಬಾಹುಮುದ್ಯಮ್ಯ ಚೋಚ್ಚಕೈಃ ॥ ೧೨೬ ॥
ಪಲಾಯಧ್ವಮಹೋ ದೇವಾಃ ಶಕ್ತಿಶ್ಚೇದ್ವಃ ಪಲಾಯಿತುಂ ।
ವಿಮೂಢಾ ಹಿ ವಯಂ ಸರ್ವೇ ಯೇ ಬಾಲವಚಸಾಗತಾಃ ॥ ೧೨೭ ॥
ಕಿಂ ನ ಶ್ರುತಃ ಪುರಾಗೀತಃ ಶ್ಲೋಕಃ ಸ್ವಾಯಂಭುವೇನ ಯಃ ।
ಯಥಾ ಬಾಲೇಷು ನಿಕ್ಷಿಪ್ತಾಃ ಸ್ತ್ರೀಷು ಪಂಡಿತಕೇಷು ಚ ।
ಅಪಸ್ಮಾರಿಷು ಚೈವಾಪಿ ಸರ್ವೇ ತೇ ಸಂಶಯಂಗತಾಃ ॥ ೧೨೮ ॥
ಪ್ರತ್ಯಕ್ಷಂ ತದಿದಂ ಸರ್ವಮಧುನಾ ಚಾತ್ರ ದೃಶ್ಯತೇ ॥ ೧೨೯ ॥
ಅಜ್ಞಾಸಿಷ್ಮ ಪುರೈವೈತದ್ರುದ್ರಭಕ್ತಂ ನ ಹಂತ್ಯಸೌ ।
ಯತ್ಪ್ರತಿಜ್ಞಾಂ ನಾಕರಿಷ್ಯನ್ನ ಸ್ಯಾನ್ನಃ ಕದನಂ ಮಹತ್ ॥ ೧೩೦ ॥

---

೧೨೪. ಆಗ ನಾರಾಯಣನು ತಕ್ಷಣದಲ್ಲಿಯೇ ನಗುತ್ತ ಬುದ್ಧಿವಂತರಲ್ಲಿ ಉತ್ತಮನಾದುದರಿಂದ ದುಷ್ಟಯೋಗಿಗಳಿಗೆ ನಿಲುಕಲಾರದವನಂತೆ ಆ ಸ್ಥಳದಿಂದ ಅಂತರ್ಧಾನವನ್ನೈದಿದನು.

೧೨೫. ಮಹಾವಿಷ್ಣುವು ಕಾಣದಿರಲು ತಾರಕನು ಮತ್ತೆ ಕೋಪಗೊಂಡು ಮುಷ್ಟಿಯನ್ನೆತ್ತಿ ವೇಗದಿಂದ ಮಹೇಶ್ವರನಿದ್ದೆಡೆಗೆ ಓಡಿಬಂದನು.

೧೨೬. ಮಿಂಚಿನ ತೆರದಲ್ಲಿ ಕಂಡು ಕಾಣದವನಂತೆ ಮಹಾವಿಷ್ಣುವು ಬಲಗೈಯನ್ನೆತ್ತಿ ದೇವತೆಗಳನ್ನು ಕುರಿತು ಶಪಥ ಮಾಡತೊಡಗಿದನೆಂತೆನೆ:—

೧೨೭–೧೨೮. "ಎಲೈ ದೇವತೆಗಳಿರಾ! ನಿಮಗೆ ಓಡಲು ಶಕ್ತಿಯಿದ್ದರೆ ಓಡಿಹೋಗಿರಿ. ಈ ಬಾಲಕನ ಮಾತುಗಳನ್ನು ನಂಬಿ ಯುದ್ಧಕ್ಕೆ ಬಂದ ನಾವೆಲ್ಲರೂ ಬುದ್ಧಿಹೀನರೇ ಸರಿ. ಪೂರ್ವದಲ್ಲಿಯೇ ಬ್ರಹ್ಮನು ಹೇಳಿದ ಶ್ಲೋಕದ ತಾತ್ಪರ್ಯವು ನಿಮಗೆ ತಿಳಿದಿಲ್ಲವೆ? ಬಾಲಕರಲ್ಲಿಯೂ, ಸ್ತ್ರೀಯರಲ್ಲಿಯೂ, ದುಷ್ಟ ಪಂಡಿತರಲ್ಲಿಯೂ, ಹುಚ್ಚರಲ್ಲಿಯೂ ಯಾರು ನಂಬುಗೆಯನ್ನಿಡುವರೊ ಅವರೆಲ್ಲರೂ ಕಷ್ಟಗಳಿಗೊಳಗಾಗುವರು.

೧೨೯–೧೩೦. ಆ ವಾಕ್ಯವು ಈಗ ನಮಗೆ ಪ್ರತ್ಯಕ್ಷದಿಂದ ಸತ್ಯವಾಗಿ ಕಾಣುತ್ತಿದೆ. ಷಣ್ಮುಖನು ಈಶ್ವರ ಭಕ್ತನನ್ನು ಕೊಲ್ಲುವುದಿಲ್ಲವೆಂಬುದನ್ನು ಮೊದಲೇ ನಾವು ತಿಳಿದಿದ್ದೆವು. ಈತನು ಪ್ರತಿಜ್ಞೆಯನ್ನು ಮಾಡದಿದ್ದರೆ ನಮಗೆ ಈ ಮಹಾಯುದ್ಧವೇ ಸಂಭವಿಸುತ್ತಿರಲಿಲ್ಲ.

ಅಥೈಷ ಯದಿ ದೈತ್ಯೇಂದ್ರಂ ನ ನಿಹಂತಿ ಕುಬುದ್ಧಿಮಾನ್ ।
ಮಾ ಭಯಂ ವೋ ಮಹಾಭಾಗಾ ನಿಹನಿಷ್ಯಾಮಿ ವೋ ರಿಪೂನ್ ॥ ೧೩೦ ॥
ಅದ್ಯಮೇ ವಿಪುಲಂ ಬಾಹ್ವೋರ್ಬಲಂ ಪಶ್ಯತ ದೇವತಾಃ ।
ದೈತ್ಯಾಧಮಂ ನಾಶಯಾಮಿ ಮುಷ್ಟಿನೈಕೇನ ಪಶ್ಯತ ॥ ೧೩೧ ॥
ಮಯಾ ಹಿ ದಕ್ಷಿಣೋ ಬಾಹುರ್ದತ್ತಶ್ಚ ಭವತಾಂ ಸದಾ ।
ರಿಪೂನ್ವೋ ನಿಹನಿಷ್ಯಾಮಿ ಸತ್ಯಂ ತತ್ಪರಿಪಾಲಯೇ ॥ ೧೩೨ ॥
ಯೇಽಂಬರೇ ಯೇ ಚ ಪಾತಲೇ ಭುವಿ ಯೇ ಚ ಮಹಾಸುರಾಃ ।
ಕ್ಷಣಾತ್ತಾನ್ನಾಶಯಿಷ್ಯಾಮಿ ಮಹಾವಾತೋ ಘನಾನಿವ ॥ ೧೩೪ ॥
ಏವಮುಕ್ತ್ವಾ ಜಗನ್ನಾಥೋ ಮುಷ್ಟಿಮುದ್ಯಮ್ಯ ದಕ್ಷಿಣಂ ।
ನಿರಾಯುಧಸ್ತಾರ್ಕ್ಷ್ಯಪೃಷ್ಠಾದವಪ್ಲುತ್ಯಾಭ್ಯಧಾವತ ॥ ೧೩೫ ॥
ತಸ್ಮಿನ್ಧಾವತಿ ಗೋವಿಂದೇ ಚಚಾಲ ಭುವನತ್ರಯಂ ।
ವಿಘೂರ್ಣಿತಮಭೂದ್ವಿಶ್ವಂ ದೇವಾ ಭೀತಿಂ ಪರಾಂ ಯಯುಃ ॥ ೧೩೬ ॥
ಧಾವತಶ್ಚಾಪಿ ಕಲ್ಪಾಂತಂ ರುದ್ರಕಲ್ಪಸ್ಯ ತಸ್ಯ ಯಾಃ ।
ಮುಖಾತ್ಸಮುದ್ಯಯುರ್ಜ್ವಾಲಾಸ್ತಾಭಿಃ ಖರ್ವಶತಂ ಹತಂ ॥ ೧೩೭ ॥

---

೧೩೦–೧೩೧. ಈಗ ಈ ಬುದ್ಧಿಹೀನನು ರಾಕ್ಷಸೇಂದ್ರನನ್ನು ಕೊಲ್ಲದಿದ್ದರೂ ನಿಮಗೆ ಭಯವು ಬೇಡ. ಎಲೈ ಮಹಾತ್ಮರೆ! ನಿಮ್ಮ ಶತ್ರುಗಳನ್ನು ನಾನೇ ಕೊಲ್ಲುತ್ತೇನೆ. ಎಲೈ ದೇವತೆಗಳಿರಾ! ಇಂದು ನನ್ನ ಭುಜಗಳ ಅಪಾರವಾದ ಪರಾಕ್ರಮವನ್ನು ನೋಡುವರಾಗಿರಿ. ಈ ರಾಕ್ಷಸಾಧಮನನ್ನು ಒಂದೇ ಮುಷ್ಟಿ ಪ್ರಹಾರದಿಂದ ನಾಶಗೊಳಿಸುತ್ತೇನೆ.

೧೩೨. ನನ್ನ ಬಲಗೈಯು ಯಾವಾಗಲೂ ನಿಮಗೇ ಮೀಸಲಾಗಿರುವುದು. ಶತ್ರುಗಳನ್ನು ಸಂಹರಿಸಿ ಸತ್ಯವನ್ನು ಪಾಲಿಸುತ್ತೇನೆ.

೧೩೪–೧೩೫. ಆಕಾಶದಲ್ಲಿಯೂ, ಪಾತಾಳದಲ್ಲಿಯೂ, ಭೂಲೋಕದಲ್ಲಿಯೂ ಯಾವ ಯಾವ ರಾಕ್ಷಸರಿರುವರೋ ಅವರನ್ನೆಲ್ಲ ಬಿರುಗಾಳಿಯು ಮೋಘಗಳನ್ನು ಚೆದರಿಸುವಂತೆ ನಿಮಿಷಾರ್ಧದಲ್ಲಿ ನಾಶಗೊಳಿಸುತ್ತೇನೆ.'' ಇಂತೆಂದು ಶ್ರೀ ಮಹಾ ವಿಷ್ಣುವು ಬಲಗೈಯ ಮುಷ್ಟಿಯನ್ನೆತ್ತಿಹಿಡಿದು ನಿರಾಯುಧನಾಗಿಯೇ ಗರುಡ ವಾಹನದಿಂದಿಳಿದು ರಾಕ್ಷಸನೆದುರಿಗೆ ಓಡಿದನು.

೧೩೬–೧೩೭. ಇಂತು ಗೋವಿಂದನು ಓಡುತ್ತಿರಲು ಮೂರು ಲೋಕಗಳೂ ನಡುಗಿದುವು. ಬ್ರಹ್ಮಾಂಡವು ನಿಶ್ಚೇಷ್ಟವಾಯಿತು. ದೇವತೆಗಳೆಲ್ಲರೂ ಅತ್ಯಂತ ಭೀತಿಗೊಂಡರು. ಪ್ರಳಯಕಾಲದ ರುದ್ರನಂತೆ ಕಾಣುತ್ತಾ ಓಡುತ್ತಿರಲು ಮುಖದಿಂದ ಜ್ವಾಲೆಗಳು ಹೊರಟು ಅವುಗಳಿಂದ ಒಂದು ನೂರು ಖರ್ವ ಸಂಖ್ಯೆಯ ಸೈನ್ಯವು ಹತವಾಯಿತು.

ತತೋಽಂತರಿಕ್ಷೇ ವಾಚಶ್ಚ ಪ್ರೋಚುಃ ಸಿದ್ಧಾಃ ಸ್ವಯಂ ತದಾ ।
ಜಹಿ ಕೋಪಂ ವಾಸುದೇವ ತ್ವಯಿ ಕೃದ್ಧೇ ಕ್ವ ವೈ ಜಗತ್ ॥ ೧೩೮ ॥
ಅನಾದೃತ್ಯೇವ ತದ್ವಾಕ್ಯಂ ಬ್ರುವನ್ನಾನ್ಯತ್ಕರೋಮ್ಯಹಂ ।
ಆಹ್ವಯಂಶ್ಚ ಮಹಾದೈತ್ಯಂ ಕೃದ್ಧೋ ಹರಿರಧಾವತ ॥ ೧೩೯ ॥
ಉವಾಚ ವಾಚಂ ಸಾಧೂಂಶ್ಚ ಯತ್ನಾತ್ಪಾಲಯತಾಂ ಫಲಂ ।
ದುಷ್ಟಾನ್ನಿನಿಘ್ನತಾಂ ಚೈವ ತತ್ಫಲಂ ಮಮ ಜಾಯತಾಂ ॥ ೧೪೦ ॥
ಅಥಾಪಶ್ಯನ್ಮಹಾಸೇನೋ ರುದ್ರಂ ಯಾಂತಂ ಚ ತಾರಕಂ ।
ತಾರಕಂ ಚಾನ್ವಧಾವಂತಂ ಪುರಾಣಪುರುಷಂ ಹರಿಂ ॥ ೧೪೧ ॥
ಜಗಚ್ಚ ಕ್ಷುಬ್ಧಮತ್ಯರ್ಥಂ ಸ್ವಾಂ ಪ್ರತಿಜ್ಞಾಂ ಪುರಾ ಕೃತಾಂ ।
ಪಶ್ಚಿಮಾಂ ಪ್ರತಿಲಂಬಂತಂ ಭಾಸ್ಕರಂ ಚಾಪಿ ಲೋಹಿತಂ ॥ ೧೪೨ ॥
ಆಕಾಶವಾಣೀಂ ಶೃಣ್ವಂಶ್ಚ ಕಿಂ ಸ್ಕಂದ ತ್ವಂ ವಿಷೀದಸಿ ।
ಪಶ್ಚಾತ್ತಾಪೋ ಯದಿ ಭವೇತ್ಕೃತ್ವಾ ಬ್ರಹ್ಮವಧಂ ತ್ವಯಿ ॥ ೧೪೩ ॥

---

೧೩೮. ಆ ಸಮಯದಲ್ಲಿ ಅಂತರಿಕ್ಷವಾಣಿಯೂ ಸಿದ್ಧರೂ ಸಹ "ಎಲೈ ವಾಸುದೇವನೆ! ನಿನ್ನ ಕೋಪವನ್ನುಪಸಂಹರಿಸು. ನೀನೇ ಕೋಪಗೊಂಡರೆ ಬ್ರಹ್ಮಾಂಡದ ಗತಿಯೇನು?" ಎಂದು ಸಮಾಧಾನಗೊಳಿಸಿದರು.

೧೩೯. ಅವರ ಮಾತುಗಳನ್ನು ಕೇಳದಿರುವಂತೆಯೇ ಅನ್ಯಥಾಮಾಡುವುದಿಲ್ಲವೆಂದು ಹೇಳುತ್ತ ಕೋಪಗೊಂಡು ರಾಕ್ಷಸನನ್ನು ಯುದ್ಧಕ್ಕೆ ಕರೆಯುತ್ತ ಓಡಿಬಂದನು.

೧೪೦. ಮತ್ತೂ ಹೇಳತೊಡಗಿದನೆಂತೆನೆ :— "ಸಾಧುಸತ್ಪುರುಷರನ್ನು ಪ್ರಯತ್ನದಿಂದ ಪಾಲಿಸುವವರಿಗೂ, ದುಷ್ಟರನ್ನು ನಿಗ್ರಹಮಾಡುವವರಿಗೂ ಉಂಟಾಗುವ ಸತ್ಫಲವು ನನಗುಂಟಾಗಲಿ."

೧೪೧. ಆ ಕಾಲದಲ್ಲಿ ಷಣ್ಮುಖನಾದರೋ ಶಂಕರನಿಗೆದುರಾದ ತಾರಕಾಸುರನನ್ನೂ ಅವನನ್ನು ಯುದ್ಧಕ್ಕೆ ಕರೆಯುತ್ತಿರುವ ಮಹಾವಿಷ್ಣುವನ್ನೂ ಕಂಡನು.

೧೪೨. ಪ್ರಪಂಚವು ಕ್ಷೋಭಗೊಳ್ಳುತ್ತಿರುವುದನ್ನೂ, ತಾನು ಮೊದಲು ಮಾಡಿದ ಪ್ರತಿಜ್ಞೆಯನ್ನೂ, ಸೂರ್ಯನು ಪಶ್ಚಿಮದಲ್ಲಿ ಕೆಂಪಗೆ ಇಳಿಮುಖನಾಗುತ್ತಿರುವುದನ್ನೂ ಜ್ಞಾಪಿಸಿಕೊಂಡನು.

೧೪೩. ಆ ಸಮಯದಲ್ಲಿಯೇ ಆಕಾಶವಾಣಿಯೂ ಹೇಳ ತೊಡಗಿತು. ಎಲೈ ಸ್ಕಂದನೆ! ನೀನೆತಕ್ಕೆ ವಿಷಾದಗೊಳ್ಳುತ್ತಿರುವೆ? ಬ್ರಹ್ಮವಧೆಯಿಂದ ನಿನಗೆ ಪಾಪವು ಘಟಿಸುವುದೆಂಬ ಚಿಂತೆಯಿದ್ದರೆ ಅದನ್ನು ದೂರಮಾಡು.

ಸ್ಥಾಪಯೇಲ್ಲಿಂಗಮೀಶಸ್ಯ ಮೋಕ್ಷ್ಯೋ ಹತ್ಯಾಶತೈರಪಿ ।
ಆವಿವೇಶ ಮಹಾಕ್ರೋಧಂ ದಿಧಕ್ಷುರಿವ ಮೇದಿನೀಂ ॥ ೧೪೪ ॥
ಅಥೋತ್ಪ್ಲುತ್ಯ ಮಯೂರಾತ್ಸ ಪ್ರಹಸನ್ನಿವ ಕೇಶವಂ ।
ಬಾಹುಭ್ಯಾಮುಪ್ಯುಪಾದಾಯ ಪ್ರೋವಾಚ ಭವನಂದನಃ ॥ ೧೪೫ ॥
ಜಾನಾಮಿ ತ್ವಾಮಹಂ ವಿಷ್ಣೋ ಮಹಾಬುದ್ಧಿಪರಾಕ್ರಮಂ ।
ಭೂತ ಭವ್ಯಭವಿಷ್ಯಾಂಶ್ಚ ದೈತ್ಯಾನ್ಹಂಸ್ಯಪಿ ಹೂಂಕೃತೈಃ ॥ ೧೪೬ ॥
ತ್ವಮೇವ ಹಂತಾ ದೈತ್ಯಾನಾಂ ದೇವಾನಾಂ ಪರಿಪಾಲಕಃ ।
ಧರ್ಮಸಂಸ್ಥಾಪಕಶ್ಚ ತ್ವಮೇಷ ತೇ ರಚಿತೋಽಂಜಲಿಃ ।
ಕ್ಷಣಾರ್ಧಂ ಪಶ್ಯ ಮೇ ವೀರ್ಯಂ ಭಾಸ್ಕರೋ ಲೋಹಿತಾಯತೇ ॥
ಏವಂ ಪ್ರಣಮ್ಯ ಸ್ಕಂದೇನ ವಾಸುದೇವಃ ಪ್ರಸಾದಿತಃ ।
ವಿರೋಷೋಽಭೂತ್ತಮಾಲಿಂಗ್ಯ ವಚನಂ ಕೇಶವೋಽಬ್ರವೀತ್ ॥ ೧೪೮ ॥
ಸನಾಥಸ್ತ್ವದ್ಯ ಧರ್ಮೋಽಯಂ ಸುರಾಶ್ಚೈವ ತ್ವಯಾ ಗುಹ ।
ಸ್ಮರಾತ್ಮಾನಂ ಯದರ್ಥಂ ತ್ವಮುತ್ಪನ್ನೋಽಸಿ ಮಹೇಶ್ವರಾತ್ ॥ ೧೪೯ ॥

---

೧೪೪. ಮಹೇಶ್ವರನ ಲಿಂಗವನ್ನು ಸ್ಥಾಪಿಸಿದಲ್ಲಿ ಇಂತಹ ನೂರು ಬ್ರಹ್ಮ ಹತ್ಯೆಗಳ ಪಾಪವೂ ತೊಲಗುವುದು.'' ಆಗ ಮೂರು ಲೋಕಗಳನ್ನೂ ದಹಿಸುವಂತಹ ಮಹತ್ತರವಾದ ಕೋಪವು ಷಣ್ಮುಖನನ್ನು ಆವರಿಸಿತು.

೧೪೫. ಆಗ ನಗುತ್ತ ತನ್ನ ಮಯೂರದಿಂದ ಕೆಳಕ್ಕೆ ಧುಮುಕಿ, ಕೇಶವನನ್ನು ತನ್ನ ಬಾಹುಗಳಿಂದ ಆಲಿಂಗಿಸಿ, ಶಿವಕುಮಾರನು ಹೇಳತೊಡಗಿದನು.

೧೪೬. "ಎಲೈ ಮಹಾವಿಷ್ಣುವೆ! ನೀನು ಅತ್ಯಂತ ಬುದ್ಧಿಪರಾಕ್ರಮವಂತನೆಂಬುದನ್ನು ತಿಳಿದಿರುವೆನು. ನಿನ್ನ ಹುಂಕಾರಮಾತ್ರದಿಂದಲೇ ಭೂತ, ವರ್ತಮಾನ, ಭವಿಷ್ಯತ್ಕಾಲಗಳ ಸಕಲ ರಾಕ್ಷಸರನ್ನೂ ಕೊಲ್ಲಲು ಶಕ್ತನು.

೧೪೭. ನೀನೇ ರಾಕ್ಷಸರ ಕುಲನಾಶಕನೂ, ದೇವತೆಗಳ ರಕ್ಷಕನೂ, ಸನಾತನ ಧರ್ಮಗಳ ಸಂಸ್ಥಾಪಕನೂ ಆದವನು. ನಿನಗೆ ಅಂಜಲಿಬಂಧವನ್ನು ಮಾಡುವೆನು. ಇನ್ನು ಸ್ವಲ್ಪಕಾಲ ನನ್ನ ಪರಾಕ್ರಮವನ್ನಾದರೂ ನೋಡು. ಸೂರ್ಯನು ಸಂಜೆಗೆಂಪಾಗುತ್ತಿರುವನು.''

೧೪೮. ಇಂತು ಸ್ಕಂದನು ನಮಸ್ಕರಿಸಲು ವಾಸುದೇವನು ಶಾಂತನಾಗಿ ಆತನನ್ನು ಆಲಿಂಗಿಸಿ ತನ್ನ ಕೋಪವನ್ನು ಬಿಟ್ಟು ಹೇಳತೊಡಗಿದನು.

೧೪೯. "ಎಲೈ ಕಾರ್ತಿಕೇಯನೆ! ಸನಾತನ ಧರ್ಮವು ನಿನ್ನಿಂದ ನಾಥವಂತವಾಯಿತು. ದೇವತೆಗಳೂ ಸನಾಥರಾದರು. ನಿನ್ನ ಸ್ವರೂಪವನ್ನೂ ನೀನು ಮಹೇಶ್ವರನಿಂದ ಉತ್ಪನ್ನವಾಗಿ ಮಾಡಬೇಕಾದ ಕಾರ್ಯವನ್ನೂ ಸ್ಮರಣೆಗೆ ತಂದುಕೊ.

ಸಾಧೂನಾಂ ಪಾಲನಾರ್ಥಾಯ ದುಷ್ಟಸಂಹರಣಾಯ ಚ ।
ಸುರವಿಪ್ರಕೃತೇ ಜನ್ಮ ಜೀವಿತಂ ಚ ಮಹಾತ್ಮನಾಂ ॥ ೧೫೦ ॥
ರುದ್ರಸ್ಯ ದೇವ್ಯಾ ಗಂಗಾಯಾಃ ಕೃತ್ತಿಕಾನಾಂ ಚ ತೇಜಸಾ ।
ಸ್ವಾಹಾವಹ್ನೇಶ್ಚ ಜಾತಸ್ತ್ವಂ ತತ್ತೇಜಃ ಸಫಲೀಕುರು ॥ ೧೫೧ ॥
ಸಾಧೂನಾಂ ಚ ಕೃತೇ ಯಸ್ಯ ಧನಂ ವೀರ್ಯಂ ಚ ಸಂಪದಃ ।
ಸಫಲಂ ತಸ್ಯ ತತ್ಸರ್ವಂ ನಾನ್ಯಥಾ ರುದ್ರನಂದನ ॥ ೧೫೨ ॥
ಅದ್ಯ ಧರ್ಮಶ್ಚ ದೇವಾಶ್ಚ ಗಾವಃ ಸಾಧ್ಯಾಶ್ಚ ಬ್ರಾಹ್ಮಣಾಃ ।
ನಂದಂತು ತವ ವೀರ್ಯೇಣ ಪ್ರದರ್ಶಯ ನಿಜಂ ಬಲಂ ॥ ೧೫೩ ॥

ಸ್ಕಂದ ಉವಾಚ :—

ಯಾಗತಿಃ ಶಿವತ್ಯಾಗೇನ ತ್ವತ್ತ್ಯಾಗೇನ ಚ ಕೇಶವ ।
ತಾಂ ಗತಿಂ ಪ್ರಾಪ್ನುಯಾಂ ಕ್ಷಿಪ್ರಂ ಹನ್ಮಿ ಚೇನ್ನ ಹಿ ತಾರಕಂ ॥ ೧೫೪ ॥
ಯಾಗತಿಃ ಶ್ರುತಿತ್ಯಾಗೇನ ಸಾಧ್ವ್ಯಾಃ ಭಾರ್ಯಾತಿಪೀಡನಾತ್ ।
ಸಾಧೂನಾಂ ಚ ಪರಿತ್ಯಾಗಾದ್ವೃಥಾ ಜೀವಿತಸಾಧನಾತ್ ।
ನಿಷ್ಠುರಸ್ಯ ಗತಿರ್ಯಾ ಚ ತಾಂ ಗತಿಂ ಯಾಮಿ ಕೇಶವ ॥ ೧೫೫ ॥

---

೧೫೦. ಸಾಧುಸಂತರ ಸಂರಕ್ಷಣಕ್ಕಾಗಿಯೂ, ದುಷ್ಟರ ವಿನಾಶಕ್ಕಾಗಿಯೂ, ದೇವ ಬ್ರಾಹ್ಮಣರ ಅಭಿವೃದ್ಧಿಗಾಗಿಯೂ ಅಲ್ಲವೆ ಮಹಾತ್ಮರು ಜನ್ಮವೆತ್ತುವುದು?

೧೫೧–೧೫೩. ಶಂಕರನೂ, ಪಾರ್ವತಿಯೂ, ಗಂಗೆಯೂ, ಕೃತ್ತಿಕೆಯರೂ, ಸ್ವಾಹಾದೇವಿಯೂ, ಅಗ್ನಿದೇವನೂ ಇವರುಗಳ ತೇಜಸ್ಸಿನಿಂದ ನೀನು ಹುಟ್ಟಿರುವೆ. ಆ ತೇಜಸ್ಸನ್ನು ಸಫಲಗೊಳಿಸು. ಯಾವನ ಪರಾಕ್ರಮವೂ, ಧನವೂ, ಐಶ್ವರ್ಯವೂ ಸಾಧುಗಳಿಗಾಗಿ ವಿನಿಯೋಗಿಸಲ್ಪಡುವುವೊ, ಅವನ ಜೀವನವೇ ಸಾರ್ಥಕವಾದುದು. ಓ ಶಿವಕುಮಾರನೆ! ಇಲ್ಲದಿದ್ದರೆ ಅದು ವ್ಯರ್ಥವೇ ಸರಿ. ಇಂದು ನಿನ್ನ ಬಲದಿಂದ ಧರ್ಮವೂ, ದೇವತೆಗಳೂ, ಗೋವುಗಳೂ, ಸಾಧ್ಯರೂ, ಬ್ರಾಹ್ಮಣರೂ ಸಂತೋಷಗೊಳ್ಳಲಿ. ನಿನ್ನ ಪರಾಕ್ರಮವನ್ನು ತೋರಿಸು.

೧೫೪. ಸ್ಕಂದನು ಹೇಳುತ್ತಾನೆ:—"ಎಲೈ ಕೇಶವನೆ! ಶಿವಭಕ್ತರಲ್ಲದವರಿಗೂ, ನಿನ್ನನ್ನು ನಿಂದಿಸುವರಿಗೂ, ಯಾವ ದುರ್ಗತಿಯುಂಟಾಗುವುದೊ ಅದೇ ಗತಿಯು ನನಗೆ ಈ ತಾರಕಾಸುರನನ್ನು ಈಗ ಸಂಹರಿಸದಿದ್ದರೆ ಉಂಟಾಗಲಿ.

೧೫೫. ವೇದಗಳನ್ನು ನಿಂದಿಸುವರಿಗೂ, ಸಾಧ್ವಿಯಾದ ಹೆಂಡತಿಯರನ್ನು ಪೀಡಿಸುವವರಿಗೂ, ಸಾಧುಸತ್ಪುರುಷರನ್ನು ತ್ಯಾಗಮಾಡುವರಿಗೂ, ನಿರರ್ಥಕವಾದ ಜೀವನವನ್ನು ನಡೆಸುವವರಿಗೂ, ದೀನರಲ್ಲಿ ನಿಷ್ಠುರರಾದವರಿಗೂ ಯಾವ ಯಾವ ದುರ್ಗತಿಗಳುಂಟಾಗುವುವೊ ಆ ಗತಿಯನ್ನೇ ಹೊಂದುವೆನು."

ಇತ್ಯುಕ್ತೇ ಸುಮಹಾನ್ನಾದಃ ಸಂಪ್ರಜಜ್ಞೇ ದಿವೌಕಸಾಂ ।
ಪ್ರಶಶಂಸುರ್ಗುಹಂ ಕೇಚಿತ್ಕೇಚಿನ್ನಾರಾಯಣಂ ಪ್ರಭುಂ ॥ ೧೫೬ ॥
ತತಸ್ತಾರ್ಕ್ಷ್ಯಂ ಸಮಾರುಹ್ಯ ಹರಿಸ್ತಸ್ಮಿನ್ಮಹಾರಣೇ ।
ತಾವ್ಮ್ರಚೂಡಂ ಮಹಾಸೇನಸ್ತಾರಕಂ ಚಾಭ್ಯಧಾವತಾಂ ॥ ೧೫೭ ॥
ಲೋಹಿತಾಂಬರಸಂವೀತೋ ಲೋಹಿತಸ್ರಗ್ವಿಭೂಷಣಃ ।
ಲೋಹಿತಾಕ್ಷೋ ಮಹಾಬಾಹುರ್ಹಿರಣ್ಯಕವಚಃ ಪ್ರಭುಃ ॥ ೧೫೮ ॥
ಭುಜೇನ ತೋಲಯನ್ಶಕ್ತಿಂ ಸರ್ವಭೂತಾನಿ ಕಂಪಯನ್ ।
ಪ್ರಾಪ್ಯ ತಂ ತಾರಕಂ ಪ್ರಾಹ ಮಹಾಸೇನೋ ಹಸನ್ನಿವ ॥ ೧೫೯ ॥
ತಿಷ್ಠ ತಿಷ್ಠ ಸುದುರ್ಬುದ್ಧೇ ಜೀವಿತಂ ತೇ ಮಯಿ ಸ್ಥಿತಂ ।
ಸುಹೃಷ್ಟಃ ಕ್ರಿಯತಾಂ ಲೋಕೋ ದುರ್ಲಭಃ ಸರ್ವಸಿದ್ಧಿದಃ ॥ ೧೬೦ ॥
ಯತ್ತೇ ಸುನಿಷ್ಠುರತ್ವಂ ಚ ಧರ್ಮೇ ದೇವೇಷು ಗೋಷು ಚ ।
ತಸ್ಯ ತೇ ಪ್ರಹರಾಮ್ಯದ್ಯ ಸ್ಮರ ಶಸ್ತ್ರಂ ಸುಶಿಕ್ಷಿತಂ ॥ ೧೬೧ ॥

---

೧೫೬. ಈ ಮಾತುಗಳನ್ನು ಕೇಳಿ ದೇವತೆಗಳು ದೊಡ್ಡದಾದ ಜಯಘೋಷವನ್ನು ಮಾಡಿದರು. ಕೆಲವರು ಸ್ಕಂದನನ್ನು ಹೊಗಳಿದರು. ಕೆಲವರು ಪ್ರಭುವಾದ ಮಹಾವಿಷ್ಣುವನ್ನು ಹೊಗಳಿದರು.

೧೫೭. ಬಳಿಕ ರಣಾಂಗಣದಲ್ಲಿ ಗರುಡನನ್ನೇರಿದ ಮಹಾವಿಷ್ಣುವೂ, ಮಯೂರವನ್ನೇರಿದ ಷಣ್ಮುಖನೂ ತಾರಕಾಸುರನನ್ನು ಕುರಿತು ಓಡಿಬಂದರು.

೧೫೮. ಷಣ್ಮುಖನು ಕೆಂಪಾದ ವಸ್ತ್ರಗಳನ್ನುಟ್ಟು, ಕೆಂಪು ಹೂವುಗಳ ಮಾಲೆಗಳನ್ನು ಧರಿಸಿ, ಕೆಂಪೇರಿದ ಕಣ್ಣುಗಳುಳ್ಳವನಾಗಿ, ಚಿನ್ನದ ಕವಚವನ್ನು ತೊಟ್ಟು ಮಹಾಪರಾಕ್ರಮಿಯಾಗಿದ್ದನು.

೧೫೯. ಬಲಗೈಯಿಂದ ಶಕ್ತ್ಯಾಯುಧವನ್ನು ತೂಗುತ್ತ ಸಕಲ ಪ್ರಾಣಿಗಳೂ ನಡುಗುತ್ತಿರಲು, ಮಹಾಸೇನನು ತಾರಕನ ಎದುರಿನಲ್ಲಿ ನಿಂತು ನಗುತ್ತಲೆ ಹೇಳಿದನು.

೧೬೦. "ಎಲೈ ದುರ್ಬುದ್ಧಿಯೆ! ನಿಲ್ಲು ನಿಲ್ಲು. ನಿನ್ನ ಪ್ರಾಣವು ನನ್ನ ಕೈಯಲ್ಲಿರುವುದು. ದುರ್ಲಭವೂ, ಸರ್ವಾಭೀಷ್ಟಪ್ರದವೂ ಆದ ಲೋಕವು ಸಂತೋಷಗೊಳ್ಳಲಿ.

೧೬೧. ಧರ್ಮದಲ್ಲಿಯೂ, ದೇವತೆಗಳಲ್ಲಿಯೂ, ಗೋವುಗಳಲ್ಲಿಯೂ ನಿನಗೆ ಯಾವ ದ್ವೇಷವಿದ್ದಿತೊ, ಅದರ ಫಲವಾಗಿಯೇ ನಿನ್ನನ್ನು ಈಗ ಕೊಲ್ಲುತ್ತೇನೆ. ನಿನಗೆ ಅತ್ಯಂತ ವಶವಾದ ಯಾವ ಅಸ್ತ್ರವಾದರೂ ಇದ್ದರೆ ಸ್ಮರಿಸಿಕೊ."

ಏವಮುಕ್ತೇ ಗುಹೇನಾಥ ನಿವೃತ್ತಸ್ಯಾಸ್ಯ ಭಾರತ ।
ತಾರಕಸ್ಯ ಶಿರೋದೇಶಾತ್ಕಾಪಿ ನಾರೀ ವಿನಿರ್ಯಯೌ ॥ ೧೬೨ ॥
ತೇಜಸಾ ಭಾಸಯಂತೀ ತಮಥ ಊರ್ಧ್ವಂ ದಿಶೋ ದಶ ।
ದೃಷ್ಟ್ವಾ ನಾರೀಂ ಗುಹಃ ಪ್ರಾಹ ಕಾಸಿ ಕಸ್ಮಾಚ್ಚ ನಿರ್ಗತಾ ॥ ೧೬೩ ॥

ನಾರ್ಯುವಾಚ :—

ಅಹಂ ಶಕ್ತಿರ್ಗುಹಾಖ್ಯಾತಾ ಭೂತಲೇಷು ಸದಾಸ್ಥಿತಾ ।
ಅನೇನ ದೈತ್ಯರಾಜೇನ ಮಹತಾ ತಪಸಾರ್ಜಿತಾ ॥ ೧೬೪ ॥
ಸುರೇಷು ಸರ್ವೇಷು ವಸಾಮಿ ಚಾಹಂ
ವಿಪ್ರೇಷು ಶಾಸ್ತ್ರಾರ್ಥಪರೇಷು ಚಾಹಂ ।
ಸಾಧ್ವೀಷು ನಾರೀಷು ತಥಾ ವಸಾಮಿ
ವಿನಾಗುಣಾನ್ನಾಸ್ಮಿ ವಸಾಮಿ ಕುತ್ರಚಿತ್ ॥ ೧೬೫ ॥
ಸದಸ್ಯ ಪುಣ್ಯಸಂಘಸ್ಯ ಸಂಪ್ರಾಪ್ತೋಽದ್ಯಾವಧಿರ್ಗುಹ ।
ತದೇನಂ ತ್ಯಜ್ಯ ಯಾಸ್ಯಾಮಿ ಜಹ್ಯೇನಂ ವಿಶ್ವಹೇತವೇ ॥ ೧೬೬ ॥
ತಸ್ಯಾಂ ತತೋ ನಿರ್ಗತಾಯಾಂ ದೈತ್ಯಶೀರ್ಷಂ ವ್ಯಕಂಪಯತ್ ।
ಕಂಪಿತಂ ಚಾಸ್ಯ ತದ್ದೇಹಂ ಗತವೀರ್ಯೋಽಭವತ್ ಕ್ಷಣಾತ್ ॥ ೧೬೭ ॥

---

೧೬೨. ಈ ಗುಹನ ಮಾತುಗಳನ್ನು ಕೇಳಿ ತಾರಕಾಸುರನು ಈತನ ಕಡೆಗೇ ಮರಳಿದನು. ಆಗ ಅವನ ತಲೆಯಿಂದ ಒಬ್ಬ ಸ್ತ್ರೀಯು ಹೊರಟಳು.

೧೬೩. ಆಕೆಯು ತೇಜಸ್ಸಿನಿಂದ ಅವನನ್ನೂ ಭೂಮ್ಯಾಕಾಶಗಳನ್ನೂ ಹತ್ತು ದಿಕ್ಕುಗಳನ್ನೂ ಬೆಳಗುತ್ತಿದ್ದಳು. ಆಕೆಯನ್ನು ಕಂಡು ಷಣ್ಮುಖನು "ನೀನು ಯಾರು? ಎಲ್ಲಿಂದ ಬಂದೆ?" ಎಂಬುದಾಗಿ ಕೇಳಿದನು.

೧೬೪. ನಾರಿಯು ಹೇಳುತ್ತಾಳೆ:—"ಎಲೈ ಗುಹನೆ! ನಾನು ಶಕ್ತಿಯೆಂದು ಹೆಸರುಳ್ಳವಳು. ಯಾವಾಗಲೂ ಭೂಲೋಕದಲ್ಲಿ ವಾಸಿಸುವಳು. ಈ ರಾಕ್ಷಸರಾಜನು ನನ್ನನ್ನು ಮಹತ್ತರವಾದ ತಪಸ್ಸಿನಿಂದ ಸಂಪಾದಿಸಿದನು.

೧೬೫. ಸಕಲ ದೇವತೆಗಳಲ್ಲಿಯೂ ನಾನು ವಾಸಮಾಡುತ್ತೇನೆ. ಮತ್ತು ಶಾಸ್ತ್ರಾರ್ಥಗಳ ವಿಚಾರಪರರಾಗಿರುವ ಬ್ರಾಹ್ಮಣೋತ್ತಮರಲ್ಲಿಯೂ, ಪತಿವ್ರತೆಯರಾದ ಸ್ತ್ರೀಯರಲ್ಲಿಯೂ ವಾಸಿಸುವೆನು. ಗುಣಹೀನವಾದ ಸ್ಥಳಗಳಲ್ಲಿ ನಾನಿರುವುದೂ ಇಲ್ಲ ಮತ್ತು ಸೇರುವುದೂ ಇಲ್ಲ.

೧೬೬. ಎಲೈ ಷಣ್ಮುಖನೆ! ಇಂದಿಗೆ ಇವನ ಪುಣ್ಯಸಮೂಹದ ಫಲದ ಅವಧಿಯು ಮುಗಿದಿರುವುದು. ಆದುದರಿಂದ ಇವನನ್ನು ಬಿಟ್ಟು ಹೊರಡುತ್ತೇನೆ. ಲೋಕರಕ್ಷಣಾರ್ಥವಾಗಿ ನೀನಿವನನ್ನು ಸಂಹರಿಸು."

೧೬೭. ಇಂತೆಂದು ಆಕೆಯು ಹೊರಡಲು ರಾಕ್ಷಸನ ತಲೆಯು ನಡುಗಿತು. ಶರೀರವೂ ಕಂಪಿಸಿ ನಿಮಿಷಮಾತ್ರದಲ್ಲಿಯೇ ಶಕ್ತಿಹೀನವಾಯಿತು.

ಏತಸ್ಮಿನ್ನಂತರೇ ಶಕ್ತಿಂ ಸೋಽಪಪದ್ಗಿರಿಜಾತ್ಮಜಃ ।
ಉಲ್ಕಾಜ್ವಾಲಾ ವಿಮುಂಚಂತೀಮತಿಸೂರ್ಯಾಗ್ನಿ ಸಪ್ರಭಾಂ ॥ ೧೬೮ ॥
ಕಲ್ಪಾಂಭೋಧಿ ಸಮುನ್ನಾದಾಂ ದಿಧಕ್ಷಂತೀಂ ಜಗದ್ಯಥಾ ।
ತಾರಕಸ್ಯಾಂತಕಾಲಾಯ ಅಭಾಗ್ಯಸ್ಯ ದಶಾಮಿವ ॥ ೧೬೯ ॥
ದಾರಣೀಂ ಪರ್ವತಾನಾಂ ಚ ಸರ್ವಸತ್ತ್ವಬಲಾಧಿಕಾಂ ।
ಉತ್ಕ್ಷಿಪ್ಯ ತಾಂ ವಿನದ್ಯೋಚ್ಚೈರಮುಂಚತ್ಕುಪಿತೋ ಗುಹಃ ॥ ೧೭೦ ॥
ಧರ್ಮಶ್ಚೇದ್ಬಲವಾಂಲ್ಲೋಕೇ ಧರ್ಮೋ ಜಯತಿ ಚೇತ್ಸದಾ ।
ತೇನ ಸತ್ಯೇನ ದೈತ್ಯೋಽಯಂ ಪ್ರಲಯಂ ಯಾತ್ವಿತೀರಯನ್ ॥ ೧೭೧ ॥
ಸಾ ಕುಮಾರಭುಜೋತ್ಸೃಷ್ಟಾ ದುರ್ನಿವಾರ್ಯಾ ದುರಾಸದಾ ।
ಬಿಭೇದ ಹೃದಯಂ ಚಾಸ್ಯ ಭಿತ್ವಾ ಚ ಧರಣೀಂ ಗತಾ ॥ ೧೭೨ ॥
ನಿಃಸೃತ್ಯ ಜಲಕಲ್ಲೋಲ ಪೂರ್ವಿಕಾ ಸ್ಕಂದಮಾಯಯೌ ।
ಸ ಚ ಸಂತಾಡಿತಃ ಶಕ್ತ್ಯಾ ವಿಭಿನ್ನಹೃದಯೋಽಸುರಃ ।
ನಾದಯನ್ವಸುಧಾಂ ಸರ್ವಾಂ ಪಪಾತಾಧೋಮುಖೋ ಮೃತಃ ॥೧೭೩॥

---

೧೬೮. ಈ ಸಮಯದಲ್ಲಿಯೇ ಪಾರ್ವತೀಸುತನಾದ ಸ್ಕಂದನು ಕಿಡಿಗಳನ್ನೂ ಜ್ವಾಲೆಗಳನ್ನೂ ಉದುರಿಸುತ್ತ ಅನೇಕ ಸೂರ್ಯರ ಕಾಂತಿಯಿಂದೊಡಗೂಡಿದ ತನ್ನ ಶಕ್ತ್ಯಾಯುಧವನ್ನು ರಾಕ್ಷಸನಿಗೆ ಗುರಿಯಿಟ್ಟು ಬೀಸಿದನು.

೧೬೯. ಆ ಅಸ್ತ್ರವು ಪ್ರಳಯಕಾಲದ ಸಮುದ್ರಗಳಂತೆ ಘೋಷಮಾಡುತ್ತ, ಸಕಲ ಜಗತ್ತನ್ನೂ ಸುಡುತ್ತಿರುವಂತೆ, ಭಾಗ್ಯಹೀನನಾದ ತಾರಕಾಸುರನ ಅಂತ್ಯಕಾಲದ ಸೂಚನೆಯಾಗಿತ್ತು.

೧೭೦. ಪರ್ವತಗಳನ್ನು ಸೀಳಲು ಶಕ್ತಿಯುಳ್ಳದೂ, ಸಕಲ ಪ್ರಾಣಿಗಳ ಬಲವುಳ್ಳದೂ ಆದ ಆ ಶಕ್ತಿಯನ್ನು ಬೀಸಿ ಗಟ್ಟಿಯಾಗಿ ಸಿಂಹನಾದವನ್ನು ಮಾಡುತ್ತ ಕೋಪದಿಂದ ಹೊಡೆದನು.

೧೭೧. ಅದನ್ನು "ಲೋಕದಲ್ಲಿ ಧರ್ಮವೇ ಬಲಿಷ್ಠವಾದುದು ನಿಜವಾದರೆ, ನಿತ್ಯವೂ ಧರ್ಮವೇ ಜಯಿಸುವುದಾದರೆ ಅದರ ಸತ್ಯದಿಂದ ಈ ರಾಕ್ಷಸನು ಈಗ ಸಂಹಾರವನ್ನು ಹೊಂದಲಿ" ಎಂದು ಅಭಿಮಂತ್ರಿಸಿದನು.

೧೭೨–೧೭೩. ಕುಮಾರಸ್ವಾಮಿಯ ಕೈಯಿಂದ ಬಿಡಲ್ಪಟ್ಟ ಆ ಶಕ್ತಿಯು ಪ್ರತಿಕ್ರಿಯಾರಹಿತವೂ, ದುಸ್ಸಾಧ್ಯವೂ ಆಗಿ ಆ ರಾಕ್ಷಸೇಶ್ವರನ ಹೃದಯವನ್ನು ಭೇದಿಸಿ ಭೂಮಿಯನ್ನು ಹೊಕ್ಕಿತು. ಪಾತಾಳಲೋಕಗಳಲ್ಲಿ ಕಲ್ಲೋಲವನ್ನುಂಟುಮಾಡಿ ಶಕ್ತಿಯು ಮತ್ತೆ ಷಣ್ಮುಖನನ್ನು ಸೇರಿತು. ಶಕ್ತಿಯ ಹೊಡೆತದಿಂದ ಹೃದಯವು ಭಿನ್ನವಾಗಲು ತಾರಕಾಸುರನು ಕೆಳಮೊಗನಾಗಿ ಮಡಿದುಬೀಳಲು ಭೂಮಿಯೆಲ್ಲವೂ ಶಬ್ದಮಯವಾಯಿತು.

ಏವಂ ಪ್ರತಾಪ್ಯ ತ್ರೈಲೋಕ್ಯಂ ನಿರ್ಜಿತ್ಯ ಬಹುಶಃ ಸುರಾನ್ ।
ಮಹಾರಣೇ ಕುಮಾರೇಣ ನಿಹತಃ ಪಾರ್ಥ ತಾರಕಃ ॥ ೧೭೪ ॥
ಏತಸ್ಮಿನ್ನಿಹತೇ ದೈತ್ಯೇ ಪ್ರಹರ್ಷಂ ವಿಶ್ವಮಾಯಯೌ ॥ ೧೭೫ ॥
ವವುರ್ವಾತಾಸ್ತಥಾ ಪುಣ್ಯಾಃ ಸುಪ್ರಭೋಽಭೂದ್ದಿವಾಕರಃ ।
ಜಜ್ವಲುಶ್ಚಾಗ್ನಯಃ ಶಾಂತಾಃ ಶಾಂತಾ ದಿಗ್ಜನಿತಸ್ವನಾಃ ॥ ೧೭೬ ॥
ತತಃ ಪುನಃ ಸ್ಕಂದಮಾಹ ಪ್ರಹೃಷ್ಟಃ ಕೇಶವೋಽರಿಹಾ ।
ಸ್ಕಂದ ಸ್ಕಂದ ಮಹಾಬಾಹೋ ಬಾಣೋ ನಾಮ ಬಲಾತ್ಮಜ ॥ ೧೭೭ ॥
ಕ್ರೌಂಚ ಪರ್ವತಮಾದಾಯ ದೇವಸಂಘಾನ್ಪ್ರಬಾಧತೇ ।
ಸೋಽಧುನಾ ತೇ ಭಯಾದ್ವೀರ ಪಲಾಯಿತ್ವಾ ನಗಂಗತಃ ।
ಜಹಿ ತಂ ಪಾಪಸಂಕಲ್ಪಂ ಕ್ರೌಂಚಸ್ಥಂ ಶಕ್ತಿವೇಗತಃ ॥ ೧೭೮ ॥
ತತಃ ಕ್ರೌಂಚಂ ಮಹಾತೇಜಾ ನಾನಾವ್ಯಾಲವಿನಾದಿತಂ ।
ಶಕ್ತ್ಯಾ ಬಿಭೇದ ಬಹುಭಿರ್ವೃಕ್ಷೈರ್ಜೀವೈಶ್ಚ ಸಂಕುಲಂ ॥ ೧೭೯ ॥
ತತ್ರ ವ್ಯಾಲಸಹಸ್ರಾಣಿ ದೈತ್ಯಕೋಟ್ಯಯುತಂ ತಥಾ ।
ದದಾಹ ಬಾಣಂ ಚ ಗಿರಿಂ ಭಿತ್ವಾ ಶಕ್ತಿರ್ಮಹಾರವಾ ॥ ೧೮೦ ॥

---

೧೭೪–೧೭೬. ಎಲೈ ಅರ್ಜುನನೆ! ಇಂತು ಮೂರು ಲೋಕಗಳನ್ನೂ ಸಂಕಟ ಪಡಿಸಿ ದೇವತೆಗಳನ್ನೆಲ್ಲ ಗೆದ್ದು ಮಹಾಯುದ್ಧದಲ್ಲಿ ತಾರಕಾಸುರನು ಕುಮಾರ ಸ್ವಾಮಿಯಿಂದ ಹತನಾದನು. ಈ ರಾಕ್ಷಸನು ಇಂತು ಸಂಹೃತನಾಗಲು ಬ್ರಹ್ಮಾಂಡವೇ ಸಂತೋಷಗೊಂಡಿತು. ಸುಖಸ್ಪರ್ಶಗಳಾದ ಮಂದಮಾರುತಗಳು ಬೀಸತೊಡಗಿದುವು. ಸೂರ್ಯನು ನಿರ್ಮಲನಾದನು. ಹೋಮಾಗ್ನಿಗಳು ಶಾಂತ ವಾಗಿ ಜ್ವಲಿಸತೊಡಗಿದುವು. ಸಕಲ ದಿಕ್ಕುಗಳಲ್ಲಿಯೂ ಶಾಂತಿಸೂಚಕವಾದ ಧ್ವನಿಯೇ ಹೊರಟಿತು.

೧೭೭–೧೭೮. ಆಗ ಮತ್ತೆ ಶತ್ರುಸಂಹಾರಕನಾದ ಮಹಾವಿಷ್ಣುವು ಸಂತೋಷದಿಂದ ಸ್ಕಂದನನ್ನು ಕುರಿತು ಇಂತೆಂದನು. "ಎಲೈ ಷಣ್ಮುಖನೆ! ನೀನು ಮಹಾಪರಾಕ್ರಮಿಯು. ಬಲಾಸುರನ ಮಗನಾದ ಬಾಣಾಸುರನೆಂಬು ವನು ಕ್ರೌಂಚಪರ್ವತದಲ್ಲಿ ನೆಲಸಿ ಸಕಲದೇವತೆಗಳನ್ನೂ ಬಾಧಿಸುತ್ತಿರುವನು. ಈಗ ಅವನು ನಿನ್ನ ಪರಾಕ್ರಮಕ್ಕೆ ಹೆದರಿ ಆ ಪರ್ವತವನ್ನು ಮರೆಹೊಕ್ಕಿರುವನು. ಓಡಿಹೋಗಿರುವ, ಪಾಪಮತಿಯಾದ, ಕ್ರೌಂಚ ಪರ್ವತದಲ್ಲಿರುವ, ಆ ರಾಕ್ಷಸ ನನ್ನು ನಿನ್ನ ಶಕ್ತ್ಯಾಯುಧದಿಂದ ಸಂಹರಿಸು."

೧೭೯–೧೮೦. ಬಳಿಕ ಅನೇಕ ಸರ್ಪಗಳಿಂದಲೂ, ವಿವಿಧ ವೃಕ್ಷಗಳಿಂದಲೂ, ಪ್ರಾಣಿಗಳಿಂದಲೂ ಕಲಕಲವನ್ನು ಮಾಡುತ್ತಿರುವ ಆ ಕ್ರೌಂಚ ಪರ್ವತವನ್ನು ಶಕ್ತ್ಯಾಯುಧದಿಂದ ಆ ಪ್ರಭುವು ಭೇದಿಸಿದನು. ಆ ಶಕ್ತಿಯು ಮಹಾ

ಅದ್ಯಾಪಿ ಛಿದ್ರಂ ತತ್ಪಾರ್ಶ್ವೇ ಕ್ರೌಂಚಸ್ಯ ಪರಿವರ್ತತೇ ।
ಯೇನ ಹಂಸಾಶ್ಚ ಕ್ರೌಂಚಾಶ್ಚ ಮಾನಸಾಯ ಪ್ರಯಾಂತಿ ಚ ॥ ೧೮೧ ॥
ಹತ್ವಾ ಬಾಣಂ ಮಹಾಶಕ್ತಿಃ ಪುನಃ ಸ್ಕಂದಂ ಸಮಾಗತಾ ।
ಪ್ರತ್ಯಾಯಾತಿ ಮನಃ ಸಾಧೋರಾಹೃತಂ ಪ್ರಹಿತಂ ತಥಾ ॥ ೧೮೨ ॥
ತತೋ ಹರೀಂದ್ರಪ್ರಮುಖಾಃ ಪ್ರತುಷ್ಟುವು-
ರ್ನನೃತುಶ್ಚ ರಂಭಾಪ್ರಮುಖಾ ವರಾಂಗನಾಃ ।
ವಾದ್ಯಾನಿ ಸರ್ವಾಣಿ ಚ ವಾದಯಂತ
ಸ್ತಂ ಸಾಧುಸಾಧ್ವಿತ್ಯಮರಾ ಜಗುರ್ಭೃಶಂ ॥ ೧೮೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ "ಕುಮಾರೇಶಮಾಹಾತ್ಮ್ಯೇ ಕುಮಾರಕೃತತಾರಕವಧವರ್ಣನಂ" ನಾಮ ದ್ವಾತ್ರಿಂಶೋಽಧ್ಯಾಯಃ

**ಇತಿ ಶ್ರೀ ಸ್ಕಾಂದಮಹಾಪುರಾಣೇ ಪ್ರಥಮೇ ಮಾಹೇಶ್ವರಖಂಡೇ ಪ್ರಥಮಃ ಕೇದಾರಖಂಡಃ ಸಮಾಪ್ತಃ**

---

ಧ್ವನಿಗೈಯುತ್ತ ಆ ಪರ್ವತವನ್ನು ಸೀಳಿ ಸಾವಿರಾರು ಸರ್ಪಗಳನ್ನೂ ಹತ್ತುಸಾವಿರ ಕೋಟಿ ರಾಕ್ಷಸರನ್ನೂ ಬಾಣಾಸುರನನ್ನೂ ಸುಟ್ಟಿತು.

೧೮೧. ಕ್ರೌಂಚ ಪರ್ವತದಲ್ಲಿ ಇಂದಿಗೂ ಆ ಛಿದ್ರವು ಕಾಣುತ್ತಿರುವುದು. ಆ ಮಾರ್ಗವಾಗಿಯೇ ಹಂಸ ಕ್ರೌಂಚ ಪಕ್ಷಿಗಳು ಮಾನಸಸರೋವರಕ್ಕೆ ಪ್ರಯಾಣಮಾಡುವುವು.

೧೮೨. ಬಹಿರ್ವಿಷಯಗಳಲ್ಲಿ ಹೋದ ಸಾಧುವಿನ ಮನಸ್ಸು ಪುನಃ ವೃತ್ತಿಹೀನವಾಗಿ ಆತ್ಮನಲ್ಲಿಯೇ ನೆಲೆಗೊಳ್ಳುವಂತೆ ಆ ಮಹಾಶಕ್ತಿಯು ಬಾಣಾಸುರನನ್ನು ಸಂಹರಿಸಿ ಮತ್ತೆ ಷಣ್ಮುಖನನ್ನೇ ಸೇರಿತು.

೧೮೩. ಆಗ ವಿಷ್ಣು, ಮಹೇಂದ್ರಾದಿ ದೇವತೆಗಳೆಲ್ಲರೂ ಸಂತೋಷಗೊಂಡರು. ರಂಭೆಯೇ ಮೊದಲಾದ ದೇವಸ್ತ್ರೀಯರು ನಾಟ್ಯವಾಡಿದರು. ದೇವತೆಗಳು ದೇವವಾದ್ಯಗಳನ್ನು ಮೊಳಗಿಸುತ್ತ ಮತ್ತೆ ಮತ್ತೆ ಆ ಸ್ಕಂದಸ್ವಾಮಿಯನ್ನು ಕೊಂಡಾಡಿದರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಎರಡನೆಯ ಕೌಮಾರಿಕಾಖಂಡದಲ್ಲಿ 'ತಾರಕವಧೆ' ಯೆಂಬ ಮೂವತ್ತೆರಡನೆಯ ಅಧ್ಯಾಯವು ಮುಗಿದುದು

**ಇಂತಿದು ಶ್ರೀ ಸ್ಕಾಂದಮಹಾಪುರಾಣದ ಮೊದಲನೆಯ ಮಾಹೇಶ್ವರ ಖಂಡದ ಮೊದಲನೆಯ ಕೇದಾರಖಂಡವು ಸಮಾಪ್ತವಾದುದು**

ಶ್ರೀರಸ್ತು

ಸಮಸ್ತ ಸನ್ಮಂಗಳಾನಿಭವಂತು

